# ಶಿವಾನುಭವ.

ವರ್ಷ ೯] ಮೇ ೧೯೩೪ [ಸಂಚಿಕೆ ೭

## ಆತ್ಮ ನಿವೇದನ.

ಈ ಸಂಚಿಕೆಯಿಂದ ಶಿವಾನುಭವ ಪತ್ರಿಕೆಯ ೮ ನೇ ವರ್ಷವು ಮುಗಿದು ೯ ನೇ ವರ್ಷವು ಪ್ರಾರಂಭವಾಗುತ್ತದೆ. ಈ ಅವಧಿಯಲ್ಲಿ ಶಿವಾನುಭವವು ವಾಙ್ಮಯ ಸೇವೆಯನ್ನು ಎಷ್ಟರ ಮಟ್ಟಿಗೆ ಮಾಡಿತೆಂಬುದನ್ನು ತೂಗಿ ನೋಡುವದನ್ನು ವಾಚಕರ ಕಡೆಗೆ ಬಿಟ್ಟುಕೊಡುತ್ತೇವೆ. ಈ ೮ ವರ್ಷಗಳಲ್ಲಿ ೨-೩ ಸಾರೆ ಮಾತ್ರ ಪತ್ರಿಕೆಯ ಸಂಚಿಕೆಗಳನ್ನು ಸಕಾಲದಲ್ಲಿ ಹೊರಡಿಸಲು ನಮಗೆ ಆಗದ್ದಕ್ಕೆ ನಾವು ವಿಷಾದಪಡುತ್ತೇವೆ. ೨ ವರ್ಷಗಳ ಹಿಂದೆ ನಮಗೆ ವಿಶೇಷ ಅಸ್ವಸ್ಥತೆಯುಂಟಾದ್ದರಿಂದ ಆಗ ಸಂಚಿಕೆಗಳು ವೇಳೆಗೆ ಸರಿಯಾಗಿ ಹೊರಡಲಿಲ್ಲ. ಮತ್ತು ಹೋದ ವರ್ಷ ಮತ್ತು ಈ ವರ್ಷ ವಿಜಾಪುರದಲ್ಲಿ ಪ್ಲೇಗು ಹೆಚ್ಚಾಗಿದ್ದ ಮೂಲಕ ಸಂಚಿಕೆಗಳು ಸಕಾಲದಲ್ಲಿ ಹೊರಡಲಿಲ್ಲ. ಇದಕ್ಕೋಸ್ಕರ ನಾವು ವಾಚಕರ ಕ್ಷಮೆಯನ್ನು ಬೇಡಿಕೊಳ್ಳುತ್ತೇವೆ. [illegible]ವರೂ ಈ ಎಂಟು ವರ್ಷಗಳಲ್ಲಿ ಹೊರಡತಕ್ಕ ಎಲ್ಲ ಸಂಚಿಕೆಗ[illegible] ಹೊರಟಿರುತ್ತವೆ.

ಆರಂಭದಲ್ಲಿ ಶಿವಾನುಭವದ ಮೂಲಕ ವಚ[illegible] ವಾಙ್ಮಯದ [illegible]ತ್ವವನ್ನು ಕರ್ನಾಟಕಸ್ಥರ ದೃಷ್ಟಿಗೆ ತರಬೇಕೆಂ[illegible] ನಮ್ಮ ಮುಖ್[illegible] ಶವಾಗಿತ್ತು. ಇದು ಈ ಅವಧಿಯಲ್ಲಿ ಕೆಲಮಟ್ಟಿಗಾದರೂ ಸ[illegible] ವೆಂದು ತಿಳುಹಲು ನಮಗೆ ಸಂತೋಷವಾಗುತ್ತದೆ.

ಆದರೆ ವಚನಶಾಸ್ತ್ರದ ತಿರುಳು ಅತ್ಯಂತ ಗಹ[illegible] ವಿವೇಚನೆಯು ಇನ್ನೂ ಹೆಚ್ಚಾಗಿ ಆಗುವದು [illegible] ಸ್ಕರ ವಿಮರ್ಶಾತ್ಮಕ ದೃಷ್ಟಿಯಿಂದ ವಚನ ವಾಙ[illegible]

ಡುವ ಸಮಯವು ಈಗ ಬಂದಿದೆ. ಇದರಲ್ಲಿ ನಮ್ಮ ವೀರಶೈವ ವಿದ್ವಾಂಸರು ನಮಗೆ ಸಹಕರಿಸುವರೆಂದು ಕೋರುತ್ತೇವೆ.

ಗದ್ಯ ಗ್ರಂಥಗಳಲ್ಲಿ ಹೇಗೆ ವಚನವಾಙ್ಮಯವೋ ಹಾಗೆಯೇ ಕಾವ್ಯ ಗ್ರಂಥಗಳಲ್ಲಿ ರಗಳೆಗಳಿವೆ. ಇವುಗಳನ್ನು ಪ್ರಸಿದ್ಧಿಸಲು ಈಚೆಗೆ ಆರಂಭ ಮಾಡಿದ್ದೇವೆ. ಇವು ಎಷ್ಟು ಸುಂದರವಾಗಿವೆಂಬದನ್ನು ವಾಚಕರು ಅರಿಯದಿರಲಾರರು. ಶಿವಾನುಭವದಲ್ಲಿ ಕೆಲವು ಪುಟಗಳನ್ನು ಈ ವಾಙ್ಮಯಕ್ಕೋಸ್ಕರ ಕಾದಿಡಲು ಇಚ್ಛಿಸಿದ್ದೇವೆ.

ರಗಳೆಗಳಂತೆಯೇ ವೀರಶೈವ ವಾಙ್ಮಯದಲ್ಲಿ ಸಾಂಗತ್ಯಗಳು, ತ್ರಿಪದಿಗಳು, ಚೌಪದಿಗಳು ಷಟ್ಪದಿಗಳು ಮಹತ್ವವಾದವುಗಳು. ಈ ವಾಙ್ಮಯವು ಅತ್ಯಂತ ಭಾವನಾಪ್ರಧಾನವಾದದ್ದು. ಇದು ಇನ್ನೂ ಅಜ್ಞಾತಾವಸ್ಥೆಯಲ್ಲಿಯೇ ಇದೆ. ಈ ವಾಙ್ಮಯವನ್ನೂ ನಾವು ಕ್ರಮೇಣ ಪ್ರಸಿದ್ಧಿಸುತ್ತ ಹೋಗುವೆವು.

ಹಾಗೆಯೇ ವೀರಶೈವ ಧರ್ಮದ ಮತ್ತು ಸಮಾಜದ ಇತಿಹಾಸವನ್ನು ಸಂಶೋಧಿಸುವದು ಅತ್ಯಂತ ಮಹತ್ವದ್ದದೆ. ಈ ಇತಿಹಾಸವನ್ನು ಶೋಧಿಸುವವರಿಗೆ ಸಹಾಯವಾಗಬೇಕೆಂದು ನಾವು ನಿರಂಜನ ವಂಶರತ್ನಾಕರ, ಕಾಲಜ್ಞಾನದ ವಚನಗಳು, ಕೊಡಗುರಾಜರ ಇತಿಹಾಸ, ಬಿಳಗಿ ಅರಸರ ಇತಿಹಾಸ ಇವೇ ಮೊದಲಾದ ಗ್ರಂಥಗಳನ್ನು ಶಿವಾನುಭವದಲ್ಲಿ ಅಚ್ಚುಹಾಕಿದ್ದೇವೆ. ಈ ಕಾರ್ಯವನ್ನು ನಾವು ಇನ್ನೂ ಹೆಚ್ಚಾಗಿ ಮುಂದುವರಿಸಬೇಕೆಂದು ಅಪೇಕ್ಷಿಸಿದ್ದೇವೆ.

ಶೋಧನಾತ್ಮಕವಾಗಿ ಬರೆದ ಸ್ವತಂತ್ರ ಲೇಖಗಳಿಗೆ ಶಿವಾನುಭ
ವ ಯಾವಾಗಲೂ ಇಂಬುಗೊಡುತ್ತ ಬಂದಿರುತ್ತದೆ. ಅವುಗಳಲ್ಲಿ
ಅಭಿಪ್ರಾಯಗಳಿಗೆ ಮತ್ತು ವಿವೇಚನೆಗಳಿಗೆ ಸಂಪಾದಕರು ಜವಾ
ಲ್ಲವೆಂದು ನಾವು ಹೇಳುವದು ಅವಶ್ಯ ತೋರುತ್ತವೆ. ಈ ಲೇಖಗ
ಕರು ರುಚಿಸಲಿಕ್ಕಿಲ್ಲ ಅಥವಾ ಅವುಗಳಿಗೆ ವಿರೋಧಾಭಿಪ್ರಾ
ಬಹುದು. ಹೀಗಿದ್ದರೆ ಅವುಗಳಲ್ಲಿಯ ತಪ್ಪುಗಳನ್ನು ತೋರಿಸಿ
ಸಹ ಶಿವಾನುಭವವು ಇಂಬುಗೊಡುವದು. ಶಿವಾ
ಕ್ಕೂ ಹೊಂದಿದ್ದು ಇರುವದಿಲ್ಲ.

ವಾಙ್ಮಯ ಶೋಧವು ಈಗಿನ ಕಾಲಕ್ಕೆ ಎಷ್ಟು ಮಹತ್ವದ್ದೆಂಬದನ್ನು ನಾವು ಹೇಳುವದು ಅವಶ್ಯವಿಲ್ಲ. ಇದನ್ನು ಕರ್ನಾಟಕಸ್ಥರು ಅದರಲ್ಲಿ ವಿಶೇಷವಾಗಿ ವೀರಶೈವರು ಲಕ್ಷಿಸಿ ಶಿವಾನುಭವಕ್ಕೋಸ್ಕರ ಅವರು ಸಹಾನುಭೂತಿಯನ್ನು ತಾಳಿ ತಮ್ಮ ಶಕ್ತ್ಯನುಸಾರ ಸಹಾಯಮಾಡುತ್ತ ಹೋಗಬೇಕೆಂದು ನಾವು ಅವರನ್ನು ಪ್ರಾರ್ಥಿಸುತ್ತೇವೆ.

**ವಿಜಾಪುರ** **ಫ. ಗು. ಹಳಕಟ್ಟಿ.**
ತಾ॥ ೧೬—೪—೧೯೩೪ ಸಂಪಾದಕ.

---

# ಶೂನ್ಯಸಂಪಾದನೆಯ ರಹಸ್ಯ.

(ಲೇಖಕ:— ಮಿ॥ ಬ್ಯಾಳಿ ಕಲ್ಯಾಣಪ್ಪನವರು ಬಿ. ಎ. ಶ್ರೀಸಿದ್ಧೇಶ್ವರ ಹೈಸ್ಕೂಲ ವಿಜಾಪುರ.)

---

## ಮುಕ್ತಾಯಕ್ಕಗಳ ಸಂಪಾದನೆ.

ಈ ಸಂಪಾದನೆಯಲ್ಲಿ ಶ್ರೀ ಪ್ರಭುದೇವರು ಮುಕ್ತಾಯಕ್ಕಗಳಿಗೆ ಒಲಿವಿನಿಂದ ನಿಜಸ್ಥಿಯನ್ನು ಹೇಳಿದ ರಹಸ್ಯವು ವಿವರಿಸಲ್ಪಟ್ಟಿದೆ. ಅದರ ಕಥಾಭಾಗವೇನೆಂದರೆ, ಸಮಸ್ತ ಪ್ರಮಥಗಣಂಗಳೊಳಗಿನ ಒಬ್ಬ ಗಣಾಧೀಶ್ವರನು ಜಗತ್ತಿನ ಹಿತಾರ್ಥವಾಗಿ ಅಜಗಣ್ಣನೆಂಬ ಹೆಸರಿನಿಂದ ಭೂಮಿಗವತರಿಸಿದನು. ಆ ಅಜಗಣ್ಣನು ಪರಮ ಯೋಗೀಶ್ವರನು, ಸುಜ್ಞಾನಪರಿಪೂರ್ಣನು, ಅಂತರಂಗದಲ್ಲಿ ಅವಿರಳ ಲಿಂಗೈಕ್ಯನು, ಬಹಿರಂಗ ವ್ಯವಹಾರದೂರಸ್ಥನು, ಸರ್ವಾಂಗರಹಿತನು, ನಿತ್ಯನಿಜತತ್ವದಲ್ಲಿ ಮನೋವೇದ್ಯನು, ಸಚ್ಚಿದಾನಂದ ಪರಿಪೂರ್ಣನು, ಸದ್ಯೋನ್ಮುಕ್ತನು, ಸರ್ವಕ್ರಿಯಾತೀತನು, ನಿರುಪಮಚರಿತ್ರನು, ನಿಸ್ಸಂಸಾರನು, ಸಕಲತತ್ವಶಿರೋರತ್ನನು, ಘನದಲ್ಲಿ ಗಂಭೀರನು, ನೆನಹಿನಲ್ಲಿ ನಿಸ್ಸಂಚಲನು, ನುಡಿಯಲ್ಲಿ ಪರಶಿವನು, ಒಟ್ಟಿನ ಮೇಲೆ ಸಕಲಸದ್ಗುಣ ಸಂಯುಕ್ತನಾಗಿದ್ದನು. ಇಂಥ ಮಹಾಮಹಿಮಾಶಾಲಿಯಾದ ಅಜಗಣ್ಣ ತಂದೆಯು ಶಿವಭಕ್ತಿಸಂಪನ್ನನಾಗಿ ಶಿವೈಕ್ಯನಾಗಲು ಅವನ ವಿಯೋಗದಿಂದ ಅವನ ಸಹೋದರಿಯಾದ ಮುಕ್ತಾ

ಯಕ್ಕಗಳಿಗೆ ಬಹಳೇ ವ್ಯಥೆಯಾಯಿತು. ಆಕೆಯಾದರೂ ಮಹಾ ಜ್ಞಾನವಂತಳು, ಸದ್ಗುಣ ಸದಾಚಾರ ಸಂಪನ್ನಳು, ಶಿವಾನುಭಾವಿಯು. ಅಂಥ ಮಹಾಮಹಿಮಳು ಪ್ರಲಾಪಿಸುತ್ತಿದ್ದುದನ್ನು ನೋಡಿ ಪ್ರಭುದೇವರು ಅವಳ ಅನುತಾಪವನ್ನು ಸಂತೈಸಿ ಪರವಸ್ತುವಿನ ನಿಜಸ್ಥಿತಿಯನ್ನರುಹಿ ಕರುಣಿಸಿದನು.

ಮುಕ್ತಾಯಿ ಪ್ರಭುದೇವರ ಸಂವಾದವು ವಚನರೂಪದಲ್ಲಿದ್ದರೂ ಕಾವ್ಯರಸ ಮಾಧುರ್ಯದಿಂದಲೂ ತತ್ವಜ್ಞಾನ ಸುಧೆಯಿಂದಲೂ ತುಂಬಿ ತುಳುಕುತ್ತದೆ. ಕಾಸಾರದಂತೆ ಸೌಂದರ್ಯಮಯವಾಗಿಯೂ ಸಾಗರದಂತೆ ಗಂಭೀರವಾಗಿಯೂ ಪರಿಶೋಭಿಸುತ್ತದೆ. ಉದಾತ್ತವಾದ ತತ್ವದಲ್ಲಿಯೂ ವಾಕ್ಪ್ರೌಢಿಮೆಯಲ್ಲಿಯೂ ಈ ಸಂವಾದವು ಯಾಜ್ಞವಲ್ಕ್ಯ ಮೈತ್ರೇಯಿಯವರ ಸಂವಾದವನ್ನು ನೆನಪಿಗೆ ತಂದುಕೊಡುತ್ತದೆ. ಅವರ ಕುಶಾಗ್ರಬುದ್ಧಿಯ ಪ್ರಶ್ನೋತ್ತರಗಳನ್ನು ನೋಡಿದರೆ ಸಾಕ್ರೆಟಿಸ್-ಪ್ಲೇಟೋರವರ ವಿಚಾರಸರಣಿಯು ನಮ್ಮ ಕಣ್ಣಮುಂದೆ ಬಂದು ನಿಲ್ಲುತ್ತದೆ. ಈ ಸಂವಾದದಲ್ಲಿ ಅರಿವು ಮರವುಗಳ ತಾಕಲಾಟವೂ, ದ್ವೈತಾದ್ವೈತವಾದವೂ, ಸಾಕಾರ ನಿರಾಕಾರ ಸಂಘರ್ಷಣೆಯೂ, ಶಬ್ದನಿಶ್ಶಬ್ದಗಳ ತಾರತಮ್ಯವೂ, ಗುರುಶಿಷ್ಯರಲ್ಲಿರುವ ಅಭೇದವೂ, ಹರಶರಣರ ಪ್ರಭಾವವೂ, ನಿಜಪದದ ನಿರೂಪಣೆಯೂ ಬಹು ಸುಗಮವಾಗಿ ವಿವೇಚಿಸಲ್ಪಟ್ಟಿವೆ.

ಶ್ರೀ ಪ್ರಭುದೇವರ ಕಾರ್ಯಕ್ಷೇತ್ರವು ಈ ಮೊದಲೇ ನಮಗೆ ವಿದಿತವಾಗಿದೆಯಷ್ಟೇ! ಅವರು ಮರ್ತ್ಯಲೋಕವನ್ನು ಪಾವನಮಾಡುತ್ತ ಸದಾಚಾರಿಗಳಾದ ಶಿವಲಿಂಗೈಕ್ಯರನ್ನು ತನ್ನಂತೆ ಮಾಡುತ್ತ, ಶ್ರೀ ವೀರಶೈವದ ಘನವನ್ನು ಸಮಸ್ತರೊಳು ತೊಳಗಿ ಬೆಳಗುತ್ತ, ಶಿವಶರಣರೊಡನೆ ಸರಸಗೋಷ್ಠಿಯನಾಡುತ್ತ ಸಂಚರಿಸುತ್ತಿದ್ದರು. ಅವರ ಮೂರ್ತಸ್ವರೂಪವು ಪರಶಿವನಂತೆ ಲೋಕದ ಕಂಗಳಾನಂದವನ್ನು ಪೆರ್ಚಿಸುತ್ತಿದ್ದಿತು. ಇವರು ಬಲಹಸ್ತದಲ್ಲಿ ವೀಣಾದಂಡವನ್ನು ಪಿಡಿದು ಪರಮಾನಂದ ರಸ ಒಸರುವಂತೆ ದಿವ್ಯ ವಚನಾಮೃತಂಗಳನ್ನು ಪಾಡುತ್ತ ಲೋಕದ ಲಜ್ಜಾಭಿಮಾನಂಗಳನ್ನರಿಯದೆ ಪರಶಿವನಂತೆ ದಿಗಂಬರ ವೇಷದಿಂದ ದೇಶದೇಶಂಗಳೊಳು ಸುಳಿದಾಡುತ್ತಿದ್ದರು. ಇವರು ಮುಕ್ತಾಯಕ್ಕಗಳ ವಿಯೋಗದುಃಖವನ್ನು ಜ್ಞಾನದೃಷ್ಟಿಯಿಂದರಿದು ಅವರೆಡೆಗೆ ಬಿಜಯಂಗೈದರು. ಮುಕ್ತಾಯಕ್ಕಗಳು ಈ ಪ್ರಕಾರ ಪ್ರಲಾಪಿಸುತ್ತಿದ್ದರು.

"ಅಜಗಣ್ಣಾ, ನಿನ್ನ ವಿಯೋಗದಿಂದ ನನ್ನ ಅರಿವೆಲ್ಲ ಮಸಮಸ ಕಾಗಿದೆ. ಕತ್ತಲೆಯಾವುದೋ ಬೆಳಕಾವುದೋ ತಿಳಿಯದಂತಾಗಿದೆ. ನೀನಿ ಲ್ಲದ್ದರಿಂದ ನನ್ನ ಜ್ಞಾನನೇತ್ರವೇ ಕಳಚಿಬಿದ್ದಂತಾಗಿದೆ. ಅಂಧಕನ ಕೈಯ್ಯಲ್ಲಿ ದರ್ಪಣವಿದ್ದು ಫಲವೇನು? ನೀನಿಲ್ಲದಿದ್ದುದರಿಂದ ನನ್ನ ದಿವ್ಯ ಜ್ಞಾನವನ್ನೇನು ಸುಡಬೇಕು? ಅಣ್ಣಾ, ನನ್ನ ಮೇಲಿನ ನಿನ್ನ ಸ್ನೇಹವೆ ತ್ತಹೋಯಿತು? ನೀನಾಡಿದ ನುಡಿಗಳೆಲ್ಲ ಈಗ ಪ್ರತಿಬಿಂಬಗಳಂತೆ ಪುಸಿ ಯಾದವಲ್ಲ! ಅಣ್ಣಾ, ಸ್ಫಟಿಕದಂತಿರುವ ನಿನ್ನ ದೇಹದಲ್ಲಿ ಮಿನುಗುವ ಜೀವಜ್ಯೋತಿಯೆತ್ತ ಅಡಗಿತು?"

ಈ ಪ್ರಕಾರ ಅಣ್ಣನ ವಿಯೋಗದಿಂದ ದುಃಖಮಾಡುತ್ತಿರುವ ಮುಕ್ತಾ ಯಕ್ಕಗಳನ್ನು ಕುರಿತು ಪ್ರಭುದೇವರು, "ಅಂಗೈಯ್ಯೊಳಗೊಂದು ಅರಳ್ದ ತಲೆಯನ್ನು ಹಿಡಿದುಕೊಂಡು ಕಂಗಳ ಮುತ್ತು ಪವಣಿಸುವಾಕೆ ನೀನಾರು ಹೇಳಾ? ಸಂದ ಸಂಪಿಗೆಯರಳ್ಗೆ ತುಂಬಿ ಬಂದುಂಬ ಭೇದವನ್ನರಿಯದೆ ಹಂಬಲಿಸುವ ಪರಿತಾಪವೇನು ಹೇಳಾ" ಅಂದರೆ ಕೈಯ್ಯಲ್ಲಿ ಶಿರಸ್ಸನ್ನು ಹಿಡಿದುಕೊಂಡು ಯಾಕೆ ಕಣ್ಣೀರು ಸುರಿಸುತ್ತೀ? ಈ ನವಯೌವ್ವನ ದಲ್ಲಿ ರತಿಸುಖಬಡುವದನ್ನು ಬಿಟ್ಟು ಶೋಕವನ್ನೇಕೆ ಮಾಡುತ್ತಿ? ಅರಿದ ವರು ಮರೆದರೆ ಅರಿಕೆಯ ಪೇಳುವವರಿನ್ನಾರು? ತಿಳಿದವರೆಂಪಾದರೂ ಮಹಿಮರ ವಿಯೋಗದ ಬಗ್ಗೆ ಈ ಪರಿ ಶೋಕಿಸಬಹುದೇ? ಎಂದು ಕೇಳಿ ದರು.

ಮುಕ್ತಾಯಕ್ಕಗಳು ಹೇಳಿದುದೇನಂದರೆ, "ಅಣ್ಣಾ, ನೀನಾರೆಂದು ಕೇಳಿದರೆ ನಾನೇನು ಹೇಳಲಿ? ಯೋನಿಯಲ್ಲಿ ಹುಟ್ಟಿ ಮಾಯಾಭ್ರಮೆ ಗಳಿಗೀಡಾಗಿ ಬೆಳೆದ ದುರ್ಬುದ್ಧಿ ನಾನು. ಜ್ಯೋತಿರ್ಮಯನಾಗಿ ಬೆಳಗಿದ ಅಜಗಣ್ಣನ ಸಹೋದರಿಯು." ಎಂದೆನಲು ಪ್ರಭುದೇವರು ಅಜಗಣ್ಣನ ಮಹಾಮಹಿಮಾತಿಶಯವನ್ನು ಕೇಳಿ ತಿಳಿದವರಾದ್ದರಿಂದ "ಗುಹೇಶ್ವರಾ, ನಿಮ್ಮ ಶರಣ ಅಜಗಣ್ಣಂಗೆ ಶರಣು ಶರಣೆ"ಂದು ಭಾವಪೂರಿತರಾಗಿ ನಮಿ ಸಿದರು. ಅದನ್ನು ಕೇಳಿ ಮುಕ್ತಾಯಕ್ಕಗಳು ವಿಸ್ಮಿತರಾಗಿ ನಿರಂಜನ ಜಂಗ ಮವಾದ ಶ್ರೀ ಪ್ರಭುದೇವರ ಕುರುಹನ್ನು ಕೇಳಿಕೊಳ್ಳಲು ಪ್ರಭುದೇವರು ಹೇಳಿದ್ದು, "ತಾಯೀ, ಶರಣು ಶರಣಾರ್ಥಿ. ಆದಿಅನಾದಿಯಿಂದತ್ತತ್ತ ನನ್ನ ತಾಯ್ತಂದೆಗಳುದಿಸಿದರು. ಅವರಿಗಿಂತ ಪೂರ್ವದಲ್ಲಿ ನಾನು ಜನಿ ಸಿದೆನು. ಪಂಚಭೂತಗಳಿಂದ ಕೂಡಿದ ಈ ದೇಹವನ್ನು ಧರಿಸಿಕೊಂಡು

ಅಲ್ಲಯ್ಯನೆಂಬ ಹೆಸರಿನಿಂದ ಸಂಚರಿಸುತ್ತಿದ್ದೇನೆ. " ಇದನ್ನು ಕೇಳಿ ಮುಕ್ತಾ ಯಕ್ಕಗಳು ಶಿವಶರಣರ ಸಂದರ್ಶನದಿಂದ ತಮ್ಮ ಕೃತಾರ್ಥತೆಯನ್ನು ವ್ಯಕ್ತಗೊಳಿಸಿದರು.

ಆಮೇಲೆ ಪ್ರಭುದೇವರು ಮುಕ್ತಾಯಕ್ಕಗಳಿಗೆ ಹೇಳಿದುದೇನಂದರೆ "ಅವ್ವಾ, ತನ್ನಲ್ಲಿ ತಾನೆ ಸನ್ನಿಹಿತನಾದ ಮಹಾಜ್ಞಾನಿಗೆ ಅಳಿವುಂಟೆಂದು ಹೇಳುವ ಮಾತು ಕೇವಲ ಭ್ರಾಂತಿಯು. ಅಂಥವರ ವಿಯೋಗದ ಬಗ್ಗೆ ಸರ್ವಥಾ ವ್ಯಥೆಪಡಬಾರದು. ಕಂಡೆ, ಕಾಣೆ, ಕೂಡಿದೆ, ಅಗಲಿದೆ ಎಂಬಿವು ಭ್ರಾಂತಿಸೂತಕಗಳು. ಕಂಡೆನೆಂಬುದು ಕಂಗೆ ಮರವೆ, ಕಾಣೆ ನೆಂಬುದು ಮನದ ಮರವೆ, ಕೂಡಿದೆನೆಂಬುದು ಅರಿವಿನ ಮರವೆ, ಅಗ ಲಿದೆನೆಂಬುದು ಮರವಿನ ಮರವೆ. ಗುಹೇಶ್ವರ ಲಿಂಗದಲ್ಲಿ ಅಗಲೆಂಬುದೇ ಇಲ್ಲ." ಅದಕ್ಕೆ ಮುಕ್ತಾಯಕ್ಕಗಳು ನನ್ನನ್ನು ತಪ್ಪಿಸಿ ಅಜಗಣ್ಣ ತಂದೆಯು ತೆರಳಿದನೆಂದು ಪ್ರಲಾಪಿಸಿದಳು.

ಆ ಮಾತಿಗೆ ಪ್ರಭುದೇವರು ಅಂದದ್ದು, "ತಾಯೀ, ಶಿವಶರಣನು ಅಳಿವನಲ್ಲ, ಉಳಿವನಲ್ಲ. ಘನಕ್ಕೆ ಗಮನವೆಂಬುದಿಲ್ಲ. ಆತನು ಮನಕ್ಕೆ ಸಾಧ್ಯನಲ್ಲ. ನಿನ್ನ ತಪ್ಪಿಸಿ ಹೋಗಲಿಕ್ಕೆ ಆತನು ಭಿನ್ನಭಾವಿಯಲ್ಲ. ಅದು ಕಾರಣ ಅಜಗಣ್ಣನ ಸಂಬಂಧವಾಗಿ ಅಂತಿಂತೆನಬಾರದು. ಅವ್ವಾ, ಶಿವಶರಣನು ತನುಮನ ಭಾವಜ್ಞಾನಾತೀತನು. ಆತನಿಗೆ ತನುವುಂಟೆಂದರೆ ಅದು ಪಾಶಬದ್ಧ; ಮನವುಂಟೆಂದರೆ ಭವಕ್ಕೆ ಬೀಜ. ಅರಿವುಂಟೆಂದರೆ ಅಜ್ಞಾನದ ಸ್ಥಿತಿಯು. ಭಾವವುಂಟೆಂಬ ಮಾತು ಬಯಲ ಭ್ರಮೆ. ನಿಜ ವಾಗಿ ವಿಚಾರಿಸಿದರೆ ಆತನು ಪರವಸ್ತುವಿಗಿಂತ ಭಿನ್ನನಲ್ಲ." ಆಗ ಮುಕ್ತಾ ಯಕ್ಕನು "ಮೂರ್ತಿಮಂತಾಗಿದ್ದ ವಸ್ತುವು ಇಲ್ಲೆನ್ನಬಹುದೇ" ಪ್ರಭುವೆ ಎಂದು ಕೇಳಿದಳು.

ಅದಕ್ಕೆ ಪ್ರಭುದೇವರು ಉತ್ತರಕೊಟ್ಟದ್ದೇನಂದರೆ "ಅವ್ವಾ, ಇಲ್ಲದ ವಸ್ತುವು ಮಾಯೆಯಿಂದ ಅಸ್ತಿತ್ವದಲ್ಲಿ ತೋರಿ ಕಣ್ಣ ಮುಂದೆ ನಿಂತು ಕಾಡುತ್ತಿರುವದು ನೋಡಾ. ಇಲ್ಲದ ತನುವು ಎಲ್ಲಿಂದಲೋ ಬಂದು ಮಾಯೆಯಿಂದ ಆಟವಾಡಿ ನುಸುಳುವದು ನೋಡಾ. ಕ್ರಿಯಾಶೂನ್ಯ ವಾದ ಪರತತ್ವವು ರೂಪುಗೊಂಡು ಮಾಯಾ ವಶದಿಂದ ಕ್ರಿಯಾಚಾರ ಗಳನ್ನೊಳಕೊಂಡು ಕಾಡಿತ್ತು ನೋಡಾ. ನಿರಾಕಾರವೇ ಮೊದಲು. ನಿರಾ ಕಾರದಿಂದಲೇ ಸಾಕಾರವು ಹುಟ್ಟಿತು. ಆದ್ದರಿಂದ ಸಾಕಾರವನ್ನು ನೆನಿಸಿ

ಕೊಂಡು ಅಳಬಾರದು. ನಿರಾಕಾರ ನಿರ್ಗುಣಗಳ ಕಡೆಗೆ ಲಕ್ಷಗೊಟ್ಟು ಸಮಾಧಾನ ತಾಳಬೇಕು. ಈ ದೃಶ್ಯರೂಪೀ ಜಗತ್ತು ಮಿಥ್ಯವೆಂದರಿದು ಆ ದೃಶ್ಯವಾದ ಪರತತ್ವವೇ ಸತ್ಯವೆಂದು ತಿಳಿದವರಿಗೆ ಸುಖದುಃಖಗಳು ಸರ್ವಥಾ ತಾಗಲಾರವು." ಅದಕ್ಕೆ ಮುಕ್ತಾಯಿಯು "ಸಾಕಾರರೂಪೀ ಗುರುವಿನಿಂದಲೇ ಪರವಸ್ತುವಿನ ಜ್ಞಾನವಾಯಿತ್ತಾದ್ದರಿಂದ ಸಾಕಾರವನ್ನು ನಿರಾಕರಿಸಲಿಕ್ಕೆ ಹೇಗೆ ಬರುತ್ತದೆ" ಎಂದು ಪ್ರಶ್ನೆ ಮಾಡಿದಳು.

ಆಗ ಪ್ರಭುದೇವರು ಅಪ್ಪಣೆಕೊಡಿಸಿದ್ದೇನಂದರೆ, "ಗುರು ಶಿಷ್ಯರ ಭಿನ್ನ ಭಾವವನಾರು ಬಲ್ಲರು? ಗುರುವು ಶಿಷ್ಯನಾದ, ತನ್ನ ವಿನೋದಕ್ಕೆ, ಶಿಷ್ಯನು ಗುರುವಾದ ತನ್ನ ವಿನೋದಕ್ಕೆ. ಕರ್ಮವೆಂಬ ಕೌಟಿಲ್ಯವು ಈ ಪ್ರಪಂಚದಲ್ಲಿ ಸೇರಿದ್ದರಿಂದ ಗುರುಶಿಷ್ಯರಲ್ಲಿ ಭೇದವು ತೋರುತ್ತಿದೆ. ಆದಿ ಅನಾದಿಯಿಂದತ್ತತ್ತ ಮುನ್ನ ಪರತತ್ವವನ್ನು ವಿಚಾರಿಸಲು ಆ ಸ್ವಯಂ ಜ್ಯೋತಿಪ್ರಕಾಶವೇ ನೀನಾಗಿರುವದರಿಂದ ನಿನಗೆ ನೀನೇ ಗುರುವಲ್ಲದೆ ನಿನ್ನಿಂದಧಿಕವಾದ ಗುರುವುಂಟೇ? ತನ್ನ ತಾನರಿದಡೆ ತನ್ನರಿವೇ ಗುರುವು."

ತನಗೆ ತಾನೇ ಗುರುವಾದರೂ ಬೇರೆ ಗುರುವನ್ನು ಮಾಡಿಕೊಂಡೇ ಮುಂದೆ ಸಾಗಬೇಕಲ್ಲವೇ? ಎಂದು ಮುಕ್ತಾಯಿಯು ಕೇಳಲು ಪ್ರಭುದೇವರು— "ತಾಯಿ, ಗುರುವೆಂಬುದು ಶಿಷ್ಯನೆಂದಲ್ಲಿಯೇ ಹೋಯಿತ್ತು. ಶಿಷ್ಯನೆಂಬುದು ಗುರುವೆಂದಲ್ಲಿಯೇ ಹೋಯಿತ್ತು. ಸಹಜ ಸಂಬಂಧಕ್ಕೆ ಗುರುವಲ್ಲದೆ ಸಹಜಕ್ಕೆ ಗುರುವುಂಟೇ? ತಾನು ಲಿಂಗಸ್ವರೂಪಿಯಾಗಲಿಕ್ಕೆ ಗುರುವು ಬೇಕಲ್ಲದೆ ಲಿಂಗಸ್ವರೂಪಿಯಾದವನಿಗೇಕೆ ಗುರುವು ಬೇಕು? ಪರವೆಂದಲ್ಲಿ ಗುರುವುಂಟಲ್ಲದೆ ಸ್ವಯವೆಂದಲ್ಲಿ ಗುರುವಿಲ್ಲ. ದ್ವೈತಭಾವವಿರುವವರೆಗೆ ಗುರುವು ಬೇಕು. ಅದ್ವೈತಾವತಂಸನಿಗೇಕೆ ಗುರುವು ಬೇಕು? " ಎಂದು ವಿಶದಪಡಿಸಿದರು.

ಅದಕ್ಕೆ ಮುಕ್ತಾಯಿಯು; "ಅದ್ವೈತವೆಂಬುದು ಶಿಶು ಕಂಡ ಕನಸಿನಂತೆ ಹೇಳಲಿಕ್ಕೆ ಬಾರದಂತಿರಬೇಕು. ಒಡೆದು ಹೇಳಿದರೆ ಅಲ್ಲಿ ಭಿನ್ನ ಸ್ವರೂಪವು ತೋರುತ್ತದೆ. ಅರುವಿನ ಕಣ್ಣ ಮುಂದೆ ಸ್ವಯಂಪ್ರಕಾಶವೊಂದು ತೋರುತ್ತಿದ್ದೊಡೆ ಅದು ತಾನಾಗಬಲ್ಲುದೇ? ಅದ್ವೈತಿಯಾದವನು ಶಬ್ದ ಮುಗ್ಧನಾಗಿರಬೇಕಲ್ಲವೇ? " ಎಂದು ವಿಜ್ಞಾಪಿಸಿದಳು. ಆ ಮಾತಿಗೆ ಪ್ರಭುದೇವರು ಪ್ರತ್ಯುತ್ತರವಿತ್ತುದೇನಂದರೆ, " ಮಾತೆಂಬುದು ಜ್ಯೋತಿರ್ಲಿಂಗ. ಅದು ಕಾರಣ ಗುಹೇಶ್ವರನ ಶರಣರು ನುಡಿದು ಶಬ್ದ

ಸೂತಕಿಗಳಲ್ಲ. ತನ್ನ ತಾ ಮರೆದವನ ನುಡಿಯೆಲ್ಲ ಮಾಯೆ ನೋಡಾ. ನಿನ್ನ ಮನದ ಕಳವಳವ ತಿಳುಹಲೆಂದು ನಾನು ಮಾತಾಡಿಸಿ ಹೇಳಿದರೆ ಎನ್ನ ಮನದೊಳಗೆ ಕುಂದು ಕಲೆ ಎಂಬುವದಿಲ್ಲ ನೋಡಾ. ಗುಹೇಶ್ವರ ಲಿಂಗದ ಕರುಣದ ಶಿಶುವಾದ ನಿನಗೆ ನಾನು ಬಾಯ್ದೆರೆದು ಹೇಳಿದರೆ ನನಗೆ ಶಬ್ದಸೂತಕ ಬಂತೆಂದು ನೀನು ಸರ್ವಥಾ ತಿಳಿಯಬೇಡ."

ಈ ಮಾತಿಗೆ ಮುಕ್ತಾಯಿಯು, "ನಿನಗೆ ನುಡಿಯು ಹಂಗಿನ್ನೂ ಹಿಂಗದು. ನಡೆಯುನೆಂತು ನೀನು ಪರರಿಗೆ ಹೇಳುವಿ? ನಿನಗಿನ್ನೂ ಒಡಲ ಹಂಗು ಹಿಂಗದು. ನನಗೇತರರಿವು ಹೇಳುತ್ತೀ ಹೋಗೆಂದು" ಛಲದಿಂದ ನುಡಿದುದಕ್ಕೆ ಪ್ರಭುದೇವರು ಹೇಳಿದುದೇನಂದರೆ, "ಅಂಗದ ಕಳೆಯು ಲಿಂಗ ದಲ್ಲಿ ಅರಿತ ಬಳಿಕ ಅಂಗವೆಂಬ ಶಂಕೆಯಿಲ್ಲ ನೋಡಾ ಶರಣಂಗೆ. ಪ್ರಾಣದ ಕಳೆ ಅರುಹಿನಲ್ಲಿ ಅರಿತ ಬಳಿಕ ಶಬ್ದ ಸಂದಣಿಗೆ ಹಂಗಿಲ್ಲ ನೋಡಾ. ಶರಣ ನಡೆದರೆ ನಿರ್ಗಮನ, ನುಡಿದರೆ ನಿಶ್ಶಬ್ದ. ಗುಹೇಶ್ವರನ ಶರಣಂಗೆ ಕುರು ಹಿಲ್ಲ."

ಇದನ್ನು ಕೇಳಿ ಮುಕ್ತಾಯಿಯು ಅಂದದ್ದು, "ಕೈಗ್ಯದು ಕುರುಹು, ಬಾಯದು ಬೊಬ್ಬೆ. ಮತ್ತೇತರ ಕುರುಹು ಬೇಕು?" ಆಗ ಪ್ರಭು ರಾಯನು, "ಅರಿವು ಮರವುಗಳನ್ನು ಹಿಂಗಿದ ನಿಜ ಶರಣನ ಕುರುಹ ನರಸುವರೇ? ಶರಣನ ನಿಲವು ಕಾಯಗೊಂಡವರ ಕಣ್ಣಿಗೆ ಸಂದೇಹ ವಾಗಿರ್ಪುದು. ನಿಸ್ಸಂದೇಹಿಗಳಿಗೆ ನಿಜವಾಗಿರ್ಪುದು." ಎಂದುಸುರಿದನು

ಈ ಮಾತಿಗೆ "ನುಡಿಯೆನೆಂಬಲ್ಲಿಯೇ ನುಡಿಯಿದೆ. ನಡೆಯೆನೆಂಬ ಲ್ಲಿಯೇ ನಡೆಯಿದೆ, ಭಾವಿಸೆನೆಂಬಲ್ಲಿಯೇ ಭಾವವಿದೆ. ಹೀಗಿದ್ದು ಅರಿದು ಮರೆದೆನೆಂಬ ಬಗೆ ಹೇಗೆ?" ಎಂದು ಮುಕ್ತಾಯಕ್ಕಗಳು ಬೆಸಗೊಳ್ಳಲು ಪ್ರಭುದೇವರು, "ತಾಯಿ, ನಿಜದಲ್ಲಿ ನಿಂದ ಲಿಂಗೈಕ್ಯನ ಅಂಗಕ್ರಿಯೆಗ ಳೆಲ್ಲವೂ ಲಿಂಗಕ್ರಿಯೆಗಳು. ನಿಜಲಿಂಗೈಕ್ಯನ ಅನುಭಾವವೆಲ್ಲ ಜ್ಞಾನಶ ಬ್ದವು. ತನ್ನಲ್ಲಿ ತದ್ಗತನಾದ ಶಿವಯೋಗಿಗೆ ಭಿನ್ನವಿಲ್ಲ ನೋಡಾ" ಎಂದು ಅಪ್ಪಣೆ ಕೊಡಿಸಿದರು.

"ತನ್ನಲ್ಲಿ ತಾನೇ ತದ್ಗತನೆಂದು ನುಡಿಯುವವನಿಗೆ ಪರವಸ್ತು ವೇಕೆ ಬೇಕೆಂದು" ಮುಕ್ತಾಯಿಯು ಪ್ರಶ್ನೆ ಮಾಡಲು ಪ್ರಭುದೇವರು, "ನುಡಿಯಿಂದ ನಡೆಗೆಟ್ಟಿತ್ತು. ನಡೆಯಿಂದ ನುಡಿಗೆಟ್ಟಿತ್ತು. ಗುಹೇಶ್ವರನೆಂಬ ಅರಿವು ನಿಮ್ಮ ಮುಂದೆ ಇಷ್ಟು ಹೊತ್ತಿನವರೆಗೆ ಮಾತಾಡಿದ್ದು ನಿಷ್ಫಲ

ವಾಯಿತಲ್ಲ? ಎಂದು ಕಳವಳದಿಂದು ನುಡಿಯುಲು ಮುಕ್ತಾಯಕ್ಕಗಳಿಗೆ ಪ್ರಭುದೇವರ ನಿಜಸ್ವರೂಪವು ಹೊಳೆದು ನುಡಿದಳೇನೆಂದರೆ, "ಶಿವಶರಣರ ಮಹಿಮೆಯು ಆರಿಗೂ ಕಾಣಬಾರದು. ಕಬ್ಬುನ ಉಂಡ ಸೀರಿನಂತೆ, ಕೆಂಬಿಸಿಲುಂಡ ಅರಶಿನದಂತೆ, ಉರಿಯೊಳಗಡಗಿರ್ದ ಕರ್ಪೂರದಂತೆ, ಅಜಗಣ್ಣ ತಂದೆಗಳನೊಳಗೊಂಡಿರ್ಪ ನಿಮ್ಮ ಮಹಿಮೆಗೆ ನಮೋ ನಮೋ ಎನುತಿರ್ದೆನು." ಎಂದು ಬಿನ್ನೈಸಿದಳು. ಶ್ರೀಪ್ರಭುದೇವರು ನಿರೂಪಿಸಿದ ಮಹಾಲಿಂಗೈಕ್ಯದ ಉಪದೇಶವನ್ನು ಮನಸ್ಥಾನವೋಳ್ ಧರಿಸಿ ಅಜಗಣ್ಣನೇ ಪರತತ್ವವೆಂದರಿದು ಅನುತಾಪ ಶಾಂತಿಯಾಗಿ ನಿತ್ಯ ಸುಖಿಸುತ್ತಿರ್ದಳು.

---

# ಸಿದ್ಧರಾಮಯ್ಯದೇವರ ಸಂಪಾದನೆ.

ಗುಡಿ ಗೋಪುರ ಕೆರೆ ಅರವಟ್ಟಿಗೆ ಕಟ್ಟಿಸುವದನ್ನು ಬಿಡಿಸಿ ಶ್ರೀ ಪ್ರಭುದೇವರು ಸಿದ್ಧರಾಮ ಶಿವಯೋಗಿಗೆ ನಿಜತತ್ವವನ್ನು ತಿಳಿಸಿದ ವಿಷಯವು ಈ ಸಂಪಾದನೆಯಲ್ಲಿ ಪ್ರತಿಪಾದಿತವಾಗಿದೆ. ಕಥೆಯ ಮುಖ್ಯಾಂಶವು ಈ ಪ್ರಕಾರವಿರುತ್ತದೆ. ಶ್ರೀ ಪ್ರಭುದೇವರು ಸಂಚಾರವಶದಿಂದ ಸೊನ್ನಲಾಪುರಕ್ಕೆ ಆಗಮಿಸಿ ಅಲ್ಲಿ ಪರಮೇಶ್ವರನ ಶುದ್ಧ ಸಾತ್ವಿಕ ರೂಪವೆಂದೆನಿಸಿದ ಸಿದ್ಧರಾಮೇಶ್ವರನೆಂಬ ಶಿವಯೋಗಿಯು ಕೆರೆ, ಅರವಟ್ಟಿಗೆ, ಗುಡಿ ಗೋಪುರಗಳನ್ನು ಕಟ್ಟಿಸುತ್ತಿದ್ದದನ್ನು ನೋಡಿ ಅಲ್ಲಿ ಕೆಲಸಮಾಡಲಿಕ್ಕೆಂದು ದಟ್ಟಾಗಿ ನೆರೆದ ಜನಸಂದಣಿಯನ್ನು ಕಂಡು ನುಡಿದುದೇನಂದರೆ "ಶಿವನೇ ತಾನಾದ ಸಿದ್ಧರಾಮಶಿವಯೋಗಿಯು ಧರೆಯ ಮೇಲೊಂದು ಪಿರಿದಪ್ಪ ಸಂತೆಯ ನೆರೆಯಿಸಿದ್ದುದನ್ನು ನೋಡಿ ಬೆರಗಾದೆ. ಅರಿಮರುಳೆಂಬ ಶಿವನು ನೆರೆ ಮರುಳೆಂಬ ಜಗವ ಹುಟ್ಟಿಸಿದ ಪರಿಯ ಕಂಡು ಬೆರಗಾದೆ. ಗುಹೇಶ್ವರನ ಲೀಲೆಯು ಭವಮಯವಾದೊಡೆ ನಾನು ಬೆರಗಾದೆ." ಎಂದರೆ ಪುಣ್ಯದ ಸೀಮೆಯನ್ನು ಮೀರಿದ ಶಿವಶರಣರು ಸಾಮಾನ್ಯರಂತೆ ಪುಣ್ಯ ಪಡೆಯಬೇಕೆಂದು ಗುಡಿಗುಂಡಾರಗಳನ್ನು ಕಟ್ಟಿಸಬಾರದೆಂಬರ್ಥ.

ಸಿದ್ಧರಾಮೇಶ್ವರನು ೧ ಲಕ್ಷ ೯೬ ಸಾವಿರ ಶಿವಾಲಯಗಳನ್ನು ಕಟ್ಟಿಸಿ ಪುಣ್ಯಪಡೆಯಬೇಕೆಂದಿದ್ದ ಹಂಬಲವನ್ನು ವಿಡಂಬಿಸಿ ಶ್ರೀ ಪ್ರಭುದೇವರು ಅಪ್ಪಣೆಕೊಡಿಸಿದ್ದೇನಂದರೆ, "ಕಲ್ಲ ದೇವರ ಮಾಡಿ ಕಲ್ಲ ಮನೆಯಮಾಡಿ ಆ ಕಲ್ಲು ಕಲ್ಲ ಮೇಲೆ ಕೆಡೆದರೆ ದೇವರೆತ್ತ ಹೋದರೋ? ಲಿಂಗಪ್ರತಿಷ್ಠೆಯ ಮಾಡುವವರಿಗೆ ನಾಯಕ ನರಕ ತಪ್ಪದು ಗುಹೇಶ್ವರಾ" ಎಂದರೆ ಕಲ್ಲು ದೇವರಲ್ಲ, ಕಲ್ಲಿನ ಮನೆಯು ದೇವರಗುಡಿಯಲ್ಲ. ಗುಡಿಯು ಬಿದ್ದರೆ ಕಲ್ಲಿನ ದೇವರು ಒಡೆದುಹೋಗುವದು. ಆದ್ದರಿಂದ ಕಲ್ಲು ದೇವರೆಂದು ಭಾವಿಸುವದು ಮೂರ್ಖತನವು. ಇದಲ್ಲದೆ ಮತ್ತೆ ಪ್ರಭುದೇವರು ಹೇಳಿದ್ದೇನಂದರೆ "ದೇಹವೇ ದೇಗುಲವಾಗಿರಲು ಮತ್ತೆ ಬೇರೆ ದೇಗುಲವೇ ತಕಯ್ಯಾ? ಹೇಳಲಿಲ್ಲ ಕೇಳಲಿಲ್ಲ. ಗುಹೇಶ್ವರಾ ನೀನು ಕಲ್ಲಾದರೆ ನಾನೇನಪ್ಪೆನಯ್ಯಾ?" ಅಂದರೆ ನಮ್ಮ ದೇಹವೆಂಬ ಗುಡಿಯಲ್ಲಿ ಪ್ರಾಣವೆಂಬ ಲಿಂಗವಿರಲು ಬೇರೆ ಕಲ್ಲಿನ ಗುಡಿ ಕಟ್ಟಿಸಿ ಕಲ್ಲಿನ ಲಿಂಗ ಸ್ಥಾಪಿಸುವದು ಹುಚ್ಚುತನವೆಂಬುದೇ ಅದರ ತಾತ್ಪರ್ಯವು. ಒಟ್ಟಿನ ಮೇಲೆ ಗುಂಡಿಗುಂಡಾರ ಕೆರೆಭಾವಿಗಳನ್ನು ಕಟ್ಟಿಸುವವರು ಸತ್ತಮೇಲೆ ಸ್ವರ್ಗಕ್ಕೆ ಹೋಗಿ ಪುಣ್ಯ ತೀರಿದ ಬಳಿಕ "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಎಂಬ ಉಕ್ತಿಗನುಸರಿಸಿ ಮರಳಿ ಭವಕ್ಕೆ ಬರುವರು ಎಂಬುದೇ ಪ್ರಭುದೇವರ ಅಭಿಪ್ರಾಯವು.

ಆ ಮೇಲೆ ಪ್ರಭುದೇವರು ಭವದ ಕೆರೆಗಿಂತಲೂ ಪಾರಮಾರ್ಥ ಸೂಚಕವಾದ ಕೆರೆಯನ್ನು ಕಟ್ಟಿಸುವದು ಪರಮ ಭೂಷಣವೆಂದು ಈ ಪ್ರಕಾರ ನಿರೂಪಿಸಿದರು, "ತನುವೆಂಬ ಭೂಮಿ, ಮನವೆಂಬ ಒಡ್ಡು, ಆಚಾರವೆಂಬ ಸೋಪಾನ, ಪರಮಾನಂದವೆಂಬ ಜಲದಿಂದ ಕೆರೆಯ ಕಟ್ಟಿಸಿದರೆ ಅದು ಸ್ಥಿರವಾಗುವದು. ಇಂಥ ಕೆರೆ ಕಟ್ಟಿಸುವದನ್ನು ಬಿಟ್ಟು ಭವದ ಕೆರೆ ಕಟ್ಟಿಸುವ ಒಡ್ಡರ ರಾಮನೆಲ್ಲಿರುವನೆಂದು ಅಲ್ಲಿ ನೆರೆದ ಒಡ್ಡರಿಗೆ ಪ್ರಭುದೇವರು ಪ್ರಶ್ನೆಮಾಡಲು ಅವರು ತಮ್ಮ ಸ್ವಾಮಿಯನ್ನು ನಿಂದಿಸುವಾತನಿವನಾವನೆಂದು ಪ್ರಭುವಿಗೆ ಕಲ್ಲು, ಗುಂಡು, ಬಡಿಗೆಗಳಿಂದ ಅನೇಕ ಏಟುಗಳನ್ನು ಹಾಕಿದರು. ಆದರೆ ಆ ಏಟುಗಳೆಲ್ಲ ತಿರುಗಿ ಆ ಒಡ್ಡರಿಗೇನೇ ತಾಕಿದವು. ಶರಣರಿಗೆ ಮಾಡಿದ ನೋವು ಮರಳಿ ಪಾತಕರಿಗೆ ತಾಕುವದಲ್ಲದೆ ಶರಣರಿಗೇನೂ ಕುಂದಿಲ್ಲ. ಕೆಂಡವನ್ನು ಗೊರಲೆಯು ಮುಟ್ಟಬಲ್ಲುದೇ?

ಇದನ್ನು ನೋಡಿ ಪರಮಾಶ್ಚರ್ಯಭರಿತರಾಗಿ ಆ ಒಡ್ಡರು ತಮ್ಮ ಸ್ವಾಮಿಯ ಬಳಿಗೆ ಹೋಗಿ ಯಾವನೋ ಒಬ್ಬ ಇಂದ್ರಜಾಲಕನು ನಿಮ್ಮನ್ನು ನಿಂದಿಸುತ್ತಿರುವನೆಂದೂ ತಾವು ಅವನಿಗೆ ಮಾಡಿದ ಗಾಯಗಳೆಲ್ಲ ತಮಗೇ ತಿರುಗಿದವೆಂದೂ ಬಿನ್ನೈಸಿದರು. ಶಿಷ್ಯರ ನೋವೇ ತನ್ನ ನೋವೆಂದು ಭಾವಿಸಿ ಸಿದ್ಧರಾಮ ಶಿವಯೋಗಿಯು ಕ್ರೋಧ ಸಂತಪ್ತನಾಗಿ ತನ್ನ ನೊಸಲಿನ ಅಗ್ನಿನೇತ್ರವನ್ನು ಪ್ರಭುವಿನ ಮೇಲೆ ಬಿಟ್ಟನು. ಆದರೆ ಶಿವಶರಣರ ಮನದಲ್ಲಿ ಕೋಪಾಗ್ನಿಯಿದ್ದರೆ ಅದಕ್ಕೆ ನಿಂದಕರು ಗುರಿಯಾಗುವರಲ್ಲದೆ ಶರಣರೆಂದಿಗೆ ಗುರಿಯಾದಾರು? ಪ್ರಭುದೇವರು ನೊಸಲಗಣ್ಣಿನ ಮಹಾಜ್ವಾಲೆಯನ್ನು ತಮ್ಮ ಅಂಗಾಲೊಳಗಡಗಿಸಿಕೊಂಡು ಬಳಿಕ ಅದನ್ನು ಸಿದ್ಧರಾಮೇಶನ ಕಡೆಗೆ ತಿರುಗಿಸಲು ಅದು ಅವನ ಸುತ್ತಲೂ ಮುತ್ತಿಬಿಟ್ಟಿತು.

ಆಗ ಸಿದ್ಧರಾಮ ಶಿವಯೋಗಿಗಳ ಸಂತಾಪವಡಗಿ ಆ ಪ್ರಭುದೇವರ ಪಾದ ಸಂದರ್ಶನವನ್ನು ಹೊಂದಬೇಕೆಂಬ ಆಕಾಂಕ್ಷೆ ಮೀರಿ ಅವರು ನುಡಿದುದೇನಂದರೆ "ನಟ್ಟಡವಿಯೊಳಗೆ ಇರುಳು ಹಗಲೆನ್ನದೆ ನಾನು ಅಪ್ಪಾ, ಅಯ್ಯಾ ಎಂದು ಅರಸುತ್ತ ಹೋದರೆ, ನಾನಿದ್ದೇನೆ ಬಾ ಮಗನೆ ಎಂದು ಕರೆದೆನ್ನ ಕಂಬನಿ ತೊಡೆದು ನಿಜವ ತೋರಿದ ದೇವನ ಪಾದವಿಂದೆನ್ನಲ್ಲಿಗೆ ನಡೆದು ಬಂದರೆ ನಾನರಿಯದೆ ಹೋದೆನಲ್ಲ? ನನ್ನ ಮನದ ಮರವೆಯ ನೆಚ್ಚರಗೊಳಿಸಿದ ಆ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಈಗ ನನ್ನ ಹೃದಯದಲ್ಲಿಂಬಿಟ್ಟುಕೊಂಬೆ." ಅಂದರೆ ಸಾಕ್ಷಾತ್ ಪರವಸ್ತುವೇ ನನ್ನ ಬಳಿಗೆ ಬಂದಿರಲು ನಾನು ತಿಳಿಯದೆ ಕ್ರೋಧಪರವಶನಾಗಿ ಕೆಟ್ಟೆನು. ಇನ್ನು ಅವರ ಸಂದರ್ಶನದಿಂದ ನನ್ನ ಹೃದಯವನ್ನು ಪುನೀತಗೊಳಿಸುವೆ ನೆಂಬುದೇ ಅದರ ಭಾವವು.

ಅನಂತರ ಆತನ ಬಳಿಯಲ್ಲಿದ್ದ ಒಡ್ಡರು ಪ್ರಭುದೇವರ ಅಂಗಾಲಿ ನೊಂದೊಗೆದ ಜ್ವಾಲೆಯನ್ನು ನಿಲ್ಲಿಸುವ ಪರಿ ಎಂತೆಂದು ಬೆಸಗೊಳಲು ಸಿದ್ಧರಾಮಯೋಗಿಯು ಅವನಿಗೆ ಉತ್ತರಕೊಟ್ಟದ್ದೇನಂದರೆ, "ಅಂಗಾಲ ಕೋಪವ ಮನಕ್ಕೆ ತಂದಿಪ್ಪವನ, ಮನದ ಕೋಪವ ಹೃದಯದಲ್ಲಿಟ್ಟುಕೊಂಬವನ ಶ್ರೀಪಾದಕ್ಕೆ ಎನ್ನ ನೊಸಲ ತಂಪು ತಂದು ತಳಿವೆ, ಎನ್ನ ನೊಸಲ ಅಮೃತದಿಂದಲವನ ತಳುಹುವೆನು ಕಪಿಲಸಿದ್ಧಮಲ್ಲಿಕಾರ್ಜುನಾ."

ಆ ಮೇಲೆ ಸಿದ್ಧರಾಮೇಶನು ಪ್ರಭುದೇವರನ್ನು ಕಂಡು ಪಾದಕ್ಕೆರಗಿ ಭೃತ್ಯಾಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡು ಅವರನ್ನು ಬಹು ಪರಿಯಾಗಿ ಸ್ತೋತ್ರಮಾಡಲು ಪ್ರಭುದೇವರು, "ಕೆಳೆಯಿಲ್ಲದೆ ಹೋಗ ಳಿದವನಿಗೆ ಮನ ಸೋಲಬಹುದೇ? ಗುಹೇಶ್ವರನ ನಿಲುವು ಮಾತಿನ ಬಲೆಗೆ ಸಿಲುಕುವದೇ? ಸಿದ್ಧರಾಮಯ್ಯ ನೀನು ಮರುಳಾದೆಯಲ್ಲ? ಹೊಗಳಿಸಿ ಕೊಂಡವರೆಲ್ಲರೂ ಮೂರ್ತಿಗೊಳಗಾದರು. ಗುಹೇಶ್ವರನ ನಿಲವ ವೇದ ಶಾಸ್ತ್ರ ಶ್ರುತಿ ಸ್ಮೃತಿಗಳು ಹೊಗಳಿ ಕಾಣದಾದವು" ಎಂದು ಜರಿದು ನುಡಿದರು.

ಆಗ ಸಿದ್ಧರಾಮಯ್ಯದೇವರು "ನೀನು ವೇದಪ್ರಿಯನಲ್ಲ, ಶಾಸ್ತ್ರಪ್ರಿಯ ನಲ್ಲ, ಆದರೆ ಭಕ್ತಿಪ್ರಿಯನೆಂದು ಮರೆಹೊಕ್ಕೆ ಕಾಯಯ್ಯಾ ಕಪಿಲಸಿದ್ಧಮಲ್ಲಿ ಕಾರ್ಜುನಾ" ಎಂದು ಬೆಸಗೊಳ್ಳಲು ಅದಕ್ಕೆ ಪ್ರಭುದೇವರು "ಭಕ್ತಿಯ ಯುಕ್ತಿಯನಾರು ಬಲ್ಲರು? ತನ್ನ ಮರೆದು ಇದಿರ ಹರಿದು ಇರಬಲ್ಲಡೆ ಆತ ಭಕ್ತ. ಆ ಶಿವಭಕ್ತಂಗೆ ಶಿವನೊಲಿವನು. ನುಡಿಯಲ್ಲಿ ಭಕ್ತಿಯ ನಾಡಿ ನಡೆಯಲಿಲ್ಲದಿದೊರ್ಡೆ ಮೃಡನೆಂತೊಲ್ಲಿವನಯ್ಯ? ಮರೆದು ಕೋಪದ ಉರಿಯನ್ನುಗುಳಿ ಆರಿದು ಬಂದೆರಗಿದೆನೆಂಬ ನುಡಿಗೆ ನಮ್ಮ ಗುಹೇಶ್ವರ ನೊಲಿವನೇ" ಎಂದು ಆತನ ಭಕ್ತಿಯನ್ನು ಹಳಿದು ಮಾತನಾಡಿದರು.

ಇದನ್ನು ಕೇಳಿ ಸಿದ್ಧರಾಮದೇವರಿಗೆ ಬಹಳ ನಾಚಿಕೆ ಹುಟ್ಟಿ ಪ್ರಭು ವಿಗೆ ಅಡ್ಡಬಿದ್ದು, "ನಿಮ್ಮ ಮಹಾಪಾದವನ್ನು ನನ್ನ ಹೃತ್ಕಮಲದಲ್ಲಿ ಗಟ್ಟಿಯಾಗಿರಿಸದೆ ಬಿಡೆನೆಂದು" ಹೇಳಿಕೊಳ್ಳಲು ಪ್ರಭುವು "ಶರಣರ ಭಾವಾತೀತವಾದ ನಿರಾಕಾರದ ಘನವ ನೀನೆಂತು ತಡೆದು ನಿಲ್ಲಿಸುವೆ. ಅದು ಸುಜ್ಞಾನ ಮುಖಕ್ಕಸಾಧ್ಯ ನೋಡಾ. ಗುಹೇಶ್ವರನ ಶರಣನಾವ ಪರಿಯಲ್ಲಿ ಹಿಡಿದು ನಿಲ್ಲಿಸುವೆ ಹೇಳಾ ಸಿದ್ಧರಾಮಯ್ಯ" ಎಂದು ಧಿಕ್ಕ ರಿಸಿ ನುಡಿದರು.

ಆ ಮೇಲೆ ಸಿದ್ಧರಾಮೇಶನು, "ಅಯ್ಯಾ, ನಿಮ್ಮನ್ನು ಹಿಡಿದು ನಿಲ್ಲಿ ಸಲೆನ್ನಳವಲ್ಲ. ಕರುಣದಿ ಎನ್ನ ಮಠಕ್ಕೆ ಬಾರಾ ಕಪಿಲಸಿದ್ಧಮಲ್ಲಿಕಾ ರ್ಜುನಾ" ಎಂದು ವಿಜ್ಞಾಪಿಸಿಕೊಳ್ಳಲು ಪ್ರಭುದೇವರು, "ಗತಿಗೆಟ್ಟು, ಮತಿಗೆಟ್ಟು, ಧೃತಿಗೆಟ್ಟು ನಿಮ್ಮ ಉಪಚಾರ ಹೊಂದಲ ಮಠಕ್ಕೆ ಬರ ಬೇಕೇ.? ಬೇಡವಯ್ಯಾ· ತೆರಹಿಲ್ಲದ ಘನವನೊಳಕೊಂಡ ಬಳಿಕ ಬರಲೆಡೆ ಯುಂಟೇ ನಮ್ಮ ಗುಹೇಶ್ವರಲಿಂಗಕ್ಕೆ?" ಎಂದು ಹಂಗಿಸಿ ನುಡಿದರು.

ಅದಕ್ಕೆಸಿದ್ಧರಾಮೇಶನು "ಭಕ್ತವತ್ಸಲನೆನಿಸಿ ಇಲ್ಲಿಯ ವರೆಗೆ ಬಿಜಯಂಗೈದು ಇನ್ನು ಮುಂದೆ ಬಾರೆನೆಂಬುವದಕ್ಕೆ ಕಾರಣವೇನೆಂದು ಬೆಸಗೊಳ್ಳಲು ಪ್ರಭುವು "ಭೃತ್ಯನಿದ್ದ ಠಾವಿಂಗೆ ಕರ್ತೃ ಬಂದರೆ ಅತ್ತಿತ್ತ ಹರಿಯದೆ ನಂಬಬೇಕು. ಅದನ್ನುಬಿಟ್ಟು ಭೃತ್ಯನು ಕರ್ತನ ಕಂಡು ಉರಿಯನ್ನುಗುಳಿದರೆ ಕರ್ತೃ ಭೃತ್ಯರ ನಡುವೆ ಸಂಬಂಧವೇನುಳಿಯಿತು? ತಪ್ಪಿ ತಪ್ಪಿ ತಿದ್ದಿಕೊಂಡೆನೆಂದರೆ ಹಸನಾಗಬಲ್ಲುದೆ? ಗುಹೇಶ್ವರನ ಶರಣರಾರೆಂಬುದ ನೀನೆತ್ತ ಬಲ್ಲೆಹೋಗಾ ಮರುಳಸಿದ್ಧರಾಮಾ." ಎಂದು ಜರಿದು ನುಡಿದರು.

ಕೊನೆಗೆ ಸಿದ್ಧರಾಮ ಶಿವಯೋಗಿಗಳು ಅತ್ಯಂತ ಭಯಭೀತರಾಗಿ "ನಾನು ನಿಮಗೆ ಇದಿರುತ್ತರ ಕೊಟ್ಟ ಕೇಡಿಂಗೆ ಏನೆಂಬೆನಯ್ಯಾ. ತಪ್ಪಾಯ್ತು ಕ್ಷಮಿಸು ಎನ್ನಯ್ಯಾ. ಅಯ್ಯಾ, ನಿಮ್ಮ ಕಂಡಾಕ್ಷಣದಲ್ಲಿ ನಂಬಿ ನಚ್ಚಿ ಶರಣು ಹೋಗಲರಿಯದೆ ಕೆಮ್ಮನೆ ಕೆಟ್ಟೆ. ಹಾಲಲೆದ್ದು ನೀರಲೆದ್ದು; ಕೊಲ್ಲು ಕಾಯಿ; ಎನ್ನ ಸಕಲ ಭಾರ ನಿಮ್ಮದಯ್ಯಾ. ಎನ್ನ ಕರಕರ ಕಾಡದಿರು ತಂದೆ" ಎಂದು ಕಿಂಕುರ್ವಾಣತೆಯಿಂದ ಪ್ರಭುದೇವರ ಪಾದದ ಮೇಲೆ ಬಿದ್ದು ಹೊರಳಾಡಿ ಅಳುತ್ತಿರಲು ಪ್ರಭುದೇವರಿಗೆ ಕರುಣ ಹುಟ್ಟಿ ಅವರ ಶಿರವ ಹಿಡಿದೆತ್ತಿ ಕಣ್ಣೀರ ತೊಡೆದು ಪ್ರಸನ್ನ ಹೃದಯರಾಗಿ "ಶುದ್ಧ ಸಾತ್ವಿಕಯೋಗಿ, ಸಚ್ಚಿದಾನಂದಯೋಗಿ, ನಿತ್ಯಪರಿಪೂರ್ಣಯೋಗಿ, ಪರಮಾನಂದಯೋಗಿ, ಸುಗುಣಯೋಗಿ ಇತ್ಯಾದಿಯಾಗಿ ಗದ್ಗದಿತ ಕಂಠದಿಂದ ಬಿಗಿದಪ್ಪಿ ಸಿದ್ಧರಾಮೇಶ್ವರ ಶಿವಯೋಗಿಗಳನ್ನು ಕೊಂಡಾಡಿದರು. ಸಿದ್ಧರಾಮಯ್ಯ ದೇವರು ಬ್ರಹ್ಮರಂಧ್ರದಲ್ಲಿ ಪರವನರಿತ ಮಹಾಜ್ಞಾನಿಗಳೆಂದೂ ಯೋಗದಲ್ಲಿ ಸದಾ ರಮಿಸುವ ಮಹಾ ಮಹಿಮರೆಂದೂ ಪ್ರಭುದೇವರು ಮೊದಲೇ ಅರಿತಿದ್ದುದರಿಂದ ಸಂತುಷ್ಟರಾಗಿ ನುಡಿದುದೇನಂದರೆ "ಗುಹೇಶ್ವರನ ಶರಣರು ದೇಹವಿಲ್ಲದ ನಿರ್ದೇಹಿಗಳೆಂದು ಇಂದೆನಗೆ ಕಾಣಬಂದಿತ್ತು ನೋಡಾ ಸಿದ್ಧರಾಮಯ್ಯಾ"

ಆ ಬಳಿಕ ಸಿದ್ಧರಾಮಯ್ಯ ದೇವರು "ಕಾಯಜೀವದ ಹೊಲಿಗೆಯ ಸಂದ ಬಿಚ್ಚಲರಿಯದ ನಾನೆಂತು ನಿರ್ದೇಹಿಯಾಗಬಲ್ಲೆನೆಂದು "ವಿನೀತ ಭಾವದಿಂದ ಬೆಸಗೊಳ್ಳಲು ಪ್ರಭುದೇವರು ಆ ಮಾತಿಗೆ ಮೆಚ್ಚಿ ಅವರನ್ನು ಏಕಾಂತ ಸ್ಥಳಕ್ಕೆ ಕರದೊಯ್ದು ಅವರ ನಿಜಸುಖ ಸಮಾಧಿಯನ್ನು ನಿರೀಕ್ಷಿಸಿ ಹರ್ಷಿತರಾಗಿ ಸಿದ್ಧರಾಮಯ್ಯದೇವರ ಮಠಕ್ಕೆ ಬಿಜಯಂಗೈಯ್ಯಲು ಸಿದ್ಧರಾಮೇಶನು ಅವರನ್ನು ಅಷ್ಟವಿಧಾರ್ಚನೆ ಷೋಡಶೋಪಚಾರಂಗ

ಳಿಂದುಪಚರಿಸಿದನು. ಆ ಮೇಲೆ ಅವರೀರ್ವರ ನಡುವೆ ಶಿವಾನುಭವ ಸದ್ಗೋಷ್ಠಿಗಳು ಕೆಳಗೆ ಬರೆದ ಪ್ರಕಾರ ಜರಗಿದವು.

ಸಿದ್ಧರಾಮಯೋಗಿಯು ಪ್ರಭುದೇವರನ್ನು ಕುರಿತು "ಎಲೆ ದೇವಾ, ೮೪ ಲಕ್ಷ ಜೀವರಾಶಿಗಳನ್ನು ದೇವಾಲಯಂಗಳನ್ನಾಗಿ ಮಾಡಿ ಘನಲಿಂಗವಾದ ನೀನು ಅವುಗಳಲ್ಲಿ ಪ್ರಾಣರೂಪದಿಂದ ವಾಸಿಸುತ್ತಿರುವದನ್ನು ಕಂಡು ಅದರ ಅನುಕರಣ ಮಾಡಬೇಕೆಂದು ನಾನು ೧ ಲಕ್ಷ ೯೬ ಸಾವಿರ ಶಿವಾಲಯಗಳನ್ನು ಕಟ್ಟಿಸಬೇಕೆಂದಿದ್ದೆನಲ್ಲದೆ ನನಗೆ ಬೇರೆ ಸ್ವತಂತ್ರವುಂಟೆ ಕಪಿಲಸಿದ್ಧಮಲ್ಲಿಕಾರ್ಜುನಾ ?„ ಎಂದು ಪ್ರಶ್ನೆ ಮಾಡಲು ಪ್ರಭುದೇವರು "ಜಗದ ಜೀವ ರಾಶಿಗಳು ಆ ಮಹಾಘನಲಿಂಗಕ್ಕೆ ಶಿವಾಲಯವ ಮಾಡಬಲ್ಲವೇ? ನಿನ್ನ ಲಕ್ಷದ ಮೇಲೆ ೯೬ ಸಾವಿರ ಲಿಂಗವ ನಿನ್ನೆದೆಯಲ್ಲಿರಿಸಿಕೊಳ್ಳಲರಿಯದ ಕಾರಣ ಗುಹೇಶ್ವರಲಿಂಗವು ನಿನಗೊಲಿಯಲಿಲ್ಲ ನೋಡಾ ಸಿದ್ಧರಾಮಯ್ಯಾ" ಎಂದು ಉತ್ತರ ಕೊಟ್ಟರು.

ಅದಕ್ಕೆ ಸಿದ್ಧರಾಮೇಶನು" ನಾನು ಮಾಡುವದೆಲ್ಲವು ನಿಮ್ಮಾಧೀನವಲ್ಲದೆ ಎನಗೆ ಬೇರೆ ಸ್ವತಂತ್ರವುಂಟೇ? ಇನ್ನು ನಿಮ್ಮಲ್ಲಿ ನಿಜವಳವಡುವಂತೆ ಮಾಡಾ ಪ್ರಭುವೇ" ಎಂದು ಬಿನ್ನೈಸಲು ಪ್ರಭುದೇವರು ಉತ್ತರ ಕೊಟ್ಟದ್ದೇನಂದರೆ" ಕೆರೆದೇಗುಲಂಗಳು ಹಿಂದಿನ ಅಡಿವೆಜ್ಜೆಗೊಳಗು. ಕರ್ಮಕಾಂಡಯೋಗಂಗಳೆಲ್ಲವು ಭವಕ್ಕೆ ಮೂಲಾಧಾರಂಗಳು. ಅದು ಕಾರಣ ಹಿಂದಣ ಮುಂದಣ ಸಂದನಳಿದು ಗುಹೇಶ್ವರ ಲಿಂಗದಲ್ಲಿ ಸಂದಿರಬೇಕು ಸಿದ್ಧರಾಮಯ್ಯಾ„

ಅದಕ್ಕೆ ಸಿದ್ಧರಾಮಯ್ಯದೇವರು" ಕರ್ಮವ ಮಾಡದೆ ನಿರ್ಮಲ ಸುಚಿತ್ತವನರಿವ ಪರಿ ಎಂತು? ಕೃಪೆಯ ಮಾಡಿ ಉಣ್ಣದೆ ಹಸಿವು ಹರಿವ ಬಗೆ ಹೇಗೆ ಹೇಳಾ ಕಪಿಲಸಿದ್ಧಮಲ್ಲಿಕಾರ್ಜುನಾ" ಎಂದು ಕೇಳಲು ಪ್ರಭುದೇವರು ಪ್ರಾಣಾಂತ್ಯದ ವರೆಗೆ ಕರ್ಮವ ಮಾಡಿದರೇನು ಫಲ, ಜ್ಞಾನ ವಳವಡದನ್ನಕ್ಕರ? ಸಾಯುವ ತನಕ ಸಾಧನೆಯ ಮಾಡಿದರೇನು, ಕಾದುವ ಠಾವು ದೊರೆಯದನ್ನಕ್ಕರ? ಅರ್ಥಾತ್ ಜ್ಞಾನವೇ ಪ್ರಾಮುಖ್ಯವಲ್ಲದೆ ಕರ್ಮಾದಿಗಳಲ್ಲ" ಎಂದುಸುರಿದರು.

ಇದನ್ನು ಕೇಳಿ ಸಿದ್ಧರಾಮಯ್ಯ ದೇವರು, "ಕೈಯಲ್ಲಿ ಲಿಂಗವ ಹಿಡಿದು ಪೂಜಿಸುವದು ಕರ್ಮವಲ್ಲವೇ? ಮನದಲ್ಲಿ ಶಿವನ ನೆನೆಯುವದು ಕರ್ಮವಲ್ಲವೇ? ಕರ್ಮವನ್ನು ಬಿಟ್ಟು ಭಾವವು ಶುದ್ಧವಾಗುವ ಬಗೆ ಹೇಗೆ?

ಎಂದು ಕೇಳಲು ಪ್ರಭುದೇವರು "ಚಿನ್ನವನ್ನು ಒರೆ ಹಚ್ಚಬಹುದಲ್ಲದೆ ಚಿನ್ನದ ಬಣ್ಣಕ್ಕೆ ಒರೆ ಹಚ್ಚಬಹುದೇ? ಹುವ್ವ ಮುಡಿಯಬಹುದಲ್ಲದೆ ಹೂವಿನ ಗಂಧವ ಮುಡಿಯಬಹುದೇ? ಕರ್ಮವ ಮಾಡಬಹುದಲ್ಲದೆ ವಸ್ತುವನರಿಯಬಹುದೇ? ಗುಹೇಶ್ವರನ ನೆನೆಯಬಹುದಲ್ಲದೆ ಲಿಂಗವು ತಾನಾಗಬಹುದೇ ಸಿದ್ಧರಾಮಯ್ಯಾ" ಎಂದು ಉತ್ತರವನ್ನು ಕೊಟ್ಟರು.

ಆಗ ಸಿದ್ಧರಾಮೇಶನು ಅಂದದ್ದು "ಬಣ್ಣವಿಲ್ಲದ ಚಿನ್ನವುಂಟೇ? ಗಂಧವಿಲ್ಲದ ಕುಸುಮವುಂಟೇ? ಕ್ರಿಯಾ ಶುದ್ಧವಾಗದೆ ಭಾವ ಶುದ್ಧಿಯಾಗುವದೆಂತು ಹೇಳಾ ಪ್ರಭುವೇ?" ಅದಕ್ಕೆ ಪ್ರಭುದೇವರು,"ರಾಗದ್ವೇಷ ಅಹಂಕಾರಾದಿಗಳನ್ನು ಹುರಿದವರಿಗೆ ಮತ್ತೆ ಬೇರೆ ಭಾವಶುದ್ಧಿಯೇತರದೆಂದು" ನುಡಿದರು.

ಇಷ್ಟಾದ ಮೇಲೆ ಸಿದ್ಧರಾಮಯ್ಯ ದೇವರು ತ್ರಿವಿಧಲಿಂಗ ಸಂಬಂಧ ವಳವಡುವಂತೆ ಮಾಡಬೇಕೆಂದು ಪ್ರಭುದೇವರಿಗೆ ವಿಜ್ಞಾಪಿಸಿಕೊಳ್ಳಲು ಪ್ರಭುದೇವರು ಅನುಗ್ರಹಿಸಿದುದೇನಂದರೆ "ಅಯ್ಯಾ, ಭಾವಲಿಂಗವೆಂಬುದು ಕಲ್ಪಿಸಿ ಹೇಳಬಾರದು; ಕಲ್ಪಿಸಿ ತೋರಬಾರದು. ಅದು ಉಪಮಾತೀತವಾದುದು. ಕಾಯ ಜೀವದ ಹೊಲಿಗೆಯ ಸಂದ ಬಿಚ್ಚಬಲ್ಲವರೇ ಆಗುಹೇಶ್ವರ ಲಿಂಗವನ್ನು ಅರಿಯಬಲ್ಲರು. ಪ್ರಾಣಲಿಂಗವೆಂಬುದು ವಾಙ್ಮನಾತೀತವು. ನಾದಬಿಂದು ಕಲಾತೀತವು. ಯೋಗಸಾಧನೆಗೆ ಮೀರಿದಂಥಹದು." ಈ ಮಾತಿಗೆ ಸಿದ್ಧರಾಮ ಶಿವಯೋಗಿಯು ನುಡಿದುದೇನಂದರೆ ಅಯ್ಯಾ, ಸುಷುಮ್ನ ನಾಡಿಯ ತುದಿಯ ಸಹಸ್ರದಳದ ಮಂಟಪದಲ್ಲಿ ನಾನು ನಿಮ್ಮ ನೆಲೆಗೊಂಡಿಪ್ಪೆ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ."

ಇದಕ್ಕೆ ಪ್ರಭುದೇವರು ಉತ್ತರ ಕೊಟ್ಟದ್ದೇನಂದರೆ" ಸ್ವಸ್ಥ ಪದ್ಮಾಸನದಲ್ಲಿ ಕುಳ್ಳಿರ್ದು ನಿಟ್ಟೆಲುವ ಮುರಿದು ನಿಷ್ಠೆಯಿಂದ ಅಮೃತವನುಂಡಿಹೆನೆಂಬವರ ಕೇಡಿಂಗೆ ಕಡೆಯಿಲ್ಲ. ಸ್ಥಾನಮಾನವೆಂಬ ಮಾತಿಂಗೆ ದೂರವಾದ ಘನವ ಬ್ರಹ್ಮರಂಧ್ರದಲ್ಲಿ ಕಂಡೆನೆಂದರೆ ಕಾಣಬಹುದೇ? ನಮ್ಮ ಗುಹೇಶ್ವರಲಿಂಗವು ಕಲ್ಪಿತಕ್ಕೆ ದೂರ ಕೇಳಾ ಸಿದ್ಧರಾಮಯ್ಯಾ." ಆ ಬಳಿಕ ಪ್ರಭುದೇವರು ಸಿದ್ಧರಾಮೇಶ್ವರನಿಗೆ ಸರ್ವಸಮಾಧಿಯ ನಿಲವನ್ನು ಈ ಪ್ರಕಾರ ನಿರೂಪಿಸಿದರು :— ಅರಿವೆನೆಂಬುದು ತಾ ಬಯಲು. ಅರಿಯೆನೆಂಬುದು ತಾ ಬಯಲು. ಮರೆದೆನೆಂಬುದು ತಾ ಬಯಲು. ಅರುಹಿನ ಕುರುಹಿನ ಮರಹಿನೊಳಗೆ ಗುಹೇಶ್ವರ ನೆಂಬದು ತಾ ಬಯಲು."

ಇದನ್ನೆಲ್ಲ ಕೇಳಿ ಪರಮ ಹರ್ಷಿತರಾಗಿ ಸಿದ್ಧರಾಮ ಶಿವಯೋಗಿಗಳು ಕೊನೆಗೆ ಪ್ರಭುವಿಗೆ ಇಷ್ಟಲಿಂಗ ಸಂಬಂಧವಾಗಿ ಹೀಗೆ ಪ್ರಶ್ನೆಮಾಡಿದರು, " ಕಾಯವೇ ಪೀಠ, ಪ್ರಾಣವೇ ಲಿಂಗವಾಗಿರಲು ಬೇರೆ ಮತ್ತೆ ಕುರುಹೇಕಯ್ಯಾ? ಕುರುಹುವಿಡಿದು ಕೂಡುವ ನಿರವಯಲುಂಟೇ ? ಜಗದೊಳಗೆ ನಷ್ಟವ ಕೈಯಲ್ಲಿ ಹಿಡಿದು ದೃಷ್ಟವ ಕಂಡಿಹೆನೆಂದರೆ ಕಪಿಲಸಿದ್ಧಮಲ್ಲಿನಾಥಯ್ಯನು ಸಾಧ್ಯಮಪ್ಪ ಪರಿಯೆಂತು ಹೇಳಾ ಪ್ರಭುವೇ ? " ಅದಕ್ಕೆ ಪ್ರಭುವು " ಇಷ್ಟ ಪ್ರಾಣಲಿಂಗದ ಭೇದವನಾರು ಬಲ್ಲರು ಹೇಳಾ. ಅದರ ಸೂಕ್ಷ್ಮ ರಹಸ್ಯವನ್ನು ಶ್ರೀ ಸಂಗನ ಬಸವಣ ಬಲ್ಲ. ಆತನಿರ್ದೆಡೆಗೆ ನಿನ್ನನ್ನು ಕರೆದೊಯ್ಯುವೆನು ನಡೆ " ಹೀಗೆಂದು ನಿರೂಪಿಸಿದರು.

ಬಸವರಾಜ ದೇವರ ದರ್ಶನವಾಗಬೇಕೆಂದು ಸಿದ್ಧರಾಮಯ್ಯದೇವರು ಪರಮ ಹರ್ಷಿತರಾಗಿ ನುಡಿದುದೇನಂದರೆ " ಅಯ್ಯಾ, ಕರಸ್ಥಲದ ಘನ ನಿಮ್ಮಲ್ಲಿರಲಿ; ಪರಸ್ಥಲದ ಘನ ನಿಮ್ಮಲ್ಲಿರಲಿ. ನಾನು ಕರಸ್ಥಲವನೊಲ್ಲೆ; ಪರಸ್ಥಲವನೊಲ್ಲೆ. ಕಪಿಲಸಿದ್ಧಮಲ್ಲಿಕಾರ್ಜುನಾ ಸಂಗನ ಬಸವಣ್ಣನ ಶ್ರೀಪಾದವ ತೋರಿ ಎನನುಳುಹಿಕೊಳ್ಳಾ ದೇವರ ದೇವಾ." ಪ್ರಭುದೇವರಾದರೂ ಬಸವಣ್ಣನ ಮಹಿಮಾತಿಶಯವನ್ನು ಮನವಣಿಯೆ ಕೊಂಡಾಡಿದರು. " ಅಂಗದಲ್ಲಿ ಆಚಾರ, ಆಚಾರದಲ್ಲಿ ಪ್ರಾಣ, ಪ್ರಾಣದಲ್ಲಿ ಲಿಂಗ, ಲಿಂಗದಲ್ಲಿ ಜಂಗಮ, ಜಂಗಮದಲ್ಲಿ ಪ್ರಸಾದ, ಪ್ರಸಾದದಲ್ಲಿ ನಿತ್ಯ, ನಿತ್ಯದಲ್ಲಿ ದಾಸೋಹವನ್ನು ಸ್ವಾಯತ ಮಾಡಿಟ್ಟುಕೊಂಡಿಪ್ಪ ಸಂಗನ ಬಸವಣ್ಣನ ಶ್ರೀ ಪಾದಕ್ಕೆ ಶರಣೆಂದು ಧನ್ಯರಾಗೋಣ ನಡೆ. ಸಿದ್ಧರಾಮಯ್ಯ. " ಎಂದು ಹೇಳಿ ಸಿದ್ಧರಾಮೇಶನನ್ನು ಕೂಡಿಕೊಂಡು ಕಲ್ಯಾಣಕ್ಕೆ ತೆರಳಿದರು.

ಈ ಸಂಪಾದನೆಯಲ್ಲಿ ಪ್ರಭು ಸಿದ್ಧರಾಮೇಶ್ವರ ಸಂವಾದವು ಬಹು ದಿವ್ಯಾರ್ಥ ಸೂಚಕವಾಗಿ ಪ್ರತಿಪಾದಿಸಲ್ಪಟ್ಟಿದೆ. ಪರಮೇಶನ ಚಿತ್ಕಳೆಯೇ ಪ್ರಭುದೇವರು ಆ ಪರವಸ್ತುವಿನ ಸಾತ್ವಿಕ ಕಳೆಯೇ ಸಿದ್ಧರಾಮ ಶಿವಯೋಗಿಗಳು. ಈ ಉಭಯ ಮಹಾಜ್ಞಾನಿಗಳ ಸಂವಾದದ ತೊಡಕ ಬಿಡಿಸಲು ನಾವೆಷ್ಟರವರು ? ಪ್ರಭುದೇವರು ಸಿದ್ಧರಾಮೇಶನ ಗುಡಿ ಕಟ್ಟಿಸುವ ಕಾರ್ಯವನ್ನು ನಿಲ್ಲಿಸಿ ಆತನನ್ನು ಸಿಟ್ಟಿಗೆಬ್ಬಿಸಿ ಆತನ ಅನುತಾಪವನ್ನು ಶಾಂತಿ ಮಾಡಿ ಅವನ ಮನಸ್ಸನ್ನು ಪರೀಕ್ಷಿಸಬೇಕೆಂದು ಬಹು ಪರಿಯಾಗಿ ಕಾಡಿದರು. ಯಾವಾಗ ಸಿದ್ಧರಾಮ ಶಿವಯೋಗಿಗಳು ಅತ್ಯಂತ ವಿನೀತ ಭಾವ

ದಿಂದ ಪ್ರಭುವಿನಡಿಗೆರಗಿ ಕಂಬನಿಗರೆದರೋ ಆಗ ಪ್ರಭುದೇವರು ಅವರನ್ನೆಬ್ಬಿಸಿ ಮುದ್ದಾಡಿ ಹಸುಗೂಸಿನೋಪಾದಿಯಲ್ಲಿ ಸಂತಸಗೊಳಿಸಿದರು. ಅವರ ಯೋಗಬಲವನ್ನು ಪ್ರಶಂಸಿಸಿದರು. ಯೋಗ ಕರ್ಮ ಮಾರ್ಗಗಳನ್ನು ನಿರಾಕರಿಸಿ ಜ್ಞಾನ ಮಾರ್ಗದ ತಿರುಳನ್ನು ತೋರಿಸಿ ಕೊಟ್ಟರು. ಇಷ್ಟಪ್ರಾಣ ಭಾವಲಿಂಗಗಳ ರಹಸ್ಯವನ್ನು ವ್ಯಕ್ತಪಡಿಸಿದರು. ಸಿದ್ಧರಾಮೇಶನಿಗೆ ಇಷ್ಟಲಿಂಗದ ರಹಸ್ಯವನ್ನು ತಿಳಿಸಿ ಅವರಿಗೆ ಇಷ್ಟಲಿಂಗ ಧಾರಣ ಮಾಡಿಸಬೇಕೆಂಬ ಸದುದ್ದೇಶದಿಂದ ಕಲ್ಯಾಣಕ್ಕೆ ಬಸವನ ಸನ್ನಿಧಿಗೆ ತೆರಳಿದರು. ಪ್ರಸಂಗಾನುಸಾರವಾಗಿ ನಡುವಳಿಕೆಯಲ್ಲಿಯೂ ಕೂಡ ದಿವ್ಯ ತತ್ವಗಳ ಆಚರಣೆಯನ್ನು ನಮ್ಮ ಶಿವಶರಣರು ಹೇಗೆ ಆಚರಿಸುತ್ತಿದ್ದರೆಂಬುವದಕ್ಕೆ ಈ ಸಂಪಾದನೆಯು ಸಾಕ್ಷೀಭೂತವಾಗಿದೆ.

---

# ಬಸವಾದಿ ಪ್ರಮಥರಿಂದೀಚಿನ ಗ್ರಂಥಕಾರರ ವಿಷಯವ್ಯತ್ಯಾಸಗಳು.

ಲೇಖಕ:— ಜೀರಗೆ ಬಸವಲಿಂಗಪ್ಪ ಅರಳೇಪೇಟೆ ಬೆಂಗಳೂರುಸಿಟಿ.

ಬಸವಾದಿ ಪ್ರಮಥರ ಧೈರ್ಯವೂ, ಬಸವಾದಿ ಪ್ರಮಥರ ಅಭೇದ ಬುದ್ಧಿಯೂ, ಬಸವಾದಿ ಪ್ರಮಥರ ದೀನ ಜನಾಂತಃಕರಣವೂ ಈಚಿನವರಿಗೆ ಕಮ್ಮಿಯಾಗಿ ಬಾಹ್ಯ ಶುಷ್ಕ ಗೌರವಗಳಿಗೆ ಕಟ್ಟುಬಿದ್ದು ತಮ್ಮ ಕೃತಿಗಳಲ್ಲಿ ಬಸವಾದಿಗಳ ರೀತಿಗೆ ವ್ಯತಿರಿಕ್ತವಾಗಿ ಸಣ್ಣ ಸಣ್ಣ ಬದಲಾವಣೆಗಳನ್ನು ಮಾಡುತ್ತ ಬಂದಿರುತ್ತಾರೆ.

ಶೂನ್ಯಸಂಪಾದನೆ ಮೊದಲಾದ ಗ್ರಂಥಗಳಲ್ಲಿ ಅಂದರೆ ವಚನಗಳಲ್ಲಿ ಬಸವೇಶನು ಚನ್ನಬಸವಣ್ಣನಿಗೆ ಲಿಂಗಕೊಟ್ಟನೆಂದು ಬರೆದಿರುತ್ತದೆ. ಶೂನ್ಯಸಂಪಾದನೆಯಲ್ಲಿ ಚನ್ನಬಸವಣ್ಣನು ಪ್ರಭುದೇವನಲ್ಲಿ ಮಾತನಾಡುವಾಗ್ಯೆ ಹೀಗೆ ಹೇಳುತ್ತಾನೆ:—

> “ಅನಿಮಿಷಂಗೆ ಲಿಂಗವ ಕೊಟ್ಟಾತ ಬಸವಣ್ಣ ಆ ಲಿಂಗ ನಿನಗೆ ಸೇರಿತ್ತಾಗಿ ಬಸವಣ್ಣನ ಸಾಂಪ್ರದಾಯದ ಕಂದ ನೋಡಾ ನೀನು. ಭಕ್ತಿದಳದುಳದಿಂದೆ ಚನ್ನಸಂಗಮನಾಥ

ನೆಂಬ ಲಿಂಗವನವಗ್ರಹಿಸಿಕೊಂಡೆನಾಗಿ ಬಸವಣ್ಣನ ಸಾಂಪ್ರದಾಯದ ಕಂದ ನೋಡಾ ನಾನು. ಇಂತೀ ಇಬ್ಬರಿಗೆಯು ಒಂದೇ ಕುಳಸ್ಥಳವಾದ ಕಾರಣ ಕೂಡಲಚನ್ನಸಂಗಯ್ಯನಲ್ಲಿ ಬಸವಣ್ಣನ ಮಹಾಮನೆಯ ಪ್ರಸಾದ ಇಬ್ಬರಿಗೆಯು ಒಂದೇ ಕಾಣಾ ಪ್ರಭುವೆ."

ನಿರಂಜನ ವಂಶರತ್ನಾಕರದಲ್ಲಿ— "ಬಸವರಾಜೇಂದ್ರರಿಂ ಶಿವದೀಕ್ಷೆಯಂ ಪಡೆದು, ಅಲ್ಲಮ ಪ್ರಭುವಿನಿಂ ಜ್ಞಾನೋಪದೇಶವಂ ಪತ್ತುಕೊಂಡು"— ಎಂದು ಬರೆದಿರುತ್ತದೆ. ವಿರೂಪಾಕ್ಷ ಪಂಡಿತನ ಚನ್ನಬಸವಪುರಾಣದಲ್ಲಿ ಚನ್ನಬಸವಣ್ಣನು ಶಿಶುವಾಗಿದ್ದಾಗ್ಗೆ, ಶಿವನು ಬಂದು ಲಿಂಗಧಾರಣೆ ಮಾಡಿದನೆಂದು ಬರೆದಿರುತ್ತದೆ. ಮುಂದೆ ವಯಸ್ಸಾದ ಮೇಲೆ ಬಸವೇಶನು ಚನ್ನಬಸವಣ್ಣನ ಮನೆಗೆ ಬರಲು, ಚನ್ನಬಸವನು ತನ್ನ ಸೆಜ್ಜೆಯಲ್ಲಿದ್ದ ಲಿಂಗವನ್ನು ಬಸವನಿಗೆ ಕೊಡಲು, ಬಸವನು ಆ ಲಿಂಗವನ್ನು ಚನ್ನಬಸವನ ಹಸ್ತಕ್ಕೆ ಕೊಟ್ಟಂತೆ ಬರೆದಿರುತ್ತದೆ. ಇದರಲ್ಲಿ ಚನ್ನಬಸವಣ್ಣನ ವಚನವು ಆದಿಗ್ರಂಥವು. ನಿರಂಜನ ವಂಶರತ್ನಾಕರವೂ ಚನ್ನಬಸವಪುರಾಣವೂ ಈಚಿನ ಗ್ರಂಥಗಳಾಗಿರುತ್ತವೆ. ಮೊದಲಿನ ಗ್ರಂಥಕ್ಕೂ ಈಚಿನ ಗ್ರಂಥಗಳಿಗೂ ಮೇಲೆ ಕಂಡ ರೀತಿ ವ್ಯತ್ಯಾಸಗಳಾಗಿರುತ್ತವೆ. ಭಕ್ತನಾದ ಬಸವಣ್ಣನು ಲಿಂಗಕೊಟ್ಟನೆಂದು ಹೇಳುವದು ಮನಸ್ಸಿಗೆ ಸರಿಬೀಳದೆ ಹೀಗೆ ಬರೆದಿರುತ್ತದೋ ಏನೋ ಗೊತ್ತಾಗುವದಿಲ್ಲ.

ಆದಿ ಗ್ರಂಥವಾದ ರಾಘವಾಂಕನ ಸಿದ್ಧರಾಮ ಪುರಾಣದಲ್ಲಿ ಸಿದ್ಧರಾಮೇಶ್ವರದೇವರು ಕುಡುವಕ್ಕಲ ಕುಲದ ಮೊರಡಿಯ ಮುದ್ದುಗೌಡ ಸುಗ್ಗಾಯಿಗಳ ಹೊಟ್ಟೆಯಲ್ಲಿ ಹುಟ್ಟಿದರೆಂದು ಬರೆದಿದೆ. ಈ ಸಿದ್ಧರಾಮೇಶ್ವರ ದೇವರು ಲಿಂಗಧಾರಣೆ ಹೊಂದುವದಕ್ಕೆ ಮೊದಲು ಶೈವ ಗುರುವಾಗಿ ಮಠಾಧಿಪತಿಯಾಗಿದ್ದನು. ಇದು ಸಿದ್ಧರಾಮ ಪುರಾಣದಲ್ಲೇ ಇದೆ. ಆ ಮೇಲೆ ಕಲ್ಯಾಣದ ಶೂನ್ಯಸಿಂಹಾಸನಕ್ಕೆ ಚನ್ನಬಸವಣ್ಣನ ನಂತರ ಮೂರನೇ ಪಟ್ಟದವನಾದನು. ಇದು ನಿರಂಜನ ವಂಶರತ್ನಾಕರದಲ್ಲಿದೆ. ಮೇಲೆ ಹೇಳಿದ ಆದಿಗ್ರಂಥವಾದ ಸಿದ್ಧರಾಮ ಪುರಾಣದಲ್ಲಿ ಸಿದ್ಧರಾಮೇಶ್ವರನು ಮೊರಡಿಯ ಮುದ್ದುಗೌಡ ಸುಗ್ಗಾಯಿಗಳ ಹೊಟ್ಟೆಯಲ್ಲಿ ಹುಟ್ಟಿದನೆಂದು ಬರೆದಿದ್ದರೆ, ಈಚಿನ ನಿರಂಜನ ವಂಶರತ್ನಾಕರದಲ್ಲಿ ಸಿದ್ಧರಾ

ಮನು ಮೊರಡಿಯ ಮುದ್ದುಗೌಡ ಸುಗ್ಗಾಯಿಗಳಿಗೆ ಅಯೋನಿಜನಾಗಿ ಹುಟ್ಟಿದನೆಂದು ಬರೆದಿರುತ್ತದೆ. ಇದು ಕುಡುವಕ್ಕಲ ಕುಲದವರ ಹೊಟ್ಟೆಯಲ್ಲಿ ಹುಟ್ಟಿದನೆಂದು ಬರೆವರೆ ಸರಿಯಾಗಿರುವದಿಲ್ಲವೆಂದು ಅಯೋನಿಜನಾಗಿ ಹುಟ್ಟಿದನೆಂದು ಬರೆದಿರುತ್ತದೆ. ಇದು ಈಚಿನವರ ಶುಷ್ಕಗೌರವಾಭಿಮಾನವನ್ನು ತೋರಿಸುತ್ತದೆ. ಬಸವಾದಿಗಳ ಅಭೇದ ಬುದ್ಧಿಯು ಈಚಿನವರಿಗೆ ಕಮ್ಮಿಯಾಗುತ್ತಾ ಬಂದಿರುವದೆಂಬುದನ್ನು ತೋರಿಸುತ್ತದೆ.

ಪಾಪಯಾಮಾತ್ಯ ಮೊದಲಾದವರು ಬರೆದ ಆದಿಗ್ರಂಥಗಳಲ್ಲಿ ಡೋಹರ ಕಕ್ಕಯ್ಯನವರ ಪ್ರಸಾದದಿಂದ ಚನ್ನಬಸವಣ್ಣನು ಅಕ್ಕನಾಗಮ್ಮನಿಗೆ ಹುಟ್ಟಿದನೆಂದು ಬರೆದಿದೆ. ಈಚಿನ ನಿರಂಜನ ವಂಶರತ್ನಾಕರದಲ್ಲಿ ಕಕ್ಕಯ್ಯನ ಶೇಷರೂಪಿನಿಂದ ಚನ್ನಬಸವಣ್ಣನು ಅಯೋನಿಜನಾಗಿ ವಿಭೂತಿ ರುದ್ರಾಕ್ಷಿ ಇಷ್ಟಲಿಂಗಧಾರಕನಾಗಿ ಹುಟ್ಟಿದನೆಂದು ಬರೆದಿರುತ್ತದೆ. ಅದಕ್ಕಿಂತಲೂ ಈಚಿನ ವಿರೂಪಾಕ್ಷ ಪಂಡಿತನು ಬರೆದ ಚನ್ನಬಸವಪುರಾಣದಲ್ಲಿ ಶಿವನು ಜಂಗಮರೂಪದಲ್ಲಿ ಬಂದು ಅಕ್ಕನಾಗಮ್ಮನಿಗೆ ಪ್ರಸಾದವನ್ನು ಕೊಟ್ಟಿದ್ದರಿಂದ ಚನ್ನಬಸವಣ್ಣನು ಹುಟ್ಟಿದನೆಂದು ಬರೆದಿರುತ್ತದೆ. ಇದರೊಳಗೆ ಮೊದಲ ಗ್ರಂಥದಲ್ಲಿ ಡೋಹರ ಕಕ್ಕಯ್ಯನ ಪ್ರಸಾದದಿಂದ ಚನ್ನಬಸವಣ್ಣನು ಹುಟ್ಟಿದನೆಂದು ಬರೆದಿದ್ದರೆ, ನಿರಂಜನ ವಂಶರತ್ನಾಕರದಲ್ಲಿ ಕಕ್ಕಯ್ಯನು ಡೋಹರ ಕುಲದವನಾದದರಿಂದ ಅದು ಚನ್ನಾಗಿಲ್ಲವೆಂದು ಅಯೋನಿಜನಾಗಿ ಹುಟ್ಟಿದನೆಂದು ಬರೆದುಬಿಟ್ಟಿದೆ. ಇನ್ನೂ ಈಚಿನ ಚನ್ನಬಸವಪುರಾಣದಲ್ಲಿ ಡೋಹರಕಕ್ಕಯ್ಯನ ಮಾತನ್ನೇ ತೆಗೆದುಹಾಕಿ ಶಿವನು ಜಂಗಮರೂಪದಲ್ಲಿ ಬಂದು ಪ್ರಸಾದವನ್ನು ಕೊಟ್ಟಿದ್ದರಿಂದ ಚನ್ನಬಸವಣ್ಣನು ಹುಟ್ಟಿದನೆಂದು ಬರೆದುಬಿಟ್ಟಿದೆ. ಇನ್ನೊಂದು ಈಚಿನ ಗ್ರಂಥವಾದ ಸಿಂಗಿರಾಜ ಪುರಾಣದಲ್ಲಿ ಅಕ್ಕನಾಗಮ್ಮನಿಗೆ ಶಿವದೇವನೆಂಬ ಗಂಡನಿದ್ದಂತೆ ಬರೆದಿರುವದಾಗಿ ತಿಳಿದುಬರುತ್ತದೆ. ಇದರಿಂದಲೂ ಈಚಿನವರಲ್ಲಿ ಬಸವಾದಿಗಳ ವಿಶಾಲ ಹೃದಯವೂ, ಅಪ್ರತಿಮ ಧೈರ್ಯವೂ ಮಸುಳಿದುದಾಗಿ ಶುಷ್ಕ ಬಾಹ್ಯಾಡಂಬರಕ್ಕೆ ಚಿತ್ತಗಳು ಕಟ್ಟುಬಿದ್ದಂತೆ ಸ್ಪಷ್ಟವಾಗುತ್ತದೆ.

ಮೊದಲಿನಲ್ಲಿ ಹರೀಶ್ವರನು ತನ್ನ ಪ್ರಭುದೇವರ ರಗಳೆಯಲ್ಲಿ ಪ್ರಭುವು ತನ್ನ ಯೌವನದಲ್ಲಿ ಕಾಮಲತೆ ಎಂಬವಳಲ್ಲಿ ಮೋಹಪರವಶನಾಗಿ ಬಹು ಕಾಲ ಅವಳಲ್ಲಿ ಸುಖದಲ್ಲಿದ್ದು ಅವಳು ಜ್ವರದಿಂದ ಸತ್ತುಹೋಗಲು,

ಕೆಲ ದಿನ ಅತ್ಯಂತ ಚಿಂತೆಗೊಳಗಾಗಿದ್ದು ಆಮೇಲೆ ವೈರಾಗ್ಯ ತಾಳಿ ಅನಿಮಿಷಯ್ಯನಿಂದ ಲಿಂಗವನ್ನು ಪಡೆದು ಕಲ್ಯಾಣಕ್ಕೆ ಬಂದ ಸಂಗತಿ ಮೊದಲಾದುದನ್ನು ಬರೆದಿರುತ್ತಾನೆ. ಈಚಿನ ಚಾಮರಸನು ಪ್ರಭುಲಿಂಗ ಲೀಲೆಯಲ್ಲಿ ಅಲ್ಲಮಪ್ರಭುವು ಮಾಯೆ ಎಂಬವಳನ್ನು ಸಂಧಿಸಿದಾಗ ಅವಳು ಏನು ಮಾಡಿದಾಗ್ಯು ಅವಳ ಮೋಹಪಾಶಕ್ಕೆ ಒಳಗಾಗದೆ ಜಯಿಸಿದನೆಂತಲೂ, ಆಮೇಲೆ ವಿರಕ್ತೆಯಾದ ಮಹಾದೇವಿಯಕ್ಕನಿಗೆ ವೈರಾಗ್ಯದಲ್ಲಿ ಸೋತನೆಂತಲೂ ಮುಂತಾಗಿ ಬರೆದಿರುತ್ತಾನೆ. ಇದರಲ್ಲಿ ಮೊದಲ ಕವಿಯು ಲೋಕದಲ್ಲಿ ನೈಜವಾಗಿರತಕ್ಕ ಸಂಗತಿಯನ್ನು ಬರೆದು ಆಮೇಲೆ ಅಲ್ಲಮನಿಗೆ ವೈರಾಗ್ಯ ಹುಟ್ಟಿತೆಂದು ಬರೆದಿದ್ದರೆ, ಈಚೀನ ಕವಿಯು ಹುಟ್ಟುತ್ತಲೇ ಅಲ್ಲಮನಿಗೆ ವೈರಾಗ್ಯವಿದ್ದಂತೆ ಬರೆದಿರುತ್ತಾನೆ. ಇದರಲ್ಲಿ ಗುರುಸ್ಥಾನಕ್ಕೆ ಬರುವನನಿಗೆ ಸ್ತ್ರೀಯಲ್ಲಿ ವ್ಯಾಮೋಹವುಂಟಾಯಿತೆಂದು ಬರೆದರೆ ಚನ್ನಾಗಿಲ್ಲವೆಂದು, ಅಲ್ಲಮನಿಗೆ ಮೊದಲೇ ವೈರಾ[illegible] ಯುಂಟಾಗಿ ಮಾಯೆಯನ್ನು ಸೋಲಿಸಿದಂತೆ ಬರೆದುದಾಗಿರುತ್ತದೆ. ಈ ರೀತಿ ಮೊದಲವರು ಕೂಡಿದ ಮಟ್ಟಿಗೂ ಸ್ವಾಭಾವಿಕವಾದ ಸಂಗತಿಯನ್ನು ಇದ್ದಿದ್ದಹಾಗೆ ವಿಶಾಲಮತಿಯಿಂದ ಬರೆದಿದ್ದರೆ, ಈಚಿನವರು ಶುಷ್ಕ ಗೌರವಾಭಿಮಾನಗಳ ಮತ್ತು ಹಿಡಿದು, ಬಸವಾದಿಗಳ ಸರಳತೆಯನ್ನೂ, ದೀನಜನಾಂತಃಕರಣವನ್ನೂ ಕಳೆದುಕೊಂಡು ವ್ಯತ್ಯಾಸ ಮಾಡಿ ಬರೆಯುತ್ತ ಬಂದಿರುತ್ತಾರೆ. ಇದರಿಂದ ವೀರಶೈವದ ನಿಜಚಾರಿತ್ರಕ್ಕೆ ಬಹುಮುಖದಿಂದ ಭಂಗಪ್ರಾಪ್ತಿಯಾಗಿ ಹೋಗಿಬಿಟ್ಟಿರುತ್ತದೆ. ಮುಂದೆ ವೀರಶೈವರ ಚರಿತ್ರೆಯನ್ನು ಬರೆಯುವವರು ಈ ಎಲ್ಲ ವಿಚಾರಗಳನ್ನೂ ಚೆನ್ನಾಗಿ ತೂಕ ಮಾಡಿ ಚರಿತ್ರೆಯನ್ನು ಕಟ್ಟಬೇಕಾಗಿರುತ್ತದೆ. ಈಗ ನಮ್ಮ ಕಾಲದಲ್ಲಂತೂ ಒಂದೊಂದು ಅಭಿಮಾನಕ್ಕಾಗಿ ಪೂರ್ವದ ಚಾರಿತ್ರ ವಿಚಾರಗಳಿಗೆ ವ್ಯತಿರಿಕ್ತವಾಗಿ ಗ್ರಂಥ ಕಲ್ಪನೆಗಳು ಹೇರಳವಾಗಿ ಆಗುತ್ತಲಿವೆ. ಎಂದು ಬಲವಾಗಿ ತಿಳಿದುಬರುತ್ತದೆ.

ವಿದ್ಯಾವಂತರು ಇವುಗಳೆಲ್ಲವನ್ನು ವಿಮರ್ಶೆ ಮಾಡಿ ಚರ್ಚೆಗೆ ತರಬೇಕು. ಸತ್ಯವನ್ನು ಕಂಡುಹಿಡಿಯುವದಕ್ಕೆ ಯತ್ನಮಾಡಬೇಕು.

---

# ಬೀಳಗಿ ಅರಸರು.

(ಲೇಖಕ:— ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ.)

[ಈ ಲೇಖವನ್ನು ಬರೆಯುವಾಗ್ಗೆ ತೆಗೆದುಕೊಂಡ ಆಧಾರ ಗ್ರಂಥಗಳು ಯಾವವೆಂದರೆ:— ಬೀಳಗಿ ಅರಸರ ವಂಶಾವಳಿ ಎಂಬ ಕಾವ್ಯ, ಕೆಳದಿನೃಪವಿಜಯ, ಫಾದರಹಿರಾಸ ಇವರ ಅರವೀಡು ಡಾಯನ್ಯಾಸ್ಟಿ, ಸೆವೆಲರ ಫರಗಾಟನ್ ಎಂಪಾಯರ, ಕಾನಡಾ ಗ್ಯಾಜೀಟಿಯರ, ಕವಿಚರಿತೆ, ಮೈಸೂರು ಗೆಜೀಟಿಯರ, ಶಿವಾನುಭವ ಪತ್ರಿಕೆಯಲ್ಲಿ ಹಿಂದೆ ಶಿ. ಮು. ಶಿವಮೂರ್ತಿ ಶಾಸ್ತ್ರಿಗಳು ಹುಲಕುಂಟಿ ಮಠ, ಕೀರ್ತನ ತುಮಕೂರ ಇವರು ಬರೆದ ಲೇಖಗಳು, ಮಿ॰ ಬಸವಂತಪ್ಪ ಕರ್ಜಗಿ ಬಿ. ಎ. ಕೇಸರಿ ರಿಟಾಯರ್ಡ ಮಾಮಲೇದಾರ ಇವರು ಸಂಗ್ರಹಿಸಿದ ತಾಮ್ರ ಶಾಸನಗಳು ಮತ್ತು ಶಿಲಾ ಶಾಸನದ ಅವತರಣಗಳು.]

ಕರ್ನಾಟಕದಲ್ಲಿ ಸಹ್ಯಾದ್ರಿಯ ಬೆಟ್ಟದ ಪ್ರದೇಶಗಳಲ್ಲಿ ಬಹು ಪುರಾತನ ಕಾಲದಿಂದಲೂ ಕೆಲವು ಮಹತ್ವದ ರಾಜ್ಯಗಳು ತಲೆದೋರುತ್ತ ಬಂದಿರುತ್ತವೆ. ಕರ್ನಾಟಕದ ಇತಿಹಾಸದಲ್ಲಿ ಅತ್ಯಂತ ಪ್ರಸಿದ್ಧಿ ಹೊಂದಿದ ಕದಂಬ ರಾಜರು ಕ್ರಿಸ್ತಿಶಕದ ಆರಂಭದಲ್ಲಿ ಇಲ್ಲಿ ರಾಜ್ಯವಾಳಿದರು. ಇವರ ಮೊದಲನೆಯ ರಾಜಧಾನಿಯು ಬನವಾಸಿ ಪಟ್ಟಣವಿದ್ದು ಮುಂದೆ ಇವರಲ್ಲಿ ಕೆಲವು ಶಾಖೆಗಳಾಗಿ ಅವು ಗೋವೆ, ಹಲಸಿಗೆ, ಹಾನಗಲ್ಲು ಈ ಸ್ಥಳಗಳಲ್ಲಿ ೧೨ ನೇ ಶತಮಾನದ ವರೆಗೂ ರಾಜ್ಯವಾಳಿದವು. ಮುಂದೆ ಈ ಭಾಗವೆಲ್ಲವೂ ವಿಜಯನಗರದ ಅರಸುಗಳ ಆಧೀನಕ್ಕೆ ಒಳಪಟ್ಟು ಅಲ್ಲಿ ಅವರ ಮಾಂಡಲಿಕ ರಾಜರು ಆಳಹತ್ತಿದರು. ಈ ಮಾಂಡಲಿಕರೆಂದರೆ ಬೀಳಗಿ ಸ್ವಾದಿ ಇಕ್ಕೇರಿ ಇಲ್ಲಿಯ ರಾಜರೇ ಆಗಿದ್ದರು. ಇಕ್ಕೇರಿಯ ರಾಜಮನೆತನಕ್ಕೆ ಸಂಬಂಧಿಸಿದ ಒಬ್ಬ ರಾಜಪುತ್ರನು ಮುಂದೆ ಕೊಡಗು ಪ್ರಾಂತವನ್ನು ಪ್ರವೇಶಿಸಿ ಅಲ್ಲಿ ರಾಜ್ಯ ಸ್ಥಾಪನೆ ಮಾಡಿದನು. ಈ ಎಲ್ಲ ರಾಜಮನೆತನದವರು ವಿಜಯನಗರವು ನಾಶವಾದ ಬಳಿಕ ಸ್ವತಂತ್ರರಾಗಿ ತಮ್ಮ ತಮ್ಮ ಸೀಮೆಗಳನ್ನು ಆಳಹತ್ತಿದರು. ಮುಂದೆ ಮೈಸೂರು ಪ್ರಾಂತವು ಹೈದರ ಅಲ್ಲಿ ಮತ್ತು ಟೀಪುಸುಲ್ತಾನ ಇವರ ಅಧೀನಕ್ಕೆ ಬರಲು ಈ ಉಭಯತರು ಈ ಬೆಟ್ಟದ ಪ್ರಾಂತಗಳಲ್ಲಿ ರಾಜ್ಯ

ವಾಳುತ್ತಿದ್ದ ಈ ರಾಜರ ಮೇಲೆ ದಾಳಿ ಇಟ್ಟು ಅವರ ರಾಜ್ಯಗಳನ್ನು ಕಸಿದುಕೊಂಡರು. ಮುಂದೆ ಟೀಪುವಿನ ಮರಣದ ನಂತರ ಈ ರಾಜ್ಯಗಳೆಲ್ಲವೂ ಬ್ರಿಟಿಷರ ಕೈವಶವಾದವು. ಈ ರಾಜ ಮನೆತನಗಳಲ್ಲಿ ಕೆಲವು ಮನೆತನಗಳ ವಂಶಜರು ಈಗಲೂ ಅಸ್ತಿತ್ವದಲ್ಲಿ ಇದ್ದದ್ದು ಕಂಡುಬರುತ್ತದೆ. ಇವರಲ್ಲಿ ಬೀಳಗಿಯ ವಂಶಜರು ಬೀಳಗಿಯಲ್ಲಿ ಈಗಲೂ ವಾಸಿಸುತ್ತಿರುವರು.

ಉತ್ತರಕ್ಕೆ ಗೋವೆಯಿಂದ ದಕ್ಷಿಣಕ್ಕೆ ಮಲಯಾಳ ಸೀಮೆಯ ವರೆಗೆ ಇರುವ ಪ್ರದೇಶವು ಕರ್ನಾಟಕದ ಇತಿಹಾಸದಲ್ಲಿ ಅತ್ಯಂತ ಸ್ಮರಣೀಯವಾಗಿರುತ್ತದೆ. ಇದು ಜೈನ, ಬೌದ್ಧ, ಶೈವ, ವೀರಶೈವ, ವೈಷ್ಣವ, ಪಾಶುಪತ, ಕಾಳಾಮುಖ ಮೊದಲಾದ ಸಂಸ್ಕೃತಿಗಳ ಆವಾಸ ಭೂಮಿಯಾಗಿತ್ತು. ಈ ಪ್ರದೇಶದಲ್ಲಿಯೇ ಉಡಿಪಿ, ಗೋಕರ್ಣ, ಬಾಳೆಯಹಳ್ಳಿ, ಬನವಸೆ, ಬಳ್ಳಿಗಾವಿ, ಮೂಡಬಿದರಿ, ಉಳವಿ, ಸ್ವಾದಿ, ಮೊದಲಾದ ಅತ್ಯಂತ ಮಹತ್ವದ ಧಾರ್ಮಿಕ ಸ್ಥಾನಗಳು ಇರುತ್ತವೆ. ಅಲ್ಲದೆ ಈ ಪ್ರಾಂತವು ಸೃಷ್ಟಿದೇವತೆಯ ಅತ್ಯಂತ ರಮಣೀಯ ಬೀಡಾಗಿರುತ್ತದೆ. ಇಲ್ಲಿಯ ಸೃಷ್ಟಿಸೌಂದರ್ಯವು ಮತ್ತು ವನಶೋಭೆಯು ಹಿಂದುಸ್ತಾನದ ಬೇರೆ ಭಾಗಗಳಲ್ಲಿ ಎಲ್ಲಿಯೂ ಸಿಕ್ಕಲಿಕ್ಕಿಲ್ಲ. ಆದ್ದರಿಂದಲೇ ಈ ಪ್ರದೇಶದಲ್ಲಿ ಧಾರ್ಮಿಕ ಸ್ಥಾನಗಳೂ, ಪುಣ್ಯ ಭೂಮಿಗಳೂ ಉಂಟಾಗಿವೆಂದು ಹೇಳಬಹುದು. ಅದರಂತೆಯೇ ಇಲ್ಲಿ ಪುರಾತನ ಕಾಲದಲ್ಲಿ ವ್ಯಾಪಾರದ ದೊಡ್ಡ ದೊಡ್ಡ ಪಟ್ಟಣಗಳು ಉಂಟಾಗಿದ್ದವು. ಇವುಗಳಲ್ಲಿ ಕಾರವಾರ, ಕುಮಟಾ, ತದಡಿ, ಹೊನ್ನಾವರ, ಭಟಕಳ ಇವೆಲ್ಲವು ಮಹತ್ವದ ಬಂದರಗಳಾಗಿದ್ದವು. ಆದ್ದರಿಂದ ಈ ಭಾಗದಲ್ಲಿ ಆಳುತ್ತಿದ್ದ ರಾಜರೂ, ಪ್ರಜೆಗಳೂ ಅತ್ಯಂತ ಶ್ರೀಮಂತರಾಗಿದ್ದರು. ಸ್ವಾದಿ, ಬೀಳಗಿ, ಇಕ್ಕೇರಿ, ಗೆರಸಪ್ಪೆಯ ರಾಜ್ಯಗಳು ವಿಸ್ತಾರದಲ್ಲಿ ಸಣ್ಣವಿದ್ದರೂ ಅಲ್ಲಿಯ ಪ್ರಜೆಗಳು ಅತ್ಯಂತ ಸುಸ್ಥಿತಿಯಲ್ಲಿದ್ದದ್ದು ಕಂಡುಬರುತ್ತದೆ.

ಈ ಭಾಗದಲ್ಲಿ ಇದ್ದ ರಾಜ್ಯಗಳಲ್ಲಿ ಬೀಳಗಿಯ ರಾಜ್ಯವು ಬಹಳ ಚಿಕ್ಕದಾಗಿತ್ತು. ಅದರ ಉತ್ತರಕ್ಕೆ ಬಲಾಢ್ಯವಾದ ಸ್ವಾದಿಯ ರಾಜ್ಯವೂ ದಕ್ಷಿಣಕ್ಕೆ ಇಕ್ಕೇರಿಯ ರಾಜ್ಯವೂ ಇದ್ದದರಿಂದ ಅದು ಹೆಚ್ಚಿಗೆ ವಿಸ್ತಾರ ಹೊಂದಲು ಶಕ್ಯವಿರಲಿಲ್ಲ. ಈಗಿನ ಸಿದ್ದಾಪೂರ ತಾಲೂಕು ಬೀಳಗಿ ರಾಜ್ಯದ ಮುಖ್ಯ ಕೇಂದ್ರಸ್ಥಳವಾಗಿತ್ತು. ಈ ತಾಲೂಕು ಈ ಭಾಗದಲ್ಲಿ

ಅತ್ಯಂತ ಫಲಪ್ರದವಾದದ್ದು. ಇಲ್ಲಿ ಅಸಂಖ್ಯ ಕೋಟೆಪಟ್ಟೆಗಳಿದ್ದವು. ಅಲ್ಲದೆ ಪೃಥ್ವಿಯಲ್ಲಿ ಪ್ರಸಿದ್ಧಿಹೊಂದಿದ ಗೆರಸಪ್ಪೆಯ ಪ್ರಪಾತವೂ ಬೀಳಗಿ ರಾಜ್ಯದಲ್ಲಿಯೇ ಇದೆ. ಅಲ್ಲದೆ ಈ ಭಾಗದಲ್ಲಿ ಚಂದ್ರಗುತ್ತಿ ಸಿದ್ದಾಪೂರ ಬೇಡಕಣಿವಿ ಈ ಮಹತ್ವದ ಸ್ಥಾನಗಳೂ ಇವೆ.

ಬೀಳಗಿ, ಸ್ವಾದಿ, ಇಕ್ಕೇರಿ ಮತ್ತು ಕೊಡಗು ರಾಜ ಮನೆತನಗಳ ಇತಿಹಾಸಗಳು ಆ ರಾಜರುಗಳ ಕಾಲದಲ್ಲಿಯೇ ಅವರ ನಿರೀಕ್ಷಣೆಯಲ್ಲಿಯೇ ಬರೆಸಲ್ಪಟ್ಟ ಹಾಗೆ ತೋರುತ್ತದೆ. ಈ ಇತಿಹಾಸಗಳಲ್ಲಿ ಉಳಿದ ಇತಿಹಾಸಗಳಂತೆ ಕೇವಲ ದಂತಕಥೆಗಳಿರುವದಿಲ್ಲ. ಅವುಗಳಲ್ಲಿ ವಿಶ್ವಾಸಾರ್ಹವಾದ ಐತಿಹಾಸಿಕ ವಿಷಯಗಳು ಇದ್ದದ್ದು ತೋರಿಬರುತ್ತದೆ. ಸ್ವಾದಿಯ ರಾಜರ ಇತಿಹಾಸವನ್ನು ಬಿಟ್ಟು ಉಳಿದ ಎಲ್ಲ ರಾಜ ಮನೆತನಗಳ ಇತಿಹಾಸಗಳು ಈಗ ಉಪಲಬ್ಧವಾಗಿವೆ. ಇವುಗಳಲ್ಲಿ ಬೀಳಗಿಯ ರಾಜರ ಇತಿಹಾಸವು ಈ ಮೊದಲಿಗೆ ಶಿವಾನುಭವದ ಸಂಚಿಕೆಗಳಲ್ಲಿ ಪ್ರಸಿದ್ಧಿಸಲ್ಪಟ್ಟಿವೆ. ಅದನ್ನೇ ನಾವು ಈಗ ಮುಖ್ಯ ಆಧಾರವಾಗಿಟ್ಟುಕೊಂಡು ಈ ಲೇಖವನ್ನು ಬರೆದಿದ್ದೇವೆ. ಅಲ್ಲದೆ ಬೀಳಗಿಯಲ್ಲಿ ಕೆಲವು ಶಿಲಾಲೇಖಗಳೂ ತಾಮ್ರಪಟಗಳೂ ದೊರೆತಿರುತ್ತವೆ. ಅವುಗಳನ್ನೂ ಸಹ ಈ ಲೇಖದಲ್ಲಿ ಆಧಾರವಾಗಿಟ್ಟುಕೊಂಡು ಉಲ್ಲೇಖಿಸಿರುತ್ತೇವೆ.

ಈ ರಾಜ್ಯದ ಮೂಲ ಸ್ಥಾಪಕರಾರೆಂಬುದು ನಿಶ್ಚಿತವಾಗಿ ತಿಳಿದಿಲ್ಲ. ಆದರೆ ಆಂಡಣ್ಣನೆಂಬವನು ಐಸೂರು ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದದ್ದು ಬೀಳಗಿಯ ಅರಸರ ವಂಶಾವಳಿಯಿಂದ ತಿಳಿದುಬರುತ್ತದೆ. ಈ ಐಸೂರು ಎಂದರೆ ಈಗಿನ ಚಂದ್ರಗುತ್ತಿಯೇ ಇರುತ್ತದೆ. ಚಂದ್ರಗುತ್ತಿಯು ಒಂದು ಅತ್ಯಂತ ಕಡಿದಾದ ಮತ್ತು ಉನ್ನತವಾದ ಪರ್ವತ ಶಿಖರವಿರುತ್ತದೆ. ಇದರ ಮೇಲೆ ಒಂದು ಭದ್ರವಾದ ಕೋಟೆಯು ಇದ್ದು ಇದು ಸುತ್ತಲಿನ ಪ್ರದೇಶದಲ್ಲಿ ಬಹು ದೂರದ ವರೆಗೆ ದೃಷ್ಟಿಗೆ ಬೀಳುತ್ತಿದೆ. ಇದೇ ಈ ಅರಸರ ಪೂರ್ವದ ರಾಜಧಾನಿಯಾಗಿತ್ತು. ಆಂಡಣ್ಣನ ತರುವಾಯ ಅವನ ಮಗ ಪಾರಿಶ್ವನು, ಅವನ ತರುವಾಯ ಅವನ ಮಗ ಮುಂಡಣ್ಣ ಒಡೆಯರ ಇವನು ಅನುಕ್ರಮವಾಗಿ ರಾಜ್ಯವಾಳಿದರು. ಮುಂಡಣ್ಣನಿಗೆ ಕಲ್ಲಪ್ಪ ಭೂಮಿಪ, ಬೋಳಭೂಪಾಲ, ಅಮ್ಮಣ್ಣನೃಪ ಎಂಬ ಮೂವರು ಮಕ್ಕಳಿದ್ದರು. ಕಲ್ಲಪ್ಪ ಭೂಪನಿಗೆ ಮುಂಡಣ್ಣ ಮತ್ತು ನರಸಪ್ಪ ಎಂಬ ಇಬ್ಬರು ಮಕ್ಕಳಿದ್ದರು. ಇವರಲ್ಲಿ ಮುಂಡಣ್ಣನಿಗೆ ಭೈರ

ವನೃಪಾಲ, ಕಲ್ಲಪ್ಪ ಒಡೆಯರ್ ಮತ್ತು ನರಸಿಂಹಭೂಪ ಎಂಬ ಮೂವರು ಮಕ್ಕಳಿದ್ದರು. ಈ ರಾಜರಲ್ಲಿ ಈ ನರಸಿಂಹಭೂಪನೇ ಅತ್ಯಂತ ಪ್ರಸಿದ್ಧಿಗೆ ಬಂದನು.

ನರಸಿಂಹಭೂಪಃ— (೧೫ ನೇ ಶತಮಾನದ ಅಂತ್ಯಭಾಗ) ನರಸಿಂಹನು ವಿಜಯನಗರದ ಕೃಷ್ಣರಾಜನ ಸಮಕಾಲೀನನು. ಅಂದರೆ ೧೫ ನೇ ಶತಮಾನದ ಅಂತ್ಯದಲ್ಲಿ ಇರಬೇಕು. ಈತನು ಕೃಷ್ಣರಾಜನ ಯುದ್ಧಗಳಲ್ಲಿ ವಿಶೇಷ ಪರಾಕ್ರಮವನ್ನು ತೋರಿಸಿದಂತೆ ತೋರುತ್ತದೆ. ಇದಕ್ಕೋಸ್ಕರ ಇವನಿಗೆ "ಎಂಟು ದಂಡಿಗೆಯ ಮಲೆತರಿರಾಯ ಮನ್ನೆಯರಗಂಡ" ಎಂದು ಮೊದಲಾಗಿ ಬಿರುದುಗಳು ಕೊಡಲ್ಪಟ್ಟವು. ಈತನು ಅಶ್ವಪತಿಯನ್ನು ಗೆದ್ದು ಗಡಿಯಲ್ಲಿ ಜಯಸ್ತಂಭವನ್ನು ನಡಿಸಿದನು. ಈತನ ಈ ಪರಾಕ್ರಮಕ್ಕೆ ಮೆಚ್ಚಿ ಕೃಷ್ಣರಾಯನು ತನ್ನ ಮಗಳಾದ ಹರಿಯಮ್ಮನನ್ನು ಈತನಿಗೆ ಕೊಟ್ಟು ಲಗ್ನಮಾಡಿದನು. ಮತ್ತು ಪಿನುಗುಂಡಿಯ ಮೂರು ಲಕ್ಷ ರಾಜ್ಯಕ್ಕೆ ಅಧಿಪತಿಯನ್ನಾಗಿಯೂ ಮಾಡಿದನು. ಈ ಸಂಗತಿಗಳ ಮೇಲಿಂದ ಕೃಷ್ಣರಾಯನು ನರಸಿಂಹಭೂಪನನ್ನು ಈ ಪ್ರಾಂತದ ಸುಭೇದಾರನನ್ನಾಗಿ ಮಾಡಿದಂತೆ ತೋರುತ್ತದೆ.

ನರಸಿಂಹ ಭೂಪನಿಗೆ ಘಂಟೇಂದ್ರ ಮತ್ತು ಮುಂಡಣ ಭೂಪ ಎಂಬ ಇಬ್ಬರು ಮಕ್ಕಳಿದ್ದರು.

೧ ನೇ ಘಂಟೇಂದ್ರ:— ಈ ಘಂಟೇಂದ್ರನು ಬೆಟ್ಟದ ಮೇಲಿರುವ ತನ್ನ ರಾಜಧಾನಿಯನ್ನು ಬಿಟ್ಟುಕೊಟ್ಟು ಬೀಳಗಿಯಲ್ಲಿ ಬಂದು ಇಗಲಿಕ್ಕೆ ಹತ್ತಿದನು. ಮತ್ತು ಅದಕ್ಕೆ ಕೋಟೆ ಕೊತ್ತಳಿಗಳನ್ನು ಕಟ್ಟಿಸಿದನು. ಈತನೇ ಬೀಳಗಿ ಪಟ್ಟಣದ ಸಂಸ್ಥಾಪಕನೆಂದು ಹೇಳಬಹುದು. ಈತನು ಮುಂದೆ ಬಹಳ ಪ್ರಬಲನಾದ ಹಾಗೆ ತೋರುತ್ತದೆ. ಅವನು ಸುತ್ತಲಿನ ಪ್ರದೇಶಗಳನ್ನು ಆಕ್ರಮಿಸಿ ಬೇಡ ಕಣಿವೆ, ಕುಣಿಜೆ, ಕೊಂಡಲಿ, ಮೂಗುಂದುರ ಇಲ್ಲಿ ಕೋಟೆಗಳನ್ನು ಕಟ್ಟಿಸಿದನು. ಮತ್ತು ಇಲ್ಲಿ ಇದ್ದ ಬೇಡರ ಹಾವಳಿಯನ್ನು ನಿಲ್ಲಿಸಿದನು.

ಈ ೧ ನೇ ಘಂಟೇಂದ್ರನಿಗೆ ತಿಮ್ಮಣ್ಣನೆಂಬ ಮಗನು, ಅವನ ತರುವಾಯ ನರಸಭೂಪನು, ಆಮೇಲೆ ಅವನ ಮಗನು ವೀರಪ್ಪೊಡೆಯರು ಎಂಬವರು ಪಟ್ಟಕ್ಕೆ ಬಂದರು.

ವೀರಪ್ಪ ಒಡೆಯರ್ಃ-- ಇವನು ಅತ್ಯಂತ ಧರ್ಮಿಷ್ಠನಾಗಿದ್ದನು. ಈತನ ಹೆಂಡತಿ ವೀರಮಾಂಬೆ ಎಂಬವಳು ಬೀಳಗಿಯಲ್ಲಿ ಅತ್ಯಂತ ಮಹತ್ವದ ದೇವಾಲಯವಾದ ವಿರೂಪಾಕ್ಷ ದೇವಾಲಯವನ್ನು ಸುಂದರವಾಗಿ ಕಟ್ಟಿಸಿದಳು.

ರಂಗರಾಜಃ—ರಂಗರಾಜನು ವೀರಪ್ಪೊಡೆಯರ ಕುಮಾರನು. ಈತನ ಹೆಂಡತಿಯು ಚಲುವಮ್ಮದೇವಿಯು. ಈತನ ಕಾಲದಲ್ಲಿ ಮುಸಲ್ಮಾನರು ಈ ಪ್ರಾಂತವನ್ನು ಅಭಿಯೋಗಿಸಿದರು. ಆಗ ಈತನು ಅವರನ್ನು ಸೋಲಿಸಿ ಹಿಂದಕ್ಕಟ್ಟಿದನು. ಮತ್ತು ಸುತ್ತಲಿನ ಪ್ರದೇಶವನ್ನು ಆಕ್ರಮಿಸಿ ತನ್ನ ರಾಜ್ಯವನ್ನು ಬಲಪಡಿಸಿದನು. ಈ ಕಾಲಕ್ಕೆ ವಿಜಯನಗರದ ರಾಜ್ಯವು ಹಾಳಾಗಲು ಮುಸಲ್ಮಾನರು ದಕ್ಷಿಣ ದೇಶವನ್ನು ಅಭಿಯೋಗಿಸಿದರು. ಈ ಕಾಲದಲ್ಲಿ ಅವರು ಮಲೆನಾಡು ಪ್ರಾಂತದ ಒಳಹೊಕ್ಕಂತೆ ತೋರುತ್ತದೆ. ಆದರೆ ಈ ಗುಡ್ಡಗಾಡು ಪ್ರದೇಶವಲ್ಲಿ ಅವರ ಆಟವೇನೂ ಸಾಗಲಿಲ್ಲ.

ಈ ಕಾಲದಲ್ಲಿ ವಿಜಯನಗರವು ಹಾಳಾದದ್ದರಿಂದ ಇಲ್ಲಿಯ ಮಾಂಡಲಿಕ ಭೂಪಾಲರೆಲ್ಲರು ತಮ್ಮ ಸುತ್ತಲಿನ ಪ್ರದೇಶಗಳನ್ನು ಆಕ್ರಮಿಸಿ ಸ್ವತಂತ್ರರಾದ ಹಾಗೆ ತೋರುತ್ತದೆ.

೨ ನೇ ಘಂಟೇಂದ್ರಃ— (೧೬ ನೇ ಶತಮಾನದ ಕಡೆಯ ಭಾಗ) ರಂಗರಾಜನಿಗೆ ಘಂಟೇಂದ್ರನೆಂಬ ಮಗನಿದ್ದು ಇವನು ಮುಂದೆ ಪಟ್ಟವೇರಿದನು. ಈತನ ಶಿಲಾಶಾಸನವು ಒಂದು ಇದ್ದು ಇದು ಶಕೆ ೧೫೧೫ ಎಂದರೆ ಕ್ರಿ. ಶ. ೧೫೯೩ ರಲ್ಲಿಯದು ಇದೆ. ಈತನು ಬೀಳಗೀರಾಜರಲ್ಲಿ ಅತ್ಯಂತ ಶ್ರೇಷ್ಠತೆಯನ್ನು ಹೊಂದಿದನು. ಬೀಳಗಿ ಅರಸುಗಳ ವಂಶಾವಳಿ ಗ್ರಂಥದಲ್ಲಿ ಇವನ ವರ್ಣನೆಯು ವಿಶೇಷವಾಗಿ ಬಂದಿರುತ್ತದೆ. ಈತನು ಅತ್ಯಂತ ಧರ್ಮಿಷ್ಠನೂ ವಿದ್ವಾಂಸನೂ ಆಗಿ ಅತ್ಯಂತ ಖ್ಯಾತಿಯನ್ನು ಹೊಂದಿದನು. ಅವನು ಗಜಾರೋಹಣ, ಅಶ್ವಾರೋಹಣಗಳಲ್ಲಿ ಅತ್ಯಂತ ಬಲ್ಲಿದನಾದನು. ಬಿಳಗಿಯ ರಾಜ್ಯಕ್ಕೆ ಹೊಂದಿಯೇ ಗೆರಸಪ್ಪೆಯ ಭೈರಾದೇವಿಯ ರಾಜ್ಯವಿತ್ತು. ಈ ಉಭಯ ರಾಜರಲ್ಲಿ ವೈಮನಸ್ಸು ಉಂಟಾಗಲು ಘಂಟೇಂದ್ರನು ಭೈರಾದೇವಿಯನ್ನು ಜಯಿಸಿ ಹಿಂದಕ್ಕಟ್ಟಿದನು. ಅವನ ಮಂತ್ರಿಯು ಪುಟ್ಟಯ್ಯ, ಪಡೆವಳನು ಚನ್ನಯ್ಯ, ತಾಂತ್ರಿಕನು ದೊಡ್ಡಭದ್ರಯ್ಯ, ಇವರು ಇದ್ದು, ಘಂಟೇಂದ್ರನ ಸಹಾಯಕರ ಹೆಸರುಗಳೂ ಈ ಗ್ರಂಥದಲ್ಲಿ ಬಂದಿವೆ. ಅವು ಯಾವವೆಂದರೆಃ— ಮಂತಣದ ಪುಟ್ಟಯ್ಯ, ಪಡೆವಳ ಚನ್ನಯ್ಯ,

ಪಿರಿಯ ಗಿರಿಯಪ್ಪಯ್ಯ, ಸೋಮಯ್ಯ, ರುದ್ರಯ್ಯ, ಕೊಂಡಲಿ ಮೇಲುಗಿರಿಯಪ್ಪ, ತಿಮ್ಮಯ್ಯ, ವೆಂಕಪ್ಪಯ್ಯ, ಮಲ್ಲಪ್ಪ, ನಾಗಪ್ಪ, ಇಡುವಣಿಯ ಪುಟ್ಟಯ್ಯ, ಮರಿಶಿವಯ್ಯ, ಗುತ್ತಿಪುಟ್ಟಯ್ಯ, ಶೇಷಪ್ಪ, ಅತ್ಯಂತ ಜಾಣನಾದ ಮುಟ್ಟುವಳ್ಳಿಯ ವೀರಭದ್ರಯ್ಯ, ಪುಣಿಚೆಶಾಂತಯ್ಯ, ಬರಮಯ್ಯ, ತಿಪ್ಪಣ್ಣ, ಸಿರಿವಂತನಾದ ದೊಡ್ಡ ತಿಮ್ಮಯ್ಯ, ಉರಿವ ಕಿಚ್ಚಿನೊಳಗಿದ್ದ ಉದ್ರೆಯ ಶಿವಯ್ಯ ಇವರು ಇದ್ದರು.

ಘಂಟೇಂದ್ರನು ಈ ಕಾಲಕ್ಕೆ ವೆಂಕಟರಾಯನಿಗೆ ಅತ್ಯಂತ ಪ್ರೀತ್ಯಾಸ್ಪದನಾಗಿದ್ದನೆಂದು ಗ್ರಂಥದಲ್ಲಿ ಹೇಳಲ್ಪಟ್ಟಿದೆ. ವೆಂಕಟರಾಯನು ಪೆನುಕೊಂಡೆಯ ರಾಜನಾಗಿದ್ದನು. ಇವನು ಬೀಳಗಿ ಅರಸುಗಳ ವಂಶಾವಳಿಯಲ್ಲಿ ವೆಂಕಟರಾಯನ ಸನ್ನಿಧಿಯಲ್ಲಿ ಘಂಟೇಂದ್ರನು ಒಂದು ದಿವಸ ಮಂಗಳಬೊಲ್ಲ ಎಂಬ ಹೆಸರಿನ ಒಂದು ತೀಕ್ಷ್ಣವಾದ ತುರಗವನ್ನು ತನ್ನ ಅಂಕಿತ ಮಾಡಿಕೊಂಡಿದ್ದರ ವರ್ಣನೆಯು ಇದೆ. ಇದರಿಂದ ಇವನು ಅರಸನ ಲಕ್ಷಕ್ಕೆ ಬರಲು ಕಾರಣವಾಯಿತು. ಮುಂದೆ ವೆಂಕಟರಾಯನಿಗೂ ನಿಜಾಮಶಹನಿಗೂ ಕದನ ವೆಸಗಲು, ಘಂಟಿ ನೃಪಾಲನು ತನ್ನ ಮಂಗಳ ಬೊಲ್ಲ ಎಂಬ ಕುದುರೆಯನ್ನು ಏರಿ ೧೨ ಸಾವಿರ ದಂಡಿನೊಡನೆ ನಿಜಾಮಶಹನೊಡನೆ ಕಾದಿ ಅವನನ್ನು ಹಿಂದಕ್ಕಟ್ಟಿದನು. ಇದರಿಂದ ಅವನು "ಗಡಿಯಂತ ಭೀಮ" ಎಂಬ ಬಿರುದನ್ನು ಅರಸನಿಂದ ಪಡೆದನು. ಮತ್ತು ಕೆಲವು ತೋಪುಗಳೂ ಪಂಚ ದೀವಟಿಗೆಯ ಮಾನವೂ, ಬಂಗಾರದ ಚಮರೀ ರುಹವೂ ಹಗಲು ದೀವಟಿಯೂ, ಸಿಂಹ ಮುದ್ರಿತ ಪತಾಕೆಯೂ, ಮೃಗಧರ ವಂಕಿಯೂ, ಪೆಂಡೆಯೂ, ಹಸುರು ನಿಶಾನೆಯೂ, ಮುಂಗೈ ಮುರಾರಿ ಎಂಬ ಬಿರುದೂ ಬಹುಮಾನವಾಗಿ ಕೊಡಲ್ಪಟ್ಟವು. ಅಲ್ಲದೆ ಪೆನುಕೊಂಡೆ ಗುತ್ತಿ ಈ ಗಡಿಗಳ ಪರಿಯಂತರ ಇರುವ ನವಲಕ್ಷ ಆದಾಯದ ಪ್ರಾಂತವೂ ಸಹ ಉಡುಗೊರೆಯಾಗಿ ಕೊಡಲ್ಪಟ್ಟಿತು.

ಆ ಮೇಲೆ ವೆಂಕಟರಾಯನು ತನ್ನ ಮಗಳಾದ ರಮಾದೇವಿಯನ್ನು ಘಂಟೇಂದ್ರನೆಗೆ ಕೊಟ್ಟು ಲಗ್ನಮಾಡಿದನು. ಇಲ್ಲಿ ಕವಿಯು ಘಂಟೇಂದ್ರನು ಸೂರ್ಯ ವಂಶ, ಕೌಶಿಕ ಗೋತ್ರದವನೆಂದು ಹೇಳಿದ್ದಾನೆ. ಮತ್ತು ಮಗಳಿಗೆ ವೆಂಕಟರಾಯನು ತಹನಿಧಿ ಎಂಬ ಸೀಮೆಯನ್ನು ಪಾಲ್ಬೆಣ್ಣೆಯ ಸಲುವಾಗಿ ಕೊಟ್ಟಂತೆಯೂ ಇಲ್ಲಿ ಉಲ್ಲೇಖವಿದೆ. ಈ ಪ್ರಕಾರ ಘಂಟೇಂದ್ರನು ಅತ್ಯಂತ ಮನ್ನಣೆಯನ್ನು ಹೊಂದಿ ಬೀಳಗಿಗೆ ಬಂದನು.

ತಾಳೀಕೋಟೆಯ ಕದನವಾದ ಬಳಿಕ ಮುಸಲ್ಮಾನ ಬಾದಶಹರು ವಿಜಯನಗರದ ರಾಜ್ಯವನ್ನು ಬೇರೆ ಬೇರೆ ಕಡೆಯಿಂದ ಅನೇಕ ವರ್ಷಗಳ ವರೆಗೆ ದಾಳಿ ಇಡುತ್ತ ಬಂದರು. ಅಹಮದ ನಗರದ ನಿಜಾಮಶಹನು ಪೆನುಕೊಂಡೆಯ ಮೇಲೇರಿ ಹೋದಾಗ್ಗೆ ಬೀಳಗಿಯ ಘಂಟೇಂದ್ರನ ವಿಶೇಷ ಪರಾಕ್ರಮವನ್ನು ತೋರಿಸಿಬಹುದು. ಆದ್ದರಿಂದ ಅಲ್ಲಿಯ ಆಗಿನ ಅರಸನಾದ ವೆಂಕಟನು ಅವನಿಗೆ ಮೇಲೆ ಹೇಳಿದಂತೆ ಅನೇಕ ಪ್ರಕಾರದ ಬಹುಮಾನಗಳನ್ನು ಕೊಟ್ಟಿರಬಹುದು.

ಈ ಪ್ರಕಾರ ಘಂಟೇಂದ್ರನು ಜಯಶಾಲಿಯಾಗಿ ಸ್ವ ಗ್ರಾಮಕ್ಕೆ ಬಂದ ಬಳಿಕ ಸ್ವಾದಿಯ ಅರಸನಾದ ಅರಸಪ್ಪ ನಾಯಕನು ತನ್ನ ಮಗಳಾದ ವೀರಮಾಂಬೆ ಎಂಬವಳನ್ನು ಅವನಿಗೆ ಕೊಟ್ಟು ಮದುವೆ ಮಾಡಿದನು. ಆ ಕಾಲಕ್ಕೆ ಅವನಿಗೆ ಐದು ಗ್ರಾಮಗಳನ್ನು ಕೊಟ್ಟು ಸತ್ಕರಿಸಿದನು.

ಮೇಲ್ಕಂಡ ರಾಜರ ವಿವರಣೆಗಳು ಬೀಳಗಿಯ ಅರಸುಗಳ ವಂಶಾವಳಿ ಎಂಬ ಗ್ರಂಥದ ಆಧಾರದಿಂದ ಬರೆಯಲ್ಪಟ್ಟಿವೆ. ಇವುಗಳ ನಿಜತ್ವವನ್ನು ಪರೀಕ್ಷಿಸಲು ಬೇರೆ ಸ್ವತಂತ್ರ ಆಧಾರಗಳಿದ್ದು ಅವು ಬೀಳಗಿಯಲ್ಲಿರುವ ಶಿಲಾಶಾಸನಗಳೇ ಇವೆ. ಇಲ್ಲಿ ರತ್ನತ್ರಯ ಬಸದಿ ಮತ್ತು ವಿರೂಪಾಕ್ಷ ದೇವಾಲಯಗಳಿದ್ದು ಇಲ್ಲಿ ಮೂರು ಶಾಸನಗಳಿವೆ. ಅವುಗಳಲ್ಲಿ ಅನೇಕ ಐತಿಹಾಸಿಕ ವಿಷಯಗಳು ಉಲ್ಲೇಖವಾಗಿವೆ. ಅಲ್ಲದೆ ಕೆಲವು ತಾಮ್ರಪಟಗಳೂ ದೊರೆತಿದ್ದು ಅವುಗಳಾದರೂ ಈ ರಾಜರ ಸ್ಥಿತಿಯ ವಿಷಯವಾಗಿ ಪ್ರಕಾಶವನ್ನು ಕೆಡುಹುತ್ತಿವೆ.

ರತ್ನತ್ರಯ ಬಸದಿಯಲ್ಲಿಯ ಶಿಲಾಶಾಸನಗಳು ಮಹತ್ವದವಿದ್ದು ಅವುಗಳಿಂದ ತಿಳಿದು ಬರುವ ಸಂಗತಿಗಳು ಯಾವವೆಂದರೆ :—

ಚಂದ್ರಗುತ್ತಿಯ ಗಿರಿಶಿಖರದ ಮೇಲೆ ಐಸೂರು ಎಂಬ ಪಟ್ಟಣವಿದ್ದು ಅಲ್ಲಿ ಅನೇಕ ರಾಜರುಗಳು ಆಳಿದರು. ಅವರಲ್ಲಿ ಮುಂಡಣ್ಣ ಒಡೆಯರ್ ಎಂಬವನಿದ್ದು ಅವನಿಗೆ ಕಲ್ಲಪ್ಪ ಒಡೆಯರ್ ಬೋಳಪ್ಪ ಒಡೆಯರ್ ಮತ್ತು ಅಮ್ಮಣ್ಣ ಒಡೆಯರ್ ಎಂಬ ಮೂವರು ಪುತ್ರರಿದ್ದರು. ಕಲ್ಲಪ್ಪ ಒಡೆಯರನು ಐಸೂರಲ್ಲಿಯ ಜೈನ ದೇವಾಲಯಗಳಿಗೆ ಬಿಜ್ಜಹಳ್ಳಿ ಗ್ರಾಮದಲ್ಲಿಯ ಭೂಮಿಯನ್ನು ದಾನವಾಗಿ ಕೊಟ್ಟನು

ಕಲ್ಲಪ್ಪ ಒಡೆಯರಸಿಗೆ ಮುಂಡಣ್ಣ ಮತ್ತು ನರಸಿಂಹ ಎಂಬ ಇಬ್ಬರು ಮಕ್ಕಳು ಇದ್ದರು.

ಮುಂದೆ ಇವರ ವಂಶದಲ್ಲಿ ಹುಟ್ಟಿದ ಘಂಟೆಣ್ಣ ಒಡೆಯರ್ ಈತನು ಸೋಮನದಿಯ ತಟಾಕದಲ್ಲಿ ಬೀಳಗಿ ರಾಜಧಾನಿಯನ್ನು ಕಟ್ಟಿಸಿದನು. ಮತ್ತು ಪಿರಿಯ ಬಸದಿಯನ್ನು ಕಟ್ಟಿಸಿ ಪಾರ್ಶ್ವ ತೀರ್ಥಕರನ ಮೂರ್ತಿಯನ್ನು ಸ್ಥಾಪಿಸಿದನು ಮತ್ತು ಅದಕ್ಕೆ ಭೂಮಿಯನ್ನು ಉಂಬಳಿಹಾಕಿ ಕೊಟ್ಟನು.

ಮುಂದೆ ಉಲ್ಲೇಖಿಸಲ್ಪಟ್ಟ ಸಂಗತಿಗಳು ಯಾದವೆಂದರೆ "ದಾಸ ಭೈರವೇಂದ್ರನ ಕುಮಾರನಭಿನವ ಭೈರವೇಂದ್ರ ಹಿರಿಯಪ್ಪ ಒಡೆಯರೆಂಬ ನಾಮಾಂತರಮಂ ಪಡೆದು ತನ್ನರಮನೆಯೊಳು ಏಳ್ನೆಲೆಯ ಬಸದಿಯಂ ಕಟ್ಟಿಸಿ ಪಾರ್ಶ್ವ ತೀರ್ಥಕರ ಪ್ರತಿಮೆಯಂ ಸ್ಥಾಪಿಸಿ ತತ್ಪೂಜಾರ್ಥವಾಗಿ ಇಟ್ಟಿಗೆ ಎಂಬ ಗ್ರಾಮದೊಳು" ಇದ್ದ ಭೂಮಿಯನ್ನು ದಾನಮಾಡಿದನು.

"ಮತ್ತಂ ತನ್ನರಸಿಯಪ್ಪ ಮಹಾದೇವಿಯ ಪೆಸರೊಳು ಮಾಣಿಕ್ಯ ತೀರ್ಥಂಕರ ಬಸದಿಯಂ ಕಟ್ಟಿಸಿ" ಅದಕ್ಕೂ ಇಟ್ಟಿಗೆಯಲ್ಲಿಯ ಭೂಮಿಯನ್ನು ದಾನಮಾಡಿದನು. ಹಾಗೂ "ಕಾಳಗುಪ್ಪೆಯ ಪಂಚಬಸದಿಯಂ ಜೀರ್ಣೋದ್ಧಾರಮಂ ಮಾಡಿಸಿ" ಎಂತಲೂ ಉಲ್ಲೇಖವಿದೆ.

"ಆತನ ತನುಜ ಲಕ್ಷ್ಮಣ ಭೂಪಾಲಂ ನಾಂದೇಶ್ವರ ಬಸದಿಯಂ ಕಟ್ಟಿಸಿ" ಎಂದು ಹೇಳಲ್ಪಟ್ಟಿದೆ.

"ಘಂಟೆಣ್ಣೊಡೆಯರ ಕುಮಾರಂ ತಿಮ್ಮರಸೊಡೆಯರ್ ರತ್ನತ್ರಯ ಚೈತ್ಯಾಲಯಮಂ ಕಟ್ಟಿಸಿ" ಮತ್ತಂ ತನ್ನಗ್ರಜೆಯಪ್ಪ ತಿಮ್ಮಾಂಬಿಕೆಯ ಪೆಸರೊಳು ಪೆರತೊಂದು ಬಸದಿಯಂ ಕಟ್ಟಿ" ಎಂದು ಹೇಳಲ್ಪಟ್ಟಿದೆ.

"ಆತನ ತನುಜಂ ನರಸಿಂಹಭೂಪಾಲಂ ತನ್ನ ಪಿರಿಯರು ಕಟ್ಟಿಸಿದ ಸಕಲ ಚೈತ್ಯಾಲಯಂಗಳಂ ಜೀರ್ಣೋದ್ಧಾರಮಾಡಿಸಿ" ಎಂದು ಹೇಳಲ್ಪಟ್ಟಿದೆ.

"ಆತನ ಕುಮಾರ ವೀರೇಂದ್ರನೆಂಬ ಕಲಿಯುಗ ಧರ್ಮಪುತ್ರನೆನಿಸಿ ಪಿರಿಯ ಬಸದಿ ಪಾರ್ಶ್ವ ತೀರ್ಥಕರ ಶ್ರೀ ಪಾದಮೂಲದೊಳು ನಡೆಯುವ ಪೂಜೋತ್ಸವಕ್ಕೆ" ದಾನ ಮಾಡಿ "ಮತ್ತಂ ತನ್ನನುಜೆಯಪ್ಪ ತಿಮ್ಮಾಂಬಿಕೆ ಕಟ್ಟಿಸಿದ ಚಂದ್ರಪ್ರಭತೀರ್ಥಕರಬಸದಿ" ಇದಕ್ಕೂ ಭೂಮಿಯನ್ನು ಕೊಟ್ಟನು.

ಅಭಿನವ ಭೈರವೇಂದ್ರನೂ ಹೀಗೆಯೇ ಕೆಲವು ದಾನಗಳನ್ನು ಕೊಟ್ಟನು.

ಅವನ ಮಗ ರಂಗರಾಜನು ಒಂದು ಚೈತ್ಯಾಲಯವನ್ನು ಕಟ್ಟಿಸಿದನು. ಆತನ ಮಗ ಘಂಟೇಂದ್ರನು ಈ ಬಸದಿಯ ಕಟ್ಟಡವನ್ನು ಪೂರ್ಣಮಾಡಿ ತನ್ನ ಕುಲಗುರುವಾದ ಅಕಲಂಕ ಮುನಿಗೆ ಅನೇಕ ದಾನಗಳನ್ನು ಕೊಟ್ಟಿದ್ದರ ಉಲ್ಲೇಖವಿದೆ.

ಶಿಲಾಲೇಖದಲ್ಲಿ ಕೊಟ್ಟ ವಂಶಾವಳಿ ಮತ್ತು "ಬೀಳಗಿ ಅರಸುಗಳ ವಂಶಾವಳಿ" ಈ ಗ್ರಂಥದಲ್ಲಿಯ ವಂಶಾವಳಿ ಇವುಗಳಲ್ಲಿ ಒಂದೆರಡು ವಿಷಯಗಳನ್ನು ಹೊರ್ತುಪಡಿಸಿ ಉಳಿದ ವಿಷಯಗಳ ಬಗ್ಗೆ ಭಿನ್ನತೆಯು ತೋರಿ ಬರುವದಿಲ್ಲ. ಆದರೆ ಶಿಲಾಲೇಖದಲ್ಲಿ ಬೇರೆ ಬೇರೆ ಅರಸರುಗಳ ಉಲ್ಲೇಖವಿರುವದಲ್ಲದೆ ಅವರ ಮನೆತನದವರ ಉಲ್ಲೇಖಗಳೂ ಸಹ ಬಂದಿದ್ದು ಅವರು ಮಾಡಿದ ಧರ್ಮಕೃತ್ಯಗಳು ಇದರಲ್ಲಿ ಹೇಳಲ್ಪಟ್ಟಿವೆ.

ಈ ಶಿಲಾಶಾಸನವು ಶಾಲಿವಾಹನ ಶಕೆ ೧೫೧೫ ಎಂದರೆ ಕ್ರಿಸ್ತ ಶಕೆ ೧೫೯೩ ಇಸ್ವಿಯದು ಇದ್ದು, "ಬಿಳಗಿ ವೀರಪ್ಪೊಡೆಯರ ಕುಮಾರರಾದ ಘಂಟೊಡೆಯರು ತಮಗಭ್ಯುದಯ ನಿಶ್ರೇಯಸ ಸುಖ ಪ್ರಾಪ್ತಿ ನಿಮಿತ್ತವಾಗಿ" ದಾನಗಳು ಕೊಡಲ್ಪಟ್ಟಿವೆ ಎಂದು ಹೇಳಿರುವದರಿಂದ, ಇದು ೨ ನೇ ಘಂಟೇಂದ್ರನ ಕಾಲಕ್ಕಿನದು ಇದೆ.

ಮೇಲ್ಕಂಡ ಶಿಲಾಶಾಸನದಿಂದ ಬೀಳಗಿಯ ಪೂರ್ವದ ರಾಜರು ಜೈನಮತಾವಲಂಬಿಗಳಾಗಿರಬಹುದೆಂದು ತೋರುತ್ತದೆ. ಈ ಅರಸರ ಮೂಲ ಗ್ರಾಮವಾದ ಐಸೂರಲ್ಲಿ ಜೈನ ಬಸದಿಗಳಿದ್ದು ಅವು ಈ ಅರಸರಿಂದಲೇ ಸ್ಥಾಪಿತವಾದವು. ಬೀಳಗಿಯಲ್ಲಿಯ ರತ್ನತ್ರಯ ಬಸದಿಯನ್ನು ೧ ನೇ ಘಂಟೇಂದ್ರನ ಮಗ ತಿಮ್ಮರಸನು ಕಟ್ಟಿಸಿದನು. ಇದರಿಂದ ಆರಂಭದಲ್ಲಿ ಈ ವಂಶದ ಅರಸರು ಜೈನರಿದ್ದು, ಮುಂದೆ ಬರಬರುತ್ತ ವಿಜಯನಗರದ ಕಾಲದಲ್ಲಿ ವೈದಿಕ ಮತವನ್ನು ಅನುಸರಿಸಹತ್ತಿದ ಹಾಗೆ ತೋರುತ್ತದೆ. ನರಸಿಂಹ ಭೂಪನು ಕೃಷ್ಣರಾಜನ ಮಗಳನ್ನು ಮದುವೆಯಾದ್ದರಿಂದ ಮತ್ತು ಮುಂದೆ ವೀರಪ್ಪೊಡೆಯರ ಹೆಂಡತಿ ವೀರಮಾಂಬೆಯು ವಿರೂಪಾಕ್ಷ ದೇವಾಲಯವನ್ನು ಕಟ್ಟಿಸಿದ್ದರ ಮೇಲಿಂದ ಈ ತೆರದ ಊಹೆಗೆ ಆಸ್ಪದವಿದೆ. ಈಪ್ರಕಾರ ಕೆಲವು ಕಾಲ ಆಚರಿಸಿ ಮುಂದೆ ಇವರು ಪೂರ್ಣ ವೀರಶೈವ ಮತಾವಲಂಬಿಗಳಾದರು.

ಕರ್ನಾಟಕದ ಇತಿಹಾಸವನ್ನು ನೋಡಿದರೆ ೧೨ನೇ ೧೩ನೇ ಶತಮಾನಗಳಲ್ಲಿ ಅನೇಕ ಜೈನ ಮತ್ತು ಕ್ಷತ್ರಿಯ ಅರಸರು ಇಲ್ಲಿ ರಾಜ್ಯವಾಳುತ್ತಿದ್ದು

ಮುಂದೆ ಅವರು ೧೫, ೧೬, ೧೭ ನೇ ಶತಮಾನಗಳಲ್ಲಿ ವೀರಶೈವ ಮತಾನುವರ್ತಿಗಳಾದದ್ದು ತೋರಿಬರುತ್ತದೆ. ಸ್ವಾದಿ, ಬೀಳಗಿ, ಮೈಸೂರು, ಕಿತ್ತೂರು, ಹಾಗಲವಾಡಿ ಈ ಅರಸರ ಪೂರ್ವಜರಾರೂ ವೀರಶೈವರಿರಲಿಲ್ಲ. ಆದರೆ ಅವರು ಹಿಂದುಗಡೆ ವೀರಶೈವರಾದದ್ದು ಕಂಡ.ಬರುತ್ತದೆ. ಅದೇ ಪ್ರಕಾರ ಹರಪನಹಳ್ಳಿ, ಚಿತ್ರಕಲ್ಲದುರ್ಗ, ಅಲ್ಲದೆ ಕರ್ನಾಟಕದಲ್ಲಿಯ ಅನೇಕ ಸರದಾರರು ಮತ್ತು ಇನಾಮುದಾರರು ಭಿನ್ನ ಭಿನ್ನ ಜಾತಿಯವರಿದ್ದರೂ ಈ ಕಾಲದಲ್ಲಿ ಅವರು ವೀರಶೈವಮತವನ್ನು ಸ್ವೀಕರಿಸಿದ್ದು ತೋರಿಬರುತ್ತದೆ. ಇಷ್ಟೇ ಅಲ್ಲ, ವಿಜಯನಗರದ ಅರಸರಾದ ದೇವರಾಜ, ವಿರೂಪಾಕ್ಷ ಮತ್ತು ಪ್ರೌಢರಾಯ ಇವರ ಕಾಲದಲ್ಲಿ ವೀರಶೈವಮತವು ಅವರ ಅಂತಃಪುರವನ್ನು ಸಹ ಪ್ರವೇಶಿಸಿತು. ಬಸವೇಶ್ವರನ ಕಾಲದಲ್ಲಿ ವೀರಶೈವ ಸಮಾಜದಲ್ಲಿ ಯಾವ ಬಗೆಯ ಪ್ರಸರಣ ಶಕ್ತಿಯು ಉತ್ಪನ್ನವಾಯಿತೋ ಅದೇ ಬಗೆಯ ಒಂದು ಪ್ರಸರಣ ಶಕ್ತಿಯು ೧೫ನೇ ೧೬ ನೇ ಶತಮಾನಗಳಲ್ಲಿ ಉದ್ಭವಿಸಿದ್ದು ಕಂಡುಬರುತ್ತದೆ. ನಿರಂಜನವಂಶ ರತ್ನಾಕರ ಗ್ರಂಥವನ್ನು ನೋಡಿದಲ್ಲಿ ಈ ಬಗೆಯ ಕ್ರಾಂತಿಯನ್ನು ಆ ಕಾಲಕ್ಕೆ ಸಮಾಜದಲ್ಲಿ ಹುಟ್ಟಿಸಲಿಕ್ಕೆ ತೋಂಟದಾರ್ಯರೂ ಅವರ ಕಾಲದಲ್ಲಿ ಉತ್ಪನ್ನರಾದ ಅನೇಕ ಮಹಾನುಭಾವರೂ ಕಾರಣರಾದರೆಂದು ಊಹಿಸಲು ಪ್ರಬಲ ಕಾರಣಗಳಿವೆ. ಆ ಕಾಲಕ್ಕೆ ದೇಶದಲ್ಲೆಲ್ಲ ಅನೇಕ ಮಹತ್ವದ ಮಠಗಳು ಸ್ಥಾಪಿತವಾದವು. ಮತ್ತು ವೀರಶೈವ ಮತವು ದೇಶದಲ್ಲೆಲ್ಲ ಊರ್ಜಿತಾವಸ್ಥೆಯನ್ನು ಹೊಂದಿತು.

೨ ನೇ ಘಂಟೇಂದ್ರನ ತರುವಾಯ ಅವನ ಮಗ ತಮ್ಮರಸ ಒಡೆಯನು ರಾಜ್ಯವಾಳಿದನು. ಅವನ ಹೆಂಡತಿ ರಾಮಾಂಬಾಜಿಯವರ ಉದರದಲ್ಲಿ ಮುಮ್ಮಡಿ ಘಂಟೇಂದ್ರನು ಹುಟ್ಟಿದನೆಂದು ಬೀಳಗಿ ಅರಸರ ವಂಶಾವಳಿಯಲ್ಲಿ ಬರೆದದೆ.

ಆದರೆ ತಮ್ಮರಸ ಒಡೆಯರ್ ಈತನ ಕಾಲದ ಒಂದು ತಾಮ್ರಶಾಸನವು ಉಪಲಬ್ಧವಿದ್ದು ಇದರ ಶಕೆ ವರ್ಷ ೧೫೨೬ ಎಂದರೆ ೧೬೦೪ ಇದ್ದು ಇವರಲ್ಲಿ ಕಾಣಿಸಿದ್ದೇನಂದರೆಃ— ದೇವಪ್ಪ ಒಡೆಯರವರ ಕುಮಾರರಾದ ತಮ್ಮಪ್ಪ ಒಡೆಯರವರು ಜಂಗಮಾರ್ಚನೆಗಾಗಿ "ಶ್ರೀಮತು ಸಜ್ಜನ ಶುದ್ಧ ಶಿವಾಚಾರ ದ್ಯಾವಾಪೃಥಿವೀ ಮಹಾಮಹಂತಿನೊಳಗಾದ ಗೂಳೂರು ಉಪ್ಪಲಿಗೆ ಮಠದ ಶಾಂತದೇವರ ಶಿಷ್ಯನಾದ ಗೂಳೂರು ಸಿದ್ಧವೀರಣ್ಣಾ ಒಡೆಯರಿಗೆ ಬಿಟ್ಟ ಧರ್ಮ" ಎಂದು ಕಾಣಿಸಲ್ಪಟ್ಟಿದೆ.

ಇದರ ಮೇಲಿಂದ ವೀರಶೈವ ಮತದ ಪ್ರಾಬಲ್ಯವು ೨ ನೇ ಘಂಟೇಂದ್ರನ ಕಾಲದಿಂದ ಹೆಚ್ಚುತ್ತ ಮುಂದೆ ಸ್ವಲ್ಪ ಕಾಲದಲ್ಲಿಯೇ ಈ ರಾಜರು ವೀರಶೈವ ಧರ್ಮವನ್ನು ಸಂಪೂರ್ಣವಾಗಿ ಅಂಗೀಕರಿಸಿದಂತೆ ತೋರುತ್ತದೆ.

ತಮ್ಮಪ್ಪ ಒಡೆಯರ್ ಈತನ ಮಗನು ಮುಮ್ಮಡಿ ಘಂಟೇಂದ್ರನು ಮುಂದೆ ರಾಜ್ಯವಾಳಿದನು. ಈತನಿಗೆ ನಾವು ೩ ನೇ ಘಂಟೇಂದ್ರನೆಂದು ಇಲ್ಲಿ ಕರೆದಿದ್ದೇವೆ.

೩ ನೇ ಘಂಟೇಂದ್ರ ಅಥವಾ ಮುಮ್ಮಡಿ ಘಂಟೇಂದ್ರ:—(೧೬ ನೇ ಶತಮಾನದ ಅಂತ್ಯ ಮತ್ತು ೧೭ ನೇ ಶತಮಾನದ ಆರಂಭ) ಇವನ ಕಾಲದಲ್ಲಿ ಇಕ್ಕೇರಿಯವರೊಡನೆ ಆಗಿಂದಾಗ್ಗೆ ತೊಂದರೆಗಳುಂಟಾದವು. ೧೫೮೩ ರಿಂದ ೧೬೩೦ ರ ವರೆಗೆ ಇಕ್ಕೇರಿಯಲ್ಲಿ ವೆಂಕಟಪ್ಪ ನಾಯಕನು ಆಳಿದನು. ಮುಸಲ್ಮಾನರು ಈ ಕಾಲಕ್ಕೆ ರಾಯರನ್ನು ಮುರಿಬಡಿಯಲು, ಘಂಟೇಂದ್ರನು ಅವರಿಗೆ ಶರಣಾಗತನಾಗಿ ತನ್ನ ರಾಜ್ಯವನ್ನು ಉಳಿಸಿಕೊಂಡನು. ಮುಂದೆ ಇಕ್ಕೇರಿಯವರೊಡನೆ ಯುದ್ಧ ಸಮಯ ಬರಲು ಇಕ್ಕೇರಿಯ ಬಲವನ್ನು ಖಂಡಿಸಿದನು. ಸ್ವಾದಿಯ ಅರಸನಾದ ರಘುನಾಥರಾಜ (೧೬೧೮-೧೬೩೮) ಈತನ ಸ್ನೇಹವನ್ನು ಬಳಸಿ ಬನವಸೆಯ ಮಧುಕೇಶ್ವರನ ತೇರಿನ ಉತ್ಸವವನ್ನು ಮಾಡಿದನು. ತರೀಕೆರೆಯ ಬೇಡರ ಅರಸನಾದ ಹನುಮನಾಯಕನನ್ನು ಪ್ರತಿಭಟಿಸಿದನು. ಆದರೆ ಇವನಿಗೆ ಮುಂದೆ ಬುದ್ಧಿ ಭ್ರಮಣವಾಗಿ ಅದರಲ್ಲಿಯೇ ತೀರಿಕೊಂಡನು.

ಈತನಿಗೆ ಮೌನ ಘಂಟೆಯ ಒಡೆಯರ್ ಮತ್ತು ಸಿದ್ದಪ್ಪ ಒಡೆಯರ್ ಎಂಬ ಮಕ್ಕಳಿದ್ದು ಅವರಲ್ಲಿ ಮೌನ ಘಂಟೆಯ ಒಡೆಯರ್ ಈತನು ಪಟ್ಟವೇರಿದನು.

೪ ನೇ ಘಂಟೇಂದ್ರ ಅಥವಾ ಮೌನ ಘಂಟೆಯ ಒಡೆಯರ್:—(೧೭ನೇ ಶತಮಾನದ ಮಧ್ಯ) ಮುಮ್ಮಡಿ ಘಂಟೇಂದ್ರನು ತೀರಿಕೊಂಡ ಕೂಡಲೇ ಕೆಳದಿಯ ರಾಜನು ಇವರ ರಾಜ್ಯವನ್ನು ಅಭಿಯೋಗಿಸಿ ಕೋಟೆ ಕೊತ್ತಳಗಳನ್ನು ಕೆಡಹಿದನು. ಆಗ ಈ ಉಭಯಬಂಧುಗಳು ವಿಜಾಪುರಕ್ಕೆ ಹೋಗಿ ದೂರು ಹೇಳಲು ಬಾದಶಹನು ಅವರನ್ನು ಕೆಣಕಬಾರದೆಂದು ಕೆಳದಿಯ ಅರಸನಿಗೆ ಅಪ್ಪಣೆ ಕೊಡಲು ಅವನು ಅದಕ್ಕೆ ಒಪ್ಪಿ ಅವರ ರಾಜ್ಯವನ್ನು ಅವರಿಗೆ ತಿರುಗಿ ಕೊಟ್ಟನು. ಈ ಬಂಧುಗಳಲ್ಲಿ ಸಿದ್ದಪ್ಪ ಒಡೆಯರ್ ಈತನು

ಪರಾಕ್ರಮಿಯಾಗಿದ್ದನು. ಕೆಳದಿಯ ಅರಸನಾದ ವೀರಭದ್ರನಾಯಕನು (೧೬೨೯-೧೬೪೫) ಇವನನ್ನು ಘಾತಿಸಬೇಕೆಂದು ಕೃತ್ರಿಮಾಂಜರಗಳನ್ನು ಕೊಟ್ಟು ಕಳುಹಲು ಅವುಗಳನ್ನು ತೊಟ್ಟ ಕೂಡಲೆ ಅವನು ಮೃತಿಯನ್ನು ಹೊಂದಿದನಂತೆ.

ಈ ಸಿದ್ದಪ್ಪನಾಯಕರ ಹೆಂಡತಿಯು ಸಿದ್ದಾಪುರ ಪಟ್ಟಣವನ್ನು ಕಟ್ಟಿಸಿ, ಅಲ್ಲಿ ಸಿದ್ಧಿವಿನಾಯಕನನ್ನು ಸ್ಥಾಪಿಸಿದಳು.

ಬೀಳಗಿ ರಾಜರಿಗೆ ಸಂಬಂಧಿಸಿ ಈ ಬಗ್ಗೆ ಕೆಳದಿ ನೃಪವಿಜಯದಲ್ಲಿ ಉಲ್ಲೇಖಿಸಲ್ಪಟ್ಟಿರುವದು ಏನೆಂದರೆ:— ಕೆಳದಿಯ ಅರಸನಾದ ವೀರಭದ್ರನಾಯಕನು ಪಟ್ಟವಾಗುವ ಪೂರ್ವದಲ್ಲಿ ಅವನ ಮನೆತನದಲ್ಲಿ ಅನೇಕ ಅಂತಸ್ಥ ಕಲಹಗಳು ಉನ್ನತವಾದವು. ಅವನ ತಂಗಿಯ ಮಗನಾದ ಸದಾಶಿವನಾಯಕನು ತಾನೇ ಅರಸನೆಂದು ಬಾಧ್ಯತೆಯನ್ನು ತೋರಿಸ ಹತ್ತಿದನು. ಆಗ ಸ್ವಾದಿ ಮತ್ತು ಬೀಳಗಿಯ ರಾಜರು ಸದಾಶಿವನಾಯಕನ ಪಕ್ಷವನ್ನು ಹಿಡಿದು ಯುದ್ಧಕ್ಕೆ ಸಿದ್ಧರಾದರು. ಆದರೆ ವೀರಭದ್ರನಾಯಕನು ಅವರನ್ನು ಸೋಲಿಸಲು ಅವರು ವಿಜಾಪುರ ಬಾದಶಹರ ಕಡೆಗೆ ಓಡಿಹೋದರು. ಮತ್ತು ಸದಾಶಿವನಾಯಕನ ಮಗನನ್ನು ಪಟ್ಟಕ್ಕೆ ಕೂಡ್ರಿಸಬೇಕೆಂದು ಸಂಧಾನ ಹಚ್ಚಿದರು. ಆದರೆ ವೀರಭದ್ರನಾಯಕನು ತನ್ನ ರಾಯಭಾರಿಗಳನ್ನು ವಿಜಾಪುರಕ್ಕೆ ಕಳುಹಲು ಬಾದಶಹನ ಮಧ್ಯಸ್ಥಿಕೆಯಿಂದ ಸ್ವಾದಿ ಮತ್ತು ಬೀಳಗಿ ಅರಸರ ರಾಜ್ಯಗಳು ತಿರುಗಿ ಕೊಡಲ್ಪಟ್ಟವು ಮತ್ತು ಪರಸ್ಪರ ಮಿತ್ರತ್ವವು ಉಳಿಯಬೇಕೆಂದು ಘಂಟೆ ಒಡೆಯರ ಪುತ್ರಿ ಘಂಟೆಯಮ್ಮನನ್ನು ಸದಾಶಿವಯ್ಯನ ಪುತ್ರನಾದ ಆಳಿಯಭದ್ರಯ್ಯನಿಗೆ ಕೊಟ್ಟು ಸಂಭ್ರಮದಿಂದ ವಿವಾಹವನ್ನು ಬೆಳಿಸಿದರು.

ಮೌನ ಘಂಟೆಯ ಒಡೆಯನು ಬಾಳು ಹೊಡೆ ಎಂಬ ಪಟ್ಟಣವನ್ನು ಕಟ್ಟಿಸಿದನು.

ಈ ಕಾಲದಲ್ಲಿ ಮುಸಲ್ಮಾನರ ದಂಡು ಕೆಳದೀ ರಾಜ್ಯವನ್ನು ಅಭಿಯೋಗಿಸಲು ಅವರೊಡನೆ ಮೌನ ಘಂಟೆಯ ಒಡೆಯನು ಸಂಧಿಯನ್ನು ಮಾಡಿಕೊಂಡನು. ಈ ಕಾಲಕ್ಕೆ ರಾಜ್ಯವನ್ನು ಅಭಿಯೋಗಿಸಿದವನು ರಣದುಲ್ಲಾಖಾನನೇ ಇರುತ್ತಾನೆ (೧೬೩೮). ಮುಂದೆ ಘಂಟೆಯ ಒಡೆಯನು ತೀರಿಕೊಂಡನು.

ಘಂಟೆಮ್ಮಾಜಿ:- - ಮೌನ ಘಂಟೆಯ ಒಡೆಯನು ತೀರಿಕೊಂಡ ಕೂಡಲೆ ಕೆಳದಿಯ ಶಿವಪ್ಪ ನಾಯಕನು (೧೬೪೬-೧೬೬೧) ಬಿಳಗಿಯ ಸಂಸ್ಥಾನವನ್ನೆಲ್ಲ ತನ್ನ ಅಧೀನದಲ್ಲಿ ತೆಗೆದುಕೊಂಡನು. ಆದರೆ ಮೌನ ಘಂಟೆಯ ಒಡೆಯನ ಮಗಳು ಘಂಟೆಮ್ಮನು ಶಿವಪ್ಪ ನಾಯಕನಿಗೆ ಶರಣು ಹೋಗದೆ ಬಾಳಗೋಡೆಯಲ್ಲಿ ಇದ್ದುಕೊಂಡು ಅವನನ್ನು "ವಿಧಿ ದೇವತೆ" ಯಂತೆ ಅತ್ಯಂತ ಶೂರತನದಿಂದ ಪ್ರತಿಭಟಿಸಿದಳು. ಇದೇ ಕಾಲದಲ್ಲಿ ಶಿವಪ್ಪ ನಾಯಕನು ಸ್ವಾದಿಯ ರಾಜ್ಯದ ಮೇಲೆ ದಾಳಿ ಮಾಡಿ ಅವನ ರಾಜ್ಯವನ್ನು ಕಸೆದುಕೊಂಡನು. ಆದರೆ ಸ್ವಾದಿಯ ಅರಸನು ಅವನಿಗೆ ಶರಣಾಗತನಾಗಲು ಶಿವಪ್ಪ ನಾಯಕನು ಅವನ ರಾಜ್ಯವನ್ನು ತಿರುಗಿ ಅವನಿಗೆ ಕೊಟ್ಟನೆಂದು ಕೆಳದಿನೃಪವಿಜಯದಲ್ಲಿ ಹೇಳಿದೆ. ಇದೇ ಕಾಲಕ್ಕೆಯೇ ಅವನು ಬೀಳಗಿಯ ರಾಜ್ಯವನ್ನು ಸಹ ಕಸೆದುಕೊಂಡಿರಬಹುದು. ಆದರೆ ಘಂಟೆಮ್ಮನು ಶೂರತನದಿಂದ ಬೀಳಗಿ ರಾಜ್ಯವನ್ನು ಉಳಿಸಿಕೊಂಡಳು. ಮುಂದೆ ಕೇದಗೆ ಎಂಬಲ್ಲಿ ಇದ್ದ ತನ್ನ ಮಗನನ್ನು ಕರೆತಂದು ಅವನಿಗೆ ಶಿವಪ್ಪ ನಾಯಕನೆಂಬ ಹೆಸರಿಟ್ಟು ಅವನಿಗೆ ಪಟ್ಟಗಟ್ಟಿದಳು.

ಶಿವಪ್ಪ ನಾಯಕನು:— ಈತನು ವಿದ್ಯಾಬುದ್ಧಿಯಲ್ಲಿ ಚತುರನಾಗಿದ್ದನು. ಅವನ ಹೆಂಡಂದಿರು ಶಾಂತಮ್ಮ ಮತ್ತು ಗೌರಮ್ಮಾಜಿ ಎಂಬವರು ಇದ್ದರು. ಶಿವಪ್ಪ ನಾಯಕನು ತೀರಿಕೊಂಡ ಬಳಿಕ ಶಾಂತಮ್ಮಾಜಿಯು ಒಬ್ಬ ದತ್ತಕ ಮಗನನ್ನು ತೆಗೆದುಕೊಂಡಳು. ಅವನಿಗೆ ಇಮ್ಮಡಿ ಶಿವಪ್ಪನೆಂಬ ಹೆಸರು ಇದ್ದು ಅವನು ಮುಂದೆ ಪಟ್ಟವೇರಿದನು.

ಇಮ್ಮಡಿ ಶಿವಪ್ಪ ನಾಯಕ:— (೧೭ ನೇ ಶತಮಾನದ ಅಂತ್ಯ ಭಾಗ) ಇಮ್ಮಡಿ ಶಿವಪ್ಪ ನಾಯಕನು ಬೀಳಗಿಯನ್ನು ಕಟ್ಟಿಸಿ ವಿಸ್ತಾರಮಾಡಿದನು. ಮತ್ತು ರಾಜಮಂದಿರವನ್ನು ನಿರ್ಮಿಸಿದನು. ಇವನ ಕಾಲದ ಒಂದು ತಾಮ್ರಪಟವು ನಮಗೆ ಉಪಲಬ್ಧವಿದೆ. ಇದರ ಶಕೆ ವರ್ಷ ೧೫೯೪ ಎಂದರೆ ಕ್ರಿಸ್ತ ಶಕ ೧೬೭೨ ಇದ್ದು, ದಾನ ಕೊಟ್ಟ ದಿವಸವು ಕಾರ್ತಿಕ ಶುದ್ಧ ೫ ಸೋಮವಾರವಿದೆ. ಇದರಲ್ಲಿ ಹೇಳಿದ್ದು ಏನೆಂದರೆ:— ಶ್ರೀಮತು ಸಜ್ಜನ ಶುದ್ಧ ಶಿವಾಚಾರ ಸಂಪನ್ನರಾದ ದ್ಯಾವಾ ಪೃಥ್ವಿವ್ಯಾಪಾ ಮಹಾಮತ್ತಿನ ಒಳಗಾದ ಪುರಾಣ ಸಿದ್ಧ ನಂಜದೇವರ ಶಿಷ್ಯರು ಚನ್ನವೀರೇಂದ್ರ ದೇವರಿಗೆ ಶ್ರೀಮನ್ಮಹಾಪ್ರಭು ಬೀಳಗೆ ಘಂಟೇ ಒಡೆಯರ್ ಪೌತ್ರರಾದ ಶಿವಪ್ಪ ನಾಯಕರ ಪುತ್ರರಾದ ಇಮ್ಮಡಿ ಶಿವಪ್ಪ ನಾಯಕರು ಧಾರಾ

ಪೂರ್ವಕ ಕೊಟ್ಟ ಸ್ವಾಸ್ತಿ .....ನಮಗೆ ಪುತ್ರ ಪೌತ್ರಾಭಿವೃದ್ಧಿಯಾಗಬೇಕೆಂದು ನಿಮ್ಮ ಮಠದಲ್ಲಿ ಆದ ಶಿವಾರ್ಚನೆ ಲಿಂಗಾರ್ಚನೆಯ ಬಗ್ಗೆ ಬಿಟ್ಟುಕೊಟ್ಟ ಸ್ವಾಸ್ತಿ" ಎಂದು ಇವೆ. ಈ ಸ್ವಾಸ್ತಿಯು "ಸರಗೌಂಡನ ಕೊಪ್ಪದಲ್ಲಿ" ಯದು. ಕೆಳಗೆ ಸಹಿಯು ಶ್ರೀಸದಾಶಿವ ಎಂದು ಬರೆಯಲ್ಪಟ್ಟಿದೆ. ಇದು ಕೇವಲ ವೀರಶೈವ ಪರವಾಗಿದೆಂಬದು ಸ್ಪಷ್ಟವು.

ಇಮ್ಮಡಿ ಶಿವಪ್ಪ ನಾಯಕನು ಗೋಪಾಲಪುರದಲ್ಲಿ ತೀರಿಕೊಂಡನು. ಇವನ ತರುವಾಯ ಇವನ ಹೆಂಡತಿ ಶಾಂತವ್ವಾಜಿಯು ಜಂಬೂರು ಶಾಂತಯ್ಯನ ಕಿರಿಯ ಪುತ್ರನನ್ನು ದತ್ತಕ ತೆಗೆದುಕೊಂಡು ಅವನಿಗೆ ಸೋಮಶೇಖರನೆಂದು ಹೆಸರಿಟ್ಟು ಪಟ್ಟಗಟ್ಟಿದಳು.

೧ ನೇ ಸೋಮಶೇಖರ:— (೧೭ ನೇ ಶತಮಾನದ ಅಂತ್ಯಭಾಗ) ಕೆಳದಿಯ ರಾಜ್ಯದಲ್ಲಿ ಇವನಿಗೆ ಸಮಕಾಲೀನಳಾಗಿ ಚನ್ನವ್ವಾಜಿಯು (೧೬೭೨-೧೬೯೭) ಆಳುತ್ತಿದ್ದಳು. ಅವಳೊಡನೆ ಸಖ್ಯವನ್ನು ಬೆಳಸಿ ಸೋಮಶೇಖರನು ಬೀಳಗಿಯಲ್ಲಿ ಇರುತ್ತಿದ್ದನು. ಇವನಿಗೆ ವೆಂಕಟರಾಯನು ತನ್ನ ಮಗಳನ್ನು ಕೊಟ್ಟು ಲಗ್ನಮಾಡಿದನು. ಸೋಮಶೇಖರನು ಐಸೂರಿನಲ್ಲಿಯೇ ಇದ್ದುಕೊಂಡು ರಾಜ್ಯವಾಳುತ್ತಿದ್ದನು. ವೆಂಕಟರಾಯನ ವೈರಿಗಳೊಡನೆ ಕಾದಾಡಿ ಅವರನ್ನು ಜಯಿಸಿದನು. ಇವನೊಡನೆ ಇವನ ಹೆಂಡತಿ ವೀರವ್ವಾಜಿಯು ಸಹಗಮನ ಮಾಡಿದಳು.

೨ ನೇ ಸೋಮಶೇಖರ:— (೧೮ ನೇ ಶತಮಾನದ ಆರಂಭ) ೧ ನೇ ಸೋಮಶೇಖರನಿಗೆ ಸೋಮಶೇಖರನೆಂಬ ಮಗನಿದ್ದನು. ಇವನೇ ಮುಂದೆ ಪಟ್ಟವೇರಿದನು. ಈತನು ಅತ್ಯಂತ ಶಿವಭಕ್ತಿಯಿಂದ ಇರುತ್ತಿದ್ದನು. ಇವನು ವಿದ್ಯೆಯಲ್ಲಿ ಬಲ್ಲಿದನಾದನು. ಅವನಿಗೆ ನೀಲಮಾಂಬಿಕೆ ಮತ್ತು ಚನ್ನಮಾಂಬೆ ಎಂದು ಇಬ್ಬರು ಪತ್ನಿಗಳಿದ್ದರು.

ಈತನಿಗೆ ವೀರವ್ವಾಜಿ ಮತ್ತು ಚನ್ನವ್ವಾಜಿ ಎಂದು ಇಬ್ಬರು ಹೆಣ್ಣುಮಕ್ಕಳು ಹುಟ್ಟಿದರು.

ಮುಂದೆ ಐಸೂರಿನ ವೀರಭದ್ರನ ವರದಿಂದ ಅರಸನಿಗೆ ನೀಲವ್ವನಿಂದ ಭದ್ರಪ್ಪನೆಂಬ ಮಗನು ಹುಟ್ಟಿದನು. ಆ ಮೇಲೆ ಬಸವೇಂದ್ರನೆಂಬ ಇನ್ನೊಬ್ಬ ಮಗನು ಹುಟ್ಟಿದನು.

ಅರಸನು ತೀರಿಕೊಂಡ ತರುವಾಯ ಭದ್ರಪ್ಪನು ಪಟ್ಟವೇರಿದನು.

ಭದ್ರಪ್ಪ:— ಈತನು ಐಸೂರಲ್ಲಿಯೇ ವಾಸವಾಗಿರುತ್ತಿದ್ದನು. ಮತ್ತು ಅಲ್ಲಿಯ ವೀರೇಶನ ದೇವಾಲಯದ ಜೀರ್ಣೋದ್ಧಾರಮಾಡಿದನು. ಭುವನಗಿರಿಯಲ್ಲಿ ಉಮಾಂಬಿಕೆಯ ದೇವಾಲಯವನ್ನು ವಿಸ್ತಾರಗೊಳಿಸಿದನು.

ಭದ್ರಪ್ಪನ ತರುವಾಯ ಬಸವ ಭೂಮೀಶನಿಗೆ ಪಟ್ಟಗಟ್ಟಿದರು. ಈ ಪಟ್ಟವು ಅಂಗೀರಸ ಸಂವತ್ಸರ ಶ್ರಾವಣ ಶುದ್ಧ ಸಪ್ತಮಿ ಮಂಗಳವಾರವಾಯಿತೆಂದು ಕವಿಯು ಬರೆದಿರುವನು. ಅವನಿಗೆ ದೇವಮ್ಮಾಜಿ ಮತ್ತು ವೀರಮ್ಮಾಜಿ ಎಂಬ ಇಬ್ಬರು ಹೆಂಡಿರು. ಇವನು ಸುಖದಿಂದ ರಾಜ್ಯವಾಳಿದನು. ಅಂಗಿರಸ ಸಂವತ್ಸರವು ೧೮ ನೇ ಶತಮಾನದಲ್ಲಿ ೧೭೫೨ ಇರುತ್ತದೆ.

೧ ನೇ ಸೋಮಶೇಖರನಿಂದ ಹಿಡಿದು ಮುಂದಿನ ಅರಸರುಗಳನ್ನು ಕವಿಯು ಬಹಳವಾಗಿ ವರ್ಣಿಸಿರುವನು. ಆದ್ದರಿಂದ ಈ ಕಾವ್ಯವನ್ನು ಬರೆಯುವ ಕಾಲದಲ್ಲಿ ಇವರು ಜೀವಂತ ಇದ್ದರೆಂಬ ಅನುಮಾನವು ಉಂಟಾಗುತ್ತದೆ.

ಬಸವಭೂಮೀಶನು ಆಳುವ ಕಾಲದಲ್ಲಿ ಮೈಸೂರಿನಲ್ಲಿ ಹೈದರಅಲ್ಲಿ, ಟೀಪೂ ಸುಲ್ತಾನರು ರಾಜ್ಯವಾಳುತ್ತಿದ್ದರು. ಹೈದರಲ್ಲಿಯು ಬಿದನೂರು ರಾಜ್ಯವನ್ನು ೧೭೬೩ ರಲ್ಲಿ ಹಾಳುಮಾಡಿದನು- ಮುಂದೆ ಟೀಪುಸುಲ್ತಾನನು ಉತ್ತರಕರ್ನಾಟಕವನ್ನು ಅಭಿಯೋಗಿಸಿ ಇಲ್ಲಿಯ ಪಾಳೆಯಗಾರರ ಸೀಮೆಗಳನ್ನು ಹಿಡಿದುಕೊಳ್ಳಹತ್ತಿದನು. ಇದೇ ಕಾಲಕ್ಕೆ ಸ್ವಾದಿಯ ಅರಸರು ತಮ್ಮ ರಾಜ್ಯವನ್ನು ಬಿಟ್ಟುಕೊಟ್ಟು ಗೋವೆಯ ಪೋರ್ತುಗೀಜರ ಆಶ್ರಯವನ್ನು ಹೊಂದಿದರು. ಇದೇ ಕಾಲಕ್ಕೆಯೇ ಬೀಳಗಿ ರಾಜ್ಯವೂ ಟೀಪುವಿನ ರಾಜ್ಯಕ್ಕೆ ಸೇರಿಸಲ್ಪಟ್ಟಿರಬಹುದು. ಟೀಪುವಿನ ಕಾಲದಲ್ಲಿ ಶಾಂತವೀರ ರಾಜರೆಂಬವರು ಆಳುತ್ತಿದ್ದರೆಂದು ತಿಳಿಯುತ್ತಿದೆ.

೧೭೯೯ ರಲ್ಲಿ ಟೀಪುವು ಮರಣಹೊಂದಿದ ನಂತರ ಅವನ ರಾಜ್ಯದಲ್ಲಿ ಕೆಲಭಾಗವನ್ನು ಮೈಸೂರು ಅರಸರಿಗೆ ಕೊಟ್ಟು ಉಳಿದ ಭಾಗವನ್ನು ಇಂಗ್ಲಿಷರು ನಿಜಾಮ ಮತ್ತು ಪೇಶ್ವೆಯವರು ಹಂಚಿಕೊಂಡರು. ಆಗ ಕಾರವಾರ ಜಿಲ್ಹೆಯು ಮದ್ರಾಸಾಧಿಪತ್ಯಕ್ಕೆ ಸೇರಿಸಲ್ಪಟ್ಟಿತು. ಮತ್ತು ಉತ್ತರಕರ್ನಾಟಕದ ಉಳಿದ ಭಾಗವು ಪೇಶ್ವೆಯವರಿಗೆ ಕೊಡಲ್ಪಟ್ಟಿತು. ಅಂದಿನಿಂದ ಬೀಳಗಿಯು ಇಂಗ್ಲಿಷರ ಆಧಿಪತ್ಯದಲ್ಲಿಯೇ ಉಳಿದಿದೆ.

ಮುಂದೆ ಶಾಂತವೀರ ರಾಜರು ಇಂಗ್ಲಿಷರಿಗೆ ಕೇಳಿಕೊಂಡಿದ್ದರ ಮೇಲೆ ಆಗಿನ ಅಧಿಕಾರಿಗಳು ಅವರ ಜೀವನಕ್ಕೆ ತಕ್ಕಷ್ಟು ಭೂಮಿಕಾಣಿಕೆಯನ್ನೂ ವಿಶ್ರಾಂತಿ ಧನವನ್ನೂ ಕೊಡುತ್ತ ಬಂದರು. ಅವರ ಮಕ್ಕಳು ಸೋಮಶೇಖರ ಒಡೆಯರವರಿಗೆ ಅದರಲ್ಲಿ ಅರ್ಧವಾಯಿತಂತೆ. ಅನಂತರ ಅವರ ಮಕ್ಕಳು ಬಸವಲಿಂಗರಾಜರಿಗೆ ಅದರಲ್ಲಿ ಪುನಃ ಅರ್ಧವಾಯಿತಂತೆ! ಇವರೂ ಶಿವಾಧೀನರಾದಮೇಲೆ ಇವರ ಪತ್ನಿಗಳು ಸೌಭದ್ರಮ್ಮಾಜಿಯವರು ಬಹುಕಾಲ ಬೀಳಗಿಯಲ್ಲಿದ್ದು ಕೆಲವು ವರ್ಷಗಳ ಹಿಂದೆ ತೀರಿಕೊಂಡರು.

ಅರಸರ ಮೂಲಪುರುಷರು:— ಈ ಪ್ರಕಾರ ಬೀಳಗಿಯ ರಾಜ್ಯದ ವಿವರಣೆಯು ಇದ್ದು ಇದರ ಆರಂಭ ಕಾಲವು ಯಾವುದು ಎಂಬದನ್ನು ತಿಳಿಯಲು ಸ್ಪಷ್ಟ ಆಧಾರಗಳು ದೊರೆಯುವದಿಲ್ಲ. ಇವರ ಮೊದಲನೇ ಶಿಲಾಶಾಸನವು ಈಗ ದೊರೆತಿದ್ದು ೨ ನೇ ಘಂಟೇಂದ್ರನ ಕಾಲಕ್ಕಿನದು ಇದೆ. ಅದು ಕ್ರಿಸ್ತ ಶಕೆ ೧೫೯೩ ನೇ ಇಸ್ವಿಯು ಇರುತ್ತದೆ. ಬೀಳಗಿ ಅರಸರ ವಂಶಾವಳಿ ಮತ್ತು ಈ ಶಿಲಾಲೇಖ ಇವುಗಳು ಆಂಡಣ್ಣ ಅರಸನನ್ನು ಮೊದಲಿಗೆ ವಿವರಿಸುತ್ತವೆ. ಇವನೇ ಈ ರಾಜರ ಮೂಲ ಪುರುಷನಾಗಿರಬಹುದು. ಇವನು ೨ ನೇ ಘಂಟೇಂದ್ರನಿಂದ ಹಿಂದೆ ೧೦ ನೇ ತಲೆಯವನು. ಅಂದರೆ ೧೫೯೩ ರ ಹಿಂದೆ ೨೫೦-೩೦೦ ವರ್ಷಗಳ ಪೂರ್ವದಲ್ಲಿ ಈ ಅರಸರ ಆಳಿಕೆಯು ಈ ಭಾಗದಲ್ಲಿ ಪ್ರಾರಂಭವಾಗಿರಬಹುದು. ಅಂದರೆ ೧೩೦೦-೧೩೫೦ ಈ ವರ್ಷಗಳ ಮಧ್ಯಕಾಲದಲ್ಲಿ ಈ ರಾಜ್ಯವು ಉತ್ಪನ್ನವಾಗಿರಬಹುದೆಂದು ಊಹಿಸಬಹುದಾಗಿದೆ.

ಆರಂಭದಲ್ಲಿ ಇವರು ಜೈನಮತಾವಲಂಬಿಗಳಾಗಿದ್ದರು. ಆಗ ಅವರು ಅನೇಕ ಜಿನ ದೇವಾಲಯಗಳನ್ನು ಕಟ್ಟಿಸಿದರು.

ಭಟ್ಟಾಕಲಂಕ:— ಬಿಳಗಿ ರಾಜರು ಅನೇಕ ಜೈನಪಂಡಿತರನ್ನು ತಮ್ಮ ಆಶ್ರಯದಲ್ಲಿ ಇಟ್ಟುಕೊಂಡಿದ್ದು ಕಂಡುಬರುತ್ತದೆ. ನಾವು ಮೇಲೆ ಕಾಣಿಸಿದ ಶಿಲಾಲೇಖದಲ್ಲಿ "ಶ್ರೀಭಟ್ಟಾಕಲಂಕ ದೇವರುಗಳು ಬರಿಸಿ ಸಂಪೂರ್ಣಂ ಮಾಡಿಸಿದ ಜಿನಶಾಸನ"ವೆಂದು ಹೇಳಲ್ಪಟ್ಟಿದೆ. ಇವರ ಭಾಷೆಯು ಅತ್ಯಂತ ಸೊಗಸಾದದ್ದು. ಇದರಲ್ಲಿ ಹೇಳಿರುವದೇನೆಂದರೆ:—

ವರಸಂಸ್ಕೃತ ಕರ್ಣಾಟಕ
ವೆರಡರೊಳಂ ಗದ್ಯ ಪದ್ಯವಾಙ್ಮಯ ಮಾಲಾ

ವಿರಚಿತೆಯಿಂದೀ ಶಾಸನ
ವೆರಡಂ ಭಟ್ಟಾಕಲಂಕ ಯತಿ ಬರೆಯಿಸಿದಂ

ಎಂದು ಬರೆದದೆ.

ವ್ಯಾಕರಣಕಾರನಾದ ಭಟ್ಟಾಕಲಂಕನು ತನ್ನ ಶಬ್ದಾನುಶಾಸನವನ್ನು ಮುಗಿಸಿದ ಕಾಲವು ಶಾಲಿವಾಹನ ಶಕೆ ೧೫೨೬ ಎಂದರೆ ಕ್ರಿ॥ ಶಕ ೧೬೦೪ ಇದ್ದು ಈ ಭಟ್ಟಾಕಲಂಕನೂ ಬೀಳಗೆಯ ಭಟ್ಟಾಕಲಂಕನೂ ಒಂದೇ ಎಂದು ಊಹಿಸಲು ಸಬಲ ಕಾರಣಗಳಿವೆ. ಬೀಳಗೆಯ ಭಟ್ಟಾಕಲಂಕನ ವರ್ಣನೆಯು ಶಿಲಾಶಾಸನದಲ್ಲಿ ಬಂದಿರುವದು ಏನೆಂದರೆ:— ರತ್ನತ್ರಯ ಚೈತ್ಯಾಲಯಕ್ಕೆ ನಾವು ನಮ್ಮ ವಂಶಪರಂಪರೆಯ ಪರಮ ಗುರುಗಳಾದ ಸ್ವಸ್ತಿ ಶ್ರೀಮದ್ರಾಜಗುರು ಗುರು ಮಂಡಲಾಚಾರ್ಯ ಮಹಾವಾದಿ ವಾದೀಶ್ವರರಾಯ ವಾದಿಪಿತಾಮಹ ಸಕಲ ವಿದ್ವಜ್ಜನ ಚಕ್ರವರ್ತಿಗಳುಂ ಬಲ್ಲಾಳರಾಯ ಜೀವರಕ್ಷಾ ಪಾಲಕರುಂ ದೇಶಿಕ ಗಣಾಗ್ರಗಣ್ಯರಪ್ಪ ಶ್ರೀಮತ್ ಭಟ್ಟಾಕಲಂಕ ದೇವರುಗಳ ಉಪದೇಶದಿಂದ ರಂಗಮಂಟಪ ಮುನಿವಾಸ ಚಂದ್ರಶಾಲೆ ಮೊದಲಾದ ಕೆಲಸಗಳನ್ನು ಶಿಲಾಮಯವಾಗಿ ಗೆಯಿಸಿ ಸಂಪೂರ್ಣ ಮಾಡಿ" ಎಂದು ಇದೆ. ಈ ಒಕ್ಕಣೆಗೂ ಕರ್ನಾಟಕ ಶಬ್ದಾನುಶಾಸನದಲ್ಲಿ ಕಂಡು ಬರುವ ಒಕ್ಕಣೆಗೂ ಸಾಮ್ಯತೆಯು ಇದೆ. ಈ ಒಕ್ಕಣೆಯು § ಏನೆಂದರೆ:—

ಮೂಲಸಂಘ ದೇಶೀಯಗಣ ಪುಸ್ತಕಗಚ್ಛ ಕುಂಡಕುಂದಾನ್ವಯ ವಿರಾಜಮಾನ ಶ್ರೀಮದ್ರಾಯರಾಜ ಗುರುಮಂಡಲಾಚಾರ್ಯ ಮಹಾವಾದ ವಾದೀಶ್ವರರಾಯ ವಾದಿ ಪಿತಾಮಹ ಸಕಲ ವಿದ್ವಜ್ಜನ ಚಕ್ರವರ್ತಿ ಬಲ್ಲಾಳರಾಯ ಜೀವ ರಕ್ಷಾ ಪಾಲಕೇತ್ಯಾದ್ಯನೇಕಾನ್ವರ್ಥ ಬಿರುದಾವಲೀ ವಿರಾಜಮಾನ ಶ್ರೀಮಚ್ಚಾರುಕೀರ್ತಿ ಪಂಡಿತ ದೇವಾಚಾರ್ಯ ಶಿಷ್ಯಪರಂಪರಾಯಾತ ಶ್ರೀ ಸಂಗೀತಪುರಸಿಂಹಾಸನ ಪಟ್ಟಾಚಾರ್ಯ ಶ್ರೀಮದಕಲಂಕದೇವರು".

ಈ ಅಕಲಂಕನೇ "ಶ್ವೈತಪುರ (ಬೀಳಗಿ) ದಲ್ಲಿ ತಿಮ್ಮಭೂಪಾಲ ನರಸಭೂಪಾಲರೆಂಬ ಶಿಷ್ಯರಿಗೆ ಪರಮ ಧರ್ಮರಹಸ್ಯೋಪದೇಶ" ವನ್ನು ಮಾಡಿದರು. ಅಕಳಂಕನ ಶಿಷ್ಯ ವಿಜಯಕೀರ್ತಿ, ಇವನ ಶಿಷ್ಯ ಅಕಳಂಕದೇವ, ಇವನ ಶಿಷ್ಯ ಭಟ್ಟಾಕಳಂಕ. ಇವನು ಉದ್ದಾಮ ಪಂಡಿತ

§ ಕೆಳಗಿನ ವಿಷಯಗಳು ಕವಿಚರಿತೆಯಿಂದ ಎತ್ತಿ ಬರೆಯಲ್ಪಟ್ಟಿವೆ.

ನಾಗಿ ವಿಜಯನಗರದ ಶ್ರೀರಂಗರಾಜನ ಕಾಲದಲ್ಲಿದ್ದಂತೆ ಪದ್ಯಗಳು ಇವೆ. ಇವನು ಆಗಮ, ತರ್ಕ, ನಾಟಕ ಮಹಾಲಂಕಾರ ಮುಂತಾದ ಶಾಸ್ತ್ರಗಳಲ್ಲಿ ಬಹು ಬಲ್ಲಿದವನಾಗಿದ್ದನು.

ದೇವಚಂದ್ರನ ರಾಜಾವಳೀ ಕಥೆಯಲ್ಲಿ (೧೮೩೮) ಇವನ ವಿಷಯ ವಾಗಿ ಹೇಳಿದುದು ಏನೆಂದರೆ:— "ಸುಧಾಪುರದೊಳ್ ಭಟ್ಟಾಕಲಂಕ ಸ್ವಾಮಿಗಳ್ ಶಾಸ್ತ್ರಂಗಳೆಲ್ಲಮಂ ಕಲ್ತು ಮಹಾ ವಿದ್ವಾಂಸರೆನಿಸಿ ಪ್ರಾಕೃತ ಸಂಸ್ಕೃತ ಮಾಗಧೀ ಮೊದಲಾದ ಷಡ್ಭಾಷಾ ಕವಿಗಳಾಗಿ ಕರ್ಣಾಟಕ ವ್ಯಾಕರಣಮಂ ರಚಿಸಿ ಕೀರ್ತಿಯಂ ಪಡೆದರ್" ಎಂದು ಹೇಳಿದೆ.

ಸುಧಾಪುರವೆಂದರೆ ಸ್ವಾದಿ ಮತ್ತು ಶ್ವೇತಪುರವೆಂದರೆ ಬೀಳಗಿ. ರಾಜಾ ವಳೀ ಕಥೆಯಲ್ಲಿ ಸುಧಾಪುರವೆಂದು ಬರೆದದ್ದರಿಂದ ಈತನು ಸ್ವಾದಿಯಲ್ಲಿಯೂ ವಾಸಿಸುತ್ತಿರಬಹುದು. ಒಟ್ಟಿನಿಂದ ನೋಡಿದರೆ ಕರ್ನಾಟಕ ವ್ಯಾಕರಣ ವನ್ನು ರಚಿಸಿದ ಭಟ್ಟಾಕಲಂಕನು ಬೀಳಗಿಯಲ್ಲಿದ್ದನೆಂದು ಹೇಳಲಿಕ್ಕೆ ಸಬಲ ಆಧಾರಗಳಿವೆ.

ಅಗ್ಗಳ:—ಚಂದ್ರಪ್ರಭ ಪುರಾಣವನ್ನು ಬರೆದ ಅಗ್ಗಳನು ಭಟ್ಟಾಕಳಂ ಕನ ಗುರುಪರಂಪರಾಗತ ಪೂರ್ವಜನೆಂದು ಈ ಶಿಲಾಲೇಖದಲ್ಲಿ ಹೇಳಲ್ಪ ಟ್ಟಿದೆ. ಆದರೆ ಅಗ್ಗಳನು ತನ್ನ ಕಾವ್ಯವನ್ನು ಇಂಗುಳೇಶ್ವರದಲ್ಲಿ ಬರೆದನೆಂದು ಚಂದ್ರಪ್ರಭ ಪುರಾಣದಲ್ಲಿ ಹೇಳಿದೆ. ಅವನಾದರೂ ಮೂಲಸಂಘ ದೇಶೀ ಯಗಣ ಗಚ್ಛ ಕೊಂಡ ಕುಂದ ವಂಶದವನು. ಭಟ್ಟಾಕಳಂಕನ ವಂಶ ವಾದರೂ ಇದೇ ಇದೆ. ಅಂದರೆ ಆರಂಭದಲ್ಲಿ ಬಾಗೇವಾಡಿಯ ಹತ್ತರ ವಿರುವ ಇಂಗುಳೇಶ್ವರದಲ್ಲಿ ಇವರು ಮೊದಲು ಇದ್ದು ಅಲ್ಲಿ ಅಗ್ಗಳನು ೧೧೮೯ ರಲ್ಲಿ ತನ್ನ ಕಾವ್ಯವನ್ನು ಬರೆದನು. ಮುಂದೆ ಅವನ ಶಿಷ್ಯರು ಇಂಗುಳೇಶ್ವರವನ್ನು ಬಿಟ್ಟು ಸಂಗೀತಪುರ, ಭಟಕಳ, ಬೀಳಗಿ ಹೀಗೆ ಬೇರೆ ಬೇರೆ ಸ್ಥಳಗಳಲ್ಲಿ ಬಂದಿರಬಹುದೆಂದು ತೋರುತ್ತದೆ.

ಇತರ ಮತಗಳಿಗೆ ಸಹಾಯ:— ಈ ರಾಜರು ಮೊದಲು ಜೈನರಿ ದ್ದರೂ ಇತರ ಮತಗಳನ್ನು ದ್ವೇಷಿಸುತ್ತಿದ್ದಿಲ್ಲ. ಮುಂದೆ ಈ ಮನೆತನದಲ್ಲಿ ಕೆಲವರು ಶಿವದೇವಾಲಯಗಳನ್ನು ಸಹ ಸ್ಥಾಪಿಸಿದ್ದು ಕಂಡುಬರುತ್ತದೆ. ವೀರಪ್ಪ ಒಡೆಯರವರ ಹೆಂಡತಿ ವೀರಮ್ಮಾಂಬೆಯು ವಿರೂಪಾಕ್ಷ ದೇವಾಲ ಯವನ್ನು ಕಟ್ಟಿಸಿದ್ದರ ಉಲ್ಲೇಖವು ದೊರೆಯುತ್ತದೆ.

ವಿಜಯನಗರದ ಸಂಬಂಧಃ— ಆದರೆ ಮುಂದೆ ವಿಜಯನಗರದ ಕೃಷ್ಣರಾಜನ ಕಾಲದಲ್ಲಿ ಬೀಳಗಿ ಮತ್ತು ಸ್ವಾದಿಯ ಅರಸರಿಗೂ ವಿಜಯನಗರದ ಅರಸರಿಗೂ ವಿಶೇಷ ಸಂಬಂಧವು ಬೆಳೆದಂತೆ ತೋರುತ್ತದೆ. ಸ್ವಾದಿಯ ಅರಸಪ್ಪನಾಯಕನು ಕೃಷ್ಣರಾಜನ ಸಹೋದರಿಯ ಮಗನು. ಮತ್ತು ಬೀಳಗಿಯ ೨ ನೇ ಘಂಟೇಂದ್ರನ ಹೆಂಡತಿಯಾದ ವೀರಮಾಂಬೆಯು ಈ ಸ್ವಾದಿಯ ಅರಸನ ಮಗಳಾಗಿದ್ದಳು.

ಪೆನುಕೊಂಡೆಯ ಸಂಬಂಧಃ— ವಿಜಯನಗರದ ರಾಜ್ಯವು ಹಾಳಾಗಲು ಪೆನುಕೊಂಡೆಯಲ್ಲಿ ಅವರ ವಂಶಜರು ಆಳ ಹತ್ತಿದರು. ಇವರಲ್ಲಿ ಈ ವೆಂಕಟರಾಯನು ಅತ್ಯಂತ ಪ್ರತಾಪಶಾಲಿಯು. ಈತನು ತನ್ನ ಮಗಳಾದ ರಾಮಾದೇವಿಯನ್ನು ೨ ನೇ ಘಂಟೇಂದ್ರನಿಗೆ ಕೊಟ್ಟು ಲಗ್ನ ಮಾಡಿ ಕೊಟ್ಟಿದ್ದನು. ಹಿಂದಿನ ಸಂಬಂಧವನ್ನು ನೋಡಿದರೆ ಇದು ಅಶಕ್ಯವೆಂದು ಅನಿಸುವದಿಲ್ಲ. ಇದರಿಂದ ಬೀಳಗಿಯ ಮನೆತನದವರಿಗೂ ಪೆನುಕೊಂಡೆಯ ರಾಜರಿಗೂ ವಿಶೇಷ ಸ್ನೇಹ ಸಂಬಂಧವು ಬೆಳೆದು ಪೆನುಕೊಂಡೆಯ ರಾಜರ ಯುದ್ಧಗಳಲ್ಲಿ ಬೀಳಗಿಯ ರಾಜರು ಮೇಲಿಂದ ಮೇಲೆ ಹೋಗಿ ಸಹಾಯ ಮಾಡುವರು. ವೆಂಕಟರಾಯನು ಪೆನುಕೊಂಡೆಯನ್ನು ಬಿಟ್ಟು ಚಂದ್ರಗುತ್ತಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿದ ಬಳಿಕ ಕೆಲವು ಕಾಲ ಪೆನುಕೊಂಡೆಯ ಸೀಮೆಯನ್ನು ಆಳಲಿಕ್ಕೆ ಘಂಟೇಂದ್ರನಿಗೆ ಕೊಟ್ಟಂತೆ ತೋರುತ್ತದೆ. ಭಟ್ಟಾಕಳಂಕನು ಈ ಕಾಲಕ್ಕೆಯೇ ಈ ಉಭಯ ರಾಜಮನೆತನಗಳಲ್ಲಿ ಪ್ರಸಿದ್ಧಿಗೆ ಬಂದನು.

ವೀರಶೈವ ಮತಾವಲಂಬಿಗಳುಃ— ೨ ನೇ ಘಂಟೇಂದ್ರನ ತರುವಾಯ ಬಂದ ರಾಜರು ವೀರಶೈವ ಮತಾನುಯಾಯಿಗಳಾದರು. ಆಗ ವೀರಶೈವ ಮತಾಧಿಕಾರಿಗಳಿಗೆ ಅವರು ಅನೇಕ ಉಂಬಳಿಗಳನ್ನು ಹಾಕಿಕೊಟ್ಟರು. ಸ್ವಾದಿಯ ಅರಸರೂ ಕೂಡ ಇದೇ ಕಾಲದಲ್ಲಿಯೇ ವೀರಶೈವ ಮತವನ್ನು ಸ್ವೀಕರಿಸಿದಂತೆ ತೋರುತ್ತದೆ.

ಕೆಳದಿ ರಾಜರ ಸಂಬಂಧಃ— ಮುಂದೆ ಬರಬರುತ್ತ ಬೀಳಗಿಯ ರಾಜರಿಗೂ ಕೆಳದಿಯ ರಾಜರಿಗೂ ಯಾವಾಗಲೂ ತೊಂದರೆಗಳು ಉದ್ಭವಿಸುತ್ತಿದ್ದವು. ಕೆಳದಿಯ ರಾಜರು ಬಲಾಢ್ಯರಾದ್ದರಿಂದ ಅವರಿಗೆ ಅಂಜಿ ಈ ರಾಜರು ನಡಿಯಬೇಕಾಗುತ್ತಿತ್ತು. ಕೆಲವು ಸಾರೆ ಇವರು ಸ್ವಾದಿಯವರನ್ನು ಕೂಡಿಕೊಂಡು ಕೆಳದಿಯ ವಿರುದ್ಧ ಕೈ ಎತ್ತಲು ತಮ್ಮ ಸೀಮೆ

ಯನ್ನು ಸಹ ಕಳೆದುಕೊಳ್ಳಬೇಕಾಯಿತು. ಆದರೂ ಮುಂದೆ ಅವರೊಡನೆ ಮಿತ್ರತ್ವವನ್ನೂ ಆಪ್ತತ್ವವನ್ನೂ ಬೆಳಸಿಕೊಂಡು ತಮ್ಮನ್ನು ಕಾಯ್ದು ಕೊಂಡರು.

ವ್ಯಾಪಾರಾಭಿವೃದ್ಧಿಃ— ಬೀಳಗಿ ಮತ್ತು ಅದರ ಸಮೀಪವಿರುವ ಗೆರಸಪ್ಪೆ ಈ ರಾಜ್ಯಗಳು ಮೆಣಸಿನ ವ್ಯಾಪಾರಕ್ಕೆ ಅತ್ಯಂತ ಪ್ರಸಿದ್ಧ ವಾಗಿದ್ದವು. ಮತ್ತು ಪರದೇಶಗಳ ಕೂಡ ಇದರ ದೊಡ್ಡ ವ್ಯಾಪಾರವು ನಡೆಯುತ್ತಿತ್ತು. ಬೀಳಗಿ ರಾಜರು ಅತ್ಯಂತ ಇಕ್ಕಟ್ಟಿನ ಸ್ಥಳವಾದ ಐಸೂ ರನ್ನು ಬಿಟ್ಟು ವ್ಯಾಪಾರಕ್ಕೆ ಹೆಚ್ಚು ಅನುಕೂಲವಾದ ಬೀಳಗಿಯಲ್ಲಿ ಇರ ಹತ್ತಿದರು. ಮತ್ತು ಅದನ್ನೇ ತಮ್ಮ ಮುಖ್ಯ ರಾಜಧಾನಿಯನ್ನಾಗಿ ಮಾಡಿದರು.

ಬೀಳಗಿಯ ವಿಸ್ತಾರಃ— ಬೀಳಗಿಯು ಮೊದಲಿಗೆ ಬಹು ವಿಸ್ತಾರ ವಾದ ಪಟ್ಟಣವಾಗಿತ್ತು. ಪೂರ್ವ ಪಶ್ಚಿಮ ಮತ್ತು ಉತ್ತರ ದಕ್ಷಿಣ ೫ ಮೈಲಿನ ವರೆಗೂ ಅದು ವ್ಯಾಪಿಸಿತ್ತು. ಆದರೆ ಈಗ ಇದರ ಬಹು ಭಾಗವು ಕಾಡಿನಲ್ಲಿ ಸೇರಿಹೋಗಿದೆ. ರಾಜ್ಯದ ಒಟ್ಟು ಉತ್ಪನ್ನವು ೪ ಲಕ್ಷ ವರಾಹವಾಗಿತ್ತೆಂದು ತಿಳಿಯುತ್ತಿದೆ.

ದೇವಾಲಯಗಳುಃ— ಈಗ ಈ ಪಟ್ಟಣದಲ್ಲಿ ರತ್ನತ್ರಯ ಬಸದಿ ಮತ್ತು ವಿರೂಪಾಕ್ಷದೇವಾಲಯ ಇವುಗಳು ಇವೆ. ಇವುಗಳ ಕಟ್ಟಡಗಳು ಸುಂದರವಾಗಿವೆ. ಆದರೆ ಇವುಗಳು ಈಗ ಕಳಚಿಬೀಳುವ ಸ್ಥಿತಿಯಲ್ಲಿ ಇರುತ್ತವೆ. ಲಕ್ಷ್ಮೀಕಾಂತನ ಶಿಲಾಮಯ ದೇವಾಲಯವೂ ಒಂದು ಇದೆ.

ಅರಮನೆಃ— ಅರಸರ ಅರಮನೆಯು ಪುರಾತನಕಾಲಿನದು ನಾಶ ವಾಗಿದೆ. ಆದರೆ ಈಗಿನ ಅರಮನೆಯು ಹೊಸದಾಗಿ ಕಟ್ಟಲ್ಪಟ್ಟಿದೆ. ಹಿಂದಿನ ಅರಮನೆಯ ಹಿಂಭಾಗಕ್ಕೆ ಗೋಲು ಬಾವಿ ಎಂಬ ಬಾವಿಯು ಇದ್ದು ಇದು ಅತ್ಯಂತ ಮನೋಹರವಾಗಿದೆ. ರಾಜರು ಇದನ್ನು ವಿಲಾಸಾರ್ಥ ವಾಗಿ ಕಟ್ಟಿಸಿದಂತೆ ಕಾಣುತ್ತದೆ.

ವೀರಶೈವ ಮಠಗಳುಃ— ಇಲ್ಲಿ ವೀರಶೈವ ಮಠಗಳು ಕೆಲವು ಇವೆ. ಹಿರೇಮಠವು ನಿರ್ನಾಮವಾಗಿದೆ. ಸೋಮನದೀ ತಟಾಕದಲ್ಲಿ ಕಲ್ಯಾಣದೇವರ ಮಠವೆಂದು ಇದೆ. ಇದರಲ್ಲಿ ಶಿಲಾಮಯ ಶಿವಲಿಂಗ ದೇವಾಲಯವಿದೆ. ಅಲ್ಲದೆ ಕಾನನಮಠ ಚಿಲುಮೆಮಠ, ಮಹಂತಿನಮಠ, ಎಂದು ಮಠಗಳಿದ್ದು ಅವೆಲ್ಲವೂ ಈಗ ಜೀರ್ಣಾವಸ್ಥೆಯಲ್ಲಿ ಇವೆ.

# ಬೀಳಗಿ ಅರಸರ ವಂಶಾವಳಿ.

ಆಂಡಣ್ಣ

ಪಾರಿಶ್ವಭೂಪ

ಮುಂಡಣ್ಣ ಒಡೆಯರ್



೪ ನೇ ಘಂಟೇಂದ್ರ ಅಥವಾ ಸಿದ್ದಪ್ಪ ಒಡೆಯರ್
ಮೌನ ಘಂಟೇಂದ್ರ+ಚೆನ್ನಮದೇವಿ

ಘಂಟೆಮ್ಮ

ಶಿವಪ್ಪನಾಯಕ+(೧) ಶಾಂತಮ್ಮ (೨) ಗೌರಮ್ಮಾಜಿ

ಇಮ್ಮಡಿ ಶಿವಪ್ಪ+ಶಾಂತಮ್ಮಾಜಿ

೧ ನೇ ಸೋಮಶೇಖರ + (೧) ವೀರಮ್ಮಾಜಿ
+(೨) ಚನ್ನಮಲ್ಲಾಂಬೆ

೨ ನೇ ಸೋಮಶೇಖರ+(೧) ನೀಲಮಾಂಬಿಕೆ (೨) ಚನ್ನಮಾಂಬೆ

ಭದ್ರಪ್ಪ

ಬಸವೇಂದ್ರ+(೧) ದೇವಮ್ಮಾಜಿ
(೨) ವೀರಮ್ಮಾಜಿ

ಶಾಂತವೀರ ರಾಜ

ಸೋಮಶೇಖರ+ಚನ್ನಮ್ಮಾಜಿ

ಬಸಲಿಂಗರಾಜ+ಸೌಭದ್ರಮ್ಮಾಜಿ

ಸೋಮಶೇಖರರಾಜ

# ಉಪಕಾರವೇ.

ತರುವಿನೊಳು ಹಣ್ಣಾಗಿ, ಹೂವಿನೊಳು ಕಂಪಾಗಿ,
ತೊರೆಗಡಲು ಮುಗಿಲಿನೊಳು ಹರಿವ ಜೀವನವಾಗಿ,
ಧರೆಗೆಲ್ಲ ಬೆಳಕಾಗಿ ಬಿಸಿಗದಿರನೊಳು, ಸೊದೆಯು
ಹೊಸಲಾಗಿ ತಿಂಗಳಿನೊಳು ॥
ಎರಲೊಳಗೆ ಜೀವಿಗಳ ಜೀವಾಳವೇಯಾಗಿ
ತಿರೆಯೊಳಗೆ ತರತರದ ಬೆಳೆಯಾಗಿ ಮತ್ತೆ ದೇ-
ವರ ದೇವನೇ ನೀನೆ, ನೀನೆಯಾ ದೇವಸಹ
ನಿಷ್ಕಾಮ ಉಪಕಾರವೇ ॥೧॥

ಇಳೆಯೊಳಗದೆಲ್ಲಿಯೋ ಮರುಕ ದಯೆಯೌದಾರ್ಯ-
ಗಳ ರೂಪಿನಿಂದೆ ಕೆಲ ಸಾಧುಸಜ್ಜನ ಕರುಣಿ-
ಗಳ ಬಳಸಿ ಸುಳಿವ ನೀನೆಲ್ಲೆಡೆಯೊಳೆಲ್ಲರೊಳ
ಗೇಕೆ ತಲೆದೋರಲಿಲ್ಲ ?
ತಲೆದೋರಿ, ಹೊಳೆಯುತ್ತ ದುಃಖದಾರಿದ್ರ್ಯಗಳ
ನಿಲದಂತೆ ಯೋಡಿಸುತ ಸತ್ಯ ಸುಖಶಾಂತಿಯಿಂ
ದಿಳೆಯಿದನು ತುಂಬುತಲಿ ಬೆಳಗುತಿಹ ಸಗ್ಗವ
ನ್ನೇಕೆ ನೀನೆಸಗಲಿಲ್ಲ ? ॥ ೨ ॥

ಬೆಲೆಗೇಡಿ ಬಲಸ್ವಾರ್ಥಿ ವಂಚಕರು ನಿನ್ನ ಬಹು
ಬೆಲೆ ಬಾಳ್ವ ಹೆಸರಿನಿಂ ಸ್ವಾರ್ಥಸಾಧಸುತಕಟ !
ತಿಳಿಯದಿಹ ಬಡಜನರ ಗೋಣ್ಮುರಿದು ಕೊಲೆಮಾಡು
ತಿರುವದನು ನೋಡು ! ನೋಡು !!
ಕೊಲುವದನು ನೋಡಿ ನೀ ಬಲುಮೆಯಿಂದವರೆದೆಯು
ನೊಳಪೊಕ್ಕು, ಹೊರದೂಡಿ ಹೊಲಸುತನವನು ಬಗೆಯು
ತೊಳೆಯುತ್ತ ಸರಿಗೊಳಿಸಿಯುವರನ್ನು ಸಾಧುಸ
ಜ್ಜನರನ್ನು ಮಾಡು ! ಮಾಡು !! ॥ ೩ ॥

ಬೆರೆಯುತಲಿ ಈ ಸೃಷ್ಟಿ ರೋಮರೋಮಗಳಲ್ಲಿ
ಹರಿಯುತಿಹ ಉಪಕಾರವೇ, ನೀನು ಕರುಣದಿಂ

ಹರಿದೊಡನೆಯೆಲ್ಲ ಜನವುನಗಳಲಿ, ನಿನ್ನ ಹೆ
ಚ್ಚಳಕೇನು ಕುಂದಿರುವದು ?
ಕರಿಗತ್ತಲೆಯು ಜಗದೊಳಿರಲು ಬೆಳಕಿಗೆ ಬೆಲೆಯು
ಬರುವದೆಂಬೀ ನುಡಿಗೆ ಯಾಸರವ ನೀಯದಿರು !
ತ್ವರೆ ಮಾಡು ! ತ್ವರೆ ಮಾಡು !! ಹರಹು ನಿನ್ನಯ ಮಿರುಗು
ತಿಹ ಬೆಳಕನೀಜಗದೊಳು ॥ ೪ ॥

ಬೇಡುವೊಡೆ ಬೇಡು ನಿಷ್ಕಾಮೋಪಕಾರಿಯನು,
ಕಾಡುವೊಡೆ ಕಾಡು ನಿಷ್ಕಾಮೋಪಕಾರಿಯನು,
ಕೂಡುವೊಡೆ ಕೂಡು ನಿಷ್ಕಾಮೋಪಕಾರಿಯನು,
ಹಗಲಿರುಳು ಸೇವೆಯನ್ನು ।
ಮಾಡುವೊಡೆ ಮಾಡು ನಿಷ್ಕಾಮೋಪಕಾರಿಯದು,
ಹಾಡುವೊಡೆ ಹಾಡು ನಿಷ್ಕಾಮೋಪಕಾರಿಯನು,
ಮೂಡುವೊಡೆ ಮೂಡು ನಿಷ್ಕಾಮೋಪಕಾರಿಯಲಿ,
ಆ ದೇವನಲ್ಲಿ ಮನವೇ ॥ ೫ ॥

**ಈಶ್ವರ ಸಣಕಲ್ಲ.**



# ಗುರು.



ಅಷ್ಟ ದಿಕ್ಪಾಲಕರು ಜಗತ್ತನ್ನು ರಕ್ಷಿಸುವಂತೆಯೂ ಅಷ್ಟಾಂಗಯೋಗಗಳು ಮನುಷ್ಯನನ್ನು ಹೆಚ್ಚಿನ ಅವಸ್ಥೆಗೊಯ್ಯುವಂತೆಯೂ ಅಷ್ಟಾವರಣಗಳು ವೀರಶೈವರನ್ನು ರಕ್ಷಿಸುವಂಥವುಗಳಾಗಿವೆ. ಅಷ್ಟಾವರಣಗಳಲ್ಲಿ ಗುರು ಎಂಬದು ಮೊದಲನೆಯದು. ಗುರುವೆಂದರಾರು? ನಮಗೆ ಗೊತ್ತಿಲ್ಲದ್ದನ್ನು ತಿಳಿಸಿಕೊಡುವವನೇ ಗುರುವು. ನಮಗೆ ಗೊತ್ತಿಲ್ಲದ ವಿಷಯಗಳು ಅನೇಕವಿರುತ್ತವೆ. ಆ ವಿಷಯಗಳು ಲೌಕಿಕ ಪಾರಮಾರ್ಥಿಕಗಳೆಂದು ಎರಡು ವಿಧವಾಗಿವೆ. ವಿದ್ಯೆ, ಕಲಾಕೌಶಲ್ಯ, ಶಸ್ತ್ರಾಸ್ತ್ರ, ಶಾಸ್ತ್ರ ಮುಂತಾದವುಗಳಿಗೆ ಲೌಕಿಕ ವಿಷಯಗಳೆನ್ನುತ್ತಾರೆ. ಅವುಗಳನ್ನು ತಿಳಿಸಿಕೊಡುವವರಿಗೆ ಲೌಕಿಕ ಗುರುಗಳೆನ್ನಬಹುದು. ಆದರೆ ಪಾರಮಾರ್ಥಿಕ ಜ್ಞಾನಕ್ಕೆ ಅನುಕೂಲವಾದ ಕ್ರಿಯೆಯನ್ನು ಅಂದರೆ ಜೀವಾಳ ಪರಮಾತ್ಮರ ಸಂಬಂಧದ ಕ್ರಿಯೆಯನ್ನು ಹೇಳಿಕೊಡುವವರಿಗೆ ಪಾರಮಾರ್ಥಿಕ ಗುರುಗಳೆನ್ನಬಹುದು. ಆದರೆ ಅಷ್ಟಾವರಣವಿಯುಕ್ತರಾದ ವೀರಶೈವ ಗುರುಗಳು ಲೌಕಿಕ ಗುರುಗಳಲ್ಲ; ಪಾರಮಾರ್ಥಿಕ ಗುರುಗಳು. ಅಂದರೆ ಪಾರಮಾರ್ಥಿಕ ಜ್ಞಾನ ಸಂಪಾದನೆಗೆ ಅತ್ಯಾವಶ್ಯಕವಾದ ಲೌಕಿಕ ಹಾಗೂ ಧಾರ್ಮಿಕ ಕ್ರಿಯಾಚಾರಗಳನ್ನು ಹೇಳಿಕೊಡತಕ್ಕವರು. ಇದನ್ನೇ ಸ್ಪಷ್ಟವಾಗಿ ಹೇಳಬೇಕಾದರೆ ಪರಶಿವನಲ್ಲಿ ಬೆರೆಯಲು ಅವಶ್ಯಕವಾದ ಇಷ್ಟಲಿಂಗವನ್ನು ಕಲ್ಪಿಸಿಕೊಟ್ಟು ಆದರ ಅರ್ಚನಾವಿಧಿಯನ್ನು ಹೇಳಿಕೊಟ್ಟವರು; ನಿತ್ಯದ ವ್ಯವಹಾರಕ್ಕೆ ಅನುಕೂಲವಾಗುವ ನೀತಿನಡಾವಳಿಗಳನ್ನು ತಿಳಿಸಿಕೊಟ್ಟವರು; ಮತ್ತು ಮೋಕ್ಷದ ಹಾದಿಗೆ ಹಚ್ಚಿಕೊಟ್ಟವರು.

ಕೆಲವರು ನಾವೇ ಗುರುಗಳೆಂದು ತಮ್ಮ ಬೆನ್ನು ತಾವೇ ಚಪ್ಪರಿಸಿಕೊಳ್ಳುವರು. ಅವರ ಪೂರ್ವಜರೇನೋ ತಮ್ಮ ಗುರುತ್ವದ ಬಲದಿಂದ ಗುರುಗಳೆನಿಸಿಕೊಂಡಿರಬಹುದು. ಅವರಂತೆ ಆಚರಣೆಯಿಲ್ಲದಲೆ ತಾವೂ ಗುರುಗಳೆಂದರೆ ಯಾರೂ ಒಪ್ಪರು. ನಾವು ಗುರುಗಳೆಂದು ಆತ್ಮಪೌರುಷ ಮಾಡಿಕೊಳ್ಳುವವರು ಗುರುಗಳಾಗಲಾರರು. ಆತ್ಮಪೌರುಷತ್ವವು ಗುರುತ್ವಕ್ಕೆ ಕುಂದಕವು. ಪೂರ್ವ ಮಹಾಜ್ಞಾನಿಗಳು ಪೂಜ್ಯರಾದುದರಿಂದ ಅವರ ಹೆಸರನ್ನೇ ಮುಂದು ಮಾಡಿ ತಾವೂ ಪೂಜ್ಯರೆನ್ನುವದು ಅಪಹಾ

ಸ್ಯಕರವು. ದೇಸಾಯಿ ದೇಶಪಾಂಡೆಯವರ ಮನೆತನಗಳಲ್ಲಿ ಕೆಲವರು ಈಗ ಅಶನಕ್ಕೆ ಅಭಾವವಾಗಿ ಕುಳಿತಿದ್ದಾರೆ. ಅಂಥವರಿಗೆ ದೇಸಾಯಿ ದೇಶಪಾಂಡೆಯೆಂದು ಈಗಲೂ ಕರೆಯುವದು ಕೇವಲ ಹಾಸ್ಯವಲ್ಲದೆ ಗೌರವವಲ್ಲ. ಅನ್ಯರ ಟೀಕೆಯನ್ನೂ ಮಹಾನುಭಾವರ ನಿಂದೆಯನ್ನೂ ಮಾಡಿ ಸ್ವಾರ್ಥಸಾಧಿಸಿಕೊಳ್ಳಬೇಕೆಂದು ಹೆಣಗಾಡುವ ಈಗಿನ ಕೆಲವು ಗುರುಗಳನ್ನು ಪೂಜ್ಯರೆಂದು ಭಾವಿಸುವದನುಚಿತವು. ಸ್ವಾರ್ಥಪರಾಯಣತೆಯು ಗುರುತ್ವಕ್ಕೆ ಕಲಂಕವು. ಗುರುವೆಂಬುವವನು ಮಠ ದೊರೆಯಲಿ ದೊರೆಯದಿರಲಿ, ಜನರು ಆರಿಸಲಿ ಆರಿಸದಿರಲಿ, ತನ್ನನ್ನು ತಾನೆಂದಿಗೂ ಗುರುವೆಂದು ಹೊಗಳಿಕೊಳ್ಳದೆ ತನ್ನ ಪ್ರಭಾವವನ್ನೆಲ್ಲ ಹರಡಿಬಿಡುವನು. ಅಂಥವನೇ ನಿಜವಾದ ಗುರುವು. ಲಿಂಗಾಂಗ ಕ್ರಿಯಾಚಾರಗಳನ್ನಾಚರಿಸಿ ಅನುಭವ ಪಡೆದು ಅನ್ಯರಿಗೆ ಅವುಗಳನ್ನು ತಿಳುಹಿಸಿಕೊಡುವ ಸಾಮರ್ಥ್ಯವುಳ್ಳವನಾವನಿದ್ದರೂ ಆತನಿಗೆ ಗುರುವೆನ್ನಬೇಕು.

ಅಷ್ಟಾವರಣಗಳಲ್ಲಿ ಬಾಹ್ಯಾಷ್ಟಾವರಣಗಳೆಂದೂ ಅಂತರಷ್ಟಾವರಣಗಳೆಂದೂ ಕಲ್ಪಿಸಿರುವರು. ಅದಕ್ಕನುಸರಿಸಿ ಗುರುಗಳೂ ಸಹ ಮೂರ್ತಿಮಂತಗುರುಗಳೆಂದೂ ನಿರಂಜನಗುರುಗಳೆಂದೂ ಎರಡು ಪ್ರಕಾರದವರಿದ್ದಾರೆಂದಂತಾಯಿತು. ಮೂರ್ತಿಮಂತ ಗುರುವು ಶಿಷ್ಯನಿಗೆ ಲಿಂಗಪೂಜಾವಿಧಿಯನ್ನು ತಿಳಿಸಿಕೊಟ್ಟು ಮೋಕ್ಷಮಾರ್ಗವನ್ನು ತೋರಿಸಿಕೊಡುತ್ತಾನೆ. ನಮ್ಮ ಅರಿವೇ ಆಂತರಿಕ ಗುರುವು. ಆ ಗುರುವಿನಿಂದಲೇ ಸುಜ್ಞಾನವು ಜಾಗ್ರತವಾಗಿ ಮೋಕ್ಷವು ಲಭಿಸುವದು. ನಮ್ಮ ಬಾಹ್ಯ ಕ್ರಿಯೆಗಳಿಗೆ ಮಾರ್ಗದರ್ಶಕನು ಬೇಕಾದಂತೆ ಆಂತರಿಕ ಕ್ರಿಯೆಗಳಿಗೂ ಮಾರ್ಗದರ್ಶಿಯು ಬೇಕು. ನಾವು ಹಾದಿ ತಪ್ಪಿ ಅಡವಿ ಬಿದ್ದಾಗ ಯಾವನಾದರೊಬ್ಬನು ಬಂದು ಹಾದಿ ಹಿಡಿಸಿದರೆ ನಮಗೆಷ್ಟು ಆನಂದವಾಗುತ್ತದೆಯೋ ಅದಕ್ಕಿಂತ ಅಧಿಕತರವಾದ ಆನಂದವು ಅಧರ್ಮ ಅನೀತಿಗೊಳಗಾಗಿ ನಾನಾ ಕಷ್ಟದಿಂದ ಬಳಲುವಂಥ ಜನರನ್ನು ಸನ್ಮಾರ್ಗಕ್ಕೆ ತಂದುಹಚ್ಚುವ ಗುರುವನ್ನು ನೋಡಿ ಆಗುತ್ತದೆ. ಅದೇ ಮೇರೆಗೆ ನಮ್ಮ ಇಂದ್ರಿಯಗಳ ದಬ್ಬಾಳಿಕೆಯನ್ನು ತಡೆದು ಸುಜ್ಞಾನಾನಂದವನ್ನು ಬೀರುವ ಅರಿವೆಂಬ ಗುರುವನ್ನು ಪಡೆದುಕೊಂಡವರ ಸಮಾನ ಸುಖಿಗಳಾರು ? ಮೂರ್ತಿಮಂತ ಗುರುವು ಬಹಿರಿಂದ್ರಿಯ ವ್ಯಾಪಾರಗಳನ್ನು ನಿವಾರಿಸಲಿಕ್ಕೆ ಸಹಾಯಕನು. ನಿರಂಜನ ಗುರುವು ಅಂತರಿಂದ್ರಿಯ ನಿಗ್ರಹಕ್ಕೆ ಅನುಕೂಲನು. ಇವೆ

ರಡೂ ಪ್ರಕಾರದ ಗುರುಗಳು ವೀರಶೈವರಿಗೆ ಅತ್ಯಾವಶ್ಯಕವಾಗಿದ್ದಾರೆ. ಒಬ್ಬರನ್ನು ಬಿಟ್ಟರೆ ಆಟ ಸಾಗುವದಿಲ್ಲ. ಮನುಷ್ಯನು ಕೇವಲ ಬಹಿ ರಿಂದ್ರಿಯ ವ್ಯಾಪಾರಗಳನ್ನು ನಿಲ್ಲಿಸಿ ಅಂತರಿಂದ್ರಿಯಗಳನ್ನು ಯಥೇಚ್ಛ ವಾಗಿ ನಡೆಯಗೊಟ್ಟರೆ ಆತನಲ್ಲಿ ಆಧ್ಯಾತ್ಮಿಕತೆಯುಳಿಯುವದಿಲ್ಲ. ಅದ ರಂತೆಯೇ ಅಂತರಿಂದ್ರಿಯ ವ್ಯಾಪಾರವನ್ನು ನಿಗ್ರಹಿಸಿ ಬಾಹ್ಯದಲ್ಲಿ ದುರು ಳವೇದಾಂತಿಗಳಂತೆ ಆಚರಿಸಿದರೂ ಮನುಷ್ಯನು ಪತಿತನಾಗುತ್ತಾನೆ

ಗುರುಗಳನ್ನು ಕಾರ್ಯಭೇದದಿಂದ ಶಿಕ್ಷಾಗುರು, ದೀಕ್ಷಾಗುರು, ಮೋಕ್ಷಾಗುರುಗಳೆಂದು ಮೂರು ವಿಧವಾಗಿ ವಿಂಗಡಿಸಿರುವರು. ಶಿಕ್ಷಾ ಗುರುಗಳೆಂದರೆ ಶಿಷ್ಯನು ಅಪರಾಧಮಾಡಿದರೆ ಅವನನ್ನು ಶಿಕ್ಷಿಸಿ ಒಳ್ಳೆ ಹಾದಿಗೆ ಹಚ್ಚುವವರು. ದೀಕ್ಷಾಗುರುಗಳೆಂದರೆ ನಿಷ್ಠೆಯುಳ್ಳ ಭಕ್ತನಿಗೆ ದೀಕ್ಷಾವಿಧಿಯನ್ನು ಮಾಡಿ ಲಿಂಗಪೂಜಾವಿಧಾನವನ್ನು ಹೇಳಿಕೊಡುವವರು. ಮೋಕ್ಷಾಗುರುಗಳೆಂದರೆ ಲಿಂಗದಲ್ಲಿ ಏಕಾಗ್ರ ದೃಷ್ಟಿಯನ್ನಿರಿಸಿ ಚಿದಾನಂ ದವನ್ನು ಪಡೆದುಕೊಳ್ಳಬೇಕೆಂದು ಬೋಧಿಸುವವರು. ಅಶಿಕ್ಷಿತರಿಗೆ ಶಿಕ್ಷಾ ಗುರುವೂ ಸುಶಿಕ್ಷಿತರಿಗೆ ದೀಕ್ಷಾಗುರುವೂ ಪಾವನಾತ್ಮರಿಗೆ ಮೋಕ್ಷಾಗು ರುವೂ ಅವಶ್ಯವಾಗಿ ಬೇಕು. ಈ ಪ್ರಕಾರ ತರಗತಿಗಳಿರುವವು. ಗುರುವು ಶಿಷ್ಯನ ಆಣವಮಲ ಮಾಯಾಮಲ ಕಾರ್ಮಿಕ ಮಲಗಳೆಂಬ ಮಲತ್ರ ಯಂಗಳನ್ನು ವೇಧಾ ಮಂತ್ರ ಕ್ರಿಯೆಗಳೆಂಬ ತ್ರಿವಿಧ ದೀಕ್ಷೆಗಳಿಂದ ನಾಶ ಮಾಡಿ ಇಷ್ಟ ಪ್ರಾಣ ಭಾವಗಳೆಂಬ ಲಿಂಗತ್ರಯಗಳನ್ನು ಸ್ಥೂಲ ಸೂಕ್ಷ್ಮ ಕಾರಣ ದೇಹಗಳಿಗೆ ಧಾರಣ ಮಾಡುವನೆಂದು ನಮ್ಮ ವೀರಶೈವ ಧರ್ಮ ಗ್ರಂಥಗಳು ಸಾರುತ್ತವಷ್ಟೇ. ಇದನ್ನೇ ನಾವು ಸ್ವಲ್ಪ ವಿಸ್ತಾರವಾಗಿ ಪ್ರತಿಪಾದಿಸುವಾ.

ಆಣವ ಮಲವೆಂದರೇನು ? ಆಣವ ಮಲವೆಂದರೆ ಅಣುಗಳಿಂದ ಅರ್ಥಾತ್ ಪಂಚಭೂತಾದಿಗಳಿಂದ ಕೂಡಿದ ಮಲವು. ಸ್ನಾನ ಮುಂತಾ ದ್ದನ್ನು ಮಾಡದೆ ಇರುವದರಿಂದ ಮೈಯೆಲ್ಲ ಹೊಲಸು ನಾರಬಹುದು. ಉಡುವ ಹಾಗೂ ಹೊದೆಯುವ ಬಟ್ಟೆಗಳನ್ನು ಒಗೆಯದ್ದರಿಂದ ಮಲಿನ ವಾಗಬಹುದು. ಅನ್ನಪಾನಾದಿಗಳಲ್ಲಿ ಶುಚಿಯಿಲ್ಲದ ಮೂಲಕ ಮಾಲಿ ನ್ಯವು ಘಟಿಸಬಹುದು. ದಂತಧಾವನ ಮಾಡದ್ದರಿಂದ ಬಾಯಿಯು ಹೊಲಸು ನಾರಬಹುದು. ಒಟ್ಟಿನ ಮೇಲೆ ಆರೋಗ್ಯದ ನೇಮಗಳನ್ನನು ಸರಿಸದೆ ಇರುವದರಿಂದುಂಟಾದ ಹೊಲಸಿಗೆ ಆಣವ ಮಲವೆಂದೆನ್ನಬೇಕು.

ಗುರುವು ಈ ಆಣವಮಲವನ್ನು ಆರೋಗ್ಯದ ನಿಯಮಗಳನ್ನು ಹೇಳಿಕೊಟ್ಟು ಹೋಗಲಾಡಿಸುತ್ತಾನೆ. ಇದಕ್ಕೆಯೇ ವೇಧಾದೀಕ್ಷೆ ಎನ್ನುವರು. ಭಕ್ತನಿಗೆ ಶುಚಿಯಾಗಿರೆಂದು ತಿಳಿಸುವದೇ ವೇಧಾದೀಕ್ಷೆಯು. ಇಷ್ಟಲಿಂಗವನ್ನು ಸ್ಥೂಲತನುವಿಗೆ ಧರಿಸಿ ಅದರ ಉಪಾಸನಾರ್ಥವಾಗಿ ಮಡಿವೈಲಿಗೆಯ ನಿರ್ಬಂಧನೆಗಳನ್ನು ಪಾಲಿಸಲೆಂದೇ ಹಾಗೆ ಮಾಡಿದನು. ಮನುಷ್ಯನು ಬೇಕಾದಷ್ಟು ಮಡಿ ಹುಡಿ ಪೂಜೆ ಪುನಸ್ಕಾರ ಸ್ನಾನ ಶಿವಾರ್ಚನೆಗಳನ್ನು ಬಹಿರಂಗದಲ್ಲಿ ಆಚರಿಸಬಹುದು. ಆದರೆ ಆತನು ಅಂತರಂಗದಲ್ಲಿರುವ ಕಾಮಕ್ರೋಧಾದಿ ಅರಿಷಡ್ವರ್ಗವನ್ನು ಜಯಿಸಲು ಸಮರ್ಥನಲ್ಲ.

ಆಣವ ಮಲದಿಂದ ತನುವು ಮಲಿನವಾಗುವಂತೆ ಮಾಯಾಮಲದಿಂದ ಮನವು ಅಶುಚಿಯಾಗುತ್ತದೆ. ಮನವನ್ನು ಮಲಿನಗೊಳಿಸುವದೇ ಮಾಯಾಮಲವು. ಗುರುವು ಭಕ್ತನಿಗೆ ನೀತಿತತ್ತ್ವೋಪದೇಶ ಮಾಡಿ ಮಾಯಾಮಲವನ್ನು ಹೋಗಲಾಡಿಸುವನು. ಇದಕ್ಕೇನೇ ಮಂತ್ರದೀಕ್ಷೆಯೆನ್ನುವರು. ಮಂತ್ರವೆಂದರೆ ಗುರುವು ಮನದಲ್ಲಿ ಧ್ಯಾನಿಸಲಿಕ್ಕೆ ರಹಸ್ಯವಾಗಿ ಹೇಳಿಕೊಟ್ಟ ಶಬ್ದ. ಗುರುವು ಭಕ್ತನಿಗೆ ಪಂಚಾಕ್ಷರಿ ಷಡಕ್ಷರಿ ಮಂತ್ರಗಳನ್ನು ಧ್ಯಾನಿಸಲಿಕ್ಕೆ ಹಚ್ಚುವನು. ಮನಸ್ಸು ಬರಿದಾದರೆ ಕೆಟ್ಟ ಸಂಕಲ್ಪಕ್ಕೆ ಅವಕಾಶ ದೊರೆಯುವದು. ಅಂತೆಯೇ ಅದನ್ನು ಸನ್ಮಂತ್ರ ಪಠಣದಿಂದ ಕಾಮಕ್ರೋಧಾದಿಗಳು ತಗಲದಂತೆ ಮಂತ್ರಸ್ವರೂಪವಾದ ಪ್ರಾಣಲಿಂಗವನ್ನು ಸೂಕ್ಷ್ಮ ತನುವಿಗೆ ಕರುಣಿಸಿ ಕೊಟ್ಟನು. ಹರಿದಾಡುವ ಮನಸ್ಸನ್ನು ಲಿಂಗದಲ್ಲಿರಿಸಿ ಮಂತ್ರಧ್ಯಾನಾದಿಗಳನ್ನೆಸಗುವದೇ ಮಂತ್ರದೀಕ್ಷೆಯು. ಮನುಷ್ಯನು ತನುಮನಗಳಲ್ಲಿ ಪರಿಶುದ್ಧನಾದರೆ ತೀರಲಿಲ್ಲ. ಆತನ ಭಾವವೂ ನಿರ್ಮಲವಾಗಿರಬೇಕು. ಆರೋಗ್ಯಕ್ಕನುಸರಿಸಿ ತನುವನ್ನು ಸ್ವಚ್ಛವಾಗಿಟ್ಟುಕೊಳ್ಳಬಹುದು. ಮಂತ್ರಾದಿಗಳಿಂದ ವಿಷಯಂಗಳಿಗೆ ಹರಿದಾಡುವ ಮನಸ್ಸನ್ನು ಹಿಡಿದು ಕಟ್ಟಬಹುದು. ಆದರೆ ಇಷ್ಟೆಲ್ಲ ಮಾಡಿದರೂ ನಮ್ಮ ಭಾವವು ಪರಮಾತ್ಮ ಸ್ವರೂಪವಾದ ಲಿಂಗದಲ್ಲಳವಡದಿದ್ದರೇನು ಪ್ರಯೋಜನ? 'ಯಥಾ ಜೀವಸ್ತಥಾ ಭಾವಃ' ಎಂಬ ಉಕ್ತಿಯಂತೆ ಜೀವನಿಗೆ ಹಿಂದಣ ಜನ್ಮದಲ್ಲಿ ಮಾಡಿದ ಪುಣ್ಯಪಾಪಗಳಿಗನುಸಾರವಾಗಿ ಭಾವ ಉದ್ಭವಿಸುತ್ತದೆ.

ಪ್ರಾಕ್ತನ ಜನ್ಮದ ಕರ್ಮ ಫಲಗಳನ್ನು ಭೋಗಿಸಿಯೇ ತೀರಬೇಕೆಂದು ಕೆಲವು ತತ್ವಜ್ಞಾನಿಗಳು ಹೇಳುತ್ತಿದ್ದಾರೆ. ಇದೇ ಕಾರ್ಮಿಕ

ಮಲವು. ಇದನ್ನು ಹೋಗಲಾಡಿಸುವದಕ್ಕಾಗಿ ಗುರುವು ಭಕ್ತನಿಗೆ ಲಿಂಗಾಂಗ ಸಾಮರಸ್ಯ ಕ್ರಿಯೆಯನ್ನರುಹುವನು. ಇದಕ್ಕೆಯೇ ಕ್ರಿಯಾದೀಕ್ಷೆಯೆನ್ನುವರು. ಹಿಂದಿನ ಕರ್ಮಫಲ ಭೋಗವನ್ನಳಿಯಲಿಕ್ಕೆ ಯಾವ ಯಾವ ಕ್ರಿಯೆಗಳನ್ನಾಚರಿಸಬೇಕೆಂಬದನ್ನು ತಿಳಿಸುವದೇ ಕ್ರಿಯಾದೀಕ್ಷೆಯು. ಗುರುವು ಲಿಂಗಸಂಬಂಧವಾಗಿ ಹೇಳಿಕೊಟ್ಟ ಕ್ರಿಯೆಗಳನ್ನು ಭಕ್ತಿಪುರಸ್ಸರವಾಗಿ ಪಾಲಿಸಿದರೆ ನಿಶ್ಚಯವಾಗಿಯೂ ಭಕ್ತನ ಕರ್ಮ ಬಂಧನವಳಿದು ಲಿಂಗವೂ ತಾನೂ ಒಂದೇ ಎಂಬ ವಿಶಿಷ್ಟತರದ ಶಕ್ತಿಯುಂಟಾಗುವದು. ಲಿಂಗಾಂಗ ಸಾಮರಸ್ಯ ಕ್ರಿಯೆಯನ್ನು ಹೇಳಿಕೊಡುವದೇ ಭಾವಲಿಂಗ ಧಾರಣವು. ಭಾವಲಿಂಗವನ್ನು ಗುರುವು ಕಾರಣ ಶರೀರಕ್ಕೆ ದಯಪಾಲಿಸಿ ಕೊಟ್ಟನು. ಮೋಕ್ಷ ಸಾಧನೆಗೆ ಕಾರಣೀಭೂತವಾದ ಶರೀರವೇ ಕಾರಣ ಶರೀರವು. ಅದರ ಮೇಲೆ ಭಾವಲಿಂಗವನ್ನು ಧರಿಸುವದೆಂದರೆ ಲಿಂಗಾಂಗ ಸಾಮರಸ್ಯ ಕ್ರಿಯೆಯನ್ನಳವಡಿಸುವದು. ತನು ಶುದ್ಧವಾದರೆ ಮನ ಶುದ್ಧ; ಮನ ಶುದ್ಧವಾದರೆ ಭಾವ ಶುದ್ಧ. ಶಿಕ್ಷಾ ಗುರುವು ತನು ಶುದ್ಧ ಮಾಡುವನು. ದೀಕ್ಷಾ ಗುರುವು ಮನ ಶುದ್ಧ ಮಾಡುವನು. ಮೋಕ್ಷಾ ಗುರುವು ಭಾವ ಶುದ್ಧ ಮಾಡುವನು.

## ಗುರೂಪದೇಶ.

ಗುರುವು ತನು ಮನ ಭಾವಗಳನ್ನು ಪರಿಶುದ್ಧವಾಗಿಟ್ಟುಕೊಳ್ಳುವದಕ್ಕೆ ಭಕ್ತನಿಗೆ ಉಪದೇಶಿಸುವನು. ತನು ಶುದ್ಧವಾಗಬೇಕಾದರೆ ಏನೆಂದುಪದೇಶಿಸುವನು? "ಮುಂಜಾನೆ ನಸುಕಿನಲ್ಲೆದ್ದು ಕೈಕಾಲು ಮೋರೆ ಬಾಯಿಗಳನ್ನು ಸ್ವಚ್ಛವಾಗಿ ತೊಳೆದುಕೋ. ಏಕೆಂದರೆ ಅದರಿಂದ ಮೈಯೊಳಗಿನ ಜಾಡ್ಯವು ಪರಿಹಾರವಾಗುವದು. ರಾತ್ರಿಯಲ್ಲಿ ಶ್ವಾಸೋಚ್ಛ್ವಾಸದಿಂದುಂಟಾದ ಬಾಯಿಯೊಳಗಿನ ದುರ್ಗಂಧಮಯವಾದ ಕಶ್ಮಲ ದ್ರವ್ಯಗಳು ನಾಶವಾಗುವವು. ಆಮೇಲೆ ಹಣೆಗೆ ಭಸ್ಮವನ್ನು ಧರಿಸು; ಬರೆ ಹಣೆಯಿಂದಿರುವದು ಅಮಂಗಲವು. ಭಸ್ಮ ಧರಿಸಿಕೊಂಡು ದೇವರ ಭಜನೆ ಸ್ತೋತ್ರ ನಾಮಸ್ಮರಣೆ ಮುಂತಾದವುಗಳನ್ನು ಮಾಡು. ಅಂದರೆ, ನಿನ್ನ ಶರೀರಕ್ಕೂ ಅವಯವಗಳಿಗೂ ಕೆಲಸ ಮಾಡಲಿಕ್ಕೆ ಹೆಚ್ಚು ಉತ್ಸಾಹವು ಬರುವದು. ಶಿವಸ್ತುತಿಯಾದ ಬಳಿಕ ಬಹಿರ್ದೆಶೆಗೆ ೧ ಮೈಲು ಪ್ರಮಾಣದ ವರೆಗೆ ಹೋಗು. ಮಲವಿಸರ್ಜನೆ ದಂತಧಾವನ ಮಾಡಿಕೊಂಡು ಕೈಕಾಲು ಬಾಯಿಗಳನ್ನು ಸ್ವಚ್ಛವಾಗಿ ತೊಳೆದುಕೊಂಡು ಭಸ್ಮಧಾರಣ

ಮಾಡಿಕೊಂಡು ವ್ಯಾಯಾಮ ಮಾಡು. ಬುದ್ಧಿಯ ಕೆಲಸ ಮಾಡು ತ್ತಿದ್ದರೆ ೧ ತಾಸಿನ ವರೆಗೆ ಸರ್ವಾಂಗಗಳು ದಣಿಯುವಂತೆ ಆಸನಾದಿಗ ಳನ್ನು ಹಾಕು. ಶ್ರಮದ ಹೋರೆಯನ್ನು ಮಾಡುತ್ತಿದ್ದರೆ ನಿನ್ನ ಕೆಲಸಕ್ಕೆ ಹೋಗು. ಮುಂಜಾನೆ, ಮಧ್ಯಾಹ್ನ, ಸಾಯಂಕಾಲ ಈ ಪ್ರಕಾರ ತ್ರಿಕಾಲ ಸ್ನಾನ ಮಾಡು. ನದಿ ಭಾವಿಗಳಲ್ಲಾಗಲಿ ಪ್ರಕೃತಿ ಗುಣಕ್ಕನುಸರಿಸಿ ತಣ್ಣೀರು ಅಥವಾ ಬಿಸಿ ನೀರಿನಿಂದ ಜಳಕ ಮಾಡು. ಸ್ನಾನದನಂತರ ಯಥಾ ವಿಧಿ ಲಿಂಗಾರ್ಚನೆಯನ್ನು ಮಾಡಿಕೋ. ಆಮೇಲೆ ಪ್ರತಿನಿತ್ಯದ ನಿನ್ನ ಕಾಯಕವನ್ನು ಮಾಡು. ಮಧ್ಯಾಹ್ನಕ್ಕೆ ಪುನಃ ಸ್ನಾನ ಶಿವಪೂಜಾದಿ ಗಳನ್ನು ತೀರಿಸಿಕೊಂಡು ಲಿಂಗಪ್ರಸಾದವೆಂದು ಮಿತಾಹಾರವನ್ನು ಸೇವಿಸು. ಆಮೇಲೆ ಸ್ವಲ್ಪ ವಿಶ್ರಾಂತಿಯನ್ನು ಹೊಂದಿ ನಿನ್ನ ಕಾಯಕವನ್ನು ಸಾಂಗ ಗೊಳಿಸು. ಅನಂತರ ಸಾಯಂಕಾಲಕ್ಕೆ ಸ್ನಾನ ಶಿವಾರ್ಚನೆ ಮಾಡಿ ಲಿಂಗಪ್ರಸಾದವೆಂದು ಅಲ್ಪಾಹಾರವನ್ನು ಸೇವಿಸು. ಆಮೇಲೆ ಸತ್ಕಥಾ ಶ್ರವಣ, ಸದ್ಗ್ರಂಥಾವಲೋಕನ, ಸದ್ಬೋಧಾಮೃತ ಪಾನವನ್ನು ಮಾಡು. ಅಂದರೆ ನಿನ್ನ ಇಂದ್ರಿಯಗಳ ದುಷ್ಟ ಪ್ರವೃತ್ತಿಯು ಅಳಿದು ಅವು ಒಳ್ಳೆ ಯದರ ಕಡೆಗೆ ಪ್ರವೃತ್ತಿಸುವವು. ರಾತ್ರಿ ೧೦ ಘಂಟೆಯೊಳಗಾಗಿ ಶಿವ ನಾಮಸ್ಮರಣೆ ಮಾಡುತ್ತ ನಿದ್ರೆಹೋಗು; ಹಗಲು ಮಲಗಬೇಡ; ರಾತ್ರೆ ಯಲ್ಲಿ ಜಾಗರಣೆ ಮಾಡಬೇಡ. ಅಭಕ್ಷ್ಯಭಕ್ಷಣವನ್ನೂ ಅಪಾನಪೇಯ ವನ್ನೂ ಸರ್ವಥಾ ಮಾಡಬೇಡ. ಹಾಸಿಗೆ ಹೊದಿಕೆಗಳು ಸ್ವಚ್ಛವಾಗಿರಲಿ. ಪ್ರತಿಯೊಂದರಲ್ಲಿಯೂ ಮಿತಭಾವವಿರಲಿ." ಈಪ್ರಕಾರ ಗುರೂಪದೇಶ ವನ್ನು ಕೇಳಿ ಅದರಂತೆ ಪ್ರತಿನಿತ್ಯ ತಪ್ಪದೆ ನಡೆದರೆ ನಮಗೆ ಯಾವ ರೋಗಾದಿಗಳೂ ಬರುವದಿಲ್ಲ. ವೈದ್ಯರನ್ನಾಗಲಿ, ಜೋಯಿಸರನ್ನಾಗಲಿ ಗುಡಿಗುಂಡಾರಗಳನ್ನಾಗಲಿ ಬೇಡಿಕೊಳ್ಳುವ ಅವಶ್ಯಕತೆಯುಳಿಯುವದಿಲ್ಲ. "ಶರೀರ ಮಾದ್ಯಂಖಲು ಧರ್ಮಸಾಧನಂ" ಎಂದು ಹೇಳಿರುವದರಿಂದ ಈ ಶರೀರವು ಸದೃಢವಾಗಿಯೂ ಚಿರಾಯುವಾಗಿಯೂ ಇರಲಿಕ್ಕೆ ಅತ್ಯವ ಶ್ಯಕವಾದ ಎಲ್ಲ ನಿಯಮಾದಿಗಳನ್ನು ಗುರುವು ನಮಗೆ ಬೋಧಿಸುವನು. ನಿಜವಾದ ವೀರಶೈವನು ಇವೆಲ್ಲ ನಿಯಮಗಳನ್ನು ತಪ್ಪದೆ ಪಾಲಿಸುವನು.

ಈ ಪ್ರಕಾರ ತನುಶುದ್ಧಿಗೆ ಉಪದೇಶಮಾಡಿ ಶ್ರೀಗುರುವು ಹರಿ ದಾಡುವ ಮನಸ್ಸಿಗೆ ಈ ಪ್ರಕಾರ ಉಪದೇಶವನ್ನು ಮಾಡುವನು— "ದುರಿತ ಕರ್ಮವನೊಲ್ಲದಿರು. ಪುಣ್ಯವನೆಮಾಡು. ಹರನಡಿವಿಡಿ. ಶಾಂತರೊ ಡನಾಡು. ಜೀವರೊಳು ಕರುಣವಿರಲಿ. ನೀತಿವಿದನಾಗು. ಬೆನ್ನುಬಿದ್ದವ

ರನ್ನು ಕಾಪಾಡು. ಯಾರನ್ನೂ ನಿಂದಿಸಿ ನುಡಿಯದಿರು. ಮನಸಿಗೆ ಬಂದಂತೆ ನಡೆಯದಿರು. ಈ ಲೋಕದಲ್ಲಿ ಕುಂದು ಪಡೆಯಬೇಡ. ಕಾಮಾದಿಗಳನ್ನು ಜಯಿಸು. ಪ್ರಪಂಚದಲ್ಲಿ ಎಡರುಗಳು ಬಂದೊದಗಿದರೆ ಅಂಜಬೇಡ. ಸಂಪತ್ತು ಬಂದಾಗ ಸೊಕ್ಕನ್ನು ಬಿಡು. ತತ್ವಗಳನ್ನು ಸಾರಾಸಾರ ವಿಚಾರಿಸು. ಬಾಹ್ಯದಲ್ಲಿ ಅದ್ವೈತವನ್ನು ಬಳಸಬೇಡ. ನಿನ್ನೊಳಗೆ ಏಕೀಭಾವದಿಂದೊಡಗೂಡು. ಸಮಯ ನಿಷ್ಠೆ ವೇದವಿಧ ಭಕ್ತಿಗಳನ್ನು ತಿಳಿದುಕೊಂಡು ಅವುಗಳನ್ನ ಬಿಟ್ಟಿರಬೇಡ. ನಾನು ಯಾರೆಂಬದನ್ನು ವಿಚಾರಿಸು. ಈ ವಿಷಯ ಸಂಸಾರವನ್ನು ಕನಸೆಂದು ತಿಳಿ. ಮಾರಮರ್ದನ ಶಂಭುಲಿಂಗವನ್ನು ಒಲಿಸಿ ಗಂಭೀರಸುಖದೊಳಿರು" ಈ ಪ್ರಕಾರ ಶ್ರೀಗುರುವು ಹೇಳುವ ಮಾತುಗಳನ್ನೇ ನಿಜಗುಣಾರ್ಯರು ತಮ್ಮ ಕೈವಲ್ಯದಲ್ಲಿ ಪ್ರತಿಪಾದಿಸಿದ್ದಾರೆ.

ಈ ಮೇರೆಗೆ ಗುರುವು ತನುಮನಂಗಳಿಗುಪದೇಶಮಾಡಿದ ನಂತರ ಭಾವಕ್ಕುಪದೇಶಮಾಡುವನು. ಅದೆಂತೆಂದೊಡೆ— "ಎಲೈ ಶಿಷ್ಯೋತ್ತಮನೇ ಅಥಾತೋ ಧರ್ಮಜಿಜ್ಞಾಸಾ" ಎಂಬ ಶ್ರುತಿವಾಕ್ಯಕ್ಕನುಸರಿಸಿ ತನುಮನಂಗಳನ್ನು ಪರಿಶುದ್ಧವಾಗಿಟ್ಟುಕೊಂಡ ನಂತರವೇ ಮನುಷ್ಯನು ಧರ್ಮವನ್ನರಿತುಕೊಳ್ಳಲು ಸಮರ್ಥನು. ತನುವಿಗೆ ಆರೋಗ್ಯಶಾಸ್ತ್ರವನ್ನೂ ಮನಕ್ಕೆ ನೀತಿಶಾಸ್ತ್ರವನ್ನೂ ಭಾವಕ್ಕೆ ಆಧ್ಯಾತ್ಮಶಾಸ್ತ್ರವನ್ನೂ ಬೋಧಿಸುವದೇ ಗುರುವಿನ ಕಾರ್ಯಕ್ಷೇತ್ರ.

"ನಮ್ಮ ವೀರಶೈವ ಧರ್ಮವು ಲಿಂಗಾಂಗ ಸಾಮರಸ್ಯವನ್ನು ಬೋಧಿಸುತ್ತದೆ. ಅಂಗವೆಂದರೆ ಜೀವಾತ್ಮ, ಲಿಂಗವೆಂದರೆ ಪರಮಾತ್ಮ, ಲಿಂಗಾಂಗಸಾಮರಸ್ಯವೆಂದರೆ ಜೀವಾತ್ಮ ಪರಮಾತ್ಮರೊಂದಾಗುವಿಕೆ ಅಥವಾ ಶಿವ ಜೀವರುಗಳ ಐಕ್ಯ. ಜೀವನು ಶಿವನಲ್ಲಿ ಐಕ್ಯನಾಗಲಿಕ್ಕೆ ಮುಖ್ಯವಾಗಿ ೪ ಮಾರ್ಗಗಳಿರುವವು. ಅವು ಯಾವವೆಂದರೆ— (೧) ಕರ್ಮಮಾರ್ಗ (೨) ಭಕ್ತಿಮಾರ್ಗ (೩) ಜ್ಞಾನಮಾರ್ಗ (೪) ಯೋಗಮಾರ್ಗ

ಕರ್ಮಮಾರ್ಗದಿಂದ ಜೀವನು ಶಿವನಲ್ಲಿ ಬೆರೆಯುವ ಪರಿ ಎಂತು? ಕರ್ಮವೆಂದರಾವುದು? ಶ್ರೀ ಭಗವದ್ಗೀತೆಯಲ್ಲಿ ಹೇಳಿದಂತೆ "ಕುರು ಕರ್ಮೈವ ತಸ್ಮಾತ್ ತ್ವಂ ಪೂರ್ವೈಃ ಪೂರ್ವತರಂ ಕೃತಂ" ಅಂದರೆ ಪುರಾತನರು ಆಚರಿಸಿದ ಶ್ರೇಷ್ಠ ಕರ್ಮಗಳನ್ನು ಮಾಡು. ಸತ್ಕರ್ಮಗ

ಳೆಂದರೆ ಫಲಾಪೇಕ್ಷೆ ಇಲ್ಲದೆ ಅಹಂಕಾರ ಭಾವವನ್ನಿಟ್ಟುಕೊಳ್ಳದೆ ಪರಮಾತ್ಮನ ಸಲುವಾಗಿ ಕೆಲಸ ಮಾಡಬೇಕು. ಉದಾಹರಣಾರ್ಥವಾಗಿ ನಾನು ಲಕ್ಷ್ಮಿಯನ್ನು ಗಳಿಸಿದೆ; ನಾನು ನೂರಾರು ಹಗೆ ಕಾಳುಗಳನ್ನು ತುಂಬಿದೆ; ಗುಡಿಗುಂಡಾರಗಳನ್ನು ಕಟ್ಟಿಸಿದೆ; ಈ ಪ್ರಕಾರ ಕರ್ಮಯೋಗಿಯು ಕರ್ಮ ಮಾಡಕೂಡದು. ಆದರೆ ಇವೆಲ್ಲವುಗಳೂ ಪರಮಾತ್ಮನ ಅನುಗ್ರಹದಿಂದಲೇ ಜರಗುವವೆಂದು ತಿಳಿದು ಆಚರಿಸಬೇಕು. ಇದಲ್ಲದೆ "ನಾನು ಕಷ್ಟಬಟ್ಟು ಬಿತ್ತಿದೆ, ಬೆಳೆ ಬರಲಿಲ್ಲ; ಚನ್ನಾಗಿ ಅಭ್ಯಾಸ ಮಾಡಿದೆ, ಪರೀಕ್ಷೆಯಲ್ಲಿ ಉತ್ತೀರ್ಣನಾಗಲಿಲ್ಲ; ವ್ಯಾಪಾರ ಹೆಚ್ಚಾಗಿ ಮಾಡಿದೆ, ಲಾಭ ದೊರೆಯಲಿಲ್ಲ; ಜನರಿಗೆ ಬೇಕಾದಷ್ಟು ಉಪಕಾರ ಮಾಡಿದೆ, ಯಾರೂ ಹೊಗಳಲಿಲ್ಲ." ಈ ಪ್ರಕಾರ ನಾವು ಖಿನ್ನರಾಗಬಾರದು. ನಮಗೆ ಲಾಭವಾದರೂ ಸರಿಯೇ ಬಿಟ್ಟರೂ ಸರಿಯೇ; ಸುಖವಾದರಷ್ಟೇ ದುಃಖವಾದರಷ್ಟೇ ಎಂಬೀ ಭಾವನೆಯಿಂದ ಸರ್ವಕರ್ಮಗಳನ್ನಾಚರಿಸಬೇಕು. "ಲಿಂಗಮಯಂ ಜಗತ್ಸರ್ವಂ" ಎಂಬೀ ಶ್ರುತಿವಾಕ್ಯಕ್ಕನುಸರಿಸಿ ಜಗತ್ತಿನ ಚರಾಚರ ಜೀವಿಗಳೆಲ್ಲ ಲಿಂಗಸ್ವರೂಪವೆಂದರಿದು ಲೋಕಸಂಗ್ರಹಕಾರ್ಯ ಮಾಡುವದೇ ಕರ್ಮಯೋಗರಹಸ್ಯವು. ಆದರೆ ಕೆಲವರು ಕ್ರಿಯಾಚಾರವನ್ನು ಕರ್ಮಯೋಗವೆಂದು ಭಾವಿಸಿ ಶುದ್ಧ ಮಡಿ ಭಸ್ಮ ರುದ್ರಾಕ್ಷಿಗಳನ್ನು ಧಾರಳವಾಗಿ ಧರಿಸಿಕೊಂಡು ಇದರಿಂದಲೇ ಮೋಕ್ಷಸಾಧಿಸುವದೆಂದು ಭಾವಿಸುತ್ತಾರೆ. ಆದರೆ ಅದು ತಪ್ಪು. ಕ್ರಿಯಾಚಾರದಿಂದ ತನು ಶುದ್ಧವಾಗುತ್ತದೆ. ಕರ್ಮಯೋಗದಿಂದ ಮೋಕ್ಷವು ಲಭಿಸುತ್ತದೆ. ಕ್ರಿಯಾಚಾರಕ್ಕಿಂತಲೂ ಕರ್ಮಯೋಗವು ಅತ್ಯಧಿಕವಾದುದು. ನಮ್ಮ ಶಿವಶರಣರೆಲ್ಲರೂ ಕರ್ಮಯೋಗಿಗಳಾಗಿದ್ದರು.

ಭಕ್ತಿ ಮಾರ್ಗವು ಮೋಕ್ಷಕ್ಕೆ ಪ್ರಬಲವಾದ ಸಾಧನವಾಗಿದೆ. ಭಕ್ತಿಯೆಂದರೆ ಪರಮಾತ್ಮನಲ್ಲಿಟ್ಟ ಪವಿತ್ರವಾದ ಪ್ರೇಮವು. ತಾಯಿಯು ಮಗುವಿನ ಮೇಲೆಯೂ ಹೆಂಡತಿಯು ಗಂಡನ ಮೇಲೆಯೂ, ಮಗುವು ತಾಯಿಯ ಮೇಲೆಯೂ ಪ್ರೇಮವನ್ನಿರಿಸುವಂತೆ ನಾವು ಪರಮಾತ್ಮನಲ್ಲಿ ಭಕ್ತಿಯನ್ನಿರಿಸಬೇಕು. ಅಂತೆಯೇ ಕೆಲವರು ಪರಮಾತ್ಮನಿಗೆ ತಾಯಿಯೆಂದು ಕರೆದಿರುವರು. ಮಗುವನ್ನು ಮಾಡಿ ಆಡಿಸಿರುವರು; ಶರಣಸತಿ ಲಿಂಗಪತಿಯೆಂಬ ಭಾವದಿಂದ ಪೂಜಿಸಿರುವರು. ಕೆಲವರು ಪರಮಾತ್ಮನನ್ನು ನವವಿಧ ಭಕ್ತಿಯಿಂದರ್ಚಿಸುವವರು ಅವು ಯಾವವೆಂದರೆ

'ಶ್ರವಣಂ ಕೀರ್ತನಂ ಶಂಭೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ ॥

ಶ್ರವಣ ಭಕ್ತಿಯೆಂದರೆ ಪರಮಾತ್ಮನ ಸಂಬಂಧವಾದ ಪುರಾಣ ಪ್ರವಚನ ಕೀರ್ತನ ಮುಂತಾದವುಗಳನ್ನು ಪ್ರೇಮದಿಂದ ಕೇಳುವದು. ಕೀರ್ತನ ಭಕ್ತಿಯೆಂದರೆ ಪರಮಾತ್ಮನನ್ನು ಸ್ತೋತ್ರ, ಗಾನ, ಭಜನೆ ಪ್ರಾರ್ಥನೆಗಳಿಂದ ಹೊಗಳುವದು. ಸ್ಮರಣ ಭಕ್ತಿಯೆಂದರೆ ಶಿವನನ್ನು ಅನನ್ಯಭಾವದಿಂದ ಮನಸ್ಸಿನಲ್ಲಿ ಸ್ಮರಿಸುವದು. ಪಾದಸೇವನಾಭಕ್ತಿಯೆಂದರೆ ಲಿಂಗಸ್ವರೂಪಿಗಳಾದ ಗುರುಜಂಗಮರ ಸೇವೆಯನ್ನು ತ್ರಿಕರಣ ಪೂರ್ವಕವಾಗಿ ಮಾಡುವದು. ಅರ್ಚನಭಕ್ತಿಯೆಂದರೆ ಇಷ್ಟಲಿಂಗವನ್ನು ಧೂಪ, ದೀಪ, ನೈವೇದ್ಯ, ಪತ್ರಿ, ಪುಷ್ಪ, ಗಂಧಾದಿಗಳಿಂದ ಪೂಜಿಸುವದು. ವಂದನಾಭಕ್ತಿಯೆಂದರೆ ಲಿಂಗಮೂರ್ತಿಗೆ ಪುನಃ ಪುನಃ ನಮಸ್ಕರಿಸುವದು ದಾಸ್ಯಭಕ್ತಿಯೆಂದರೆ ಲಿಂಗದಲ್ಲಿಯೂ ಗುರುಜಂಗಮಾದಿ ಪೂಜ್ಯ ವ್ಯಕ್ತಿಗಳಲ್ಲಿಯೂ ದೀನತರವಾದ ಸೇವಾವೃತ್ತಿಯನ್ನು ತಾಳುವದು. ಸಖ್ಯಭಕ್ತಿಯೆಂದರೆ ಪರಮಾತ್ಮನಲ್ಲಿ ಸ್ನೇಹ ಭಾವವನ್ನು ತಾಳ್ದು ಆತನೆದುರಿಗೆ ತನ್ನ ತಪ್ಪುಗಳನ್ನೊಪ್ಪಿಕೊಂಡು ಮಿತ್ರತ್ವದಿಂದ ವರ್ತಿಸುವದು. ಆತ್ಮನಿವೇದನಭಕ್ತಿಯೆಂದರೆ ಸರ್ವವೂ ಪರಮಾತ್ಮನದೇ ಎಂಬ ಭಾವನೆಯಿಂದ ನಿರಂತರವೂ ಆತ್ಮನಲ್ಲಿಯೇ ತಲ್ಲೀನನಾಗಿರುವದು. ಕೆಲವರು ಪರಮಾತ್ಮನನ್ನು ಶ್ರದ್ಧೆ, ನಿಷ್ಠೆ, ಅವಧಾನ, ಅನುಭಾವ, ಆನಂದ ಸಮರಸ ಭಕ್ತಿಗಳಿಂದ ಲಿಂಗಾಂಗ ಸಾಮರಸ್ಯ ಜ್ಞಾನವನ್ನು ಪಡೆದುಕೊಳ್ಳಬೇಕೆಂದು ಹೇಳುವರು.

ಶ್ರೀ ಬಸವೇಶ್ವರನು ಭಕ್ತಿಯಲ್ಲಿ ಅಗ್ರಗಣ್ಯನು. ಶಿವಶರಣರೆಲ್ಲರೂ ಬಸವೇಶ್ವರನಿಂದ ಭಕ್ತಿಭಿಕ್ಷೆಯನ್ನು ಬೇಡಿರುವರು. ಶ್ರೀ ಅಕ್ಕಮಹಾದೇವಿಯು 'ನಾನು ಬಸವಣ್ಣನ ಮಗಳಾದ ಕಾರಣ ಭಕ್ತಿಪ್ರಸಾದವನ್ನು ಕರುಣಿಸಿಕೊಟ್ಟನು' ಎಂದು ಬಹು ಮಮತೆಯಿಂದ ಹಾಡಿಕೊಂಡಿರುವಳು.

ಜ್ಞಾನಮಾರ್ಗವು ಮೋಕ್ಷಸಾಧನೆಗೆ ಅತಿ ಶ್ರೇಷ್ಠವಾದ ಸಾಧನವಾಗಿದೆ. ಜ್ಞಾನಮಾರ್ಗದಲ್ಲಿ ದ್ವೈತಾದ್ವೈತಗಳೆಂಬೆರಡು ಪಂಥಗಳುಂಟು. ಕೆಲವರು ಪರಮಾತ್ಮನೂ ತಾನೂ ಭಿನ್ನವೆಂದು ಭಾವಿಸಿ ಆತನಲ್ಲಿ ನಿಕಟವಾದ ಭಕ್ತಿಯನ್ನಿಟ್ಟು ಮೋಕ್ಷಪಡೆಯುವರು. ಇವರಿಗೆ ದ್ವೈತರೆಂದೆನ್ನುವರು. ಕೆಲವರು ತಾನೂ ಪರಮಾತ್ಮನೂ ಒಂದೇ, ಭಿನ್ನವಲ್ಲವೆಂದು ಭಾವಿಸಿ ಕೈವಲ್ಯಪದವಿಯನ್ನು ಹೊಂದುವರು. ಇಂಥವರಿಗೆ ಅದ್ವೈತಿಗಳೆಂದೆನ್ನು

ವರು. ಆದರೆ ವೀರಶೈವರು ಇವೆರಡರಿಂದಲೂ ಒಂದು ವಿಶಿಷ್ಟತರವಾದ ಶಕ್ತಿಯನ್ನು ಪಡೆದುಕೊಂಡು ಮೋಕ್ಷವನ್ನೈದುವರು. ವೀರಶೈವರು ಮೊದಲು ನಾನೂ ಪರಮಾತ್ಮನೂ ಭಿನ್ನವೆಂದು ತಿಳಿದು ದಾಸೋಹ ಭಾವವನ್ನು ತಾಳ್ದು ಪರಮಾತ್ಮ ಸ್ವರೂಪಿಯಾದ ಇಷ್ಟಲಿಂಗವನ್ನಾರಾಧಿಸುವರು. ಬರಬರುತ್ತ ಅವರಿಗೆ ಸ್ವಾನುಭವದಿಂದ ಪರಮಾತ್ಮನೂ ನಾನೂ ಒಂದೇ ಎಂಬ ಸೋಹಂ ಭಾವನೆಯು ಅಳವಡುವದು. ಅಂತೆಯೇ ವೀರಶೈವರಿಗೆ ಶಕ್ತಿವಿಶಿಷ್ಟಾದ್ವೈತಿಗಳೆಂದೂ ದ್ವೈತಾದ್ವೈತಿಗಳೆಂದೂ ಪರ್ಯಾಯ ನಾಮಗಳಿರುವವು. ಜ್ಞಾನವು ಜ್ಞಾನ ಸುಜ್ಞಾನ ಮಹಾಜ್ಞಾನವೆಂದು ತ್ರಿವಿಧವಾಗಿರುವದು. ಸ್ಥೂಲವಾದ ಇಷ್ಟಲಿಂಗದ ಮಹತ್ವವನ್ನರಿಯುವದೇ ಜ್ಞಾನವು. ಸೂಕ್ಷ್ಮವಾದ ಪ್ರಾಣಲಿಂಗದ ನಿಜವನ್ನರಿಯುವುದೇ ಸುಜ್ಞಾನವು. ಮೋಕ್ಷಕ್ಕೆ ಕಾರಣವಾದ ಭಾವಲಿಂಗದ ರಹಸ್ಯವನ್ನರಿಯುವುದೇ ಮಹಾಜ್ಞಾನವು. ಶ್ರೀ ಚನ್ನಬಸವಣ್ಣನವರು ಷಟ್‌ಸ್ಥಲಜ್ಞಾನಸಂಪನ್ನರಾಗಿ ಶಿವಶರಣರಿಗೆಲ್ಲ ಜ್ಞಾನತತ್ವೋಪದೇಶ ಮಾಡಿದರು.

ಮೋಕ್ಷವನ್ನು ಪಡೆಯುವದಕ್ಕೆ ಯೋಗಮಾರ್ಗವೂ ಹೆಚ್ಚಿನ ಸಾಧನವು. ಪಾತಂಜಲಿಯು ಹೇಳಿದಂತೆ ಪ್ರಾಣಾಯಾಮಾದಿಗಳ ಆಧಾರದಿಂದ ಜೀವಾತ್ಮನನ್ನು ಆಯಾಯ ಚಕ್ರದಲ್ಲಿರಿಸಿ ಸಚ್ಚಿದಾನಂದವನ್ನು ಪಡೆಯಬೇಕೆಂದು ನಮ್ಮ ವೀರಶೈವ ಧರ್ಮವು ಪ್ರತಿಪಾದಿಸುವದಿಲ್ಲ. ನಮ್ಮ ಯೋಗವು ಶಿವಯೋಗವು. ಶಿವಸ್ವರೂಪವಾದ ಇಷ್ಟಲಿಂಗದಲ್ಲಿಯೇ ದೃಷ್ಟಿಯನ್ನೂ ಚಿತ್ತವನ್ನೂ ಇರಿಸಿ ಆನಂದಾಮೃತ ಪಾನಮಾಡುವದೇ ಶಿವಯೋಗವು. ಅವರಿಗೆ ಲಿಂಗದಲ್ಲಿಯೇ ನೋಟ ಲಿಂಗದಲ್ಲಿಯೇ ಕೂಟ ಲಿಂಗದೊಡನೆಯೇ ಆಟ ಈ ಪ್ರಕಾರ ಲಿಂಗವೇ ಲಿಂಗ ತಾವೇ ತಾವಾಗಿ ನಿರಂತರವೂ ವಿರಾಜಿಸುತ್ತಿರುವರು. ಇಂಥ ಶಿವಯೋಗದಿಂದಲೇ ಎಷ್ಟೋ ಶಿವಯೋಗಿಗಳೂ ಯೋಗಿನಿಯರೂ ಅವಿರಳ ಮೋಕ್ಷವನ್ನು ಪಡೆದಿರುವರು. ಶ್ರೀ ಬಸವಣ್ಣನವರ ಧರ್ಮಪತ್ನಿಯವರಾದ ನೀಲಮ್ಮನವರು ಯೋಗಮಾರ್ಗದವರು. ಅಂತೆಯೇ ಅವರು ಬಸವಣ್ಣನವರು ಸಂಗಮದಲ್ಲಿ ಲಿಂಗೈಕ್ಯರಾದರೆಂಬ ಸುದ್ದಿಯನ್ನು ಕೇಳಿದೊಡನೆಯೇ ತಾವೂ ಯೋಗಮಾರ್ಗದಿಂದ ತಂಗಡಿಗೆಯಲ್ಲಿ ಲಿಂಗದೊಳಗಾದರು. ಯೋಗಿಗಳು ಎಲ್ಲರಿಗಿಂತಲೂ ಅಧಿಕರೆಂಬ ಬಗ್ಗೆ ಭಗವದ್ಗೀತೆಯ ಆರನೆಯ ಅಧ್ಯಾಯದಲ್ಲಿ ಹೇಳಿರುವದೇನಂದರೆ:— " ತಪಸ್ವಿಭ್ಯೋಽಧಿಕೋ ಯೋಗಿ

ಜ್ಞಾನಿಭ್ಯೋಽಪಿ ಮತೋಽಧಿಕಃ । ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ" ॥೪೬॥ ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ । ಶ್ರದ್ಧಾವಾನ್ ಭಜತೇ ಯೋಮಾಂ ಸಮೇಯುಕ್ತತಮೋಮತಃ ॥೪೭॥ ಯೋಗಿಗಳು ತಪಸ್ವಿಗಳಿಗಿಂತಲೂ ಜ್ಞಾನಿಗಳಿಗಿಂತಲೂ ಕರ್ಮಿಗಳಿಗಿಂತಲೂ ಶ್ರೇಷ್ಠರು. ಮತ್ತಿ ಆ ಯೋಗಿಗಳಲ್ಲಿ ಪರಮಾತ್ಮನನ್ನು ನಿರಂತರ ಶ್ರದ್ಧೆಯಿಂದ ಧ್ಯಾನಿಸುವವನು ಅತಿ ಶ್ರೇಷ್ಠನು.

ಸಂಸಾರವು ಹೇಯವೆಂದರಿದು ಅದನ್ನು ಪರಿತ್ಯಾಗ ಮಾಡಿ ಗಿರಿಗಂಹರ ಪರ್ಣಕುಟೀರಗಳಲ್ಲಿ ವಾಸಿಸಿ ಮಹಾ ಮಹಾ ಶಿವಶರಣರ ಸಹವಾಸವನ್ನು ತಾಳ್ದು ಅವಿರಳ ಜ್ಞಾನವನ್ನು ಪಡೆದ ವೈರಾಗ್ಯಶಾಲಿಗೂ ಮೋಕ್ಷ ಲಭಿಸುವದು. ಶ್ರೀ ಅಕ್ಕ ಮಹಾದೇವಿಯು ವೈರಾಗ್ಯ ಮಾರ್ಗದಿಂದ ಮೋಕ್ಷವನ್ನು ಪಡೆದುಕೊಂಡಳು.

ಮೋಕ್ಷಕ್ಕೆ ಕಾರಣಿಭೂತವಾದ ಕರ್ಮ, ಭಕ್ತಿ ಜ್ಞಾನ, ಯೋಗ, ಇವುಗಳಲ್ಲಿ ಹೆಚ್ಚು ಕಡಿಮೆ ಭಾವಿಸಲಾಗದು. ಈ ಮಾರ್ಗಗಳು ಅವರವರ ಗುಣಧರ್ಮಗಳನ್ನವಲಂಬಿಸಿರುತ್ತವೆ. ಒಬ್ಬರು ಒಂದು ಮಾರ್ಗದಿಂದ ಮೋಕ್ಷವನ್ನು ಪಡೆದುಕೊಂಡರೆ ಮತ್ತೊಬ್ಬರು ಮತ್ತೊಂದು ಮಾರ್ಗದಿಂದ ಪಡೆಯುವರು. ಈ ಪ್ರಕಾರ ಮಹಾಗುರುವು ಶಿಷ್ಯೋತ್ತಮರಿಗೆ ಆಧ್ಯಾತ್ಮ ತತ್ವದ ರಹಸ್ಯವನ್ನುಸುರುವನು.

## ಗುರುವಿನ ಕ್ರಮಬದ್ಧತೆ.

ವೀರಶೈವ ಧರ್ಮವು ಮೊದಲು ಅಲ್ಪಸಂಖ್ಯಾಕವಿದ್ದಾಗ ದೀಕ್ಷಾವಿಶಿಷ್ಟವಾಗಿದ್ದಿತು. ಗುರುವು ಶಿಷ್ಯನ ಅಂತರಂಗವನ್ನು ಪರೀಕ್ಷಿಸಿ ಆತನಿಗೆ ದೀಕ್ಷಾಸಂಸ್ಕಾರ ಮಾಡಿ ಲಿಂಗಪೂಜಾ ವಿಧಾನವನ್ನು ಹೇಳಿಕೊಡುತ್ತಿದ್ದನು. ಆ ಶಿಷ್ಯನು ಮತ್ತೊಬ್ಬನಿಗೆ ಅದೇ ಪ್ರಕಾರವಾಗಿ ಮಾಡುತ್ತಿದ್ದನು. ಇಂಥವರೇ ಗುರುಗಳಾಗಬೇಕೆಂದು ನೇಮವಿರಲಿಲ್ಲ. ಗುರುವಿನ ಲಕ್ಷಣವುಳ್ಳಾತನೇ ಗುರುವಾಗುತ್ತಿದ್ದನು. ಆದರೆ ವೀರಶೈವ ಮತವು ಸಮಾಜ ಸ್ವರೂಪವನ್ನು ಹೊಂದಿದ ಮೇಲೆ ಅದು ಒಂದು ಕ್ರಮಬದ್ಧವಾದ ಸ್ಥಿತಿಯಲ್ಲಿ ನೇರ್ಪಟ್ಟಿತು. ಅದು ಈಗಿನ ಪಾಶ್ಚಾತ್ಯ ಪದ್ಧತಿಯ ಸರಕಾರೀ ಅಧಿಕಾರಿ ವರ್ಗದ ಕ್ರಮದಂತೆ ಒಳ್ಳೆ ಸುಗಮವಾಗಿ ವಿರಚಿತವಾದಂತೆ ಭಾಸವಾಗುತ್ತದೆ. ಹಳ್ಳಿಯ ಗೌಡನಿಂದ ಮೊದಲ್ಗೊಂಡು

‘ವ್ಹಾಯಿಸರಾಯರ’ ವರೆಗೆ ಯಾವ ಪ್ರಕಾರ ಕ್ರಮಬದ್ಧವಾದ ಸಂಬಂಧವು ನೆಲೆಸಿರುತ್ತದೆಯೋ ಅದೇ ಪ್ರಕಾರ ಪಂಚಾಯುತಿ ಯಾದಿಯಾಗಿ ಪಂಚಪೀಠಗಳ ಪರಿಯಂತರವೂ ಸುವ್ಯವಸ್ಥಿತವಾದ ಮಾರ್ಪಾಡು ಮಾಡಲಾಗಿದ್ದಿತು. ಭರತಖಂಡದಂಥ ವಿಶಾಲವಾದ ದೇಶದಲ್ಲಿ ಒಂದೇ ಪೀಠದಿಂದ ಎಲ್ಲ ಮೇಲ್ವಿಚಾರಣೆ ಮಾಡುವದು ಅಸಾಧ್ಯವೆಂದು ತಿಳಿದೇ ಪಂಚಪೀಠಗಳು ಅಲ್ಲಲ್ಲಿ ಕೇಂದ್ರಗಳಾಗಿ ಸ್ಥಾಪಿಸಲ್ಪಟ್ಟು ಅವುಗಳ ಶಾಖೋಪಶಾಖೆಗಳು ಅಲ್ಲಲ್ಲಿ ಉದಯವಾಗಿರುವಂತೆ ನಮಗೆ ಭಾಸವಾಗುತ್ತದೆ. ಆದ ಕಾರಣ ಆಚಾರ ತತ್ವಗಳು ಎಲ್ಲ ಕಡೆಯಲ್ಲಿ ಒಂದೇ ಪ್ರಕಾರದವಾಗಿದ್ದರೂ ಗೋತ್ರ ಪ್ರವರಗಳು ಭಿನ್ನವಾದವುಗಳಾಗಿವೆ. ವೀರಶೈವರು ಜಾತ್ಯೈಕಪಕ್ಷಪಾತಿಗಳಾಗಿರದೆ ಗುಣೈಕಪಕ್ಷಪಾತಿಗಳಾಗಿರುವದರಿಂದ ತಾವು ಇತರರಂತೆ ಯಾರ ಕುಲವಲ್ಲಿ ಹುಟ್ಟಿರುವರೋ ಅಂಥ ಋಷಿಗಳ ಕುಲಗೋತ್ರವನ್ನು ಹೇಳದೆ ತಮ್ಮ ಗುರುಸೂತ್ರಪರಂಪರೆಯನ್ನೇ ಹೇಳುತ್ತಿದ್ದಾರೆ.

ಈಗ ಪ್ರಾಂತಿಕ ಅಧಿಕಾರವು ನಡೆಯುವಂತೆ ಮೊದಲು ಒಂದೊಂದು ಪೀಠದ ಅಧಿಕಾರವು ಇಂತಿಷ್ಟು ಕ್ಷೇತ್ರದ ವರೆಗೆ ಮರ್ಯಾದಿತವಾಗಿರಬಹುದು. ಆದರೆ ಸಮಾಜದಲ್ಲಿ ಸಂಘಟನೆಯಾದ ಬಳಿಕ ವಿವಾಹ ವ್ಯಾಪಾರ ಮೊದಲಾದ ಕಾರ್ಯಾಂತರಗಳಿಂದ ಒಂದು ಪೀಠದ ಕ್ಷೇತ್ರಕ್ಕೊಳಪಟ್ಟ ಜನರು ಮತ್ತೊಂದು ಪೀಠದ ಕ್ಷೇತ್ರದಲ್ಲಿ ಮನೆಮಾಡಿಕೊಂಡಿರಹತ್ತಿರಬಹುದು. ಹೀಗಾಗಿ ಕೆಲವು ವರ್ಷಗಳ ನಂತರ ಒಂದೇ ಗ್ರಾಮದಲ್ಲಿ ಪಂಚಪೀಠಗಳಿಗೂ ಸಂಬಂಧಪಟ್ಟ ಎಲ್ಲ ಶಿಶುಮಕ್ಕಳನ್ನೂ ಕಾಣುವಂತಾಯಿತು. ಅಥವಾ ಈ ಪಂಚಪೀಠಾಧಿಕಾರಿಗಳು ಧರ್ಮಪ್ರಸಾರಕ್ಕಾಗಿ ಸಂಚಾರಕ್ಕೆ ಹೊರಟು ಜನಗಳಿಗೆ ದೀಕ್ಷೆಮಾಡುತ್ತ ಅವರನ್ನು ತಮ್ಮ ಶಿಶುಮಕ್ಕಳನ್ನಾಗಿ ಮಾಡಿಕೊಂಡು ಅಲ್ಲಲ್ಲಿ ಮಠಗಳನ್ನು ಸ್ಥಾಪಿಸಿ ಆ ಶಿಷ್ಯರನ್ನು ತಮ್ಮ ಹಸ್ತಕರಾದ ಪಟ್ಟಾಧಿಕಾರಿಗಳ ಸ್ವಾಧೀನಪಡಿಸಿ ತಾವು ಪುನಃ ತಮ್ಮ ಮೂಲಪೀಠಕ್ಕೆ ಹೋಗಿರಬಹುದು. ಹಾಗಿಲ್ಲದಿದ್ದರೆ ಆಯಾಯ ಪೀಠಗಳಿಗೊಳಪಟ್ಟ ಪಟ್ಟದ್ದೇವರ ಮಠಗಳು ಸಮೀಪ ಸಮೀಪದಲ್ಲಿ ಕಂಡುಬರುವದೇಕೆ? ಅಥವಾ ತಮ್ಮ ಕ್ಷೇತ್ರಗಳನ್ನು ಬಿಟ್ಟು ಸ್ಥಾನಾಂತರ ಮಾಡಿದ ಭಕ್ತರ ಮೇಲ್ವಿಚಾರಣೆ ಮಾಡುವದು ತಮಗೆ ಶಕ್ಯವಾಗುವದಿಲ್ಲವೆಂದು ಕೆಲವು ಸ್ಥಿರಪಟ್ಟಗಳನ್ನೂ ಕೆಲವು ಚರಪಟ್ಟಗಳನ್ನೂ ಅಲ್ಲಲ್ಲಿ ಸ್ಥಾಪಿಸಿ ಪೀಠಾಧಿಕಾರಿಗಳು ತಮ್ಮ ಪ್ರತಿನಿಧಿಗಳನ್ನು

ಕಳುಹಿಸಿರಬಹುದು. ಅಥವಾ ಪಂಚಪೀಠಾಧಿಕಾರಿಗಳು ಒಂದೇ ಸ್ಥಾನದಿಂದ ಹೊರಟು ದಿಕ್ಕುದಿಕ್ಕಿಗೆ ಧರ್ಮ ಪ್ರಸಾರ ಮಾಡುತ್ತ ಅಲ್ಲಲ್ಲಿ ಮಠಗಳನ್ನು ಸ್ಥಾಪಿಸಿ ತಮ್ಮ ಪಟ್ಟಚರಮೂರ್ತಿಗಳನ್ನು ನೇಮಿಸಿ ಕಡೆಗೆ ತಾವು ತಮಗೆ ಇಷ್ಟವಾದ ಐದು ಪೀಠಗಳನ್ನಲಂಕರಿಸಬಹುದು. ಏನೇ ಇರಲಿ. ಸಮಾಜದಲ್ಲಿ ಒಂದು ಸುವ್ಯವಸ್ಥೆಯುನೇರ್ಪಟ್ಟು ಅದು ಅತ್ಯಂತ ಪ್ರಬಲ ಸಮಾಜವಾಗಿದ್ದಿತೆಂದು ಕಂಡು ಬರುತ್ತದೆ.

## ಗುರುವಿನ ಮಹತ್ವ.

ವಾ। ಷ। ಗುಹೆಯೊಳಗೆ ಗೂಢದೊಳು ನೆಲೆಸಿರುವ ಜ್ಯೋತಿಯಂ।
ಬಹಿರಂಗದೋಳ್ ತಂದು ರೂಪಕ್ಕೆ ತೋರಿಸುವ
ಮಹಿಮನಂ ಭಕ್ತಜನರುಬ್ಬಿನಲಿ ಬೆಂಬತ್ತಿ ಪೋಗಲವರೇಂ
ಕಾಂಬರು? ।
ಸಹಿಸಲಸದಳವಾದ ಕೋಟಿ ಸೂರ್ಯರ ಬೆಳಕು ।
ಗಹನದಿಂ ಗೋಚರಿಸಲಡಗಿದರು ತೇಜದೊಳು ।
ಮಹಿಮೆಯುಂ ಬಣ್ಣಿಸಲುಯೆನಗಳವೆ ಸದ್ಗುರುವಿನೀತಂತ್ರದಾ
ಪಾಂಗಿನ ॥೧॥

ಬಾ. ಷ। ಶ್ರೀಗುರುವೆ ಸದ್ಗುರುವೆ ಮಂಗಲ
ದಾಗರವೆ ಸುಜ್ಞಾನ ಸದ್ಗುಣ
ಸಾಗರವೇ ಭವರೋಗವಾಸಿಗೆ ದಿವ್ಯ ಔಷಧಿಯೇ ।
ರಾಗರಹಿತ ವಿಚಾರ ಭರಿತನೆ
ಭೋಗರಾಗವ ತ್ಯಾಗ ಮಾಡಿ ಸು
ಯೋಗರಂಜನೆಯಿಂದ ಮೆರೆಯುವ ಯೋಗಿ ಕೃಪೆಯಾಗು ॥

ಭಾ. ಷ। ಗುರುವೆ ಅರುವಿನ ಕುರುಹೆ ಸದ್ಗುಣ
ಸಿರಿಯು ಮಂಗಲ ಝರಿಯು ಜ್ಞಾನಾ
ಗರವೆ ಅಮೃತದ ತೊರೆಯು ಕಲ್ಪದ ತರುವೆ ಮಾರಾರಿ ।
ಹರಿಯು ಶೀತಲದ ಮೃತವಾಹವೋ
ತರಣಿ ಕಿರಣದ ದಿವ್ಯ ತೇಜವೋ
ಸ್ಫುರಿತ ವಹ್ನಿಯ ಕಿಡಿಯು ರಾಶಿಯೋ ನಿನ್ನ ಕಾಂತಿಗಡಾ ॥

## ಕುರುಡ.



ಕುರುಡಾಗಿ ಮರುಗುತಿರುವೆ!
ಹರಹರನೆ,
ಕುರುಡಾಗಿ ಕೊರಗುತಿರುವೆ
ಕತ್ತಲೆಯೆ ಕತ್ತಲೆಯು, ಕತ್ತಲೆಯೆ ಕತ್ತಲೆಯು!
ಸುತ್ತಿಹುದು ಎತ್ತೆತ್ತಲೀಕ್ಷಿಸಿದೊಡತ್ತತ್ತ!
ಮುತ್ತಿಹುದು ಒಳಹೊರಗು! ಹತ್ತಿಹುದು ಮೇಲ್ಕೆಳಗು!
ಸತ್ತಿರುವೆ ಜೀವಿಸಿಯು! ಸತ್ತು ನಾ ಜೀವಿಸುವೆ!
ಕತ್ತಲೆಯೆ ಜಗವಾಗಿದೆ!
ಹಾ! ದೇವ,
ಜಗವೆ ಕತ್ತಲೆಯಾಗಿದೆ!!

೨

ಕಣ್ಣಿನಿಂ ಬಗೆಯೋಡಿ, ಕಣ್ಣಿನಿಂ ಜಗನೋಡಿ,
ಕಣ್ಣಿನಿಂ ಸೊಗಕಂಡು, ಕಣ್ಣಿನಿಂ ಸೊಗಸುಂಡು,
ಕಣ್ಣಿನಿಂ ಬೆಳಕಿಡಿದು, ಕಣ್ಣಿನಿಂ ಚಲುವಡೆದು,
ಕಣ್ಣಿನಿಂದೆಲ್ಲವೂ, ಕಣ್ಣಿನೊಳಗೆಲ್ಲವೆನೆ,
ಜೀವವೇ ಭಾವವಾಯ್ತು!
ಭಾವಿಸಲು,
ಭಾವವೇ ಜೀವವಾಯ್ತು!!

೩

ಇಂತಿರುವ ಕಣ್ಣನೇ ಕಳಕೊಂಡು ನಾನಿಂದು
ಭ್ರಾಂತಿವಡೆದಳುತಿರುವೆ ಗಳಗಳನೆ ಬಗೆನೊಂದು!
ಚಿಂತೆಯಿಂ ಕುರುಡ! ನಾ ದಿಟವಾಗಿಯೂ ಕುರುಡ!
ಸಂತಸದಿ ನಾನಂದು ದಿಟ್ಟಿಸಿದ ನೋಟಗಳು
ಕರಿಪಟದ ಮೇಲ್ತೋರುವ
ಚಿತ್ರದೊಲು
ತಿರುಗುವವು ಹೇ ಶಿವಶಿವಾ!

೪

ಹರುಷದಿಂ ನಿರುಕಿಸುತ ತಣಿಯಬೇಕೆಂದೆಣಿಸಿ
ಧರೆಯನಿದನೆಲೆ ದೇವ, ನಿರ್ಮಾಣಮಾಡಿರುವೆ!
ಮೆರೆಯುತಿಹ ಸರಸವಹ ಹರುಷವಹ ನೋಟಗಳ
ನಿರುಕಿಸುತ ನಿನ್ನಂತೆ ಹರುಷಗೊಳಬೇಕೆನಲು
ಕುರುಡನಾಗಿರುವೆನಲ್ಲ!
ಅಕಟಕಟ!
ಮರುಳನಾಗಿರುವೆನಲ್ಲ!

೫

ಮಾರಹರ ಜಗದೊಳಗೆ ಕಣ್ಣಿನಿಂ ನೋಡಲ್ಕೆ
ಬಾರದಿಹ ನೋಟಂಗಳುಂಟೇನು? ಕೇಳಲ್ಕೆ
ಬಾರದಿಹ ವಚನಂಗಳಿರುವವೇ ನುಡಿಯಲ್ಕೆ
ಬಾರದಿಹ ಶಬ್ದಂಗಳಿರುತಿಹವೆ? ಇದ್ದಿರಲು,
ಕಣ್ಣು ಕಿವಿ ಬಾಯಿಗಳನು
ಹೇ ದೇವ,
ಇಲ್ಲದೊಲು ಮಾಡು ನೀನು!

೬

ನೀನು ಪರಿಪೂರ್ಣನಿರೆ ನಿನ್ನ ಸೃಷ್ಟಿಯದೆಂತು
ಹೀನವಹುದೆಂತ ಪರಿಪೂರ್ಣವಹುದರಿಯೆನೇ?
ಜಾನಿಸಲ್ಕೆಲ್ಲವೂ ನನ್ನದೇಯಪರಾಧ!
ಮಾನನಿಧಿ ಜಗದ ಸೊಗವೇ ನಿನ್ನ ಹೆಬ್ಬಾಸೆ!
ನಾನು ಗೈದಿರುವದನ್ನು
ತಪ್ಪದಲೆ
ನಾನೆ ಯುಣ್ಣುತಲಿರುವೆನು!

೭

ಹೊರಗಣ್ಣು ಮುಚ್ಚಿರಲು, ಒಳಗಣ್ಣು ತೆರೆಯುವದೆ?
ತರೆದು ತನ್ನೊಳಗಿರುವ ಬೆಳಕನ್ನು ನಿರುಕಿಪುದೆ?

ನಿರುಕಿಸುತ ಹೊರಗಿರುವ ಬೆಳಕನ್ನು ಮರೆಯುವದೆ?
ಮರೆಯುತಲಿ ತನ್ನೊಳಿಹ ಬೆಳಕಿನೊಳು ಬೆರೆಯುವದೆ?
ಬೆರೆಯುವ್ರೋಲೊಳಬೆಳಕದು
ಹೊರಬೆಳಕಿ
ನಿಂದೆ ಬಲು ಚಲುವಿರುವದೇ?

**ಈಶ್ವರ ಸಣಕಲ್ಲ.**

---

# ರುದ್ರಾಕ್ಷಿ.

ಪಾ. ಷ- ಶಿವ ನೇತ್ರಬಿಂದುವಿದು ಶಿವಸೂತ್ರಗೊಂಡಿಹುದು
ಶಿವನ ಭಕ್ತರ ಕಂಠವನ್ನಾಂತು ಶೋಭಿಸುದು
ಶಿವನೇಕಮುಖ ಪಂಚಮುಖನೆಂಬುದಂ ತಿಳುಪಿ ಭವರೋಗ
ಮಂ ನೀಗುಗುಂ।
ಶಿವನ ಪ್ರಿಯಕರ ವಸ್ತು ಶಿವಭಕ್ತರಲ್ಲದೊಡೆ
ಭವಿಲೋಕ ಕಂಠದೊಳು ಧರಿಸಿದೊಡೆ ಶೋಭಿಪುದೆ
ಶಿವಲೋಕ ಸೌಖ್ಯಮಂ ನೀಡಲ್ಕೆ ಜನ್ಮಿಸಿದ ತಾರೆ ನೀನಾರೆ
ಪೇಳೆ ॥

ರುದ್ರಾಕ್ಷಿ ಎಂದರೇನು? ಅದೊಂದು ಗಿಡದ ಕಾಯಿಯೆಂಬುದು ಎಲ್ಲರಿಗೂ ಗೊತ್ತಿದ್ದ ಮಾತೇ ಸರಿ. ಆದರೆ 'ರುದ್ರಾಕ್ಷಿ' ಇದರ ಅರ್ಥವು ರುದ್ರನ ಕಣ್ಣು ಅರ್ಥಾತ್ ಪರಶಿವನ ನೇತ್ರವು ಎಂದಾಗುತ್ತದೆ. ಶಿವನಿಗೆ ಸೂರ್ಯನೇತ್ರ, ಚಂದ್ರನೇತ್ರ, ಅಗ್ನಿನೇತ್ರಗಳೆಂಬ ತ್ರಿನೇತ್ರಗಳಿರುವವೆಂದು ವರ್ಣನೆಯಿರುವದಷ್ಟೇ. ರುದ್ರಾಕ್ಷಿಯೆಂದರೆ ಇವುಗಳಲ್ಲಿ ಯಾವ ನೇತ್ರವೆಂದು ತಿಳಿಯಬೇಕು? 'ರುದ್ರ' ಇದರ ಅರ್ಥವು ಭಯಂಕರ ಎಂದಾಗುತ್ತದೆ, ರುದ್ರಾಕ್ಷಿಯೆಂದರೆ ಭಯಂಕರವಾದ ನೇತ್ರವೆಂಬರ್ಥ. ಈ ಮೂರು ಕಣ್ಣುಗಳಲ್ಲಿ ಭಯಂಕರವಾದ ನೇತ್ರವಾವುದು? ಸೂರ್ಯನೇತ್ರವು ಸಕಲಚರಾಚರ ವಸ್ತುಗಳನ್ನು ಸಂರಕ್ಷಿಸುವದರಿಂದ ಅದು ಭಯಂಕರವಲ್ಲ; ಚಂದ್ರನೇತ್ರವು ಜಗತ್ತಿಗೆ ಶೈತ್ಯವನ್ನೂ ಆಲ್ಹಾದವನ್ನೂ ಉಂಟುಮಾಡುತ್ತಿರುವದರಿಂದ ಅದೂ ಭಯಂಕರವಲ್ಲ. ಆದರೆ

ಅಗ್ನಿನೇತ್ರವು ಕೈಗೆ ಸಿಕ್ಕದ್ದನ್ನೆಲ್ಲ ಸುಟ್ಟು ಭಸ್ಮ ಮಾಡಿ ಬಿಡುವದರಿಂದ ರುದ್ರಾಕ್ಷಿಯೆಂದರೆ ಭಯಂಕರವಾದ ಉರಿಗಣ್ಣೇ ಎಂದು ನಮಗೆ ಸಹಜವಾಗಿ ಕಂಡು ಬರುವದು. ಆ ಉರಿನೇತ್ರದಿಂದ ಶಿವನು ಏನು ಮಾಡಿದನು? ಅದರಿಂದ ಅವನು ಮನ್ಮಥನನ್ನು ಸುಟ್ಟು ಬೂದಿ ಮಾಡಿದನು. ಸರ್ವಸಂಗ ಪರಿತ್ಯಾಗ ಮಾಡಿ ಬೂದಿಯನ್ನು ಬಡಿದುಕೊಂಡು ಸ್ಮಶಾನದಲ್ಲಿ ಪಿಶಾಚಿಗಳೊಡನೆ ವಾಸ ಮಾಡುವ ಶಿವನಿಗೂ ಸಹ ಮನ್ಮಥನ ಕಾಟವೇ? ಅಂದ ಬಳಿಕ ಮಾನವರ ಪಾಡೇನು? ಮನ್ಮಥನೆಂಥ ಬಲಶಾಲಿ ಇರಬಹುದು? ಶಿವನು ಕಾಮನನ್ನು ಸುಟ್ಟರೂ ಆತನು ಶಿವನ ಸಹವಾಸವನ್ನಷ್ಟೇ ಬಿಟ್ಟನಲ್ಲದೆ ಲೋಕದ ಜನರ ಸಹವಾಸವನ್ನೆಂದಿಗೂ ಬಿಡದೆ ಅವರನ್ನು ಕಾಡುತ್ತಿರುವನು. ಮನುಷ್ಯನಿಗೆ ಎಂಥ ವೈರಾಗ್ಯ ಬಂದರೂ ಒಮ್ಮೆಲ್ಲೊಮ್ಮೆ ಕಾಮನ ಕಾಟ ತಪ್ಪಿದ್ದಲ್ಲ. ಅಂತೆಯೇ ವಾತಾಂಬು ಪರ್ಣಾಸನರಾದ ವಿಶ್ವಾಮಿತ್ರ ಪಾರಾಶರ ಪ್ರಭೃತಿಗಳು ವಿರಾಗಿಗಳಾಗಿದ್ದರೂ ಮನ್ಮಥನ ಕೈಯಲ್ಲಿ ಶಿಲ್ಕಿ ಮಣ್ಣು ಮುಕ್ಕಿ ಹೋದರು. ರುದ್ರಾಕ್ಷೆಯನ್ನು ಧರಿಸುವದೆಂದರೆ ಪರಸ್ತ್ರೀಯರಿಗೆ ಹಂಬಲಿಸದಿರುವದು. ಪರಸ್ತ್ರೀಯರ ಬಗ್ಗೆ ಕಾಮವಾಸನೆಯು ಉತ್ಪನ್ನವಾದರೆ ಕಿಡಿಯನ್ನು ಕಾಣುವ ಕಣ್ಣುಗಳಿಂದ ಆ ವಾಸನೆಯನ್ನು ಧ್ವಂಸ ಮಾಡಬೇಕು. ಕಿಡಿಯನ್ನು ಕಾರುವ ಕಣ್ಣುಗಳೇ ರುದ್ರಾಕ್ಷಿಗಳು. ರುದ್ರಾಕ್ಷಿಗಳನ್ನು ಬೇಕಾದಷ್ಟು ಧರಿಸಿಕೊಂಡು ವ್ಯಭಿಚಾರಿಗಳಾಗಿ ಸಂಚರಿಸಿದರೆ ರುದ್ರಾಕ್ಷಿಗಳನ್ನು ಧರಿಸಿದ್ದು ವ್ಯರ್ಥವು. ಅದರಿಂದ ಯಾವ ಫಲವೂ ಲಭಿಸದು. ಕೇವಲ ಆಡಂಬರಕ್ಕಾಗಿ ಧರಿಸಿದಂತಾಗುತ್ತದೆ. ಮನುಷ್ಯನಿಗೆ ಬಾಹ್ಯಶೋಭೆಯಷ್ಟೇ ಚಂದ ಕಾಣದು *Handsome is that handsome does* ಅಂದರೆ ಸುಂದರ ಕೃತ್ಯಗಳನ್ನು ಮಾಡುವಂಥವನೇ ಚಲುವನೆಂದು ಗೋಲ್ಡಸ್ಮಿಥರವರು ಹೇಳಿದ್ದಾರೆ. ಬಾಹ್ಯಕ್ಕೆ ತಕ್ಕಂತೆಯೇ ನಮ್ಮ ಅಂತರಂಗವು ಪರಿಶುದ್ಧವಾಗಿರಬೇಕು. ಅಂತರಷ್ಟಾವರಣಗಳನ್ನೊಳಕೊಂಡೇ ಬಾಹ್ಯಾಷ್ಟಾವರಣಗಳಿರುವದರಿಂದ ಅವುಗಳಿಗೆ ನಾವು ಮಹತ್ವ ಕೊಡಬೇಕಾಗುತ್ತದೆ. ಉದಾಹರಣಾರ್ಥವಾಗಿ ರುದ್ರಾಕ್ಷಿಯೆಂದರೆ ಒಂದು ಗಿಡದ ಕಾಯಿಯು. ಅದು ಒಂದು ವೇಳೆ ಔಷಧದ ಮೂಲಿಕೆಯೂ ಆಗಿರಬಹುದು. ಅದನ್ನು ದೇಹಕ್ಕೆ ಧರಿಸುವದರಿಂದ ಶರೀರಕ್ಕೆ ಯಾವ ಲಾಭವಾಗುವದೋ ನಮಗೆ ಆರೋಗ್ಯಶಾಸ್ತ್ರದ ದೃಷ್ಟಿಯಿಂದ ನಮಗೆ ಏನೂ

ತಿಳಿಯದು. ರುದ್ರಾಕ್ಷಿಗಳನ್ನು ಧರಿಸಿದರೆ ಭೂತಪಿಶಾಚಿಗಳ ಬಾಧೆ ಇಲ್ಲವೆಂದು ಕೆಲವರು ಹೇಳುವರು. ರುದ್ರನು ಪಿಶಾಚಿಗಳ ಸಂಗಡ ವಾಸಿಸುವದರಿಂದ ಅವನ ಅಕ್ಷಿಗಳು ಅವಕ್ಕೆ ಪ್ರಿಯಕರವಲ್ಲವೇ? ರುದ್ರಾಕ್ಷಿಧಾರಣದಿಂದ ಅಣಿಮಾದ್ಯಷ್ಟ ಸಿದ್ಧಿಗಳು ಪ್ರಾಪ್ತವಾಗುವವೆಂಬ ಪ್ರತೀತಿ ಇರುವದು. ಆದರೆ ಇವು ಎಷ್ಟರ ಮಟ್ಟಿಗೆ ನಿಜವಾಗಿರುವವೋ ನಾವರಿಯೆವು. ಒಂದು ವೇಳೆ ನಿಜವಾಗಿಯೇ ಇದ್ದರೂ ಭೂತೋಚ್ಚಾಟನಕ್ಕಾಗಿಯೂ ಅಷ್ಟಸಿದ್ಧಿಗಳಿಗಾಗಿಯೂ ರುದ್ರಾಕ್ಷಿಯನ್ನು ವೀರಶೈವರು ಧರಿಸುವದು ಹೇಯಾಸ್ಪದವು. ಸುಡುಗಾಡ ಸಿದ್ಧರೂ ಗಾರುಡಿಗರೂ ಆ ಸಂಬಂಧವಾಗಿ ರುದ್ರಾಕ್ಷಿಗಳನ್ನು ಧರಿಸಬಹುದು. ರುದ್ರಾಕ್ಷಿಯನ್ನು ವೀರಶೈವರು ಧರಿಸುವದರ ಮುಖ್ಯ ಉದ್ದೇಶವು ಮೇಲಿಂದ ಮೇಲೆ ಮನುಷ್ಯನಿಗೆ ತಾಪವನ್ನು ಕೊಡುವ ನಾನಾ ಬಗೆಯ ವಾಸನೆಗಳನ್ನಳಿದು ಬಿಡುವದಾಗಿರುತ್ತದೆ. ವಾಸನೆಗಳನ್ನಳಿದದ್ದೇ ರುದ್ರಾಕ್ಷಿಯನ್ನು ಧರಿಸಿದ್ದರ ಫಲವು.

ರುದ್ರಾಕ್ಷಿಯ ಮಹತ್ವವೇನು? ರುದ್ರಾಕ್ಷಿಯು ದೇಹಕ್ಕೆ ಶೋಭೆಯು, ವೀರಶೈವರಿಗೆ ಲಕ್ಷಣವು. ಕಾಮವಾಸನೆಯನ್ನು ಅಳಿದುಬಿಡುವ ಚಿಹ್ನವು. ಸಾಕ್ಷಾತ್ ಪರಶಿವನೇ ಸುಟ್ಟು ಬೂದಿಮಾಡಿದ್ದರೂ ಸಾಯದ ಕಾಮನನ್ನು ನಾವು ವಿನಾಶಗೊಳಿಸುವದೆಂತು? ಪುರುಷನಿಗಾಗಲಿ ಸ್ತ್ರೀಯಳಿಗಾಗಲಿ ಪುರಾಣವೈರಾಗ್ಯ, ಪ್ರಸೂತವೈರಾಗ್ಯ, ಸ್ಮಶಾನವೈರಾಗ್ಯಗಳು ನಿಮಿಷಮಾತ್ರ ಬರುವದುಂಟು. ಅದೇ ವೈರಾಗ್ಯವು ಕಡೆತನಕ ಉಳಿದರೆ ಮಾತ್ರ ಮನುಷ್ಯನಲ್ಲಿ ಅದ್ಭುತಸಾಮರ್ಥ್ಯ ಉಂಟಾಗುವದು. ದರಿದ್ರನ ಮನೋರಥಗಳು ಉತ್ಪನ್ನವಾಗಿ ಅಲ್ಲಿಯೇ ಲಯವಾಗಿ ಹೋಗುವಂತೆ ಇಂಥ ವೈರಾಗ್ಯಗಳು ಮಾನವಪ್ರಾಣಿಗಳ ಜೀವಿತದಲ್ಲಿ ಕಾಲಕಾಲಕ್ಕೆ ಉದಯಿಸಿ ನಿಮಿಷಮಾತ್ರವಿದ್ದು ಪುನಃ ನಷ್ಟವಾಗಿ ಹೋಗುವವು. ಈ ಮೇರೆಗೆ ವಿಷಯ ಲೋಲುಪ್ತತೆಯ ಬಗ್ಗೆ ಅನೇಕರಿಗೆ ಹೇಯವುಂಟಾಗಿ ಸಂಸಾರ ಪರಿತ್ಯಾಗಮಾಡಿಬಿಡುತ್ತಾರೆ. ಆದರೆ ಸ್ವಲ್ಪ ವರ್ಷಗಳು ಗತಿಸಿದ ಬಳಿಕ ಅವರಿಗೆ ಅದರ ಬಗ್ಗೆ ಪಶ್ಚಾತ್ತಾಪವಾಗಬಹುದು. ಇವರು ಕಾಮವನ್ನು ಪೂರಾ ನಾಶಮಾಡಿದಂತಾಗಲಿಲ್ಲ. ಕೆಲವರು ಯಾಕೆ ನಾವು ಸನ್ಯಾಸಿಗಳಾದೆವೋ ಎಂದು ಮನದಲ್ಲಿ ಯಾವಜ್ಜೀವವೂ ಕುದಿಯುವರು. ಅಂಥವರು ರುದ್ರಾಕ್ಷಿಯನ್ನು ಧರಿಸಿದ್ದು ನಿರರ್ಥಕವು. ಸನ್ಯಾಸಾಶ್ರಮಿಗಳಾದ ವಿರಕ್ತರು ನೈಷ್ಠಿಕ ಬ್ರಹ್ಮಚಾರಿಗಳಾಗಿಯೇ ಜೀವಿಸ

ಬೇಕು ಮನೋವಾಕ್ಕಾಯಗಳಿಂದ ಬ್ರಹ್ಮಚರ್ಯವನ್ನು ಪಾಲಿಸಬೇಕು. ಹೆಣ್ಣಿನ ಮೇಲಿನ ಆಶೆಯು ಕಡೆಗೆ ಕಿಡಿಗಣ್ಣಿನಿಂದ ನೋಡಬೇಕು.

ಬರೀ ಹೆಣ್ಣಿನ ಮೇಲಿನ ಮೋಹವನ್ನು ಬಿಟ್ಟರೆ ಕಾಮವನ್ನು ಜಯಿಸಿದಂತಾಗಲಿಲ್ಲ ಆದರೆ ಹೆಣ್ಣಿನ ಜೊತೆಯಲ್ಲಿರುವ ಹೊನ್ನು ಮಣ್ಣುಗಳನ್ನು ಪರಿತ್ಯಜಿಸಬೇಕು. ಸನ್ಯಾಸಿಗಳಂತೂ ಹೊನ್ನು ಹೆಣ್ಣು ಮಣ್ಣುಗಳನ್ನಂತೂ ತ್ರಿಕರಣ ಪೂರ್ವಕವಾಗಿ ಪರಿತ್ಯಜಿಸಬೇಕು. ಕೆಲವರು ಬಹಿರಂಗದಲ್ಲಿ ರುದ್ರಾಕ್ಷಿಗಳಿಂದ ಪರಿಶೋಭಿತರಾಗಿದ್ದರೂ ಅಂತರಂಗದಲ್ಲಿ ವ್ಯಭಿಚಾರಿಗಳೂ ಆಶೆಬುರುಕರೂ ಆಗಿರುವರು. ಇನ್ನು ಗೃಹಸ್ಥರು ತನುಮನ ಬಳಲಿಸಿ ಶುದ್ಧ ಕಾಯಕದಿಂದ ನ್ಯಾಯವಾಗಿ ಹಣಗಳಿಸಿ ಗುರುಲಿಂಗಜಂಗಮಕ್ಕೆ ದಾಸೋಹವ ಮಾಡಿ ಮಿಕ್ಕ ಪ್ರಸಾದವನ್ನು ಸೇವಿಸಿದರೆ ಅವರಲ್ಲಿ ಹೊನ್ನು ಹೆಣ್ಣು ಮಣ್ಣಿನಾಶೆಯು ಇಲ್ಲದಂತಾಗುತ್ತದೆ. ಅನ್ಯಾಯದಿಂದ ಪರರ ಹೊಲಮನೆ ಬರೆಯಿಸಿಕೊಂಡು ರುದ್ರಾಕ್ಷಿಗಳನ್ನು ಧರಿಸಿಕೊಂಡ ವೀರಶೈವ ಗ್ರಹಸ್ಥರು ವ್ಯಾಜ್ಯವಾಡಿ ತಾವು ಹಾಳಾಗಿ ಎರಡನೆಯವರನ್ನೂ ಹಾಳುಮಾಡುವರು. ಇದು ರುದ್ರಾಕ್ಷಿಯನ್ನು ಧರಿಸಿದ್ದರ ಫಲವೋ? ನಾವು ಪರಸ್ತ್ರೀಯರನ್ನೂ ಪರರ ವಸ್ತುಗಳನ್ನೂ ಮನಸ್ಸಿನಲ್ಲಿ ಬಯಸಬಾರದು. ಅಂದರೇನೇ ರುದ್ರಾಕ್ಷಿಯನ್ನು ಧರಿಸಿದ್ದಕ್ಕೆ ಸಾರ್ಥಕವು. ನಾವು ವಿಭೂತಿಯನ್ನು ಧರಿಸಿ ಕಾಮಕ್ರೋಧಾದಿಗಳನ್ನಳಿದೆವೆಂದು ತಿಳಿದರೂ ಕೆಲವು ಆಕರ್ಷಕ ವಸ್ತುಗಳ ಧ್ಯಾನದಿಂದಾಗಲಿ ಸಂಗದಿಂದಾಗಲಿ ಮೊದಲು ಕಾಮವು ಉದ್ಭವಿಸುತ್ತದೆ. ಕಾಮವೊಂದು ಹುಟ್ಟಿದಿದ್ದರೆ ಕ್ರೋಧ ಲೋಭ ಮೋಹ ಮತ್ಸರಗುಣಗಳು ಹುಟ್ಟುವದೇ ಇಲ್ಲ. ಆದುದರಿಂದ ಕಾಮವನ್ನಳಿಯುವದೇ ಆಧ್ಯಾತ್ಮಿಕ ಪ್ರಗತಿಗೆ ಪ್ರಾಮುಖ್ಯವಾದ ಸಾಧನವು. ಕಾಮವು ನಮ್ಮಲ್ಲಿ ಉದ್ಭವಿಸಿದೊಡನೆ ಜಾಗರೂಕರಾಗಿ ಭಯಂಕರ ದೃಷ್ಟಿಯಿಂದ ನೋಡಬೇಕು. ಅಂದರೆ ರುದ್ರಾಕ್ಷಿಯನ್ನೂ ಧರಿಸಬೇಕು. ಶ್ರೀಭಗವದ್ಗೀತೆಯಲ್ಲಿ 'ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ। ಸಂಗಾತ್ ಸಂಜಾಯತೆ ಕಾಮಃ ಕಾಮಾತ್ ಕ್ರೋಧೋಭಿಜಾಯತೆ । ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿ ವಿಭ್ರಮಃ। ಸ್ಮೃತಿ ಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥ ಎಂದು ಹೇಳಿದೆ. ಮನುಷ್ಯನು ಯಾವಾಗಲೂ ವಿಷಯಗಳನ್ನು ಚಿಂತನೆ ಮಾಡಹತ್ತಿದರೆ ಆತನಿಗೆ ಆ ವಿಷಯದ ಸಂಸರ್ಗ

ಉಂಟಾಗುವದು. ಆ ವಸ್ತುವಿನ ಸಂಸರ್ಗವಾದ ಕೂಡಲೇ ಅದನ್ನು ಸಂಗ್ರಹಿಸಿಟ್ಟುಕೊಳ್ಳಬೇಕೆಂಬ ಆಶೆಯುತ್ಪನ್ನವಾಗುವದು. ನಮ್ಮ ಆಶೆಯು ಭಗ್ನವಾದರೆ ನಮಗೆ ಸಿಟ್ಟುಬರುತ್ತದೆ. ಸಿಟ್ಟು ತಲೆಗೇರಿದರೆ ನಮ್ಮಲ್ಲಿ ಮೋಹಾಂಧಕಾರವು ನೆಲಿಸುವದು. ಮೋಹಾಂಧಕಾರದಿಂದ ಬುದ್ಧಿ ಭ್ರಮಣವಾಗುತ್ತದೆ. ಸ್ಮೃತಿ ತಪ್ಪಿದರೆ ವಿನಾಶವು ಪ್ರಾಪ್ತಿಯಾಗುತ್ತದೆ. ಆದುವರಿಂದ ಮೊದಲು ನಾವು ರುದ್ರಾಕ್ಷಿ ಎಂಬ ಅಗ್ನ್ಯಸ್ತ್ರದಿಂದ ಕಾಮವೆಂಬ ವೈರಿಯನ್ನು ಸುಟ್ಟುಸೂರೆಮಾಡಬೇಕು. ಶ್ರೀ ನಿಜಗುಣ ಶಿವಯೋಗಿಗಳು ಪರಮಾತ್ಮನನ್ನು ಕುರಿತು ಅಗ್ನಿನೇತ್ರದಿಂದ ರಕ್ಷಿಸಬೇಕೆಂಬುದಾಗಿ ಈ ಪ್ರಕಾರ ಬೇಡಿಕೊಂಡಿದ್ದಾರೆ. "ಮಿಸುಕಲೀಯದೆನ್ನ ಮೋಹ ವಿಸರವೆಂಬ ವನವನುರುಹಿ। ಭಸಿತ ವೆನಿಸಿ ರುದ್ರ ನಿಮ್ಮ ನೊಸಲವಹ್ನಿನೇತ್ರದಿಂದೆ। ನೋಡಲಾಗದೆ ದೇವ ನೋಡಲಾಗದೆ"॥ ಅಂದರೆ ಈ ಸಂಸಾರದಲ್ಲಿ ಸಿಲ್ಕಿದ ನನ್ನ ಮರವೆಯೆಂಬ ಕಾನನವನ್ನು ನಿನ್ನ ಅಗ್ನಿನೇತ್ರದಿಂದ ದಹಿಸು ಎಂದು ಪ್ರಾರ್ಥಿಸಿಕೊಂಡಿದ್ದಾರೆ. ನಾವು ಯಾರೆಂಬುದನ್ನು ಮರೆತು ಮಾಯಾಪ್ರಪಂಚದಲ್ಲಿ ಸಿಲ್ಕಿ ಕಾಮ ಕ್ರೋಧಾದಿಗಳಿಗೀಡಾಗಿ ಬಿಟ್ಟಿದ್ದೇವೆ. ಅದನ್ನು ಹೋಗಲಾಡಿಸಿಕೊಳ್ಳುವದಕ್ಕೆ ಪರಶಿವನ ಅಗ್ನಿನೇತ್ರದ ಅನುಗ್ರಹವನ್ನು ನಾವು ಪಡೆಯಬೇಕು. ಅರ್ಥಾತ್ ರುದ್ರಾಕ್ಷಿಯನ್ನು ಧಾರಣ ಮಾಡಬೇಕು. ಬೆಂಕಿಯ ಬಳಿಗೆ ಕರಡಿಯು ಹೋಗಲಿಕ್ಕೆ ಅಂಜುವಂತೆ ಕಾಮಕ್ರೋಧಾದಿ ಗುಣಗಳು ರುದ್ರಾಕ್ಷಿಯನ್ನು ಧರಿಸಿದವರ ಅರ್ಥಾತ್ ಪರಶಿವನ ಅನುಗ್ರಹವನ್ನು ಪಡೆದವರ ನೆರವಿಗೆ ಬರಲಾರವು.

ಜ್ಞಾನಕ್ಕೆ ಅಗ್ನಿಯೆಂದು ಆರೋಪ ಮಾಡಿರುವರಷ್ಟೇ. ಅಗ್ನಿ ಎಂದರೆ ಜ್ಞಾನವು. ಅಗ್ನಿ ನೇತ್ರವೆಂದರೆ ಜ್ಞಾನನೇತ್ರವು. ರುದ್ರಾಕ್ಷಿಯೆಂದರೆ ಜ್ಞಾನ ನೇತ್ರವೆಂದ ಹಾಗಾಯಿತು. ರುದ್ರಾಕ್ಷಿಯನ್ನು ಧರಿಸುವದೆಂದರೆ ಪ್ರಪಂಚವು ಮಿಥ್ಯವಾದುದೆಂತಲೂ ಪರಮಾತ್ಮನೊಬ್ಬನೇ ಸತ್ಯವೆಂತಲೂ ನಮಗೆ ಜ್ಞಾನ ಉಂಟಾಗುವಿಕೆಯು. ಜ್ಞಾನದಿಂದ ತಮೋಗುಣ, ಅಜ್ಞಾನ, ದುರ್ಗುಣಾದಿಗಳನ್ನು ನಾವು ಸುಟ್ಟುಬಿಡಲಿಕ್ಕೆ ಬರುತ್ತದೆ. ಜ್ಞಾನದಲ್ಲಿ ನಾವು ವ್ಯವಹಾರ ಜ್ಞಾನ, ಶಾಸ್ತ್ರಜ್ಞಾನ, ತತ್ವಜ್ಞಾನಗಳೆಂದು ಮೂರು ಭಾಗಗಳನ್ನು ಮಾಡಬಹುದು. ನಾವು ವ್ಯವಹಾರ ಜ್ಞಾನ ಪಡೆದಿದ್ದರೆ ಮೋಸಗಾರರ ಬಲೆಗೆ ಬೀಳದೆ ಉಪಾಯದಿಂದಲೂ ಚತುರತನದಿಂದಲೂ ಸಾರವಾಗಿ ಪ್ರಪಂಚವನ್ನು ಸಾಗಿಸಿಕೊಂಡು ಹೋಗುವೆವು. ಶಾಸ್ತ್ರಜ್ಞಾನ

ವನ್ನು ಪಡೆದಿದ್ದರೆ ಜಗೆತ್ತಿನೊಳಗಿನ ನಾನಾ ಶಾಖೆಗಳ ಸಂಬಂಧವಾಗಿ ಅರಿತುಕೊಂಡು ಆನಂದವನ್ನೂ ಆಶ್ಚರ್ಯವನ್ನೂ ವಿನೋದವನ್ನೂ ಗೌರ ವವನ್ನೂ ಪ್ರತಿಫಲವನ್ನೂ ಹೊಂದುವೆವು. ತತ್ವಜ್ಞಾನ ಸಂಪನ್ನರಾದರೆ ಒಳಿತಾವುದು ಕೆಡಕು ಯಾವದು ಪಾಪವಾವುದು ಪುಣ್ಯವಾವುದು ಸತ್ಯವಾವುದು ಮಿಥ್ಯವಾವುದು ಎಂಬ ಬಗ್ಗೆ ಸಾರಾಸಾರಾ ವಿಚಾರಿಸಿ ಅದ ರಂತೆ ಆಚರಿಸಿ ಮೋಕ್ಷ ಸುಖವನ್ನು ಪಡೆಯುವೆವು. ಅಂದಮೇಲೆ ಸಾಮಾ ನ್ಯರಿಗೂ ಪಂಡಿತರಿಗೂ ತತ್ವಜ್ಞಾನಿಗಳೂ ಜ್ಞಾನನೇತ್ರದಿಂದ ಸುಖಲಾಭ ಗಳನ್ನೇ ಪಡೆಯುವರಲ್ಲವೇ? ಆ ಜ್ಞಾನನೇತ್ರವೇ ರುದ್ರಾಕ್ಷಿಯೂ ರುದ್ರಾಕ್ಷಿ ಧಾರಣ ಮಾಡಿ ಜ್ಞಾನ ಶೂನ್ಯನಾದ ಪ್ರಾಣಿಗೆ ಪಶುವೆನ್ನಬೇಕೇ ಹೊರತು ಮನುಷ್ಯನೆನಲಾಗದು. "ಆಹಾರ ನಿದ್ರಾಭಯ ಮೈಥುನಂ ಚ ಸಾಮಾನ್ಯ ಮೇತತ್ ಪಶುಭಿರ್ನರಾಣಾಂ। ಜ್ಞಾನೋಹಿ ತೇಷಾಮಧಿಕೋ ವಿಶೇಷೋ ಜ್ಞಾನೇನ ಹೀನಾಃ ಪಶುಭಿಃಸಮಾನಾಃ॥ ಎಂಬ ನೀತಿ ವಾಕ್ಯವಿರುವದು. ಆಹಾರ, ನಿದ್ರೆ, ಭಯ ಮೈಥುನಾದಿಗಳು ಪಶುಗಳಿಗೂ ಮನುಷ್ಯರಿಗೂ ಸಾಮಾನ್ಯ ಧರ್ಮಗಳಾಗಿರುತ್ತವೆ. ಆದರೆ ಮನುಷ್ಯನಲ್ಲಿ ಜ್ಞಾನವೊಂದು ವಿಶೇಷ ಗುಣವಾಗಿರುವದರಿಂದ ಆತನು ಪಶುಗಳಿಗಿಂತಲೂ ಶ್ರೇಷ್ಠನೆನಿ ಸಿಕೊಳ್ಳುತ್ತಾನೆ.

ಶ್ರೀ ಸ್ವಾಮಿಗಳೂ ಶಿವಯೋಗಿಗಳೂ ತಮ್ಮ ಪ್ರೀತಿಗೆ ಪಾತ್ರರಾದ ಜನಗಳಿಗೆ ರುದ್ರಾಕ್ಷಿಗಳನ್ನು ಆಶೀರ್ವದಿಸುವರು. ಇದರರ್ಥವೇನು? ಮಹಾ ತ್ಮರ ಹಸ್ತದಿಂದ ಯಾವದೇ ಪದಾರ್ಥವು ನಮಗೆ ಪ್ರಾಪ್ತವಾದರೂ ಅದು ಒಳ್ಳೇ ಪ್ರೇಮದಿಂದ ಜೋಪಾನ ಮಾಡುತ್ತೇವೆ; ಇಲ್ಲವೆ ಪೂಜಿ ಸುತ್ತೇವೆ. ಇದರಿಂದ ಭಾವನೆಯ ಪಾವಿತ್ರ್ಯತೆಯು ಬೆಳೆಯಲಿಕ್ಕೆ ಅನು ವಾಗುತ್ತದೆ. ಶ್ರೀ ಸ್ವಾಮಿಗಳೂ ಶಿವಯೋಗಿಗಳೂ ನಮಗೆ ರುದ್ರಾಕ್ಷಿಗ ಳನ್ನು ದಯಪಾಲಿಸುವದೇಕೆ? ಹೀಗೆ ಮಾಡುವದು ನಮ್ಮ ಹಿತಕ್ಕಾ ಗಿಯೂ ಅಭಿವೃದ್ಧಿಗಾಗಿಯೂ ಅಲ್ಲದೆ ತಮ್ಮ ಹಿತಾಭಿವೃದ್ಧಿಗಳಿಗಲ್ಲ. ತಮ್ಮ ಪ್ರಾಣಕ್ಕಿಂತಲೂ ಹೆಚ್ಚೆಂದು ಅತ್ಯಂತ ನಯ ವಿನಯ ಭಕ್ತಿಗಳಿಂದ ಅಹೋರಾತ್ರಿ ಜಾಗ್ರತೆಯಿಂದ ಜೋಪಾನ ಮಾಡುತ್ತಿರುವ ರುದ್ರಾಕ್ಷಿಗ ಳನ್ನು ಅನ್ಯರಿಗೆ ಕೈಯೆತ್ತಿ ಕೊಡಬೇಕಾದರೆ ಅವರ ಮನಸ್ಸಿಗೆ ಎಷ್ಟು ವ್ಯಥೆಯಾಗುತ್ತಿರಬಹುದು? ಆದಾಗ್ಯೂ ಅದನ್ನೆಲ್ಲ ಸಹಿಸಿಕೊಂಡು ಕೇ ವಲ ನಮ್ಮಗಳ ಕಲ್ಯಾಣಾರ್ಥವಾಗಿ ಪ್ರೇಮಾಂತಃಕರಣದಿಂದ ನಮಗೆ

ಅವುಗಳನ್ನು ಆಶೀರ್ವದಿಸುವವರೆಂದ ಬಳಿಕ ಅವುಗಳನ್ನು ನಾವಾದರೂ ಹೇಗೆ ಜೋಪಾನ ಜತನ ಮಾಡ ಬೇಕೆಂಬದನ್ನು ನಾವೇ ಯೋಚಿಸ ತಕ್ಕದ್ದು. ಅವರು ತಮ್ಮ ಪ್ರಾಣಸ್ವರೂಪವಾದ ರುದ್ರಾಕ್ಷಿಗಳನ್ನು ದಯ ಪಾಲಿಸಿರುವದರಿಂದ ಅರ್ಥಾತ್ ತಮ್ಮ ಜೀವವನ್ನೇ ನಮ್ಮ ಕೈಯ್ಯಲ್ಲಿ ಕೊಟ್ಟಿರುವರೆಂದ ಬಳಿಕ ಜೀವವನ್ನು ಜತನ ಮಾಡಿದಂತೆ ಆ ರುದ್ರಾಕ್ಷಿ ಗಳನ್ನು ಜೋಕೆ ಮಾಡ ಬೇಕೆಂಬದು ಸ್ಪಷ್ಟವು. ಅವರ ಜೀವವು ಪವಿ ತ್ರವಾಗಿಯೂ, ಪರಿಶುದ್ಧವಾಗಿಯೂ, ಪ್ರಕಾಶ ಮಯವಾಗಿಯೂ ಇರುವ ವರಿಂದ ಅದಕ್ಕೆ ಕಲಂಕ ಬಾರದಂತೆ ನಾವು ಎಚ್ಚರ ದಿಂದಿರುವದೇ ರುದ್ರಾಕ್ಷಿಯನ್ನು ಆಶೀರ್ವಾದ ಹೊಂದಿದ್ದರ ಫಲ. ನಾವಾದರೂ ಪವಿ ತ್ರರೂ ಪರಿಶುದ್ಧಾಂತಃಕರುಣಿಗಳೂ ಕಾಮಕ್ರೋಧಾದಿ ವಿರಹಿತರೂ ಆದರೆ ಅವರ ಜೀವಿತಕ್ಕೆ ಕಲಂಕ ಬರುವದಿಲ್ಲ. ನಾವು ಹಾಗೆ ಆಗಲೆಂದೇ ರುದ್ರಾ ಕ್ಷಿಯನ್ನು ಆಶೀರ್ವದಿಸಿರುವರು. ಇದರ ವ್ಯತಿರಿಕ್ತನಾಗಿ ನಾವು ಆಚರಿಸಿ ದರೆ ಮಹನೀಯರ ಜೀವಹತ್ಯ ಮಾಡಿದ ಪಾಪವು ನಮಗೆ ತಟ್ಟಲಿರ ಲಾರದು. ಕೆಲವರು ರುದ್ರಾಕ್ಷಿಗಳನ್ನು ಕಾಶೀ ಮೊದಲಾದ ಸ್ಥಳಗಳಿಂದ ಬೆಲೆ ಕೊಟ್ಟು ತರಿಸುವರು. ಕೊಳ್ಳುವವರಾಗಲಿ ಮಾರುವವರಾಗಲಿ ಅನ ರ್ಘ್ಯವಾದ ರುದ್ರಾಕ್ಷಿಗಳಿಗೆ ಬೆಲೆಯನ್ನು ಕಟ್ಟುವದು ಆಧ್ಯಾತ್ಮಿಕ ದೃಷ್ಟಿ ಯಿಂದ ಒಳಿತಲ್ಲ. ಆಧ್ಯಾತ್ಮಿಕಕ್ಕೊಳಪಟ್ಟ ಯಾವ ವಸ್ತುವಿನಲ್ಲಿಯೂ ವ್ಯಾಪಾರೀ ಭಾವನೆಗೆ ಆಸ್ಪದ ವಿರಕೂಡದು. ಕೊಂಡ ರುದ್ರಾಕ್ಷಿಗಳಲ್ಲಿ ಪವಿತ್ರ ಭಾವವಳವಡದು. ಹಾಗಾದರೆ ಗುರುವಿನಿಂದ ಲಿಂಗ ಕಟ್ಟಿಸಿ ಕೊಳ್ಳುವದನ್ನು ಬಿಟ್ಟು ಪೇಟೆಯೊಳಗಿನ ಲಿಂಗವನ್ನು ತಾನೇ ಕಟ್ಟಿಕೊಂಡು ಪವಿತ್ರನಾದೆನೆನ್ನಲಿಕ್ಕೆ ಬಂದೀತು. ಆ ಮಾತು ಸರ್ವಥಾ ಆಗಲಾ ರದು. ಲಿಂಗ ಧಾರಣೆಗೆ ಗುರುವು ಹೇಗೆ ಬೇಕೋ ಹಾಗೆಯೇ ರುದ್ರಾಕ್ಷಿ ಯನ್ನು ಪೂಜ್ಯರಾದವರಿಂದ ಪಡೆದು ಕೊಳ್ಳಬೇಕು. ಸರ್ವಜ್ಞ ಮೂರ್ತಿಯು ಹೇಳಿರುವದೇನಂದರೆ "ಕಂಡವರ ಕಂಡು ತಾ ಕೊಂಡು ಲಿಂಗವ ಕಟ್ಟೇ। ಕೊಂಡಾಡಲರಿಯ ದಧಮಂಗೆ ಆ ಲಿಂಗ ಕೆಂಡವಂತಕ್ಕು ಸರ್ವಜ್ಞ॥" ಇಂದಮೇಲೆ ಗುರುವಿನಿಂದ ದೊರೆತ ಲಿಂಗವೇ ಶ್ರೇಷ್ಠ ವಾದಂತೆ ಮಹ ನೀಯರಿಂದ ಆಶೀರ್ವದಿಸಲ್ಪಟ್ಟ ರುದ್ರಾಕ್ಷಿಯೇ ಹೆಚ್ಚಿನದಲ್ಲದೆ ಕೊಂಡ ದ್ದೇನೂ ತರವಲ್ಲ.. ಆದ್ದರಿಂದ ರುದ್ರಾಕ್ಷಿಯನ್ನು ಮಹಾತ್ಮರ ಹಸ್ತ ದಿಂದಲೇ ಆಶೀರ್ವಾದ ತೆಗೆದು ಕೊಳ್ಳಬೇಕು. ಈ ಮೇರೆಗೆ ಲಿಂಗ, ಪೀಠಿಕೆ

ಶಿವದಾರಗಳನ್ನು ಮಾರುವದಾಗಲಿ ಕೊಳ್ಳುವದಾಗಲಿ ಅನುಚಿತವು. ಅವು ಎಲ್ಲ ವೀರಶೈವರಿಗೂ ಮಠಾದಿಗಳಲ್ಲಿ ಉಚಿತವಾಗಿ ದೊರೆಯುವಂತೆ ಸಮಾಜದವರು ಎಲ್ಲ ಕಡೆಯಲ್ಲಿಯೂ ವ್ಯವಸ್ಥೆ ಇಡುವದು ಸೆಟ್ಟಗೆ. ವ್ಯಾಪಾರಸ್ಥರು ಧರ್ಮಾದಾಯಕ್ಕಾಗಿ ಹಣವನ್ನು ಕೂಡಿಸಿ ಯಾವ ಸ್ವಾಮಿಗಳಿಗಾದರೂ ಸಮರ್ಪಿಸಿಬಿಡುವರು. ಅಂಥ ಎಷ್ಟೋ ಮಹಾಸ್ವಾಮಿಗಳು ಹೊಲ ಮನೆ ಬರೆಯಿಸಿಕೊಳ್ಳುವದರಲ್ಲಿಯೂ, ಬಂಧು ಬಾಂಧವರ ವಿವಾಹ ಕಾರ್ಯ ಮಾಡುವದರಲ್ಲಿಯೂ, ತಮ್ಮ ಪೂರ್ವಾಶ್ರಮದ ಮನೆತನದ ಸಾಲ ಸಂಬಂಧಗಳನ್ನು ತೀರಿಸುವದರಲ್ಲಿಯೂ ವೆಚ್ಚ ಮಾಡುತ್ತಾರೆ. ಆದರೆ ಸಮಾಜದ ದೊಡ್ಡ ದೊಡ್ಡ ಕಾರ್ಯಗಳನ್ನು ಮಾಡಿ ಪ್ರಖ್ಯಾತಿ ಹೊಂದದಿದ್ದರೂ ಚಿಂತೆಯಿಲ್ಲ. ಕೊನೆಗೆ ಭಕ್ತರ ಕಡೆಯಿಂದ ದುಡ್ಡನ್ನು ಎತ್ತಿಕೊಂಡು ಮಹಾಸ್ವಾಮಿಗಳು ಲಿಂಗಸಂಬಂಧದ ಯಾವತ್ತೂ ಪೂಜ್ಯ ಪದಾರ್ಥಗಳನ್ನು ಭಕ್ತಾದಿಗಳಿಗೆ ಆಶೀರ್ವದಿಸುವದು ಶ್ರೇಯಸ್ಕರವಲ್ಲವೇ? ಸ್ವಾಮಿಗಳು ಇಂಥ ಪವಿತ್ರ ಕಾರ್ಯವನ್ನು ಕೈಕೊಂಡಿದ್ದಾದರೆ ಅವರಿಗೆ ಸಹಾಯಮಾಡದಂಥ ಭಕ್ತರಾರು? ಅಜ್ಞಾನಿಗಳಾದ ಭಕ್ತರು ಸ್ವಾಮಿಗಳ ಸ್ವಾರ್ಥಕ್ಕೆ ದುಡ್ಡನ್ನು ಸಲ್ಲಿಸುತ್ತಿರಲು ಪರಾರ್ಥಕ್ಕೆ ಕೊಡಲಿಕ್ಕಿಲ್ಲವೇ?

ರುದ್ರಾಕ್ಷಿಗಳೆಷ್ಟು ಪ್ರಕಾರದವಿರುತ್ತವೆ? ವೀರಶೈವರು ವಿಶೇಷತಃ ಏಕಮುಖ ಹಾಗೂ ಪಂಚಮುಖದ ರುದ್ರಾಕ್ಷಿಗಳನ್ನು ಧರಿಸುವರು. ರುದ್ರಾಕ್ಷಿಯನ್ನು ಒಂಟಿಯಾಗಿ ಇಲ್ಲವೆ ಸರಮಾಡಿಕೊಂಡು ಕೊರಳಲ್ಲಿ ಹಾಕಿಕೊಳ್ಳುವರು. ಕೆಲವರು ಸಣ್ಣ ರುದ್ರಾಕ್ಷಿಯ ಸರಗಳನ್ನು ಜಪಮಾಲೆಗಗಳೆಂದು ಹೇಳಿ ಲಿಂಗಾರ್ಚನೆಯ ಕಾಲದಲ್ಲಿ ಜಪ ಮಾಡುತ್ತ ಎಣಿಕೆ ಹಾಕುವರು. ಕೆಲವರು ಭಕ್ತಿಯಿಂದಲೂ, ಅನೇಕರು ಆಡಂಬರದಿಂದಲೂ ಧರಿಸುವದುಂಟು. ಕೆಲವರು ರುದ್ರಾಕ್ಷಿಗೆ ಬಂಗಾರದ ಹೊದಿಕೆಯನ್ನು ಮಾಡಿ ತಮ್ಮ ಶೋಭೆಯನ್ನು ಹೆಚ್ಚಿಸಿಕೊಳ್ಳುವರು. ಕೆಲವರು ಒಂದಕ್ಕೊಂದು ಅಂಟಿಕೊಂಡ ಎರಡು ರುದ್ರಾಕ್ಷಿಗಳನ್ನು ಗೌರೀಶಂಕರ ಎಂಬ ಹೆಸರಿಟ್ಟು ಬಹು ಭಕ್ತಿಯಿಂದ ಧರಿಸುವರು. ಏಕಮುಖ ರುದ್ರಾಕ್ಷಿಯನ್ನು ಧರಿಸುವದರ ಅರ್ಥವೇನು? 'ಏಕಮೇವಾದ್ವಿತೀಯಂ ಬ್ರಹ್ಮ' ಅಂದರೆ ಆ ಪರವಸ್ತುವು ಒಂದೇ ಅದೆ ಎಂಬದನ್ನು ಸೂಚಿಸುತ್ತದೆ. ಎರಡೂ ಕಣ್ಣುಗಳ ದೃಷ್ಟಿಯು ಭ್ರೂಮಧ್ಯದಲ್ಲಿ ಏಕಾಕಾರವಾಗಿ ಅಗ್ನಿನೇತ್ರವೆಂಬದೊಂದೇ ನೇತ್ರವಾಗಿದೆ. ಏಕಮುಖ ರುದ್ರಾಕ್ಷಿಯನ್ನು ಧರಿಸುವದೆಂದರೆ ನಮ್ಮ ಎರಡೂ ನೇತ್ರಗಳ ದೃಷ್ಟಿಯನ್ನು ಭ್ರೂಮಧ್ಯದಲ್ಲಿರಿಸಿ ಆ ಅದ್ವಿ

ತೀಯುವಾದ ಪರಬ್ರಹ್ಮವನ್ನು ಕಾಣಬೇಕೆಂಬರ್ಥ. ಇನ್ನು ಪಂಚಮುಖ ರುದ್ರಾಕ್ಷಿಯನ್ನು ಧರಿಸುವದರ ಅರ್ಥವೇನು? ಪರಮಾತ್ಮನಿಗೆ ಪಂಚಮುಖಗಳಿರುವವೆಂದು ವರ್ಣನೆ ಇದೆ. ಅಂದರೆ ಪರಮೇಶ್ವರನು ಪಂಚತತ್ವಗಳನ್ನೊಳಕೊಂಡಿದ್ದಾನೆ. ನಮ್ಮಲ್ಲಿ ಆ ಪಂಚತತ್ವಗಳಿಗನುರೂಪವಾದ ಪಂಚೇಂದ್ರಿಯಗಳಿರುವವು. ಪರಮಾತ್ಮನು ಆ ಪಂಚತತ್ವಗಳನ್ನು ಯಾವ ಪ್ರಕಾರ ಕ್ರಮಬದ್ಧವಾದ ಸ್ಥಿತಿಯಲ್ಲಿರಿಸಿರುವನೋ ಅದರಂತೆಯೇ ನಾವು ಆ ಪಂಚೇಂದ್ರಿಯಗಳನ್ನು ಸುವ್ಯವಸ್ಥಿತವಾದ ರೀತಿಯಲ್ಲಿರಿಸತಕ್ಕದ್ದು. ಪಂಚಜ್ಞಾನೇಂದ್ರಿಯಗಳಲ್ಲಿ ನೇತ್ರವೇ ಪ್ರಾಮುಖ್ಯವಾಗಿರುವದರಿಂದ ಪಂಚಮುಖದ ರುದ್ರಾಕ್ಷಿಯನ್ನು ಧರಿಸುವದೆಂದರೆ ಕಣ್ಣು ಮೊದಲಾದ ಪಂಚೇಂದ್ರಿಯಗಳನ್ನು ಭದ್ರವಾಗಿರಿಸಿಕೊಳ್ಳಬೇಕೆಂಬರ್ಥ. ಜೋಡಿ ರುದ್ರಾಕ್ಷಿಗಳನ್ನು ಧರಿಸಬೇಕೆಂಬುವದರ ಅರ್ಥವೇನು? ಈ ವಿಶ್ವವು ಪ್ರಕೃತಿ ಪುರುಷ ಇವೆರಡರಿಂದುಂಟಾಗಿದೆ. ಪರಮಾತ್ಮನೊಬ್ಬನೇ ಇವೆರಡೂ ರೂಪದಿಂದ ವಿರಾಜಿಸುತ್ತಿರುವನು. ಆತನ ಬಲಭಾಗವು ಪುರುಷರೂಪಿಯಾದ ನಟೇಶ್ವರನದಿರುತ್ತದೆ. ಎಡಭಾಗವು ಅರ್ಧನಾರಿಯಾದ ಪ್ರಕೃತಿಯದಿರುತ್ತದೆ. ಪರಮಾತ್ಮನ ವಾಮನೇತ್ರವಾದ ಚಂದ್ರನು ಪ್ರಕೃತಿಯದು. ಬಲಗಡೆಯ ಭಾನುನೇತ್ರವು ಪುರುಷನದು. ಇವೆರಡೂ ರುದ್ರನ ಅಕ್ಷಿಗಳು. ಇವು ಕೂಡಿಕೊಂಡು ನಮ್ಮನ್ನು ಕೃಪಾದೃಷ್ಟಿಯಿಂದ ನೋಡಲೆಂಬ ಉದ್ದೇಶದಿಂದ ಜೋಡಿ ರುದ್ರಾಕ್ಷಿಗಳನ್ನು ಧರಿಸುವರು. ನೀರು ಮತ್ತು ಸೂರ್ಯನ ಕಿರಣಗಳು ಕೂಡಿ ವಿದ್ಯುಚ್ಛಕ್ತಿಯುಂಟಾಗುವದು. ಅದರಂತೆ ಶೀತಲವಾದ ಚಂದ್ರನೇತ್ರ ಹಾಗೂ ಪ್ರಖರವಾದ ಸೂರ್ಯನೇತ್ರಗಳ ಸಮ್ಮೇಲನದಿಂದ ಅಗ್ನಿನೇತ್ರವೆಂಬುದು ಹುಟ್ಟುತ್ತದೆಂಬದು ಶಾಸ್ತ್ರದೃಷ್ಟಿಯಿಂದ ಒಪ್ಪಬಹುದಾದ ಸಂಗತಿಯು. ಈ ಅಗ್ನಿನೇತ್ರವೇ ರುದ್ರಾಕ್ಷಿಯು. ಈ ಪ್ರಕಾರ ಪರಶಿವನ ತ್ರಿನೇತ್ರಗಳು ರುದ್ರಾಕ್ಷಿಯ ರೂಪದಿಂದ ಸದೈವ ನಮ್ಮನ್ನು ಕಾಪಾಡಲಿ.



ಶಿವಾನುಭವ ಗ್ರಂಥಮಾಲಾ ನಂ॥ ೩೭

# ಹರಿಹರನ ರಗಳೆಗಳು

## ಭಾಗ ೪

ಸಂಪಾದಕರು.

ರಾ॥ ಸಾ॥ ಫ. ಗು. ಹಳಕಟ್ಟಿ

ಬಿ. ಏ. ಎಲ್. ಎಲ್. ಬಿ.

ವಿಜಾಪುರ.

ಬೆಲೆ ೮ ಆಣೆ

# ಪ್ರಸ್ತಾವನೆ.



ಈ ಗ್ರಂಥದಲ್ಲಿ ಮಹಾಕವಿ ಹರಿಹರನು ರಚಿಸಿದ ಪುರಾತನರ ರಗಳೆಗಳಲ್ಲಿಯ ೯ ರಗಳೆಗಳನ್ನು ಪ್ರಸಿದ್ಧಿಸಿದ್ದೇವೆ. ೧ನೇ ಭಾಗದಲ್ಲಿ ೭ ರಗಳೆಗಳು ಪ್ರಸಿದ್ಧವಾಗಿವೆ. ಕನ್ನಡ ವಾಙ್ಮಯದಲ್ಲಿ ರಗಳೆಗಳು ಒಂದು ಮಹತ್ವದ ಸ್ಥಾನವನ್ನು ಹೊಂದಿರುತ್ತವೆ. ಇವುಗಳಲ್ಲಿ ಹರೀಶ್ವರನು ರಚಿಸಿದ ರಗಳೆಗಳೇ ಬಹಳ ಮಹತ್ವವಾದವುಗಳು. ಇವುಗಳಲ್ಲಿ ಅವನು ಹೊರಪಡಿಸಿದ ವಿಚಾರಗಳು ಅತ್ಯಂತ ಉಚ್ಚತರವಾದವುಗಳು. ಈ ರಗಳೆಗಳು ಲೋಕಾದರಕ್ಕೆ ಪಾತ್ರವಾಗುವವೆಂದು ನಾವು ನಂಬಿದ್ದೇವೆ.

ಈ ಗ್ರಂಥದ ಪ್ರತಿಗಳು ನಮಗೆ ಮೈಸೂರು ಓರಿಎಂಟಲ್ ಲೈಬ್ರರಿಯಿಂದ ಒಂದು ಮತ್ತು ತುಮಕೂರು ಜಿಲ್ಹಾ ದಂಡಿನಶಿವರದಲ್ಲಿಯ ಶಿ. ಮೂ. ಕಲ್ಲಯ್ಯನವರಿಂದ ದೊರೆದದ್ದು ಎರಡನೆಯದು ಹೀಗೆ ಎರಡು ಪ್ರತಿಗಳ ಸಹಾಯದಿಂದ ಈ ಗ್ರಂಥವನ್ನು ಸಿದ್ಧಪಡಿಸಿದ್ದೇವೆ. ಈ ಪ್ರತಿಗಳನ್ನು ನಮಗೆ ಕಳಿಸಿಕೊಟ್ಟದ್ದಕ್ಕಾಗಿ ಉಭಯತರಿಗೂ ನಾವು ಋಣಿಯಾಗಿದ್ದೇವೆ.

ಫ. ಗು. ಹಳಕಟ್ಟಿ

ಸಂಪಾದಕ.

# ಅನುಕ್ರಮಣಿಕೆ

ಪುತ್ರನುಂ ಪುಣ್ಯವುಂ ತರುಣಿಯೋ ಅಂತವರ್ಗೆ
ಚಿತ್ರಮುಂ ವಿಚಿತ್ರಮುಂ ತರುಣಿಯೋ ಅಂತವರ್ಗೆ
ಇಂತಿರಲ್ ತಪದಿ ನಾಲ್ಕು ವತ್ಸರಂಗಳ್ಸಲಲ್

ಕಂತು ಕಣ್ಬಾಳಗೊಂಡು ಬಿಲ್ಲನೇರಿಸಿ ನಿಲಲ್
ಚರಣತಳವೆಳೆಯಶೋಕೆಯ ತಳಿರನುಗುಳುತಿರೆ
ಸುರುಚಿರ ನಿತಂಬ ಬಿಂಬದ ವೃತ್ತ ಮೆರೆವುತಿರೆ
ನಡುಮುಡಿಯ ಮೊಲೆಯ ಭಾರಕ್ಕೆ ನಡ ನಡುಗುತಿರೆ
ಕಡೆಗಣ್ಗಳರಲ ಸರಲಂ ದೆಸೆಗೆ ಸೂಸುತಿರೆ
ತೋಳ ಮೊದಲಂಗಜನ ಬಾಳ ಹೊಗರೆತ್ತುತಿರೆ
ಭಾಳಸ್ಥಳಂ ಬಾಲಶಶಿಯನೇಳಿಸುತಮಿರೆ
ನವಕಮಳಮಂ ನಗುತ್ತಿರೆ ವದನ ಮಂಡಳಂ
ಕವಲಿಡಿದು ನೀಳ್ದು ಬೆಂಬಳಿವಿಡಿದು ಕುಂತಳಂ
ಕಾಮನ ಪತಾಕೆಯಂತಿರೆ ಮೆರೆವ ಮುಡಿಗಟ್ಟಿ
ಕೋಮಳೆಯ ಲಾವಣ್ಯರಸವಲ್ಲಿ ಮಡುಗಟ್ಟಿ
ಅಂಗಕಾಂತಿಗಳೊಳಗೆ ತೀವಿ ತೆರೆ ಮಸಗುತಿರೆ
ಅಂಗಜಂಗೊಳಗಾಗಿ ನೋಡಲರಿದೆನಿಸುತಿರೆ
ಇಂತು ತಿರುಮುಡಿಯೊಡೆಯಳಿಂತು ಬೆಳೆಯುತ್ತಿರಲ್
ಸಂತತಂ ಸೌಭಾಗ್ಯ ಲತೆ ಧೀಂಕಿಡುತ್ತಿರಲ್

ಅತ್ತಲಾ ಚೋಳನೊಲವಿಂದಂ ಕುಮಾರಂಗೆ
ಚಿತ್ತದಲ್ಲಿ ವಿವಾಹಮಂ ನೆನೆಯುತಂದಿಂಗೆ
ಚರರೂಪೆ ವಾರ್ತಾ ಪರಂಪರೆಯೊಳಂ ಕೇಳ್ದು
ತಿರುಮುಡಿ ಯೊಡೆಯಳೊಪ್ಪುವಾಶ್ಚರ್ಯಮಂ ಕೇಳ್ದು
ಕಳುಪೆ ಬಂದಂ ಮಂತ್ರಿ ಗಾಂಗೇಯನಾಯೂರ್ಗೆ
ತಿಳಿಯಲರಿಪಿದನೆಲ್ಲವಂ ಮಾನಕಂಜರ್ಗೆ
ಕೇಳುತ್ತೊಡಂಬಟ್ಟೆನೆಂದವರ್ಗಳಂ ಕಳುಪೆ
ಬಾಳೆನುತವರ್ಪೋದರಾನಂದದಿಂ ಕಳುಪೆ

ಇತ್ತ ಮದುವೆಯ ಮಂಟಪಂ ಸಮೆದುದೂರೊಳಗೆ
ಮುತ್ತಿನಿಂ ಕಟ್ಟಿದರ್ಮೇಲ್ಕಟ್ಟು ತೊಳತೊಳಗೆ

ಮಕರ ತೋರಣ ಓರಣಂಗೊಂಡವಲ್ಲಲ್ಲಿ
ಸುಕರವೆನೆ ಪುಲ್ಲಿಪಟ್ಟಿಗಳಿರ್ದವಲ್ಲಲ್ಲಿ
ಹೊನ್ನಿಂ ವಿವಾಹ ವೇದಿಕೆ ಸಮೆದುದಂತಲ್ಲಿ
ರನ್ನದಿಂ ರಂಜಿಸಲ್ ಕೌತುಕಂ ಮಿಗಲಲ್ಲಿ ।
ಪುರದೊಳೆಲ್ಲಾ ಸುವಾಸಿನಿಯರಂ ಕರಿಸಿ
ಹರುಷದಿಂ ಹೊಂಗುತುಂ ತಮತಮಗೆ ಸಿಂಗರಿಸಿ
ಘಳಿಗೆವಟ್ಟಲ ಮುಂದೆ ಜೋಯಿಸರನೊಲಿದಿರಿಸಿ
ತಿಳಿದ ಶೈವಾಗಮಾಚಾರ್ಯರಂ ಕುಳ್ಳಿರಿಸಿ
ಒಳಗೆ ತಿರುಮುಡಿಯೊಡೆಯಳಂ ಸಿಂಗರಂ ಮಾಡಿ
ಒಳಗೆ ಸರ್ವಾಭರಣ ಭೂಷಿತೆಯರೊಡಗೂಡಿ
ಇಂತೆಲ್ಲಮಂ ಸಮಂ ಕಟ್ಟಿ ಸುಖದಿಂದಿರಲ್

ಸಂತತಂ ಮಾನಕಂಜಪುರ್ಗಳುಕಿಸುತ್ತಿರಲ್
ಬರುತಿರ್ದನಲ್ಲಿ ಜೋಳಂ ಸರ್ವ ಸಂಭ್ರಮದೆ
ವರ ಕುಮಾರಕನ ಮದುವೆಗೆ ಸಕಳ ಸಂಭ್ರಮದೆ
ಗಜಘಟೆಗಳಿಂ ತುರಗದಿಂ ರಥಾನಿಕರದಿಂ
ನಿಜಭುಜಸ್ಫೋಟನ ಪದಾತಿ ಸಂದೋಹದಿಂ
ಕಳಶಮಂ ಧರಿಸಿದ ಸುವಾಸಿನೀ ನಿಕರದಿಂ
ತಳಿಗರ್ಗಳ ಸಮಂ ಪಿಡಿದ ಲಲನಾ ಕದಂಬದಿಂ
ಸೂಳೈಪ ಭೇರಿ ನಿಸ್ಸಾಳ ತಮ್ಮಟದಿಂದೆ
ಬೋಳೈಸಿ ಬಿರಿದೆತ್ತಿ ಕರೆವ ಕಹಳೆಗಳಿಂದೆ
ಬಂದು ಮಂಟಪದೊಳಗೆಯಲ್ತಿಯಿಂ ತುಂಬಿದರ್
ಸಂದಣಿಸುವರಸು ನಿಬ್ಬಣಿಗರಿಂದೊಪ್ಪಿದರ್

ಕುಳ್ಳಿರ್ದರಗಲಕೆ ಮಕುಟವರ್ಧನರಲ್ಲಿ
ಕುಳ್ಳಿರ್ದರುರವಣಿಸಿ ರಾಜರ್ಕಳಲ್ಲಲ್ಲಿ
ಮಂತ್ರಿಗಳ್ ಸಾಮಂತರೆಸೆವ ನಾಯಕರಿಂದೆ
ತಂತ್ರಿಗಳ್ ಶಚಿವರಗ್ಗದ ಬಿರುದಿನವರಿಂದೆ
ಕವಿಗಮಕಿವಾಗ್ಮಿ ವಾದಿಗಳ ಸಂದಣಿಯಿಂದೆ

ನವನರ್ತಕೀ ನರ್ತಕ ಪ್ರಸಾರಣದಿಂದೆ
ನೀರ್ತೆಗೆದ ರತ್ನಾಕರಂಗಳಂತೋಲಗಂ
ಮಾರ್ತೊಳಪ ಮಕುಟಂಗಳಿಂದೊಪ್ಪಿತೋಲಗಂ

ಆಗಳ್ಕುಮಾರಂಗೆ ಸಿಂಗರಂ ಮಾಡಿದರ್
ರಾಗದಿಂದಾಭರಣ ಜಾಲಮಂ ನೀಡಿದರ್
ನವ ರತ್ನದೆಸೆವ ಬಾಸಿಗವನೊಲವಿಂ ಕಟ್ಟಿ
ನವಕುಮಾರಂ ಗುತ್ತಮೋತ್ಸಾಹಮುಂ ಮುಟ್ಟಿ
ಹೊಸ ಸಮರ ವಸ್ತ್ರಂಗಳಂ ಕುಡಲ್ತೊಗದುಟ್ಟು
ಹೊಸ ಸುವರ್ಣದ ಜನ್ನಿವರವನೊಲವಿಂ ತೊಟ್ಟು
ಸಕಲ ಸಂಭ್ರಮದಿಂದೆ ಮಂಟಪಕೆ ನಡೆತಂದು
ಸಕಲ ಮಂತ್ರಾಕ್ಷತೆಯನಾನುತುಂ ಪುಗುತಂದು
ಹಸೆಯ ಮೇಲೆಸೆದಿರೆ ಕುಮಾರ ಕಂಠೀರವಂ
ರಸೆಗೆ ಹೊಸ ಕಾಮನೆನಿಪಂ ಸದ್ಗುಣಾರ್ಣವಂ
ಬರುತಿರ್ದಳಿತ್ತ ತಿರುಮುಡಿಯೊಡೆಯಳಮ್ಮಮ್ಮ
ಪರಿಪರಿಯ ನವ ವಿಳಾಸಿನಿಯರಿಂದಮ್ಮಮ್ಮ
ನವರತ್ನದಿಂ ಸಮೆದ ದಂಡೆ ತೊಂಡಿಲ್ಕೆರೆಯೆ
ನವ ಕುಸುಮ ಶರವೃಷ್ಟಿಯಂ ಲೋಚನಂ ಕರೆಯೆ
ವಂದಿಗಳ್ತಮತಮಗೆ ಕೈವಾರಿಸುತ್ತುಮಿರೆ
ಸಂದ ಬಾಂಧವ ಕುಲಂ ನಲಿದು ಪರಿಸುತ್ತಮಿರೆ
ಬಂದು ಕುಳ್ಳಿರ್ದಲ್ಲಿ ಹಸೆಯ ಮೇಲೊಪ್ಪುತಿರೆ
ಇಂದುಮುಖಿಗಾನಂದಮಯ ಪುಳಕವಾಗುತಿರೆ

ಕಪಟ ನಾಟಕ ಸೂತ್ರಧಾರಿ ಪೊರಪೊಣ್ಮಿದಂ
ವಿಪರೀತ ಚರಿತ ನಿತ್ತಲ್ ಹರಂ ಮಾಡಿದಂ
ನೊಸಲ ಭಸಿತಂ ಕೆಯ್ಯ ರುದ್ರಾಕ್ಷಿಗಳ್ಕೆರೆಯೆ
ಮಿಸುಪ ದಂತದ ಚನ್ನ ಪಾವುಗೆಗಳಿಂದೆಸೆಯೆ
ಚಪ್ಪರದ ಗೊಂಟೆನೊಳ್ನೋಡುತ್ತೆ ಮಿಳುಮಿಳನೆ
ಒಪ್ಪುತಿರೆ ಮಾನಕಂಜರ್ಕಂಡು ಗಳಗಳನೆ
ಇಳಿದು ಗದ್ದುಗೆಯಿಂದಲೆಯ್ತಂದು ಸೈಗೆಡೆದು

ಪುಳಕವೆತ್ತಲ್ಕೆದ್ದು ಪೊಡಮಟ್ಟು ಕೈ ಮುಗಿದು
ಕೈಗೊಟ್ಟು ಬಂದೊಪ್ಪಿ ಗದ್ದುಗೆಯ ಮೇಲಿರಿಸಿ
ವೈಗರೆದು ಪದವನಗ್ಗಣಿಯಿಂದೆ ಸಿಂಗರಿಸಿ
ಭಾಳದೊಳ್ಗಂಡಸ್ಥಳದೊಳಕ್ಷಿಗಳೊಳೊತ್ತಿ
ತೋಳುರಸ್ಥಳದೊಳಗೆ ಕಂಠದೊಳಗೊತ್ತುತ್ತೆ
ಕೊಂಡು ಪಾದೋದಕಂ ದಳಿದು ಬದುಕಿದೆನೆಂದು
ಖಂಡೇಂದುಮೌಳಿ ಬೆಸಸುವುದು ಬದುಕಿದೆನೆಂದು

ಬಿನ್ನವಿಸೆ ಕಾಮಾರಿ ಕೇಳ್ದು ಮನದೊಳ್ನಲಿದು
ನಿನ್ನನೊಂದಂ ಬೇಡಿಬಂದೆವೀಪೊಡೆ ಪಿರಿದು
ನಿಮಗವಸರಂ ಬೇಡಲಾಗದೀ ಸಮಯದೊಳ್
ನಿಮಗೆ ಕೊಡಲರಿದು ವೈವಾಹದುತ್ಸಾಹದೊಳ್
ನಾಳೆ ಬಂದಪೆವೀಗಳೇಕೆ ಮಂಗಳದೊಳಗೆ
ಹೇಳಲಮ್ಮೆವು ಬಳಿಕೆ ಮುನಿವುದೀ ಸಭೆ ನಿನಗೆ
ಮದುವೆಯಕ್ಕಿಂದಿಂಗೆ ಪೋಗಿ ಬಂದಪೆವೆಂದು
ಮುದದಿಂದೆ ಮಾಡುವುದು ಮಂಗಳಂಗಳನೆಂದು

ಬೆಸಸೆ ಕೇಳುತ್ತಲ್ಲಿ ಮಾನಕಂಜರನೊಂದು
ಶಶಿಧರಾ ಇಂತು ಕರುಣಿಪರೆ ನೀನೆನಗೆಂದು
ಬಂದುದೇ ಸರ್ವ ಸಮಯಂ ದೇವ ನೀಯೊಲ್ದು
ಬಂದುದೇ ಮಂಗಳಮಯಂ ದೇವ ನೀಯೊಲ್ದು
ನಿಮ್ಮ ವಂಚಿಸಿ ಬೇರೆ ಮಂಗಳಂ ತಾನುಂಟೆ
ನಿಮ್ಮಡಿಗಳಿಲ್ಲದುತ್ಸಾಹವೀ ಧರೆಗುಂಟೆ
ನೀಂ ಮೆಚ್ಚೆ ಮಿಕ್ಕವರ್ಮುಳಿದು ಮಾಡುವುದುಂಟೆ
ನೀಂ ಮುಳಿಯೆ ಮಿಕ್ಕವರ್ಗಳೊಲ್ದು ಮಾಡುವುದುಂಟೆ
ಕರುಣಿಪುದು ಚಿತ್ತದೊಳಗಿರ್ದುದಂ ಬೇಡುವುದು
ಅರವರಿಸದೆನ್ನಂ ಕೃತಾರ್ಥನಂ ಮಾಡುವುದು
ಶಿವಭಕ್ತರೆನ್ನುವಂ ಬೇಳ್ಪುದಂ ಪಡೆವೆನೇ
ಶಿವಭಕ್ತರೆನ್ನವನೆನಿಪ್ಪುದಂ ಪಡೆವೆನೇ

ಎನೆ ಭಕ್ತರೆಂದಪರ್ನೆರೆ ಪೇಳ್ವಿನೇ ದಿಟಂ
ನಿನಗಂ ನಿರೋಧವಂ ತೋರದೆಯ್ದಿದಃ ದಿಟಂ
ಎಮ್ಮ ಪಾವುಗೆ ಬೆರಲನೊತ್ತದಂತಿರೆ ಪಿರಿದು
ನಿಮ್ಮೀ ಮಗಳ ಮುಡಿಯು ಕೂದಲತ್ಯಂತ ಮೃದು
ತಂದಿಕ್ಕವೇಳ್ಪುದೆನೆ ಕೋಟಿ ಮುಡಿವಡೆದಂತೆ
ಇಂದುಧರ ಮೂರ್ತಿಯೊಯ್ಪುದಕಿನಿತು ಜೀಡೆನುತೆ
ಉಳ್ಳುದಂ ಕೊಡುವುದಕ್ಕುಪಚಾರವೇಕೆನುತೆ
ಕುಳ್ಳಿರ್ದ ಭಕ್ತಂಗೆ ಕೆಯ್ಗೊಟ್ಟು ನಡೆತರುತೆ

ಮದುವೆಯಂ ತೀರ್ದುದಾ ಮದವಣಿಗನಂತಿರ್ದ
ಇದು ಚೋದ್ಯವೆಂದೆನುತೆ ಚೋಳನೀಕ್ಷಿಸುತಿರ್ದ
ಇತ್ತಲೆಯ್ತಂದು ಮಂಟಪದ ಜಗುಲಿಯ ಮೇಲೆ
ಒತ್ತರಿಪ ನಿಬ್ಬಣಿಗರೆಲ್ಲರುಂ ಕಣ್ಣಾಲೆ
ಭಕ್ತನಂ ಸಾರೆ ಮುಂದಿರಿಸುತಂ ಬಲವಂದು
ಭಕ್ತಯುಕ್ತಂ ಸುತೆಯನೀಕ್ಷಿಸುತ್ತಂ ಬಂದು
ದಂಡೆಯಂ ತೊಂಡಿಲಂ ನೂಂಕುತುಂ ಚಂದದಿಂ
ಚಂಡಿಕೆವಿಡಿದು ಮಗಳನುತ್ತರಿಸುವಂದದಿಂ
ಶಿವಭಕ್ತಿ ಮಗಳ ತಲೆಗೇರಿತೆಂಬಂದದಿಂ
ಶಿವಭಕ್ತಿಯು ಕೆಯ್ಯೊಳಡಂಗಿತೆಂಬಂದದಿಂ
ಎಡದ ಕಯ್ಯಿಂದ ಮುಡಿಯಂ ಭಕ್ತಿಯಿಂ ಪಿಡಿದಃ
ಮೃಡಭಕ್ತರರಸನೇಕಾಗ್ರಚಿತ್ತಂ ಬಿಡಿದು
ಬಂದ ಮದುವೆಯ ನೆರವಿ ಕಂಡು ಚೋದ್ಯಂಬಟ್ಟು
ನೊಂದಿದೇನೆನುತ ಚೋಳಂ ಕೌತುಕಂ ಬಟ್ಟು
ಆ ಕಿಳ್ತನಾ ಕಿಳ್ತನಯ್ಯೋ ಕಠಾರಿಯಂ
ಲೋಕೇಶ್ವರಂ ಮೆಚ್ಚಿ ನೋಡಿದನುದಾರಿಯಂ
ಎನುತಿರಲ್ಗಿಡುವಿನೊಳ್ಕುಸುಮುಮಂ ಕೊಯ್ವಂತೆ
ಮನವೊಸೆದು ಪುಷ್ಪದೊಳ್ಪರಿಮಳಂಗೊಳ್ವಂತೆ
ಎತ್ತಿದ ಕಠಾರಿಯಂ ಭೋಂಕೆನಲ್ಕೊಯ್ವಲ್ಲಿ
ಚಿತ್ತಜಹರನ ಪಾದದೊಳಗೆ ಸಸಿ ನೀಡುವಲ್ಲಿ

ನೊಸಲ ಕಣ್ದಶ ಭುಜಂ ಶಶಿಕಳೆ ಜಟಾಧರಂ
ಮಿಸುಪ ಪಂಚಾನನಂ ಪುಲಿದೊವಲ್ವಿಸ್ತರಂ
ಬಡಿಯೆ ರವಿಕೋಟಿ ಕಿರಣಮನೇಳಿಸುತ್ತಂದು
ಮೃಡನೊಲ್ದು ಮಾನಕಂಜರನಪ್ಪಿಕೊಂಡಂದು
ಆಹ ನಂದೀಶ ನೋಡೆನ್ನ ಶಿವಭಕ್ತನಂ
ಆಹ ಪಾರ್ವತಿ ನೋಡು ಶಿವಭಕ್ತಿಯುಕ್ತನಂ
ಚೋಳಾದಿಗಳ್ನೋಡಿ ನೆರೆ ಬೆರಗಾಗೆ
ಗೋಳಿಟ್ಟು ಬಂದ ನಿಬ್ಬಣಿಗರಚ್ಚುಗರಾಗೆ
ಹಸೆಯು ಮೋಗಣ ಮಗಳ ಮುಡಿಯನಿತ್ತವರುಂಟೆ
ಸಸಿವದನೆಯಂ ನೋಡದಿಂತು ಮಾಡಿದರುಂಟೆ
ಒಡವೆಯಾನೊಳ್ಳಿತಾನಿಂತೆನ್ನ ಭಕ್ತರ್ಗೆ
ಒಡಲೆನ್ನದಸುವೆನ್ನದಿಂತೆನ್ನ ಭಕ್ತರ್ಗೆ
ಎನಗವರೆ ಲಾಭವವರ್ಗಾನೆ ಲಾಭಂ ಕೇಳ್
ಎನಗೆ ಎಲ್ಲಾ ಲಾಭವುಂ ಭಕ್ತರೇ ಕೇಳ್
ಎಂದು ಹಿಮವತ್ಸುತೆಗೆ ಹೇಳುತುಂ ಹಿಗ್ಗುತುಂ
ಬಂದ ಗಣವೃಂದಕ್ಕೆ ತೋರಿ ಮೈವೆರ್ಚುತುಂ
ನಾನಾ ಕನಕಮಣಿ ವಿಮಾನಂಗಳಂ ತರಿಸಿ
ಮಾನಕಂಜರನ ಸತಿಸುತೆವೆರಸು ಕುಳ್ಳಿರಿಸಿ
ಪೂಮಳೆಗಳೆರಗುತಿರೆ ದುಂದುಭಿಗಳುಣ್ಮುತಿರೆ
ಕಾಮಹರನೆಂಬ ಬಿರುದಿನ ಕಹಳೆ ಕರೆವುತಿರೆ
ನೆಗೆದನೊಲ್ದೀಶ್ವರಂ ಕೈಲಾಸಪರ್ವತಕೆ
ಜಗ ಮೆಚ್ಚಿ ಪೇಳುತಂ ಬರುತಿರ್ದ ಪುರಜನಕೆ
ಬಂದು ತಾರಾದ್ರಿಯರಮನೆಯನೊಲವಿಂ ಪೊಕ್ಕು
ನಿಂದು ಸಿಂಹಾಸನಮನೇರುತೆ ಮನಂ ಮಿಕ್ಕು
ಮಾನಕಂಜರ್ಗೆ ಗಣಪದವಿಯುಂ ಸಲಿಸುತುಂ
ನಾನಾ ಗಣೇಶ್ವರಾವಳಿ ಬರಲ್ ಹಿಗ್ಗುತುಂ
ಶಿವನೊಪ್ಪಿದಂ ಸದಾಶಿವಮೂರ್ತಿಯೊಪ್ಪಿದಂ
ಭವನೊಪ್ಪಿದಂ ಭಾಳನೇತ್ರನಿಂತೊಪ್ಪಿದಂ
ಹರನೊಪ್ಪಿದಂ ಮನೋಹರ ರೂಪನೊಪ್ಪಿದಂ

ಗುರು ಒಪ್ಪಿದಂ ಗಿರಿಜೆಯರಸನಿಂತೊಪ್ಪಿದಂ
ಶರ್ವನೊಪ್ಪಿದನಖಿಲಗತರೂಪನೊಪ್ಪಿದಂ
ಸರ್ವಜ್ಞ ಪಂಪಾ ವಿರೂಪಾಕ್ಷನೊಪ್ಪಿದಂ ॥

ಕಂದ॥ ಹಸೆಯೊಳಗೆಸದಿರ್ಪಿನಿಯ
ಹೊಸಮುಡಿ ನವಿರಂ ನಿನಗೆ ನಿವೇದಿಸಿದ ಸುಖಾ
ವೊಸೆದನೆನೆ ಮಾನಕಂಜರ
ಶಿಸುವಂ ಕರುಣಿಸುದು ಹಂಪೆಯ ವಿರೂಪಾಕ್ಷಾ



ಈ ವಿಚಾರಗಳನ್ನು ಅರಿಯುವದೇ ಪರಮಾತ್ಮ ಯೋಗ, ಮರೆ ಮದೇ ಮಾಯಾ ಸಂಬಂಧವೆಂದು ಅಂದಿದ್ದಾನೆ.

---

## ಪರಮಾತ್ಮನ ಕಾರ್ಯಗಳು.

ಪರಮಾತ್ಮನ ಮೂಲಕ ಜಗತ್ತಿನಲ್ಲಿ ಯಾವ ಕ್ರಿಯೆಗಳು ಉತ್ಪನ್ನ ವಾಗುತ್ತವೆ, ಅವನು ಜಗತ್ತಿನಲ್ಲಿ ಹ್ಯಾಗೆ ವ್ಯವಹರಿಸುತ್ತಾನೆ, ಅವನ ವಿಶೇಷ ಗುಣಗಳಾವವು ಎಂಬವನ್ನು ವಚನಕಾರರು ಮುಂದಿನ ವಚನಗಳಲ್ಲಿ ಸವಿಸ್ತಾರವಾಗಿ ವರ್ಣಿಸಿರುವನು. ಹೀಗೆ ವರ್ಣಿಸುವಲ್ಲಿ ಅವನು ಶೃತಿ ಸ್ಮೃತಿ ಪುರಾಣಾಗಮಗಳಲ್ಲಿಯ ಅನೇಕ ಆಧಾರಗಳನ್ನು ತೆಗೆದುಕೊಂಡು ಇವುಗಳನ್ನು ವಿವರಿಸಿರುವನು. ಇಂಥ ಪರಮಾತ್ಮನಲ್ಲಿ ವಿಶ್ವಾ ಸವನ್ನು ತಾಳಿ ಅವನ ಪೂಜೆಯನ್ನು ಮಾಡಿ ಭಕ್ತನು ಉಚ್ಚಸ್ಥಾನವನ್ನು ಹೊಂದಬೇಕು. ಪರಮಾತ್ಮನು ಜಗತ್ತಿನಲ್ಲಿ ವ್ಯವಹರಿಸುವಾಗ ಲಿಂಗ ರೂಪಾಗಿ ಅವನು ಪ್ರಕಟವಾಗುವದುಂಟು. ಇದರ ವಿವರಣೆಯೂ ಕೆಲ ಮಟ್ಟಿಗೆ ಕೆಳಗಿನ ವಚನಗಳಲ್ಲಿ ಬಂದಿರುವದು.

**ವಚನ:**— ೬. ಲಿಂಗವೆಂಬುದು ಪರಶಿವಶಕ್ತಿಯ ನಿಜ ನಿವಾಸ. ಲಿಂಗವೆಂಬುದು ಪರಶಿವನ ಪರಮ ಜ್ಞಾನತೇಜ. ಲಿಂಗವೆಂಬುದು ಅಖಂಡ ಸ್ವರೂಪು. ಲಿಂಗವೆಂಬುದು ಹರಿಬ್ರಹ್ಮರ ನಡುವೆ ನೆಗಳ್ದ ಜ್ಯೋತಿರ್ಲಿಂಗ. ಲಿಂಗವೆಂಬುದು ಚರಾಚರ ಲಯ ಗಮನಸ್ಥಾನ. ಲಿಂಗವೆಂಬುದು ಪಂಚ ಸಂಜ್ಞೆಯನುಳ್ಳುದು. ಅದೆಂತೆಂದೊಡೆ ಜ್ವಾಲಾಮಾಲಾವೃತಂ ಜ್ವಲನಸ್ತಂ ಭರೂಪಿಣೆ। ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ॥ ಲೀಯ್ಯತೆ ಗಮ್ಯತೆ ಯತ್ರ। ಏನ ಸರ್ವಂ ಚರಾಚರಂ। ತದೇ ತಲ್ಲಿಂಗ ಮಿತ್ಯುಕ್ತಂ। ಲಿಂಗತತ್ವ ಪರಾಯಣೈಃ॥ ಪರಂ ಗೂಢಂ ಶರೀರಸ್ಥಂ ಲಿಂಗ ಕ್ಷೇತ್ರಮನಾದಿವತ್॥ ಯಥಾ ದಿವ್ಯಮೀಶ್ವರಂ ತೇಜಂ। ತಲ್ಲಿಂಗಂ ಪಂ ಚಸಂಜ್ಞಿಕಂ। ಎಂದುದಾಗಿ ಇದು ಲಿಂಗದ ಮರ್ಮ. ಈ ಲಿಂಗವನರಿದಾ ತನೇ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

**ಭಾವ:**— ಇದರಲ್ಲಿ ವಚನಕಾರನು ಲಿಂಗದ ಲಕ್ಷಣಗಳನ್ನು ಹೇಳಿ ರುವನು. ಪರಬ್ರಹ್ಮ ವಸ್ತುವಿಗೆ ಯಾವ ಅದ್ಭುತ ಶಕ್ತಿ ಇರುತ್ತದೋ

ಆ ಶಕ್ತಿಗೆ ಈ ಲಿಂಗವು ಆವಾಸಭೂಮಿಯಾಗಿರುತ್ತದೆ. ಆ ಶಕ್ತಿಯೇ ಲಿಂಗವೆಂದು ವಚನಕಾರನ ಅಭಿಪ್ರಾಯವು. ಆ ಶಕ್ತಿಗೆ ಚಿತ್‌ಶಕ್ತಿ ಎಂಬ ಹೆಸರೂ ಇದೆ. ಇದಕ್ಕೆ ಜ್ಞಾನ ಅಥವಾ ಮೂಲಜ್ಞಾನ ಅಥವಾ ಪರಮ ಜ್ಞಾನವೆಂತಲೂ ಅನ್ನುವದುಂಟು. ಪರಶಿವನ ಕೊಳಹೇ ಲಿಂಗವೆಂದು ವಚನಕಾರನು ಇಲ್ಲಿ ಹೇಳಿರುವನು. ಇಂಥ ಲಿಂಗದಲ್ಲಿ ಖಂಡತ್ವ ಎಂದರೆ ಭಿನ್ನತೆ ಇಲ್ಲ. ಅದು ಒಂದೇ ಒಂದಾಗಿರುವದು. ಈ ಲಿಂಗವು ಹರಿಯೂ ಅಲ್ಲ ಬ್ರಹ್ಮವೂ ಅಲ್ಲ. ಅವರ ಮಧ್ಯದಲ್ಲಿ ಪ್ರಸಿದ್ಧವಾಗಿ ಹೊರಹೊರಟ ಜ್ಯೋತಿರ್ಲಿಂಗವೆಂದು ವರ್ಣಿಸಿರುವನು.. ಈ ಲಿಂಗದಿಂದಲೇ ಬ್ರಹ್ಮಾಂಡದಲ್ಲಿಯ ವಸ್ತುಗಳು ಉತ್ಪನ್ನವಾಗಿರುವವು. ಮತ್ತು ಅವು ಕಡೆಗೆ ಅಲ್ಲಿಯೇ ಲಯ ವಾಗುವವು. ಈ ಪ್ರಕಾರ ವಚನಕಾರನು ಲಿಂಗದ ಗುಣಗಳನ್ನು ಸಾಮಾನ್ಯವಾಗಿ ಹೇಳಿ, ಲಿಂಗದ ಐದು ಮುಖ್ಯ ಲಕ್ಷಣಗಳನ್ನು ಹೇಳಿದ್ದಾನೆ. ಅವು ಯಾವವೆಂದರೆ:--

ಪರಃ— ಎಂದರೆ ಲಿಂಗವು ಜಗತ್ತಿನಲ್ಲಿ ಎಲ್ಲವನ್ನು ಮೀರಿದ ವಸ್ತುವಾಗಿದೆ. ಅದರ ನಿಲುಕಡೆಯನ್ನು ಯಾರೂ ಅರಿಯರು. ಎಂದರೆ ಅದು ಪರ ವಸ್ತುವಾಗಿದೆ.

ಗೂಢಃ— ಇದು ಅದರ ಎರಡನೇ ಲಕ್ಷಣವು. ಲಿಂಗವು ಅವ್ಯಕ್ತವಾಗಿದೆ. ಎಂದರೆ ದೃಷ್ಟಿಗೆ ಅಗೋಚರವು· ಜಗತ್ತಿನಲ್ಲಿಯ ಎಲ್ಲ ಚರಾಚರ ವಸ್ತುಗಳನ್ನು ಅದು ತನ್ನಲ್ಲಿ ಅಡಗಿಸಿಕೊಂಡು ಇರುತ್ತದೆ. ಆದ್ದರಿಂದ ಅದು ಗೂಢವೆನಿಸಿಕೊಳ್ಳುತ್ತದೆ.

ಶರೀರಸ್ಥಃ— ಲಿಂಗವು ತನ್ನ ಶಕ್ತಿಯ ಮೂಲಕ ಜಗತ್ತನ್ನು ಸೃಷ್ಟಿಸುವದಕ್ಕೆ ಕಾರಣವಾಗಿರುತ್ತದೆ. ಮತ್ತು ಅದು ಹೀಗೆ ಜಗತ್ತನ್ನು ಹುಟ್ಟಿಸಿ ಎಲ್ಲದರಲ್ಲಿಯೂ ಸರ್ವವ್ಯಾಪಿಯಾಗಿರುತ್ತದೆ. ಆದ್ದರಿಂದ ಅದಕ್ಕೆ ಶರೀರಸ್ಥವೆಂಬ ಹೆಸರು ಬಂದಿದೆ.

ಲಿಂಗಕ್ಷೇತ್ರಃ— ಸಮಸ್ತ ಪ್ರಪಂಚವು ವರ್ತಿಸುವದಕ್ಕೆ ಅದು ತಾನೇ ಕಾರಣವಾಗಿರುವದು. ಈ ಲಿಂಗದ ಮೂಲಕವೇ ಜಗತ್ತು ನಡೆದಿದೆ· ಆದ್ದರಿಂದ ಅದು ಲಿಂಗಕ್ಷೇತ್ರವೆಂದೆನಿಸಿಕೊಂಡಿರುತ್ತದೆ.

ಅನಾದಿಃ—ಸೃಷ್ಟಿಯ ಉದಯಕ್ಕೆ ಲಿಂಗವೇ ಕಾರಣವಾಗಿದೆಯೇ ಹೊರತು ಲಿಂಗಕ್ಕೆ ಅವುದೂ ಆದಿ ಇಲ್ಲ. ಆದ್ದರಿಂದ ಅದು ಅನಾದಿ ಎನಿಸಿಕೊಂಡಿದೆ.

ಈ ಪ್ರಕಾರ ಲಿಂಗದ ಐದು ಗುಣಗಳಿವೆ. ಹೀಗೆ ವಚನಕಾರನು ಲಿಂಗದ ಗುಣಗಳನ್ನು ವಿವರಿಸಿ ಲಿಂಗವು ಜ್ವಾಲಮಾಲೆಯಿಂದ ಆವೃತವಾದದ್ದು, ಜ್ವಲಿಸುತ್ತಿರುವ ಸ್ತಂಭದ ಆಕೃತಿಯುಳ್ಳದ್ದು, ಮತ್ತು ಯಾವುದರಿಂದ ಜಗತ್ತು ಉತ್ಪನ್ನವಾಗಿ ಕಡೆಗೆ ಅದರಲ್ಲಿಯೇ ಲಯವಾಗುತ್ತದೋ ಅಂಥ ವಸ್ತುವು ಎಂದು ಲಿಂಗವನ್ನು ಹೊಗಳಿ, ಲಿಂಗದ ಮರ್ಮವನ್ನು ಅರಿದಾತನೇ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರನು ಎಂದರೆ ಪರಬ್ರಹ್ಮ ವಸ್ತುವು ಎಂದು ಹೇಳಿರುವನು

**ವಚನ:**— ೭. ಶಿವಶಿವಾ ಶಿವಲಿಂಗವು ಕೊಟ್ಟ ಆಯುಷ್ಯದಲ್ಲಿ ನಿಮಿಷಾರ್ಧವ ಹೆಚ್ಚಿಸಬಾರದು. ನಿಮಿಷಾರ್ಧವ ಕುಂದಿಸಬಾರದು. ಶಿವ ಶಿವಾ, ಶಿವಲಿಂಗವು ಕೊಟ್ಟ ಭಾಷೆಯಲ್ಲಿ ಕಾಣಿಯ ಹೆಚ್ಚಿಸಬಾರದು. ಕಾಣಿಯ ತಗ್ಗಿಬಾರದು. ಹರಿಬ್ರಹ್ಮಾದಿಗಳಿಗಾದರೂ ತೃಣದಂತಪ್ಪ ಕಾರ್ಯವ ಮಾಡಬಾರದು. ಅದೆಂತೆಂದೊಡೆ ತೇನ ವಿನಾ ತೃಣಾಗ್ರಮಪಿನ ಚಲತಿ ಇಂತೆಂದುದಾಗಿ, ಉತ್ಪತ್ತಿ ಸ್ಥಿತಿಲಯಂಗಳಿಗೆ ಶಿವನೇ ಕರ್ತನಲ್ಲದೆ, ಮತ್ತಾರೂ ಇಲ್ಲ. ಇದು ಕಾರಣ ಅನ್ಯರು ಆಯುಷ್ಯ ಭಾಷೆಯ ಕೊಟ್ಟಹರೆಂಬ ಆಶೆ ಬೇಡ. ಕೊಡರೆಂಬ ಕ್ಲೇಶ ಬೇಡ. ಸರ್ವವೂ ಶಿವಾಧೀನವೆಂದರಿದು ಪರಿಣಾಮಿಸಿ ವಿಶ್ವಾಸದಿಂದ ಲಿಂಗಾರ್ಚನೆಯ ಮಾಡಿದೊಡೆ ಬೇಡಿದ್ದನೀವ. ಇಹಪರ ಸಿದ್ಧಿಯ ನಂಬು ಮನವೇ ಉರಿಲಿಂಗ ಪೆದ್ದಿಪ್ರಿಯವಿಶ್ವೇಶ್ವರಯ್ಯ.

**ಭಾವ:**— ಪರಮಾತ್ಮನು ಅತ್ಯಂತ ಶಕ್ತಿವಂತನಿದ್ದಾನೆ. ಅವನ ಅಧೀನತೆಯಲ್ಲಿಯೇ ಜಗತ್ತಿನ ಎಲ್ಲ ವ್ಯವಹಾರಗಳು ನಡೆಯುತ್ತವೆ. ಅವನು ಇಟ್ಟ ಮರ್ಯಾದೆಯಲ್ಲಿಯೇ ಎಲ್ಲ ಜೀವಜಂತುಗಳು ಇರತಕ್ಕದ್ದು ಮತ್ತು ಬಾಳತಕ್ಕದ್ದು. ಉದಾ:— ಮನುಷ್ಯನ ಆಯುಷ್ಯವು ಇಂತಿಷ್ಟಿರಬೇಕೆಂದು ಪ್ರತಿಯೊಬ್ಬನ ಸಂಬಂಧವಾಗಿ ಕಟ್ಟಳೆಯುಂಟು. ಆದ್ದರಿಂದ ಆ ಆಯುಷ್ಯದಲ್ಲಿ ಒಂದು ನಿಮಿಷವನ್ನಾದರೂ ಹೆಚ್ಚಿಸಲಿಕ್ಕೆ ಬರಲಾರದು ಅಥವಾ ಕುಂದಿಸಲಿಕ್ಕೆ ಬರಲಾರದು. ಹಾಗೆಯೇ ಮನುಷ್ಯನು ಇಂತಿಂತಹ ಕಾರ್ಯಗಳನ್ನು ಮಾಡಿದ್ದಾದರೆ ಇಂತಿತಹ ಪರಿಣಾಮಗಳಾಗಬೇಕೆಂತಲೂ ಪರಮಾತ್ಮನ ನಿಯಮ ಉಂಟು. ಈ ವ್ಯವಹಾರಗಳು ಪರಮಾತ್ಮನು ಭಾಷೆ ಕೊಟ್ಟಂತೆ ನಡೆಯುತ್ತಲಿವೆ. ಇವುಗಳಲ್ಲಿ ಒಂದು ಕಾಣಿಸಹ ಹೆಚ್ಚು ಮಾಡಲಿಕ್ಕಾಗದು. ಅಥವಾ ಕಡಿಮೆಮಾಡಲಿಕ್ಕಾಗದು. ದೇವರ ನಿಯ

ಮಗಳನ್ನು ಉಲ್ಲಂಘಿಸಿಹೆನೆಂದರೆ ಯಾರಿಗೂ ಆಗದು. ಈ ನಿಯಮಗಳು ಬರೇ ಮನುಷ್ಯರಿಗಷ್ಟೇ ಅಲ್ಲ, ಹರಿಬ್ರಹ್ಮಾದಿಗಳಿಗೂ ಸಹ ಹತ್ತುತ್ತವೆಂದು ವಚನಕಾರನು ಅನ್ನುತ್ತಾನೆ. ಹರಿಬ್ರಹ್ಮಾದಿಗಳು ಷಟ್‌ಸ್ಥಲಶಾಸ್ತ್ರದ ಪ್ರಕಾರ ಆಯಾ ಸಾದಾಖ್ಯಗಳಲ್ಲಿದ್ದುಕೊಂಡು ಜಗತ್ತಿನ ವ್ಯವಹಾರಗಳನ್ನು ಸಾಗಿಸುತ್ತಲಿದ್ದಾರೆ. ಹೀಗೆ ಅವರು ತಮ್ಮ ಕಾರ್ಯಗಳನ್ನು ಮಾಡುವಲ್ಲಿ ಪರಮಾತ್ಮನ ಕಟ್ಟಳೆಗಳನ್ನು ಮೀರಕೂಡದು. ಒಂದು ತೃಣವು ಸಹ ಪರಮಾತ್ಮನ ಇಚ್ಛೆಯಂತೆಯೇ ಜಗತ್ತಿನಲ್ಲಿ ನಡೆಯುತ್ತಲಿದೆ. ಜಗತ್ತಿನಲ್ಲಿ ಪ್ರತಿಯೊಂದು ಪದಾರ್ಥಕ್ಕೆ ಉತ್ಪತ್ತಿ, ಸ್ಥಿತಿ, ಲಯಗಳುಂಟು. ಇವುಗಳೆಲ್ಲವು ಪರಮಾತ್ಮನ ಆಜ್ಞೆಯಂತೆ ಸಾಗುತ್ತವೆ. ಇದರಲ್ಲಿ ಬೇರೆ ಯಾರ ಆಟವೂ ಸಾಗಲಾರದು. ಆದ್ದರಿಂದ ಇತರೇ ಜನರು ಅಥವಾ ದೇವತೆಗಳು ತಮಗೆ ಆಯುಷ್ಯಕೊಡುವರು ಅಥವಾ ವರಗಳನ್ನು ಕೊಡುವರು ಎಂದು ಯಾವನೂ ಆಶೆ ಮಾಡಕೂಡದು. ಅಥವಾ ಅವರು ಕೊಡಲಿಲ್ಲವೆಂತಲೂ ಕ್ಲೇಶಪಡಬಾರದು. ಯಾಕಂದರೆ ಅವರಿಗೆ ಯಾವ ಸ್ವತಂತ್ರತೆಯೂ ಇಲ್ಲ. ಈ ಸ್ವತಂತ್ರತೆಯು ಶಿವನೊಬ್ಬನಿಗೆ ಮಾತ್ರ ಇದೆ. ಇದನ್ನು ತಿಳಿದುಕೊಂಡು ಪ್ರತಿಯೊಬ್ಬನು ಅತ್ಯಂತ ಆನಂದದಿಂದ ಶಿವನಲ್ಲಿ ಭಕ್ತಿಯನ್ನಿಟ್ಟು ಪೂಜಿಸಬೇಕು. ಇದರಿಂದ ಪರಮಾತ್ಮನ ಕಾರುಣ್ಯವು ಒದಗಿ ಅವನು ಬೇಡಿದ್ದನ್ನು ಕೊಡುವನು. ಮತ್ತು ಇಹಪರದಲ್ಲಿ ಸಿದ್ಧಿಯನ್ನೂ ಕೊಡುವನು. ಇಂತಹ ಅತ್ಯಂತ ಸರ್ವಶಕ್ತಿವಂತನಾದ ವಿಶ್ವೇಶ್ವರನನ್ನು ನಂಬು ಎಂದು ವಚನಕಾರನು ಉಪದೇಶಿಸಿರುವನು.

**ವಚನ**— ೮ ಸಕಲ ಶೃತಿಗಳ ಮುಂದಿರ್ದವರ ಸವಿಮಾತಿನ ವಶಕ್ಕತೀತವಾದ ವಸ್ತುವ ಬೇಡಿಕೊಳ್ಳಿರೊ. ಸಕಲಾತ್ಮರ ಮುಂದಿರ್ದವರ ತರ್ಕಕ್ಕೆಯೂ ಲಿಂಗವಾಗಿ ಸಿಕ್ಕದ ಅತೀತವಾದ ವಸ್ತುವ ಬೇಡಿಕೊಳ್ಳಿರೊ. ಇಂತು ಸಕಲಾತ್ಮರ ಹೊದ್ದದ ನಿತ್ಯ ಸಿಂಹಾಸನದ ಮೇಲೆ ನಿತ್ಯವಾಗಿರ್ದ ನಮ್ಮ ಉರಿಲಿಂಗದೇವನ ಬೇಡಿ ಕೊಳ್ಳಿರೊ.

**ಭಾವಃ**— ಇಲ್ಲಿ ವಚನಕಾರನು ಪರವಸ್ತುವನ್ನು ಕುರಿತು ವರ್ಣಿಸಿರುವದು ಹೇಗೆಂದರೆಃ— ಪರಮಾತ್ಮನು ಯಾವತ್ತು ಶೃತಿಗಳಿಗೆ ವಿಷಯನಾಗಿದ್ದಾನೆ. ಅಂದರೆ ಅವೆಲ್ಲವೂ ಅವನು ಎಂಥವನು ಹೇಗೆ ಇದ್ದಾನೆ

ಎಂಬದನ್ನು ಕುರಿತು ಹೇಳುತ್ತಲಿವೆ. ಆದರೆ ಪರಮಾತ್ಮನು ಅವುಗಳ ಸವಿ ಮಾತಿನ ವಶಕ್ಕೆ ಅತೀತವಾದ ವಸ್ತುವಾಗಿರುವನು. ಪರಮಾತ್ಮನು ಯಾವತ್ತು ಆತ್ಮರ ಇದಿರಿಗೆ ಇರುವನು. ಅವನು ಸರ್ವವ್ಯಾಪಿಯಾಗಿರುವನು. ಇಂಥ ಆತ್ಮನನ್ನು ತಾವು ಹ್ಯಾಗೆ ಕಾಣುವೆವೆಂದು ಎಲ್ಲರೂ ಅಭಿಲಾಷೆ ತೊಟ್ಟಿದ್ದಾರೆ. ಆದರೂ ಆತನು ಎಲ್ಲರ ತರ್ಕಕ್ಕೆ ನಿಲುಕಲಾರದವನಾಗಿದ್ದಾನೆ. ಪರಮಾತ್ಮನು ಮೀರಿದ ವಸ್ತುವು. ಆತನನ್ನೇ ಎಲ್ಲರೂ ಬೇಡಿಕೊಳ್ಳತಕ್ಕದ್ದು. ಅವನು ಯಾರನ್ನೂ ಹೊದ್ದಿರುವದಿಲ್ಲ. ಆದರೆ ಆತನು ಯಾವದು ಜಗತ್ತಿನಲ್ಲಿ ನಿತ್ಯವಾದದ್ದು ಇದೆಯೋ ಅದರಲ್ಲಿ ಶಾಶ್ವತವಾಗಿ ವ್ಯಾಪಿಸಿರುತ್ತಾನೆ. ಇಂಥ ಪರಮಾತ್ಮನನ್ನು ನಂಬಿ ಬೇಡಿಕೊಳ್ಳಬೇಕೆಂದು ವಚನಕಾರನು ಇಲ್ಲಿ ಉಪದೇಶಿಸಿರುವನು.

**ವಚನ:**— ೯. ಹರನೇ, ನಿಮ್ಮನು ದುಷ್ಟನಿಗ್ರಹ ಶಿಷ್ಟಪರಿಪಾಲನ ವಿಚಕ್ಷಣನೆಂದೆಂಬರು. ನಿಮಗೆ ಅಹಂಕರಿಸಿದ ಬ್ರಹ್ಮ, ವಿಷ್ಣು, ದಕ್ಷಾದಿಗಳ ಶಿಕ್ಷಿಸಿದಿರಿ. ನಿಮಗೆರಗದೆ ದುರ್ವೃತ್ತಿಯ ನಡೆದ ಗಜಾಸುರ, ವ್ಯಾಘ್ರಾಸುರ, ಗುಹ್ಯಾಸುರರುಗಳ ಕೊಂದು ಕಳೆದಿರಿ. ಇದನರಿದು ಸ್ತೋತ್ರವ ಮಾಡಿದರೆ ನೀವು ಕರುಣಿಸದೆ ಇಲ್ಲಯ್ಯಾ. ಇಂತಹ ಕರ್ತರಿನ್ನುಂಟೆ? ನಿಮ್ಮಂತಹ ಬಲಿಷ್ಠರಿನ್ನುಂಟೆ? ನಿಮ್ಮಂತಹ ಪುರುಷರುಗಳಿನ್ನುಂಟೆ? ಶಿವಶಿವಾ, ದುಷ್ಟರುಗಳೆಲ್ಲರ ಶಿಕ್ಷಿಸಿದಿರಿ. ಎನ್ನ ಮನವ ಶಿಕ್ಷಿಸಲಾರೆ. ಶಿವಶಿವಾ, ನಿಮ್ಮಿಂದ ಎನ್ನ ಮನ ಸಾಮರ್ಥ್ಯವುಳ್ಳದು. ಎನ್ನಿಂದ ನೀವು ಸಾಮರ್ಥ್ಯವಿಲ್ಲದಡೆ ಶಿವಭಕ್ತ ಅಪರಾಧಿಗಳ ಶಿಕ್ಷಿಸುವಂತಹ ಇರಿಭಕ್ತರು ಕಾಲಾಗ್ನಿರುದ್ರ ಮಡಿವಾಳ ಮಾಚಯ್ಯಂಗೆ ಮೊರೆಯಿಟ್ಟು ಕಳೆವೆನು. ಶಿವಧೋ ಎನ್ನ ಮೊರೆಯ ಕೇಳಿರಣ್ಣಾ. ಹರನೇ ನೀನು ದುಷ್ಟನಿಗ್ರಹ ಶಿಷ್ಟಪರಿಪಾಲಕನೆಂಬ ಬಿರಿದು ಬಿಟ್ಟು ಕಳೆ. ಬಳಿಕ ನಾ ನಿಮ್ಮ ವರದ ಹಸ್ತನೆಂಬೆ, ಶಶಿಧರನೆಂಬೆ, ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಯ್ಯನೆಂಬೆ.

**ಭಾವ:**— ಪರಮಾತ್ಮನು ದುಷ್ಟನಿಗ್ರಹ, ಶಿಷ್ಟಪರಿಪಾಲಕನೆನಿಸಿಕೊಳ್ಳುತ್ತಾನೆ. ಅಂದರೆ ಕೆಡಕಾದುದನ್ನು ನಿಗ್ರಹಮಾಡುವವನು ಮತ್ತು ಉತ್ತಮನಾದುದನ್ನು ಪಾಲಿಸುವವನು ಎಂದು ಹೇಳಲ್ಪಡುತ್ತಾನೆ. ಈ ಬಗ್ಗೆ ಪುರಾಣಗಳಲ್ಲಿ ಉದಾಹರಣೆಗಳೂ ಇವೆ. ಬ್ರಹ್ಮ, ವಿಷ್ಣು, ದಕ್ಷಾದಿಗಳು ಪರಮಾತ್ಮನನ್ನು ವಿರೋಧಿಸಿದರು. ಆಗ ಅವರು ಶಿಕ್ಷಿಸಲ್ಪಟ್ಟರು. ಹಾಗೆಯೇ ಪರಮಾತ್ಮನಿಗೆ ನಮಸ್ಕರಿಸದೆ ಅಹಂಕರಿಸಿ ನಡೆದಂಥ ಗಜಾಸುರ ವ್ಯಾಘ್ರಾ

ಮಗಳನ್ನು ಉಲ್ಲಂಘಿಸಿಹೆನೆಂದರೆ ಯಾರಿಗೂ ಆಗದು. ಈ ನಿಯಮಗಳು ಬರೇ ಮನುಷ್ಯರಿಗಷ್ಟೇ ಅಲ್ಲ, ಹರಿಬ್ರಹ್ಮಾದಿಗಳಿಗೂ ಸಹ ಹತ್ತುತ್ತವೆಂದು ವಚನಕಾರನು ಅನ್ನುತ್ತಾನೆ. ಹರಿಬ್ರಹ್ಮಾದಿಗಳು ಷಟ್‌ಸ್ಥಲಶಾಸ್ತ್ರದ ಪ್ರಕಾರ ಆಯಾ ಸಾದಾಖ್ಯಗಳಲ್ಲಿದ್ದುಕೊಂಡು ಜಗತ್ತಿನ ವ್ಯವಹಾರಗಳನ್ನು ಸಾಗಿಸುತ್ತಲಿದ್ದಾರೆ. ಹೀಗೆ ಅವರು ತಮ್ಮ ಕಾರ್ಯಗಳನ್ನು ಮಾಡುವಲ್ಲಿ ಪರಮಾತ್ಮನ ಕಟ್ಟಳೆಗಳನ್ನು ಮೀರಕೂಡದು. ಒಂದು ತೃಣವು ಸಹ ಪರಮಾತ್ಮನ ಇಚ್ಛೆಯಂತೆಯೇ ಜಗತ್ತಿನಲ್ಲಿ ನಡೆಯುತ್ತಲಿದೆ. ಜಗತ್ತಿನಲ್ಲಿ ಪ್ರತಿಯೊಂದು ಪದಾರ್ಥಕ್ಕೆ ಉತ್ಪತ್ತಿ, ಸ್ಥಿತಿ, ಲಯಗಳುಂಟು. ಇವುಗಳೆಲ್ಲವು ಪರಮಾತ್ಮನ ಆಜ್ಞೆಯಂತೆ ಸಾಗುತ್ತವೆ. ಇದರಲ್ಲಿ ಬೇರೆ ಯಾರ ಆಟವೂ ಸಾಗಲಾರದು. ಆದ್ದರಿಂದ ಇತರೇ ಜನರು ಅಥವಾ ದೇವತೆಗಳು ತಮಗೆ ಆಯುಷ್ಯಕೊಡುವರು ಅಥವಾ ವರಗಳನ್ನು ಕೊಡುವರು ಎಂದು ಯಾವನೂ ಆಶೆ ಮಾಡಕೂಡದು. ಅಥವಾ ಅವರು ಕೊಡಲಿಲ್ಲವೆಂತಲೂ ಕ್ಲೇಶಪಡಬಾರದು. ಯಾಕಂದರೆ ಅವರಿಗೆ ಯಾವ ಸ್ವತಂತ್ರತೆಯೂ ಇಲ್ಲ. ಈ ಸ್ವತಂತ್ರತೆಯು ಶಿವನೊಬ್ಬನಿಗೆ ಮಾತ್ರ ಇದೆ. ಇದನ್ನು ತಿಳಿದುಕೊಂಡು ಪ್ರತಿಯೊಬ್ಬನು ಅತ್ಯಂತ ಆನಂದದಿಂದ ಶಿವನಲ್ಲಿ ಭಕ್ತಿಯನ್ನಿಟ್ಟು ಪೂಜಿಸಬೇಕು. ಇದರಿಂದ ಪರಮಾತ್ಮನ ಕಾರುಣ್ಯವು ಒದಗಿ ಅವನು ಬೇಡಿದ್ದನ್ನು ಕೊಡುವನು. ಮತ್ತು ಇಹಪರದಲ್ಲಿ ಸಿದ್ಧಿಯನ್ನೂ ಕೊಡುವನು. ಇಂತಹ ಅತ್ಯಂತ ಸರ್ವಶಕ್ತಿವಂತನಾದ ವಿಶ್ವೇಶ್ವರನನ್ನು ನಂಬು ಎಂದು ವಚನಕಾರನು ಉಪದೇಶಿಸಿರುವನು.

**ವಚನ:—** ೮ ಸಕಲ ಶೃತಿಗಳ ಮುಂದಿರ್ದವರ ಸವಿಮಾತಿನ ವಶಕ್ಕತೀತವಾದ ವಸ್ತುವ ಬೇಡಿಕೊಳ್ಳಿರೊ. ಸಕಲಾತ್ಮರ ಮುಂದಿರ್ದವರ ತರ್ಕಕ್ಕೆಯೂ ಲಿಂಗವಾಗಿ ಸಿಕ್ಕದ ಅತೀತವಾದ ವಸ್ತುವ ಬೇಡಿಕೊಳ್ಳಿರೊ. ಇಂತು ಸಕಲಾತ್ಮರ ಹೊದ್ದದ ನಿತ್ಯ ಸಿಂಹಾಸನದ ಮೇಲೆ ನಿತ್ಯವಾಗಿರ್ದ ನಮ್ಮ ಉರಿಲಿಂಗದೇವನ ಬೇಡಿ ಕೊಳ್ಳಿರೊ.

**ಭಾವ:—** ಇಲ್ಲಿ ವಚನಕಾರನು ಪರವಸ್ತುವನ್ನು ಕುರಿತು ವರ್ಣಿಸಿರುವದು ಹೇಗೆಂದರೆ:— ಪರಮಾತ್ಮನು ಯಾವತ್ತು ಶೃತಿಗಳಿಗೆ ವಿಷಯನಾಗಿದ್ದಾನೆ. ಅಂದರೆ ಅವೆಲ್ಲವೂ ಅವನು ಎಂಥವನು ಹೇಗೆ ಇದ್ದಾನೆ

ಎಂಬದನ್ನು ಕುರಿತು ಹೇಳುತ್ತಲಿವೆ. ಆದರೆ ಪರಮಾತ್ಮನು ಅವುಗಳ ಸವಿ ಮಾತಿನ ವಶಕ್ಕೆ ಅತೀತವಾದ ವಸ್ತುವಾಗಿರುವನು. ಪರಮಾತ್ಮನು ಯಾವತ್ತು ಆತ್ಮರ ಇದಿರಿಗೆ ಇರುವನು. ಅವನು ಸರ್ವವ್ಯಾಪಿಯಾಗಿರುವನು. ಇಂಥ ಆತ್ಮನನ್ನು ತಾವು ಹ್ಯಾಗೆ ಕಾಣುವೆವೆಂದು ಎಲ್ಲರೂ ಅಭಿಲಾಷೆ ತೊಟ್ಟಿದ್ದಾರೆ. ಆದರೂ ಆತನು ಎಲ್ಲರ ತರ್ಕಕ್ಕೆ ನಿಲುಕಲಾರದವನಾಗಿದ್ದಾನೆ. ಪರಮಾತ್ಮನು ಮೀರಿದ ವಸ್ತುವು. ಆತನನ್ನೇ ಎಲ್ಲರೂ ಬೇಡಿಕೊಳ್ಳತಕ್ಕದ್ದು. ಅವನು ಯಾರನ್ನೂ ಹೊದ್ದಿರುವದಿಲ್ಲ. ಆದರೆ ಆತನು ಯಾವದು ಜಗತ್ತಿನಲ್ಲಿ ನಿತ್ಯವಾದದ್ದು ಇದೆಯೋ ಅದರಲ್ಲಿ ಶಾಶ್ವತವಾಗಿ ವ್ಯಾಪಿಸಿರುತ್ತಾನೆ. ಇಂಥ ಪರಮಾತ್ಮನನ್ನು ನಂಬಿ ಬೇಡಿಕೊಳ್ಳಬೇಕೆಂದು ವಚನಕಾರನು ಇಲ್ಲಿ ಉಪದೇಶಿಸಿರುವನು.

**ವಚನ:**— ೯. ಹರನೇ, ನಿಮ್ಮನು ದುಷ್ಟನಿಗ್ರಹ ಶಿಷ್ಟಪರಿಪಾಲನ ವಿಚಕ್ಷಣನೆಂದೆಂಬರು. ನಿಮಗೆ ಅಹಂಕರಿಸಿದ ಬ್ರಹ್ಮ, ವಿಷ್ಣು, ದಕ್ಷಾದಿಗಳ ಶಿಕ್ಷಿಸಿದಿರಿ. ನಿಮಗೆರಗದೆ ದುರ್ವೃತ್ತಿಯು ನಡೆದ ಗಜಾಸುರ, ವ್ಯಾಘ್ರಾಸುರ, ಗುಹ್ಯಾಸುರರುಗಳ ಕೊಂದು ಕಳೆದಿರಿ. ಇದನರಿದು ಸ್ತೋತ್ರವ ಮಾಡಿದರೆ ನೀವು ಕರುಣಿಸದೆ ಇಲ್ಲಯ್ಯಾ. ಇಂತಹ ಕರ್ತರಿನ್ನುಂಟೆ? ನಿಮ್ಮಂತಹ ಬಲಿಷ್ಠರಿನ್ನುಂಟೆ? ನಿಮ್ಮಂತಹ ಪುರುಷರುಗಳಿನ್ನುಂಟೆ? ಶಿವಶಿವಾ, ದುಷ್ಟರುಗಳೆಲ್ಲರ ಶಿಕ್ಷಿಸಿದಿರಿ. ಎನ್ನ ಮನವ ಶಿಕ್ಷಿಸಲಾರೆ. ಶಿವಶಿವಾ, ನಿಮ್ಮಿಂದ ಎನ್ನ ಮನ ಸಾಮರ್ಥ್ಯವುಳ್ಳದು. ಎನ್ನಿಂದ ನೀವು ಸಾಮರ್ಥ್ಯವಿಲ್ಲದಡೆ ಶಿವಭಕ್ತ ಅಪರಾಧಿಗಳ ಶಿಕ್ಷಿಸುವಂತಹ ಇರಿಭಕ್ತರು ಕಾಲಾಗ್ನಿರುದ್ರ ಮಡಿವಾಳ ಮಾಚಯ್ಯಂಗೆ ಮೊರೆಯಿಟ್ಟು ಕಳೆವೆನು. ಶಿವಧೋ ಎನ್ನ ಮೊರೆಯ ಕೇಳಿರಣ್ಣಾ. ಹರನೇ ನೀನು ದುಷ್ಟನಿಗ್ರಹ ಶಿಷ್ಟಪರಿಪಾಲಕನೆಂಬ ಬಿರಿದು ಬಿಟ್ಟು ಕಳೆ. ಬಳಿಕ ನಾ ನಿಮ್ಮ ವರದ ಹಸ್ತನೆಂಬೆ, ಶಶಿಧರನೆಂಬೆ, ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಯ್ಯನೆಂಬೆ.

**ಭಾವ:**— ಪರಮಾತ್ಮನು ದುಷ್ಟನಿಗ್ರಹ, ಶಿಷ್ಟಪರಿಪಾಲಕನೆನಿಸಿಕೊಳ್ಳುತ್ತಾನೆ. ಅಂದರೆ ಕೆಡಕಾದುದನ್ನು ನಿಗ್ರಹಮಾಡುವವನು ಮತ್ತು ಉತ್ತಮನಾದುದನ್ನು ಪಾಲಿಸುವವನು ಎಂದು ಹೇಳಲ್ಪಡುತ್ತಾನೆ. ಈ ಬಗ್ಗೆ ಪುರಾಣಗಳಲ್ಲಿ ಉದಾಹರಣೆಗಳೂ ಇವೆ. ಬ್ರಹ್ಮ, ವಿಷ್ಣು, ದಕ್ಷಾದಿಗಳು ಪರಮಾತ್ಮನನ್ನು ವಿರೋಧಿಸಿದರು. ಆಗ ಅವರು ಶಿಕ್ಷಿಸಲ್ಪಟ್ಟರು. ಹಾಗೆಯೇ ಪರಮಾತ್ಮನಿಗೆ ನಮಸ್ಕರಿಸದೆ ಅಹಂಕರಿಸಿ ನಡೆದಂಥ ಗಜಾಸುರ ವ್ಯಾಘ್ರಾ

ಸುರ, ಗುಹ್ಯಾಸುರ, ಮೊದಲಾದವರು ಸಂಹರಿಸಲ್ಪಟ್ಟರು. ಆದರೆ ಯಾರು ಪರಮಾತ್ಮನನ್ನು ಪ್ರೀತಿಸಿ ಅವನ ಸ್ತೋತ್ರಮಾಡಿರುವರೋ ಅವರಿಗೆ ಅವನು ಕರುಣಿಸಿರುವನು. ಹೀಗೆ ಅವನು ಕರುಣಿಸದೆ ಇದ್ದವರು ಯಾರೂ ಇರ ಲಿಕ್ಕಿಲ್ಲ. ಈ ಬಗೆಯ ಕರ್ತರು ಯಾರಾದರೂ ಇರಬಹುದೇ? ಯಾರೂ ಇಲ್ಲವೆಂದು ವಚನಕಾರನ ಅಭಿಪ್ರಾಯ. ಪರಮಾತ್ಮನಷ್ಟು ಬಲಿಷ್ಠರಾ ದವರೂ ನಿಜವಾದ ಗಂಡಸರೂ ಯಾರೂ ಇಲ್ಲ. ಅವನು ನಿಜವಾಗಿ ದುಷ್ಟರನ್ನು ಶಿಕ್ಷಿಸಿಯೇ ಬಿಟ್ಟಿರುವನು.

ಈ ಪ್ರಕಾರ ವಚನಕಾರನು ಹೇಳಿ, ಪರಮಾತ್ಮನಿಗೆ ಶಿಕ್ಷಿಸಲಿಕ್ಕೆ ಆಗದಂಥ ಒಂದು ವಸ್ತುವಿದೆ ಎಂದು ಹೇಳಿ, ಆ ವಸ್ತುವು ಯಾವದೆಂ ದರೆ ಮನುಷ್ಯನ ಮನಸ್ಸು ಎಂದು ಎಂದಿರುವನು. ಈ ಮನಸ್ಸನ್ನು ಶಿಕ್ಷಿಸಲು ಪರಮಾತ್ಮನಿಗೆ ಆಗದೆಂದು ಅವನ ಅಭಿಪ್ರಾಯ. ಯಾಕಂದರೆ ಮನಸ್ಸು ಯಾರನ್ನೂ ಕೇಳುವದಿಲ್ಲ. ಅದನ್ನು ಶಿಕ್ಷಿಸಲೂ ಆಗುವದಿಲ್ಲ. ಆದ್ದರಿಂದ ಈ ಮನಸ್ಸು ಪರಮಾತ್ಮನಕಿಂತಲೂ ಸಾಮರ್ಥ್ಯವುಳ್ಳದ್ದು. ಅಂದ ಬಳಿಕ ಈ ಮನಸ್ಸನ್ನು ತಿದ್ದುವದು ಹೇಗೆ ಎಂಬ ಪ್ರಶ್ನೆಯು ಹೊರಡುತ್ತದೆ. ಇದಕ್ಕೆ ವಚನಕಾರನು ಉತ್ತರಕೊಡುವದೇನೆಂದರೆ ಶಿವ ಭಕ್ತ ಅಪರಾಧಿಗಳನ್ನು ಶಿಕ್ಷಿಸುವಂಥವರು ಇರಿಭಕ್ತ, ಕಾಲಾಗ್ನಿರುದ್ರ, ಮಡಿವಾಳಮಾಚಿದೇವ ಇಂಥವರು ಇದ್ದಾರೆ. ಇಂಥವರಿಗೆ ಶರಣುಹೊ ಕ್ಕಿದ್ದಾದರೆ ಮನಸ್ಸಿನ ಡೊಂಕು ಹೋಗುವದು. ಅಂದ ಬಳಿಕ ಪರಮಾ ತ್ಮನು ದುಷ್ಟನಿಗ್ರಹ ಶಿಷ್ಟಪರಿಪಾಲಕ ಎಂಬ ತನ್ನ ಬಿರುದನ್ನು ಬಿಟ್ಟು ಕೊಡಬೇಕೆಂದು ವಚನಕಾರನು ಇಲ್ಲಿ ಹೇಳುತ್ತಾನೆ. ಹೀಗೆ ಪರಮಾ ತ್ಮನು ತನ್ನ ಬಿರುದನ್ನು ಬಿಟ್ಟುಕೊಟ್ಟದ್ದಾದರೆ ಅವನು ವರದ ಹಸ್ತ, ಶಶಿಧರ ಮತ್ತು ನಿಜವಾದ ಪರಬ್ರಹ್ಮ ವಸ್ತು ಎಂದು ಕರೆಯುವೆನೆಂದು ವಚನಕಾರನು ಚೇಷ್ಟೆಯಿಂದ ನುಡಿದಿರುವನು.

**ವಚನಃ**— ೧೦. ಕೊಡುವ ಲಿಂಗವ ಬೇಡಿಕೊಳಲರಿಯದೆ ಕೊಡ ಲರಿಯದ ಮಾನವರನಾಶೆ ಮಾಡಿ ಕೆಡಬೇಡ ಕೆಡಬೇಡ ಕೇಳಿರಣ್ಣಾ: ಪುರಾತನರು ಗುರುಲಿಂಗ ಜಂಗಮವನರ್ಚಿಸಿ ದಾಸೋಹವ ಮಾಡಿ, ಕೇವಲ ವಿಶ್ವಾಸದಿಂದೆ ಲಿಂಗವನೆ ಬೇಡಿ ಲಿಂಗದಲ್ಲಿ ವರವ ಪಡೆದುದಕ್ಕೆ ದೃಷ್ಟವ ನೋಡಿರೇ. ಅದು ಎಂತೆಂದೊಡೆ, ಲಿಂಗವು ಮಾರ್ಕಂಡೇಯ ಮಳೆಯರಾಜಂಗೆ ಆಯುಷ್ಯವ ಕೊಟ್ಟ ನೋಡಿರೇ. ಸುರಿಗಿಯ ಚೌಡಯ್ಯ

ಬಸವರಾಜದೇವರ ಹೋದ ಪ್ರಾಣಂಗಳ ಬೇಡಿದೊಡೆ, ಕೊಟ್ಟ ನೋಡಿರೇ. ಇನ್ನು ಲಿಂಗವು ಭಾಷೆಯು ಕೊಟ್ಟುದಕ್ಕೆ ದೃಷ್ಟವ ನೋಡಿರೇ. ಚೋಳಂಗೆ ಹೊನ್ನ ಮಳೆಯ ಕರೆಸಿದ. ದಾಸಂಗೆ ತವನಿಧಿಯ ಕೊಟ್ಟ. ದೇವದಾನವ ಮಾನವರಿಗೆಯೂ ಅವರವರು ಬೇಡಿದ ಪದಂಗಳ ಕೊಟ್ಟ ನೋಡಿರೇ. ಇಂತಿವು ಮೊದಲಾದ ಆಯುಷ್ಯ ಭಾಷೆಯ ಪ್ರಾಣಂಗಳು ಮತ್ತೇನೇನು ಪದಂಗಳಂ ಬೇಡಿದೊಡೆ ಕೊಡುವಂತಹ ಮಹಾದಾನಿಯನೆ ಬೇಡಿಕೊಳ್ಳಿರೇ. ಅನಾಥನಾಥನನು, ಅನಾಥಬಂಧುವನು, ಕರುಣಾಕರನನು, ವರ ಮೂರ್ತಿಯನು, ದಾನಗುಣಶೀಲನನು, ಭಕ್ತದೇಹಿಕ ದೇವನನು, ಭಕ್ತ ದೇಹಿಕ ಚಿಂತಾಮಣಿಯನು, ಭಕ್ತದೇಹಿಕ ಕಾಮಧೇನುವನು, ಭಕ್ತ ದೇಹಿಕ ಕಲ್ಪವೃಕ್ಷನನು ಬೇಡಿಕೊಳ್ಳಿರೇ ನಮ್ಮ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರನನು.

ಭಾವಃ— ಪರಮಾತ್ಮನು ದಯಾಶೀಲನಾಗಿರುವನು. ಆದ್ದರಿಂದ ಅವನನ್ನು ಪುನಃಪೂರ್ವಕವಾಗಿ ಯಾಚಿಸಿದರೆ, ಅವನು ಯಾಚಿಸಿದ್ದನ್ನು ನಿಶ್ಚಯವಾಗಿ ಕೊಡುವನು. ಅನೇಕರು ಕೊಡತಕ್ಕಂಥ ಇಂಥ ಪರಮಾತ್ಮನನ್ನು ಬೇಡದೆ ಮಾನವರು ಕೊಡುವರೆಂದು ಅವರನ್ನು ಆಶಿಮಾಡುವರು. ಇದು ಅನುಚಿತವೆಂದು ವಚನಕಾರನು ಅನ್ನುತ್ತಾನೆ. ಹಿಂದಿನ ಪುರಾತನರು ತಮ್ಮ ತನುಮನ ಧನದಿಂದ ಗುರುಲಿಂಗ ಜಂಗಮವನ್ನು ಅರ್ಚಿಸಿ, ದಾಸೋಹ ಭಾವದಿಂದ ವರ್ತಿಸಿ ತಮ್ಮ ಶರೀರದ ಒಳಹೊರಗನ್ನು ಶುದ್ಧ ಮಾಡಿಕೊಂಡು ಕೇವಲ ವಿಶ್ವಾಸದಿಂದ ಪರಮಾತ್ಮನನ್ನು ಬೇಡಿ, ಅನೇಕ ಬಗೆಯ ವರಗಳನ್ನು ಪಡೆದುಕೊಂಡರು. ಉದಾಃ— ಮಾರ್ಕಂಡೇಯ, ಮಳೆಯ ರಾಜರು ತಮ್ಮ ಭಕ್ತಿ ವಿಶ್ವಾಸಗಳಿಂದ ತಮ್ಮ ಆಯುಷ್ಯವನ್ನು ಹೆಚ್ಚಿಸಿಕೊಂಡರು. ಸುರಿಗಿಯ ಚೌಡಯ್ಯ, ಬಸವರಸರು ಹೋದ ಪ್ರಾಣಗಳನ್ನು ಬರಮಾಡಿಕೊಂಡರು. ಪರಮಾತ್ಮನು ಚೋಳನಿಗೆ ಹೊನ್ನ ಮಳೆ ಗರೆದನು. ದೇವರದಾಸಿಮಯ್ಯನಿಗೆ ತವನಿಧಿಯನ್ನು ಕೊಟ್ಟನು. ಹೀಗೆ ಪರಮಾತ್ಮನು ದೇವ ದಾನವ ಮಾನವರಿಗೆ ಅವರು ಬೇಡಿದ ವರಗಳನ್ನು ಕೊಟ್ಟಿರುವನು. ಆದ್ದರಿಂದ ಇಂಥ ಮಹಾದಾನಿಯನ್ನು ಬೇಡಿಕೊಳ್ಳಬೇಕು. ಅವನು ಅನಾಥನಾಥನೂ ಅನಾಥ ಬಂಧುವೂ ಆಗಿದ್ದಾನೆ. ಅವನು ಕರುಣಾಕರನು, ದಾನಗುಣಶೀಲನು ಇದ್ದಾನೆ. ಅವನು ಭಕ್ತದೇಹವೇ ತನ್ನ ದೇಹವಾಗಿರುವನು. ಅವನು

ಭಕ್ತದೇಹಿಕ ಚಿಂತಾಮಣಿಯು, ಕಾಮಧೇನುವು, ಕಲ್ಪವೃಕ್ಷನು ಆಗಿರುತ್ತಾನೆ. ಇಂಥ ಪರಮಾತ್ಮನನ್ನು ಬೇಡಿಕೊಳ್ಳಿರೆಂದು ವಚನಕಾರನು ಬೋಧಿಸಿರುವನು.

**ವಚನಃ—** ೧೧. ಸಾಕಾರವಿಡಿದು ಪರಬ್ರಹ್ಮವೆಂದೆಂಬಿರಿ. ಪರಬ್ರಹ್ಮವ ನುಡಿವಿರಿ. ಪರಬ್ರಹ್ಮವನರಿವೆವೆಂಬಿರಿ. ಪರಬ್ರಹ್ಮವನರಿಯದೆ ನುಡಿವಿರಿ. ಬ್ರಹ್ಮದೊಡಕು ಆರಿದು ಕಾಣಿರಣ್ಣಾ. ಈ ಬ್ರಹ್ಮದೊಡಕಿನಿಂದ ಮುನ್ನೊಮ್ಮೆ ದೇವಜಾತಿಗಳು ಋಷಿಜನಂಗಳು ಬ್ರಹ್ಮನನು ಪರಬ್ರಹ್ಮವ ಬೆಸಗೊಳಲು ಅಹಂ ಬ್ರಹ್ಮವೆಂದು ತಲೆಯ ಹೋಗಾಡಿಕೊಂಡು ಸರ್ವಪುರಾಣ ಪ್ರಸಿದ್ಧ ಇನ್ನು ತಲೆಯು ಮೋಟುಕಾಣಬರುತ್ತಿದೆ. ಬ್ರಹ್ಮನ ಶಿರ ಆ ಪರಬ್ರಹ್ಮನ ಹಸ್ತದಲ್ಲದೆ. ನಾನೇ ಬ್ರಹ್ಮವೆಂದು ಸನತ್ಕುಮಾರ ಒಂಟೆಯಾದ. ಸ್ಕಂದಪುರಾಣ, ಪ್ರಸಿದ್ಧ, ಅವರಂತೆ ನೀವಾಗದೆ ಪರಬ್ರಹ್ಮದ ನೆಲೆಯ ಕೇಳಿರಣ್ಣಾ! ಲಿಂಗವೇ ಪರಬ್ರಹ್ಮವೆಂದು ಅಥರ್ವಣವೇದ ನುಡಿವುತ್ತಿದೆ. ಶೃತಿ॥ ಓಂ ಸ ಏಕೊ ರುದ್ರಸ್ಸ ಈಶಾನಸ್ಸ ಭಗವಾನ್ ಸ ಮಹೇಶ್ವರಸ್ಸ ಮಹಾದೇವ ಇತಿ॥ ಎಂದುದಾಗಿ ಮತ್ತೆಯೂ ಈ ಪ್ರಕಾರದಲ್ಲಿ ಯಜುರ್ವೇದ ನುಡಿಯಿತ್ತು. ಶೃತಿ॥ ಋತಂ ಸತ್ಯ ಪರಬ್ರಹ್ಮ ಪುರುಷಂ ಕೃಷ್ಣ ಪಿಂಗಳಂ। ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈ ನಮಃ॥ ಮತ್ತೆಯೂ ಈ ಪ್ರಕಾರದಲ್ಲಿ ಶಿವಸಂಕಲ್ಪೋಪನಿಷತ್ತು ನುಡಿಯಿತ್ತು. ಶೃತಿ॥ ಋತಂ ಸತ್ಯಂ ಪರಬ್ರಹ್ಮಪುರುಷಂ ಕೃಷ್ಣಪಿಂಗಳಂ। ಊರ್ಧ್ವರೇತಂತಮೀಶಾನಂ ತಸ್ಮೈ ಮನಶ್ಶಿವ ಸಂಕಲ್ಪಮಸ್ತು। ಎಂದುದಾಗಿ ಲಿಂಗವೇ ಪರಬ್ರಹ್ಮ. ಮುನ್ನೊಮ್ಮೆ ಹರಿಬ್ರಹ್ಮರ ಸಂವಾದದಲ್ಲಿ ಉರಿಲಿಂಗ ಉದ್ಭವವಾದಲ್ಲಿ ಹರಿಬ್ರಹ್ಮಾದಿಗಳು ಸ್ತೋತ್ರವ ಮಾಡಿದರು. ಲೈಂಗ್ಯೆ ॥ಜ್ವಾಲಾಮಾಲಾ ವೃತಾಂಗಾಯ ಜ್ವಲನಸ್ತಂಭರೂಪಿಣೆ। ನಮಶ್ಶಿವಾಯ ಶಾಂತಾಯ ಬ್ರಹ್ಮಣೆ ಲಿಂಗಮೂರ್ತಯೆ॥ ಎಂದುದಾಗಿ ಇದು ಕಾರಣ ಲಿಂಗವೇ ಪರಬ್ರಹ್ಮವೆಂದು ಮತ್ತು ಯಜುರ್ವೇದದಲ್ಲಿ ನುಡಿವುತ್ತಿದೆ॥ ಓಂ ಈಶಾನಸ್ಸರ್ವವಿದ್ಯಾನಾಮೀಶ್ವರಸ್ಸರ್ವಭೂತಾನಾಂ। ಬ್ರಹ್ಮಾಧಿಪತಿಃ ಬ್ರಾಹ್ಮಣೊಧಪತಿ ಬ್ರಹ್ಮಾ ಶಿವೋಮೆ ಅಸ್ತುಸದಾಶಿವೋ। ಮತ್ತಂ ಆದಿತ್ಯ ಪುರಾಣದಲ್ಲಿ॥ ಪರಬ್ರಹ್ಮ ಸ ಈಶಾನ ಏಕೋ ರುದ್ರಸ್ಸ ಏವಚ। ಭಗವಾನ್ಮಹೇಶ್ವರಸ್ಸಾಕ್ಷಾನ್ಮಹಾದೇವೊ ನ ಸಂಶಯಃ॥ "ಯಸ್ಯಾಂತಸ್ಥಾನಿ ಭೂತಾದಿ ಬ್ರಹ್ಮೇತಿಯಜುರ್ವೇದಸ್ತಂ ರುದ್ರಂ ಶರಣಂ ವ್ರಜೇತಿ" ಎಂದುದಾಗಿ ಲಿಂಗವೇ ಪರಬ್ರಹ್ಮ ಮತ್ತಂ ಕೂರ್ಮಪುರಾಣೆ ॥ ಈಶ್ವರ ಗೀತೆಯಲ್ಲಿ॥ ಅವ್ಯಕ್ತಂ ಕಾರಣಂ

ಪುರುಷನು ಬೇರೆ ಮುಲಗುವರೆ ಎನಲು ಆಕೆ ನಿನಗೆ ಪಂಚಾಕ್ಷರಿಯ ಉಪದೇಶವಿಲ್ಲವೆನಲು ಅವ ಬಲಾತ್ಕಾರದಿಂದ ಅಪ್ಪಿಕೊಳಲು ಆಕೆಯ ಮೈಯ್ಯು ಕಾದ ಕಬ್ಬಿನದಂತೆ ಆವನ ಸುಡಲು ನೀನು ವೃಢದೇಹಿ ನಿನ್ನ ಸೋಂಕಿನಿಂದ ಜ್ವಾಲೆ ಏಕಾಯಿತ್ತೆನಲು, ರತಿ ಇಲ್ಲದವಳ ರೋಗಿಯ ಗರ್ಭಿಣಿಯ ವ್ರತಸ್ಥೆಯ ಬಲಾತ್ಕಾರವ ಮಾಡಬಾರದು. ಬಳಿಕ ಆ ದೂರ್ವಾಸ ನನಗೆ ಮಾಡಿದುಪದೇಶ ಉಂಟು ಆ ಪಂಚಾಕ್ಷರಿ ನಿನ್ನ ಸುಟ್ಟಿತ್ತು. ಆ ಮಾತ ಕೇಳಿ ಗಾರ್ಗ್ಯ ಮುನಿಯು ಬಳಿಗೆ ಹೋಗಿ ಮಂತ್ರೋಪದೇಶವ ಪಡೆ ಎನಲು ಶರೀರದಲ್ಲಿದ್ದ ಪಾಪಗಳು ಕಾಗೆಯ ರೂಪಾಗಿ ಹೊರಟು ಹೋದವು. ಬಳಿಕ ಸತಿಪತಿಗಳು ಸಂಭೋಗದಲ್ಲಿದ್ದು ಕೈಲಾಸಕ್ಕೆ ಹೋದರು.

---

## ೭೮ ನೆಯ ವಚನದ ಕಥೆ. (೧೪-೫)

### ಜಾತಿಕಾರರು.

ಜಾತಿಕಾರರು ಅಂಗದ ಮೇಲೆ ಶಿವಲಿಂಗಧಾರಣೆ ವಿಭೂತಿ ರುದ್ರಾಕ್ಷಿ ಕಾವಿ ಕಾಷಾಯಾಂಬರ ಕಂಥೆ ಖಟ್ವಾಂಗ ಕಮಂಡಲು ಗುಂಡಿಗಪ್ಪರ ಜಾಳಿಗೆ ಕಾಯಾಕ್ಷಿ ಕಿರೀಟಂಗಳಂ ಬರಲು ಬಸವೇಶ್ವರನು ಸಾಕ್ಷಾತ್ ಶಿವರೂಪೆಂದು ವಂದಿಸಿ ಹೊಂದಿ ನಿಜಜಂಗಮವಾದರು. ಸಾಕ್ಷಿ-ಭಾಳೆ ತ್ರಿಪುಂಡ್ರಕಶ್ಚೈವ ಗಳೆ ರುದ್ರಾಕ್ಷಮಾಲಾ ವಕ್ತ್ರೇ ಷಡಕ್ಷರಮಂತ್ರಂ ಸರುದ್ರೋನಾತ್ರಸಂಶಯಃ ಟೀಕುಃ— ಆವನಾನೊಬ್ಬನು ಲಲಾಟದಲ್ಲಿ ವಿಭೂತಿ ಕೊರಳಲ್ಲಿ ರುದ್ರಾಕ್ಷಿಯ ಮಾಲೆ ಮುಖದಲ್ಲಿ ಷಡಕ್ಷರಿಯ ಮಂತ್ರವಿದ್ದುದು ಆತನು ರುದ್ರನು ಸಂಶಯವಿಲ್ಲ. ಲಿಂಗಾಂಗಸಂಬಂಧವಾಗಿಪ ಭಕ್ತಿಕ್ರಿಯೆಯುಳ್ಳ ಶರಣರು ತಮ್ಮಂತೆ ಇಲ್ಲದಿರ್ದ ಭವಿಗಳು ನೊಸಲ ಕಣ್ಣು ಚತುರ್ಭುಜವವರಾದಡೆಯೂ ತಮ್ಮಾಚಾರವೊಳಗೆ ಕೂಡಿಕೊಳ್ಳರು.

---

## ೭೯ ನೆಯ ವಚನ. (೧೪-೧)

ಸ್ಕಂದ, ಶಿವಸಂಸ್ಕಾರ ಸಂಪನ್ನ ಸ್ವಯ ಶೂದ್ರಾಹ್ವಯಂ ದ್ವಿಜಃ ಲಿಂಗಭೇದೇವಿಕೃತಸ್ತೇನ ರೌರವಂ ನರಕಂ ವ್ರಜೇತ್ ಟೀಕುಃ—ಶಿವಸಂಸ್ಕಾರ ಸಂಪನ್ನನಾದ ಬಳಿಕ ಶೂದ್ರನೆಂಬುದು ಮತ್ತೆ ಇಲ್ಲ. ಬ್ರಹ್ಮನೆಂ

ಬುದು ಮತ್ತೆ ಇಲ್ಲ ಅವರು ಸದ್ಭಕ್ತರು. ಇಂತಲ್ಲದೆ ಅಲ್ಲಿ ಭೇದವ ಮಾಡಿ ಕಂಡರೆ ಮಹಾ ನರಕ ತಪ್ಪದು.

## ೯೦ ನೆಯ ವಚನದ ಕಥೆ. (೧೪-೨)

### ಅಕ್ಕನಾಗಮ್ಮ.

ಅಕ್ಕನಾಗಮ್ಮ ಗಂಡಸಿಲ್ಲದೆ ಬಸುರಾದಳೆಂದು ಜೈನರು ನಿಂದಿಸೆ ಬಸವೇಶ್ವರನು ಗರ್ಭದೊಳಗಣ ಶಿಶುವನು ಮಾತನಾಡಿಸೆ, ಸಮಸ್ತರು ಅಪರಾಧ ನಮ್ಮದು ತಪ್ಪು ತ್ರಾಹಿ ಎಂದು ವಂದಿಸಿದರು. ಅಕ್ಕನಾಗಲೆ ಕಕ್ಕಯ್ಯನ ಪ್ರಸಾದದಿಂದ ಚನ್ನಬಸವೇಶ್ವರನೊಗೆದನು.

## ೯೮ ನೆಯ ವಚನದ ಕಥೆ. (೧೫-೧೦)

### ಗುಪ್ತ ಮಂಚಣ್ಣ.

ಗುಪ್ತ ಮಂಚಣ್ಣಗಳು ಮಾಡುವ ಶಿವಭಕ್ತಿಯನು ನೆರೆಮನೆಯ ವಿಪ್ರನು ಕಂಡು ಬಸವೇಶ್ವರನಿಗೆ ಹೇಳಲಾಗಿ ಆ ಬಸವೇಶ್ವರನು ಶಿವಭಕ್ತರ ನೆಳಲು ಸೋಂಕಿದರುರಿದೇಳ್ವ ಶಿವಶಬ್ದವ ಕೇಳಿದರೆ ಕಿವಿಯಲ್ಲಿ ಬೆರಳಿಡುವಂಗೆ ಶಿವಭಕ್ತಿ ಅಳವಡುವದೇ ಎಂದು ಹಾಡಿದ ಪ್ರಸ್ತಾವದ ವಚನ.

## ೧೦೭ ನೆಯ ವಚನದ ಕಥೆ. (೧೬-೧೯)

### ರಾಘವಾಂಕ

ಹಂಪೆಯ ಹರೀಶ್ವರನಗ್ರಜೆಯ ಮಗನು ರಾಘವಾಂಕನೊರೆದ ನರನಾದ ಹರಿಶ್ಚಂದ್ರನ ನುತಿಗೆ ಮುಳಿದು ದಂತಗಳು ಹಾರಿ ಗಲ್ಲೆನಲು ಪಂಚ ಕಾವ್ಯವ ಪೇಳೆ ದಂತಂಗಳ ಪಡೆದನು.

## ೧೧೩ ನೆಯ ವಚನದ ಕಥೆ. (೧೭-೨೫)

ಮರೀಚನ ಗುರು ತಪದಲ್ಲಿರಲು ತಪಗೆಡಿಸಿ ತೊಟ್ಟಿಲ ಹೊರಿಸಿ ತಂದಳು. ಗಾಳಿಯ ಗಂಟಿಕ್ಕಿ ನೆಳಲನೆ ಗಲಿಸುವ ಸೂಳೆಯು

ತೋಳ ಗಂಟಿಕ್ಕಿ ಹೋಗುತ್ತಿರೆ ಬಂದು ಹೇಳಿದುದ ಹೇಳಬೇಡೆಂದು ಸ್ತ್ರೀ ನುಡಿಯೆ ಶ್ರೀಮತಿಯು ಕೇಳಲು ಹೇಳದಿರಲು ಒಳ ಬಿಟ್ಟನು.

---

# ೧೧೬ ನೆಯ ವಚನದ ಕಥೆ.

## ಸೌಂದರ ಗಣೇಶ್ವರ

ಚೋಳದೇಶದ ತಿರುವಾಲೂರಲ್ಲಿ ಜಡೆ ನೈನಾರೆಂಬ ಶಿವ ಬ್ರಾಹ್ಮಣನು ಶಿವಪುರಾಣವನೋದುವಾಗ ಪುತ್ರಸ್ಯ ಗತಿರ್ನಾಸ್ತಿ ಎಂಬ ನುಡಿಯ ಕೇಳಿ ಚಿಂತಿಸುತ್ತಿರಲು ಆತನ ರಾಣಿ ಯಸ್ಯಜ್ಞಾನಿ ದೇವಿಯು ಇದೇನು ಚಿಂತೆ ಎಂದು ಕೇಳಲು ಮಕ್ಕಳು ಇಲ್ಲದಿದ್ದರೆ ಮೋಕ್ಷವಿಲ್ಲೆಂದು ಪುರಾಣ ಹೇಳುತ್ತದೆ ಎನಲು ಅದಕ್ಕೆ ಆಕೆ ವಾಲ್ಮೀಕಿ ನಾಥನ ಬೇಡು ನಡೆ ಎಂದು ಹೋಗಿ ಸತಿ ಸಹವಾಗಿ ಲಿಂಗಪೂಜೆಯ ಮಾಡಿ ಪುತ್ರನ ಬೇಡಲು ಆದಿತ್ತೆಂದು ಅವರಿಗೆ ಲಿಂಗ ನುಡಿಯಲು ಮನೆಗೆ ಬಂದು ಸುಖದಲ್ಲಿರಲು ಅತ್ತ ಕೈಲಾಸದಲ್ಲಿ ಶಿವನು ಸಮುದ್ರದ ಮಥನದಲ್ಲಿ ಪುಟ್ಟಿದ ವಿಷವ ಹಸ್ತದಲ್ಲಿ ತೆಗೆದುಕೊಂಡು ನೋಡುವಾಗ ಆ ವಿಷದೊಳಗೆ ಪ್ರತಿಬಿಂಬವ ಕಂಡು ನೀನಾರೆಂದು ಕೇಳಲು ಪುರುಷಾಕೃತಿಯಲ್ಲಿ ನಮಸ್ಕಾರವ ಮಾಡಲು ಆಗ ಸೌಂದರಗಣೇಶ್ವರನೆಂಬ ಹೆಸರಿಟ್ಟು ಮರ್ತ್ಯಕ್ಕೆ ಹೋಗು ಎನಲು ಮರ್ತ್ಯದಲ್ಲಿ ಮರವೆಯುಂಟು, ಎಂತು ಹೋಗುವೆ ಸ್ವಾಮಿ ಎನಲು, ಆ ಮಾತಿಗೆ ಶಿವನು ನಾನಿದೇನೆ ನಂಬಿ ಹೋಗೆನಲು ಇತ್ತ ಯಸ್ಯಜ್ಞಾನಿದೇವಿಯರ ಗರ್ಭವೆಂಬ ಗುಹೆಗೆ ನಂಬೆಣ್ಣಾ ಬಂದು ಶಿವಯೋಗದಲ್ಲಿರ್ದರೂ ಭೂಮಿಯೊಳಗೆ ನಿಧಾನ ವಿಪ್ಪಂತೆ ಕಲ್ಪವೃಕ್ಷದ ಬೀಜದೊಳಗಂಕುರವಿರ್ಪಂತೆ ಗರ್ಭದಲ್ಲಿರ್ದರು. ಬಳಿಕ ಕ್ಷೀರ ಸಮುದ್ರದಿಂದ ಚಂದ್ರನುದಯಿಸುವಂತೆ ಚಂದ್ರನಿಂದ ಬೆಳದಿಂಗಳುದಯಿಸುವಂತೆ ಉದಯಿಸಿದನು. ಆ ಮೇಲೆ ಐದು ವರುಷವಾಗಲು ತಾನೆ ಅರಸಾಗಿ ಮಕ್ಕಳನೆಲ್ಲ ಪರಿವಾರವ ಮಾಡಿ ಭಂಡಿಯಾಡುವಾಗ ನರಸಿಂಗ ಮೊನೆಯಾರ ಆನೆ ಸಂಚಿತ ತಿಳಿಕಿತ ಅತಿವರ್ತಿತ ಅದಾನುಬಂದಿನಿ ಕ್ರೋಧಿನಿ ಗಂಧಚಾರಿಣಿ ಎಂಬ ಸಪ್ತಾವಸ್ಥೆಯ ಮದದಿಂದ ಸಂಕೋಲೆಯ ಹರಿದುಕೊಂಡು ಬರುವಾಗ ಭಂಡಿಯನೆಳೆವ

ಮಕ್ಕಳೆಲ್ಲ ಓಡಿಹೋಗಲು ಸಿಂಹದ ಮರಿಯಂತೆ ಆನೆಗಂಜದೆ ನಂಬಿ ಯಣ್ಣ ಬಂಡಿಯ ಮೇಲಿರಲು ಆನೆ ಬಂದು ಮಂಡೆಯ ಹೂಡಿ ನಮ ಸ್ಕರಿಸಿ ಹೋಗಲು ಈ ಸುದ್ದಿಯ ಪರಿಚಾರಕರು ಅರಸಿಗೆ ಪೇಳಲು ಆ ನರಸಿಂಗ ಮೊನೆಯಾರು ಬಂದು ಶಿವಶಿವ ಇವನಾರ ಮಗ ಈತನಾವ ಪುಣ್ಯದ ಪುಂಜವೋ ಆವ ನಿತ್ಯದ ನೆಲೆಯೋ ಆವ ಸತ್ಯದ ಸಾರವೋ ನಾವರಿಯೆವೆನಲು ಆಗ ಜಡೆಯನೈನಾರು ಬಂದು ಮಗನನೆತ್ತಿಕೊಂಡು ಆನೆಗೆ ತುತ್ತಾಗಿದ್ದೆಯಲ್ಲಾ ಎಂದು ಮುದ್ದಾಡಲು ಆ ಮೇಲೆ ತಾಯಿ ಬಂದು ತಕ್ಕೈಸಿಕೊಂಡು ಸಿಡಲೆರಗಿದ ಮೊಲ್ಲೆಯ ಮುಗುಳೆ, ರಾಹು ಮುಟ್ಟಿದ ಚಂದ್ರಮನೆ, ಆವ ಸುಕೃತದಿಂದುಳಿದೆ ಎಂದು ನುಡಿವಾಗ ನರಸಿಂಗಮೊನೆಯಾರಿಂತೆಂದರು. ಎನಗೆ ಮಕ್ಕಳಿಲ್ಲ. ಈ ಶಿಶುವ ನಮಗೆ ಕೊಡು ಎನಲು ಸತಿಪತಿಗಳು ಒಪ್ಪಿ ಪರೀಕ್ಷಕನ ಕೆಯ್ಯ ಅನರ್ಘ್ಯವಾದ ರತ್ನವ ಕೊಡುವಂತೆ ವಸಂತನ ಕೆಯ್ಯಲ್ಲಿ ಕಲ್ಪವೃಕ್ಷದ ಸಸಿಯ ಕೊಡು ವಂತೆ ಕೊಟ್ಟರು. ಆಗ ಅಂಜನಗಿರಿಯ ಮೇಲೆ ಬಾಲಸೂರ್ಯನೊ ಪ್ಪುವಂತೆ ನಂಬೆಣ್ಣದೇವರ ಆನೆಯ ಮೇಲೆ ಕುಳ್ಳಿರಿಸಿ ಸಂಭ್ರಮದಿಂದ ಅರಮನೆಗೆ ಕರಕೊಂಡು ಹೋಗಿ ಸಿಂಹಾಸನದ ಮೇಲೆ ಕುಳ್ಳಿರಿಸಿ ಪಟ್ಟವ ಕಟ್ಟಿ ಸುಖದಲ್ಲಿರಲು ಆ ಮೇಲೆ ಹದಿನಾರು ವರುಷದ ಪ್ರಾಯವಾಗಲು ನರಸಿಂಗ ಮೊನೆಯಾರು ತುಂಬುರ ಮಂತ್ರಿಯ ಕರೆದು ಮಗನಿಗೆ ಮದುವೆಯ ಮಾಡಬೇಕು ಹೆಣ್ಣ ನೋಡೆನಲು ಆಗ ಮಂತ್ರಿಯು ಮಣಬಂದ ಪುತ್ತೂರಿಗೆ ಹೋಗಿ ಅಲ್ಲಿ ಹೆಣ್ಣಿನ ತಾಯಿತಂದೆಗಳ ಕರೆದು ನರಸಿಂಗ ಮೊನೆಯಾರ ಪುತ್ರ ಸೌಂದರ ಪೆರುಮಾಳೆಗೆ ನಿಮ್ಮ ಮಗಳ ಕೊಡಿ ಎನಲು ಅವರು ಒಡಂಬಡಲು ಸಾಕ್ಷಿ ವೀಳೆಯವ ಕೊಟ್ಟು ಬರಲು ಮದುವೆಯ ಮುಹೂರ್ತ ಆವುದೆಂದು ಮಂತ್ರಿಗಳ ಕೇಳಲು ಶುಕ್ಲ ಪಕ್ಷದ ಚತುರ್ದಶಿಯ ಸೋಮವಾರದಲ್ಲಿ ವೃಷಭರಾಶಿ ಆರಿದ್ರಾ ನಕ್ಷತ್ರ ಭದ್ರಕರಣ ಶಿವಯೋಗ ಉತ್ತಮವೆಂದು ಬಿನ್ನವಿಸಲು ಆಗ ನಂಬಿಯ ಣ್ಣಂಗೆ ಶೃಂಗಾರವ ಮಾಡಿಸಿದನು. ಮುತ್ತಿನ ಸರಗಳು ಹಸ್ತಕಡಗಗಳು ಭುಜಕೀರೀಟಗಳ ಧರಿಸಿ ಪಟ್ಟಾವಳಿಗೆಯ ಹೊದಿಸಿ ಪಟ್ಟದಾನೆಯನೇರಿಸಿ ಹಿಂದೆ ತುಂಬುರ ಮಂತ್ರಿಯ ಕುಳ್ಳಿರಿಸಿ ಮಣಬಂದಪುತ್ತೂರಿಗೆ ಕಳು ಹಲು ಅಲ್ಲಿ ಉದ್ಯಾನ ವನದಲ್ಲಿ ಕುಳಿತಿರಲು ಅತ್ತ ಕೈಲಾಸದಲ್ಲಿ ಶಿವನು ಎಲೆ ಗಿರಿಜೆ ನಂಬಿ ಸಂಸಾರಕ್ಕೆ ಸಿಕ್ಕಿ ತಾನೆ ನಾವು ಅಲ್ಲಿಗೆ ಹೋಗು ತ್ತೇವೆಂದು ಮುಪ್ಪಿನ ರೂಪ ಧರಿಸಿ ಸರ್ಪನನೆ ಪ್ರಮಾಣಪತ್ರವ ಮಾಡಿ

ಬ್ರಹ್ಮನ ತಲೆಯನೆ ಕಮಂಡಲವ ಮಾಡಿ ಹುಲಿಯ ಚರ್ಮವನೆ ಧೋತ್ರ ವನುಟ್ಟು ಗಜಚರ್ಮವ ಹಚ್ಚಡವ ಹೊದ್ದು ಅಪಸ್ಮಾರವೆಂಬ ಸರ್ಪನ ಪಾದರಕ್ಷೆಯಾಗಿ ಮೆಟ್ಟಿ ರುಂಡ ಮಾಲೆಯನೆ ಜಪಸರ ಚಂದ್ರನೇ ಕೊಡೆ ತ್ರಿಶೂಲವೇ ಕಾವು ವಿಷ್ಣು ಕಂಕಾಳವನೆ ದಂಡವ ಮಾಡಿ ಕೈಲಾಸ ದಿಂದ ಚೋಳದೇಶದ ಮಣಬಂದಪುತ್ತೂರ ಮದುವೆಯ ಚಪ್ಪರಕ್ಕೆ ಬಂದು ಕೆಮ್ಮುತ್ತ ಕೇಕರಿಸುತ್ತ ತಲೆಯ ನಡಿಗಿಸುತ್ತ ಮೆಲ್ಲನೆ ನಮಃ ಶಿವಾಯ ಎನುತೆ ಕಾಲನೂರಿಕೊಂಡು ಬಂದು ಎಡಹಿ ಬಿದ್ದು ತುಪ್ಪದ ಕೊಡಗಳನೊಡೆಯಲು ಆ ಬಿದ್ದ ವೃದ್ಧನ ಎಬ್ಬಿಸಲು ಮತ್ತೆ ಬಿದ್ದು ಗಳಿಗೆಬಟ್ಟಲ ಕಳಸವನೊಡೆದು ಬಿದ್ದೇಳಲಾರದೆ ಮೂರ್ಛೆಯಾಗಿರಲು ಅಪ್ಪರೊಳಗೆ ಅಲ್ಲಿದ್ದವರೆಬ್ಬಿಸಿ ಇನ್ನು ಬಿಟ್ಟರೆ ತುಪ್ಪದ ಕೊಡಗಳ ಮೇಲೆ ಬಿದ್ದೊಡೆದಲ್ಲದೆ ನಿಲ್ಲ ಈ ಮುಪ್ಪಿನ ಮರುಳ ಎಂದು ಹೊರಗೆಸೆದರು. ಇದೇ ಮದುವಿಗಪಶಕುನವೆಂದು ಹೊರಗಿರಿಸಿ ಬಾಗಿಲವರೆಗೆ ಕಟ್ಟು ಮಾಡಲು ಮತ್ತೆ ಯಾರೂ ಕಾಣದಂತೆ ಒಳಯಿಂಕೆ ಬಂದು ತೋರ ಣವ ಹರಿದು ಹಸೆಯ ಜಗಲಿಯ ಮುರಿದು ಮಂಗಲವ ಅಮಂಗಲವ ಮಾಡಲು ಅಲ್ಲಿರ್ದ ಹೆಣ್ಣಿನವರು ನೀವಾರೆಂದು ಕೇಳಲು ಆ ವೃದ್ಧನಿಂ ತೆಂದನು, ಇವನೆನ್ನ ತೊತ್ತಿನಮಗ ಇದಕ್ಕೆ ಪತ್ರ ಉಂಟೆನಲು ಬಳಿಕ ಆ ತಾಯಿತಂದೆಗಳು ಕುಲ ಹೊಲ್ಲವೆಂದ ಬಳಿಕ ಇನ್ನಾವ ಮೊಗ ಮುಂದಿಟ್ಟು ಮದುವೆಯ ಮಾಡಿಪೆವೆನಲು ಇತ್ತ ವೃದ್ಧ ಮಾಹೇಶ್ವರನು ನಂಬಿಯ ಣ್ಣನಿದ್ದ ವನಕೆ ಬರಲಂದು ಅಲ್ಲಿಯ ಓಲಗದ ಮುಕುಟವರ್ಧನರನೆಡ ಹುತ್ತ ಉಗುಳು ಸಿಡಿವಂತೆ ಕೆಮ್ಮುತ್ತ ಬಂದು ನಂಬಿಯಣ್ಣನ ಸಿಂಹಾ ಸನದ ಮುಂದೆ ನಿಲೆ, ಕುಮಾರ ಕಂಡು ಎಲೆ ಅಯ್ಯ ಏನು ಬಯಸಿ ಬಂದಿರೆನಲು, ನೀನು ನಮಗೆ ಕೊಡುವವನೇ ನೀನೆನ್ನ ತೊತ್ತಿನ ಮಗ ಈಗ ಕಮಂಡಲುಗಳ ಪಿಡಿ ಏಳೆನಲು, ನಂಬಿಯಣ್ಣ ಕೋಪದಿಂದ ಈ ಹುಚ್ಚ ಬ್ರಾಹ್ಮಣನ ನೂಕೆನಲು, ಮುಟ್ಟದ ಮುನ್ನವೇ ಬಿದ್ದು, ಶಿವ ಎನುತ್ತ ಇವನೆನ್ನ ತೊತ್ತಿನ ಮಗನೆಂದು ಪತ್ರವ ತೋರಿದಪೆವು ಎನಲು ತುಂಬುರ ಮಂತ್ರಿ ಇಂತೆಂದ, ಎಲೆ ಅಯ್ಯ ನಿಮ್ಮ ಪತ್ರವ ತನ್ನಿ ಎಂದು ಇಸಿಕೊಂಡು ಕರಣಿಕನ ಕೈಯ್ಯೊಳು ಕೊಡಲೋದಿದನು. ಈಶ್ವರ ಸಂವ ತ್ಸರದ ಮಾಘ ಬಹುಳ ಚತುರ್ದಶಿಯು ಸೋಮವಾರದಲ್ಲು ಭಕ್ತರ ಪುರದ ಸ್ಮಶಾನಶಯನಭಟ್ಟರಿಗೆ ಜಡೆಯನೈನಾರು ಯಸ್ಯಜ್ಞಾನಿದೇವಿಯರು ತಮ್ಮ ಪುತ್ರ ನಂಬಿಯನು ಬಳಿದೊತ್ತಾಗಿ ಕೊಟ್ಟರು. ಇದಕ್ಕೆ ಸಾಕ್ಷಿ

ತಿರುವೆನ್ನಲೂರು ರುದ್ರಭಟ್ಟರು ಮಾಹೇಶ್ವರಭಟ್ಟರು ರುದ್ರಸಭಾಪತಿಗಳು, ಈಶಾನ್ಯಭಟ್ಟರು ಸಹಸ್ರ ವೇದಿಗಳು ಹೀಗೆಂದು ಹೇಳಿ ಆಗ ತಿರುವೆಣ್ಣ ನಲ್ಲೂರಿಗೆ ಬಂದು ಮಂಟಪದಲ್ಲಿ ಕುಳಿತು ಅಲ್ಲಿರ್ದ ಸಾಕ್ಷಿಗಳ ಕರಿಸು ವಾಗ ಮುಪ್ಪಿನ ರೂಪ ತಾಳಿದ ಶಿವ ಬಂದು ಸಾಕ್ಷಿ ಕರಕೊಂಡು, ಏನು ಶಂಕರಭಟ್ಟರೇ ಸುಖದೊಳಿದ್ದಿರೇ ಎಂದು ಶನ್ಮೊಳ್ತಾವು ಮಾತನಾಡಿ ಆ ವೃದ್ಧ ತನ್ನ ಪತ್ರಮಂ ನೋಡೆಂದು ಕೆಯ್ಯಲ್ಲಿ ಕೊಡಲು ಅದ ನೋಡಿ ನಂಬಿಯಣ್ಣ ಕೇಳಲು ಮೂಲಪತ್ರ ಶಿವಾಲಯದಲ್ಲಿದೆ ಎನಲು ತೋರೆ ನುತ ನಡೆ ಎನಲು ತಿರುವಾಲೂರು ವಾಲ್ಮೀಕನಾಥನ ಗುಡಿಗೆ ಬಂದು ಶಿವನು ಲಿಂಗದೊಳಡಗಿ ಆಗ ನಿಜರೂಪ ತೋರಲು ನಂಬಿಯಣ್ಣ ಕಂಡು ಕೈಲಾಸದಿಂ ಬಂದ ಪೂರ್ವಸ್ಮರಣೆಯಂ ತಿಳಿದು ನಮಸ್ಕರಿಸಿ ಸ್ತುತಿಸಿ ಇಂತು ಕಾಡುವರೆ ದೇವಾ ಎನಲು ಆಗ ತಳ್ಕೈಸಿ ಪೊನ್ನ ತಾಳವ ಕೊಟ್ಟು ಪಾಡೆನಲು ನಾ ಬಲ್ಲೆನೆ ಎನಲು ಅಂದು ಮನದೊಳ ಗೆಮ್ಮ ಪಿಚ್ಚನೆ ಎಂದು ಬೈದಂತೆ ಹಾಡೆನಲು ಹಾಗೆ ಎಂದನು ಪಿಚ್ಚನೆ ಪೆರಿಯ ಸೂಡಿದನೆ ಪರಮ ಪಶುಪತಿಯೆ ಅಚ್ಚಸವಿಯೆ ಸುಖನೆ ಸಖನೆ ನಂಬಿಯ ಪತಿಯೇ ಎಂದು ಹೊಗಳಿ ಪಡಿಹೊನ್ನ ಪಡೆದು ಸುಖದಲ್ಲಿರುತ ಕಮಲಲತೆ ಎಂಬ ರುದ್ರಕನ್ನಿಕೆ ಮಂಗಲೆನಾಚಿ ಎಂಬ ವೇಶ್ಯಾಸ್ತ್ರೀಯ ಬಸಿರಲ್ಲಿ ಪರವೆನಾಚಿ ಎಂಬ ಹೆಸರಿನಲ್ಲಿ ಹುಟ್ಟಿ ಯೌವ್ವ ನವಾಗೆ ಪ್ಯೈನೆರೆದ ಹಾಸಿಗೆಯ ಮಾಡುವಾಗ ನಂಬಿಯಣ್ಣದೇವರು ಬಂದು ಆಕೆಯ ಬಲದ ಭಾಗದಲ್ಲಿ ಕುಳಿತು ಇಬ್ಬರು ಒಂದಾಗಿ ಏಕಾಂ ತದ ಮನೆಗೆ ಹೋಗಿ ಆಲಿಂಗಿಸಿಕೊಂಡು ಸುಖದಲ್ಲಿದ್ದರು.

---

## ೧೩೬ ನೆಯ ವಚನದ ಕಥೆ. (೨೧-೨೩)

### ಮಲ್ಲಿಕಾರ್ಜುನ ಪಂಡಿತ.

ಕೈಲಾಸದಿಂದ ಶಿವನಪ್ಪಣೆ ಪಿಡಿದು ವರಲಾಪುರದಲ್ಲಿ ಭೀಮೇಶ ಪಂಡಿತನೆಂಬ ಶೈವ ಬ್ರಾಹ್ಮಣನಿರ್ಪನು. ಆತನ ಸತಿ ಗೌರಾಂಬಿಕೆಯ ಗರ್ಭದಲ್ಲಿ ಹಾಲಸಮುದ್ರದಲ್ಲಿ ಹಂಸೆಯ ಮರಿ ಇರ್ಪಂತೆ ಮೇರುವಿನ ಗುಹೆಯಲ್ಲಿ ಸಿಂಹದ ಶಿಶುವಿರ್ಪಂತೆ ಇದ್ದು ಉದಯವಾಗಲು ಮಲ್ಲಿಕಾ ರ್ಜುನ ಪಂಡಿತರೆಂಬ ಹೆಸರು ಕರೆದರು. ಬಳಿಕವರು ಪಲ್ಯಣಾಚಾರ್ಯರ

ಕೆಯ್ಯ ವೀರಶೈವ ದೀಕ್ಷೆಯ ಪಡೆದು ಚರ್ಯಾತಿರಾಯನ ಮಗಳ ಮದುವೆಯಾಗಿ ಬಳಿಕ ಶಿಷ್ಯರ ಮಾಡಿಕೊಂಡರು. ರೇವಯ್ಯ, ದೇವಯ್ಯ, ರೇಮಯ್ಯ, ರೇಚಯ್ಯ, ವೆಲ್ಲಗೊಂಡದ ಮಹಾದೇವಯ್ಯ ಧವಳೇಶ ನಾಮಯ್ಯ ದೊನಮಯ್ಯ ಮೊದಲಾದ ಶಿಷ್ಯರು ವೇದಾಗಮ ಪುರಾಣವ ಬಲ್ಲವರಾಗಿ ಅನ್ಯವಾದಿಗಳ ಗೆಲುತ ಇರುತಿರಲು ಒಂದು ದಿನ ವೆಲ್ನಾಡ ಚೋಳನೆಂಬ ಜೈನನ ಗುರುವೆನಿಸುವ ಬೌದ್ಧಾರ್ಯನು ಜಿನ್ನನೇ ದೈವವೆಂದು ಹೇಳುತ್ತಿರಲು ಅದಕ್ಕೆ ಪಂಡಿತಾರಾಧ್ಯರು ಶಿವನೇ ದೈವವೆಂದು ವೇದಾಗಮ ಪುರಾಣಂಗಳಿಂದ ಸಭೆಯಲ್ಲಿ ವಾದವ ಮಾಡಿ ಸೋಲಿಸಲು ಕರಬುತನದಿಂದ ಅಲ್ಲಿರ್ದ ಮಲ್ಲಿಕಾರ್ಜುನ ಲಿಂಗದ ದೀಪಮಾಲೆಯ ಕಲ್ಲಕಂಭವ ಕಿತ್ತುಕೊಂಡು ಹೋಗಿ ಬೌದ್ಧನ ಗುಡಿಯ ಮುಂದೆ ನಡಿಸಲು ಅರೆವೆಯ್ಯ ದೇವಯ್ಯಗಳು ಸಮುದ್ರದ ಗಡ್ಡೆಯಲ್ಲಿರ್ದ ಜಿನ್ನನ ಗುಡಿಯ ಮುಂದಿರ್ದ ದೀಪಮಾಲೆಯ ಕಂಭವ ಕಂಡು ಬೌದ್ಧನ ಕೊಂದು ಹೊಟ್ಟೆಯ ನಾಲಗೆಯ ಕೊಯ್ದು ಎದೆಯ ಮೇಲಿಟ್ಟು ಈತನ ನಾವು ಕೊಂದೆವೆಂದು ಓಲೆಯ ಬರೆದು ಹೆಣನ ಮೇಲಿಟ್ಟು ಕಂಭವ ಕಿತ್ತುಕೊಂಡು ಬಂದು ಮುನ್ನಿನಂತೆ ಶಿವಾಲಯದ ಮುಂದೆ ನಡಿಸಿದರು. ಆಗ ಬೌದ್ಧನ ಶಿಷ್ಯರದ ಕಂಡು ಆ ಓಲೆಯ ನೋಡಿಕೊಂಡು ಪಂಡಿತಾರಾಧ್ಯರ ಶಿಷ್ಯರು ಕೊಂದರೆಂದು ವೇಲ್ನಾಡಚೋಳಗೆ ಹೇಳಲು ಆಗಲವರ ಕರಿಸಿ ನಮ್ಮ ಗುರುವ ಕೊಂದವರಾರೆಂದು ಕೇಳಲು ನಾವೇ ಕೊಂದೆವೆನಲು ಧರ್ಮಶಾಸ್ತ್ರವ ಬಲ್ಲವರ ಕರೆತರಿಸಿ ಏನಾಜ್ಞೆಯ ಮಾಡಬೇಕೆಂದು ಕೇಳಲು ಬ್ರಾಹ್ಮಣಾದಿ ಚಂಡಾಲಾಂತ್ಯವಾದವರಿಗೆ ತಕ್ಕ ಆಜ್ಞೆಯುಂಟು. ಶಿವಭಕ್ತರಿಗೆ ಆಜ್ಞೆಯ ಮಾಡಬಾರದೆಂದು ಶಾಸ್ತ್ರ ಸಮ್ಮತವು ಎಂದು ಹೇಳಲು ಅವರನುಲ್ಲಂಘಿಸಿ ಕಣ್ಣುಗಳ ತೆಗೆ ಎನಲು ಅದಕ್ಕೆ ನಖಚಾನವ ತರಲು ಕೆಯ್ಯಲ್ಲಿ ತೆಗೆದುಕೊಂಡು ವಿಭೂತಿಯ ತಳಿತು ಲಿಂಗಕ್ಕೆ ತೋರಿ ದ್ರೋಹಿಕೊಂ ಎಂದು ಕೊಡಲು ಅದ ತೆಗೆದುಕೊಂಡು ಕಣ್ಣುಗಳ ತೆಗೆಯಲು ಮತ್ತೆ ಮತ್ತೆ ಬರುತಿರಲು ಅದ ಕೇಳಿ ಚೋಳನು ಕಣ್ಣೊಳಗೆ ಎಕ್ಕೆಯ ಹಾಲ ಹೊಯ್ಯೆಂದು ಬೊಗಳಲು ಆಗ ಪ್ರತಿಜ್ಞೆಯ ಮಾಡಿದರು. ಎಲೆ ಶಿವನೆ ಇನ್ನು ನಮಗೆ ಕಣ್ಣ ಕೊಟ್ಟರೆ ನಿನಗೆ ಶಿವಗಣಂಗಳಾಣೆ ಎನಲು ಆಗ ಕಣ್ಣುಗಳು ಬರುವುದು ನಿಂದವು. ಇನ್ನಿವನ ನೋಡಲಾಗದೆಂದು ಅಲ್ಲಿಂದ ಬಿಟ್ಟು ದ್ರಾಕ್ಷಾರಾಮಕೆ ಹೋದರು.

## ೧೪೧ ನೆಯ ವಚನದ ಕಥೆ. (೭೧-೨೮)

### ನಾಟಕಶಾಲೆಯ ಸ್ತ್ರೀಯರು.

ಸ ಚಿಂತೇನ ಮಹಾದೇವತ್ವಮೇ ವಿಲೀನ ಸಂಶಯಃ ಭ್ರಾಂತಿ ಭ್ರಮರ ಚಿಂತಾನಾಂ ಕೀಟೋಪಿ ಭ್ರಮರಾಯತೆ. ಬಿಜ್ಜಳನು ಬಸವೇಶ್ವರನ ಕೂಡೆ ಕಪಟದಿಂದೆ ನಾಟಕಶಾಲೆಯ ಸ್ತ್ರೀಯರ ಜಂಗಮಾಕೃತಿಯ ಮಾಡಲು ಬಸವೇಶ್ವರನು ವಂದಿಸೆ ಬಿಜ್ಜಳ ಹಾಸ್ಯವ ಮಾಡಲು ನಿಜ ಜಂಗಮವ ಮಾಡಿ ಮೆರೆದ ಪ್ರಸ್ತಾವದ ವಚನ.

---

## ೧೪೪ ನೆಯ ವಚನದ ಕಥೆ. (೨೧-೩೧

### ಗುರುಪಕ್ಕ.

ಹಾವರದ ಬೊಮ್ಮಯ್ಯನ ಒಂದು ದಿನದಿರಳು ಬಿಜ್ಜಳನಿರಿಯಿಸೆ ಆವರ ಸತಿ ಗುರುವಕ್ಕ ಜಂಗಮದ ಪಾದೋದಕವ ತಳೆದು ಅಸುವ ಪಡೆದಳು.

---

## ೧೪೬ ನೆಯ ವಚನದ ಕಥೆ. (೨೧-೩೩)

### ದೇವರದಾಸ.

ದೇವರದಾಸಯ್ಯಗಳು ವಿರಕ್ತನಾಗಿ ಸಂಚರಿಸುವಾಗ ಹನ್ನೆರಡು ವರುಷ ಪರಿಯಂತರ ಹಸ್ತದಲ್ಲಿ ಮಳಲ ಪೊಟ್ಟಣವ ಪಿಡಿದುಕೊಂಡು ಇದು ನಮಗೆ ಪಾಯಸವ ಮಾಡಿಕ್ಕುವವರಿಲ್ಲವೇ ಎಂದು ಭಿಕ್ಷಕ್ಕೆ ಹೋದ ಮನೆಯಲ್ಲಿ ಕೇಳಲು, ಇದ ನಾವು ಮಾಡಿ ನೀಡಲಾರೆವೆನಲು ಬಳಿಕ ಮುದನೂರಲ್ಲಿದ್ದ ನೆಯಿಗೆಯ ಭಕ್ತರ ಮನೆಗೆ ಬಂದು ಕೇಳಲು ಆಗ ದಿಸಲು ಆ ಸಕೀಲವ ದುಗ್ಗಳೆಯಮ್ಮ ತಿಳಿದು ಆ ಮಳಲ ತೆಗೆದುಕೊಂಡು ತೊಂಡೆಯ ಬಳ್ಳಿಯ ಬುಡದ ಕೆಳಯಿಂಕೆ ಹಾಕಿ ನಿಜದ ಪಾಯಸವ ಮಾಡಿಕ್ಕಲು ಈಕೆ ನಮ್ಮ ಮನೋಧರ್ಮವ ತಿಳಿದಳೆಂದು ಆ ದುಗ್ಗಳ

ದೇವಿಯು ಮದುವೆಯಾಗಿ ಜಂಗಮಕ್ಕೆ ಭಕ್ತಿಯ ಮಾಡುವಾಗ ಒಂದು ಬೆಲೆ ಇಲ್ಲದ ಸಣ್ಣ ವಸ್ತ್ರವ ಹನ್ನೆರಡು ವರುಷ ನೆಯ್ದು ಬೆಳವಲ ದೇಶದ ಸಿದ್ಧಾಪುರದ ಸಂತೆಗೆ ಮಾರಬೇಕೆಂದು ಒಯ್ಯಲು ಅಲ್ಲಿಯು ವ್ಯವಹಾರಿಗಳು ಬೆಲೆಗಟ್ಟಲಾರದಿರಲು ಆ ವಸ್ತ್ರವ ತಿರುಗಿ ತರುವಾಗ ಶಿವನು ಜಂಗಮವಾಗಿ ಬಂದು ದಾರಿಯಲ್ಲಿ ದಾಸಿಮಯ್ಯ ಇದೇನೆಂದು ಕೇಳಲು ವಸ್ತ್ರವೆನಲು ಅದು ನಮಗೆ ಬೇಕೆನಲು ಸಲ್ಲಲಿ ಎಂದು ಕೊಡಲು ಅದ ಛಿದ್ರವಾಗಿ ಹರಿಯಲು ಅದಕೆಂದು ಚಿಂತಿಸದಿರಲು ಆಗ ಶಿವನು ಒಂದು ಹಿಡಿ ಧಾನ್ಯವ ಕೊಡಲು ಅದನೆ ಕೊಂಡು ಮನೆಗೆ ಬರಲು ಆಗ ದುಗ್ಗಳೆ ಇದೇ ಖಂಡುಗವೆಂದು ತೆಗೆದುಕೊಂಡು ಕಣಜದೊಳಗೆ ಹಾಕಲು ಅದು ತವನಿಧಿಯಾಯಿತ್ತು.

## ಶಿರಿಯಾಳಸೆಟ್ಟಿ.

ಕಾಂಚೀಪುರದಲ್ಲಿ ಧನಪಾಲಶಟ್ಟಿ ಎಂಬ ವ್ಯವಹಾರಿ ಇರ್ದನು. ಆತನ ಗರ್ಭದಲ್ಲಿ ಓರ್ವ ಪುತ್ರನಾದ. ಭಕ್ತಿ ಎಂಬ ಸಮುದ್ರದಿಂದ ಜ್ಞಾನ ವೆಂಬ ಚಂದ್ರನುದಯಿಸುವಂತೆ, ಜ್ಞಾನದಿಂದ ವೈರಾಗ್ಯ ಪುಟ್ಟುವಂತೆ, ಸಿರಿಯಾಳಸೆಟ್ಟಿಯುದಯಿಸಿದನು. ಮತ್ತೆ ಅತ್ಯಣಸೆಟ್ಟಿಯ ಗರ್ಭದಲ್ಲಿ ಒಬ್ಬ ಮಗಳು ಹುಟ್ಟಿದಳು. ಅದೆಂತೆನೆ ಭೂಮಿಯಲ್ಲಿ ಮಲ್ಲಿಗೆಯ ಲತೆ ಹುಟ್ಟು ವಂತೆ ಮೇರುವಿನಲ್ಲಿ ಕಾಮಧೇನು ಹುಟ್ಟುವಂತೆ ಚೆಂಗಳೇದೇವಿ ಹುಟ್ಟಿ ದಳು. ಬಳಿಕ ಒಂದು ದಿನದಲ್ಲಿ ಅವರವರಿಗೆ ಮದುವೆಯಾಗಿ ಸುಖದ ಲ್ಲಿರುವಾಗ ಓರ್ವ ಮಗನಾದನು. ಮೇಘದಿಂದ ಮುತ್ತೊಗೆವಂತೆ ರೋಹ ಣಾದ್ರಿಯಲ್ಲಿ ರತ್ನ ಪುಟ್ಟುವಂತೆ ಚೆಂಗಳದೇವಿಯು ಗರ್ಭದಲ್ಲಿ ಚಿಲ್ಲಾಳ ದೇವರು ಹುಟ್ಟಿದರು. ಚಿಂತಾಮಣಿಯು ಕಾಂತಿಯಂತೆ ಬೆಳೆದು ಐದ ನೆಯ ವರುಷದಲ್ಲಿ ಅಕ್ಷರವ ಕಲಿವಾಗ ಈತನ ತಾಯಿತಂದೆಗಳು ದಿನ ದಿನ ತಪ್ಪದೆ ನಿಯಮವಾಗಿ ಸಾವಿರ ಜಂಗಮಕ್ಕೆ ಇಚ್ಛಾಭೋಜನವ ನೀಡುತ್ತ, ನೀಡುವವರುಂಟು ಉಂಬುವರಿಲ್ಲವೆಂದು ಬೀದಿನ ಕಹಳೆಯ ಹಿಡಿಸಿದ್ದಾರೆ ಎಂದು ನಾರದಮುನಿ ಶಿವಂಗೆ ಬಿನ್ನೈಸಲು, ಅವರ ದೃಢವ ನೋಡುವೆನೆಂದು ಇಪ್ಪತ್ತೊಂದು ದಿನ ಮಳೆಯ ಕರಿಸಲು ಅದಕ್ಕೆ ಧೈರ್ಯಗುಂದದೆ ಸವುದೆಗಳೆಲ್ಲ ಸರಿಯಾಗಲು ಆಗ ಹುಲ್ಲು ಮನೆ ಮಾಳಿಗೆ ಮುಂತಾಗಿ ಮನೆಯಲ್ಲಿರ್ದ ಪಟ್ಟೆ ಸಕಲಾತಿ ಮೊದಲಾದವ ರಿಂದೆ ಅಡಿಗೆಯ ಮಾಡಿ ಜಂಗಮಕ್ಕೆ ನೀಡಲು ಇವಕ್ಕೆ ಅಂಜದಿರಲು

ಮತ್ತೊಂದು ಬಗೆಯಲ್ಲಿ ಒರೆದು ನೋಡುವೆನೆಂದು ಜಂಗಮದ ರೂಪ ಧರಿಸಿದರು. ಅದು ಹೇಗೆಂದೊಡೆ ಜಟಾಮುಕುಟ ಸ್ಫಟಿಕದ ಕರ್ಣಕುಂಡಲು ಪಣೆಯಲ್ಲಿ ಗಂಧವ ಧರಿಸಿ ನಡುವೆ ಸಿಂದೂರದ ತಿಲಕವಿಟ್ಟು ಕಯ್ಯಲ್ಲಿ ತ್ರಿಶೂಲವ ಪಿಡಿದು ಕಂಠದಲ್ಲಿ ಲಿಂಗವ ಧರಿಸಿಕೊಂಡು ಸಿರಿಯಾಳಸೆಟ್ಟಿಯರ ಅಂಗಡಿಯ ಮುಂದೆ ಸುಳಿಯಲು ಕಂಡು ನಮಸ್ಕರಿಸಿ ಸಲಿಸುವುದಕ್ಕೆ ಚಿತ್ತೈಸಿ ಎನಲು ಮಗನೇ ನಮ್ಮ ನೇಮ ಲೋಕವಿರುದ್ಧ ಅದೆ ಸೂರೆ ಮಾಡು ಎನಲು ನಿಮ್ಮ ನೇಮವ ನಿರೂಪಿಸೆನಲು ನಮಗೆ ನರಮಾಂಸವಾಗಬೇಕು, ಅದು ಜೀವಂತರದಾಗಬೇಕು ಎನಲು ಆಗ ಸಿರಿಯಾಳಸೆಟ್ಟಿ ಮನೆಗೆ ಹೋಗಿ ಚೆಂಗಳೆಗೆ ಹೇಳಿದನು. ಒಬ್ಬಯ್ಯನು ನರಮಾಂಸವನಿಕ್ಕೆಂದನು ಎನಲು ಆಕೆ ಹಾಗಾಗಲಿ ಎಂದು ಬಿಜೆಮಾಡಿಸಿಕೊಂಡು ಬಂದು ಬೇರೊಂದು ಕೋಣೆಯಲ್ಲಿ ಕುಳ್ಳಿರಿಸಿ ಬಳಿಕ ಪುತ್ರನ ಕರೆತಂದು ವಧಿಸಿ ಚಂದನಾವತಿಯ ಕಯ್ಯಲ್ಲಿ ಪಾಕವ ಮಾಡಿಸಿ ನೀಡಲು ಶಿವನು ಪ್ರತ್ಯಕ್ಷನಾಗಿ ಆ ಚಿಲ್ಲಾಳಯ್ಯಂಗೆ ಪ್ರಾಣವ ಕೊಟ್ಟು ಈ ಮೂವರನು ಚಂದನಾವತಿ ಸಹವಾಗಿ ಏಳುಕೇರಿಯ ಕೈಲಾಸಕ್ಕೊಯ್ದನು.

## ಸಿಂಧು ಬಲ್ಲಾಳ.

ತಿರುಣಾಮಾಲೆಯಲ್ಲಿ ಸಿಂಧುಬಲ್ಲಾಳರಾಯನೆಂಬ ಭಕ್ತನು ವಂಚನೆ ಇಲ್ಲದೆ ಜಂಗಮಾರ್ಚನೆಯ ಮಾಡುತ್ತಿರಲು ಅದ ಕೇಳಿ ಶಿವನು ನಾವು ಅವನ ಭಕ್ತಿಯ ನೋಡುವೆವೆಂದು ಕಾಶಿ ದಟ್ಟಿಯನುಟ್ಟು ಸಣ್ಣಂಗಿಯ ತೊಟ್ಟು ಕೈಯಲ್ಲಿ ಎಲೆ ಚಂಚಿಯ ಕನ್ನಡಿಗಳ ಹಿಡಿದು ಅರಮನೆ ಭಿಕ್ಷಕ್ಕೆ ಬರಲು ಆಗ ಬಲ್ಲಾಳರಾಯ ಬಂದು ನಮಸ್ಕರಿಸಿ ಹಸ್ತಲಾಗಿ ನಿಂದ ಒಳಯಂಕೆ ಬಿಜಯ ಮಾಡಿಸಿ ರಸರಸಾಯನಗಳ ಎಡೆ ಮಾಡಿ ಆರೋಗಿಸು ಎನಲು ಸಲಿಸಿ ಹೋಗುತ್ತಿರಲು ಇಂದು ರಾತ್ರಿಯಲ್ಲಿ ಪವಡಿಸಿದ್ದು ಹೋಗಬೇಕೆನಲು, ಉಳಿದು ಸಲಿಸಿ ಪವಡಿಸುವಾಗ ಎಲೆ ರಾಯ ಸಮೀಪದಲ್ಲಿ ಹೆಣ್ಣಿಲ್ಲದೆ ನಿದ್ರೆ ಬಾರದೆನಲು ಆಗ ಚರನ ಕಳುಹಿ ವೇಶ್ಯಾಸ್ತ್ರೀಯ ಕರೆತಾರೆನಲು ಮನೆಮನೆಯಲ್ಲಿ ವಿಟಜಂಗಮರುಗಳಿರಲು ಅದ ಕಂಡು ರಾಯನ ಕೂಡೆ ಎಲ್ಲಿಯೂ ತೆರಹಿಲ್ಲವೆನಲು ತನ್ನ ಮನೆಯಲ್ಲಿದ್ದ ಸ್ತ್ರೀಯರ ತೋರಲು ಈ ಹೆಣ್ಣುಗಳು ನಮಗೆ ಸೊಗಯಿಸವು, ನಿನ್ನ ಪಟ್ಟದ ರಾಣಿ ಬೇಕೆನಲು ಆ ಮಾತಿಗಾಕೆಯ ಕಳುಹಲು ಆಕೆ ಬಂದು ವಿಟಮೂರ್ತಿಯ ಬಳಿಯಲ್ಲಿ ಪವಡಿಸಿದ್ದು ಮತ್ತೆ ನಿದ್ರೆ ತಿಳಿದು ನೋಡಲು

ಶಿಶುವಾಗಿ ಮೊಲೆಯನುಂಬುವುದ ಕಂಡು ತನ್ನ ಪತಿಯು ಕರೆದು ಅಯ್ಯನ ಕಾಣೆನು. ಒಂದು ಶಿಶುವು ಮೊಲೆಯನುಂಬುತಿದೆ ಎನಲು ಆಗ ರಾಯು ಬಂದು ನೋಡಲು ಆ ಶಿವರೂಪಿನೊಳಗೆ ಶಿವನು ಪ್ರತ್ಯಕ್ಷವಾಗಿ ಆವರೀರ್ವರನ್ನು ಕೈಲಾಸಕ್ಕೊಯ್ದನು.

## ಬಾಣಾಸುರ.

ಮಾಗದೇಶದ ಮಾಧವೀಪುರದಲ್ಲಿ ಚಕ್ರವಾಕನೆಂಬ ಶಿವದ್ವಿಜನಿರ್ದನು. ಅವನಿಗೆ ಧೃತರಾಷ್ಟ್ರನೆಂಬ ಮಗನಿದ್ದನು. ಅವನು ಅನಾಚಾರಿಯಾಗಿ ಸೂಳೆಯರ ಕೊಂಡು ಹೋಗಿ ಅರಸಿನ ಪೂದೋಟದಲ್ಲಿ ಸಂಪಿಗೆಯ ಹೂವ ಕೊಯ್ದು ಅರ್ಧವ ಮುಡಿದುಕೊಂಡು ಅರ್ಧವ ನೀರಗಡಿಗೆಯಲ್ಲಿ ಹಾಕಿ ತಾವು ಹೋಗುವಾಗ ಆ ಗಡಿಗೆಯ ಹುವ್ವ ಸುರಿಯಲು ಅವು ಲಿಂಗದ ಮೇಲೆ ಬೀಳಲು ಬಳಕ ಅರಸು ತೋಟವ ನೋಡುತ ಬರುವಾಗ ಆ ಲಿಂಗದ ಮೇಲೆ ಸುರಿದಿದ್ದ ಹುವ್ವ ಕಂಡು ಈ ಹುವ್ವ ಇಲ್ಲಿ ಯಾರು ಸುರಿದರು ಹೇಳೆಂದು ತೋಟಿಗನ ಅರಸು ಆಜ್ಞೆಯ ಮಾಡಲು ಆಗ ಬುದ್ಧಿವಂತರು ಎಲೆ ಅರಸೆ ದೇವತೆಗಳು ಬಂದು ಈ ಲಿಂಗವ ಪೂಜಿಸಿದರೋ ಕಾಣಬಾರದೆನಲು ಆಗ ಅರಸನು ಸುಮ್ಮನಾದನು. ಬಳಿಕ ಮತ್ತೊಂದು ದಿನ ಸೂಳೆ ಮಿಂಡಗಾರ ತೋಟಿಗರು ಕಂಡು ಅರಸನಿಗೆ ಒಪ್ಪಿಸಲು ಅವನ ತಲೆಯ ಆಕೆಯ ಮೊಲೆಯ ಕತ್ತರಿಸಲು ಆ ಮಿಂಡನಾದ ಧೃತರಾಷ್ಟ್ರನು ಮರಣವಾಗಿ ಬಾಣಾಸುರನಾಗಿ ಹುಟ್ಟಿದನು. ಅವನ ವಂಶಾವಳಿ ಎಂತೆಂದೊಡೆ ಬ್ರಹ್ಮನ ಮಗ ಕಶ್ಯಪ, ಕಶ್ಯಪನ ಮಗ ಹಿರಣ್ಯಕಶ್ಯಪನ ಮಗ ಪ್ರಲ್ಹಾದನ ಮಗ ವಿರೋಚನನ ಮಗ ರಾಣಿ ಸ್ವರೂಚಿಯ ಮಗ ಬಲಿಯ ರಾಣಿಯ ಮಗ ವಿಂಧ್ಯಾವಳಿಯ ಮಗ ಬಾಣನು. ಇನ್ನು ಸೂಳೆ ಮರಣವಾಗಿ ಸುಪುತ್ರಿಕೆ ಎಂಬ ಹೆಸರಿನಿಂದ ರಾಜಕುಮಾರಿತಿಯಾಗಿ ಹುಟ್ಟಿ ಈ ಬಾಣಾಸುರಗೆ ಸತಿಯಾದಳು. ಈಕೆಯ ಮಕ್ಕಳ ಹೆಸರು ದುನು, ಭವರು, ಕಪಿಲ, ತಾರಕಶಂಕರ, ಸ್ವರ್ಭಾನು, ರುಷಪರ್ಣ ತಂಗಿ ಉಷೆ ಮನ್ಮಥನ ಮಗನಾದ ಅನಿರುದ್ಧನಿಗೆ ಸತಿಯಾದಳು. ಆ ಮೇಲೆ ಬಾಣಾಸುರನ ಶಿವಾರ್ಚನೆಯ ವೇಳೆಯಲ್ಲಿ ಭಕ್ತರು ಬಂದು ಮಾತನಾಡಿದರೆ ಜಪ ನಿಲುವಾಗಿ ಅರ್ಪಿತದ ವೇಳೆ ಹೋಗುತ್ತಿದೆ ಎಂದು ಶಿವನು ದೇವಿಯರು ಸಹವಾಗಿ ಬಂದು ಬಾಗಿಲ ಕಾಯ್ದುಕೊಂಡಿರಲು ಆಗ ಶಿವಪೂ

ಜೆಗೆ ಎರಡು ತೋಳು ಸಾಲವೆಂದು ಸಾವಿರ ತೋಳು ಪಡೆದು ಶಿವಾರ್ಚನೆಯು ಮಾಡುತಿರುತ್ತ ಒಂದು ದಿನ ಶಿವನೆ ನಿನ್ನ ಕೂಡೆ ಕಾದಬೇಕೆನಲು ಕೃಷ್ಣನ ಕೂಡೆ ಕಾದೆಸಲು ಅವ ನನಗೆ ಮೂವತ್ತು ವೇಳೆ ಮುರಿದವನೆನಲು ಮೊದಲ್ಲಂತಲ್ಲ ಈಗ ಉಪಮನ್ಯುವಿನ ಕೈಯ್ಯ ಲಿಂಗವ ಧರಿಸಿದ್ದಾನೆ, ಈಗ ಕಾವೆನಲು ಹಾಗಾಗಲೆಂದು ಕಾದುವಾಗ ಕೃಷ್ಣನೊಲ್ಲೆನೆನಲು ಶಿವನು ನಾನ್ಯೆದೆನೆ ಕಾದೆನಲು ಆಗ ಕಾದಿ ಎರಡು ತೋಳನುಳುಹಿ ಉಳಿದ ತೋಳ ಕತ್ತರಿಸಲು ಶಿವನು ನಿನ್ನ ಭುಜದ ತೀಟೆ ಹೋಯಿತ್ತೆಂದು ಮರಳಿ ಸಾವಿರ ತೋಳ ಕೊಟ್ಟು ಕೈಲಾಸಕ್ಕೊಯ್ದನು.

---

## ೧೪೮ ನೆಯ ವಚನದ ಕಥೆ. (೨೨-೩೫)

### ತಿರುನೀಲಕಂಠ

ಚೋಳ ಮಂಡಲದಲ್ಲಿ ಪೊನ್ನಾಂಬಲವೆಂಬ ಪುರವಿಪ್ಪುದು. ಅದೆಂತೆಂದೊಡೆ, ಅಲ್ಲಿ ಶಿವ ನೆಲಸಿರ್ಪನು. ಅದಕ್ಕೆ ಶಿವನಿಷ್ಠೆ ಎಂಬ ಕೋಟೆ ಸದಾಚಾರವೆ ಅಗಳು ಆಗಮವೆ ಅಳ್ಳೇರಿ ಶಿವಪುರಾಣವೆ ಬಾಗಿಲು ಪಂಚಾಕ್ಷರಿಯೇ ಅರಮನೆ ಇಂತೊಪ್ಪುವ ಪುರದೊಳಗೆ ತಿರುನೀಲಕಂಠಯ್ಯಗಳೆಂಬ ಕುಂಬಾರ ಭಕ್ತರಿದ್ದರು. ಅವರ ಸತಿಯು ಹೆಸರು ಸತ್ಯವತಿ. ಒಂದು ದಿನ ತಿರುನೀಲಕಂಠಯ್ಯಗಳು ತಿರುನೀಲಕಂಠೇಶ್ವರನ ಗುಡಿಗೆ ಹೋಗಿ ಲಿಂಗ ಪೂಜೆಯು ಮಾಡಿ ಸ್ತುತಿಸಿ ಬರುವಾಗ ಲಿಂಗದ ವಸ್ತ್ರವ ಪಾತ್ರದ ನಾಯಕಿಯು ವಿಳಾಸಿನಿಯು ತಳಿಗೆಯು ತೊಳೆದು ಚೆಲ್ಲಲು ಅದು ಆ ಭಕ್ತನ ಮೇಲೆ ಸಿಡಿಯಲು ತಿರುನೀಲಕಂಠಾ ಎನಲು ಆಗ ನಾಯಕೆ ಕೇಳಿ ಹತ್ತಿರಕೆ ಬಂದು ನಮಸ್ಕರಿಸಿ ಮನೆಗೆ ಬಿಜಯಂಗೈಸಿ ಮಂಡೆಗೆ ಮಜ್ಜನವ ಮಾಡಿಸಿ ಪರಿಮಳವ ಧರಿಸಿ ಎನ್ನ ಅಪರಾಧವ ಸೈರಿಸಿಕೊಳ್ಳಿ ಎಂದು ಕಳುಹಿದಳು. ಇತ್ತ ಅವರು ತಮ್ಮ ಮನೆಗೆ ಬರಲು ಸತಿ ಕೋಪಿಸಿ ಈ ಪರಿಮಳವೆಲ್ಲಿಯದು, ಆವ ಹೆಣ್ಣಿನ ಸಂಭೋಗದಲ್ಲಿದ್ದರೋ ಎಂದು ಬೇರೆ ಹಾಸಿಗೆಯಲ್ಲಿ ಮಲಗಿಸಿದಳು. ಆಗ ತಿರುನೀಲಕಂಠಯ್ಯಗಳು ಬಾ ಎಂದು ಸೆರಗ ಹಿಡಿದೆಳೆಯಲು ಎನ್ನ ಮುಟ್ಟಿದರೆ ನಿಮಗೆ ಶಿವನಾಣೆ ಎನಲು ಆ ಮಾತಿಗೆ ತೊಂಬತ್ತು ವರುಷ

ಆಗಲಿದ್ದರು. ಆ ಮೇಲೆ ಮುಪ್ಪಾದರು. ಅದೆಂತೆಂದರೆ ಆಣೆ ಪಕ್ವಕ್ಕೆ ಬಂದಂತೆ ಹಣ್ಣು ಮುದುಕರಾದರು. ಸುಕೃತವೆ ಬೆಳ್ಪಾದಂತೆ ಮಸ್ತಕವು ನರೆತವು. ಮುಕ್ತಿಗೈದುವ ಸೋಪಾನದಂತೆ ವೈ ತೆರೆಗಟ್ಟಿದವು. ಭಕ್ತರಲ್ಲದೆ ಭವಿಗಳ ನೋಡೆನೆಂಬಂತೆ ಕಣ್ಣೆವೆಗಳು ಮುಚ್ಚಿದವು. ಶಿವನೆ ದೈವವಲ್ಲದೆ ಮತ್ತೊಂದು ದೈವವಿಲ್ಲವೆಂದು ತಲೆದೂಗುವಂತೆ ತಲೆ ನಡುಗುತಿರ್ದುದು. ಲಿಂಗ ಪ್ರದಕ್ಷಿಣವಲ್ಲದೆ ಅಡಿಇಡೆನೆಂಬಂತೆ ನಡೆಗೆಟ್ಟುದು. ಹೀಗೆ ಅವರಿರಲು ಆಗ ಶಿವನು ಭಿಕ್ಷಕ್ಕೆ ಬರಲು ಸತಿಪತಿಗಳು ನಮಸ್ಕರಿಸಿ ಮನೆಯೊಳಯಿಂಕೆ ಬಿಜಯ ಮಾಡಿಸಿಕೊಂಡು ಹೋಗಿ ಏನು ಬಂದಿರಿ ಸ್ವಾಮಿ ಎನಲು ಮತ್ತೆತಕ್ಕೂ ಬಂದವರಲ್ಲ ನಮ್ಮ ಭಿಕ್ಷದ ಬಟ್ಟಲ ಮಡಗಿ ಕೊಂಡಿರಿ ಎಂದು ಇಂತೆಂದನು. ಇದು ಸರ್ವಸಿದ್ಧಿಯ ಕೊಡುವುದು ಇದ ಮಡಗೆನಲು ತಗೆದು ಕೊಂಡು ವಸ್ತ್ರವ ಸುತ್ತಿ ಪೆಟ್ಟಿಗೆಯಲಿ ಮಡಗಲು ಬಳಿಕ ತಾವು ಹೋಗಿ ಬೆಳಗಾಗಿ ಬಂದು ನಮ್ಮ ಬಟ್ಟಲ ಕೊಡಿ ಎನಲು ಪೆಟ್ಟಿಗೆಯ ತೆರೆದು ನೋಡಿ ಇಲ್ಲವೆನಲು ನೀವಿಬ್ಬರು ವಂಚಕರೆಂಬುವ ನಾವರಿಯೆವು. ಮತ್ತೊಬ್ಬರ ಸಾಕ್ಷಿಯ ಮಾಡಲಿಲ್ಲವಲ್ಲ ಎನಲು ಮತ್ತೆ ಪೆಟ್ಟಿಗೆಯ ನೋಡಿ ಇಲ್ಲದಿರೆ ನೆರೆಹೊರಗೆ ದೂರುತ್ತ, ನಡೆಯಿರೆ ಪ್ರೋನ್ನಂಬಲದಂತಲ್ಲೆ ಮೂವ್ವರ ಬಳಿಗೆ, ನಡುವೆ ತಿದ್ದವರಿಲ್ಲವೆಂದು ಅಲ್ಲಿಗೆ ಆ ಸತಿಪತಿಗಳ ಕರಕೊಂಡು ಬರಲು ಅಲ್ಲಿದ್ದ ಗಣಂಗಳಿಂತೆಂದರು. ಎಲೆ ಅಯ್ಯ ನಿಮ್ಮ ಬಟ್ಟಲು ಆಗ್ಗಕ್ಕೆ ನಾವು ಎಲ್ಲರೂ ಕೂಡಿ ಮೂರು ಸಾವಿರ ವರಹದ ಬಟ್ಟಲ ಮಾಡಿಸಿ ಕೊಟ್ಟೆವೆನಲು ಶಿವನೆಂದನು, ಆಕಟಾ ನೀವು ಪುಣ್ಯಪಾಪವನರಿಯಿರಲಾ ಅದು ನಮಗೆ ತ್ರಿವಸಿಧಿ ಬೇಕೆಂಬ ವಸ್ತುವ ಕೊಡುವುದು. ಹೊನ್ನಿಗಿನ್ನು ಪರುಷಗಿರುಷ ಚಿಂತಾಮಣಿ ಗಿಂತಾಮಣಿ ಮೇರು ಗಿರುಗಿರು ಸರಿಯೇ ಎನ್ನ ಬಟ್ಟಲಿಗೆ, ಶಿವ ಶಿವಾ ಇಂತು ನುಡಿವರೆ ಎನಲು, ಆ ಸಭೆಯವರು ಎಲೆ ಅಯ್ಯಾ ನಿಮ್ಮ ಬಟ್ಟಲ ನ್ಯಾಯವ ನಾವು ತಿದ್ದಲಾರೆವೆನಲು ಶಿವನೆಂದನು. ತನ್ನ ಸತಿಯ ಕೈಯ್ಯ ಹಿಡಿದು ಕೊಂಡು ಹೊಂಡದೊಳಗೆ ಹೊಕ್ಕರೆ ಬಿಟ್ಟೆನೆನಲು, ಆ ಗಣಂಗಳು ತಿರುನೀಲಕಂಠಯ್ಯ ಅವರಂದಂತೆ ಮಾಡಿ ಎನಲು, ಅದಕ್ಕೆ ಏನಾದರೂ ಆಗಲಿ ಎನ್ನ ಸತಿಯ ಕೈಯ್ಯ ಮುಟ್ಟೆನೆನಲು, ಎನ್ನ ಪಾತ್ರೆ ಬಂದಿತು ನೀವಿನ್ನು ಸುಮ್ಮನಿರಿ ಎಂದು ಸಭೆಗೆ ಹೇಳಿ ಮುಟ್ಟದ ಬಳಿಕ ಇವರು ಕಳ್ಳರೇ ಸರಿ ಇವರ

ಬಗೆಯ ನಾವು ಬಲ್ಲೆವು, ಮತ್ತಾರೂ ಅರಿಯರು, ಗೋವಿನ ವೇಷ ಹುಲಿಯ ಗಮನವೆಂದು ಶಿವನು ಜಡಿಯಲು, ಅಯ್ಯ ಹಸಾದವೆಂಬರು. ಇವರ ನಿಷ್ಠೆಯ ಕಂಡು ಈ ಕೋಲತುದಿಗಳ ನೀವಿಬ್ಬರೂ ಹಿಡಿದುಕೊಂಡು ಮುಳುಗಿದರೆ ನಮಗೆ ಇದೇ ಭಾಷೆ ಎನಲು, ಅದಕ್ಕೆ ಒಡಂಬಟ್ಟು ಕೋಲ ತುದಿಯ ಹಿಡಿದು ಕೊಂಡು ಇವರು ಪಾತ್ರೆಯ ಇರಿಸಿದರುಂಟು ನಾವು ತೆಗೆದುಕೊಂಡುದಿಲ್ಲ, ಶಿವನೇ ಬಲ್ಲನೆಂದು ಹೊಂಡದೊಳಗೆ ಮುಳು ಗಲು ಮೊದಲಂತೆ ಹದಿನಾರು ವರುಷದ ಹರೆಯವಾಗಿ ಆ ಸಮಯದಲ್ಲಿ ಶಿವನು ರೂಪು ದೋರಲು ಸತಿಪತಿಗಳು ಚರಣಕ್ಕೆರಗಿ ಆಗ ನುತಿ ಸಲು ಎಲೆ ಭಕ್ತರಿರಾ ಇನ್ನು ತೊಂಬತ್ತು ವರುಷ ಪರಿಯಂತರ ಸುಖ ದಲ್ಲಿದ್ದು ಕಡೆಯಲ್ಲಿ ಕೈಲಾಸಕ್ಕೆ ಬನ್ನಿ ಎಂದು ಶಿವನು ಬಯಲಾದನು.

---

## ೧೪೯ ನೆಯ ವಚನದ ಕಥೆ. (೨೨-೩೬)

### ಸಾಮವೇದಿ.

ಪೂರ್ವದಲ್ಲಿ ವೇದವಿದ ಮಹಾಕಾಯನೆಂಬ ಗಂಧರ್ವನು ಜಂಗಮ ಪ್ರಸಾದ ಲಿಂಗಕ್ಕೆ ಸಲುವುದೆ ಎಂದು ಕೇಳಲು, ಜಂಗಮ ಪ್ರಸಾದವ ಸಂದೇಹಿಸಬಹುದೆ ನೀನು ಶುನಿಯಾಗು ಎಂದು ಶಾಪವನೀಯಲು, ಅವ ಹೆದರಿ ನಿಶ್ಶಾಪವ ಆವ ಪರಿ ಎನಲು ಮರ್ತ್ಯದಲ್ಲಿ ಶ್ವಪಚಯ್ಯಗಳ ಭಾಂ ಡಶೇಷವು ದೊರಕೊಳಲು ಆಗ ನಿಶ್ಶಾಪವೆಂದರು. ಆ ನಿರೂಪದಿಂ ಅವ ರಾತ್ರೆಯಲ್ಲಿದ್ದು ಅವರು ಭಾಂಡಶೇಷವ ತುಡುಕಲು ಅದ ವಧಿಸಿ ಅದರ ತಲೆಯಲಿ ಪಾಕವ ಮಾಡುತ್ತಿರಲು ಅತ್ತ ಖೇಚರದಲ್ಲಿ ಬಪ್ಪ ಸಾಮವೇ ದಿಯ ನೆಳಲು ಬೀಳುತ್ತಿರಲು ತಮ್ಮ ಪಾದರಕ್ಷೆಯ ಮುಚ್ಚುವದ ಕಂಡು ಕೋಪಿಸಿ ಇದೇಕೆಂದು ಕೇಳಲು ಭವಿ ದೃಷ್ಟಿ ಸೋಂಕಿದುದು, ಕಿಲ್ಬಿಷ ವೆಂದು ದೃಷ್ಟವ ತೋರಲು ಅವರಡಿಗೆರಗಿ ಉಪದೇಶವ ಪಡೆದು ಶಿವ ಭಕ್ತಿ ಮಾರ್ಗದಲ್ಲಿ ಆಚರಿಸುತ್ತಿರಲು ಇತ್ತ ಸಾಮವೇದಿಗಳು ತಮ್ಮ ಗುರುವಾದ ಶ್ವಪಚಯ್ಯಗಳಿಗೆ ನಮಸ್ಕಾರವ ಮಾಡಿ ನಾಳೆ ನಮ್ಮ ತಂದೆಯ ದಿನ ಅದಕ್ಕೆ ನೀವೆ ವಿಶ್ವೇದೇವರಾಗಿ ಬಂದು ಕರುಣಿಸುವುದೆಂದು ಬಿನ್ನೈ ಸಲು ಅದಕ್ಕೆ ಶ್ವಪಚಯ್ಯನೆಂದರು. ಪಿತೃಕಾರ್ಯ ನಾವು ಬಾರೆವು.

ವಾಯುಗಳ ಸಂಚಾರ ಮಾರ್ಗವೆನಿಸಿರ್ಪವಾ ನಾಡಿಗಳೊಳಗೆ ಹದಿನಾಲ್ಕು ನಾಡಿಗಳೇ ಶ್ರೇಷ್ಠವಾಗಿರ್ಪವವರ ಸ್ಥಿತಿ ಗತಿ ನಾಮಾದಿಗಳೆಂತೆಂದೊಡೆ:—

ವಾಯು ಅಧಿ ದೇವತೆಯಾದ ವಾರುಣಿ ಎಂಬ ನಾಡಿಯೇ ಸರ್ವಾಂಗ ಗಾಮಿನಿಯಾಗಿಹುದು. ವರುಣನಧಿದೇವತೆಯಾದ ಜಿಹ್ವೆಯೇ ವಾಮ ಪಾದದಂಗುಷ್ಠ ಪರಿಯಂತವಾಗಿಹುದು. ಸೂರ್ಯನಧಿದೇವತೆಯಾದ ಯಶಸ್ವಿನಿಯೇ (?) ದಕ್ಷಿಣ ಪಾದದಂಗುಷ್ಠವಾಗಿಹುದು. ಯಮನಧಿ ದೇವತೆಯಾದ ಅಲಂಭಾವೆಯೇ ಗುದಾಂತವಾಗಿಹುದು. ಭೂಮಿಯಧಿ ದೇವತೆಯಾದ ಕುಹು (?) ಎಂಬ ನಾಡಿಯೇ ಮೇಢ್ರಾಂತವಾಗಿಹುದು. ಪಾವಕನಧಿ ದೇವತೆಯಾದ ವಿಶ್ವೋದರಿಯೇ ಜಠರಾಂತ್ಯವಾಗಿಹುದು. ವಿರಾಧಿ (?) ದೇವತೆಯಾದ ಸರಸ್ವತಿಯೇ ಜಿಹ್ವಾಂತವಾಗಿಹುದು. ಪ್ರಜಾಪತಿಯಧಿ ದೇವತೆಯಾದ ಪಯಸ್ವಿನಿಯೇ ದಕ್ಷಿಣ ಕರ್ಣಾಂತವಾಗಿಹುದು. ಚಂದ್ರನಧಿ ದೇವತೆಯಾದ ಶಂಕಿನಿಯೇ ವಾಮ ಕರ್ಣಾಂತ ವಾಗಿಹುದು. ಇಂದ್ರನಧಿ ದೇವತೆಯಾದ ಗಾಂಧಾರಿಯೇ ವಾಮನೇತ್ರಾಂತ್ಯವಾಗಿಹುದು. ದಿಕ್ಕು ಅಧಿದೇವತೆಯಾದ ಮಾಷ (?) ಯೆ ದಕ್ಷಿಣ ನೇತ್ರಾಂತ್ಯವಾಗಿಹುದು. ಬ್ರಹ್ಮನಧಿ ದೇವತೆಯಾದ ಪಿಂಗಳೆಯೇ ದಕ್ಷಿಣ ನಾಸಾಪುಟಾಂತ್ಯವಾಗಿಹುದು. ವಿಷ್ಣುವಧಿ ದೇವತೆಯಾದ ಈಡೆಯೇ ವಾಮ ನಾಸ ಪುಟಾಂತ್ಯವಾಗಿಹುದು. ಈಶ್ವರನಧಿ ದೇವತೆಯಾದ ಸುಷುಮ್ನೆಯೇ ಮೂಲಾಧಾರಾದಿ ಮಸ್ತಕಾಂತ ವಾಗಿಹುದು.

ಈ ಹದಿನಾಲ್ಕು ನಾಡಿಗಳೊಳು ಈಡಾ, ಪಿಂಗಳ, ಸುಷುಮ್ನೆ ಎಂಬ ಮೂರು ನಾಡಿಗಳೇ ಶಿವಯೋಗ ಸಾಧನದಲ್ಲಿ ಮುಖ್ಯವಾಗಿರ್ಪವು. ಇವರೊಳು ಸುಷುಮ್ನೆ ಎಂಬುದೇ ಅತಿ ವಿಶಿಷ್ಟವಾಗಿ ಬ್ರಹ್ಮದಂಡ, ಮಹಾಪಥ, ತೇಜೋಮಾರ್ಗ, ಶಿವಧರ್ಮನಾಳವೆಂಬುದಾದಿಯಾದ ಪರ್ಯಾಯ ನಾಮಂಗಳೊಡಗೂಡಿ ಶುದ್ಧ ಸ್ಫಟಿಕದಂತೊಪ್ಪುವುದು. ಈ ನಾಡಿಗಳ ಜನನ ಸ್ಥಳವಾದನಾಡಿ ಕಂದ ಮಧ್ಯ ಸ್ಥಳವೇ ನಾಭಿ ಎನಿಸುವುದು. ಆ ನಾಭಿಯೇ ಮಣಿಪೂರಕ ಚಕ್ರವೆನಿಸುವುದು. ಆ ಚಕ್ರವ ಅಗ್ನಿ ಎಂಬ ಮಹಾಭೂತವಾಶ್ರಯಿಸಿರ್ಪದು. ಆ ಚಕ್ರವು ತ್ರಿಕೋಣಾಕಾರವಾಗಿ ರಕ್ತದತ್ತ ವರ್ಣದಿಂದೊಪ್ಪುವ ಹತ್ತು ದಳಂಗಳನುಳ್ಳದು. ಆ ದಳಂಗಳಲ್ಲಿ ಡ, ಢ, ಣ, ತ, ಥ, ದ, ಧ, ನ ಪ, ಫ ಎಂಬ ದಶಾಕ್ಷರವಿರ್ಪವು. ಆ ಚಕ್ರದ ಕರ್ಣಿಕಾ ಮಧ್ಯದಲ್ಲಿರ್ಪ ಶಿ ಕಾರವೇ ಅಘೋರ ಸಂಜ್ಞಿತವಾದ

ಶಿವಲಿಂಗವೆನಿಸುವುದು. ಆ ಲಿಂಗದ ನಿಜಾಂಗವಾದಾತನೇ ಪ್ರಸಾದಿ. ಆತನು ಸಾವಧಾನವೆಂಬ ಭಕ್ತಿಯುಕ್ತನಾಗಿ ನಿರಹಂಕಾರವೆಂಬ ಹಸ್ತದಿಂದ ನೇತ್ರವೆಂಬ ಮುಖದೊಳುದ್ಭವಿಸಿದ ರೂಪವೆಂಬ ಪದಾರ್ಥವನ್ನು ಸಮರ್ಪಿಸಿ ಚಿದ್ರೂಪವೆಂಬ ಪ್ರಸಾದವನ್ನು ಪಡೆದು, ಆ ಲಿಂಗದ ಸಹವಾಗಿಯೇ ಭೋಗಿಸಿ ಮಹಾಲಿಂಗದ ಸ್ವರೂಪವಾದ ಪ್ರಣವದ ಕುಂಡಲಾಕೃತಿ ಎಂಬ ಶಿವಲಿಂಗದಲ್ಲಿ ಇಚ್ಛಾಶಕ್ತಿ ಸಹ ಅಡಗಿರ್ಪನೆಂಬುದೇ ಮಣಿಪೂರಕಚಕ್ರ ತಾತ್ಪರ್ಯಾರ್ಥಮಕ್ಕುಂ.

ಈ ನಾಭಿಯಿಂ ಮೇಲೆ ಹನ್ನೆರಡಂಗುಲದ ಪ್ರಮಾಣದಲ್ಲಿ ಅಧೋಮುಖವಾದ ಎಂಟು ದಳಂಗಳಿಂ ಶಿವಾನುಭವದಿಂದೂರ್ಧ್ವ ಮುಖವನ್ನೈದುವ ದಳಂಗಳಂತರದಲ್ಲಿರ್ಪ ನಾಲ್ಕು ದಳಂಗಳಿಂ ಚತುರಂಗುಲ ಪ್ರಮಾಣದಿಂ ಕದಳಿ ಕುಸುಮ ದಂತಧೋಮುಖವಾಗಿ ಪೂರ್ವ ಹೃದಯ ಕಮಲವಿಹುದಲ್ಲಿ ಜೀವಹಂಸನು ಕರ್ಮಪಾಶಬದ್ಧನಾಗಿ ಕೂದಲ ನೂರುಭಾಗದೊಳೊಂದು ಭಾಗದನಿತು ಅತಿ ಸೂಕ್ಷ್ಮರೂಪವಾಗಿ ಮನಪವನಂಗಳೊಡಗೂಡಿ ಸಂಚರಿಸುತಿರ್ಪನು. ಪೂರ್ವಾದಿಯಾಗಿ ಕ್ರಮದಿಂದಷ್ಟದಳಂಗಳೊಳ್ ಭಕ್ತಿ, ಕ್ಷುಧೆ, ಕೋಪ, ದುರಿತ, ವಿಲಾಸ, ಗಮನೇಚ್ಛೆ ಸಂಪರ್ಕ, ದ್ರವ್ಯಾಭಿಲಾಷೆಗಳು, ಆ ಕಮಲಕೇಸರಕ್ಕೆ ಬಂದಲ್ಲಿ ಸದ್ವಿವೇಕ, ಮಧ್ಯಕರ್ಣಿಕೆಗೈದಿದಲ್ಲಿ ನಿಜ ವೈರಾಗ್ಯ ಸಮ್ಯಕ್ ಜ್ಞಾನಂಗಳ್ ಸಿದ್ಧಿಸುತಿರ್ಪುವು. ಇಂತು ನಾಶವಿಲ್ಲದ ಸಂಚಾರವನುಳ್ಳುದರಿಂದಾ ಸ್ಥಲವೇ ಅನಾಹತ ಚಕ್ರವೆನಿಸುವುದು. ಅದು ಷಟ್ಕೋಣೆಯಿಂ ನೀಲವರ್ಣವಾಗಿರ್ಪುದು. ಅಲ್ಲಿ ಕ, ಖ, ಗ, ಘ, ಙ, ಚ, ಛ, ಜ, ಝ, ಞ, ಟ, ಠ, ಎಂಬ ದ್ವಾದಶಾಕ್ಷರ ಆ ಚಕ್ರದ ಹನ್ನೆರಡು ದಳಂಗಳಲ್ಲಿರ್ಪುವು. ಆ ಚಕ್ರವ ವಾಯುವೆಂಬ ಮಹಾಭೂತವಾಶ್ರಯಿಸಿರ್ಪುವು. ಆ ಚಕ್ರದ ಕರ್ಣಿಕಾಮಧ್ಯದಲ್ಲಿರ್ಪ ವ ಕಾರವೇ ತತ್ಪುರುಷ ಸಂಜ್ಞಿತವಾದ ಜಂಗಮಲಿಂಗವೆನಿಸುವುದು. ಆ ಲಿಂಗದ ನಿಜಾಂಗ ರೂಪಾದಾತನೇ ಪ್ರಾಣಲಿಂಗಿ. ಆತನು ಅನುಭಾವವೆಂಬ ಭಕ್ತಿಯಿಂ ಸರ್ವಗತವಾದ ತ್ವಗಿಂದ್ರಿಯದಿಂದುಸಿದ ಸ್ಪರ್ಶನವೆಂಬ ಪದಾರ್ಥವನ್ನು ಸುಮನವೆಂಬ ಹಸ್ತದಿಂದ ಆ ಲಿಂಗಕ್ಕೆ ಸಮರ್ಪಿಸಿ, ಆ ಲಿಂಗದ ಚಿತ್ಸಂಯೋಗವೆಂಬ ಪ್ರಸಾದವಂ ಪಡೆದು, ಆ ಲಿಂಗ ಸಹವಾಗಿ ಭೋಗಿಸಿ ಮಹಾಲಿಂಗಸ್ವರೂಪವಾದ ಪ್ರಣವದ ಅರ್ಧಚಂದ್ರಿಕಾಕೃತಿ ಎಂಬ ಜಂಗ

ಮುಲಿಂಗದಲ್ಲಿ ಆದಿಶಕ್ತಿಯೊಡಗೂಡಿ ಬೆರೆದಿರ್ಪನೆಂಬುದೇ ಅನಾಹತ ಚಕ್ರ ತಾತ್ಪರ್ಯಾರ್ಥಮುಕ್ತಂ.

ಅಲ್ಲಿಂದಂ ಮೇಲೆ ಗಳಮೂಲದಲ್ಲಿ ಆಮಳಕ ಫಳದಂತೆ ವೃತ್ತಾಕಾರವಾಗಿ ಹದಿನಾರು ದಳಂಗಳಲ್ಲಿ ಅ, ಆ, ಇ, ಈ, ಉ, ಊ, ಋ, ೠ, ಌ, ೡ, ಏ, ಐ, ಓ, ಔ, ಅಂ, ಅ:, ಎಂಬ ಹದಿನಾರು ದಳಂಗಳಲ್ಲಿ ಪ್ರಣವಂಗಳೊಡನೆ ಕೂಡಿ ಶುದ್ಧ ಸ್ಫಟಿಕವರ್ಣವಾಗಿ ತೋರ್ಪುದೇ ವಿಶುದ್ಧಿ ಚಕ್ರವೆನಿಸುವುದು. ಅದಂ ಆಕಾಶವೆಂಬ ಮಹಾಭೂತವಾಶ್ರಯಿಸಿರ್ಪುದು. ಆ ಚಕ್ರದ ಕರ್ಣಿಕಾ ಮಧ್ಯದಲ್ಲಿರ್ಪ ಯ ಕಾರವೆಂಬ ಈಶಾನ ಸಂಜ್ಞಿತವಾದ ಪ್ರಸಾದ ಲಿಂಗವೆನಿಸುವುದು. ಈ ಲಿಂಗದ ನಿಜಾಂಗ ರೂಪಾದಾತನೆ ಶರಣ. ಆತನು ಆನಂದವೆಂಬ ಭಕ್ತಿವಿಡಿದು ಸುಜ್ಞಾನವೆಂಬ ಹಸ್ತದಿಂದ ಶ್ರೋತ್ರವೆಂಬ ಮುಖದಿಂದುದಿಸಿದ ಶಬ್ದವೆಂಬ ಪದಾರ್ಥವನ್ನು ಆ ಲಿಂಗಕ್ಕೆ ಸಮರ್ಪಿಸಿ ಆ ಲಿಂಗದಿಂ ಪರನಾದವೆಂಬ ಪ್ರಸಾದಮಂ ಪಡೆದು, ಆ ಲಿಂಗ ಸಹವಾಗಿ ಭೋಗಿಸಿ ಮಹಾಲಿಂಗ ಸ್ವರೂಪವಾದ ಪ್ರಣವದ ದರ್ಪಣಾಕೃತಿ ಎಂಬ ಪ್ರಸಾದಲಿಂಗದಲ್ಲಿ ಪರಾಶಕ್ತಿ ಸಹಿತವಾಗಿ ತಾನಡಗಿರ್ಪನೆಂಬುದೇ ವಿಶುದ್ಧಿಚಕ್ರ ತಾತ್ಪರ್ಯಾರ್ಥಮುಕ್ತಂ.

ಮತ್ತಮಲ್ಲಿಂದಂ ಮೇಲೆ ಈಡಾ ಪಿಂಗಳ ಸುಷುಮ್ನೆ ದ್ವಾರಕೂಟದಿಂ ಗಂಗಾ, ಯಮುನಾ, ಸರಸ್ವತಿ ಎಂಬ ಚಂದ್ರಸೂರ್ಯಾಗ್ನಿಗಳೆಂಬ ತ್ರಿಕೂಟವೆಂಬ ಶಬ್ದದ್ವಾರ ಗಂಧದ್ವಾರಂಗಳ ಸಂಯೋಗದಿಂ ಚತುಃಪೀಠವೆನಿಸುವ ಶೃಂಗಾಟಕವೆಂಬ ವೇದಾಂತಚಕ್ರವೆಂಬ ಜ್ಞಾನಚಕ್ರವೆಂಬ ಕಾಶಿ ಎಂಬ ಮಧ್ಯಹೃದಯವೆಂಬ ಪರ್ಯಾಯ ನಾಮಂಗಳ ಪಿಡಿದೊಪ್ಪುವ ಭ್ರೂಮಧ್ಯವೇ ಆಜ್ಞಾಚಕ್ರವೆನಿಸುವುದು. ಆ ಚಕ್ರವು ಪದ್ಮರಾಗಕಾಂತಿಯನುಳ್ಳದು. ಆ ಚಕ್ರವ ಹಂಸನೆಂಬ ಆತ್ಮಭೂತವಾಶ್ರಯಿಸಿರ್ಪುದು. ಆ ಚಕ್ರವು ಹಂ ಕ್ಷಂ ಎಂಬ ಎರಡು ಪ್ರಣವಂಗಳಿಂದೊಪ್ಪುವ ಎರಡು ದಳಂಗಳನುಳ್ಳದು. ಈ ಚಕ್ರದ ಕರ್ಣಿಕಾ ಮಧ್ಯದಲ್ಲೊಪ್ಪುವ ಓಂ ಕಾರವು ಪರಬ್ರಹ್ಮ ಸಂಜ್ಞಿಕವಾದ ಮಹಾಲಿಂಗವೆನಿಸುವುದು. ಈ ಲಿಂಗದ ನಿಜಾಂಗರೂಪವಾದಾತನೇ ಐಕ್ಯನು. ಆತನು ಸಮರಸವೆಂಬ ಭಕ್ತಿಯುಕ್ತನಾಗಿ ಹೃದಯ ಮುಖದಿಂದುದಿಸಿದ ಪರಿಣಾಮವೆಂಬ ಪದಾರ್ಥವನ್ನು ಸದ್ಭಾವವೆಂಬ ಹಸ್ತದಿಂದ ಲಿಂಗಕ್ಕೆ ಸಮರ್ಪಿಸಿ ಆ ಲಿಂಗದಿಂದ ಪರಮಾನಂ

ದವೆಂಬ ಪ್ರಸಾದವಂ ಪಡೆದು ಆ ಲಿಂಗದ ಸಹವಾಗಿ ಭೋಗಿಸಿ ಮಹಾಲಿಂಗ ಸ್ವರೂಪವಾದ ಪ್ರಣವದ ಜ್ಯೋತಿರಾಕೃತಿ ಎಂಬ ಮಹಾಲಿಂಗ ದಲ್ಲಿ ಚಿಚ್ಛಕ್ತಿಯೊಡಗೂಡಿರ್ಪನೆಂಬುದೇ ಆಜ್ಞಾಚಕ್ರ ತಾತ್ಪರ್ಯಾರ್ಥ ಮಕ್ಕುಂ.

ಇಂತಿವೆಲ್ಲಂ ಸ್ಥೂಲಾಂಗ ಸಂಬಂಧದಿಂ ಪೂರ್ವ ರೂಪ ಷಟ್ಚಕ್ರಂಗ ಳೆನಿಸಿಕೊಂಬುವು. ನಿರಂಜನ ಮಹಾಲಿಂಗ ಮೂರ್ತಿಯಾದ ಕ್ರಿಯಾ ಲಿಂಗ ಸಂಜ್ಞಿತವಾದ ಇಷ್ಟ ಬ್ರಹ್ಮವು ತನ್ನ ವೃತ್ತ, ಕಟಿ, ವರ್ತುಳ, ಗೋಮುಖ, ನಾಳ, ಗೋಳಕವೆಂಬ ಆರು ಸ್ಥಲಂಗಳೊಳ್ ಗರ್ಭೀಕರಿಸಿ ಕೊಂಡಿರ್ಪುದು. ಲಿಂಗಕಾಯ ಭಕ್ತಕಾಯಂಗಳಿಗೆ, ಅಭೇದಮಪ್ಪುದರಿಂ ಶರಣಾಂಗ ಷಟ್ಚಕ್ರಂಗಳೇ, ಲಿಂಗ ಷಟ್ಸ್ಥಲವಾಗಿ, ಆ ಲಿಂಗ ಷಟ್ಸ್ಥ ಲಂಗಳೇ ಶರಣಾಂಗ ಚಕ್ರಂಗಳೆನಿಸಿ, ಆಯಾಯ ಚಕ್ರಂಗಳ ಕರ್ಣಿಕಾ ಕ್ಷರ ಸಹಿತವಾದ ವರ್ಣಾಂಗಳೇ ಲಿಂಗಷಟ್ಸ್ಥಲದಲ್ಲಿ ಮಂತ್ರಂಗಳೆನಿಸಿ ಆ ಲಿಂಗ ಸ್ಥಿತಮಂತ್ರಗಳೇ ಶರಣಷಡಂಗವಲ್ಲಿ ಐವತ್ತೇಳು ಲಿಂಗಂಗಳೆ ನಿಸಿ, ಆ ಲಿಂಗದಂಗರೂಪವಾದ ಭಕ್ತನ ಷಟ್ಚಕ್ರಂಗಳ ಕರ್ಣಿಕಾಬೀ ಜಾಕ್ಷರಂಗಳನು, ಆರು ಭೂತ ಗ್ರಾಮಂಗಳನು (?) ನಿಜಾಂಗವೊಂದ ನುಳಿದು ವಿಭಾಗಿಸಲ್ಕೆ, ಇವೇ ನಲವತ್ತುನಾಲ್ಕು ಅಂಗಸ್ಥಲ ಸಂಜ್ಞಿತ ವಾಗಿ ತೋರ್ಪುವು. ಈ ಲಿಂಗಾಂಗ ಸಾಮರಸ್ಯವಾದಲ್ಲಿ, ಶತೇಕೋ ತ್ತರ ಸ್ಥಲವೂ ಸಂಬಂಧಿಸಿರ್ಪ ರಹಸ್ಯಾನುಭವಮಂ ಶ್ರುತಿ, ಗುರುಮುಖದಿಂದ ರಿತು ಪರಿಣಮಿಸುವುದೇ ವಿಹಿತ ಜ್ಞಾನಮೆನಿಸುವುದು.

ಬಳಿಕ ಸೂಕ್ಷ್ಮಾಂಗ ಸಂಬಂಧವಾದ, ಘ್ರಾಣ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಹೃದಯವೆಂಬ ಆರು ಜ್ಞಾನೇಂದ್ರಿಯಂಗಳೇ ಕ್ರಮದಿಂ, ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೇಯವೆಂಬ ಷಟ್ಚಕ್ರಂಗಳೆನಿಸಿಕೊಂಬುವು. ಜ್ಞಾನಾಧಿಕ್ಯ ಮುಳ್ಳುದರಿಂದ ಆದ ಇವು ಆರು ಉತ್ತರ ರೂಪವೆನಿಸಿಕೊಂಬುವು. ಈ ಚಕ್ರಂಗಳ ಗೋಳಕ, ಸ್ಥಿತ ಜ್ಞಾನಂಗಳೆ ತರುವಾಯ ಆಚಾರಾದಿ ಮಹದಂತವಾದ ಲಿಂಗಂಗಳೆನಿಸಿ ಕೊಂಬುವು. ಆ ಚಕ್ರಂಗಳಿಗೆ ಆಯಾಯ ನಾಮಂಗಳೇನು ಕಾರಣ ಬಂದಿತೆಂದಡೆ:— ದೇಹ ಕರಣೇಂದ್ರಿಯಂಗಳಿಗಾಧಾರವಾದ ಪ್ರಾಣವಾ ಯುವಿನ ಉತ್ಪತ್ತಿ ಸ್ಥಿತಿಗಾಶ್ರಯವಾಗಿ ಪೃಥ್ವೀತತ್ವ ಮಪ್ಪುದರಿಂ ಆಧಾರ

ಚಕ್ರವೆನಿಸುವುದು. ಅಪ್ಪು ತತ್ವಮುಪ್ಪದರಿಂ, ಬಿಂದು ರೂಪದಿಂದಾತ್ಮಂಗೆ ವಿಚಿತ್ರ ಭೋಗಾಧಿಷ್ಠಾನ ಮಾಡುವದರಿಂ ಸ್ವಾಧಿಷ್ಠಾನವೆನಿಸುವುದು. ವಿಚಿತ್ರಮಣಿ ಪ್ರಕಾಶವಾದಿಯಾದ ಅನಂತ ಪ್ರಕಾಶ ಗರ್ಭೀಕೃತ ಸ್ಥಲ ಮಾದುದರಿಂ ಮಣಿಪೂರಕ ಚಕ್ರವೆನಿಸುವುದು. ದೇಹ ಕರಣೇಂದ್ರಿಯಂಗಳ ಚೇಷ್ಟಾ ಕಾರಣವಾಗಿ ವೃತ್ತಿಭೇದದಿಂ, ಪ್ರಾಣಾದಿ ವಾಯುಗಳೆನಿಸಿ ತೋರ್ಪ ವ್ಯಾನವಾಯುವಿಂಗಾಶ್ರಯುವಾಗಿ, ತಾನು ಆ ತತ್ವಮಪ್ಪದರಿಂ ಅನಾಹತವೆನಿಸುವುದು. ನಿರ್ಲೇಪತ್ವವೇ ಮುಖ್ಯವಾಗಿ ಪರಮ ನಾದಾಶ್ರಯುವೆನಿಸಿ ಅತ್ಯಂತ ಶುದ್ಧತೆಯನುಳ್ಳ, ಆಕಾಶ ಸ್ಥಳಮಪ್ಪದರಿಂ, ವಿಶುದ್ಧಿ ಎನಿಸುವುದು. ಇಂತೀ ಪಂಚ ಮಹಾ ಭೂತಂಗಳನ್ನು, ಈ ಭೂತಂಗಳಿಗೆ ಜನ್ಮ ಸ್ಥಳವಾದ, ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನರೆಂಬ ಪಂಚ ಬ್ರಹ್ಮರನ್ನು, ಆ ಪಂಚ ಬ್ರಹ್ಮ ಸ್ವರೂಪವಾದ ಕರ್ತೃ, ಕರ್ಮ, ಮೂರ್ತ, ಅಮೂರ್ತ, ಶಿವಸಾದಾಖ್ಯವೆಂಬ ಪಂಚ ಸಾದಾಖ್ಯಂಗಳನ್ನು, ಈ ಸಾದಾಖ್ಯ ಸ್ವರೂಪಮಾದ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗವೆಂಬ ಪಂಚ ಲಿಂಗಂಗಳನ್ನು, ಆ ಲಿಂಗಗಳ ಶಕ್ತಿ ರೂಪಮಾದ ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿಶಕ್ತಿ, ಪರಾಶಕ್ತಿಯರೆಂಬ ಪಂಚ ಶಕ್ತಿಯರನ್ನು, ಆ ಪಂಚ ಶಕ್ತಿಯರ ಸ್ವರೂಪಮಾಗಿ, ಮೂವತ್ತೆಂಟು ತೆರನಾದ ನಿವೃತ್ತಿ, ಪ್ರತಿಷ್ಠೆ, ವಿದ್ಯೆ, ಶಾಂತಿ, ಶಾಂತಾತೀತೆ ಎಂಬ ಪಂಚಕಲೆಗಳನ್ನು ಆ ಕಲಾ ಭೂಮಿಯಾದ ಘ್ರಾಣ, ಜಿಹ್ವೆ, ನೇತ್ರ ತ್ವಕ್ಕು ಶ್ರೋತ್ರವೆಂಬ ಪಂಚ ಜ್ಞಾನೇಂದ್ರಿಯಂಗಳನ್ನು, ಆಜ್ಞಾನೇಂದ್ರಿಯಂಗಳ ಚೇಷ್ಟಾ ಕಾರಣಮಾದ ಪ್ರಾಣ, ಅಪಾನ, ಉದಾನ, ವ್ಯಾನ, ಸಮಾನವೆಂಬ ಪಂಚ ವಾಯುಗಳನ್ನು, ಆ ಬುದ್ಧೀಂದ್ರಿಯಂಗಳ ವ್ಯಾಪಾರಾತ್ಮಕವಾದ ಗುದ, ಗುಹ್ಯ, ಪದ, ಪಾಣಿ, ವಾಕ್ ಎಂಬ ಪಂಚ ಕರ್ಮೇಂದ್ರಿಯಂಗಳನ್ನು, ಆ ಇಂದ್ರಿಯ ವ್ಯಾಪಾರಮಾದ ವಿಸರ್ಜನ, ಆನಂದ, ಗಮನ, ಆದಾನ ವಚನವೆಂಬ ಪಂಚವಿಷಯಗಳನ್ನು, ಇವೆಲ್ಲವನರಿಯುವ ಅಹಂಕಾರ, ಚಿತ್ತ, ಬುದ್ಧಿ, ಮನ, ಜ್ಞಾನವೆಂಬ ಪಂಚಾಂತಃಕರಣವಾದೆಲ್ಲವನು ತಾರೆ, ದಂಡ, ಕುಂಡಲಿ, ಅರ್ಧ ಚಂದ್ರ, ದರ್ಪಣವೆಂಬ ಪಂಚಾಕೃತಿಗಳಲ್ಲಿ ಗರ್ಭೀಕರಿಸಿಕೊಂಡು, ತನ್ನುಳುಮೆಯಾದ ಜ್ಯೋತಿರಾಕೃತಿಯೋಳ್, ತಾನೇ ಮಹದಾಕಾಶ, ತಾನೇ ಪರಬ್ರಹ್ಮ, ತಾನೇ ಮಹಾಲಿಂಗ, ತಾನೇ

ಚಿಚ್ಛಕ್ತಿ, ತಾನೇ ಶಾಂತಾತೀತೋತ್ತರೆ, ತಾನೇ ಹೃದಯ, ತಾನೇ ಪರಿಣಾಮ, ತಾನೇ ಮೂಲ ವಾಯುವು, ತಾನೇ ಮಹಾ ಯೋನಿ, ತಾನೇ ಮಹದಾನಂದ, ತಾನೇ ಭಾವವೆನಿಸಿ, ಮತ್ತೆ ತಾನೇ ನಿರಂಜನ ಪ್ರಣವವೆನಿಸಿಕೊಂಬುವ ಈ ಮಹಾಲಿಂಗವನ್ನೇ "ಅಸಮಂತಾತ್ ಜ್ಞೇಯಂ ಅಜ್ಞೇಯಂ" ಎಂಬುವೀ ತಾತ್ಪರ್ಯಾರ್ಥ ಸಂಬಂಧಿತವಾಗಿ ಬೆಳಗುತಿರ್ಪ ಮಧ್ಯ ಹೃದಯವೇ ಅಜ್ಞೇಯವೆನಿಸುವುದು.

ಮತ್ತಮಾಜ್ಞೇಯ ಚಕ್ರದಿಂ ಮೇಲೆ ಮಸ್ತಕದೊಳು ಬ್ರಹ್ಮಚಕ್ರವಿಹುದು. ಆ ಚಕ್ರವು ಅತಿ ಪ್ರಕಾಶದಿಂದೊಪ್ಪುವ ಜ್ಯೋತಿವರ್ಣವಾದ ಸಹಸ್ರ ದಳವನುಳ್ಳದು. ಆ ದಳಂಗಳು ವೈಕೃತಾತ್ಮ ಮಂತ್ರಸ್ಥವಾಗಿರ್ಪುವು. ಆ ಚಕ್ರ ಕರ್ಣಿಕಾಮಧ್ಯದಲ್ಲಿರ್ಪ ನಿರಂಜನ ಓ ಕಾರವೇ ನಿಃಕಲ ಲಿಂಗವೆನಿಸುವುದು. ಆ ಲಿಂಗಕ್ಕೆ ನಿರ್ವಾಣಯ ಶಕ್ತಿಯೊಡನೆ ಕೂಡಿದ ಅಂತರಾತ್ಮ, ಅಖಂಡಜ್ಞಾನ, ರೂಪ ಸಂಜ್ಞಿತವಾದ ಇಷ್ಟಲಿಂಗವೇ ಅಂಗವೆನಿಸುವುದು. ಈ ಬ್ರಹ್ಮಚಕ್ರನಾದಿಯಾದ ಮೇಲಣ ಮೂರು ಚಕ್ರಂಗಳು ಶುದ್ಧ ಕಾರಣತನು ಸಂಬಂಧವಾಗಿರ್ಪುದರಿಂದ ಉತ್ತರೋತ್ತರವೆನಿಸುವುವು. ಬ್ರಹ್ಮಚಕ್ರವು ಗುರುತತ್ವಸ್ವರೂಪವೆನಿಸುವುದು. ಇದು ಬ್ರಹ್ಮತಾತ್ಪರ್ಯಾರ್ಥವೆನಿಸುವುದು. ಅನಂತರದೊಳಲ್ಲಿಂದಂ ಮೇಲೆ ಶಿಖಾಸ್ಥಳದಲ್ಲಿ ಶಿಖಾಚಕ್ರವಿಹುದು. ಆ ಚಕ್ರವು ಮಹಾಜ್ಯೋತಿ ವರ್ಣವನುಳ್ಳದು. ಆ ಚಕ್ರಕ್ಕೆ ಚಿನ್ನಾದ, ಚಿದ್ಬಿಂದು, ಚಿತ್ಕಳಾಸ್ವರೂಪವಾದ ಬಸವಾಕ್ಷರ, ಓಂಕಾರ ಪ್ರಣವದಲ್ಲಿ ಅ, ಉ, ಮಾಕ್ಷರ ಹ್ರಾಂ, ಹ್ರೈಂ, ಹ್ರಃ ಎಂಬ ಈ ಮೂರು ಬಗೆಯಲ್ಲಿ ಅದ ಬಗೆಯ ಮೂರಕ್ಷರಂಗಳಿರ್ದೊಡೂ ಶಿವಾನುಭವವನುಳ್ಳ ಸಮ್ಯಜ್ಞಾನಿಗಳಿಗೆ ವಿರೋಧವಿಲ್ಲವದೆಂತೆಂದೊಡೆ, ಓಂಕಾರ ಪ್ರಣವದಲ್ಲಿಯೇ ಜನಿಸಿ ಆ ಪ್ರಣವಕ್ಕೆ ಅಂಗವಾಗಿರ್ಪಂ. ಅ, ಉ, ಮಾಕ್ಷರಂಗಳು ಆ ಪ್ರಣವದಲ್ಲಿಯೇ ಜನಿಸಿ ಆ ಪ್ರಣವಕ್ಕೆ ಅಂಗವಾಗಿರ್ಪುವು. ಈ ಪ್ರಣವದ ಷಟ್ಕೃತಿಗಳಲ್ಲಿ ನಕಾರಾದಿ ಷಡಕ್ಷರಂಗಳು ಪುಟ್ಟಿರ್ಪುವು. ಈ ಮೂಲ ಪ್ರಣವದ ಗೋಪ್ಯ ರೂಪವಾದ ಶುದ್ಧ ಪ್ರಸಾದವೆಂಬ ಅವಾಚ್ಯ ಪ್ರಣವದ ಷಟ್ಕೃತಿಗಳಲ್ಲಿ ಕ್ರಮದಿಂ ಹ್ರಾಂ, ಹ್ರೀಂ, ಹ್ರೂಂ, ಹ್ರೈಂ, ಹ್ರೌಂ, ಹ್ರಃ, ಎಂಬ ಷಟ್ಪ್ರಸಾದಂಗಳು ಪುಟ್ಟಿರ್ಪುವು. ಷಟ್ಪ್ರಸಾದಗಳಿಗೂ ರೇಫವಿಲ್ಲದಿರ್ದೊಡೆ ವೇದೋಕ್ತ ಷಟ್ಪ್ರಸಾದವೆನಿಸುವುವು. ರೇಫಗಳೊಡನೆ ಕೂಡಿದರೆ ಆಗಮೋಕ್ತ ಷಟ್

ಸಾದಗಳೆನಿಸುವುವು. ಇವು ಸಕಾಮ ಸ್ಮರಣೆಯಿಂ ಇಷ್ಟಸಿದ್ಧಿ, ಅನಿಷ್ಟ ನಿವೃತ್ತಿ, ಆರೋಗ್ಯಾದಿಗಳಂ, ಸಕಾಮಧ್ಯಾನ, ಊರ್ಧ್ವ ಲೋಕಪ್ರಾಪ್ತಿ, ಸದ್ಧರ್ಮಾಭಿರತಿ, ಮಹದೈಶ್ವರ್ಯಾದಿಗಳಂ ನಿಃಕಾಮ ಸ್ಮರಣೆಯಿಂ ಬಾಹ್ಯ ವನಿತಾದಿವಿಷಯ ವೈರಾಗ್ಯ ಶಿವಪೂಜಾಭಿರತಿ ಸಜ್ಜನ ಸಹವಾಸ, ನಿಃಕಾಮಧ್ಯಾನದಿಂ ಸರ್ವ ವಿಷಯ ವೈರಾಗ್ಯ, ನಿತ್ಯಾನಿತ್ಯವಸ್ತು ವಿಚಾರ, ಸ್ವಸ್ವ (?) ರೂಪಜ್ಞಾನ, ಶುದ್ಧಾಶುದ್ಧ ಭಾವನಾ ವಿಕಲ್ಪದೋಳ್ಪೊರ್ದದ ಮೂಲಜ್ಞಾನ ರೂಪ ಶುದ್ಧಭಕ್ತಿ ಎಂಬೀ ಮಹಾಫಲಂಗಳಪ್ಪವೆಂದು ಶಿವಾಗಮಂಗಳೊಳ್ ಪ್ರಸಿದ್ಧಮಾಗಿರ್ಪುದು. ಈ ಷಟ್ಪ್ರಸಾದಂಗಳಿಗೆ ಕ್ರಮದಿಂ ಗೋಳಕಪ್ರಣವ ಅಖಂಡ ಗೋಳಕಾಕಾರ ಪ್ರಣವ ಅಖಂಡ ಮಹಾಗೋಳಕಾಕಾರ ಪ್ರಣವ ಜ್ಯೋತಿಪ್ರಣವ ಅಖಂಡಜ್ಯೋತಿ ಪ್ರಣವ ಅಖಂಡ ಮಹಾಜ್ಯೋತಿ ಪ್ರಣವ ಎಂಬ ನಾಮಂಗಳುಂಟಾಗಿರ್ಪವು. ಉಕಾರ ಕ್ಷಕಾರ ಸಕಾರ ಮೂರು ಬಿಂದು ರೂಪವಪ್ಪುದರಿಂ ಈ ಶಿಖಾಚಕ್ರದ ಕರ್ಣಿಕಾಮಧ್ಯದಲ್ಲಿ ಈ ಮೂರರೊಳಾವ ಪ್ರಣವವಿದ್ದರೂ ಅಲ್ಲಿ ಅಗೋಚರಮಪ್ಪ ಶೂನ್ಯ ಲಿಂಗವೆನಿಸುವುದು. ಶಿಖಾಚಕ್ರೋದ್ಧರಣೆಯಲ್ಲಿ ಕೆಲ ಕೆಲವು ಪ್ರತಿಗಳಲ್ಲಿ ನಿಯಾಮಕವಿಲ್ಲದೆ ಈ ಮೂರಕ್ಷರಂಗಳಾದೊಡಂ ಇರ್ಪುವು. ಮಹಾನುಭವಿಗಳಿಗೆ ಸಮ್ಮತವಪ್ಪುದರಿಂ ವಿರೋಧಮಿಲ್ಲದಿರುತಿರ್ಕುಂ. ಈಶಾನ್ಯಲಿಂಗಕ್ಕೆ ನಿಭ್ರಾಂತಿ (?) ಶಕ್ತಿಯೊಡನೆ ಕೂಡಿದ ಅನುಪಮಜ್ಞಾನ ಸಂಜ್ಞಿತಮಾದ ಪ್ರಾಣಲಿಂಗವೇ ಅಂಗವಾಗಿರ್ಪುದು. ಈ ಚಕ್ರವು ಲಿಂಗತತ್ವವೆನಿಸುವುದು. ಇದು ಶಿಖಾಚಕ್ರ ತಾತ್ಪರ್ಯಾರ್ಥಮಕ್ಕುಂ.

ಮತ್ತಮಲ್ಲಿಂದಂ ಮೇಲೆ ಶಿಖಾಸ್ಥಲದಗ್ರವೇ ಪಶ್ಚಿಮ ಚಕ್ರವೆನಿಸುವುದು. ಈ ಚಕ್ರವು ಅಪ್ರದರ್ಶನ ವರ್ಣದಿಂದೊಪ್ಪುವುದು. ಏಕದಳವನುಳ್ಳದು. ಅದರ ಕರ್ಣಿಕಾಮಧ್ಯದಲ್ಲೊಪ್ಪುವ ತತ್ವಾಂತ, ಭೂತಾಂತ, ವರ್ಣಾಂತಮಾದ ಗುಹ್ಯದೇಹಿ ಪರ ಅವ್ಯಯ ಶೂನ್ಯ ಶಿವಬೀಜ ಶುದ್ಧ ಪ್ರಸಾದ ಮಹಾಲಿಂಗ ಪರಶಿವಲಿಂಗಾದಿ ಸಂಜ್ಞಿತಮಾದ ಸಾಂತ ಪ್ರಣವವೆ ನಿರಂಜನ ಲಿಂಗವೆನಿಸುವುದು. ಆ ಲಿಂಗಕ್ಕೆ ಶುದ್ಧವಿದ್ಯೆ ಮೂಲ ಬಿಂದು ವಾಗೀಶ್ವರಿ ಹ್ರೀಂಕಾರಿ ಉಮಾಶಕ್ತಿ ಪರಬ್ರಹ್ಮ ಅಖಂಡ ಮಹಾಜ್ಞಾನ ಸಂಜ್ಞಿತ ಚಿಚ್ಛಕ್ತಿರೂಪ ಭಾವ ಲಿಂಗವೇ ಅಂಗವಾಗಿರ್ಪುದು. ಈ ಸ್ಥಲವೇ ಜಂಗಮತತ್ವವೆನಿಸುವುದು. ಇದು ಪಶ್ಚಿಮಚಕ್ರದ ತಾತ್ಪರ್ಯಾರ್ಥಮೆನಿಸುವುದು.

ಈ ನಿರಂಜನ ಬ್ರಹ್ಮವು ತನ್ನ ಸ್ವಲೀಲಾನಂದದಿಂ, ಭಕ್ತಿ, ಕರ್ಮ ಕ್ಷಯ, ನಿರ್ಮಲಮತಿ, ವಿಚಾರ ದರ್ಪ ನಾಶನ, ಸಮ್ಯಜ್ಞಾನ ವೆಂಬಾರು ಫಲವನುಳ್ಳ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ವೆಂಬಾರು ಅಂಗವೆನಿಸಿ, ಆ ಅಂಗಗಳಲ್ಲಿ, ಆಚಾರಾದಿ ಗುರುಲಿಂಗಗಳೆ ನಿಸಿ, ಅಂಗ, ಭಕ್ತಿ, ಮುಖ, ಪದಾರ್ಥವೆಂಬ ಅಂಗ ಸಕೀಲ ನಾಲ್ಕು, ಲಿಂಗ, ಹಸ್ತ, ಶಕ್ತಿ, ಪ್ರಸಾದವೆಂಬ ಲಿಂಗ ಸಕೀಲ ನಾಲ್ಕು ಕೂಡಿ ಅಷ್ಟ ವಿಧ ಸಕೀಲವೆನಿಸಿ, ಈ ಅಷ್ಟವಿಧ ಸಕೀಲ ಸಂಬಂಧವೆ ಷಟ್ಸ್ಥಲಾತ್ಮಕ ವಾಗಿ, ಈ ಷಟ್ಸ್ಥಲವೇ ಷಡ್ಲಿಂಗವಾಗಿ, ಈ ಷಡ್ವಿಧ ಲಿಂಗಂಗಳು, ಸಕಲ, ಸಕಲನಿಷ್ಕಲ, ಶುದ್ಧನಿಷ್ಕಲವೆನಿಸಿಕೊಂಬ ಇಷ್ಟ ಪ್ರಾಣ ಭಾವವೆಂಬ ತ್ರಿವಿಧ ಲಿಂಗಂಗಳೆನಿಸಿ, ಆ ತ್ರಿವಿಧ ಲಿಂಗಂಗಳನು, ತನು, ನೇತ್ರ ಮಾನಸ ವೆಂಬ ತ್ರಿವಿಧ ಸ್ಥಲದೊಳ್ ಧರಿಸಿ ತೋರ್ಪ ಅನಾದಿಭಕ್ತನೆನಿಸಿ, ಈ ಭಕ್ತನಲ್ಲಿ ಗುರು ಶಿಷ್ಯ, ಸತಿಪತಿ, ಜೀವ ಈಶ್ವರ, ಪ್ರಕೃತಿಪುರುಷ, ಅಂಗಲಿಂಗಾದಿ ಸಂಜ್ಞೆಯನಾಂತು ತೋರ್ಪ ಸ್ಥಲ ದ್ವಯ ಸಾಮರಸ್ಯದಿಂ, ತ್ರಿಪುಟಿ ರಹಿತವಾದ ಪರವಸ್ತುವೆನಿಸಿ ಬೆಳಗುತಿರ್ಪುದು.

ಇಂತು ಪೇಳಿದ ನವಚಕ್ರಂಗಳಂ ತನ್ನೊಳಗೆ ಗರ್ಭೀಕರಿಸಿಕೊಂಡು ಲಿಂಗಾಗ ಸಂಬಂಧವಾದ ಸಕಲ ತತ್ವಂಗಳಿಗೆ ತಾನೆ ಆಶ್ರಯವೆನಿಸಿ ಕರಿಯನೊಳಗೊಂಡ ಕನ್ನಡಿಯಂತೆ, ವಿಶ್ವವೆಲ್ಲಮಂ ತನ್ನೊಳಗು ಮಾಡಿ ಕೊಂಡು, ಲಿಂಗಸ್ವಾಯತ, ಲಿಂಗಾಭಿಷೇಕ, ಕಳಶ, ಪುಷ್ಪ ಪೀಠ, ಪ್ರಾಣ ಲಿಂಗ ಸ್ತನ, ಇಷ್ಟ ಲಿಂಗ ಯೋನಿ, ಕಾಮಧೇನು ಮೂಲಾಧಾರ, ನಿಜಾ ನಂದ ನಿಧನಿಕ್ಷೇಪ, ಭೂಮಿ, ಕೈಲಾಸ ಶಾಂಭವ ಲೋಕ, ಮಂಡಲ ತ್ರಯಾತ್ಮಕ, ಗುಣತ್ರಯಾತ್ಮಕ, ನಾದಬಿಂದು ಕಲಾತ್ಮಕ, ಪಂಚಾಕ್ಷ ರಾತ್ಮಕ, ಮಂತ್ರಗರ್ಭ, ಶಕ್ತಿಗರ್ಭ, ಶಿವಗರ್ಭ, ನಿರಾಳ ಚಕ್ರ, ಅಣು ಚಕ್ರಾತ್ಮಕ ಅಂಗ ಲಿಂಗೈಕ್ಯ ಸ್ಥಳವೆಂಬುದು ಮೊದಲಾದನಂತ ಪರ್ಯಾ ಯನಾಮವಿಡಿದು, ಶ್ರೀ ಗುರು ದೇವನ ಕೈದೋರಿಕೆಯಿಂ, ಸಾಕ್ಷಾತ್ಕಾರ ವಾಗಿ ಬೆಳಗುತಿರ್ಪ ಶಾಂಭವೀ ಚಕ್ರವೇ ಹತ್ತನೆಯ ಚಕ್ರವೆನಿಸುವುದು.

---

# ಶಿವಚಕ್ರ.

ಶ್ರೀಗುರುದೇವನ ಪಾದಪದ್ಮಂಗಳಿಗೆ ಅಭಿವಂದಿಸಿ ದಶವಿಧ ಚಕ್ರವೆನಿಸಿದ ಶಾಂಭವೀ ಚಕ್ರವಿಸ್ತಾರಮಂ ನಿರೂಪಿಸಬೇಕೆಂದು ಬಿನ್ನವಿಸಿದ ಶಿಷ್ಯಂಗಭಿಮುಖನಾಗಿ ಮತ್ತಮಾ ಶ್ರೀಗುರುದೇವನು ನಿರೂಪಿಸಿದ ಶಿವ ಚಕ್ರದ ತಾತ್ಪರ್ಯಾರ್ಥವೆಂತೆಂದೊಡೆ:—

ಸಕಲ ತತ್ವಾತ್ಮಕವಾಗಿ, ಸಕಲ ವರ್ಣಾತ್ಮಕವಾಗಿ, ಸರ್ವ ಯಂತ್ರಾತ್ಮಕವಾಗಿ, ಪರಶಿವಲಿಂಗಪೀಠವೆನಿಸಿ ಮೆರೆಯುವ ಈ ಶಿವಚಕ್ರವೊಂದೆ ಅತಿ ವಿಶಿಷ್ಟವಪ್ಪುದು. ಅತ್ಯಂತ ರಹಸ್ಯವಾದುದು. ಈ ಚಕ್ರವನುದ್ಧರಿಸುವ ಕ್ರಮವು ಶಿವಾಗಮೋಕ್ತ ಪ್ರಕಾರದಿಂ ಪೂರ್ವ ಪುರಾತನರಿಂದೀ ಚಕ್ರವಾಚ್ಯದೊಳು ವಿಸ್ತಾರಮಿರ್ಪುದಾಗಿ ಈ ಚಕ್ರ ಸ್ಥಿತಿಮಾತ್ರಮಂ ಪೇಳುತಿಹೆನದೆಂತೆಂದೊಡೆ:—

ಈ ಚಕ್ರದ ನಟ್ಟ ನಡುವಳಯದ ಬಟುವೇ ಸೂಕ್ಷ್ಮ ಕರ್ಣಿಕೆಯೆನಿಸುವುದು. ಈ ಸೂಕ್ಷ್ಮ ಕರ್ಣಿಕೆಯೆ ದಹರ ವೆಂದೂ, ಮನೋಮೂಲವೆಂದೂ, ಚಿದಾಕಾಶವೆಂದೂ ಬಿಂದ್ವಾಕಾಶವೆಂದೂ ಶೂನ್ಯಸಿಂಹಾಸನವೆಂಬುದಾದಿಯಾದ ಪರ್ಯಾಯ ನಾಮವಿಡಿದೊಪ್ಪುವುದು. ಅದು ಆದಿತ್ಯ ಚಂದ್ರ ವಿದ್ಯುತ್ ವಹ್ನಿ ಆದಿಗಳ ಪ್ರಕಾಶವಂ ಘಟಾದಿ ಬಾಹ್ಯ ಪದಾರ್ಥ ಜಾತಮಂ ಮುಚ್ಚಿ ಮುಸುಕಿದ ಮೂಲಾಂಧಕಾರಮಂ ಸ್ವತಃ ಸಾಮರ್ಥ್ಯದಿಂದರಿತು ಬೆಳಗುತಿರ್ಪ ಅಖಂಡ ಮಹಾಜ್ಞಾನ ಜ್ಯೋತಿಪ್ರಕಾಶಮನುಳ್ಳದು. ಅದರ ಮುಂದಣ ಬಟುವೆ ಸುಜ್ಞಾನ ಭೂಮಿಯೆಂದೂ ಜ್ಯೋತಿರ್ಮಂಡಲವೆಂದೂ ಚತುಃಪೀಠವೆಂದೂ ಪೆಸರ್ವಡೆದು ಜ್ಯೋತಿಪ್ರಕಾಶಮನುಳ್ಳದು. ಅದರಲ್ಲಿ ನಾಲ್ಕು ದಳಂಗಳಿರ್ಪುವು. ಆ ಚಕ್ರಾಂತರಾಳದ ಶಿವಲಿಂಗದ ಮಸ್ತಕದ ಮೇಲಣ ದಳವೇ ಪೂರ್ವ, ಅದರ ಪೃಷ್ಠಭಾಗದ ದಳವೇ ಪಶ್ಚಿಮ, ಅದರ ವಾಮಭಾಗದ ದಳವೇ ದಕ್ಷಿಣ, ಅದರ ದಕ್ಷಿಣಭಾಗದ ದಳವೇ ಉತ್ತರವೆನಿಸುವುದು. ಆ ಪೂರ್ವ ದಳದ ಸ ಕಾರವೇ ಬಿಂದುರೂಪವಾದ ಅಂಬಿಕೆ ಎನಿಸುವುದು. ಅದರ ಪಶ್ಚಿಮ ಭಾಗ ದಳದ ಐಕಾರವೇ ನಾದರೂಪವಾದ ಈಶ್ವರಿ ಎನಿಸುವುದು. ಆ ದಕ್ಷಿಣ ದಳದ ಅಕಾರವೆ ಆತ್ಮರೂಪಕವಾದ ಗಣಾನಿ ಎನಿಸುವುದು. ಅದರ ಉತ್ತರದಳದ ಕ್ಷ ಕಾರವೆ ಮೂಲ ವಿದ್ಯಾರೂಪವಾದ ಮನೋನ್ಮನೆ ಎನಿಸುವುದು. ಕ್ರಮದಿಂ, ಬಿಂದು, ನಾದ, ಆತ್ಮ, ವಿದ್ಯಾಸಂಜ್ಞೆಯನುಳ್ಳ, ಅಂಬಿಕೆ, ಈಶ್ವರಿ, ಗಣಾನಿ, ಮನೋನ್ಮನೆಯರೆಂಬ ಶಕ್ತಿ

ಚತುಷ್ಟಯುವೇ ಆ ಚಿಚ್ಛಕ್ತಿಯಂಗರೂಪವಾದ ಮುಂದೆ ಪೇಳುವ ಮಂಡಲತ್ರಯಾಂತರ್ಗತ ಸರ್ವ ವರ್ಣ ದೇವತಾ ಶಕ್ತ್ಯಾಧಿಷ್ಠಾನ ವಾಗಿರ್ಪುವು. ಮತ್ತಮಾ ಜ್ಯೋತಿರ್ಮಂಡಲದ ನಾಲ್ಕು ದಳಾಕ್ಷರಂಗ ಳಿಗೆ ಶಿವಾಮಂಗಳಲ್ಲಿ ಪೇಳ್ವ ವಿಶೇಷ ನಾಮಂಗಳಾವಾವೆನೆ:—ಆಧಾರ ನೆಂದು, ಶಕ್ತಿಯೆಂದು, ಕಾರ್ಯವೆಂದು, ಪರವೆಂದು ಬಿಂದುವೆಂದು, ಈ ಪಂಚನಾಮಂಗಳು ಸಕಾರಕ್ಕೆ ಉಂಟಾಗಿರ್ಪವು. ಆತ್ಮಬೀಜವೆಂದು, ಅಕಾರವೆಂದು, ದೇಹಿಯೆಂದು, ಕ್ಷೇತ್ರಜ್ಞನೆಂದು, ಭೋಗಿ ಎಂದು ಆ "ಅ"ಕಾರಕ್ಕೆ ಸಲುವುವು. ಐಕಾರವೆಂದು, ಶಿವನೆಂದು, ಆದೇಯುವೆಂದು, ಪರವೆಂದು, ನಾದಾತ್ಮವೆಂದು, ಈ ಐದು ನಾಮಂಗಳು "ಐ"ಕಾರಕ್ಕೆ ಸಲ್ಪ ವುವು. ಕೂಟವರ್ಣವೆಂದು, ವಿದ್ಯಾಬೀಜವೆಂದು, ವರ್ಗಾಂತವೆಂದು, ಧ್ರುವವೆಂದು, ಈ ಐದು ನಾಮಂಗಳು ಆ "ಕ್ಷ" ಕಾರಕ್ಕೆ ಸಂಬಂಧವಾಗಿ ರ್ಪವು. ಮುಂದಣ ಅಗ್ನಿಮಂಡಲದ ಅಷ್ಟದಳಾಕ್ಷರಂಗಳಿಗೆ ಸಲ್ಲುವ ನಾಮಂಗಳಾವಾವೆನೆ:—ಆ "ಸ" ಕಾರವು ಶಕ್ತಿಬೀಜವೆಂದು, ಪ್ರಥಮವಾದ ಶುಕ್ಲಧಾತುವೆಂದು ಪೆಸರ್ವೆತ್ತಿರ್ಪುದು. ಷ ಕಾರವು ದ್ವಿತೀಯವಾದ ಮಜ್ಜೆಯೆನಿಸಿಕೊಂಡು ಸೂರ್ಯನಾಮಂಗಳೆಲ್ಲವನುಳ್ಳದು. ಆ ಶ ಕಾರವು ತೃತೀಯವಾದ ಅಸ್ಥಿ ಎನಿಸಿಕೊಂಡು ಲಕ್ಷ್ಮೀನಾಮಂಗಳೆಲ್ಲವನುಳ್ಳದು. ಆ ವ ಕಾರವು ಚತುರ್ಥವಾದ ಮೇದಸ್ಸೆನಿಸಿಕೊಂಡು ವರುಣನೆಂದು ಜಲ ಪರ್ಯಾಯ ನಾಮಂಗಳೆಲ್ಲವನುಳ್ಳದು. ಆ ಲ ಕಾರವು ಪಂಚಮವಾದ ಮಾಂಸವೆನಿಸಿಕೊಂಡು, ಇಂದ್ರಬೀಜವೆನಿಸಿಕೊಂಡು ಪೃಥ್ವಿಪರ್ಯಾಯ ನಾಮಂಗಳೆಲ್ಲವನುಳ್ಳದು. ಆ ರ ಕಾರವು ಷಷ್ಠಮವಾದ ರಕ್ತವೆನಿಸಿಕೊಂಡು ಕ್ರೋಧವೆನಿಸಿಕೊಂಡು, ಅಗ್ನಿಪರ್ಯಾಯ ನಾಮಂಗಳೆಲ್ಲವನುಳ್ಳದು ಆ ಯ ಕಾರವು ಸಪ್ತಮವಾದ ಸ್ನಾಯು ವೆನಿಸಿಕೊಂಡು, ಮರುತ ನಾಮಂ ಗಳೆಲ್ಲವನುಳ್ಳದು. ಸ್ನಾಯು ಎಂದರೆ ರಸವೆಂಬ ಧಾತು. ಇಂತು ಇವೇಳು ಸ್ಥಿತಿಮಾರ್ಗದಲ್ಲಿ ಸಪ್ತಧಾತು ರೂಪಕವಾಗಿ ಪೂರ್ವೋಕ್ತ ನಾಮಂಗಳ ನುಳ್ಳದು. "ಮ" ಕಾರವೊಂದೆ ಸಂಹಾರಾತ್ಮಕ ರುದ್ರಬೀಜಮಪ್ಪುದರಿಂ, ಕಾಲ,, ಮೃತ್ಯುಕಾರಕವೆಂಬ ನಾಮದ್ವಯಂಗಳನುಳ್ಳ ಅಷ್ಟಮ ವೆನಿಸಿ ಕೊಂಬುದು. ಈ ಶಿವಚಕ್ರದ ವ್ಯಪಾತದ (?)ಸ್ವರಾಕ್ಷರ ವಿಕಲಾಕ್ಷರಂಗ ಳೆಂಬ ತ್ರಿವರ್ಗಾಕ್ಷರಂಗಳಲ್ಲಿ ಅಗ್ನಿಮಂಡಲದ ಪ್ರಥಮ ವರ್ಗಾಕ್ಷರಂಗ ಳಿಗೆ ಈ ಪರಿಯಿಂ ಪೇಳಲ್ಪಟ್ಟಿದ್ದು ಮುಂದಣವೆರಡು ವರ್ಗಾಕ್ಷರಂಗ

ಳಿಗೂ ಇದೇ ರೀತಿಯಿಂ ವಿಸ್ತರಿಸಿ ಪೇಳ್ದೊಡೆ ಅಭಿಪ್ರಾಯವತಿ ಬಾಹುಳ್ಯ ಮಪ್ಪುದಾಗಿ, ಸಾಧನ ಸ್ಥಿತಿಯನುಳ್ಳವರ್ಗಾಯಾಸ ಮಪ್ಪುದೆಂದು ಸಂಕ್ಷೇಪಮಾತ್ರದಿಂ ಪೇಳುತಿಹೆನೀ ಅಗ್ನಿಮಂಡಲದ ಇಂದ್ರದಳದ"ಸ" ಕಾರವೇ ವಾಮೆ., ಅಗ್ನಿದಳದ "ಷ"ಕಾರವೇ ಜ್ಯೇಷ್ಠೆ, ಯಮದಳದ "ಶ" ಕಾರವೇ ರೌದ್ರಿ, ನೈರುತ್ಯದಳದ "ವ" ಕಾರವೇ ಕಾಳಿ, ವರುಣದಿಕ್ಕಿನ ದಳದ "ಲ" ಕಾರವೇ ಬಾಲೆ, ವಾಯುವ್ಯದಳದ "ರ" ಕಾರವೇ ಬಲಪ್ರಮಥಿನಿ, ಕುಬೇರದಳದ "ಯ" ಕಾರವೇ ಸರ್ವಭೂತ ದಮನಿ, ಈಶಾನ್ಯದಳದ ಮಕಾರವೇ ಮನೋನ್ಮನೀ ಎನಿಸುವುದು. ಅಂತಸ್ಸತ್ವ ಬಹಿಸ್ತಮವನುಳ್ಳ ರುದ್ರಾತ್ಮಕತ್ವದಿಂದಗ್ನಿಮಂಡಲವೆನಿಸಿಕೊಂಡು ಬಾಹ್ಯದ ತಪೋರೂಪಮಾಗಿರ್ಕುಂ. ಇಂತಪ್ಪ ಅಗ್ನಿಮಂಡಲದ ಮುಂದಳ ಬಳಸಿ ಅಂತಸ್ತಮ ಬಾಹ್ಯಸತ್ವವನುಳ್ಳ ವಿಷ್ಣು ತತ್ವವೆನಿಸಿಕೊಂಡು ನಸು ಗರ್ಪೂರವೆರೆದ ಶುಭ್ರವರ್ಣವನುಳ್ಳ ಚಂದ್ರಮಂಡಲವೆನಿಸಿಕೊಂಬುದು ಆ ಚಂದ್ರಮಂಡಲದ ಪೂರ್ವದಳದ "ಅ" ಕಾರವೇ ಭವ, "ಇ" ಕಾರವೇ ಶರ್ವ, ಯಮದಳದ "ಉ" ಕಾರವೇ ರುದ್ರ, ನೈರುತ್ಯ ದಳದ "ಋ" ಕಾರವೇ ಪಶುಪತಿ, ವರುಣ ದಳದ "ಌ" ಕಾರವೇ ಉಗ್ರ, ವಾಯುವ್ಯದಳದ "ಎ" ಕಾರವೇ ಮಹಾದೇವ, ಕುಬೇರದಳದ "ಒ" ಕಾರವೇ ಭೀಮ, ಈಶಾನ್ಯದಳದ ಬಿಂದು ಯುಕ್ತವಾದ "ಅ"ವರ್ಣವೇ ಈಶಾನ್ಯವೆನಿಸುವುದು. ಈ ಎಂಟು ದಳಗಳು ಪೃಥ್ವಿಯಾದಿ ಆತ್ಮಾಂತ ಮಾದ ಅಷ್ಟತತ್ವವೆನಿಸಿಕೊಂಡು ಆ ಪರಶಿವಲಿಂಗದ ಅಷ್ಟ ತನುಸಂಬಂಧ ಮಾಗಿರ್ಪವು. ಆ ದಳದ ವರ್ಣಂಗಳೇ ಆಯಾಯ ತತ್ವಾಧಿಷ್ಠಾನಮಾದ ಪೂರ್ವೋಕ್ತಾಷ್ಟ ರುದ್ರ ಮೂರ್ತಿಗಳೆನೆಸಿಪ್ಪುವು. ಆ ಇಂದ್ರಾದಿ ದಳಂಗಳ ಮಧ್ಯೆ ಮಧ್ಯದ ವಿದಿಕ್ಕಿನ (?) ದಳಂಗಳಲ್ಲಿರ್ಪ "ಆ" ಕಾರವೇ ಉಮೇಶ್ವರ, "ಈ" ಕಾರವೇ ಚಂಡೇಶ್ವರ, "ಊ" ಕಾರವೇ ನಂದಿಕೇಶ್ವರ, "ೠ" ಕಾರವೇ ಮಹಾಕಾಳ, "ೡ" ಕಾರವೇ ಭೃಂಗಿರೀಟಿ, "ಐ" ಕಾರವೇ ಗಣೇಶ್ವರ, "ಔ" ಕಾರವೇ ವೃಷಭೇಶ್ವರ, "ಅಃ" ಕಾರವೇ ಷಣ್ಮುಖ ರೆಂದೆನಿಸಿಕೊಂಬುದು. ಈ ಗಣಾಷ್ಟಕವೇ ಪ್ರಮಥ ವರ್ಗವೆನಿಸುವುದು. ಷೋಡಶ ದಳಂಗಳನುಳ್ಳ ಚಂದ್ರಮಂಡಲದ ಬಹಿರ್ಭಾಗದಾವರಣವೇ ಬಾಹ್ಯಾಂತರಂಗ ಕ್ಕೋಳ್ ರಜೋಗುಣಸಮಾನಮಾದ ಬ್ರಹ್ಮತತ್ವ'ಸಂಜ್ಞಿತಮಾಗಿ ಸೂರ್ಯ ಮಂಡಲಮೆನಿಸುವುದು. ಅದು ನಸು ಬಿಳುಪಿನೊಳ್ ಕೂಡಿದ ಅರುಣ

ವರ್ಣವನುಳ್ಳದು. ಆ ಮಂಡಲವು ಮೂವತ್ತೆರಡು ದಳಂಗಳನುಳ್ಳದು. ಆ ಮಂಡಲದ ಪೂರ್ವಾದಿಯಾದ ದಳಂಗಳ ವಿಕ್ರಮದಿಂದಿರ್ಪ ಕ ಕಾರಾದಿ ಜ ಕಾರಾಂತ್ಯವಾದ ಎಂಟು ಪ್ರಣಮಂಗಳೇ ತರುವಾಯಿಂ ಅನಂತ ಸೂಕ್ಷ್ಮ, ಶಿವೋತ್ತಮ, ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ, ಶಿಖಂಡಿಯರೆಂಬ ಅಷ್ಟ ವಿದ್ಯೇಶ್ವರರೆನಿಸಿರ್ಪವು. ಝ ಕಾರಾದಿ ತ ಕಾರಾಂತವಾದ ಎಂಟು ಪ್ರಣಮಂಗಳೇ ಕ್ರಮದಿಂ ಇಂದ್ರಾದಿ ಈಶಾನಾಂತವಾದಷ್ಟ ದಿಕ್ಪಾಲಕರೆನಿಸಿರ್ಪರು. ಥ ಕಾರಾದಿ ಭ ಕಾರಾಂತವಾದ ಎಂಟು ವರ್ಣಂಗಳೇ ಪರಿಪಿಡಿಯಿಂ ಧರ, ಧ್ರುವ, ಸೋಮ, ಆಪ, ನೀಲ, ನಳ, ಪ್ರತ್ಯೂಷ, ಪ್ರಭಾವರೆಂಬ ಅಷ್ಟವಸುಗಳೆನಿಸಿಕೊಂಬುವು. ಈ ನೀಲ, ನಳನೆಂಬವರ್ಗೆ ಕೆಲವು ಶಾಸ್ತ್ರಂಗಳಲ್ಲಿ ಅನಿಲ, ಅನಲನೆಂಬ ನಾಮಂಗಳುಂಟಾಗಿರ್ಪವು. ಇಂತು ಇಪ್ಪತ್ತುನಾಲ್ಕು ಅಕ್ಷರಂಗಳು ವಿಕಲಾಕ್ಷರಗಳೆನಿಸಿಕೊಂಡು ಆ ಸೂರ್ಯಮಂಡಲದ ಇಪ್ಪತ್ತುನಾಲ್ಕು ದಳಂಗಳಲ್ಲಿ ಪೂರ್ವೋಕ್ತ ತ್ರಿಭೇದದಿಂದ ಇರುತಿರ್ಪವು. ಈ ಮಂಡಲದಲ್ಲಿ ನಾಲ್ಕ ಕ್ಕೊಂದುಳಿದು ಎಣಿಸಿದಲ್ಲಿ ಎಂಟು ಶೂನ್ಯದಳಗಳಿರ್ಪವು. ಅದೇನು ಕಾರಣವೆಂದೊಡೆ ತ್ರಿಗುಣಾತ್ಮಕವಾದ ಮಂಡಲತ್ರಯದ ಗುಣಾತೀತವಾದ ಜ್ಯೋತಿರ್ಮಂಡಲದ ದಳಂಗಳೈವತ್ತೆರಡಕ್ಕೆ ಸೂಕ್ಷ್ಮ ಕರ್ಣಿಕಾ ಬೀಜವಾದ ಶಿವಾರ್ಣ (?) ಸಹಿತವಾಗಿ ಳಕಾರ ಲಕಾರ ಅಂತರ್ಗತವಾದುದರಿಂ ಐವತ್ತೊಂದು ಪ್ರಣವಂಗಳು ಸಂಬಂಧವಾಗಿರ್ಪವು. ಈ ಶಿವಚಕ್ರವೇ ಶಿವಲೋಕವೆನಿಸುವುದಾಗಿ ಅನಕ್ಷರಾತ್ಮಕವಾದ ಎಂಟು ದಳಂಗಳು ಆ ಪುರದ ಎಂಟು ದ್ವಾರಗಳಾಗಿರ್ಪವು. ಈ ದ್ವಾರಂಗಳ ಹೊರವಳಯದಲ್ಲಿ ಕ್ರಮದಿಂ ಇಂದ್ರಾದಿಯಾದ ಎಂಟು ದಿಕ್ಪಾಲಕರು ವಾಸ್ತವ ದೇವತೆಗಳು ಕಾದಿರ್ಪರು. ಆ ಕ್ರಮವೆಂತೆಂದೊಡೆ:— ಪೂರ್ವ ದ್ವಾರಮಂ ಇಂದ್ರ, ಸತ್ಯ, ಭೃಂಗಿ, ಅಂತರ್ಲಕ್ಷ್ಯರೆಂಬ ಈ ನಾಲ್ವರು ಕಾಯ್ದಿರ್ಪರು. ಅಗ್ನಿದಿಕ್ಕಿನ ದ್ವಾರವಮಂ, ಅಗ್ನಿ, ಮಾಷ, ವಿಧಿ, ದಮನರೆಂಬ ನಾಲ್ವರು ಕಾದಿರ್ಪರು. ಯಮದಿಕ್ಕಿನ ದ್ವಾರಮಂ ಯಮ ಭಾಸ್ಕರ ಪುಷ್ಪದಂತ, ಬಲಾಟನೆಂಬ ಈ ನಾಲ್ವರು ಕಾದಿರ್ಪರು. ನೈಋತ್ಯ ದಿಕ್ಕಿನ ದ್ವಾರಮಂ ನೈರುತ್ಯ, ದವುವಾರಿಕ (?) ಸುಗ್ರೀವ, ವರುಣರೆಂಬ ಈ ನಾಲ್ವರು ಕಾಯ್ದಿರ್ಪರು. ವರುಣ ದಿಕ್ಕಿನ ದ್ವಾರಮಂ ವರುಣ, ಅಸುರ, ಗಂಹರ, ವೇಗರೆಂಬ ಈ ನಾಲ್ವರು ಕಾದಿರ್ಪರು. ವಾಯುವ್ಯ ದಿಕ್ಕಿನ ದ್ವಾರಮಂ ವಾಯುವ್ಯ, ನಾಗ, ಮುಖ್ಯ, ಸೋಮರೆಂಬ ಈ ನಾಲ್ವರು

ಕಾದಿರ್ಪ೯ರು. ಕುಬೇರದಿಕ್ಕಿನ ದ್ವಾರವುಂ ಕುಬೇರ, ಅಘಹರ, ದಿತಿ, ಅದಿತಿ ಎಂಬ ಈ ನಾಲ್ವರು ಕಾದಿರ್ಪ೯ರು. ಈಶಾನ್ಯದಿಕ್ಕಿನ ದ್ವಾರವುಂ ಈಶಾನ್ಯ ಪರ್ಜನ್ಯ, ಜಯಂತ, ಸಂಕ್ರಂದನರೆಂಬ ಈ ನಾಲ್ವರು ಕಾದಿರ್ಪ೯ರು. ಇಂತು ಗುಣತ್ರಯು, ವರ್ಣತ್ರಯು, ಅವಸ್ಥಾತ್ರಯು ತನುತ್ರಯು, ಜೀವತ್ರಯು, ಆತ್ಮ ತ್ರಯು, ತತ್ವತ್ರಯು, ಅಕ್ಷರತ್ರಯು, ಲಿಂಗತ್ರಯಾದಿ ಸಂಜ್ಞಿತವಾದ ಮಂಡಲ ತ್ರಯಂಗಳ ಗರ್ಭೀಕರಿಸಿಕೊಂಡು ತಾಲು ಮೂಲ ದ್ವಾದಶಾಂತದೊಳಿರ್ಪ ಶಿವಶಕ್ತಿಗಳ ಶ್ರೀಗುರೂಕ್ತ ಮುದ್ರಾರೂಪಿನಿಂದೇಕೀಕರಿಸಿದಲ್ಲಿ ಆ ನಿರಂಜನ ಬ್ರಹ್ಮವು ಪ್ರಥಮದಲ್ಲಿ ಚಿಣಿ ಎಂದೂ, ದ್ವಿತೀಯದಲ್ಲಿ ಚಿಣಿ ಚಿಣಿ ಎಂದೂ ತೃತೀಯದಲ್ಲಿ ಘಂಟಾನಾದವೆಂದೂ, ಚತುರ್ಥದಲ್ಲಿ ವೇಣುಸ್ವರವೆಂದೂ, ಪಂಚಮದಲ್ಲಿ ಭೇರಿನಾದವೆಂದೂ, ಷಷ್ಠಮದಲ್ಲಿ ಶಂಖಧ್ವನವೆಂದೂ, ಸಪ್ತ ಮದಲ್ಲಿ ವೀಣಾರವವೆಂದೂ ಅಷ್ಟಮದಲ್ಲಿ ಕಹಳಾಧ್ವನಿಯೆಂದೂ ನವಮ ದಲ್ಲಿ ಮೃದಂಗನಿನದವೆಂದೂ, ದಶಮದಲ್ಲಿ ಮೇಘಘೋಷವೆಂದೂ, ಶೃತಿಗಳಿಂ ಕುರುಹು ಹಿಡಿಯಲ್ಪಟ್ಟ ದಶನಾದಂಗಳಲ್ಲದನಂತ ನಾದರೂಪವಾಗಿ ಆ ಶೃತಿಗಳಿಂ ಲಕ್ಷಿಸಲ್ಪಟ್ಟ ೧ಶಕಾಂತಿಮಯ ಪ್ರತ್ಯಯಂಗಳಲ್ಲದನಂತ ಪ್ರಕಾ ಶಮಯ ಬಿಂದುರೂಪವಾಗಿ ಆ ಶೃತಿಗಳಿಂ ಅರಿಯಲ್ಪಟ್ಟ ಆರು ಮೂವ ತ್ತೆಂಟು ತೆರನಲ್ಲದಸಂಖ್ಯಾತ ಕಲಾರೂಪವಾಗಿ ವರ್ಣತ್ರಯಾತ್ಮಕದಿಂ ರಾಜಿಸುತಿರ್ಪುದು. ಇಂತಪ್ಪ ಸ್ವಯಂಭು ನಿಷ್ಕಲ ಮಹಾಲಿಂಗಕ್ಕೆ ಮಣಿ ಘೃಣಿ(?)ನ್ಯಾಯದಿಂದಂಗವೆನಿಸಿದ ಈ ಶಾಂಭವಿಯಲ್ಲಿ ಪೂರ್ವೋಕ್ತ ನವಚಕ್ರಂಗಳು ಸಂಬಂಧಿಸಿರ್ಪುವದರ ತಾತ್ಪರ್ಯವೆಂತೆಂದೊಡೆಃ— ಅಗ್ನಿ ಮಂಡಲದ ಎಂಟು ದಳದಲ್ಲಿ ವ, ಶ, ಷ, ಸ ಎಂಬ ನಾಲ್ಕು ಪ್ರಣ ವಂಗಳಿರ್ಪ ದಳಂಗಳೇ ಆಧಾರ ಚಕ್ರವಹುದು. ಆ ಕರ್ಣಿಕಾ ಬೀಜ ಮಾದ ಆಚಾರಲಿಂಗವಾ ನಿಷ್ಕಲ ಶಿವಲಿಂಗದ ತಾರಕಾಕೃತಿಯೊಳೊಂದಿ ರುತಿರ್ಪುದು. ಆ ಅಗ್ನಿಮಂಡಲದ ಉಳಿದ ನಾಲ್ಕು ದಳಂಗಳು ಮೂವ ತ್ತೆರಡು ದಳಂಗಳನುಳ್ಳ ಸೂರ್ಯ ಮಂಡಲದ ಈಶಾನ್ಯ ದಿಕ್ಕಿನ ಎರಡು ದಳಂಗಳು ಸಹಿತವಾಗಿ ಕ್ರಮದಿಂ, ಬ, ಭ, ಮ, ಯ, ರ, ಲ ಎಂಬ ಅಕ್ಷರವನುಳ್ಳ ಷಡ್ದಳಂಗಳಲ್ಲಿ ಸ್ವಾಧಿಷ್ಠಾನ ಚಕ್ರಸಂಬಂಧವಾಗಿರ್ಪುದು. ಆ ಕರ್ಣಿಕಾ ಬೀಜರೂಪವಾದ ಗುರುಲಿಂಗವು ಈ ಪರಶಿವಲಿಂಗದ ದಂಡ ಕಾಕೃತಿಯಲ್ಲಿ ಸಂಬಂಧವಾಗಿರ್ಪುದು. ಈ ಸೂರ್ಯಮಂಡಲದ ಪಶ್ಚಿಮ ದಿಕ್ಕಿನ "ಡ" ಕಾರಾದಿ "ಫ" ಕಾರಾಂತವಾದ ದಶ ದಳಂಗಳಲ್ಲಿ ಮಣಿ ಪೂರಕ ಚಕ್ರಸಂಬಂಧವಾಗಿರ್ಪುದು. ಅದರ ಕರ್ಣಿಕಾರೂಪವಾದ

ಶಿವಲಿಂಗವೇ ಈ ಪರಶಿವಲಿಂಗದ ಕುಂಡಲಾಕೃತಿಯೊಳಡಗಿರ್ಪುದು. ಈ ಸೂರ್ಯ ಮಂಡಲದ ಪೂರ್ವಾದಿಯಾಗಿ ಕ್ರಮದಿಂ "ಕ" ಕಾರಾದಿಯಾಗಿ "ಠ" ಕಾರಾಂತವಾಗಿರ್ಪ ದ್ವಾದಶ ದಳಂಗಳಲ್ಲಿ ಅನಾಹತ ಚಕ್ರ ಸಂಬಂಧವಾಗಿರ್ಪುದು. ಅದರ ಕರ್ಣಿಕಾ ಬೀಜರೂಪವಾದ ಜಂಗಮ ಲಿಂಗವೇ ಈ ಪರಶಿವಲಿಂಗದ ಅರ್ಧ ಚಂದ್ರಾಕೃತಿಯಲ್ಲಿ ಸಂಬಂಧವಾಗಿರ್ಪುದು. ಆ ಸೂರ್ಯ ಮಂಡಲದಿಂದೊಳಗಣ ಚಂದ್ರಮಂಡಲದ ಪೂರ್ವಾದಿಯಾಗಿ ಅಕಾರಾದಿ ಅಃ ಕಾರಾಂತ ನಾಗಿ ಕ್ರಮದಿಂದೊಪ್ಪುವ ಹದಿನಾರು ದಳಂಗಳಲ್ಲಿ ವಿಶುದ್ಧಿ ಚಕ್ರಸಂಬಂಧವಾಗಿರ್ಪುದು. ಅದರ ಕರ್ಣಿಕಾ ಬೀಜರೂಪವಾದ ಪ್ರಸಾದಲಿಂಗವು ಈ ಪರಶಿವಲಿಂಗದ ದರ್ಪಣಾಕೃತಿಯಲ್ಲಿ ವ್ಯಾಪಿಸಿರ್ಪುದು. ಆ ಪರಶಿವಲಿಂಗದ ಪೀಠವಾಗಿ ಬಿಂದು ಸಹಿತವಾದ ಪ್ರಣವವು ಆ ಜ್ಯೋತಿ ಮಂಡಲದ ಬಿಂದುಸಹಿತವಾದ " ಸ " ಕಾರವು ಸಹಿತವಾಗಿ ಆತ್ಮ ಪ್ರಸಾದ ಗರ್ಭೀಕೃತವಾದ ಆಜ್ಞಾಚಕ್ರವೆನಿಸುವದು. ಆ ಕರ್ಣಿಕಾಬೀಜರೂಪವಾದ ಮಹಾಲಿಂಗವು ಪರಶಿವಲಿಂಗದ ಜ್ಯೋತಿರಾಕೃತಿಯಲ್ಲಿ ಸಂಬಂಧವಾಗಿರ್ಪುದು. ಆ ಜ್ಯೋತಿಮಂಡಲದ ಉಳಿದ ಮೂರುದಳಂಗಳಲ್ಲಿ ತ್ರಿದಳರೂಪವಾದ ಶಿಖಾಚಕ್ರಸಂಬಂಧವಾಗಿರ್ಪುದು. ಅದರ ಬೀಜರೂಪವಾದ ಶೂನ್ಯ ಲಿಂಗವು ಈ ಪರಶಿವಲಿಂಗದ ಕುಂಡಲಾರ್ಧ ಚಂದ್ರಾಕೃತಿಗಳಲ್ಲಿ ಸಂಬಂಧವಾಗಿರ್ಪುದು. ಆ ಚತುಃ ಪತ್ರದ ಮಧ್ಯದ ಬಟ್ಟುವಿನಲ್ಲಿ ಏಕದಳವನುಳ್ಳ ಪಶ್ಚಿಮ ಚಕ್ರಸಂಬಂಧವಾಗಿರ್ಪುದು. ಅದರ ಕರ್ಣಿಕಾಮಧ್ಯದಲ್ಲಿ ಬೀಜರೂಪವಾದ ನಿರಂಜನಲಿಂಗವು ಈ ಪರಶಿವಲಿಂಗದ ದರ್ಪಣಜ್ಯೋತಿರಾಕೃತಿಯಲ್ಲಿ ಸಂಬಂಧ ವಾಗಿರ್ಪುದು. ಇಂತಪ್ಪ ಚಕ್ರಂಗಳನ್ನು ತನ್ನೊಳಗು ಮಾಡಿಕೊಂಡು ಬೆಳಗುತಿರ್ಪ ಸೂಕ್ಷ್ಮಕರ್ಣಿಕಾದ್ವಾರವೇ ಸಹಸ್ರದಳೋಪೇತವಾದ ಬ್ರಹ್ಮಚಕ್ರವೆನಿಸುವುದು. ಆ ಕರ್ಣಿಕಾ ಬೀಜರೂಪವಾದ ನಿಷ್ಕಲ ಲಿಂಗವು ಈ ಪರಶಿವಲಿಂಗದ ತಾರೆದಂಡೆಗಳಲ್ಲಿ ಸಂಬಂಧವಾಗಿರ್ಪುದು. ಹೀಗೆ ನವಚಕ್ರಂಗಳಂ ತನ್ನೊಳಗೇಕೀಕರಿಸಿಕೊಂಡು ನಿರುಪಮ ಪ್ರಕಾಶದಿಂ ಬೆಳಗುತಿರ್ಪ ಶಾಂಭವೀ ಚಕ್ರವೇ ಹತ್ತನೆಯ ಚಕ್ರವೆನಿಸುವುದು. ಅದರ ಕರ್ಣಿಕಾ ಮಧ್ಯದಲ್ಲಿ ನಾದ, ಗುಹ್ಯ, ಪರ, ಜೀವ, ದೇಹಿ, ಭೂತ, ಪಂಚಮ, ಸಾಂತ, ತತ್ವಾಂತ, ಭೂತಾಂತ, ಶಿವಬೀಜ, ಶೂನ್ಯ, ಅವ್ಯಯ ವೆಂಬ ತ್ರಯೋದಶ ಸಂಜ್ಞೆವಿಡಿದು ಮಾಯಾ ಕಾಳಿಕಾ ರಹಿತವಾದ ಈ ನಿರಂಜನ ಪರಶಿವಲಿಂಗವೂ ತಾನೇ ಶುದ್ಧ ಪ್ರಸಾದ

ವೆನಿಸಿ ಬೆಳಗುತಿರ್ಪುದೆಂಬುದೇ ಪರಮ ರಹಸ್ಯಾರ್ಥಮಕ್ಕುಂ. ಈ ತ್ರಯೋದಶ ನಾಮಂಗಳ ಲಕ್ಷಣವೆಂತೆಂದೊಡೆ, ಸೂಕ್ಷ್ಮತ್ವದಿಂ ಪರಮ ನಾದ ಸ್ವರೂಪಮಪ್ಪುದರಿಂ, ನಾದವೆನಿಸಿಕೊಂಬುದು. ಸಚರಾಚರ ವಿಷಯಂಗಳೊಳು ಸ್ವತಶ್ಚೇತನಾತ್ಮಕಮಪ್ಪುದರಿಂ ಗುಹ್ಯವೆನಿಸಿಕೊಂಬುದು. "ವಾಚಾತೀತಂ, ಮನಾತೀತಂ, ಭಾವಾತೀತಂ, ನಿರಂಜನಂ" ಎಂಬ ಆಗಮ ಪ್ರಮಾಣದಿಂ ವಾಙ್ಮನೋಭಾವಂಗಳಿಗೆ ಪರಮಮಪ್ಪುದರಿಂ ಪರವೆನಿಸಿಕೊಂಬುದು. ಪಾರಮಾರ್ಥ ವಿಚಾರದಲ್ಲಿ ಅಂಗಲಿಂಗ ರೂಪಮಾದ ಜೀವೇಶ್ವರರ್ಗೆ ಅಭೇದ ಮಪ್ಪುದರಿಂ, ಬೀಜವೃಕ್ಷ ನ್ಯಾಯದಂತೆ ತಾನೇ ಜೀವನೆನಿಸಿಕೊಂಬುದು. ಶಿವತತ್ವವೇ ಆದಿಯಾಗಿ ಪೃಥ್ವೀತತ್ವವೇ ಕಡೆಯಾಗಿ ಅಂಗವಿಡಿದು ಪರಿಣಮಿಸುವುದರಿಂ ದೇಹಿ ಎನಿಸುವುದು. ಭೌತಿಕಮಾದ ಕಾಯವು ಭ್ರಾಂತಿ ಚೈತನ್ಯಮಾದ ಜೀವವು ತನಗಿಲ್ಲದೆ ಚಿನ್ಮಾತ್ರ ರೂಪಿನಿಂ ಮಹಾನುಭಾವಿಗಳೊಳ್ ಬೆಳಗುತಿರ್ಪುದರಿಂ ಭೂತವೆನಿಸಿಕೊಂಬುದು. ಪೃಥ್ವ್ಯಾದ್ಯಾಕಾಶಾಂತಮಾದ ಭೂತಂಗಳಲ್ಲಿ ಐದನೆಯದಾದ ಆಕಾಶಕ್ಕೆ ಕಾರಣಮಾದ ಬೀಜಾಕ್ಷರ ತಾನೆಯಪ್ಪುದರಿಂ ಪಂಚಮವೆನಿಸಿಕೊಂಬುದು. ಮರಳಿ ವೈಕೃತಃ ಪ್ರಾಣಾಯಾಮಾದಿ ರೂಪದಿಂ ಮೂಲ ಪ್ರಣವದಿಂ ಜನಿತಮಾದ ಚಿನ್ನಾದ, ಚಿದ್ಬಿಂದು, ಚಿತ್ಕಳೆ, ಮೂಲ ಚಿತ್ತುಗಳೆಂಬ "ಅ, ಉ, ಮ, ಒ" ಎಂಬ ಚತುಃ ಪ್ರಣವಂಗಳಗ್ರ ಭಾಗದಲ್ಲಿ, ಅವಾಚ್ಯ ರೂಪಿನಿಂದೊಪ್ಪಿರ್ದುದಾಗಿಯೂ, ಪಂಚಮವೆನಿಸುವುದು. "ಸ" ಕಾರಕ್ಕೆ ಪರವಪ್ಪುದರಿಂ "ಸಾಂತ" ವೆನಿಸಿಕೊಂಬುದು. ನಿವೃತ್ತಿಕಲಾರೂಪಮಾದ ಪೃಥಿವ್ಯಾದಿಯಾಗಿ ಶಿವತತ್ವಾಂತಮಾದ ಷಟ್ತ್ರಿಂಶ ತತ್ವಂಗಳು ಪರಿಯಲ್ಲಿ ವಿರಾಜಿಸುತಿರ್ಪುದರಿಂ ತತ್ವಾಂತವೆನಿಸುವುದು. ಗಿರಿ ನದ್ಯಾದ್ಯ ಚೇತನ ಪದಾರ್ಥಂಗಳೊಳು, ಪಿಪೀಲಿಕಾದಿ ಬ್ರಹ್ಮಾಂತಮಾದ ಪ್ರಾಣಿಜಾತಂಗಳಲ್ಲಿ ತನಗೊಂದು ಕೊರತೆ ಇಲ್ಲದೆ ಪರಮಮಂಗಳ ಸ್ವರೂಪದಿಂ, ಶಿವಬೀಜವೆನಿಸಿಕೊಂಬುದು. ಕರಣಾತೀತದಿಂದನುಭವಕ್ಕಗಮ್ಯಮಪ್ಪುದರಿಂ, ಶೂನ್ಯವೆನಿಸಿಕೊಂಬುದು. ಕಾಲ, ದೇಶ, ಅವಸ್ಥೆ, ತನು, ಕರಣ, ಜೀವೇಶಾದಿಗಳ ಸೃಷ್ಟಿಸ್ಥಿತಿಲಯಂಗಳಲ್ಲಿ ಅನು (ಭೂತ) (?) ಮಾಗಿ ತನಗಾವ ಹಾನಿಯೂ ಇಲ್ಲದೆ ಪ್ರಜ್ವಲಿಸುತಿರ್ಪುದರಿಂ ಅವ್ಯಯವೆನಿಸುವುದು. ಇಂತು ತೋರ್ಪ ನಿರಂಜನ ಪರಶಿವಲಿಂಗವೇ ತನ್ನ ಚಿಚ್ಛಕ್ತಿ ಸ್ಫುರಣದಿಂ ಮುಂದೆ ಕಾರಣರೂಪಮಾದ ಸಕಲ ನಿಷ್ಕಲಾತ್ಮಕ ಮಹಾಲಿಂಗವೆನಿಸಿಕೊಳುತಿರ್ಕುಂ.

ಇಂತು ದಶಚಕ್ರಂಗಳ ತಾತ್ಪರ್ಯಾರ್ಥವಾದೊಡೆ ಶಾಖಾ ಪಲ್ಲವ ಕುಸುಮ ಫಲಾದಿಗಳಿಂದೊಪ್ಪುವ ಮಹಾವಟ ವೃಕ್ಷವನಾ ಬೀಜವೊಳಗೊಂಡಿರ್ಪಂತೆ ಸಕಲಾಗಮಶ್ರುತಿ ಸ್ಮೃತಿಪುರಾಣಗಳ ಆಧ್ಯಾತ್ಮಿಕಾರ್ಥಮಂ ಸಾರಪುರಾತನರ ವಚನಾನುಭವವನೊಳಗೊಂಡಿರುವುವು. ಆ ವಚನಾನುಭಾವದಿಂದಲೆ ಸ್ವಲ್ಪವಾದರೂ ಪಿಂಡ ಬ್ರಹ್ಮಾಂಡಯೋರೈಕ್ಯಂ ಎಂಬುದುಂಟಾಗಿ ಪಿಂಡಾಂಡ ವಿಚಾರಮಂ ವಿಸ್ತರಿಸಿ ಪೇಳ್ವಲ್ಲಿ ಬ್ರಹ್ಮಾಂಡ ವಿಚಾರವುಂಟೆಂಬುದನುಭವಸಿದ್ಧವಾಗಿ ಈ ದಶಚಕ್ರ ತಾತ್ಪರ್ಯವು ಸಕಲಾನುಭವವನುಳ್ಳದು.

ಇದನ್ನು ಅನಾದಿಭಕ್ತನಾದ ಸರ್ವಾಚಾರಸಂಪನ್ನನಾದ ಶತೇಕೋತ್ತರಸ್ಥಲಾನುಭವ ಗರ್ಭೀಕೃತ ಷಟ್ಸ್ಥಲಜ್ಞಾನಾರೂಢನಾದ ಶಿವಾಗಮೋಕ್ತ ಶ್ರೀ ವೀರಶೈವಾಚಾರವೇ ಶೀಲವಾಗುಳ್ಳ ಶೀಲವಂತ ಮುರಿಗಪ್ಪನೆಂಬ ಶಿವಶರಣಂಗೆ ಅತ್ಯಂತ ಕೃಪಾಕಟಾಕ್ಷದಿಂ ಶಿವಸಮಯ ವಾಂಛಲ್ಯದಿಂದಾ ಸದ್ಭಕ್ತನಮೇಲೆ ಅತಿ ಕೃಪೆಯಿಟ್ಟು ನಿರಘ ನಿರ್ಮಲ ನಿರ್ಭೇದ್ಯ ನಿರುಪಮ ನಿರ್ನಿಂದ್ಯ ನಿರ್ಗಣಿತ ನಿರಂಜನ ಲಿಂಗವೆನಿಸುವ ಸಿದ್ಧಲಿಂಗೇಶನು ನಿರೂಪಿಸಿದ ಮಹಾನುಭವ ಪ್ರಕಾಶಿಕೆಯುಂ ತತ್ಪ್ರಸಾದಬಲದಿಂದರಿದು ಅವಧರಿಸಿ ಅವಿರಳಾನಂದದಿಂ ಶಿವಗಣಚಕ್ರಕ್ಕೆ ಬಿನ್ನವಿಸಿ ಕೃತಕೃತ್ಯನಾದ ಶಿವಭಕ್ತರ ದಾಸನಾದ ನಿಜಲೀಲಾವಿನೋದದಿಂ ಸಿದ್ಧವಾದ ಅನ್ವರ್ಥನಾಮವನುಳ್ಳ ಸಿದ್ಧರಾಮೇಶ್ವರನೆಂಬ ಪ್ರಾಣಲಿಂಗ ಪ್ರಸಾದಿಯಾದ ಸಿದ್ಧರಾಮಯ್ಯ ನಾನು ಶ್ರೀ ಗುರುಸಿದ್ಧಲಿಂಗೇಶ್ವರ ಪ್ರಭುವೆ.

ಮಹಾನುಭವ ಪ್ರಕಾಶಿಕೆ ಪರಿಸಮಾಪ್ತ ಮಂಗಳ ಮಹಾ

ಘನತರದಾಡಂಬರಂ ನಿನಗೇನಿದ್ದೈ! ।
ತೃಣಸಮಮಪ್ಪ ತ್ರಿಪುರಂಗಳನುರಿಪಲ್ಕೆ! ।
ಮನದೊಲ್ ವರ್ತಿಪುದೆ ಪ್ರಭುವಾಂಛಿತಮನ್ಯ ತಂತ್ರದಿ ನಡೆವರಲ್ತು! ॥೧೮॥

ಪುರಮಥನನೆ! ನಿನ್ನ ಪಾದಾಬ್ಜಂಗಳಂ ।
ಹರಿ ಪೂಜಿಸುವಾಗ ಕಮಲ ಸಹಸ್ರದಿಂ ।
ಕೊರೆಯಾಗಲ್ ಪದ್ಮವೊಂದದ ಕೊಪ್ಪವಾತ್ಮಾಕ್ಷಿಯ ಕೀಳ್ತಿಟ್ಟನು ॥
ಪರಮೋತ್ಕೃಷ್ಟ ಭಕ್ತಿಯ ನೀಕ್ಷಿಸಿಯೊಲ್ದು ।
ಪರಸಿದೆ ಮೂಲೋಕ ರಕ್ಷಿಸುದಕೆ ತಕ್ಕ ।
ಪರತರ ಚಕ್ರಮಂ ದಯಪಾಲಿಸಿ ಭಕ್ತ ವತ್ಸಲನಹುದು ನೀನು ॥೧೯॥

ವರದನೆ! ಯಜಮಾನನಿಗೆ ಕ್ರತುಫಲವೀಯ ।
ದಿರೆ ನೀನಾವಾಗಳುಂ ಕುಡುವುದಕೆ ತತ್ ।
ಪರನಿಹೆ ಹವ್ಯಾದಿಯುರಿದಡಗುಗು ಪುರುಷನಾರಾಧನೆ ಫಲಿಸುಗುಂ ॥
ನೆರೆಯಜ್ಞಂಗಳಂ ಮಾಳ್ಪವರದರಿಂದೆ ।
ಕರವೀಕ್ಷಿಸಿ ನಿನ್ನ ನೋರ್ವನುಮಂ ವೇದ ।
ವರವಚನಂಗಳೊಳ್ ವಿಶ್ವಾಸಂದೊಟ್ಟು ಬೀಳ್ವರ್ ತತ್ಕರ್ಮದೆ ॥೨೦॥

ಶರಣದ! ಯಜ್ಞಕರ್ಮ ವಿಶಾರದ ದಕ್ಷ ।
ನಿರೆ ಯಜಮಾನನಸುರಾರಿ ಸುಪಾಲಕಂ ।
ವರ ಮುನಿಗಳ್ ಋತ್ವಿಜರ್ ಸುರನಿಕರಂ ಸಭಾಸದರಾಗುತಿರೆ ॥
ತೊರೆದಾಗ್ರಹದಿಂದೆ ಫಲದಾನಿಯ ನಿನ್ನ ।
ನಿರದಾದಕ್ಷನೆಸಗಲ್ ಕೆಟ್ಟುದು ನಿನ್ನೊ ।
ಳುರು ಭಕ್ತಿಯ ನಾನದೆನಿತಂ ಕ್ರತುಗಳಂ ಮಾಡಿದೊಡಂ ನಿಷ್ಫಲಂ ॥೨೧॥

ಒಡೆಯನೆ! ಶ್ರುತಿಸಮ್ಮತಂ ಕಾಲಕ್ರಮಂ ।
ಬಿಡಿದೈತಂದ ಶಿಷ್ಟಾಚಾರಂಗಳಂ ।
ನಡೆ ದೂರೀಕರಿಸಿ ತನ್ನವನೆಂಬಳ್ಕರದಿನುಣ್ಮುವ ಕರುಣಮಂ ॥
ಕಡೆಗಿಟ್ಟೋರ್ವಂ ದ್ವಿಜಂ ನಿನ್ನೊಳು ದ್ರೋಹ ।
ವಡಸಿದ ನಿಜತಾತ ನಡಿಯುಂ ಕಡಿಯಲ್ಕೆ ।
ತಡೆಯದುದಿಸಿ ಸ್ಥಿರಪದಂ ಗೊಟ್ಟೆಯ್ ನಿನ್ನ ಭಕ್ತಿಯೆ ಫಲಸಾಧನಂ ॥೨೨॥

ಮೃಡ ಮನ್ಮಥ ಶರಗಳಿಂದತಿ ಪೀಡಿತಂ ।
ಕಡುಮೋಹದಿ ಬೆಂದ ಬೊಮ್ಮಂ ನಿಜಸುತೆಯು ।
ನೊಡಗೂಡಲ್ ಬಲಾತ್ಕಾರದಿ ನುಜ್ಜುಗಿಸಲವಳಾದಳ್ ಹರಿಣಿಯು ॥
ತಡೆಯದೆ ಪಿಡಿದು ತಾನುಂ ಹರಿಣಾಕೃತಿಯು ।
ನಡೆ ಬೆಂಬತ್ತೆ ನೀನವನಂ ಭೇದಿಸಿದೆ ।
ಬಿಡದೆ ಬಿಯದನಾಗಿ ನಭಮಂ ಪೊಕ್ಕೊಡಂ ಕಾಂಬುವುದದನಿಂದಿಗಂ ॥೨೩॥

ವರದನೆ! ಲಾವಣ್ಯವತಿ ನಗಸುತೆ ತನ್ನೆ- ।
ದುರು ಬಿಲ್ವಿಡಿದುರಿದು ಬೀಳ್ದಿಹ ಮನ್ಮಥನ ।
ನುರೆಕಂಡುಂ ನಿನ್ನನಿಚ್ಛಿಸಿ ತಪಮಾಚರಿಸಿದಳ್ ಕಟ್ಟುಗ್ರಮಂ ॥
ಪರಮ ತಪಕೊಲ್ದು ಯಮಿ ನೀನಿರ್ದೊಡಂ ।
ಧರಿಸಿದೆಯವಳನೆಡಭಾಗದೆ ಕಂಡದಂ
ನೆರೆ ಬಗೆದಳ್ ಸ್ತ್ರೈಣನಿವನಿಂದೇ ನಿಜಂ ಸ್ತ್ರೀಯರ್ ಮುಗ್ಧೆಯರಲಾ! ॥೨೪॥

ಸ್ಮರಹರ! ನಿನ್ನ ವಾಸಂ ಮಸಣದೊಳು ಸಹ ।
ಚರರು ಪಿಶಾಚಿಗಳು ಪ್ರಿಯಲೇಪಂ ಜನರು ।
ಜರೆವ ಚಿತಾಭಸ್ಮ ಮುರುಹಾರಂ ನಿನಗೆ ರುಂಡಂಗಳ ಮಾಲೆಯು ॥
ಇರುತಿರಲಿಂತಮಂಗಳ ನಡೆವಳಿಕೆಗಳ್ ।
ನಿರುತಂ ನಿನ್ನೊಳಾದೊಡೆ ನೀಂ ಭಕ್ತರ್ಗೆ ।
ನೆರೆ ದಯಪಾಲಿಸುವೆ ಮಂಗಳಗಳನಿರದೆ ಸರ್ವಂ ಕಡು ಸೋಜಿಗಂ ॥೨೫॥

ಯಮಿಗಳ್ ಪರಮಾತ್ಮನೊಳ್ ಮನನೆಡಿಸಿಯು ।
ತ್ತಮ ತೆರದಿಂ ಪ್ರಾಣ ವಾಯುವ ತಡೆವಿಡಿದು ।
ಸಮುದಿತ ರೋಮಾಂಚರಾಗಿ ಪ್ರಮೋದ ಬಾಷ್ಪಂಗಳನುದುರಿಸುತ್ತಂ ॥
ರಮಣೀಯಂ ವಾಗತೀತಂ ವಸ್ತುವಂ ।
ಸುಮನಸಿನೊಳ್ ನೋಡಿಯಮೃತ ಸರೋವರದೊ ।
ಳಮಮ ಮುಳುಂಗಿದೊಲ್ ನಲಿವರು ಕಾಣು ನೀನದೆ ಪರವಸ್ತುವಿ
ರ್ಪಯ್ ॥೨೬॥

ನೀಂ ರವಿ ನೀನಿಂದು ನೀನನಿಲಂ ಮತ್ತೆ ।
ನೀಂ ರೋಹಿತ ಹಯಂ ನೀಂ ನೀರ್ ನೀಂ ನಭಂ ।
ನೀಂ ರಸೆ ನೀನಾತ್ಮನೆಂದಷ್ಟಪ್ರಕಾರಂ ತಿಳಿವರ್ ಸುಜ್ಞರು ॥

ಅಂ ರುಚಿರಾಕ್ಷಿಯಿಂ ನೋಡಲ್ ಸರ್ವತ್ರ ।
ನೀಂ ರಂಜಿಪುದೊಂದೆ ತೋರ್ಪುದು ಪೆರತರಿಯೆ ।
ನೇಂ ರಮಣೀಯಮೀ ನಿನ್ನುರು ವಿಶ್ವರೂಪಂ ಪರಮಾತ್ಮ ಶಂಭೋ ॥೨೭॥

ಶರಣದ ನೀನಿರ್ಪೆ ವ್ಯಷ್ಟಿ ಸಮಷ್ಟಿಯಿಂ ।
ಬೆರಡುಂ ರೂಪಗಳಿನೋಂಪದ ಅ-ಉ ಮಾ ।
ಕ್ಷರಗಳ್ ಸೂಚಿಪುವು ಮೂರ್ವೇದಂಗಳಂ ಮೂರ್ಗುಣ ಮೂರ್ಜಗಗಳಂ ||
ವರ ಮೂರ್ದೇವರ್ಕಳಂ ವ್ಯಷ್ಟಿಯಿದಾಯ್ತು ।
ಪರನಾದಂ ಬಿಂದು ಕಲೆಯೆಂಬತಿ ಸೂಕ್ಷ್ಮ ।
ಪರಗಳಸೇರ್ದ್ಕೆ ತವ ಪೂರ್ಣಸುತೇಜವಂ ಪ್ರಕಟಿಪುದದೆ ಸಮಷ್ಟಿ ॥೨೮॥

ಭವ ಶರ್ವಂ ರುದ್ರ ಪಶುಪತಿ ಯುಗ್ರ ಬೆಳ
ಗುವ ಭೀಮಂ ಮಹಾನೀಶಾನಂ ಹೀಗೆ ।
ಶಿವ ನಿನ್ನೆಂಟು ನಾಮದಿ ಸಂಬೋಧಿಪರು ಲೌಕಿಕದೊಳ್ ಮನುಜರು ॥
ಇವುಗಳಿಗಂತ್ಯದೊಳ್ ಸೇರಿಸೆ ದೇವ ಶ ।
ಬ್ದವ ಕಂಗೊಳಿಸುವುವು ಸಂಪೂರ್ಣವೆಸರ್ಗ ।
ಳವುಗಳಿನುದಿತಮಪ್ಪುರು ತೇಜೋರೂಪಿ ನಿನಗಿರ್ಕೆನ್ನನತಿಗಳ್ ॥೨೯॥

ನತಿಯಾಸನ್ನಂಗೆ ವನರುಚಿ ಶರ್ವಂಗೆ ।
ನತಿಯತಿದೂರಂಗೆ ಚೆಲ್ವ ಮಹೇಶಂಗೆ ।
ನತಿಬಲು ಸೂಕ್ಷ್ಮಂಗೆ ಪರಮ ಮಹತ್ತ್ವಂಗೆ ನತಿಮದನಾಂತಕಂಗೆ ॥
ನತಿಕಡು ಮುದುಕರಿಗೆ ಮುಕ್ಕಣ್ಣಂಗೆ ।
ನತಿಘನ ತರುಣಂಗೆ ವಿರಹಿತ ಮರಣಂಗೆ ;
ನತಿವಿಶ್ವಾಂಗಂಗೆ ವಿಶ್ವೋತ್ತೀರ್ಣಂಗೆ ನತಿಯುಲ್ಲಾದವಂಗೆ ॥೩೦॥

ಪುಟ್ಟಿಸುವಾಗ ಸೃಷ್ಟಿಯನುರೆ ಬಹುರಜಂ ।
ಬಟ್ಟೆ ಭವಾಖ್ಯನಾದಂಗೆ ನಮಸ್ಕರ ।
ಮಿಟ್ಟಣಿಸಿದ ಸತ್ವದಿಂ ಲೋಕಂಗಳಂ ಕಾವಮೃಡಂಗೆ ನಮನಂ ॥
ಕುಟ್ಟಿಯದಂ ನಾಶಗೊಳಿಸುವ ಕಾಲದೊಳ್ ।
ದಟ್ಟತಮಂದಾಳ್ದ ಹರಗೆ ನಮಸ್ಕೃತಿ ।
ಬಿಟ್ಟು ತ್ರಿಗುಣಗಳಂ ನಿಜತೇಜದಿ ಪೊಳೆವ ಶಿವನಿಗನೇಕ ನಮನಂ ॥೩೧॥

ವರದಾನಿಯೆ ನಿನ್ನ ತ್ರಿಗುಣಗಳಂ ದಾಂಟೆ ।
ದುರುತರ ಮಹಿಮೆಯೆತ್ತೆನ್ನಯ ದುಃಖದಿಂ ।
ಕೊರಗುವ ಮತಿಹೀನ ಮನವೆತ್ತೆಂದಳ್ಕಿಯಜ್ಞಾನನು ಮಾನಿಸುತಿರೆ ॥
ನೆರೆಯುತ್ತೀ ಜನಂಗುಡೆ ಸದ್ಭಕ್ತಿ ಚೀ
ತರಿಸೀ ಪಾಮರಂ ಸಲ್ಲಿಸಿದಂ ಸ್ತೋತ್ರ ।
ದರವಿಂದದಹಾರವಮಂ ನಿನ್ನುರು ದಿವ್ಯ ಪಾದಂಗಳ್ಗೆ ನಯದಿಂ ॥೩೨॥
ಗಿರಿ ರಜತ ದೊಳನಿತು ಕಾಡಿಗೆಯಂ ಬೆರೆದು ।
ಮೆರೆವಂಬುಧಿಯು ನೆ ಮಷೀ ಪಾತ್ರೆಯ ನೆಸಗಿ ।
ಸುರ ತರುವರದ ಶಾಖೆಯ ಲೇಖನಿಗೊಂಡು ಧರೆಯೆಂಬುರುಪತ್ರದೆ ॥
ವರವಾಗ್ದೇವಿ ತಾ ನಿರದಾವಾಗಳುಂ ।
ಬರೆಯುಲ್ ನಿನ್ನ ಸೀವಾತೀತಂ ಗುಣಗ- ।
ಳು ರು ರಾ ಶಿಯ ಲೇಶಮುಂ ತೀರದು ತಿಸುಳಿ! ಗಡ! ಪಾಡೇನಿತರರದು॥ ೩೩
ಪುರಹರ! ಮುನ್ನಾವ ಜನ್ಮದೊಳಾಂ ನಿನ್ನ ।
ವರ ಪಾದಂಗಳಂ ಕ್ಷಣಮುಂ ವಂದಿಸದೆ ।
ಮರೆತುದರಿಂದೀಗ ಜನ್ಮಂ ಬಂದಿಹುದು. ನಮಸಿದೆ ನೀಗಳದರಿಂ ॥
ದೊರೆವುದೆನಗೆಮುಕ್ತಿ ದಿಟದಿಂ ಮುಂದೆಂದು ।
ಬರಲಾರದು ದೇಹ ಧಾರಣ ಮಾಗಳಂ — ।
ತರಿಪೆ ನಮನಕ್ಕೆ ಕ್ಷಮಿಪುದುದ ಯದಿಂದ ಲಾಯೀತಪ್ಪೆರಡುಮಂ ॥ ೩೪
ಸುರಮುನಿದೈತ್ಯರಿಂದರ್ಚನೆಯಂ ಕೊಳ್ವ ।
ಪರಿಕಲ್ಪಿತ ಸುಗುಣಗಳ ಮಹಿಮೆಯನಾಳ್ದ ।
ಮೆರೆವ ತ್ರಿಗುಣಗಳ್ಗೆ ಮೀರಿಹ ಚಂದ್ರಶೇಖನ ಪವಿತ್ರನುತಿಯಂ ॥
ಪರಮಸುಗುಣಿ ಪುಷ್ಪದಂತಂ ಸಂಸ್ಕೃತದೊ ।
ಳೊರೆದಂ ಲಘು ವೃತ್ತಗಳಿನುರುಕೌಶಲದಿ ।
ಬೆರಿಸಿ ಪರಾತ್ಪರನ ತಾತ್ವಿಕ ಗುಣಗಳಂ ನಾಂಟುವ ತೆರದಿ ಮನಕೆ ॥೩೫॥
ದಿನದಿನಕಂ ಧೂರ್ಜಟಿಯ ಸ್ತೋತ್ರಮನಿದಂ ।
ಘನಭಕ್ತಿಯನಾಂತು ಶುದ್ಧಾಂತಃಕರಣಿ ।
ಮನುಜಂ ಪಠಿಸಲ್ಕವಂ ಮರಣಾಂತದೊಳ್ ಶಿವಲೋಕವನ್ನೈದುವಂ ॥
ಅನವರತಂ ರುದ್ರ ತುಲ್ಯಂ ಪೂಜಿಪಂ ।
ಧನಧಾನ್ಯಂ ಪುತ್ರ ಮಿತ್ರ ಕಲತ್ರರಿಂ ।
ಬಿನದಿಸುತಂ ಕೀರ್ತಿ ದೀರ್ಘಾಯುಷವೊಂದಿಬಾಳ್ವಂ ಭೂತಲದೊಳು ॥೩೬॥

---

### ಕನ್ನಡಿಸಿದನ

## ಮೊರೆ

ಶಿವ ನಿನ್ನಡಿಗೆನ್ನ ಬಡಬಕುತಿಯ ಸೇವೆ ।
ಲವವಮಾದೊಡವಮಾಂತು ಕೊಳಲೆಂಬಿಚ್ಛೆಯಿಂ ।
ವ್ಯವಸಾಯುವನಿದಂ ಕೈಗೊಳಲನುರಾಗದಿಂ ನೀಂ ಬಲವನಿತ್ತು ॥
ತವೆ ಪರಿಪಾಲಿಸಿದೆ ಭಕ್ತರೊಳೆನಿತಿಹುದೊ ।
ತವಕೃಪೆ ದೇವಾಧಿದೇವ ನಿರಂತರಂ ।
ಸವಿಸದೆ ಸುರಿಸಯ್ಯ ಕರುಣಾಮೃತವೆನ್ನೊಳಿಂತೆಯೆ ಮೊರೆಯಿಡುವೆನು ॥೧॥

### ಮಂಗಳಂ

ಮಂಗಲಮಯ ಶಿವಗೆ ಜಯಗಿರಿಜಾಧವಗೆ ।
ಗಂಗೆಯ ಪೊತ್ತಂಗೆ ಜಯ ಸೊಗವೊತ್ತಂಗೆ ।
ತಿಂಗಳದಲೆಯಂಗೆ ಜಯಶುಭಕಳೆಯಂಗೆ ಜಯಜಯ ಪುರಲಯಂಗೆ ॥
ಸಂಗವಿರಹಿತಂಗೆ ಜಯನಿರ್ದುರಿತಂಗೆ ।
ತುಂಗಾದ್ರೀಶಂಗೆ ಜಯಭವ ನಾಶಂಗೆ ।
ಭಂಗಿತ ಮರಣಂಗೆ ಜಯನತ ಶರಣಂಗೆ ಜಯಜಯ ಗುಣಗಣಂಗೆ ॥೧॥



# ಶಬ್ದಕೋಶವು.

ಪದ್ಯ ಶಬ್ದ

೧ ಆರವು (ಕ್ರಿ) ಸಮರ್ಥವಾಗವು

೨ ಪರತರ (ಇ-ನಾ-) ಅತಿಶ್ರೇಷ್ಠ (ಶಿವ)

ಸುಚಕಿತ (ಉ-ವಿ-) ಅತ್ಯಾಶ್ಚರ್ಯವುಳ್ಳ

೩ ತ್ರಿದಿವೇಶಗುರು (ನಾ-) ಬೃಹಸ್ಪತಿ

೪ ನೆಗಳ್ವಯ್ (ಕ್ರಿ-ಪ) ಮಾಡುವೆ.

ಬರವು+ಇರವು+ಉರಿವು (ನಾ.) ಉತ್ಪತ್ತಿ ಸ್ಥಿತಿಲಯ.

ಈಶ್ವರತ್ವ (ನಾ.) ಒಡೆತನ (ಶ್ರೇಷ್ಠತ್ವ)

ಸಮ್ಮೋಹಿಸರು (ಕ್ರಿ. ಪ.) ಮರುಳ್ಗೊಳಿಪರು.

೫ ತಾರ್ಕಿಕ (ನಾ.) ನೈಯಾಯಿಕ.

೬ ನೆರವೇರ್ಚರು (ಕ್ರಿ. ಪ.) ಸೃಷ್ಟಿಸರು.

೭ ವೇದತ್ರಯಿ (ನಾ.) ವೇದತ್ರಯದಿಂದ ಪ್ರಸ್ಥಾಪಿತ ಮತ (ವೇದ ಧರ್ಮ)

೮ ತೊವಲ್ (ನಾ.) ಚರ್ಮ.

೧೦ ಪರಿಣಾಮ (ನಾ.) ಕೊನೆ, ಅಂತ.

೧೪ ವಿಕೃತಿ (ನಾ.) ವಿಕಾರ (ಕಲಂಕ).

೧೫ ಗುರಿ (ನಾ.) ಮದನಬಾಣಕ್ಕೆ ಎದುರಾದ ವ್ಯಕ್ತಿ.

೧೭ ಅಳಂಬಡದ (ವಿ.) ಸಿದ್ಧವಾದ.

೨೦ ಪುರುಷ (ನಾ.) ಯಜ್ಞಪುರುಷ (ಮಹಾದೇವ).

೨೧ ಶರಣದ (ನಾ.) ಭಕ್ತರಿಗೆ ಇಷ್ಟಾರ್ಥಗುಡುವವ.

೨೪ ಯಮಿ (ನಾ.) ಯೋಗೀಶ್ವರ.

ಸ್ತ್ರೈಣ (ವಿ. ನಾ.) ಸ್ತ್ರೀಲಂಪಟ.

೨೬ ವಾಗತೀತ (ವಿ) ವಾತಿಗೆ ನಿಲುಕದ.

೨೭ ರೋಹಿತಹಯ (ನಾ·) ಅಗ್ನಿ.

ರುಚಿರಾಕ್ಷಿ (ನಾ.) ಜ್ಞಾನ ದೃಷ್ಟಿ.

೨೮ ವ್ಯಷ್ಟಿ (ನಾ.) ಭೇದರೂಪ.

ಸಮಷ್ಟಿ (ನಾ.) ಐಕ್ಯರೂಪ.

೩೦ ಆಸನ್ನ (ವಿ.) ಸಮೀಪಸ್ಥ.

ವನರುಚಿ (ವಿ.) ಸ್ಮಶಾನ ಪ್ರಿಯ.

ವಿಶ್ವಾಂಗ (ನಾ.) ವಿಶ್ವರೂಪ ದೇಹಿ.

ವಿಶ್ವೋತ್ತೀರ್ಣ (ನಾ.) ವಿಶ್ವಕ್ಕೆ ಅತೀತನಾದವನು.

೩೩ ತಿಸುಳಿ (ನಾ) ತ್ರಿಶೂಲಧರ (ಶಿವ)

೩೫ ಪರಿಕಲ್ಪಿತ (ವಿ.) ಸಂಪೂರ್ಣ.

ಬೆರಿಸಿ (ಅ.) ಆಯ್ದುಕೊಂಡು.

ಪರಾತ್ಪರ (ನಾ.) ಪರಮಶ್ರೇಷ್ಠ (ಶಿವ).

೩೬ ಧೂರ್ಜಟಿ (ನಾ.) ಶಿವ.



# ಶಿವಾನುಭವ



ಸಂಪಾದಕ

ರಾ॥ ಸಾ॥ ಫ. ಗು. ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ.

ವಿಜಾಪುರ



ಸಂಪುಟ ೯ ಸಂಚಿಕೆ ೨

ಜುಲೈ

೧೯೩೪

ವಾ. ವರ್ಗಣಿ ೪-೪-೦ ] [ ಬಿಡಿಸಂಚಿಕೆ ೦-೧೨-೦

# ವಿಷಯಾನುಕ್ರಮಣಿಕೆ.

ಪವೆಂದು ನಿನ್ನ ಕಂಡಿಪ್ಪೆ ಕಾಣಾ ಚೆನ್ನ ಬಸವಣ್ಣಾ
ಡಿಸಿದರು.



# ಶೂನ್ಯಸಂಪಾದನೆಯ ರಹಸ್ಯ.

(ಲೇ:— ವಿ॥ ಬ್ಯಾಳಿ ಕಲ್ಯಾಣಪ್ಪನವರು ಬಿ. ಎ. ಶ್ರೀಸಿದ್ಧೇಶ್ವರ
ಹೈಸ್ಕೂಲ ವಿಜಾಪುರ.)

## ೪. ಬಸವನು ಚನ್ನಬಸವನಿಗೆ ಮಾಡಿದ ಉಪದೇಶ ಸಂಪಾದನೆ.

ಈ ಸಂಪಾದನೆಯಲ್ಲಿ ಶರಣ ಬಸವೇಶ್ವರನು ಚೆನ್ನಬಸವೇಶ್ವರನಿಗೆ ಲಿಂಗ ಪ್ರಾಣಗಳ ಸಕೀಲ ಸಂಬಂಧವನ್ನುಪದೇಶಿಸಿದ ರಹಸ್ಯವು ವರ್ಣಿಸಲ್ಪಟ್ಟಿದೆ. ಇದರಲ್ಲಿ ವಿಶೇಷತಃ ಶ್ರೀ ಬಸವರಾಜದೇವರ ಮಹಾತ್ಮೆಯೂ ಕಲ್ಯಾಣಪಟ್ಟಣದ ವಿಸ್ತಾರ ವೈಭವಗಳೂ, ಬಸವರಾಜದೇವರ ಗೃಹದ ಸೊಬಗು ಸೌಭಾಗ್ಯಗಳೂ ಬಹು ಸೊಗಸಾಗಿ ಬಣ್ಣಿಸಲ್ಪಟ್ಟಿವೆ. ಶ್ರೀ ಬಸವೇಶನನ್ನು ಚೆನ್ನಬಸವೇಶ್ವರ ಪ್ರಭುದೇವರು ಸಿದ್ಧರಾಮಶಿವಯೋಗಿಗಳು ಮನವಾರೆ ಹೊಗಳಿ ತಣಿದಿದ್ದಾರೆ. ಕಲ್ಯಾಣಪಟ್ಟಣದ ಮಹಾದ್ವಾರದ ಮುಂದೆ ಚೆನ್ನಬಸವರಾಜದೇವರಿಂದ ಬರೆಯಿಸಲ್ಪಟ್ಟ ಶಿಲಾಶಾಸನವನ್ನವಲೋಕಿಸಿದರೆ ಆಗಿನ ಕಾಲದಲ್ಲಿ ಆ ನಗರವು ಎಷ್ಟು ವೈಭವದಿಂದ ಮೆರೆಯುತಿದ್ದಿತೆಂಬದು ಸ್ಪಷ್ಟ ಗೊತ್ತಾಗುವದು. "ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣಕಲ್ಪಂಪುರಂ" ಎಂಬ ನಾಣ್ಣುಡಿಯು ಹುಸಿಯಲ್ಲವೆಂದು ಬೇಕಾದವರಿಗೆ ಮನವರಿಕೆಯಾಗುವಂತಿದೆ.

ಸಾಕ್ಷಾತ್ ಪರಶಿವನ ಸ್ಥೂಲ ತತ್ವವೇ ಜಗದ ಹಿತಾರ್ಥಕ್ಕೋಸ್ಕರ ಬಸವೇಶ್ವರನೆಂಬ ನಾಮದಿಂದ ಮರ್ತ್ಯಕ್ಕೆ ಅವತರಿಸಿ ಶಿವಭಕ್ತಿಯ

ನ್ನುದ್ಧರಿಸಿ ಸದಾಚಾರವನ್ನಿಂಬುಗೊಂಡು ಕಲ್ಯಾಣಪಟ್ಟಣದಲ್ಲಿ ಗುರು ಲಿಂಗಜಂಗಮ [redacted] ವಾದಂಗಳನ್ನು ಮಾಡುತ್ತಿ [redacted] ಇದೆ. ಅದ ರಂತೆ ನಿಃ [redacted] ಂಬ ನಾಮ ದಿಂದ ವ [redacted] ಜ್ಞಾನವನ್ನು ಬೋಧಿಸುವದಕ್ಕೆ ತಾನೇ ಕಾರಣವಾಗಿ ಬೆಳಗುತ್ತಿದ್ದಿತೆಂದು ಉಲ್ಲೇಖಿಸಲಾಗಿದೆ. ಇಂತಹ ಚೆ [redacted] ರ ದೇವರು ಬಸವರಾಜದೇವರಿಂದ ಉಪದೇಶವನ್ನು ಹೊಂದಬೇಕಾದರೆ ಆ ಮಹಾಮಹಿಮರಾದ ಬಸವಣ್ಣನವರಲ್ಲಿ ಎಂಥ ದಿವ್ಯನಾದ ಶಕ್ತಿಯಿದ್ದಿತೆಂಬದು ಊಹಿಸಲಶಕ್ಯವಾಗಿದೆ. ಬಸವೇಶ್ವರ ಚೆನ್ನಬಸವೇಶ್ವರರು ಈ ಸಂಪಾದನೆಯಲ್ಲಿ ಅನುಕ್ರಮವಾಗಿ ಹಿರಿಯದಣ್ಣಾಯ-ಕ ಚಿಕ್ಕದಣ್ಣಾಯಕರೆಂದು ಸಂಬೋಧಿಸಲ್ಪಟ್ಟಿದ್ದಾರೆ.

ಈ ಸಂಪಾದನೆಯ ಕಥಾಸಾರವನ್ನು ಸಂಕ್ಷಿಪ್ತವಾಗಿ ಇದರಡಿಯಲ್ಲಿ ಕೊಟ್ಟಿದೆ. ಶ್ರೀ ಪ್ರಭುದೇವರು ಸಿದ್ಧರಾಮ ಶಿವಯೋಗಿಗಳನ್ನು ಕೂಡಿಕೊಂಡು ಕಲ್ಯಾಣಪಟ್ಟಣದ ಸಮೀಪಕ್ಕೆ ಬಂದಾಗ ಬಸವ ಚನ್ನಬಸವೇಶ್ವರರು ಮಹಾನುಭಾವ ಗೋಷ್ಠಿಯೊಳಗೋಲಾಡುತ್ತಿದ್ದರು. ಚೆನ್ನಬಸವಣ್ಣನವರು ಬಸವೇಶ್ವರ ದೇವರ ಕರುಣಾನುಗ್ರಹವನ್ನು ಪಡೆಯಬೇಕೆಂದು ಅವರನ್ನು ಕುರಿತು ಬಿನ್ನೈಸಿಕೊಂಡದ್ದೇನಂದರೆ— "ಆದಿಲಿಂಗ ಅನಾದಿ ಶರಣನೆಂಬ ನುಡಿಗನುಗುಣವಾಗಿ ಭುವನವ ಸಲಹಲೆಂದವತರಿಸಿದ ನೀವುಗಳು ನೀವೇ ಪುಟ್ಟಿಸಿರ್ದ ಈ ಘಟಕ್ಕೆ ಕಾರುಣ್ಯವ ಮಾಡಿ ಸಲಹಿರಯ್ಯಾ ಕೂಡಲಚೆನ್ನಸಂಗಮದೇವಾ."

ಇದನ್ನು ಕೇಳಿ ಬಸವರಾಜ ದೇವರು ತಮ್ಮ ವಿನೀತಭಾವವನು ಈ ಪ್ರಕಾರ ವ್ಯಕ್ತಗೊಳಿಸಿದರು "ಹೋ ಹೋ, ನಾನೊಬ್ಬರಿಗೆ ಉಪದೇಶವ ಮಾಡಲಮ್ಮೆನು. ತತ್ವವ ಹಿಡಿದವರ ತೊತ್ತಾಗಿ ನಡೆವೆನು. ಕೂಡಲಸಂಗಮದೇವರ ಮುಂದೆ ಭಾಷೆಯ ಪ್ರಸಾದವನಿಕ್ಕಲಮ್ಮೆನಯ್ಯಾ ಕೂಡಲಚನ್ನಸಂಗಮದೇವಾ. ಇದಕ್ಕೆ ಚೆನ್ನಬಸವೇಶನು "ನಿಮ್ಮ ತೊತ್ತಿನ ತೊತ್ತಾದ ನನಗೆ ಅನುಗ್ರಹವ ಮಾಡುವ ತನಕ ನಾನು ಬಿಡೆನೆಂಬುದಾಗಿ ಸತ್ಯಾಗ್ರಹವ ತೊಡಲು ಬಸವೇಶ ತಂದೆಗಳು "ಅಂಗದ ಮೇಲೆ ಲಿಂಗವುಳ್ಳದ್ದೆಲ್ಲವೂ ಸಂಗಮನಾಥನಲ್ಲದೆ ಮತ್ತಾರನು ಕಾಣೆ. ಶಿಷ್ಯಂಗೆ ಗುರು ಉಪದೇಶ ಮಾಡಬೇಕಲ್ಲದೆ ಗುರುವಿಂಗೆ ಶಿಷ್ಯನು ಅನುಗ್ರಹವ

ಮಾಡುವದುಂಟೆ? ಎನ್ನ ಅರುಹಿನ ಆದಿಗೆ ನೀನೆ ಕರ್ತನಾಗಿರಲು ನಿನಗೆ ನಾನು ಅನುಗ್ರಹವ ಮಾಡುವ ಪರಿಯೆಂತಯ್ಯಾ? ಕೂಡಲಸಂಗಮದೇವರ ಸ್ವರೂಪವೆಂದು ನಿನ್ನ ಕಂಡಿಪ್ಪೆ ಕಾಣಾ ಚೆನ್ನಬಸವಣ್ಣಾ." ಎಂದು ಅಪ್ಪಣೆ ಕೊಡಿಸಿದರು.

ಪುನಃ ಚೆನ್ನಬಸವೇಶ್ವರ ದೇವರು ಉಪದೇಶಾನುಗ್ರಹವನ್ನು ಮಾಡಿಯೇ ತೀರಬೇಕೆಂದು ಬೇಡಿಕೊಳ್ಳಲು ಬಸವರಾಜ ದೇವರು "ಗುರುವಿಂಗೆ ನೀನೆ ಕರ್ತ. ಲಿಂಗಕ್ಕೆ ನೀನೇ ಕರ್ತ. ಜಂಗಮಕ್ಕೆ ನೀನೇ ಕರ್ತ. ಪ್ರಸಾದಕ್ಕೆ ನೀನೇ ಕರ್ತ. ಉಪದೇಶಕ್ಕೆ ನೀನೆ ಕರ್ತ. ಕೂಡಲಸಂಗಮದೇವರ ಸಾಕ್ಷಿಯಾಗಿ ಎನಗೆ ನೀನೆ ಕರ್ತನಾದ ಕಾರಣ ನಾನು ಬೇಕೆನಲಮ್ಮೆ ಬೇಡೆನಲಮ್ಮೆ ಕಾಣಾ ಚೆನ್ನಬಸವಣ್ಣಾ" ಎಂದು ಉತ್ತರವನ್ನಿತ್ತರು. ಮಹನೀಯರ ವಿನಯ ಪ್ರಭಾವವೇ ಮಹದುತ್ತರವೆಂಬ ನುಡಿಯು ಸುಳ್ಳಲ್ಲ. ಈ ಉತ್ತರವೇ ಚೆನ್ನಬಸವದೇವರಿಗೆ ಅನುಗ್ರಹವಾಯಿತು. ಆ ಮೇಲೆ ಅವರು ಬಸವಣ್ಣನವರನ್ನು ಬಹು ಪರಿಯಾಗಿ ಕೊಂಡಾಡಿದರು.

"ಎನ್ನ ಪಂಚಭೂತ, ದಶೇಂದ್ರಿಯ, ಅಂತಃಕರಣ ಚತುಷ್ಟಯಂಗಳನ್ನೆಲ್ಲ ಲಿಂಗಸ್ವರೂಪವಾಗಿ ಮಾಡಿದನಯ್ಯಾ ಎನ್ನ ಶ್ರೀಗುರು ಬಸವಣ್ಣನು. ಸದ್ಗುರುವಿನ ಕಾರುಣ್ಯಹಸ್ತವೆನ್ನ ಮಸ್ತಕ ಸಂಯೋಗಮಾಡಿದಲ್ಲಿ ಪೂರ್ವಗುಣವಳಿದು ಪುನರ್ಜಾತನಾಗಿ ಅನುಪಮ ಸುಖಸಾರಾಯ ಶರಣನೆನಿಸಿ ಲಿಂಗದಲ್ಲಿ ತದ್ಗತನಾಗಿರ್ದೆನಯ್ಯಾ ಕೂಡಲಚೆನ್ನಸಂಗಮದೇವಾ." ಮತ್ತು

"ಬಸವಣ್ಣನು ಮಾಂಸಪಿಂಡವೆನಿಸದೆ ಮಂತ್ರಪಿಂಡವೆನಿಸಿದನು. ವಾಯುಪ್ರಾಣಿಯೆಂದೆನಿಸದೆ ಲಿಂಗಪ್ರಾಣಿಯೆಂದೆನಿಸಿಕೊಂಡನು. ಲಿಂಗ ಜಂಗಮ ಪ್ರಸಾದಗಳು ಬಸವಣ್ಣನ ಉದರದಲ್ಲಿ ಹುಟ್ಟಿದವು. ಇಂತೀ ತ್ರಿವಿಧಕ್ಕೆ ಬಸವಣ್ಣನೇ ಕಾರಣವೆಂದರಿದೆನಯ್ಯಾ ಕೂಡಲಚೆನ್ನಸಂಗಮದೇವಾ." ಇದಲ್ಲದೆ "ಬಸವಣ್ಣಾ, ಪ್ರಥಮಾಚಾರಿ ನೀನೆ. ಲಿಂಗಾಚಾರಿ ನೀನೆ. ಜಂಗಮಾಚಾರಿ ನೀನೆ. ಪ್ರಸಾದಾಚಾರಿ ನೀನೆ. ಎನಗೆ ಸರ್ವಾಚಾರಿಯು ನೀನೆ." ಹೀಗೆಂದು ಸ್ತೋತ್ರಮಾಡಿದರು.

ಆ ಮೇಲೆ ಚಿಕ್ಕದಣ್ಣಾಯಕರು ಬಸವರಾಜದೇವರಿಗೆ ಲಿಂಗಪ್ರಾಣದ ಸಕೀಲಸಂಬಂಧವೆಂತಿಪ್ಪುದೆಂದು ಬೆಸಗೊಂಡರು. ಅದಕ್ಕೆ ಬಸವಣ್ಣನವರು ತಿರುಗಿ ಚೆನ್ನಬಸವರಾಜರಿಗೇನೇ ಅದರ ಭೇದವನ್ನರುಹಬೇ

ಕೆಂದು ಕೇಳಿಕೊಂಡರು. ಅದಕ್ಕೆ ಚೆನ್ನಬಸವಣ್ಣನವರು ಸ್ತೋತ್ರಮುಖ ದಿಂದಲೇ ಉಪಾಯದಿಂದ ಪ್ರಾಣಲಿಂಗದ ನಿಜವನ್ನು ತಿಳಿಸಿದರು. ಅದನ್ನು ಕೇಳಿ ಬಸವಣ್ಣನವರು ಆನಂದಭರಿತರಾದರು.

ಈ ಮೇರೆಗೆ ಬಸವ ಚೆನ್ನಬಸವೇಶ್ವರರು ಶಿವಾನುಭವಗೋಷ್ಠಿಯಲ್ಲಿ ನಿರತರಾಗಿರುವ ಸಮಯದಲ್ಲಿ ಪ್ರಭುದೇವರು ಸಿದ್ಧರಾಮಯ್ಯದೇವರ ಸಹಿತವಾಗಿ ಕಲ್ಯಾಣಪಟ್ಟಣಕ್ಕೆ ಬಂದರು. ಕಲ್ಯಾಣವು ಸತ್ಯದ ಸಾಗರ, ಭಕ್ತಿಯ ತವರ್ಮನೆ, ಮುಕ್ತಿಗೆ ಮುಖ, ಪುಣ್ಯದ ಪುಂಜ, ಅಭಿನವ ಕೈಲಾಸನೆನ್ನುವಂತೆ ವಿರಾಜಿಸುತ್ತಿದ್ದಿತು. ಇಂಥ ವೈಭವಶಾಲಿಯಾದ ಕಲ್ಯಾಣ ಪಟ್ಟಣಕ್ಕೆ ವಂದನೆಯನು ಮಾಡಿ ಪ್ರಭುದೇವರು ಸಿದ್ಧರಾಮಯ್ಯ ದೇವರೆದುರಿಗೆ ಅದನ್ನ ಈ ಪ್ರಕಾರವಾಗಿ ಕೊಂಡಾಡಿದರು.

> " ಕಲ್ಯಾಣವೆಂಬ ಪ್ರಣತಿಯಲ್ಲಿ ಭಕ್ತಿರಸವೆಂಬ ತೈಲ
> ವನೆರೆದು ಆಚಾರವೆಂಬ ಬತ್ತಿಗೆ ಬಸವಣ್ಣನೆಂಬ
> ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತ್ತಿರ್ದಿ
> ತೈಯ್ಯ ಶಿವನ ಪ್ರಕಾಶ ಆ ಬೆಳಗಿನೊಳು ಒಪ್ಪುತ್ತಿ
> ರ್ದರಯ್ಯಾ ಅಸಂಖ್ಯಾತ ಭಕ್ತಮಹಾಗಣಂಗಳು ಶಿವ
> ಭಕ್ತರಿರ್ದ ಕ್ಷೇತ್ರ ಅವಿಮುಕ್ತಿ ಕ್ಷೇತ್ರವೆಂಬುದು
> ಹುಸಿಯೇ? ಗುಹೇಶ್ವರ ಲಿಂಗದಲ್ಲಿ ಎನ್ನ ಪರಮಾರಾಧ್ಯ
> ಸಂಗನಬಸವಣ್ಣನ ಮಹಿಮೆಯ ನೋಡಾ ಸಿದ್ಧರಾಮಯ್ಯ"॥

ಆ ನಂತರ ಆ ಪುರದ ಮಹಾದ್ವಾರದ ಮುಂದೆ ಚೆನ್ನಬಸವರಾಜ ದೇವರಿಂದ ಕಲ್ಯಾಣದ ಮಹಾತ್ಮೆಯ ವಿಷಯವಾಗಿ ವಚನರೂಪದಲ್ಲಿ ವಿವರವಾಗಿ ಬರೆಯಿಸಲ್ಪಟ್ಟ ಶಿಲಾಶಾಸನವೊಂದನ್ನು ಪ್ರಭುದೇವರು ಕಂಡು ಸಂತೋಷಭರಿತರಾದರು. ಆ ಶಿಲಾಶಾಸನದ ಸಾರಾಂಶವಿಷ್ಟೇ.

## ಕಲ್ಯಾಣ ಪಟ್ಟಣ.

ಕಲ್ಯಾಣ ಪಟ್ಟಣವು ಭೂಲೋಕದ ಕೈಲಾಸವೆಂಬಂತೆ ಪರಿಶೋಭಿಸುತ್ತಿತ್ತು. ಅಲ್ಲಿ ಸತ್ಯರು, ಸಾತ್ವಿಕರು, ನಿತ್ಯರು, ನಿಜೈಕ್ಯರು, ಮಹಾಜ್ಞಾನಿಗಳು, ಪರಮಶಿವಯೋಗಿಗಳು, ಶಿವಾನುಭವ ಸಂಪನ್ನರು, ಶಿವಲಿಂಗಪ್ರಾಣಿಗಳಲ್ಲದೆ ಮತ್ತಾರೂ ಇದ್ದಿದ್ದಿಲ್ಲ. ಪಾಪಿಗಳು, ಕೋಪಿಗಳು, ಅಸತ್ಯರು, ಅನಾಚಾರಿಗಳು ಮೊದಲಾದವರಿಗೆ ಕಲ್ಯಾಣದಲ್ಲಿ ಪ್ರವೇಶವಿರ

ಲಿಲ್ಲ. ಕಲ್ಯಾಣ ಪಟ್ಟಣವು ೧೨ ಯೋಜನೆ ಪ್ರಮಾಣ ವಿಸ್ತಾರವಾಗಿದ್ದಿತು. ಆ ಪಟ್ಟಣದ ಕೋಟೆಯ ಗೋಡೆಯ ಸುತ್ತಳತೆಯು ೪೫ ಯೋಜನ ಪ್ರಮಾಣವಾಗಿದ್ದಿತು. ಬಾಹತ್ತರು, ಮಾಂಡಲಿಕರು, ಸಾಮಂತರು, ರಾವುತರು ಮೊದಲಾದವರ ಮನೆಗಳು ಲಕ್ಷೋಪಲಕ್ಷವಿದ್ದವು. ಆ ಪಟ್ಟಣದಲ್ಲಿ ೧ ಲಕ್ಷ ೯೬ ಸಾವಿರ ಶಿವಾಲಯುಗಳಿದ್ದು ಅವುಗಳಲ್ಲಿ ತ್ರಿಪುರಾಂತಕೇಶ್ವರ ಶಿವಾಲಯುವು ಮುಖ್ಯವಾಗಿದ್ದಿತು. ಇದಲ್ಲದೆ ವ್ರತನೇಮಿಗಳ ಮಠ, ಅಚ್ಚಪ್ರಸಾದಿಗಳ ಮಠ, ಶೀಲಸಂಪನ್ನರ ಮಠ, ಮಾಟಕೂಟದ ಸದ್ಭಕ್ತರ ಮಠ ಇತ್ಯಾದಿ ಸಾವಿರಾರು ಮಠಗಳು ಶೋಭಿಸುತ್ತಿದ್ದವು. ಇಂಥ ವೈಭವವುಳ್ಳ ಕಲ್ಯಾಣ ಪಟ್ಟಣದಲ್ಲಿ ಸರ್ವಾಚಾರ ಸಂಪನ್ನನಾದ ಬಸವೇಶ್ವರನು ಶಿವಸಂಕಥಾ ವಿನೋದದಿಂದ ರಂಜಿಸುತ್ತಿದ್ದನು. ಆ ಕಲ್ಯಾಣ ಪಟ್ಟಣದ ನಾಮ ಹಿಡಿದೇ ವಿವಾಹಕ್ಕೆ ಕಲ್ಯಾಣವೆಂಬ ಹೆಸರುಂಟಾಯಿತೆಂದು ಹಿರಿಯರು ಹೇಳುತ್ತಾರೆ. ಇಂತಪ್ಪ ಕಲ್ಯಾಣದ ದರ್ಶನ ಹೊಂದಿದರೆ ಭವಂ ನಾಸ್ತಿ, ನೆನೆದರೆ ಪಾಪಕ್ಷಯ, ಮಹತ್ವವ ಕೇಳಿದರೆ ಕರ್ಮಕ್ಷಯವಹುದು ಮೋಕ್ಷ ಸಾಧ್ಯವಹುದು. ಇದು ಕಾರಣ ಕೂಡಲಚೆನ್ನಸಂಗಮದೇವಾ ನಿಮ್ಮ ಭಕ್ತ ಬಸವಣ್ಣನಿರ್ದ ಠಾವೆ ಕಲ್ಯಾಣವೆಂದರಿದು ದಿವ್ಯ ಶಾಸನವ ಬರೆದು ಪಠಿಸಿದ ಕಾರಣ ಎನ್ನ ಭವಂ ನಾಸ್ತಿಯಾಯಿತ್ತು.

ಪ್ರಭುದೇವರು ಈ ದಿವ್ಯ ಶಾಸನವನ್ನು ಓದಿ ಪರಮ ಹರುಷಿತರಾಗಿ ಬಸವರಾಜ ದೇವರ ಮಹಾತ್ಮೆಯನ್ನು ಸಿದ್ಧರಾಮಯ್ಯ ತಂದೆಗಳಿಮರಿಗೆ ಈ ಪ್ರಕಾರ ನಿರೂಪಿಸಿದರು. "ಸಾಗರದೊಳಗಣ ಜ್ಯೋತಿಯಂತೆ ಮಹೇಶ್ವರ ಲಿಂಗದೊಳಗೆ ಎನ್ನ ಪರಮಾರಾಧ್ಯ ಸಂಗನ ಬಸವಣ್ಣನು ನಿಂದ ನಿಲವನುಪಮಿಸಲಳವಲ್ಲ ಕಾಣಾ ಸಿದ್ಧರಾಮಯ್ಯ." ಅದಕ್ಕೆ ಸಿದ್ಧರಾಮೇಶ್ವರರು "ಮಹೇಶ್ವರರಿರ್ದ ಗ್ರಾಮ ಶಿವಲೋಕ ನೋಡಾ ಎಲೆ ಅಯ್ಯಾ. ನಿಮ್ಮ ಶರಣರು ಮೆಟ್ಟಿ ನಿಂದ ಧರೆ ಪಾವನವೆಂಬುದು ಇಂದೆನಗೆ ಅರಿಯ ಬಂದಿತ್ತಯ್ಯಾ. ಬಸವಣ್ಣನ ನೆನಹು ಸುಖಸಮುದ್ರವಯ್ಯಾ ಕಪಿಲಸಿದ್ಧ ಮಲ್ಲಿನಾಥಾ ಬಸವಣ್ಣನ ತೋರಿದಿರಾಗಿ ನಾನು ಬದುಕಿದೆನು."

ಆ ಮೇಲೆ ಬಸವಣ್ಣನ ಅಂಗಳವು ಅವಿಮುಕ್ತ ಕ್ಷೇತ್ರವೆಂದು ಪ್ರಭುದೇವರು ವಿಸ್ತರಿಸಿದರು. "ಕೋಟ್ಯಾನುಕೋಟಿ ಮಹಾಪಾತಕಂಗಳು

ಒಬ್ಬ ಶಿವಭಕ್ತನ ಅಂಗಳವ ಕಂಡಲ್ಲಿ ಅಳಿದು ಹೋಗುವವು ನೋಡಾ ಅದೇನು ಕಾರಣವೆಂದೊಡೆ ಆ ಶರಣನ ಅಂತರಂಗದಲ್ಲಿ ಶಿವನಿರ್ಪನು. ಆ ಶಿವನಿದ್ದಲ್ಲಿ ಕೈಲಾಸವಿಪ್ಪುದು. ಆ ಕೈಲಾಸವಿದ್ದಲ್ಲಿ ಮಹಾ ಗಣಂಗಳಿರ್ಪರು. ಅಸಂಖ್ಯ ತೀರ್ಥಂಗಳು ನೆಲಸಿರುವವು. ಇಂತಪ್ಪ ಶರಣ ಸಂಗನ ಬಸವಣ್ಣನ ಅಂಗಳವ ಕಂಡೆನಾಗಿ ಗುಹೇಶ್ವರ ಲಿಂಗದ ಕಂಕಳ ತೃಪ್ತಿಯಾಯಿತ್ತು ಕಾಣಾ ಸಿದ್ಧರಾಮಯ್ಯಾ.

ಆ ಮೇಲೆ ಸಿದ್ಧರಾಮಯ್ಯ ದೇವರು ಬಸವಣ್ಣನವರ ಮಹಾಮನೆಯನ್ನು ಈ ಪ್ರಕಾರ ಹೊಗಳಿದರು. "ಅಯ್ಯಾ, ನಿಮ್ಮ ಸಂಗನ ಬಸವಣ್ಣ ಬಂದು ಕಲ್ಯಾಣದಲ್ಲಿ ಮನೆಯ ಕಟ್ಟಿದರೆ ಮರ್ತ್ಯಲೋಕವೆಲ್ಲವು ಭಕ್ತಿಸಾಮ್ರಾಜ್ಯವಾಯಿತ್ತು. ಆ ಮನೆಗೆ ತಲೆವಾಗಿ ಹೊಕ್ಕವರೆಲ್ಲರು ನಿಜ ಲಿಂಗಪದವಂ ಪಡೆದರು. ಆ ಗೃಹವ ನೋಡಬೇಕೆಂದು ನಾನು ಹಲ ಕಾಲ ತಪಸಿದ್ದೆನು. ಕಪಿಲಸಿದ್ಧ ಮಲ್ಲಿನಾಥಾ ನಿಮ್ಮ ಶರಣ ಸಂಗನ ಬಸವಣ್ಣನ ಮಹಾ ಮನೆಗೆ ನಮೋ ನಮೋ ಎಂದು ಬದುಕಿದೆನು."

ಇಂತು ಬಸವರಾಜ ದೇವರು ಚನ್ನಬಸವರಾಜ ದೇವರಿಗೆ ಅನುಗ್ರಹ ಮಾಡಿದ ಸಂಪಾದನೆಯು ಇಲ್ಲಿಗೆ ಸಮಾಪ್ತಿಯಾಯಿತು.

---

## ೫ ಪ್ರಭುದೇವರು ಕಲ್ಯಾಣಕ್ಕೆ ಬಂದ ಸಂಪಾದನೆ

ಜಂಗಮವು ಮನೆಗೆ ಬಂದಾಗ ನಾವು ಲಿಂಗಪೂಜೆ ಮಾಡುತ್ತಿದ್ದರೆ ಅದನ್ನು ಬದಿಗಿಟ್ಟು ಜಂಗಮದ ಆದರಾತಿಥ್ಯವನ್ನು ಮಾಡಬೇಕೆಂದು ಈ ಸಂಪಾದನೆಯು ಸೂಚಿಸುತ್ತದೆ. ಲಿಂಗಪೂಜೆಗಿಂತಲೂ ಜಂಗಮ ಪೂಜೆಯು ಅತ್ಯಾಧಿಕವಾಗಿರುವದೆಂದು ಪ್ರಬುದೇವರು ಬಸವಣ್ಣನವರಿಗೆ ನಿರೂಪಿಸಿದ ಪ್ರಸಂಗವು ಈ ಸಂಪಾದನೆಯಲ್ಲಿ ಬಂದಿರುತ್ತದೆ. ಆ ಕಥಾಸಾರವನ್ನು ಇದರಡಿಯಲ್ಲಿ ಸಂಕ್ಷೇಪವಾಗಿ ವಿವರಿಸಲಾಗಿದೆ. ಪ್ರಭುದೇವರು ಸಿದ್ಧರಾಮಯ್ಯ ದೇವರೊಡನೆ ಸಂಚರಿಸುತ್ತ ಕಲ್ಯಾಣ ಪಟ್ಟಣಕ್ಕೆ ಬಂದು ಬಸವಣ್ಣನವರ ಅರಮನೆಯ ಮಹಾದ್ವಾರದ ಬಳಿಯಲ್ಲಿ ನಿಂತಿರಲಾಗಿ ಅದನ್ನು ಕಂಡು ಅಲ್ಲಿ ಸೇವೆ ಮಾಡುತ್ತಿದ್ದ ಹಡ

ಪದಪ್ಪಣಗಳು ಹರ್ಷಿತರಾಗಿ ಒಳಗೆ ಹೋಗಿ ಲಿಂಗಪೂಜೆಯಲ್ಲಿ ನಿರತರಾದ ಬಸವಣ್ಣನವರಿಗೆ ಕೈಮುಗಿದು "ಸಂಗನ ಬಸವಣ್ಣಾ, ಮಹಾದ್ವಾರದಲ್ಲಿ ಯಾರೋ ಮಹಾಮೂರ್ತಿಗಳಿಬ್ಬರು ಬಂದು ನಿಂತಿದ್ದಾರೆ. ಚಿತ್ತೈಸಬೇಕು." ಎಂದು ವಿಜ್ಞಾಪಿಸಿದರು. ಆಗ ಬಸವಣ್ಣನವರು ಲಿಂಗಾರ್ಚನೆಯನ್ನು ಬಿಟ್ಟು ಏಳದೆ "ಎನ್ನ ಕಾಯವೇ ಭಕ್ತ ಪ್ರಾಣವೇ ಜಂಗಮವಾಗಿರಲು ಅಲ್ಲಿ ಇಲ್ಲಿ ಎಂಬ ಭೇದವಿಲ್ಲೆಂದು" ನಿಶ್ಚಯಿಸಿ ಆ ಜಂಗಮಮೂರ್ತಿಗಳನ್ನು ಒಳಗೆ ಕರೆದುಕೊಂಡು ಬರಬೇಕೆಂದು ಹಡಪದಪ್ಪಣ್ಣಗಳಿಗೆ ಆಜ್ಞಾಪಿಸಿದರು..

ಆ ಪ್ರಕಾರ ಹಡಪದಪ್ಪಣ್ಣಗಳು ಬಂದು ಪ್ರಭುದೇವರಿಗೆ "ಪ್ರಭುವೇ, ತಾವು ಬಸವಣ್ಣನವರ ಪ್ರಾಣಸ್ವರೂಪವೇ ಆಗಿರಲು ಮತ್ತೆ ತಮಗೆ ಬೇರೆ ಉಪಚಾರ ಮಾಡಬೇಕೆಂಬುದೇನೂ ಇಲ್ಲ ತಾವು ಅವಶ್ಯವಾಗಿ ದಯಮಾಡಿಸಬೇಕು." ಎಂದು ಬೇಡಿಕೊಂಡರು. ಅದನ್ನು ಕೇಳಿ ಪ್ರಭುದೇವರು ಬಸವೇಶನು ಕುಳಿತಲ್ಲಿಯೇ ಕುಳಿತು ಅಟ್ಟಹಾಸ ಮಾಡುತ್ತಿರುವನೆಂದು ಸಿಟ್ಟಾಗಿ ಅಪ್ಪಣ್ಣಗಳಿಗೆ ತಿಳಿಸಿದುದೇನಂದರೆ "ನಾವು ಬಸವಣ್ಣನ ಪ್ರಾಣವೇ ಆಗಿದ್ದ ಪಕ್ಷದಲ್ಲಿ ಆತನು ನನ್ನನ್ನು ಕರೆಯಬಾರದು. ನಾನು ಕಾಲಿಡಬಾರದು. ಕ್ರಿಯೆಯಿಲ್ಲದ ಬರೇ ಮಾತಿನ ಅದ್ವೈತವ ಬೆಳೆಯಿಸುವ ಭೃತ್ಯಾಚಾರ ಹೀನರ ಮನೆಗೆ ನಮ್ಮ ಗುಹೇಶ್ವರ ಲಿಂಗ ಅಡಿಯಿಡುವದಿಲ್ಲ. ಮತ್ತು "ಕಾಯಭಕ್ತನಾದರೆ ಭೃತ್ಯಾಚಾರವಿರಬೇಕು ಪ್ರಾಣ ಜಂಗಮವಾದರೆ ಅರಿವಿರಬೇಕು. ಹಿರಿಯರು ಮನೆಗೆ ಬಂದರೆ ಇದಿರೆದ್ದು ಅಡಿವಿಡಿಯಬೇಕು. ಇಂತೀ ಭಕ್ತಿ ಜ್ಞಾನವಿಲ್ಲದವರು ಭಕ್ತರಲ್ಲ. ಶರಣರಲ್ಲ ಅಂಥವರ ಮನೆಗೆ ನಾವು ಸರ್ವಥಾ ಬರುವದಿಲ್ಲ." ಹಡಪದಪ್ಪಣ್ಣಗಳು ಹಾಗೆಯೇ ಹೋಗಿ ಬಸವಣ್ಣನವರಿಗೆ ಇದನ್ನು ತಿಳಿಸಿದರು.

ಆಗ ಬಸವಣ್ಣನವರು ಹಡಪದಪ್ಪಣ್ಣಗಳಿಗೆ ಪುನಃ ಹೇಳಿಕಳುಹಿಸಿದುದೇನಂದರೆ "ಭಕ್ತನ ಕಾಯವ ಜಂಗಮ ಧರಿಸಿಪ್ಪ. ಜಂಗಮದ ಪ್ರಾಣವ ಭಕ್ತ ಧರಿಸಿರ್ಪ ಭಕ್ತನಲ್ಲಿ ಭಕ್ತಿಜ್ಞಾನವೆರಡು ಸನ್ನಿಹಿತ. ಜಂಗಮದಲ್ಲಿಯೂ ಭಕ್ತಿಜ್ಞಾನಗಳೆರಡೂ ಸನ್ನಿಹಿತ. ಭಕ್ತಂಗೆ ಭಕ್ತಿಯು ಬೇಕಾಗುವಂತೆ ಜಂಗಮಕ್ಕಾದರೂ ಭಕ್ತಿಯು ಬೇಕು. ಭಕ್ತನ ಅರ್ಥಪ್ರಾಣಾಭಿಮಾನಕ್ಕೆ ಜಂಗಮವು ತಾನೇ ಕರ್ತನಾದ ಬಳಿಕ ಸ್ವತಃ ಬಂದು ನನ್ನನ್ನೇಕೆ ಪಾವ

ನಮಾಡಬಾರದು? ತನ್ನ ಮನೆಗೆ ತಾನು ಬರಬೇಕಾದರೆ ಮುನಿಸುಂಟೆ? ಕೂಡಲಸಂಗನ ಶರಣರ ಬಾಗಿಲಗಾಹಿ ನಾನಾಗಿರ್ದು ಕರ್ತರು ಗೃಹಕ್ಕೆ ಬಂದರೆ ಬೇಡೆನ್ನಬಹುದೇ? ಹೀಗೆಂದು ಪ್ರಭುವಿಗೆ ಮರಳಿ ಬರಹೇಳು ಅಪ್ಪಣ್ಣಾ."

ಅದರಂತೆಯೇ ಪ್ರಭುದೇವರಿಗೆ ಅಪ್ಪಣ್ಣಗಳು ಬಿನ್ನೈಸಲು ಪ್ರಭುದೇವರು ಈ ಪ್ರಕಾರ ಪ್ರತ್ಯುತ್ತರ ಕೊಟ್ಟರು. "ಭಕ್ತ ಜಂಗಮದ ಸಕೀಲ ಸಂಬಂಧವನಾರು ಬಲ್ಲರು ಹೇಳಾ. ಸತ್ಯಸದಾಚಾರವಿಲ್ಲದೆ ಅರ್ಥಪ್ರಾಣಾಭಿಮಾನಗಳನ್ನೊಪ್ಪಿಸಿದಾತ ಭಕ್ತನಲ್ಲ. ಅಂಥ ಭಕ್ತನ ಮನೆಯ ಹೊಕ್ಕು ಒಡಲ ಕಕ್ಕುಲಿತೆಗೆ ಅಶನವನುಂಡು ವ್ಯಸನದಾಶೆಗೆ ಹಣವ ಬೇಡಿ ಕೊಟ್ಟರೆ ಕೊಂಡಾಡಿ ಕೊಡದಿರ್ದೊಡೆ ದೂರಿಕೊಂಡು ಹೋಹಾತ ಜಂಗಮವಲ್ಲ. ಜಂಗಮಕ್ಕೆ ತನ್ನನ್ನೇ ಅರ್ಪಿಸಿದಾತ ಭಕ್ತನು. ಭಕ್ತಿಜ್ಞಾನ ಕಿಂಕುರ್ವಾಣತೆಗಳುಳ್ಳಾತನೇ ಜಂಗಮ. ಅಂಥ ಭಕ್ತಜಂಗಮರ ಸಮ್ಮೇಳನವೇ ಸಮ್ಮೇಳನ. ಉಳಿದ ಅರೆಭಕ್ತರ ಸಂಗ ನಮ್ಮ ಗುಹೇಶ್ವರ ಲಿಂಗಕ್ಕೆ ಸೊಗಸದು."

ಈ ಮಾತಿಗೆ ಹಡಪದಪ್ಪಣ್ಣಗಳು ಬಿನ್ನೈಸಿದ್ದೇನಂದರೆ "ಪ್ರಭುವೇ ತನ್ನ ಹೊರತು ಮರ್ತ್ಯಲೋಕದಲ್ಲಿ ಲಿಂಗಕ್ಕಾಧಾರವಿಲ್ಲೆಂದು ಭೂಮಿಗವತರಿಸಿದನಯ್ಯ ಬಸವಣ್ಣನು. ಜಂಗಮಮುಖ ಲಿಂಗವೆಂಬುದನರಿಯಬಲ್ಲನಯ್ಯಾ ಬಸವಣ್ಣನು. ಭೃತ್ಯಾಚಾರವೇ ತನುವಾಗಿರಬಲ್ಲನಯ್ಯಾ ಬಸವಣ್ಣನು. ಕೀರ್ತಿವಾರ್ತೆಯ ಜರಿದು ಸಹಜ ದಾಸೋಹಿಯಾಗಿರಬಲ್ಲನಯ್ಯಾ ಬಸವಣ್ಣನು. ಬಸವಪ್ರಿಯ ಕೂಡಲಚನ್ನಸಂಗನಶರಣ ಬಸವಣ್ಣನೇ ನಿಮಗೆ ಭಕ್ತನಲ್ಲದೆ ಮತ್ತಾರನು ಕಾಣೆನಯ್ಯ."

ಇದನ್ನು ಕೇಳಿ ಪ್ರಭುದೇವರು "ನಮ್ಮಲ್ಲಿ ಭಕ್ತಿಯುಂಟು. ನಿಮ್ಮಲ್ಲಿ ಭಕ್ತಿಯುಂಟೆಂದರೆ ಶಿವಶರಣರು ಮೆಚ್ಚುವರೆ? ಮಾತಿನ ಅದ್ವೈತನ ಕಲಿತು ಮೋಸಗೊಳಿಸುವವರೆಲ್ಲ ಭಕ್ತರಪ್ಪರೇ? ಬಂದ ಜಂಗಮದ ಇಂಗಿತವನರಿದು ಇದಿರೆದ್ದು ವಂದಿಸಿ ಕೈಮುಗಿದು ನಡುನಡುಗಿ ಕಿಂಕರನಾಗಿ ಭಯಭೀತಿ ಭೃತ್ಯಾಚಾರವಾಗಿರಬಲ್ಲರೆ ಅದು ಭಕ್ತಿ. ಅದು ಮಾರ್ಗ. ಬಂದವರಾರೆಂದರಿಯದೆ, ನಿಂದ ನಿಲವನರಿಯದೆ ಕೆಮ್ಮನೆ ಅಹಂಕಾರವ ಹೊತ್ತುಕೊಂಡು ಇಪ್ಪವರಿಗೆ ನಮ್ಮ ಗುಹೇಶ್ವರಲಿಂಗನೊಲ್ಲ ನೋಡಾ." ಎಂದು ಹೇಳಿದರು.

ಈ ಮಾತನ್ನು ಕೇಳಿ ಅಪ್ಪಣ್ಣಗಳು ಮರಳಿ ಬಸವರಾಜದೇವರಿಗೆ ಅರಿಕೆ ಮಾಡಿಕೊಂಡಿದ್ದೇನಂದರೆ “ನಾನು ನಿಮ್ಮ ಶರಣರ ಮನೆಯ ಬಡ ಸೇವಕನಯ್ಯ. ನಿಮ್ಮ ಶರಣರು ಎನ್ನಿಚ್ಚೆಗೆ ಬಪ್ಪರೇ? ಎನ್ನ ನುಡಿ ನಿಮ್ಮ ಶರಣರ ತಾಗಬಲ್ಲುದೇ? ನಿಮ್ಮಾಶ್ರಯದಲ್ಲಿ ಉದಕವ ಹೊರೆವ ಹಡಪಿಗ ನಾನಯ್ಯ ಬಸವಪ್ರಿಯ ಕೂಡಲ ಚೆನ್ನಸಂಗನ ಶರಣರು ಎನ್ನ ಮಾತಿಂಗೆ ಬಾರರು. ನೀವೇ ಹೋಗಿ ಚರಣವಿಡಿದು ಬಿಜಯಂಗೈಸಿಕೊಂಡು ಬಾರಾ ಸಂಗನಬಸವಣ್ಣಾ.”

ಅಷ್ಟರಲ್ಲಿ ಚೆನ್ನಬಸವಣ್ಣನವರು ಅಲ್ಲಿಗೆ ಬಂದು ಬಸವಣ್ಣನವರಿಗೆ ಬಿನ್ನೈಸಿಕೊಂಡದ್ದೇನಂದರೆ “ಅಂಗದ ಮೇಲೆ ಲಿಂಗವುಳ್ಳನೆಲ್ಲವೂ ಸಂಗಮನಾಥನೆಂದು ನಂಬಿದ ನಂಬಿಗೆಯು ಬಂದ ಶರಣರ ನಿಲವನರಿಯದಿದ್ದರೆ ತಪ್ಪಿತ್ತು ನೋಡಾ! ಗುರುವೆ, ಸಂಗಮನಾಥ ಮನೆಗೆ ಅಂಗವಿಡಿದು ಬಂದರೆ ಗುಮ್ಮನೆ ಇದಿರೆದ್ದು ವಂದಿಸಬೇಕು ನೋಡಯ್ಯಾ! ಕೂಡಲಚನ್ನಸಂಗನ ಶರಣರಾದ ಪ್ರಭುದೇವರು ಸಿದ್ಧರಾಮಯ್ಯದೇವರು ಬಂದು ಬಾಗಿಲದಲ್ಲಿರಲು ಕಣ್ಣರಿಯದಿದ್ದರೂ ಕರುಳರಿಯಬಾರದೇ ಸಂಗನಬಸವಣ್ಣಾ.”

ಈ ವಾಕ್ಯವ ಕೇಳಿದಾಕ್ಷಣವೇ ಬಸವರಾಜ ದೇವರು ಹಮ್ಮೃದಂಬೋಗಿ ನಡುನಡುಗಿ ಭಯಾರ್ಣವದೊಳ್ಮುಳುಗಿ ಕಂಗಳ ಬಾಷ್ಪದೊಳ್ಮುಂದುಗಾಣದೆ ಚಿಕ್ಕದಣ್ಣಾಯಕರ ಪಾದದ ಮೇಲೆ ಬಿದ್ದು ಪ್ರಭುದೇವರ ಮುನಿಸಿಗೆ ತಾನು ಕಾರಣನಾದೆನಲ್ಲ? ಎಂದು ಬಹು ಹಳಹಳಿಬಟ್ಟರು. “ಇನ್ನೇವೆನಿನ್ನೇವೆ? ಕೆಮ್ಮನೆ ಕೆಟ್ಟೆನು. ನಿಮ್ಮ ಶರಣರು ಬಂದು ಬಾಗಿಲೊಳಿರಲು ಸುಮ್ಮನಿದಿರೆದ್ದು ವಂದಿಸಲರಿಯದೆ ಕೆಟ್ಟೆ ಕೇಡನ್ನೇನೆಂದುಪಮಿಸುವೆನು? ನವರತ್ನವ ಕಿತ್ತು ಮಡುವಿನಲ್ಲಿ ಹಾಕಿದ ಕಪಿಯಂತಾಯಿತ್ತೆನ್ನ ಭಕ್ತಿ. ಕೂಡಲಸಂಗಮದೇವರ ತಂದು ಕೊಟ್ಟರೆ ನಿಮ್ಮ ಚಮ್ಮಾವುಗೆಯ ಹೊತ್ತುಕೊಂಡು ಕುಣಿದಾಡುವೆ ಕಾಣಾ ಚೆನ್ನಬಸವಣ್ಣಾ.”

ಆಗ ಚಿಕ್ಕದಣ್ಣಾಯಕರು ಬಸವರಾಜ ದೇವರ ಪಾದಕ್ಕೆ ನಮಸ್ಕರಿಸಿ “ಹೋ ಹೋ ಗುರುವೆ, ನಿಮ್ಮ ಚಮ್ಮಾವುಗೆಯ ಬಂಟ ನಾನಾಗಿರಲು ಅಂಜುವರೆ? ಅಳುಕುವರೆ? ಸಂಗಮನಾಥ ಬಂದು ನಿಮ್ಮ ಮನವ ನೋಡಲೆಂದು ಲೀಲೆಯಿಂದ ನಿಮಗೆ ಕಾಡಿದರೆ ಅದು ಸಹಜವಾಗಬಲ್ಲದೇ?

ಕೂಡಲಚೆನ್ನಸಂಗನ ಶರಣರ ಕರೆವರೆ ಎನ್ನ ಮನವೆಂಬ ಚಮ್ಮಾವುಗೆಯ ಮೆಟ್ಟಿ ನಡೆಯಾ ಸಂಗನಬಸವಣ್ಣಾ." ಎಂದು ಹೇಳಿದರು.

ಈ ಮಾತಿಗೆ ಹಿಗ್ಗಿ ಬಸವಣ್ಣನವರು " ನಂಬಿದೆನಯ್ಯಾ ನಾನು. ನಚ್ಚಿದೆನಯ್ಯಾ ನಾನು. ಬದುಕಿದೆನಯ್ಯಾ ನಾನು. ಕೆಸರಿನಲ್ಲಿ ಸಿಕ್ಕ ಕರುವ ಕಡೆಗೆ ತೆಗೆದು ತಾಯಿಗೆ ತೋರುವಂತೆ ಪಾಪಪಂಕದಲ್ಲಿ ಬಿದ್ದಂಥ ನನ್ನನ್ನೆಬ್ಬಿಸಿ ಶರಣರ ಪಾದವ ತೋರಿದನು ಚೆನ್ನಬಸವಣ್ಣನು. ಹೋದ ಜೀವಕ್ಕೆ ಕರುಣವೆಂಬ ಸಂಜೀವನವ ಸೋಂಕಿಸಿ ಎನ್ನನುಳುಹಿದನು ಚೆನ್ನಬಸವಣ್ಣನು." ಎಂದು ಸಂತೋಷವನ್ನು ವ್ಯಕ್ತಗೊಳಿಸಿದರು.

ಅಷ್ಟರಲ್ಲಿ ಸೊಡ್ಡಳಬಾಚರಸರು ಬಂದು "ತಪ್ಪುತಡಿಯೆಂಬದು ನಿಮ್ಮ ಗುಣವಲ್ಲ. ಅಮೃತಸಾಗರದೊಳಗೆ ಬೇವಿನ ಬಿಂದುವುಂಟೆ? ಮನವ ನೋಡಲೆಂದು ನಾಟಕ ಹೂಡಿದರೆ ಅದು ಸಹಜವಲ್ಲ. ಅದು ಕಾರಣ ಅಂಜಬೇಡವೇಳಾ ಸಂಗನಬಸವಣ್ಣಾ. " ಎಂದು ಹೇಳಿ ಸನುಮತ ಮಾಡಿದರು.

ಆ ಮೇಲೆ ಬಸವಣ್ಣನವರು ಅಪ್ಪಣ್ಣ, ಚೆನ್ನಬಸವಣ್ಣ, ಬಾಚರಸರನ್ನು ಕುರಿತು ಈ ಪ್ರಕಾರವಾಗಿ ಮಾತಾಡಿದರು.. "ಲಿಂಗಪೂಜೆಯ ಮಾಡುವೆನಯ್ಯಾ ಜಂಗಮವೆನ್ನ ಮಠಕ್ಕೆ ಬರಬೇಕೆಂದು. ಆ ಜಂಗಮವೆನ್ನ ಮಠಕ್ಕೆ ಬಂದರೆ ಲಿಂಗಾರ್ಚನೆಯ ಬಿಟ್ಟು ಜಂಗಮಾರ್ಚನೆಯ ಮಾಡುವೆನು. ಅದೇನು ಕಾರಣವೆಂದರೆ ಲಿಂಗದಲ್ಲಿ ಫಲಪದ ಭವಗಳುಂಟು. ಜಂಗಮದಲ್ಲಿ ಫಲಪದ ಭವತ್ರಿವಿಧ ನಾಸ್ತಿ.

ಲಿಂಗಾರ್ಚನಂ ನ ಕರ್ತವ್ಯಂ ಕರ್ತವ್ಯಂ ಜಂಗಮಾರ್ಚನಂ।
ಲಿಂಗ ಜಂಗಮ ಸಂಯುಕ್ತೇ ಜಂಗಮಂತು ವಿಶೇಷಿತಂ ॥

ಎಂಬುದಾಗಿ ಕೂಡಲ ಸಂಗಮದೇವಯ್ಯ ನಾನು ಭವ ಭವಾಂತರ ನಿಮ್ಮ ಜಂಗಮಾರ್ಚನೆಯ ಮಾಡುವೆನು. ಎನ್ನ ಶಿರವನವರ ಪಾದಕ್ಕೆ ಪೂಜೆಯ ಮಾಡುವೆನು. "

ಇಷ್ಟಾದ ಬಳಿಕ ಬಸವಣ್ಣನವರು ಊರಲ್ಲಿ ತಳಿರ್ತೋರಣಂಗಳನ್ನು ಕಟ್ಟಿಸಿ ಪಟ್ಟಣವನ್ನು ನಾನಾ ವಿಧದಿಂದ ಶೃಂಗರಿಸಿ ಅಸಂಖ್ಯಾತ ಪ್ರಮಥರೊಂದಿಗೆ ಪಂಚಮಹಾವಾದ್ಯ, ಧೂಪಾರತಿ, ಘಂಟೆ ಸಹಿತವಾಗಿ ಸಂಭ್ರಮದಿಂದ ಪ್ರಭುದೇವರನ್ನು ಕರೆಯಲಿಕ್ಕೆ ಹೋದರು. ಇದನ್ನು ಕಂಡು

ಪ್ರಭುದೇವರು ಸಿದ್ಧರಾಮಯ್ಯ ದೇವರಿಗೆ ನುಡಿದುದೇನೆಂದರೆ "ಅಗ್ಗಳಿಕೆ ಭಕ್ತರಿಗೆ ಅಹಂಕಾರವಾಯಿತ್ತು ನೋಡಾ ಸಿದ್ಧರಾಮಯ್ಯ. ಭೃತ್ಯನಿದ್ದೆಡೆಗ ಕರ್ತನೈತಂದರೆ ಇಂತು ಆಡಂಬರದಿಂದ ಕರೆಯಬಹುದೇ? ಬಸವಣ್ಣನಲ್ಲಿ ಇಂತು ಮರವೆ ಹುಟ್ಟಿದ ಬಳಿಕ ಉಳಿದ ಶಿವಭಕ್ತರ ಪಾಡೇನು ಹೇಳಾ? ಗುಹೇಶ್ವರ ಲಿಂಗವನು ಭಕ್ತಿರತಿಯಿಂದ ಮನಮುಟ್ಟಿ ಕರೆದರೆ ಹೋಹುದಲ್ಲದೆ ವ್ಯರ್ಥಕ್ಕೆ ಹೋಗಲಾರದು ನೋಡಯ್ಯ" ಅದಕ್ಕೆ ಸಿದ್ಧರಾಮಯ್ಯ ದೇವರು "ನಿಮ್ಮ ಶಕ್ತಿ ಆತನಲ್ಲಿಪ್ಪುದು. ಆತನ ಪ್ರಾಣ ನಿಮ್ಮಲ್ಲಿರ್ಪುದು. ನಿಮ್ಮ ತಮ್ಮ ಭೇದವನಾರು ಬಲ್ಲರು ಹೇಳಯ್ಯಾ? ಕಪಿಲಸಿದ್ಧ ಮಲ್ಲಿನಾಥಯ್ಯ, ನಿಮ್ಮ ಶರಣ ಬಸವಣ್ಣನ ಅನುವ ನೀವೇ ಬಲ್ಲಿರಿ." ಎಂದು ವಿಜ್ಞಾಪಿಸಿದರು.

## ಬಸವೇಶನು ಪ್ರಭುವಿಗೆ ನಮಸ್ಕರಿಸಿದ್ದು.

ಆ ವೇಳೆ ಬಸವರಾಜದೇವರು ಅಸಂಖ್ಯಾತ ಪ್ರಮಥ ಗಣಂಗಳೊಂದಿಗೆ ಬಂದು ಪ್ರಭುವಿನ ಪಾದದರ್ಶನದಿಂದ ಸಂತುಷ್ಟರಾಗಿ "ಭವರೋಗ ವೈದ್ಯನೆಂದು ನಂಬಿದೆನು ಕರುಣಿಸಯ್ಯಾ ಜಯ ಜಯ ಶ್ರೀ ಮಹಾದೇವ ಕೂಡಲಸಂಗಮದೇವಯ್ಯಾ ನಿಮ್ಮ ಶ್ರೀ ಪಾದಕ್ಕೆ ನಮೋ ನಮೋ ಎಂಬೆನು.

"ಕಂಡೊಡೆ ಕಡುಸುಖವೆನಗೆ ಕಾಣದಿರ್ದೊಡೆ ಬಹುದುಃಖವಯ್ಯಾ. ತವಕದ ಸ್ನೇಹದ ದರ್ಶನದಲ್ಲಿ ತರಹರವಾಯಿತ್ತು ಕೂಡಲಸಂಗಮದೇವಾ ನಿಮ್ಮ ಶ್ರೀಪಾದವ ಕಂಡು ಧನ್ಯನಾದೆನು."

"ದೀರ್ಘದಂಡ ನಮಸ್ಕಾರಂ ನಿರ್ಲಜ್ಜಂ ಗುರುಸನ್ನಿಧೌ।
ಶರೀರಮರ್ಥಪ್ರಾಣಂಚ ಸದ್ಗುರುಭ್ಯೋ ನಿವೇದಯೇತ್॥

ಎಂಬುದಾಗಿ ತ್ರಾಹಿ ತ್ರಾಹಿ ಶರಣಾರ್ಥಿ ನೀವೇ ಬಲ್ಲಿರಿ. ಕೂಡಲಸಂಗಮದೇವಾ ನಿಮ್ಮ ಶ್ರೀಪಾದದ ಬೆಳಗ ಕಂಡು ಎನ್ನಂತರಂಗದ ಕತ್ತಲೆ ಓಡಿತ್ತಯ್ಯಾ"

ಅಷ್ಟರಲ್ಲಿ ಪ್ರಭುದೇವರು ಕಣ್ಮರೆಯಾಗಲು ಬಸವಣ್ಣನವರು "ಕಂಡಿಹೆನೆಂದರೆ ಕಣ್ಣ ಮರೆ ಮಾಡಿದ. ಕೇಳಿಹೆನೆಂದರೆ ಕಿವಿಗೆ ಮರೆ ಮಾಡಿದ. ಮುಟ್ಟಿಹೆನೆಂದರೆ ಕೈಗೆ ಮರೆ ಮಾಡಿದ. ಸೋಂಕಿಹೆನೆಂದರೆ ತನುವಿಗೆ

ಕೂಡಲಚೆನ್ನಸಂಗನ ಶರಣರ ಕರೆವರೆ ಎನ್ನ ಮನವೆಂಬ ಚಮ್ಮಾವುಗೆಯ ಮೆಟ್ಟಿ ನಡೆಯಾ ಸಂಗನಬಸವಣ್ಣಾ." ಎಂದು ಹೇಳಿದರು.

ಈ ಮಾತಿಗೆ ಹಿಗ್ಗಿ ಬಸವಣ್ಣನವರು "ನಂಬಿದೆನಯ್ಯಾ ನಾನು. ನಚ್ಚಿದೆನಯ್ಯಾ ನಾನು. ಬದುಕಿದೆನಯ್ಯಾ ನಾನು. ಕೆಸರಿನಲ್ಲಿ ಸಿಕ್ಕ ಕರುವ ಕಡೆಗೆ ತೆಗೆದು ತಾಯಿಗೆ ತೋರುವಂತೆ ಪಾಪಸಂಕದಲ್ಲಿ ಬಿದ್ದಂಥ ನನ್ನನ್ನೆಬ್ಬಿಸಿ ಶರಣರ ಪಾದವ ತೋರಿದನು ಚೆನ್ನಬಸವಣ್ಣನು. ಹೋದ ಜೀವಕ್ಕೆ ಕರುಣವೆಂಬ ಸಂಜೀವನವ ಸೋಂಕಿಸಿ ಎನ್ನನುಳುಹಿದನು ಚೆನ್ನಬಸವಣ್ಣನು." ಎಂದು ಸಂತೋಷವನ್ನು ವ್ಯಕ್ತಗೊಳಿಸಿದರು.

ಅಷ್ಟರಲ್ಲಿ ಸೊಡ್ಡಳಬಾಚರಸರು ಬಂದು "ತಪ್ಪುತಡಿಯೆಂಬದು ನಿಮ್ಮ ಗುಣವಲ್ಲ. ಅಮೃತಸಾಗರದೊಳಗೆ ಬೇವಿನ ಬಿಂದುವುಂಟೆ? ಮನವ ನೋಡಲೆಂದು ನಾಟಕ ಹೂಡಿದರೆ ಅದು ಸಹಜವಲ್ಲ. ಅದು ಕಾರಣ ಅಂಜಬೇಡವೇಳಾ ಸಂಗನಬಸವಣ್ಣಾ." ಎಂದು ಹೇಳಿ ಸನುಮತ ಮಾಡಿದರು.

ಆ ಮೇಲೆ ಬಸವಣ್ಣನವರು ಅಪ್ಪಣ್ಣ, ಚೆನ್ನಬಸವಣ್ಣ, ಬಾಚರಸರನ್ನು ಕುರಿತು ಈ ಪ್ರಕಾರವಾಗಿ ಮಾತಾಡಿದರು.. "ಲಿಂಗಪೂಜೆಯ ಮಾಡುವೆನಯ್ಯಾ ಜಂಗಮವೆನ್ನ ಮಠಕ್ಕೆ ಬರಬೇಕೆಂದು. ಆ ಜಂಗಮವೆನ್ನ ಮಠಕ್ಕೆ ಬಂದರೆ ಲಿಂಗಾರ್ಚನೆಯ ಬಿಟ್ಟು ಜಂಗಮಾರ್ಚನೆಯ ಮಾಡುವೆನು. ಅದೇನು ಕಾರಣವೆಂದರೆ ಲಿಂಗದಲ್ಲಿ ಫಲಪದ ಭವಗಳುಂಟು. ಜಂಗಮದಲ್ಲಿ ಫಲಪದ ಭವತ್ರಿವಿಧ ನಾಸ್ತಿ.

ಲಿಂಗಾರ್ಚನಂ ನ ಕರ್ತವ್ಯಂ ಕರ್ತವ್ಯಂ ಜಂಗಮಾರ್ಚನಂ।
ಲಿಂಗ ಜಂಗಮ ಸಂಯುಕ್ತೇ ಜಂಗಮಂತು ವಿಶೇಷಿತಂ॥

ಎಂಬುದಾಗಿ ಕೂಡಲ ಸಂಗಮದೇವಯ್ಯ ನಾನು ಭವ ಭವಾಂತರ ನಿಮ್ಮ ಜಂಗಮಾರ್ಚನೆಯ ಮಾಡುವೆನು. ಎನ್ನ ಶಿರವನವರ ಪಾದಕ್ಕೆ ಪೂಜೆಯ ಮಾಡುವೆನು."

ಇಷ್ಟಾದ ಬಳಿಕ ಬಸವಣ್ಣನವರು ಊರಲ್ಲಿ ತಳಿರ್ದೋರಣಂಗಳನ್ನು ಕಟ್ಟಿಸಿ ಪಟ್ಟಣವನ್ನು ನಾನಾ ವಿಧದಿಂದ ಶೃಂಗರಿಸಿ ಅಸಂಖ್ಯಾತ ಪ್ರಮಥರೊಂದಿಗೆ ಪಂಚಮಹಾವಾದ್ಯ, ಧೂಪಾರತಿ, ಘಂಟೆ ಸಹಿತವಾಗಿ ಸಂಭ್ರಮದಿಂದ ಪ್ರಭುದೇವರನ್ನು ಕರೆಯಲಿಕ್ಕೆ ಹೋದರು. ಇದನ್ನು ಕಂಡು

ಪ್ರಭುದೇವರು ಸಿದ್ಧರಾಮಯ್ಯ ದೇವರಿಗೆ ನುಡಿದುದೇನೆಂದರೆ "ಅಗ್ಗಳಿಕೆ ಭಕ್ತರಿಗೆ ಅಹಂಕಾರವಾಯಿತ್ತು ನೋಡಾ ಸಿದ್ಧರಾಮಯ್ಯ. ಭೃತ್ಯನಿದ್ದೆಡೆಗೆ ಕರ್ತನೈತಂದರೆ ಇಂತು ಆಡಂಬರದಿಂದ ಕರೆಯಬಹುದೇ? ಬಸವಣ್ಣನಲ್ಲಿ ಇಂತು ಮರವೆ ಹುಟ್ಟಿದ ಬಳಿಕ ಉಳಿದ ಶಿವಭಕ್ತರ ಪಾಡೇನು ಹೇಳಾ? ಗುಹೇಶ್ವರ ಲಿಂಗವನು ಭಕ್ತಿರತಿಯಿಂದ ಮನಮುಟ್ಟಿ ಕರೆದರೆ ಹೋಹುದಲ್ಲದೆ ವ್ಯರ್ಥಕ್ಕೆ ಹೋಗಲಾರದು ನೋಡಯ್ಯ" ಅದಕ್ಕೆ ಸಿದ್ಧರಾಮಯ್ಯ ದೇವರು "ನಿಮ್ಮ ಶಕ್ತಿ ಆತನಲ್ಲಿಪ್ಪುದು. ಆತನ ಪ್ರಾಣ ನಿಮ್ಮಲ್ಲಿಪ್ಪುದು. ನಿಮ್ಮ ತಮ್ಮ ಭೇದವನಾರು ಬಲ್ಲರು ಹೇಳಯ್ಯಾ? ಕಪಿಲಸಿದ್ಧ ಮಲ್ಲಿನಾಥಯ್ಯ, ನಿಮ್ಮ ಶರಣ ಬಸವಣ್ಣನ ಅನುವ ನೀವೇ ಬಲ್ಲಿರಿ." ಎಂದು ಪಿಜ್ಞಾಪಿಸಿದರು.

## ಬಸವೇಶನು ಪ್ರಭುವಿಗೆ ನಮಸ್ಕರಿಸಿದ್ದು.

ಆ ಮೇಲೆ ಬಸವರಾಜದೇವರು ಅಸಂಖ್ಯಾತ ಪ್ರಮಥ ಗಣಂಗಳೊಂದಿಗೆ ಬಂದು ಪ್ರಭುವಿನ ಪಾದದರ್ಶನದಿಂದ ಸಂತುಷ್ಟರಾಗಿ "ಭವರೋಗ ವೈದ್ಯನೆಂದು ನಂಬಿದೆನು ಕರುಣಿಸಯ್ಯಾ ಜಯ ಜಯ ಶ್ರೀ ಮಹಾದೇವ ಕೂಡಲಸಂಗಮದೇವಯ್ಯಾ ನಿಮ್ಮ ಶ್ರೀ ಪಾದಕ್ಕೆ ನಮೋ ನಮೋ ಎಂಬೆನು.

"ಕಂಡೊಡೆ ಕಡುಸುಖವೆನಗೆ ಕಾಣದಿದ್ದೊಡೆ ಬಹುದುಃಖವಯ್ಯಾ. ತವಕದ ಸ್ನೇಹದ ದರ್ಶನದಲ್ಲಿ ತರಹರವಾಯಿತ್ತು ಕೂಡಲಸಂಗಮದೇವಾ ನಿಮ್ಮ ಶ್ರೀಪಾದವ ಕಂಡು ಧನ್ಯನಾದೆನು."

"ದೀರ್ಘದಂಡ ನಮಸ್ಕಾರಂ ನಿರ್ಲಜ್ಜಂ ಗುರುಸನ್ನಿಧೌ।
ಶರೀರಮರ್ಥಪ್ರಾಣಂಚ ಸದ್ಗುರುಭ್ಯೋ ನಿವೇದಯೇತ್ ॥

ಎಂಬುದಾಗಿ ತ್ರಾಹಿ ತ್ರಾಹಿ ಶರಣಾರ್ಥಿ ನೀವೇ ಬಲ್ಲಿರಿ. ಕೂಡಲಸಂಗಮದೇವಾ ನಿಮ್ಮ ಶ್ರೀಪಾದದ ಬೆಳಗ ಕಂಡು ಎನ್ನಂತರಂಗದ ಕತ್ತಲೆ ಓಡಿತ್ತಯ್ಯಾ"

ಅಷ್ಟರಲ್ಲಿ ಪ್ರಭುದೇವರು ಕಣ್ಮರೆಯಾಗಲು ಬಸವಣ್ಣನವರು "ಕಂಡಿಹೆನೆಂದರೆ ಕಣ್ಣ ಮರೆ ಮಾಡಿದ. ಕೇಳಿಹೆನೆಂದರೆ ಕಿವಿಗೆ ಮರೆ ಮಾಡಿದ. ಮುಟ್ಟಿಹೆನೆಂದರೆ ಕೈಗೆ ಮರೆ ಮಾಡಿದ. ಸೋಂಕಿಹೆನೆಂದರೆ ತನುವಿಗೆ

ಮರೆ ಮಾಡಿದ. ನೆನೆದಿಹೆನೆಂದರೆ ಮನಕ್ಕೆ ಮರೆ ಮಾಡಿದ. ಅರಿದಿಹೆನೆಂ ನರೆ ಅಂತರಂಗಕ್ಕೆ ಮರೆ ಮಾಡಿದ. ಪೂಜಿಸಿಹೆನೆಂದರೆ ಕ್ರಿಗೆ ಮರೆಮಾ ಡಿದ. ಕೂಡಲಸಂಗಮದೇವರೊಡನೆ ಅಹಂಕಾರವ ಮಾಡಿ ಕೆಟ್ಟ ಕೇಡ ನೇನೆಂದುಸಮಿಸುವೆನು? ಅನಂತಕೋಟಿ ಸ್ನಾನವ ಮಾಡಿದಡೇನು? ಒಂದು ನಿಮಿಷದ ಉದಾಸೀನ ಕೆಡಿಸಿತ್ತು. ನಿಮ್ಮ ನಂಬಿಯು ನಂಬದ ಡಂಭಕ ನಾನು. "

" ಎನ್ನವರೆನಗೊಲಿದು ಹೊನ್ನ ಶೂಲದಲ್ಲಿಕ್ಕಿದರಯ್ಯಾ ? ಅಹಂಕಾರ ಗಾಯದಲ್ಲಿ ನಾನೆಂತು ಬದಕುವೆನು? ನಾನೆಂತು ಜೀವಿಸುವೆನು? ಜಂಗ ಮವಾಗಿ ಬಂದು ಜರಿದು, ಶೂಲವನಿಳುಹಿ, ಪ್ರಸಾದದ ಮದ್ದನಿಕ್ಕಿ ಸಲುಹು ಕೂಡಲಸಂಗಮದೇವಾ. "

ಹೀಗೆ ಅನುತಾಪದಿಂದ ಬಸವರಾಜದೇವರು ನುಡಿಯಲು ಪ್ರಭು ದೇವರು ಅಪ್ಪಣೆ ಕೊಡಿಸಿದ್ದೇನಂದರೆ " ಲಿಂಗಾರ್ಚನೆಯವಸರಕ್ಕೆ ಜಂಗಮ ಮನೆಗೆ ಬಂದರೆ ಲಿಂಗಾರ್ಚನೆಯ ಬಿಟ್ಟು ಜಂಗಮಕ್ಕೆ ಇದಿರೆದ್ದು ವಂದಿಸಿ ಭಕ್ತಿಯ ಮಾಡಬಲ್ಲಾತನೆ ಭಕ್ತ. ಆ ಜಂಗಮ ಹೊರಗಿರಲು ಲಿಂಗಾರ್ಚನೆಯ ಮಾಡುತ್ತಿರ್ಪಾತನೇತರ ಭಕ್ತ? ಜಂಗಮದ ಮುಂದೆ ಲಿಂಗವ ಕೈಯ್ಯಲ್ಲಿ ಹಿಡಿದುಕೊಂಡು ಸಹಪಂಕ್ತಿಯಲ್ಲಿ ಕುಳ್ಳಿರ್ದು ಪೂಜಿ ಸುವಾತ ಭೃತ್ಯಾಚಾರದ್ರೋಹಿಯು. ಆ ಭಕ್ತನ ಮನೆಯ ಹೊಗುವ ಜಂಗಮವೇ ಅಜ್ಞಾನಿ. ನಮ್ಮ ಗುಹೇಶ್ವರನ ಶರಣರ ಕೂಡ ಅಹಂಕಾ ರವ ಹೊತ್ತಿಪ್ಪವರ ಕಂಡೊಡೆ ನಾನೊಲ್ಲೆ ಕಾಣಾ ಸಂಗನಬಸವಣ್ಣಾ."

" ಜಂಗಮವು ಹೊರಗಿರಲು ಲಿಂಗಾರ್ಚನೆ ಆವುದಯ್ಯಾ? ಪ್ರಾಣವ ಹೊರಗಿರಿಸಿ ಎಡೆಯಾಡುವ ದೇಹವುಂಟೆ? ಶರಣರು ಬಂದು ಬಾಗಿಲಲ್ಲಿ ನಿಂದಿರಲು ತನ್ನ ತಾ ಮರೆದವರ ಕಂಡರೆ ನಮ್ಮ ಗುಹೇಶ್ವರಲಿಂಗ ಸೈರಿ ಸಲುಂಟೆ? "

ಆಗ ಬಸವರಾಜದೇವರು ತಮ್ಮ ಲಿಂಗಾರ್ಚನೆಯನ್ನು ಜರಿದು ಈ ಪ್ರಕಾರ ಮಾತನಾಡಿದರು. " ಮುನ್ನೂರರವತ್ತು ದಿನ ಸಾಧನೆಯ ಮಾಡಿ ಕಳವನೇರಿ ಕೈಮರೆತಂತಾಯಿತ್ತೆನ್ನ ಭಕ್ತಿ. ಎನಿಸು ಕಾಲ ಲಿಂಗಾರ್ಚನೆಯ ಮಾಡಿದೊಡೇನು, ಮನದಲ್ಲಿ ದೃಢವಿಲ್ಲದನ್ನಕ್ಕರ? ಕೊಡನ ತುಂಬಿದ ಹಾಲನೊಡೆಯ ಹಾಕಿ ಇನ್ನುಡುಗಿಹೆನೆಂದರೆ ಎನ್ನಳವೆ ಕೂಡಲಸಂಗಮ ದೇವಾ? "

"ಎನಿಸು ಕಾಲ ಕಲ್ಲು ನೀರೊಳಗಿದ್ದರೇನು? ನೆನೆದು ಮೃದುವಾಗಬಲ್ಲುವೆ? ಅಯ್ಯ, ಎನಿಸು ಕಾಲ ನಿಮ್ಮ ಪೂಜಿಸಿದರೇನು ಮನದಲ್ಲಿ ದೃಢವಿಲ್ಲದನಕ್ಕರ? ನಿಧಾನವ ಕಾಯ್ದಿರ್ದ ಬೆಂತರನ ವಿಧಿ ಎನಗಾಯಿತ್ತು ಕಾಣಾ ಕೂಡಲಸಂಗಮದೇವಾ."

"ಎನ್ನ ತಪ್ಪು ಅನಂತಕೋಟಿ. ನಿಮ್ಮ ಸೈರಣೆಗೆ ಕಡೆ ಇಲ್ಲವಯ್ಯಾ ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ಸಾಕ್ಷಿ ಕೂಡಲಸಂಗಮದೇವಾ"

"ಇನ್ನು ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯ. ಒರೆಗೆ ಬಣ್ಣಕ್ಕೆ ತಂದೆನ್ನ ಪುಟಹಾಕಿ ನೋಡಯ್ಯ. ಕಡಿದು ಬಡಿದೆನ್ನ ಕಡಿಯಾಣೆಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು ಕೂಡಲಸಂಗಮದೇವಾ."

ಇಷ್ಟೆಲ್ಲ ಸ್ತುತಿಪರ ವಾಕ್ಯಗಳನ್ನು ಕೇಳಿ ಪ್ರಭುದೇವರು "ಭಕ್ತಿಯುಕ್ತಿಯ ಮಾತು ನಿನಗೇಕೆ ಹೇಳಾ ಬಸವಾ? ಮಾಟಕೂಟವೆಂಬ ಕೀರ್ತಿಗೆ ಸಿಲ್ಕಿ ಜಂಗಮವೇ ಲಿಂಗವೆಂಬುದ ಮರೆದೆಯಲ್ಲ ಬಸವಾ? ಗುಹೇಶ್ವರ ಶರಣರಿಗೆ ತ್ರಿಕರಣವನೊಪ್ಪಿಸಿದಲ್ಲದೆ ಭಕ್ತನಾಗಬಾರದು ಕಾಣಾ ಸಂಗನಬಸವಣ್ಣಾ."

ಅದಕ್ಕೆ ಬಸವಣ್ಣನವರು ತನುಮನಧನಗಳನ್ನು ಲಿಂಗಕ್ಕರ್ಪಿಸಿದೆನೆಂದು ಪ್ರಭುವಿಗೆ ಈ ಪ್ರಕಾರ ನುಡಿದರು. "ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ ಇಂದಿಂಗೆ ನಾಳಿಂಗೆ ಬೇಕೆಂದೆನಾದೊಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ. ನಿಮ್ಮ ಶರಣರಿಗಲ್ಲದೆ ಮತ್ತೊಂದರಿಯೆನು ಕೂಡಲಸಂಗಮದೇವಾ. "ತನುವ ಬೇಡಿದೊಡೀವೆ. ಮನವ ಬೇಡಿದೊಡೀವೆ. ಧನವ ಬೇಡಿದೊಡೀವೆ. ನಿಮ್ಮ ಶರಣರಿಗೆ ಎನಗೆ ಬೇಕೆಂಬ ಭಾವ ಮನದಲ್ಲಿ ಹೊದ್ದಿದರೆ ಘನಮಹಿಮಾ ನಿಮ್ಮ ಪಾದದಾಣೆ ಕೂಡಲಸಂಪಮದೇವಾ."

ಪ್ರಭುದೇವರು ಈ ನುಡಿಯನ್ನು ಖಂಡಿಸಿ ಮಾತನಾಡಿದ್ದೇನಂದರೆ "ಮೇರುಗಿರಿಗಳೆಲ್ಲವು ಪ್ರಮಥರೊಡವೆ. ರಜತಗಿರಿಗಳೆಲ್ಲವು ಪುರಾತನರೊಡವೆ. ಚತುರ್ದಶಭುವನವೆಲ್ಲ ಲಿಂಗದೊಡವೆ. ತನುಮನಧನಂಗಳೆಲ್ಲವು ನಮ್ಮ ಗುಹೇಶ್ವರಲಿಂಗದ ಸೊಮ್ಮು ನೀನೇನಕೊಟ್ಟು ಭಕ್ತನಾದೆ ಹೇಳಾ ಬಸವಣ್ಣಾ? ತನ ಮರ್ಪಿತವೆಂದರೆ ಗುರುದ್ರೋಹ, ಮನವರ್ಪಿ

ಮರೆ ಮಾಡಿದ. ನೆನೆದಿಹೆನೆಂದರೆ ಮನಕ್ಕೆ ಮರೆ ಮಾಡಿದ. ಅರಿದಿಹೆನೆಂ ದರೆ ಅಂತರಂಗಕ್ಕೆ ಮರೆ ಮಾಡಿದ. ಪೂಜಿಸಿಹೆನೆಂದರೆ ಕ್ರಿಗೆ ಮರೆಮಾ ಡಿದ. ಕೂಡಲಸಂಗಮದೇವರೊಡನೆ ಅಹಂಕಾರವ ಮಾಡಿ ಕೆಟ್ಟ ಕೇಡ ನೇನೆಂದುಸಮಿಸುವೆನು? ಅನಂತಕೋಟಿ ಸ್ನಾನವ ಮಾಡಿದಡೇನು? ಒಂದು ನಿಮಿಷದ ಉದಾಸೀನ ಕೆಡಿಸಿತ್ತು. ನಿಮ್ಮ ನಂಬಿಯೂ ನಂಬದ ಡಂಭಕ ನಾನು."

"ಎನ್ನವರೆನಗೊಲಿದು ಹೊನ್ನ ಶೂಲದಲ್ಲಿಕ್ಕಿದರಯ್ಯಾ? ಅಹಂಕಾರ ಗಾಯದಲ್ಲಿ ನಾನೆಂತು ಬದುಕುವೆನು? ನಾನೆಂತು ಜೀವಿಸುವೆನು? ಜಂಗ ಮವಾಗಿ ಬಂದು ಜರಿದು, ಶೂಲವನಿಳುಹಿ, ಪ್ರಸಾದದ ಮುದ್ದನಿಕ್ಕಿ ಸಲುಹು ಕೂಡಲಸಂಗಮದೇವಾ."

ಹೀಗೆ ಅನುತಾಪದಿಂದ ಬಸವರಾಜದೇವರು ನುಡಿಯಲು ಪ್ರಭು ದೇವರು ಅಪ್ಪಣೆ ಕೊಡಿಸಿದ್ದೇನಂದರೆ "ಲಿಂಗಾರ್ಚನೆಯವಸರಕ್ಕೆ ಜಂಗವು ಮನೆಗೆ ಬಂದರೆ ಲಿಂಗಾರ್ಚನೆಯು ಬಿಟ್ಟು ಜಂಗಮಕ್ಕೆ ಇದಿರೆದ್ದು ವಂದಿಸಿ ಭಕ್ತಿಯ ಮಾಡಬಲ್ಲಾತನೆ ಭಕ್ತ. ಆ ಜಂಗಮ ಹೊರಗಿರಲು ಲಿಂಗಾರ್ಚನೆಯ ಮಾಡುತ್ತಿರ್ಪಾತನೇತರ ಭಕ್ತ? ಜಂಗಮದ ಮುಂದೆ ಲಿಂಗವ ಕೈಯ್ಯಲ್ಲಿ ಹಿಡಿದುಕೊಂಡು ಸಹಪಂಕ್ತಿಯಲ್ಲಿ ಕುಳ್ಳಿರ್ದು ಪೂಜಿ ಸುವಾತ ಭೃತ್ಯಾಚಾರದ್ರೋಹಿಯು. ಆ ಭಕ್ತನ ಮನೆಯ ಹೊಗುವ ಜಂಗಮವೇ ಅಜ್ಞಾನಿ. ನಮ್ಮ ಗುಹೇಶ್ವರನ ಶರಣರ ಕೂಡ ಅಹಂಕಾ ರವ ಹೊತ್ತಿಪ್ಪವರ ಕಂಡೊಡೆ ನಾನೊಲ್ಲೆ ಕಾಣಾ ಸಂಗನಬಸವಣ್ಣಾ."

"ಜಂಗಮವು ಹೊರಗಿರಲು ಲಿಂಗಾರ್ಚನೆ ಅವುದಯ್ಯಾ? ಪ್ರಾಣವ ಹೊರಗಿರಿಸಿ ಎಡೆಯಾಡುವ ದೇಹವುಂಟೆ? ಶರಣರು ಬಂದು ಬಾಗಿಲಲ್ಲಿ ನಿಂದಿರಲು ತನ್ನ ತಾ ಮರೆದವರ ಕಂಡರೆ ನಮ್ಮ ಗುಹೇಶ್ವರಲಿಂಗ ಸೈರಿ ಸಲುಂಟೆ?"

ಆಗ ಬಸವರಾಜದೇವರು ತಮ್ಮ ಲಿಂಗಾರ್ಚನೆಯನ್ನು ಜರಿದು ಈ ಪ್ರಕಾರ ಮಾತನಾಡಿದರು. "ಮುನ್ನೂರರವತ್ತು ದಿನ ಸಾಧನೆಯ ಮಾಡಿ ಕಳವನೇರಿ ಕೈಮರೆತಂತಾಯಿತ್ತೆನ್ನ ಭಕ್ತಿ. ಎನಿಸು ಕಾಲ ಲಿಂಗಾರ್ಚನೆಯ ಮಾಡಿದೊಡೇನು, ಮನದಲ್ಲಿ ದೃಢವಿಲ್ಲದನ್ನಕ್ಕರ? ಕೊಡನ ತುಂಬಿದ ಹಾಲನೊಡೆಯ ಹಾಕಿ ಇನ್ನುಡುಗಿಹೆನೆಂದರೆ ಎನ್ನಳವೆ ಕೂಡಲಸಂಗಮ ದೇವಾ?"

"ಎನಿಸು ಕಾಲ ಕಲ್ಲು ನೀರೊಳಗಿದ್ದರೇನು? ನೆನೆದು ಮೃದುವಾಗಬಲ್ಲುದೆ? ಅಯ್ಯ, ಎನಿಸು ಕಾಲ ನಿಮ್ಮ ಪೂಜಿಸಿದರೇನು ಮನದಲ್ಲಿ ದೃಢವಿಲ್ಲದನಕ್ಕರ? ನಿಧಾನರವ ಕಾಯ್ದಿರ್ದ ಬೆಂತರನ ವಿಧಿ ಎನಗಾಯಿತ್ತು ಕಾಣಾ ಕೂಡಲಸಂಗಮದೇವಾ."

"ಎನ್ನ ತಪ್ಪು ಅನಂತಕೋಟಿ. ನಿಮ್ಮ ಸೈರಣೆಗೆ ಕಡೆ ಇಲ್ಲವಯ್ಯಾ ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ಸಾಕ್ಷಿ ಕೂಡಲಸಂಗಮದೇವಾ"

"ಇನ್ನು ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯ. ಒರೆಗೆ ಬಣ್ಣಕ್ಕೆ ತಂದೆನ್ನ ಪುಟಹಾಕಿ ನೋಡಯ್ಯ. ಕಡಿದು ಬಡಿದೆನ್ನ ಕಡಿಯಾಣಿಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು ಕೂಡಲಸಂಗಮದೇವಾ."

ಇಷ್ಟೆಲ್ಲ ಸ್ತುತಿಪರ ವಾಕ್ಯಗಳನ್ನು ಕೇಳಿ ಪ್ರಭುದೇವರು "ಭಕ್ತಿಯುಕ್ತಿಯ ಮಾತು ನಿನಗೇಕೆ ಹೇಳಾ ಬಸವಾ? ಮಾಟಕೂಟವೆಂಬ ಕೀರ್ತಿಗೆ ಸಿಲ್ಕಿ ಜಂಗಮವೇ ಲಿಂಗವೆಂಬುದ ಮರೆದೆಯಲ್ಲ ಬಸವಾ? ಗುಹೇಶ್ವರ ಶರಣರಿಗೆ ತ್ರಿಕರಣವನೊಪ್ಪಿಸಿದಲ್ಲದೆ ಭಕ್ತನಾಗಬಾರದು ಕಾಣಾ ಸಂಗನಬಸವಣ್ಣಾ."

ಅದಕ್ಕೆ ಬಸವಣ್ಣನವರು ತನುಮನಧನಗಳನ್ನು ಲಿಂಗಕ್ಕರ್ಪಿಸಿದೆನೆಂದು ಪ್ರಭುವಿಗೆ ಈ ಪ್ರಕಾರ ನುಡಿದರು. "ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ ಇಂದಿಂಗೆ ನಾಳಿಂಗೆ ಬೇಕೆಂದೆನಾದೊಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ. ನಿಮ್ಮ ಶರಣರಿಗಲ್ಲದೆ ಮತ್ತೊಂದರಿಯೆನು ಕೂಡಲಸಂಗಮದೇವಾ. "ತನುವ ಬೇಡಿದೊಡೀವೆ. ಮನವ ಬೇಡಿದೊಡೀವೆ. ಧನವ ಬೇಡಿದೊಡೀವೆ. ನಿಮ್ಮ ಶರಣರಿಗೆ ಎನಗೆ ಬೇಕೆಂಬ ಭಾವ ಮನದಲ್ಲಿ ಹೊದ್ದಿದರೆ ಘನಮಹಿಮಾ ನಿಮ್ಮ ಪಾದದಾಣೆ ಕೂಡಲಸಂಗಮದೇವಾ."

ಪ್ರಭುದೇವರು ಈ ನುಡಿಯನ್ನು ಖಂಡಿಸಿ ಮಾತನಾಡಿದ್ದೇನಂದರೆ "ಮೇರುಗಿರಿಗಳೆಲ್ಲವು ಪ್ರಮಥರೊಡವೆ. ರಜತಗಿರಿಗಳೆಲ್ಲವು ಪುರಾತನರೊಡವೆ. ಚತುರ್ದಶಭುವನವೆಲ್ಲ ಲಿಂಗದೊಡವೆ. ತನುಮನಧನಂಗಳೆಲ್ಲವು ನಮ್ಮ ಗುಹೇಶ್ವರಲಿಂಗದ ಸೊಮ್ಮು. ನೀನೇನಕೊಟ್ಟು ಭಕ್ತನಾದೆ ಹೇಳಾ ಬಸವಣ್ಣಾ? ತನ ಮರ್ಪಿತವೆಂದರೆ ಗುರುದ್ರೋಹ, ಮನವರ್ಪಿ

ತವೆಂದರೆ ಲಿಂಗದ್ರೋಹ. ಧನವರ್ಪಿತವೆಂದರೆ ಜಂಗಮದ್ರೋಹ. ತನು ಮನಧನಂಗಳೆಲ್ಲವು ಗುರುಲಿಂಗಜಂಗಮವಾದ ಕಾರಣ ನೀನೇನನಿತ್ತು ಭಕ್ತನಾದೆ ಹೇಳಾ ಬಸವಣ್ಣಾ."

ಆಗ ಬಸವಣ್ಣನವರು "ಎಳ್ಳಿಲ್ಲದ ಗಾಣವನ್ನೆಳೆಯುವ ಎತ್ತಿನಂತಾಯಿತ್ತೆನ್ನ ಭಕ್ತಿ. ಕೂಡಲಸಂಗಮದೇವಾ ನಾನು ಮಾಡಿದೆನೆಂಬ ಕಿಚ್ಚು ನನ್ನನ್ನೇ ಸುಟ್ಟಿತ್ತು. ಇನ್ನು ಸಾಲದೆ ಹೇಳಾ ಪ್ರಭುವೆ? ನಾನು ಭಕ್ತನಲ್ಲಯ್ಯ. ನಾನು ಕಪಟವೇಷದ ಡಂಭಕನಯ್ಯ. ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯ. ವಿಚಾರಿಸಿದರೆ ಏನೂ ಹುರುಳಿಲ್ಲವಯ್ಯ. ಪ್ರಪಂಚ ಡಂಭಿನಲ್ಲಿ ಎನ್ನದೊಂದು ರೂಖವ ಮಾಡಿ ನೀವಿರಿಸಿದಿರಿ ಕೂಡಲಸಂಗಮದೇವಾ." ಎಂದುಸುರಿದರು.

ಅದಕ್ಕೆ ಪ್ರಭುದೇವರು "ಒಮ್ಮೆ ಅಹಂಕಾರ, ಒಮ್ಮೆ ಕಿಂಕರವೆ? ಕೈಯ್ಯಲ್ಲಿ ದೊಣ್ಣೆ, ಮನದಲ್ಲಿ ಕ್ರೋಧ, ವಚನದಲ್ಲಿ ಕಿಂಕುರತೆ. ಲಿಂಗದ ವಾರ್ತೆ ನಿನಗೇಕೆ ಹೇಳಾ ಬಸವಾ? ಕಬ್ಬಿಣ ಪರುಷ ಸೋಂಕಿ ಹೊನ್ನಾಯಿತ್ತಲ್ಲದೆ ಪರುಷವಾಗಬಲ್ಲುದೆ ಹೇಳಾ ಬಸವಾ.

ಆ ಮೇಲೆ ಬಸವಣ್ಣನವರು "ಪ್ರಭುವೆ, ಎನ್ನ ತನುಮನಧನಂಗಳೆಲ್ಲ ನಿಮ್ಮವು. ಅರಿವು ಮರವುಗಳೆಲ್ಲ ನಿಮ್ಮವು. ಭೃತ್ಯಾಪರಾಧವನ್ನು ಕ್ಷಮಿಸಬೇಕು ಕೂಡಲಸಂಗಮದೇವಾ" ಎಂದು ಬೇಡಿಕೊಳ್ಳಲು ಪ್ರಭುವು "ತಾ ಬಾಳಲಾರದೆ ವಿಧಿಯ ಬೈದನೆಂಬ ನಾಣ್ನುಡಿಯಂತೆ ಅವಧಾನ ತಪ್ಪಿ ಆಚಾರಗೆಟ್ಟು ನಡೆದು ಶಿವಾಧೀನವೆಂದರೆ ಹೋಹುದೇ ಬಸವಣ್ಣಾ? ಸೂಳೆಯು ಹಲಬರ ಸಂಗ ಮಾಡಿದರೆ ಅವಳನ್ನಾರೂ ನಿಂದಿಸುವದಿಲ್ಲ ನೋಡಾ. ಪತಿವ್ರತೆ ತನ್ನ ಪುರುಷನಲ್ಲದೆ ಮತ್ತೊಬ್ಬನ ಮುಖವ ನೋಡಿದರೆ ಅವಳಿಗೆ ಚಾಂಡಾಲಗಿತ್ತಿಯೆಂಬುದು ಲೋಕವೆಲ್ಲವು. ಕೀರ್ತಿವಾರ್ತೆಗೆ ಮಾಡುವ ಭಕ್ತನು ತಪ್ಪಿದರೆ ಅದೇನು ಅಷ್ಟು ಮಹತ್ವದ್ದಲ್ಲ. ಆದರೆ ಸಜ್ಜನ ಸದ್ಭಕ್ತನೆಡಹಿದರೆ ಅದನ್ನು ಸೈರಿಸಬಾರದು ನೋಡಾ. ನಮ್ಮ ಗುಹೇಶ್ವರ ಲಿಂಗಕ್ಕೆ ಅನಾದಿಯಿಂದತ್ತತ್ತ ನೀನೇ ಭಕ್ತನಾದ ಕಾರಣ ಮನ ನೊಂದಿತ್ತು ಕಾಣಾ ಸಂಗನಬಸವಣ್ಣಾ."

ಇದನ್ನು ಕೇಳಿ ಬಸವರಾಜದೇವರು "ನೆಲ ಹೊತ್ತಿ ಉರಿದರೆ, ಏರಿ ನೀರುಂಡರೆ, ಬೇಲಿ ಹೊಲ ಮೆಯ್ದೊಡೆ, ನಾರಿ ಮನೆ ಕಳೆವರೆ, ತಾಯಿಯ

ಹಾಲು ನಂಜಾಗಿ ಶಿಶುವ ಕೊಲುವರೆ ಇನ್ನಾರಿಗೆ ದೂರುವೆನಯ್ಯಾ ಕೂಡಲಸಂಗಮದೇವಾ? ನೀನು ಮುನಿವರೆ ನಾನು ಸೈರಿಸಬಲ್ಲೆನೆ ಹೇಳಾ ಪ್ರಭುವೆ?

"ಎನ್ನ ಗತಿ ಮತಿ ನೀನೆ ಕಂಡಯ್ಯಾ. ಎನ್ನ ಗುರು ಪರಮಗುರು ನೀನೆ ಕಂಡಯ್ಯಾ. ಎನ್ನಂತರಂಗದ ಜ್ಯೋತಿ ನೀನೆ ಕಂಡಯ್ಯಾ ಕೂಡಲ ಸಂಗಮದೇವಾ." ಎಂದು ಹೇಳಿದರು.

ಇಷ್ಟಾದ ಮೇಲೆ ಸಿದ್ಧರಾಮಯ್ಯದೇವರು ಪ್ರಭುದೇವರಿಗೆ ಬಿಜಯಂಗೈಯ್ಯಬೇಕೆಂದು ಬೇಡಿಕೊಂಡರು. ಚಿಕ್ಕದಣ್ಣಾಯಕರು ಪ್ರಭುದೇವರಿಗೆ ನಮಸ್ಕಾರ ಮಾಡಿ ಅರಿಕೆ ಮಾಡಿಕೊಂಡದ್ದೇನಂದರೆ "ನಿಮ್ಮ ಕಾಯವೆ ಬಸವಣ್ಣನ ಕಾಯ. ನಿಮ್ಮ ಪ್ರಾಣವೆ ಬಸವಣ್ಣನ ಪ್ರಾಣ ನೀವಿಲ್ಲದಿದ್ದರೆ ಬಸವಣ್ಣನಿಲ್ಲ. ಬಸವಣ್ಣನಿಲ್ಲದಿದ್ದರೆ ನೀವಿಲ್ಲ. ಮುಕ್ಕರಿಸಿದ ತುರಗವ ನಡೆಯಿಸಿಕೊಳ್ಳಬೇಕಲ್ಲದೆ ಕಾಲ ಕತ್ತರಿಸಿದವರುಂಟೆ? ಆದು ಕಾರಣ ಬಸವಣ್ಣನ ತಪ್ಪನ್ನು ಮನ್ನಿಸಿ ಬಿಜಯಂಗೈವುದು ಪ್ರಭುವೆ.

ಮಡಿವಾಳ ಮಾಚಿದೇವರು ಪ್ರಭುದೇವರಿಗೆ ಈ ಪ್ರಕಾರ ಅರಿಕೆ ಮಾಡಿಕೊಂಡರು, "ಬಸವಣ್ಣನು ಗುರುವಾಗಿ ಚನ್ನಬಸವಣ್ಣನು ಲಿಂಗವಾಗಿ ನೀವು ಜಂಗಮವಾಗಿ ಮರ್ತ್ಯಕ್ಕೆ ಬಂದಿರಿ. ಗುರುಲಿಂಗ ಜಂಗಮದಲ್ಲಿ ಭಿನ್ನಭಾವವುಂಟೆ? ಬಸಸವಣ್ಣ ಚನ್ನಬಸವಣ್ಣನವರ ಬಿನ್ನಪವ ಮೀರದೆ ಬಿಜಯಂಗೈವುದಯ್ಯಾ ಕಲಿದೇವರ ದೇವಾ."

ಆ ಮೇಲೆ ಪ್ರಭುದೇವರು ಪ್ರಸನ್ನರಾಗಿ ಬಸವೇಶನನ್ನು ಬಹುಪರಿಯಾಗಿ ಕೊಂಡಾಡಿದರು.

## ಶ್ರೀ ಬಸವಸ್ತುತಿ.

"ಅಯುತ ಸ್ವಾಯುತ ಸನ್ನಿಹಿತದಲ್ಲಿರ್ಪ ಪೂರ್ವಾಚಾರಿಯೆಂವೆನಿಸಿದ ಸಂಗನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನಯ್ಯಾ. ಷಟ್‌ಸ್ಥಲಭಕ್ತಿ ಬಸವಣ್ಣಂಗಲ್ಲದಿನ್ನಾರಿಗೆ ಸಲ್ಲಿತ್ತು ಗುಹೇಶ್ವರಾ? ನಿಮ್ಮ ಶರಣ ಸಂಗನಬಸವಣ್ಣನ ಮರೆಹೊಕ್ಕು ನಾನು ಬದುಕಿದೆನು.

"ತನುಮನಧನಂಗಳನ್ನು ವಂಚನೆಯಿಲ್ಲದೆ ಗುರುಲಿಂಗಜಂಗಮಕ್ಕರ್ಪಿಸಿದ ಬಸವಣ್ಣನಿಗೆ ನಮೋ ನಮೋ ಎಂಬೆನು ಗುಹೇಶ್ವರಾ."

ಬಸವಣ್ಣನವರಾದರೂ ಪ್ರಭುವನ್ನು ಬಹುಪರಿಯಾಗಿ ಸ್ತುತಿಸಿದರು. ಮಹನೀಯರು ಮನೆಗೆ ಬಂದಾಗ ನಾವು ಹೇಗೆ ನಡೆದುಕೊಳ್ಳಬೇಕು. ಅವರೊಡನೆ ಹೇಗೆ ಮಾತನಾಡಬೇಕು? ಅವರು ಸಿಟ್ಟಾದರೆ ಹೇಗೆ ಸನುಮತಿಸಬೇಕು. ಇವೆಲ್ಲ ಸಂಗತಿಗಳು ಈ ಸಂಪಾದನೆಯಲ್ಲಿ ಬಹು ವಿಶದವಾಗಿ ವಿವರಿಸಲ್ಪಟ್ಟಿವೆ.

---

## ಹರಿಹರನ ಕಾಲ.

(ವೇ॥ ಮೂ॥ ಬುದ್ದಯ್ಯಾ ಪುರಾಣಿಕ ಧಾರವಾಡ.)

ಛಂದೋಂಬುಧಿಯ ಉಪೋದ್ಘಾತದ ೫೩ ನೇ ಪುಟದಲ್ಲಿ "ಮಿಹರ್ಬಾನ ಕಿಟಲರವರು ಹರಿಹರನು ಸುಮಾರು ಕ್ರಿ. ಶ. ೧೨೯೦ ರಲ್ಲಿ ಇದ್ದಿರಬೇಕೆ"ಂದು ಬರೆದಿರುವರು.

ಪ್ರಾಕ್ತನ ವಿಮರ್ಶ ವಿಚಕ್ಷಣ ಮಹಾ ಮಹೋಪಾಧ್ಯಾಯ ರಾವ ಬಹಾದ್ದೂರ ಆರ, ನರಸಿಂಹಾಚಾರ್ಯ ಎಂ. ಎ. ಎಂ ಆರ್ ಎ. ಎಸ್. ರವರು ತಮ್ಮ ಕರ್ನಾಟಕ ಕವಿಚರಿತೆಯ ಪ್ರಥಮ ಸಂಪುಟದ ೨೧೯ ರಿಂದ ೩೩೫ ರ ವರೆಗಿನ ಪುಟಗಳಲ್ಲಿ ಹರಿಹರನು ಸುಮಾರು ಕ್ರಿ. ಶ. ೧೧೬೫ ರಲ್ಲಿ ಇದ್ದಿರಬೇಕೆಂದು ಶಿಲಾಶಾಸನಾದಿ ಪ್ರಬಲ ಪ್ರಮಾಣಗಳಿಂದ ಸಿದ್ಧಗೊಳಿಸಿರುವರು.

ಡಾಕ್ಟರ ಎ. ವೆಂಕಟ ಸುಬ್ಬಯ್ಯ ಎಮ ಎ. ಎಲ್. ಎಲ್. ಬಿ. ಪಿ. ಎಚ್. ಡಿ. ಇವರು ಬೆಂಗಳೂರ ಸೆಂಟ್ರಲ ಕಾಲೇಜಿನ ಕರ್ನಾಟಕ ಸಂಘದಿಂದ ಕ್ರಿ. ಶ. ೧೯೨೭ ನೇ ವರ್ಷದಲ್ಲಿ ಪ್ರಕಟಿಸಲ್ಪಟ್ಟ "ಕೆಲವು ಕನ್ನಡ ಕವಿಗಳ ಜೀವನಕಾಲ ವಿಚಾರ" ಎಂಬ ಪುಸ್ತಕದ ೨೬೦ರಿಂದ ೨೭೮ ರ ವರೆಗಿನ ಪುಟಗಳಲ್ಲಿ ಹರಿಹರನ ಕಾಲವು ಸುಮಾರು ಕ್ರಿ. ಶ. ೧೨೬೦ ರಿಂದ ಈಚೆಯದೆಂದು ಕರ್ನಾಟಕ ಕವಿಚರಿತೆಕಾರರ ಅಭಿಪ್ರಾಯವನ್ನು ಖಂಡಿಸಿರುವರು.

ಕರ್ನಾಟಕ ಕವಿಚರಿತೆಕಾರರು ತಮ್ಮ ಕವಿಚರಿತೆಯ ತೃತೀಯ ಸಂಪುಟದ ಅವತರಣಿಕೆಯಲ್ಲಿ ಡಾಕ್ಟರ ಎ. ವೆಂಕಟ ಸುಬ್ಬಯ್ಯನವರ "ಆಕ್ಷೆಪಣೆಗಳು" ಎಂಬ ಶಿರೋಲೇಖದ ಕೆಳಗೆ ಕೆಲವು ಕವಿಗಳ ಕಾಲಗಳ ವಿಷಯವಾಗಿ ಉತ್ತರಗಳನ್ನು ಕೊಟ್ಟು ತಮ್ಮ ಅವತರಣಿಕೆಯ ೫೫ ರಿಂದ ೬೦ ರ ವರೆಗಿನ ಪುಟಗಳಲ್ಲಿ ಹರಿಹರನ ಕಾಲದ ವಿಷಯವಾಗಿರುವ ಆಕ್ಷೇಪಣೆಗಳಿಗೆ ಉತ್ತರಗಳನ್ನು ಕೊಟ್ಟು ತಾವು ಹೇಳಿರುವ ಕಾರಣಗಳಿಂದ ಹರಿಹರನ ಕಾಲವನ್ನು ಮಾರ್ಪಡಿಸಬೇಕಾಗಿಲ್ಲವೆಂಬುದು ಸ್ಪಷ್ಟವಾಗದೆ ಇರಲಾರದೆಂದು ಬರೆದಿರುವರು.

ಡಾಕ್ಟರ ಎ. ವೆಂಕಟಸುಬ್ಬಯ್ಯನವರು ಬೆಂಗಳೂರ ಸೆಂಟ್ರಲ ಕಾಲೇಜಿನ ಕರ್ನಾಟಕ ಸಂಘದಿಂದ ಕ್ರಿ. ಶ. ೧೯೩೦ ನೆ ವರ್ಷದಲ್ಲಿ ಪ್ರಕಟಿಸಲ್ಪಟ್ಟ ಪ್ರಬುದ್ಧ ಕರ್ನಾಟಕದ ೧೨ ನೇ ಸಂಪುಟದ ೨ ನೇ ಸಂಚಿಕೆಯಲ್ಲಿ "ಕೆಲವು ಕನ್ನಡ ಕವಿಗಳ ಜೀವನಕಾಲವಿಚಾರ ಆಕ್ಷೇಪಗಳಿಗೆ ಪ್ರತ್ಯುಕ್ತಿ" ಎಂಬ ಲೇಖವನ್ನು ಬರೆದು ಅದರ ೩೩ ರಿಂದ ೩೭ ರ ವರೆಗಿನ ಪುಟಗಳಲ್ಲಿ "ಹರೀಶ್ವರಾದಿಗಳು" ಎಂಬ ಶಿರೋಲೇಖದ ಕೆಳಗೆ ಹರೀಶ್ವರನು ಕ್ರಿ॥ ಶ॥ ಸುಮಾರು ೧೩೦೦ ರಲ್ಲಿದ್ದನೆಂದೂ ಅವನು ಕ್ರಿ. ಶ. ಸುಮಾರು ೧೧೬೫ ರಲ್ಲಿದ್ದನೆಂಬ ಕವಿಚರಿತೆಕಾರರ ಅಭಿಪ್ರಾಯವು ತಪ್ಪಾದದ್ದೆಂದೂ ಸವಿಸ್ತಾರವಾಗಿ ಬರೆದಿರುವರು.

ಡಾಕ್ಟರ ಅಯ್ಯನವರು ತಮ್ಮ ಬರವಣಿಗೆಯಲ್ಲಿ ವೀರಶೈವ ಗ್ರಂಥಗಳಲ್ಲಿ ಹೇಳಿರುವದನ್ನು ನಂಬುವದು ಯುಕ್ತವೇ ಎಂಬುವದನ್ನು ಕುರಿತು ಸ್ವಲ್ಪ ವಿಚಾರಮಾಡುವದು ಆವಶ್ಯಕವೆಂದೂ ಕವಿಚರಿತೆಕಾರರ ಮನಸಿಗೆ ಈ ವಿಧವಾದ ವಿಚಾರವು ಆವಶ್ಯಕವೆಂದು ಸ್ವಲ್ಪವೂ ತೋರಿರುವಂತಿಲ್ಲವೆಂತಲೂ ಇಂಥ ಚರಿತ್ರೆಗಳಲ್ಲಿ ಕೆಲವನ್ನು ನಾವು ಕವಿಚರಿತೆಯ ೧ ನೇ ಸಂಪುಟದ ೨ ನೇ ಮುದ್ರಣದಿಂದ ನಿದರ್ಶನಕ್ಕಾಗಿ ಇಲ್ಲಿ ಉದಹರಿಸುವೆವೆಂದೂ ಕೆಲವು ಶಿವಶರಣರ ಚರಿತ್ರೆಯೊಳಗಣ ಮಹಿಮೆಗಳನ್ನು ಹೇಳಿ ಇಂಥ ಕಾವ್ಯಗಳನ್ನು ಬರೆದಿರುವ ವೀರಶೈವ ಕವಿಗಳ ಕೃತಿಗಳು ಶಿವಭಕ್ತರ ಕಥೆಗಳನ್ನು ಮನೋರಂಜಕವಾಗಿರುವ ರೀತಿಯಲ್ಲಿ ಹೇಳಿ ಅವರ ಮಹತ್ವವನ್ನು ಪ್ರಕಟಿಸುವದೇ ಉದ್ದೇಶವಾಗಿರುವದೇ ಹೊರತು ಅಂಥವರ ಚರಿತ್ರೆಗಳನ್ನು ಐತಿಹಾಸಿಕ ದೃಷ್ಟಿಯಿಂದ ಯಥಾವತ್ತಾಗಿ ನಿರೂಪಿಸಬೇಕೆಂಬ ಉದ್ದೇಶವಿಲ್ಲವೆಂತಲೂ, ಇಂತಹ ಗ್ರಂಥ

ಗಳಲ್ಲಿ ಹೇಳಲ್ಪಟ್ಟಿರುವ ಚರಿತೆಗಳ ಯಥಾವತ್ತಾದ ಇತಿವೃತ್ತಗಳೆಂದು ಭಾವಿಸಿ ಅವನ್ನು ಕರ್ನಾಟಕ ಕವಿಚರಿತೆಯಲ್ಲಿ ಸೇರಿಸುವದು ಅಯುಕ್ತವೆಂದೂ ಚನ್ನಬಸವ ಪುರಾಣಾದಿ ಗ್ರಂಥಗಳ ಕರ್ತೃಗಳಾದರೂ ಹೀಗೆ ತಾವು ವರ್ಣಿಸಿರುವ ಚನ್ನಬಸವಾದಿಗಳ ಕಾಲದಲ್ಲಿ ಜೀವಿಸಿದವರಲ್ಲವೆಂತಲೂ, ಅವರಗಿಂತ ನೂರಾರು ವರ್ಷಗಳ ಈಚೆಗೆ ಜೀವಿಸಿದವರಾದ್ದರಿಂದ ಇಂಥ ಗ್ರಂಥಗಳಲ್ಲಿ ಹೇಳಿರುವ ಚರಿತ್ರಗಳು ಯಥಾವತ್ತಾಗಿ ಇರುವನೆಂಬ ವಿಷಯದಲ್ಲಿ ನಮಗೆ ಸ್ವಲ್ಪವೂ ನಂಬಿಕೆಯಿಲ್ಲವೆಂತಲೂ, ಕರ್ನಾಟಕ ಕವಿಚರಿತೆಯಂತಹ ಗ್ರಂಥದಲ್ಲಿ ಈ ಪೊಳ್ಳು ಕಥೆಗಳನ್ನು ಉದ್ಧರಿಸಿ ಬರೆಯದೆ ಈ ವಿಧವಾದ ಕಥೆಗಳನ್ನು ತೂಷ್ಣೀಂ ಭಾವದಿಂದ ಉಪೇಕ್ಷಿಸಿ ತಮ್ಮ ಗ್ರಂಥವನ್ನು ಕವಿಚರಿತಕಾರರು ಬರೆದಿದ್ದರೆ ಆ ಗ್ರಂಥವು ಈಗ ಇರುವದರಕಿಂತಲೂ ಅತಿಶಯವಾಗಿ ಗುಣೋಜ್ವಲವಾಗಿಯೂ ಶ್ಲಾಘನೀಯವಾಗಿಯೂ ಇರುತ್ತಿತ್ತೆಂದೂ ಬರೆದಿರುವರು. ಈ ಬಗೆಯ ಅಯ್ಯನವರ ವಿಚಾರಗಳನ್ನು ಓದಿ ನಮಗೆ ಬಹಳೇ ವಿಷಾದವೆನಿಸುತ್ತದೆ. ಇಂತಹ ಅನೇಕ ಪೊಳ್ಳು ಕಥೆಗಳು ರಾಮಾಯಣ ಮಹಾಭಾರತಾದಿ ಗ್ರಂಥಗಳಲ್ಲಿ ಇರುವವು. ತಾವು ಜಗುಲಿಯಮೇಲೆ ಇಟ್ಟು ದಿನಂಪ್ರತಿ ಪೂಜಿಸುವ ರಾಮಕೃಷ್ಣಾದಿ ದೈವತೆಗಳ ಕಥೆಗಳನ್ನು ಉಪೇಕ್ಷಿಸದೆ ಅವುಗಳ ವಿಷಯನಾಗಿ ತೂಷ್ಣೀಂಭಾವ ಧರಿಸಿ ಎರಡನೆಯವರ ಮನಸ್ಸು ನೋಯಿಸುವಂತೆ ಈ ಕಾಲದಲ್ಲಿ ಬರೆಯುವದು ವಿವೇಕಿಗಳ ಕೆಲಸವಲ್ಲ. ಇದು ಇತಿಹಾಸ ಸಂಶೋಧನದ ಕಾರ್ಯವು ಇದು ಒಬ್ಬರಿಂದ ಪೂರ್ತಿಯಾಗತಕ್ಕ ಮಾತಲ್ಲ. ಈ ಕೆಲಸದಲ್ಲಿ ಕರ್ನಾಟಕದೊಳಗೆ ಉದ್ಯುಕ್ತರಾದವರಲ್ಲಿ ಕವಿಚರಿತೆಕಾರರು ಮೊದಲಿಗರು. ಯಾವದಾದರೊಂದು ಮಾತನ್ನು ಐತಿಹಾಸಿಕ ದೃಷ್ಟಿಯಿಂದ ನಿರ್ಧರಿಸುವದಕ್ಕೆ ತಕ್ಕಷ್ಟು ಸಾಧನಗಳು ಸದ್ಯಕ್ಕೆ ಕರ್ನಾಟಕದಲ್ಲಿ ಉಪಲಬ್ಧವಿಲ್ಲ. ಇಂಥ ಪರಿಸ್ಥಿತಿಯಲ್ಲಿ ಒಬ್ಬರಮೇಲೆ ಹರಿಹಾಯುವದು ಮಗಳ ಬಂಜೆತನಕ್ಕೆ ಅಳಿಯನ ಮೇಲೆ ಸಿಟ್ಟಾಗುವ ಅವಿವೇಕಿಯಂತೆಯಾಗುವದು. ಅಯ್ಯನವರ ಈ ವಿಚಾರಗಳಿಗೆ ನಾವೇ ಉತ್ತರಕೊಡುವದರಕಿಂತಲೂ ಕವಿಚರಿತೆಕಾರರು ಕೊಟ್ಟ ಉತ್ತರಗಳನ್ನೇ ಕೊಡುವದು ಲೇಸೆಂದು ಭಾವಿಸಿ ಅವುಗಳನ್ನೇ ಕೊಡುತ್ತೇವೆ. ಕವಿಚರಿತೆಯ ೩ ನೇ ಸಂಪುಟದ ಅವತರಣಿಕೆಯಲ್ಲಿ ಅಯ್ಯನವರಂತೆ ಆವ ವಿದ್ವಾಂಸನೂ ಎಲ್ಲ ವೀರಶೈವ ಜೈನ ಬ್ರಾಹ್ಮಣ ಸಂಪ್ರದಾಯ ಗ್ರಂಥಗಳನ್ನೂ ಆತ್ಯಂತಿಕವಾಗಿ ನಿಂದಿಸಿ ಅವು

ಗಳಲ್ಲಿ ದೊರೆಯಬಹುದಾದ ಸಹಾಯವನ್ನು ನಿರಾಕರಿಸಲಾರನು ಎಂದು ನಂಬಿದ್ದೇನೆ. ಒಂದು ಗ್ರಂಥದಲ್ಲಿ ಕೆಲವು ದೋಷಗಳು ಇದ್ದ ಮಾತ್ರಕ್ಕೆ ಅದನ್ನು ಸಂಪೂರ್ಣವಾಗಿ ನಿರಾಕರಿಸುವದು ವಿವೇಕವಲ್ಲ. ಚರಿತ್ರವೆಂದು ಹೇಳಿಸಿಕೊಳ್ಳುವ ಗ್ರಂಥಗಳಲ್ಲಿಯೂ ಕೂಡ ಇಂಥ ದೋಷಗಳು ದೊರೆಯುತ್ತವೆ. ವೀರಶೈವಾದಿ ಗ್ರಂಥಗಳಿಂದ ನಾನು ಅನುವಾದ ಮಾಡಿರುವದರಿಂದ ಅಯ್ಯನವರು ನನಗೆ ಮೂಢ ಶ್ರದ್ಧಾಳುತೆಯನ್ನು ಕಲ್ಪಿಸಿದ್ದಾರೆ. ಒಂದು ಗ್ರಂಥದಿಂದ ಅನುವಾದ ಮಾಡಿದ ಮಾತ್ರಕ್ಕೆ ಆ ಗ್ರಂಥದಲ್ಲಿ ಹೇಳಿರುವದನ್ನೆಲ್ಲ ನಂಬಬೇಕೆಂಬ ನಿರ್ಬಂಧವೇನೂ ಇಲ್ಲ. ಒಂದು ಗ್ರಂಥದ ಕಾಲವು ತಿಳಿದಿದ್ದರೆ ಆ ಗ್ರಂಥದಲ್ಲಿ ಉಕ್ತರಾದ ಗ್ರಂಥಕರ್ತರು ಆ ಕಾಲಕ್ಕೆ ಹಿಂದೆ ಇದ್ದರು ಎಂಬುದು ನ್ಯಾಯವಾಗಿಯೇ ಇದೆ. ವೀರಶೈವಾದಿ ಗ್ರಂಥಗಳಲ್ಲಿ ಅಯ್ಯನವರು ತೋರಿಸಿರುವಂಥ ಪರಸ್ಪರ ವಿರೋಧಗಳು ಶಾಸನಗಳಲ್ಲಿಯೂ ಕಂಡುಬರುತ್ತವೆ ಎಂದು ಹೇಳಿರುವರು.

ಮೇಲಿನ ವಿವೇಚನಗಳಿಂದ ನೋಡಲಾಗಿ ಹರಿಹರನ ಕಾಲದ ವಿಷಯವಾಗಿ ಪ್ರಬಲ ಎರಡು ಮತಗಳು ಇದ್ದಂತೆಯಾದವು. ೧ನೇಯದು ಸುಮಾರು ಕ್ರಿ. ಶ. ೧೧೬೫ ಮತ್ತು ೨ನೆಯದು ಸುಮಾರು ಕ್ರಿ. ಶ. ೧೨೫೦—೧೩೦೦. ಆದರೆ ನಮಗೆ ಹರಿಹರನ ಕಾಲವು ಸುಮಾರು ಕ್ರಿ. ಶ. ೧೨೦೦ ಆಗಬಹುದೆಂದು ತೋರುತ್ತದೆ. ಅದು ಹೇಗಂದರೆ ಕಾರಣವಿಲ್ಲದೆ ಕಾರ್ಯೋತ್ಪತ್ತಿಯಾಗುವದಿಲ್ಲವೆಂಬ ನ್ಯಾಯದಂತೆ ಈ ಹರಿಹರವೆಂಬುವ ಹೆಸರು ರೂಢಿಯಲ್ಲಿ ಬರಬೇಕಾದರೆ ಆವದಾದರಾದೊಂದು ಪ್ರಬಲವಾದ ಅಂಥ ಕಾರಣವು ಉಂಟಾಗಿರಬೇಕು. ಅದಾವುದೆಂದರೆ ಹಿಂದಕ್ಕೆ ಪುರಾಣ ಕಾಲದೊಳಗೆ ವ್ಯಾಸ ಮಹರ್ಷಿಯಿಂದ ಶಿವಸರ್ವೋತ್ತಮನೆಂದೂ ವಿಷ್ಣು ಸರ್ವೋತ್ತಮನೆಂದೂ ಹೀಗೆ ಎರಡು ಪಂಗಡಗಳು ಉತ್ಪನ್ನವಾದವು. ಶಿವಸರ್ವೋತ್ತಮನೆಂಬ ಪಕ್ಷವಾಗಿ ೧ನೇಯ ಶತಮಾನದಿಂದ ೬೩ ಪುರಾತನರೂ, ೮ ನೆಯ ಶತಮಾನದಲ್ಲಿ ಶಂಕರಾಚಾರ್ಯರೂ, ೧೨ ನೆಯ ಶತಮಾನದಲ್ಲಿ ಶ್ರೀ ಬಸವಾದಿ ಪ್ರಮಥಗಣರೂ ಬಹು ಜೋರಿನಿಂದ ಪ್ರತಿಪಾದಿಸಿದರು. ಆದರೆ ವಿಷ್ಣು ಸರ್ವೋತ್ತಮನೆಂಬುವ ಪಕ್ಷವು ಪುರಾಣ ಕಾಲದಿಂದ ೧೨ ನೆಯ ಶತಮಾನದ ವರೆಗೆ ಬೀಜಭೂತವಾಗಿದ್ದುದು ೧೧ ನೆಯ ಶತಮಾನದ ಕಡೆಯ ಭಾಗದಲ್ಲಿ

ರಾಮಾನುಜಾಚಾರ್ಯರು ಉವಯುವಾಗಿ ಈ ಪಕ್ಷವನ್ನು ಬಹಳೇ ಜೋರಿನಿಂದ ಎತ್ತಿ ಹಿಡಿದರು. ೧೨ ನೆಯ ಶತಮಾನದೊಳಗಿನ ಈ ಉಭಯ ಪಂಗಡದವರ ಏರಾಟಿನಲ್ಲಿ ಈ ಎರಡಕ್ಕೂ ಮಧ್ಯವರ್ತಿಯಾದ ಇನ್ನೊಂದು ಪಂಗಡವು ಉತ್ಪನ್ನವಾದರೆ ಒಳಿತಾಗುವದೆಂಬ ಭಾವನೆಯು ಜನರಲ್ಲಿ ಪ್ರಬಲವಾಗಿರಲಿಕ್ಕೆ ಸಾಕು. ಇದಕ್ಕೆ ಮಂಡ್ಯದ ೧೨೧ ನೇ ಶಾಸನವೇ ಮೊದಲನೆಯ ಸಾಕ್ಷಿಯು. ಇದು ಕ್ರಿ. ಶ. ೧೨೩೦ ನೆಯ ಎಪ್ರಿಲ ೧೫ ನೇ ತಾರೀಖು ಸೋಮವಾರ ದಿವಸ ಹುಟ್ಟಿರುವದು. ಇದರಲ್ಲಿ ಅಡ್ಡಾಯುದಧ ಹರಿಹರ ದಂಡನಾಯಕನು ಬಸರಾಳಿನಲ್ಲಿ ಮನೋಹರವಾದ ಕಾಲಿವೆಯನ್ನು ಕಟ್ಟಿಸಿ ಲಿಂಗ ಪ್ರತಿಷ್ಠೆಯನ್ನು ಮಾಡಿದನೆಂಪು ಹೇಳಿದೆ. ಈ ರೂಢಿಯು ಪ್ರಾಬಲ್ಯವು ೧೪ನೆಯ ಶತಮಾನದಲ್ಲಿ ಉದಯಿಸಿದ ಮಧ್ವಾಚಾರ್ಯನ ಕಾಲದಲ್ಲಿಯೂ ಇದ್ದಿರಬೇಕು. ಯಾಕಂದರೆ ಓರ್ವ ಜಂಗಮವರ್ಯನಾದ ಶ್ರೀ ವಿರುಪಾಕ್ಷ ಶಿವಯೋಗಿಯ ಕೃಪಾಕಟಾಕ್ಷದಿಂದ ಶ್ರೀ ವಿದ್ಯಾರಣ್ಯನು ವಿಜಯನಗರದಲ್ಲಿ ರಾಜ್ಯವನ್ನು ಸ್ಥಾಪಿಸುವಾಗ್ಗೆ ಕ್ರಿ. ಶ. ೧೩೩೬ ರಲ್ಲಿ ಹುಕ್ಕನಿಗೆ ಹರಿಹರನೆಂದು ಹೆಸರಿಟ್ಟು ಪಟ್ಟಾಭಿಷೇಕ ಮಾಡಿದ್ದರ ಉದ್ದೇಶವಾದರೂ ಆ ರಾಜ್ಯಕ್ಕೆ ಶೈವ ವೈಷ್ಣವ ಉಭಯ ಪಂಗಡದವರೂ ಒಮ್ಮನಸ್ಸಿನಿಂದ ಸಹಾಯ ಮಾಡಬೇಕೆಂಬುದೇ ಇರಬೇಕು. ಮತ್ತು ಅದು ಯಥಾವತ್ತಾಗಿ ಸಿದ್ಧಿಸಿದಂತೆಯೂ ಕಂಡು ಬರುತ್ತದೆ. ಜಂಗಮ ಪುಂಗವನಾದ ಶ್ರೀ. ವಿರುಪಾಕ್ಷಾರ್ಯನ ವಿಷಯವಾಗಿ ರಾ. ರಾ. ವೆಂಕಟೇಶ ತಿರಕೋ ಕುಲಕರ್ಣಿ ಗಳಗನಾಥ ಇವರು ತಮ್ಮ ಮಾಧವಕರುಣಾ ವಿಲಾಸವೆಂಬ ಪುಸ್ತಕದ ೧ ನೆಯ ಭಾಗದ ಪ್ರಸ್ತಾವನೆಯ ೫ ನೆಯ ಪುಟದಲ್ಲಿ ವಿಸ್ತಾರವಾಗಿ ಹೇಳಿರುವರು. ಇಂಥ ಕಾಲದಲ್ಲಿಯೇ ಹರಿಹರನ ದೇವಸ್ಥಾನಗಳ ಪ್ರತಿಷ್ಠಾಪನೆಯೂ ಹಾಗು ಹರಿಹರನ ಮಹತ್ವದ ಗ್ರಂಥಗಳ ಲೇಖನವೂ ಆದರಂತೆ ಹರಿಹರವೆಂಬ ರೂಢನಾಮವೂ ರೂಢಿಯಲ್ಲಿ ಬಂದಿರಬೇಕು. ಹಿಂದಿನಿಂದ ಇದರ ಅನುಕರಣದಿಂದಲೇ ಮಹಾರಾಷ್ಟ್ರದಲ್ಲಿ ಭಾಗವತ ಸಾಂಪ್ರದಾಯವು ಆರಂಭವಾಗಿರಬಹುದು. ಇದರಂತೆಯೇ ಅಣ್ಣಾ, ಅಪ್ಪಾ ಎಂಬ ಕರ್ನಾಟಕದ ಹೆಸರುಗಳು ಅಣ್ಣಾಸಾಹೇಬ, ಅಪ್ಪಾಸಾಹೇಬ ಎಂಬ ರೂಪವನ್ನು ಕನ್ನಡಿಗರ ಸಹವಾಸದಿಂದ ೧೮ ನೇ ಶತಮಾನದಲ್ಲಿ ಮಹಾರಾಷ್ಟ್ರದಲ್ಲಿ ರೂಢವಾಗಿರಬಹುದು. ಈ ಕಾರಣಗಳ ಮೇಲಿಂದ ಹರಿಹರನ ಕಾಲವು ಸುಮಾರು ಕ್ರಿ. ಶ. ೧೨೦೦ ಅಗಬಹುದೆಂದು ತೋರುತ್ತದೆ.

ಹರಿಹರನು ಸುಮಾರು ಕ್ರಿ. ಶ. ೧೨೦೦ ರಲ್ಲಿ ಇದ್ದಿರಬೇಕೆಂಬುವದಕ್ಕೆ ಇನ್ನೊಂದು ಬಲವಾದ ಕಾರಣವಿರುವದು. ಅದಾವುದೆಂದರೆ ಹರಿಹರನ ಗುರುವಾದ ಮಾಯಿದೇವಾಚಾರ್ಯನ ಕಾಲವನ್ನು ಗೊತ್ತುಹಚ್ಚುವದು. ಈ ಮಾಯಿದೇವಾಚಾರ್ಯನ ಜೀವನಕಾಲವು ಗೊತ್ತಾದರೆ ಹರಿಹರನ ಕಾಲವು ಸಹಜ ಗೊತ್ತಾಗುವದು. ಹರಿಹರನ ಜೀವನಕಾಲವನ್ನು ಗೊತ್ತುಹಚ್ಚುವ ಕುರಿತು ಪ್ರಯತ್ನಿಸಿದವರಲ್ಲಿ ಯಾರೂ ಈ ಮಾಯಿದೇವಾಚಾರ್ಯನ ವಿಷಯವಾಗಿ ಬಂದು ಅಕ್ಷರವನ್ನಾದರೂ ತೆಗಿದಿರುವದಿಲ್ಲ. ಆದರೆ ಕವಿಚರಿತೆಕಾರರು ತಮ್ಮ ಕವಿಚರಿತೆಯ ಪ್ರಥಮ ಸಂಪುಟದ ೨೨೫ ನೇ ಪುಟದಲ್ಲಿ "ಪಂಪಾಕ್ಷೇತ್ರದಲ್ಲಿ ಒಪ್ಪುವ ಹಂಪೆಯ ಶಂಕರಾಚಾರ್ಯರ ಮಗ ಮಾದರಸನು; ಅವನ ಮಗ ಹಂಪೆಯ ಹರೀಶ್ವರನು; ಈತನ ಗುರು ಮಾಯಿದೇವಾಚಾರ್ಯನು" ಎಂದು ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಕರದಲ್ಲಿ ಬರೆದಿರುವದನ್ನು ಹೇಳಿರುವರು. ಆದುದರಿಂದ ಈ ಮಾಯಿದೇವಾಚಾರ್ಯನ ವಿಷಯವಾಗಿ ಇಲ್ಲಿ ಹೆಚ್ಚಿಗೆ ಚರ್ಚಿಸುವದು ಅತ್ಯಗತ್ಯವದೆ.

ಈಗ್ಯೆ ಪ್ರಕಟಿಸಲ್ಪಟ್ಟ ಐತಿಹಾಸಿಕ ಸಾಧನಗಳಾದ ವೀರಶೈವ ಗ್ರಂಥಗಳಲ್ಲಿ ಮಾಯಿದೇವ ಅಥವಾ ಮಾಯಿದೇವಾಚಾರ್ಯ ಎಂಬ ಹೆಸರಿನ ವಿಷಯವಾಗಿ ಎರಡು ತರದ ಉಲ್ಲೇಖಗಳು ಸಿಗುವವು. ೧ ನೆಯದು ಕಲ್ಲಿಕುರಿಕೆಯಲ್ಲಿ ದೊರೆಯಾಗಿದ್ದ ಮಲ್ಲರಸನ ಮಗ ಸಕಲೇಶಮಾದರಸನು; ಈತನ ಮಗ ಮಾಯಿದೇವ. ಇವನು ಶ್ರೀ ಬಸವೇಶ್ವರನ ಸಮಕಾಲವವನೂ ಕೆರೆಯ ಪದ್ಮರಸನ ತಂದೆಯೂ ಆಗಬೇಕು. ಈ ಕೆರೆಯ ಪದ್ಮರಸನ ಮುತ್ತಜ್ಜನಾದ ಶಿವಯೋಗಿ ಮಲ್ಲಿಕಾರ್ಜುನ ಪಂಡಿತರಿಂದ ಈ ಮನೆತನದವರು ಚತುಃಶಾಸ್ತ್ರ ಪಂಡಿತರೂ ಮಹಾಮಹಿಮಾಶಾಲಿಗಳೂ ಆಗಿದ್ದರು. ಈ ಕೆರೆಯ ಪದ್ಮರಸನ ವಿಷಯವಾಗಿ ಕವಿಚರಿತೆಕಾರರು ತಮ್ಮ ಕವಿಚರಿತೆಯ ಪ್ರಥಮಸಂಪುಟದ ೨೪೬ ನೇ ಪುಟದಲ್ಲಿ "ಪದ್ಮರಸನು ಮಂತ್ರಿಪದವನ್ನು ಬಿಟ್ಟು ಬೇಲೂರಲ್ಲಿಯೇ ಇರುತ್ತಿರಲು ತ್ರಿಭುವನ ತಾತನೆಂಬ ಒಬ್ಬ ಆಂಧ್ರದೇಶದ ಬ್ರಾಹ್ಮಣನು ವಿಷ್ಣುವೇ ಪರದೈವವೆಂದು ಸ್ಥಾಪಿಸುತ್ತ ವಾದಿಗಳನ್ನು ಜಯಿಸಿಕೊಂಡು ದೋರಸಮುದ್ರಕ್ಕೆ ಬಂದು ಬಲ್ಲಾಳರಾಜನನ್ನು ಕಾಣಿಸಿಕೊಳ್ಳಲು, ದೊರೆಯು ಪದ್ಮರಸನನ್ನು ಕರೆಯಿಸಲು ತ್ರಿಭುವನ ತಾತನಿಗೂ ಪದ್ಮರಸನಿಗೂ ವಾದ

ವಾಗಿ ತ್ರಿಭುವನತಾತನು ಸೋತು ಹಿಂದೆ ಮಾಡಿಕೊಂಡಿದ್ದ ಒಡಂಬಡಿಕೆಯ ಪ್ರಕಾರ ವೀರಶೈವ ದೀಕ್ಷೆಯನ್ನು ಹೊಂದಿ ಪದ್ಮರಸನಿಗೆ ಶಿಷ್ಯನಾದನು" ಎಂದು ಹೇಳಿರುವರು. ಇದನ್ನು ನೋಡಲಾಗಿ ಈತನ ತಂದೆಯಾದ ಮಾಯಿದೇವನಾದರೂ ಬಹಳೇ ಪ್ರಬಲನಾಗಿದ್ದಿರಬೇಕು. ಇಷ್ಟು ಪ್ರಬಲನಾದ ಪಕ್ಷದಲ್ಲಿ ಈತನು ಹರಿಹರನಿಗೆ ಗುರುವಾದರೂ ಆಗಿರಬೇಕು. ೨ ನೇಯದು ಮಗ್ಗೆಮಾಯಿದೇವನ ವಿಷಯವಾಗಿ ಕವಿಚರಿತೆಯ ೨ ನೇಯ ಸಂಪುಟದ ೭೦ ನೇಯ ಪುಟದಲ್ಲಿ ಈತನು ಅನುಭವಸೂತ್ರ ಪ್ರಭುಗೀತೆ ಏಕೋತ್ತರಶತಸ್ಥಲ, ಷಟ್ಪದಿ, ಷಟ್ಸ್ಥಲಗದ್ಯ, ಶತಕತ್ರಯ, ಮಗ್ಗೆಯ ಮಾಯಿದೇವ ವಚನ ಎಂಬ ಗ್ರಂಥಗಳನ್ನು ಬರೆದಂತೆ ತಿಳಿಯುತ್ತದೆ. ಅನುಭವಸೂತ್ರವು ಸಂಸ್ಕೃತದಲ್ಲಿ ಬರೆದದ್ದು. ಇದರಿಂದ ಈ ಕವಿಯ ವಿಷಯವಾಗಿ ಈ ಅಂಶಗಳು ತಿಳಿಯುತ್ತವೆ—ಮಲಪ್ರಹಾರಿನದಿಯ ತೀರದಲ್ಲಿರುವ ಐಪುರಕ್ಷೇತ್ರದ ಸೋಮನಾಥದೇವರ ಅನುಗ್ರಹದಿಂದ ಉಪಮನ್ಯು ಶಿವಾಚಾರ್ಯನು ಹುಟ್ಟಿದನು; ಮಗ ಭೀಮನಾಥ ಮಗ ಕಳೇಶ್ವರ, ಮಗ ಬೊಪ್ಪನಾಥ, ಮಗ ನಾಕರಾಜ ಶಿಷ್ಯ ಸಂಗಮೇಶ್ವರ, ಮಗ ಕವಿಮಾಯಿದೇವ ಇವನಿಗೆ ಕಲ್ಯಾಣದಯ್ಯ ಎಂಬ ಹೆಸರೂ ಉಂಟು. ಇವನು ವೀರಶೈವಕವಿ. ಐಪುರದ ಸೋಮನಾಥದೇವರ ಭಕ್ತನು. ವಿರುಪಾಕ್ಷಪಂಡಿತನ (೧೫೮೪) ಚನ್ನಬಸವಪುರಾಣದಲ್ಲಿಯು

"ಎಲೆ ರಾಮ ಕೇಳಿನ್ನು ಸಕಲಾಗಮಂಗಳಿಗೆ।
ನೆಲೆಯೆನಿಸಿ ಪ್ರೌಢನಿಂ ಪೂಜೆಯಂಕೊಂಡು ಷ।
ಟ್ಸ್ಥಲಮಾರ್ಗಮಂ ಸಕಲಶಿವಭಕ್ತ ಸಂತತಿಗೆ ಕರತಳಾಮಳಕವಾಗಿ॥
ತಿಳಿವೊಲನುಭವ ಸೂತ್ರವಾದಿ ಶಾಸ್ತ್ರಂಗಳಂ।
ಗೆಲವಿನಿಂ ಪೇಳ್ದುನಿಜಶಿವ ಸಮಾಧಿಯಲಿಮಿಗೆ।
ನಲವಿನಿಂದಲ್ಲಿ ಮಗ್ಗೆಯಮಾಯಿದೇವಪ್ರಭುವರನಿರದೆಮುಕ್ತನಹನು॥

ಎಂಬ ಪದ್ಯದಿಂದ ಈತನು ವಿಜಯನಗರದ ರಾಜನಾದ ಪ್ರೌಢದೇವನ (೧೪೧೯-೧೪೪೬) ಕಾಲದಲ್ಲಿದ್ದಂತೆ ತಿಳಿಯುವದರಿಂದ ಇವನ ಕಾಲವು ಸುಮಾರು (೧೪೩೦) ಆಗಬಹುದು. ಶಾಂತಲಿಂಗ ದೇಶಿಕನು (೧೬೭೨) ತನ್ನ ಭೈರವೇಶ್ವರ ಕಾವ್ಯದ ಕಥಾ ಸೂತ್ರರತ್ನಾಕರದಲ್ಲಿ ಈ ಕವಿಯ ವಿಷಯವಾಗಿ ಹೀಗೆ ಬರೆದಿದ್ದಾನೆ:—ಮಗ್ಗೆ ಎಂಬ ಪುರದಲ್ಲಿ ಮಾಯಿದೇವಾಚಾರ್ಯ

ಪ್ರಭುಗಳು ವಿಶೇಷಾರ್ಥವನು ಭಾವಸೂತ್ರವಂ ಕಲ್ಪಿಸಿ ಪ್ರಭುಗೀತೆ, ಷಟ್ಪದ ರೂಪವಾದ ಏಕೋತ್ತರಶತಸ್ಥಲವಂ ನಿರೂಪಿಸಿ ಭಕ್ತಿಜ್ಞಾನ ವೈರಾಗ್ಯ ಸ್ವರೂಪವಾದ ಶತಕತ್ರಯ ಪ್ರಬಂಧಮಂ ಪೇಳಿ ಷಟ್ಸ್ಥಲ ಗದ್ಯಮಂ ನಿರೂಪಿಸಿ "ಕುಮತವಿಭೇದಿ ಷಟ್ಸ್ಥಲ ಬ್ರಹ್ಮವಾದಿ"ಯೆಂದು ಹೊಗಳಿಸಿಕೊಳ್ಳುತ್ತಿರಲು ವೆಂಕಟಪತಿರಾಯನಳಿಯನು ಶ್ರೀ ರಂಗರಾಯನು ನಾರಸಿಂಹಪುರಕ್ಕೆ ವಾದಕ್ಕೆ ಕರೆಯಿಸಲು ಬಂದು ಜಯಸ್ತಂಭವನು ನೆಟ್ಟು ಹೋದರು. ಏಪುರದ ಸೋಮನಾಥನೆಂಬ ತಮ್ಮಿಷ್ಟಲಿಂಗದಲ್ಲಿ ಐಕ್ಯವಾದರು. ಪ್ರೌಢದೇವರಾಯನಿಗೂ ವೆಂಕಟಪತಿರಾಯನಿಗೂ ಸುಮಾರು ೨೦೦ ವರ್ಷ ಅಂತರವಿರುವದರಿಂದ ಶಾಂತಲಿಂಗ ದೇಶಿಕನು ಹೇಳಿರುವ ದೊರೆಯ ಹೆಸರು ತಪ್ಪಾಗಿರಬೇಕು. ಸಿದ್ಧನಂಜೇಶನು (ಸು ೧೬೫೦) ತನ್ನ ಗುರುರಾಜ ಚರಿತ್ರದಲ್ಲಿ ಮಗ್ಗೆಯಮಾಯಿದೇವಂ ಲಿಂಗವಂತರಿಗೆ ನರಕವಿಲ್ಲೆಂದು ವಿದ್ಯಾನಗರದಲ್ಲಿ ನೆಳಲಿಲ್ಲದ ಜಯಸ್ತಂಭವಂ ನಿಲಿಸಿದಂ ಎಂದು ಹೇಳಿದ್ದಾನೆ. ಇದೇ ವಿಷಯವನ್ನು ವಿರಕ್ತತೋಂಟದಾರ್ಯನು (ಸು. ೧೫೬೦) ತನ್ನ ಪಾಲ್ಕುರಿಕೆ ಸೋಮೇಶ್ವರ ಪುರಾಣದಲ್ಲಿ ಹೇಳಿದ್ದಾನೆ. ವೀರಶೈವ ಗ್ರಂಥಗಳಲ್ಲಿ ಈ ಕವಿಯನ್ನು ಪ್ರಭು, ವಿಭು ಎಂದು ವಿಶೇಷಿಸಿ ಹೇಳಿರುವದರಿಂದ ಈತನು ದೊಡ್ಡಪದವಿಯಲ್ಲಿದ್ದಂತೆ ತೋರುತ್ತದೆ" ಎಂದು ಕವಿಚರಿತೆಕಾರರು ಬರೆದಿರುವರು.

ಮೇಲಿನ ಉದಾಹರಣೆಗಳನ್ನು ಹೇಳಿ ಕವಿಚರಿತೆಕಾರರು ಮಗ್ಗೆಯಮಾಯಿದೇವರ ಜೀವನದ ಕಾಲವು ಸುಮಾರು ಕ್ರಿ. ಶ. ೧೪೩೦ ಎಂದು ಕೊಟ್ಟಿದ್ದು ತಪ್ಪೆಂದು ಅನೇ ಉದಾಹರಣೆಗಳಿಂದ ಸಹಜವಾಗಿ ಸಿದ್ಧವಾಗುವದು. ಅದು ಹೇಗಂದರೆ- ವಿಜಯನಗರದಲ್ಲಿ ಪ್ರೌಢದೇವರಾಯನು ೧೪೧೯ ರಿಂದ ೧೪೪೬ ರ ವರೆಗೆ ಆಳಿದನು. ಕ್ರಿ. ಶ. ೧೪೩೦ ಆತನ ಆಳಿಕೆಯ ಮಧ್ಯಕಾಲವು. ಈ ಕಾಲಕ್ಕೆ ಮತ್ತು ಮಗ್ಗೆಮಾಯಿದೇವನು ಪ್ರೌಢನಿಂ ಪೂಜೆಗೊಂಡನೆಂದು ವರ್ಣಿಸಿರುವ (೧೫೮೪) ಚನ್ನಬಸವ ಪುರಾಣ ಕರ್ತೃವಾದ ವಿರುಪಾಕ್ಷಪಂಡಿತನ ಕಾಲಕ್ಕೂ ೧೫೪ ವರ್ಷಗಳ ಅಂತರವದೆ. ಇದರಂತೆ ಕ್ರಿ. ಶ. ೧೪೩೦ ಕ್ಕೂ ಮತ್ತು ವೆಂಕಟಪತಿರಾಯನ ಅಳಿಯನು ಶ್ರೀ ರಂಗರಾಯನು ನಾರಸಿಂಹಪುರಕ್ಕೆ ಕುಮತ ವಿಭೇದಿ ಷಟ್‌ಸ್ಥಲ ಬ್ರಹ್ಮವಾದಿ" ಎಂದು ಹೊಗಳಿಸಿಕೊಳ್ಳುವ ಮಾಯಿದೇವನನ್ನು ವಾದಕ್ಕೆ ಕರಿಸಿದನೆಂದು ವರ್ಣಿಸುವ ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರದ ಕರ್ತೃವಾದ

ಶಾಂತಲಿಂಗ ದೇಶಿಕನ ಕ್ರಿ. ಶ. ಸುಮಾರು ೧೬೭೨ ಕಾಲಕ್ಕೂ ೨೪೨ ವರ್ಷಗಳ ಅಂತರವಾಗುವದು. ಇದರಂತೆ ಇದೇ ಮಾಯಿದೇವನನ್ನು ಹೊಗಳುವ ಪಾಲ್ಕುರಕೆ ಸೋಮೇಶ್ವರ ಪುರಾಣಕರ್ತೃವಾದ ವಿರಕ್ತತೋಂಟದಾರ್ಯನ (೧೫೬೦) ಕಾಲಕ್ಕೆ ೧೩೦ ವರ್ಷಗಳ ಹಾಗು ಗುರುರಾಜಚಾರಿತ್ರ ಕರ್ತೃವಾದ ಸಿದ್ಧನಂಜೇಶನ (೧೬೫೦) ಕಾಲಕ್ಕೂ ೨೨೦ ವರ್ಷಗಳ ಅಂತರವಾಗುವದು. ಈ ನಾಲ್ಕೂ ಕವಿಗಳು ಪ್ರೌಢದೇವನ ಕಾಲಕ್ಕೆ ಆಗಲೀ ಇಲ್ಲವೆ ಮಾಯಿದೇವನ ಕಾಲಕ್ಕಾಗಲೀ ಜೀವಿಸಿ ಕಣ್ಣುಟ್ಟನೋಡದವರಲ್ಲ. ಅಂದಮೇಲೆ ಈ ಪುರಾಣಗಳಲ್ಲಿ ಹೇಳಿರುವ ಯಾವತ್ತು ಸಂಗತಿಗಳು ಸುಳ್ಳೆನ್ನಬೇಕಾದರೆ ಹಾಗೆ ಆಗಲಾರದು. ಯಾಕಂದರೆ ಇವುಗಳಲ್ಲಿ ಮತ್ತು ಇನ್ನೂ ಅನೇಕ ವೀರಶೈವರ ಗ್ರಂಥಗಳಲ್ಲಿ ಹೇಳಿರುವ ಎಷ್ಟೋ ಸಂಗತಿಗಳು ಐತಿಹಾಸಿಕ ದೃಷ್ಟಿಯಿಂದ ಬಹಳೇ ಮಹತ್ವವುಳ್ಳವುಗಳಾಗಿವೆ. ಆದರೂ ಅವುಗಳಲ್ಲಿ ಕೂಡ ನೂರಕ್ಕೆ ೫ ರಂತೆ ತಪ್ಪು ಇರುವ ಸಂಭವವಾದರೂ ಹೆಚ್ಚು ಇರುವದು. ಈ ದೃಷ್ಟಿಯಿಂದ ಕವಿಚರಿತೆಕಾರರು ಯಾವದಾದರೊಂದು ಪ್ರಬಲಕಾರಣವನ್ನು ಕೊಡದೆ ಶಾಂತಲಿಂಗ ದೇಶಿಕನು ಹೇಳಿರುವದು ಸುಳ್ಳೆಂದೂ ವಿರುಪಾಕ್ಷ ಪಂಡಿತನು ಹೇಳಿರುವದು ನಿಜವೆಂದೂ ಹಾಗು ಪ್ರೌಢದೇವನಿಗೂ ಮತ್ತು ವೆಂಕಟಪತಿರಾಯನಿಗೂ ೨೦೦ ವರ್ಷಗಳ ಅಂತರವಿದೆಯೆಂದೂ ನಿರಾಧಾರವಾಗಿ ಹೇಳಿ ಮಾಯಿದೇವನ ಜೀವನ ಕಾಲವನ್ನು ಕ್ರಿ. ಶ. ೧೪೩೦ ವೆಂದು ನಿರ್ಧರಿಸಿದರು.

ಈ ಸಾಧನಗಳ ಜೊತೆಗೆ ಅವಶ್ಯವಾಗಿ ಬೇಕಾಗಿರುವ ಐಪುರದ (ಐಹೊಳ್ಳಿ) ಯ ಸುತ್ತುಮುತ್ತಿನ ಐತಿಹಾಸಿಕ ಪ್ರತ್ಯಕ್ಷ ಕುರುಹುಗಳ ಬಗ್ಗೆ ವಿಚಾರಿಸಿದ್ದರೆ ಮಾಯಿದೇವನ ಕಾಲವು ಸುಮಾರು ಕ್ರಿ. ಶ ೧೨೦೦ ಎಂದು ಸಹಜ ಗೊತ್ತಾಗುತ್ತಿತ್ತು. ಅದು ಹೇಗಂದರೆ ಹುನಗುಂದ ತಾಲೂಕಿನಲ್ಲಿರುವ ಐಹೊಳ್ಳಿ ಗ್ರಾಮವು ಹಿಂದಕ್ಕೆ ವಿದ್ಯಾಕೇಂದ್ರಸ್ಥಾನವಾಗಿತ್ತು. ಅಲ್ಲಿ ವರ್ತಕರ ಧರ್ಮಾದಾಯ ಹಣದಿಂದ ಒಂದು ವಿಶ್ವವಿದ್ಯಾಲಯ ನಡಿಸಲ್ಪಡುತ್ತಿತ್ತು. ಆ ಕಾಲದಲ್ಲಿ ಆ ನಾಡಿನ ಯಾವತ್ತು ಜನರು ವಿದ್ಯಾವಂತರಾಗಿರುವದರಿಂದಲೇ ಮಿ॥ ಉಯಿಲಿಯಮ ರಾಯಿಸ ಎಂಬವರು ತಮ್ಮ "ಮೈಸೂರ ಮತ್ತು ಕೂರ್ಗ" ಎಂಬ ಪುಸ್ತಕದಲ್ಲಿ ಏಕಾಂತರಾಮಯ್ಯನು ಐಹೊಳಿಯಲ್ಲಿ ೫೦೦ ವೀರಶೈವ ಪಂಡಿತರೊಡನೆ ಅನ್ಯ

ಮಠೀಯರಿಗ ವೀರಶೈವ ದೀಕ್ಷೆಯನ್ನು ಕೊಡುತ್ತಿದ್ದನೆಂದು ಹೇಳಿರುವದು ಸಹಜವೆಂದು ಸಿದ್ಧವಾಗುವದು. ಇದೂ ಅಲ್ಲದೆ ೧೨ ನೆಯ ಶತಮಾನದಲ್ಲಿ ಮರುಳಶಂಕರದೇವ (ಹುಚ್ಚೇಶ್ವರ) ನೆಂಬ ಒಬ್ಬ ಶಿವಯೋಗಿಯು ಐಹೊಳೆಯ ಒಬ್ಬ ಕ್ಷತ್ರಿಯ ಅರಸನಿಗೆ ಲಿಂಗಧಾರಣಮಾಡಿದ್ದು ಆ ಅರಸನ ಸಂತತಿಯವರೇ ಈಗಿನ ಐಹೊಳೆಯ ಶ್ರೀ ದೇಸಾಯಿಯವರಿರುವರು. ಹಾಗು ಶ್ರೀಮದನಾದಿ ಅಲ್ಲಮ ಪ್ರಭುವಿನಿಂದ ಪುನೀತನಾದ ಶ್ರೀ ಮರುಳು ಶಂಕರ ದೇವನ ಸಮಾಧಿಯು ಕಮತಗಿ ಗ್ರಾಮದ ಮುಂದಿನ ಮಲಪ್ರಹಾರಿ ನದಿಯ ಮಧ್ಯದಲ್ಲಿರುವದು. ಈ ಮಾಯಿದೇವಾಚಾರ್ಯನಾದರೂ ವೀರಶೈವ ಧರ್ಮ ಪ್ರಸಾರದ ಕಾರ್ಯವನ್ನು ಕೈಕೊಂಡು ತನ್ನ ಇಷ್ಟ ದೈವತವಾದ ಐಪುರದ ಸೋಮೇಶ್ವರನ ಅನುಗ್ರಹದಿಂದ ಅನುಭವ ಸೂತ್ರ ಶತಕ ತ್ರಯಾದಿ ಉದ್ಗ್ರಂಥಗಳನ್ನು ಬರೆದು “ ಕುಮತ ಮತವಿಭೇದಿ ” ಎಂದು ಬಿರುದನ್ನು ಪಡೆದು ಕಡೆಗೆ ಐಹೊಳೆಯಲ್ಲಿ ಬೈಲಾಗಿರಬಹುದು. ಕಮತಗಿ ಗ್ರಾಮವು ಐಹೊಳೆಯ ಸಮೀಪದಲ್ಲಿರುವರು. ಸೀತಿಮನಿ ಗ್ರಾಮದ ಹತ್ತರವಿರುವ ಜಡರಾಮ ಕುಂಟಿ ಗ್ರಾಮವು “ ಜಟಾಯು ಮರಣ ಕುಟೀರಮ್ ” ಎಂಬದರ ತಧ್ಭವವಿರುವಂತೆ “ ಸದ್ಯದ ಕಮತಗಿಎಂಬುವ ಹೆಸರು ಕಮತ ಮತವಿಭೇದಿ ” ಎಂಬದರ ತಧ್ಭವ (ಅಪಭ್ರಂಶ)ವಾದರೂ ಇರಬಹುದು. ಇದು ಅಲ್ಲದೆ ಬಾಗಲಕೋಟಿ ತಾಲೂಕಿನಲ್ಲಿ ಐಹೊಳೆಯ ಸಮೀಪದಲ್ಲಿರುವ ಹಿರೇ ಮಾಗಿ ಮತ್ತು ಚಿಕ್ಕಮಾಗಿ ಎಂಬ ಹಳ್ಳಿಗಳು ಕೃಷ್ಣಾ ನದಿಯ ದಡದಲ್ಲಿ ಈಗ್ಯೂ ಇರುವವು. ಇವುಗಳಲ್ಲಿ ಯಾವದಾದರೊಂದು ಮಾಗಿ ಗ್ರಾಮವು ಮಾಯಿದೇವಾಚಾರ್ಯನ ಜನ್ಮಭೂಮಿಯಾದರೂ ಆಗಬಹುದು. ಈ ಎಲ್ಲ ಕಾರಣಗಳ ಮೇಲಿಂದ ಮಾಯಿದೇವಾಚಾರ್ಯನ ಜೀವನ ಕಾಲವು ಸುಮಾರು ಕ್ರಿ. ಶ. ೧೨೦೦ ಆಗಬಹುದು. ಹಾಗೂ ಇದೇ ಮಾಯಿದೇವನು ಹಂಪಿಗೆ ಹೋಗಿ ಹರಿಹರನಿಗೆ ವೀರಶೈವ ದೀಕ್ಷೆಯನ್ನು ಕೊಟ್ಟು ಆತನಿಗೆ ಗುರುವಾದರೂ ಆಗಿರಬಹುದೆಂದೂ ಸಹಜ ಸಿದ್ಧವಾಗುವದು. ಆದುದರಿಂದ ಹರಿಹರ ಕವಿಯ ಜೀವನ ಕಾಲವಾದರೂ ಕ್ರಿ. ಶ ೧೨೦೦ ಆಗಬಹುದೆಂದೂ ನಮಗೆ ತೋರುವದು.

ಮತ್ತು ಮಾಯಿದೇವನು ತನ್ನ ಗ್ರಂಥಗಳಲ್ಲಿ ಶ್ರೀಪ್ರಭು, ಬಸವ, ಚನ್ನಬಸವ ಇವರುಗಳನ್ನು ಸ್ತುತಿಸಿರುವನಲ್ಲದೆ ಪ್ರಭುಗೀತೆ ಎಂಬುದೊಂದು ಅಲ್ಲಮಪ್ರಭುದೇವರ ಸ್ತುತಿ ರೂಪವಾದ ಬೇರೇ ಗ್ರಂಥವನ್ನು ಬರೆದಿರುವನು. ಮಾದರಿಗಾಗಿ ಅದರಲ್ಲಿಯ ಒಂದು ಗೀತೆಯನ್ನು ಕೊಡುತ್ತೇವೆ.

**ರಾಗ ಕಾಂಬೋದಿ.**

ತವೊಳು ತಾವು ಕಾಣಲರಿಯುರಲ್ಲ । ಏನು ನೋಡಿದರೇನು ।
ಎಷ್ಟು ಕೇಳಿದರೇನು । ಆದಿಯುನಾದಿಯು ಅವಿದ್ಯವ ಮೀರದೆ ।
ವೇದ ಪುರಾಣ ಹದಿನೆಂಟರೊಳು । ಕೇದಿಗೆ ವೃಕ್ಷದೊಳು ।
ಸರ್ಪವೇರಿದಂತೆ । ಅನಾದಿ ಮೂರುತಿ ತಾನೇ ಎಂದು ಅರಿಯದೆ ॥೧॥
ಕೊರಳೊಳಗಿದ್ದ ರತ್ನ ಮಾಲೆ ತಿಳಿಯದೆ । ಹೊರಗರಸುವದು ।
ಹದಿನಾಲ್ಕು ಲೋಕ ಜಗಭರಿತ ನಿಷ್ಕಳ ನಿರಂಜನ ಸ್ವಾಮಿ ।
ಕರದೊಳಗಿದ್ದ ಲಿಂಗವನಂಬಲರಿಯುದೆ ॥ ೨ ॥ ಎಲ್ಲ ವಿದ್ಯವ
ಕಲಿತು । ಏಕೋ ದೇವನ ಮರೆತು । ಸೊಲ್ಲಿನೊಳಗೆ ತಾನು
ತಿಳಿಯಲಿಲ್ಲ । ಎಲ್ಲ ಮನೆಯೊಳಿದ್ದು । ಬೇರೆ ಆರಿಸುವಂತೆ ।
ಅಲ್ಲಮಪ್ರಭು ಆನಂದ ಕಲ್ಯಾಣದೈಯ ॥ ೩ ॥

ಈ ಪ್ರಕಾರವಾಗಿ ಶ್ರೀಅಲ್ಲಮಪ್ರಭು, ಬಸವ, ಚೆನ್ನಬಸವಾದಿಗಳನ್ನು ಸ್ತುತಿಸುವದರಿಂದ ಈತನು ಇವರಿಗಿಂತ ಈಚೆಯವನೆಂದೂ ಹಾಗು ಇವರ ಹೊರ್ತಾಗಿ ಅನ್ಯ ಯಾವ ವೀರಶೈವ ಪಂಡಿತರನ್ನಾಗಲೀ ಅಥವಾ ಶಿವಶರಣರನ್ನಾಗಲೀ ಸ್ತುತಿಸದೆ ಇರುವದರಿಂದ ಅವರಿಗಿಂತ ಆಚೆಯವನೆಂದೂ ಸಹಜ ಸಿದ್ಧವಾಗುವದು.

---

## ಕೋಡಿಯ ಮಠ

( ಎಸ್. ಎಸ್. ಮಾಳವಾಡ ಬಿ. ಎ. (ಆನರ್ಸ) )

ಹನ್ನೆರಡನೇ ಶತಮಾನದ ಮಧ್ಯದಲ್ಲಿ, ಕರ್ನಾಟಕದಲ್ಲಿ ನಡೆದ ಮಹತ್ವದ ಧಾರ್ಮಿಕ ಕ್ರಾಂತಿಯು ಇತಿಹಾಸ ಸಂಶೋಧಕರಿಗೆ ಇನ್ನೂ ಒಂದು ಸಮಸ್ಯೆಯಾಗಿಯೇ ಉಳಿದಿದೆ. ಯಾಕಂದರೆ ಆ ಕಾಲದ ಹಾಗೂ ತದನಂತರದ ಐತಿಹಾಸಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿ ಘನತರವಾದ ಪರಿಣಾಮವನ್ನುಂಟುಮಾಡಿದ ಈ ಮಹಾಕ್ರಾಂತಿಗೆ ಕಾರಣವಾಗಿರುವ ಶಕ್ತಿ ವಿಶೇಷಗಳು ಯಾವವೆಂಬದು ತಿಳಿಯುವದು ಸಾಧ್ಯವಿಲ್ಲದಾಗಿದೆ. ಇಂತಹ ಮಹಾಕ್ರಾಂತಿಗೆ

ಮಹಾಶಕ್ತಿ ವಿಶೇಷಗಳೇ ಕಾರಣವಾಗಿರಬೇಕು. ಆದರೆ ಅವು ಒಳ್ಳೇ ಗೂಢವಾಗಿವೆ. ಈ ವಿಷಯವನ್ನು ಹೆಚ್ಚು ಅಭ್ಯಾಸ ಮಾಡುವವರಿಗೆ ಲಿಂಗವಂತ ಮಠಗಳು ಕೆಲವುಟ್ಟಿಗೆ ಸಹಾಯಕಾರಿಯಾಗುವವು. ಮಠ ಗಳಲ್ಲಿ ಮೊದಲಿನಿಂದಲೂ ಕಾಗದಪತ್ರಗಳನ್ನು ಇಡುವ ರೂಢಿಯಿದೆ. ಹಾಗೂ ಮಠಗಳಿಗೆ ಆಗಿನ ಕಾಲನ ರಾಜರು ಅಧಿಕಾರಿಗಳು ಕಾಣಿಕೆ ಕೊಟ್ಟು ಶಿಲಾಲೇಖಗಳನ್ನು ಬರೆಯಿಸುವದು ವಾಡಿಕೆಯಾಗಿತ್ತು. ಇದು ಇತಿಹಾಸದ ಅಭ್ಯಾಸಕ್ಕೆ ಅನುಕೂಲವಾದ ಸಾಧನವಾಗಿದೆ. ಆ ಕಾಲದ ಸಾಮಾಜಿಕ, ರಾಜಕೀಯ, ಧಾರ್ಮಿಕ ವಿಷಯಗಳನ್ನು ನಾವು ಕಂಡುಕೊಳ್ಳಬಹುದು.

ಈ ಮಠಗಳ ವಿಷಯವನ್ನು ಅರಿತ.ಕೊಳ್ಳುವ ಕುತೂಹಲವುಳ್ಳವರಿಗೆ "ಕಾಳಾಮುಖ" ಶಬ್ದವು ಹೆಚ್ಚಾಗಿ ಕಂಡು ಬರುತ್ತದೆ. ಈ ಕಾಳಾಮುಖರು ಆ ಕಾಲದ ಪ್ರಮುಖ ಸ್ಥಾನಾಚಾರ್ಯರಾಗಿದ್ದರೆಂಬದು ಇತಿಹಾಸದಲ್ಲಿ ಕಂಡು ಬರುತ್ತದೆ. ಆ ಕಾಲಕ್ಕೆ ಇವರು ಒಳ್ಳೇ ವರ್ಚಸ್ಸುಳ್ಳವರಾಗಿದ್ದ ರೆಂಬದಕ್ಕೆ ಸಾಕಷ್ಟು ನಿದರ್ಶನಗಳಿವೆ. ಇತಿಹಾಸ ಸಂಶೋಧಕರಿಗೆ ಕಾಳಾಮುಖರ ವಿಷಯವನ್ನು ಅರಿಯುವದು ಅವಶ್ಯವಾದ ಮಾತು. ಶೈವ ಮತದ ಹುಟ್ಟು, ಬೆಳವಣಿಗೆ, ತತ್ವಗಳು, ಪೂಜಾಪದ್ಧತಿ. ಇವುಗಳನ್ನು ವಿಶದವಾಗಿ ಡಾ. ಭಾಂಡಾರಕರರು ಚರ್ಚಿಸಿರುತ್ತಾರೆ. (*Oriental Series Vol IV Skaivism*) ಅಲ್ಲಿ ಕಾಳಾಮುಖರ ಪ್ರಸ್ತಾಪವೂ ಬಂದಿದೆ. ಆದರೆ ಕಾಳಾಮುಖರ ಹಾಗೂ ಕರ್ನಾಟಕದ ನಿಕಟ ಸಂಬಂಧದ ಕಲ್ಪನೆಯು ಬರಬೇಕಾದರೆ ಕರ್ನಾಟಕದ ಶಿಲಾಲೇಖಗಳನ್ನು ಪರಿಶೀಲಿಸಬೇಕು. ಕಾಳಾಮುಖರು ಯಾರು ಎಂಬ ಉತ್ಸುಕತೆಯು ಕನ್ನಡಿಗರಲ್ಲಿ ಉಂಟಾಗದೆ ಇಲ್ಲ. ಈ ವಿಷಯವಾಗಿ ಶಿವಾನುಭವದಲ್ಲಿ ಒಂದು ಬರಹವು ಪ್ರಕಟವಾಗಿದೆ. ಆದರೂ ಅವರ ವಿಷಯವಾಗಿ ನಮಗೆ ಇದು ವರೆಗೆ ತಿಳಿದ ಸಂಗತಿಗಳು ತೀರ ಸ್ವಲ್ಪ. ಕರ್ನಾಟಕದ ಇತಿಹಾಸ ಲಿಂಗವಂತ ಧರ್ಮಗಳಲ್ಲಿ ಆಸ್ಥೆಯುಳ್ಳವರು ಈ ಕಾಳಾಮುಖರ ವಿಷಯವನ್ನು ಹೆಚ್ಚಾಗಿ ಅಭ್ಯಾಸ ಮಾಡಬೇಕು.

ಕಾಳಾಮುಖರು ಒಳ್ಳೇ ನಿಷ್ಠಾವಂತರಾದ ಶೈವರು. ಕೆಚ್ಚಿನ ಶೈವೋಪಾಸಕರು. ಆದುದರಿಂದ ಲಿಂಗವಂತ ಧರ್ಮದ ಇತಿಹಾಸಕ್ಕೆ ಇವರ ನಿಕಟವಾದ ಸಂಬಂಧವಿದೆ. ಲಿಂಗವಂತರಲ್ಲದ ವೀರಶೈವರು ಆಗ ಇದ್ದರೆಂದು ಪಂಡಿತರು ಒಪ್ಪುತ್ತಾರೆ. ಇಷ್ಟಲ್ಲದೆ ಆಗ ಅಸ್ತಿತ್ವದಲ್ಲಿದ್ದ ಪ್ರಮುಖ

ಮಠಗಳಲ್ಲೆಲ್ಲ ಕಾಳಾಮುಖರು ಸ್ಥಾನಾಚಾರ್ಯರಾಗಿದ್ದರು. ಈಗಿನ ಲಿಂಗವಂತ ಮಠಗಳಲ್ಲಿ ಕೂಡ ಕಾಳಾಮುಖರು ಆಗ ಅಧಿಕಾರಾರೂಢ ರಾಗಿದ್ದರೆಂದು ತಿಳಿಯುತ್ತದೆ. ಆದರೆ ಕಾಳಾಮುಖರ ಮಠಗಳು ಲಿಂಗ ವಂತರವುಗಳಾಗಿ ಹೇಗೆ ಮಾರ್ಪಟ್ಟವೆಂಬ ಪ್ರಶ್ನೆ ನಮ್ಮನ್ನೆದುರಿಸುತ್ತಿದೆ. ಇದಕ್ಕೆ ಸಮಾಧಾನಕಾರಕ ಉತ್ತರವು ನಮಗಿನ್ನೂ ದೊರೆತಿಲ್ಲ. ಆದುದ ರಿಂದ ಇತಿಹಾಸ ಸಂಶೋಧಕರು ಈ ಮಾರ್ಗದಿಂದ ಮುಂದೆ ಹೋಗ ಬೇಕಾಗಿದೆ. ಕಾಳಾಮುಖರದೇ ಆದ ಇನ್ನೊಂದು ಶಾಖೆಯು ವಿಷಯವಾ ಗಿಯೂ ಅವರ ಮುಖ್ಯ ಮಠದ ವಿಷಯವಾಗಿಯೂ ಈ ಬರಹದಲ್ಲಿ ಕೆಲವು ಮಾತುಗಳನ್ನು ಹೇಳಬೇಕೆಂದಿದ್ದೇನೆ.

ಮೈಸೂರ ಪ್ರಾಂತದ ಬಳ್ಳೀಗಾವಿ ಪಟ್ಟಣವು ಒಳ್ಳೇ ಇತಿಹಾಸ ಪ್ರಸಿದ್ಧವಾಗಿದೆ. ಹನ್ನೆರಡನೇ ಶತಮಾನದಲ್ಲಿ ಅದು ರಾಜಕೀಯ ಧಾರ್ಮಿಕ ಕೇಂದ್ರವಾಗಿತ್ತು. ಇದು ಶಿಲಾಲೇಖನಗಳಲ್ಲಿ ಬಳ್ಳಿಪುರ ಬಳಿಪುರ ಬಲಿಪುರ ಬಳ್ಳಿಗ್ರಾಮ ಮುಂತಾದ ಹೆಸರುಗಳಿಂದ ಉಕ್ತವಾಗಿದೆ. ಇದು ಒಂದು ಉತ್ತಮ ಕ್ಷೇತ್ರವಾಗಿದ್ದರಿಂದಲೂ ಸುಂದರ ರಾಜಧಾನಿಯಾಗಿದ್ದುದರಿಂ ದಲೂ ಒಳ್ಳೇ ಪ್ರಸಿದ್ಧವಾಗಿತ್ತು. ಮೈಸೂರ ಪ್ರಾಂತದ ಷಿಕಾರಿಪುರದ ೧೨೩, ೧೦೨, ೯೨, ೪೬, ೧೧೭, ಮುಂತಾದ ಶಾಸನಗಳಲ್ಲಿಯೂ ಸೊರಬದ ೨೭೭, ೧೭೯ ನೇ ಶಾಸನಗಳಲ್ಲಿಯೂ ಬಳ್ಳಿಗಾವಿಯು ಉಲ್ಲೇಖವಿದೆ. ಕಲ ಚೂರ್ಯ ಬಿಜ್ಜಳ ಮೊದಲಾದ ಅರಸರು ದಂಡಯಾತ್ರೆಯು ಕಾಲಕ್ಕೆ ಈ ಊರಲ್ಲಿ ಬೀಡು ಬಿಡುತ್ತಿದ್ದರು. ಹಾಗೂ ಅಲ್ಲಿಯ ಮಠಗಳನ್ನು ಕಂಡು ಅವುಗಳ ವಿಷಯವಾಗಿ ತಮ್ಮ ಆಸಕ್ತಿಯನ್ನೂ ಗೌರವವನ್ನೂ ವ್ಯಕ್ತಪಡಿಸುತ್ತಿದ್ದರು. ಷಿಕಾರಿಪುರದ ೧೦೨ ನೇ ಶಾಸನದಲ್ಲಿ ಹೀಗಿದೆ-- ಕ್ರಿ. ಶ. ೧೧೬೨ ನೇ ವರುಷದಲ್ಲಿ ಕಲಚೂರ್ಯ ಬಿಜ್ಜಳನು ದಂಡಯಾತ್ರೆಗೆ ಬಂದು ಬಲಿಪುರದಲ್ಲಿ ಬೀಡು ಬಿಟ್ಟಿದ್ದನು. ಆಗ ಕಸಪಯ್ಯ ನಾಯಕನು ಆತ ನಿಗೆ ಅಲ್ಲಿರುವ ಕೋಡಿಯಮಠದ ಘನತೆಯನ್ನು ವಿವರಿಸಿದನು. ಅಲ್ಲಿ ಒಂದು ಧರ್ಮಕಾರ್ಯವನ್ನು ಮಾಡುವಂತೆ ಬಿನ್ನವಿಸಿದನು. ಆ ಪ್ರಾರ್ಥ ನೆಯನ್ನು ಮನ್ನಿಸಿ ಬಿಜ್ಜಳನು ಅನೇಕ ಊರುಗಳನ್ನು ದಾನವಾಗಿ ಕೊಟ್ಟನು. ಸೊರಬದ ೨೭೭ ನೇ ಶಾಸನ ಹಾಗೂ ಷಿಕಾರಿಪುರದ ೧೦೮ ನೇ ಶಾಸನಗಳಲ್ಲಿ ಮಹದೇವ ದಂಡನಾಯಕನ ಪ್ರಸ್ತಾಪ ಬಂದಿದೆ. ಆತನು ಬನವಾಸೆ ಪ್ರಾಂತವನ್ನು ಆಳುತ್ತಿದ್ದನು. ಬಲಿಪುರವು ರಾಜಧಾನಿ. ಅಲ್ಲಿಯ ಕೋಡಿಯ ಮಠದ ಆಚಾರ್ಯನಾದ ವಾಮಶಕ್ತಿಯನ್ನು ಮಹದೇವ

ನಾಯಕನು ಪೂಜಿಸುತ್ತಿದ್ದನು. ಈ ಬಲಿಪುರದ ನೆರೆಯಲ್ಲಿಯೇ ಬಿಜ್ಜಳನ ದಂಡನಾಯಕನಾದ ಕೇಶವ (ಕೇಶಿರಾಜ) ನು ಈ ಸ್ಥಳದ ಮಹತ್ವವನ್ನರಿತು ಕೇಶವಪುರವನ್ನು ಕಟ್ಟಿಸಿದನೆಂದು ಶಿಕಾರಿಪುರದ ೧೨೩ ನೇ ಶಾಸನದಲ್ಲಿ ಉಕ್ತವಾಗಿದೆ. ಅದೇ ಶಾಸನದಲ್ಲಿ ಬಂದಿರುವ ವರ್ಣನೆಯನ್ನು ಇಲ್ಲಿ ಸಂಗ್ರಹವಾಗಿ ಕೊಡುತ್ತೇನೆ. ಬಲಿಪುರವು ಬನವಾಸೆ ಪ್ರಾಂತದ ರಾಜಧಾನಿಯಾಗಿತ್ತು. ಇಲ್ಲಿ ಕೇಶಿರಾಜನು ರಾಜ್ಯಭಾರ ಮಾಡುತ್ತಿದ್ದನು. ಪೂರ್ವದ ದಂಡನಾಯಕರು ಅಲ್ಲಿ ಸತ್ರ, ವಿಹಾರೋದ್ಯಾನ, ಗುಡಿ, ಕೆರೆ ಕಾಲುವೆಗಳನ್ನು ನಿರ್ಮಿಸಿದ್ದರು. ಅದು ಜಗತ್ತಿನಲ್ಲಿ ಪ್ರಸಿದ್ಧವಾದ ಪಟ್ಟಣವಾಗಿತ್ತು. ಬಹುಕಾಲದಿಂದ ಪ್ರಗತಿಪರವಾಗಿತ್ತು. ಇದು ಪಾಂಡವರಿಂದ ಸ್ಥಾಪಿಸಲ್ಪಟ್ಟ ಸುಪ್ರಸಿದ್ಧ ಪಂಚ ಲಿಂಗಗಳ ಸ್ಥಾನವಾಗಿತ್ತು. ಈ ಊರು ಪ್ರತಿಷ್ಠ ನಾಗರಿಕರಿಂದಲೂ ಸೆಟ್ಟಿ ಸಾಹುಕಾರರಿಂದಲೂ ತುಂಬಿತ್ತು. ಇಲ್ಲಿ ಪಂಚಮಠ, ಹಿರಿಯಮಠ, ಪಂಚಲಿಂಗ ಮಠ, ತ್ರಿಪುರಾಂತಕಮಠ, ಕೋಡಿಯ ಮಠಗಳಿದ್ದವು. ಆ ಮಠಗಳಿಗೆಲ್ಲ ನಿಷ್ಠಾವಂತ ಪಂಡಿತರೂ ಆದ ಆಚಾರ್ಯರಿದ್ದರು. ಅವರು ರಾಜರಿಂದ ಗೌರವ ಹೊಂದುತ್ತಿದ್ದರು. ಅವರಲ್ಲಿ ಸರ್ವೇಶ್ವರ ಪಂಡಿತದೇವನು ಪಂಚಲಿಂಗಕ್ಕೆ, ಮೂಲಿಗ ಮಧುಕೇಶ್ವರ ಪಂಡಿತನು ಹಿರಿಯ ಮಠಕ್ಕೆ, ಜ್ಞಾನಶಕ್ತಿ ಪಂಡಿತದೇವನು ತ್ರಿಪುರಾಂತಕಮಠಕ್ಕೆ, ಹಾಗೂ ವಾಮಶಕ್ತಿದೇವನು **ಕೋಡಿಯಮಠಕ್ಕೆ** ಸ್ಥಾನಾಚಾರ್ಯರಾಗಿದ್ದರು.

ಸೊರಬದ ೨೭೭ ನೇ ಶಾಸನದಲ್ಲಿ "ಕಲಹಂಸಗತಿಯ ಬಳ್ಳಿ ಪುರದೋಳ್.........ಎನಿಪ ಬಳಿಪುರದೊಳು" ಎಂಬದಾಗಿ ಬಳ್ಳಿಗಾವೆಯು ವರ್ಣಿಸಲ್ಪಟ್ಟಿದೆ. ಅದು ಬನವಾಸೆ ನಾಡಿಗೆ ಅಲಂಕಾರಪ್ರಾಯವಾಗಿತ್ತು. ಅದು ಐದು ಮಠಗಳಿಂದ ಶೋಭಿಸುತ್ತಿದ್ದಿತು. ಅಲ್ಲಿ ಸ್ವಧರ್ಮದ ಆಚರಣೆಗಳು ಸರಿಯಾಗಿ ನಡೆಯುತ್ತಿದ್ದವು ಮೋಸ, ವಂಚನೆಗಳು ಅಲ್ಲಿ ಇರಲೇ ಇಲ್ಲ. ಅಲ್ಲಿ ಮೂರು ಔಷಧಾಲಯಗಳಿದ್ದವು. ಧರ್ಮ ರಕ್ಷಣೆಯು ಚನ್ನಾಗಿ ನಡೆದಿತ್ತು. ಶಿಕಾರಿಪುರದ ೧೦೪ ನೇ ಶಾಸನವು "ಬಲಿಪುರ......ಪಲವುಂ ಪುರ ಪಂಚಮಠ.....ಪಲವು ಬ್ರಹ್ಮಪುರಿಗಳ್" ಎಂಬದಾಗಿ ಬ್ರಹ್ಮಪುರಿ, ಪಂಚಮಠಗಳ ವಿಷಯವನ್ನು ಹೇಳುತ್ತದೆ. ಕೋಡಿಯಮಠವು ಅವುಗಳಲ್ಲಿ ಪ್ರಸಿದ್ಧವಾದದ್ದು.

ಸಾರಾಂಶ ಬಲಿಪುರವು ಆ ಕಾಲಕ್ಕೆ ಸುಪ್ರಸಿದ್ಧ ಪಟ್ಟಣವಾಗಿತ್ತೆಂ ಬದಕ್ಕೆ ಸಾಕಷ್ಟು ನಿದರ್ಶನಗಳಿವೆ. ಪ್ರಕೃತ ನಮಗೆ ಸಂಬಂಧವಿರುವ ಕೋಡಿಯಮಠದ ಸಲುವಾಗಿಯೂ ಎಷ್ಟೋ ಸಂಗತಿಗಳು ಶಿಲಾಲೇಖ ಗಳಿಂದ ತಿಳಿದುಬರುತ್ತದೆ.

ಬಳ್ಳಿಗಾವೆಯ ದಕ್ಷಿಣ ಭಾಗದಲ್ಲಿ ತಾವರಗೆರೆ ಎಂದ ದೊಡ್ಡಕೆರೆ ಯಿದ್ದಿತು ಆ ಕೆರೆಗೆ ಒಂದು ಕಡೆಗೆ ದೊಡ್ಡ ಕೋಡಿ (*outlet*) ಯುಂ ಟಾಗಿದ್ದಿತು. ಆ ಕೋಡಿಯ ನೆರೆಯಲ್ಲಿಯೇ ಈ ಮಠವಿದ್ದುದರಿಂದ ಅದಕ್ಕೆ ಕೋಡಿಯಮಠವೆಂಬ ಹೆಸರು ಬಂದಿತೆಂದು ತಿಳಿಯುತ್ತದೆ. (ಈಗ ಬಳ್ಳಿ ಗಾವಿಯಲ್ಲಿ ಈ ಮಠದ ವಿಷಯವಾಗಿ ಹೆಚ್ಚಿಗೆ ಸಂಗತಿಗಳೇನಾದರೂ ದೊರೆಯುವವೋ ಏನೋ ನನಗೆ ಗೊತ್ತಿಲ್ಲ. ಕುತುಹಲವುಳ್ಳವರು ಸಂಶೋ ಧಿಸಬೇಕು.)

ಆಗಿನಕಾಲಕ್ಕೆ (ನಾನಿಲ್ಲಿ ಬಿಜ್ಜಳನ ಕಾಲದ ಶಿಲಾಲೇಖಗಳನ್ನಷ್ಟೇ ಉದಾಹರಿಸಿದ್ದೇನೆ) ಇದು ಒಂದು ಪ್ರತಿಷ್ಠಿತ ಮಠವಾಗಿತ್ತು. ಆದರೆ ಇದು ಹೆಸರಿಗೆ ತಕ್ಕಂತೆ ಬರಿ ಮಠವಾಗಿರದೆ ಅನೇಕ ವಿದ್ಯೆಗಳ, ಕಲೆಗಳ ತವರುಮನೆಯಾಗಿತ್ತು. ಧಾರ್ಮಿಕ ಸಂಸ್ಥೆಯಾಗಿತ್ತು. ಜನತೆಗೆ ಸುಖ ಅನು ಕೂಲತೆಗಳನ್ನು ಒದಗಿಸಿಕೊಡುವ ಮಂದಿರವಾಗಿತ್ತು ಇಲ್ಲಿ ಔಷಧಾಲ ಯಗಳೂ, ವಿದ್ಯಾಲಯಗಳೂ ನಡೆಯುತ್ತಿದ್ದವು. ಇದು ಸುಜ್ಞಾನಿಗಳಿಗೂ ಸುನೀತಿವಂತರಿಗೂ, ನೈಷ್ಠಿಕ ಬ್ರಹ್ಮಚಾರಿಗಳಿಗೂ ಆಗರವಾಗಿತ್ತು. ಮಠದ ಆಚಾರ್ಯರು ಘನಪಂಡಿತರೂ, ಶುದ್ಧ ಚಾರಿತ್ರರೂ ಆಗಿ ರಾಜಮನ್ನಣೆ ಪಡೆದು ವರ್ಚಸ್ಸುಳ್ಳವರಾಗಿದ್ದರು. ಶಿಕಾರಪುರದ ೧೨೩ ನೇ ಶಾಸನದಲ್ಲಿ ವಾಮಶಕ್ತಿದೇವನು ರಾಜಗುರು ಎಂದೇ ಉಕ್ತನಾಗಿದ್ದಾನೆ. ದಂಡನಾ ಯಕ ಕೇಶಿರಾಜನು ಕೇಶವಪುರದ ಆಡಳಿತವನ್ನು ಇವನಿಗೇ ಒಪ್ಪಿಸಿ ದನು. ಈ ವಾಮಶಕ್ತಿಯೇ ಕೋಡಿಯಮಠದ ಸ್ಥಾನಾಚಾರ್ಯನು. ೧೦೪ ನೇ ಶಾಸನದಲ್ಲಿ ಈ ಮಠದ ವರ್ಣನೆಯು ಬರುತ್ತದೆ. ಆ ಭಾಗವು ಶ್ಲೇಷಯುಕ್ತವಾದ ಕಾವ್ಯವಾಗಿದೆ. ಆ ಮಠವು ಪುರಾಣಕ ಮಠದಂತೆ ಸಕಲ ಲೋಕಕ್ಕೆ ಆಧಾರವಾಗಿತ್ತು. ಕ್ಷೀರಸಮುದ್ರದಲ್ಲಿ ಲಕ್ಷ್ಮಿಯಿಂದ ಪರಿಪೋಷಿಸಲ್ಪಟ್ಟ ಪುರಾಣಪುರುಷನಂತಿತ್ತು. ಬ್ರಹ್ಮಚಾರಿಗಳ ಸಂಚಾರ ದಿಂದ ಭವಾನೀ ಭವನದಂತಿತ್ತು. 'ಕುರುಕ್ಷೇತ್ರದಂತೆ ಸರಸ್ವತೀ ವಿಳಸಿ ತಮುಂ' ಆಗಿತ್ತು. ಖಚರ ಲೋಕದಂತೆ ವಿದ್ಯಾಧರೀಶ್ವರರಿಂದ ತುಂಬಿತ್ತು.

ವಾಮಶಕ್ತಿದೇವನಿಂದ ಪರಿಪಾಲಿತವಾಗಿ ಕೈಲಾಸವಂತಿತ್ತು. ಶಿಕಾರಿಪುರದ ೧೦೨ ನೇ ಶಾಸನದಲ್ಲಿ ಈ ಮಠದ ಪ್ರಸ್ತಾಪ ಬಂದಿದೆ. ಕ್ರಿ. ಶ. ೧೧೬೨ ರ ಸುಮಾರಿಗೆ ಕಸಪಯ್ಯನಾಯಕನು ಕಲಚೂರ್ಯ ಬಿಜ್ಜಳನ ಪಾದ ಪದ್ಮೋಪಜೀವಿಯಾಗಿದ್ದನು. ಆತನ ಅನುಮತಿಯಿಂದ ಬಮ್ಮರಸನು ಬನವಾಸೆ ನಾಡನ್ನಾಳುತ್ತಿದ್ದನು. ಆ ಬನವಾಸೆ ನಾಡಿನ ಬಳ್ಳಿಗಾವೆ ಇದ್ದಿತು. ಅಲ್ಲಿಯ ದಕ್ಷಿಣ ಕೇದಾರೇಶ್ವರ ದೇವರಸ್ಥಾನವೇ ಕೋಡಿಯಮಠ. ಅದು ಆಗ ಶಿವಲಿಂಗ ಪೂಜೆಯ ನಿಲಯವಾಗಿತ್ತು. ವೇದ, ವೇದಾಂಗಗಳ ಅಭ್ಯಾಸಕ್ಕೂ, ಕೌಮಾರ, ಪಾಣಿನೀಯ, ಶಾಕ್ರಾಯನ, ಶಬ್ದಾನುಶಾಸನ ಮುಂತಾದ ವ್ಯಾಕರಣಗಳ ಭಾಷ್ಯಗಳಿಗೂ ನೆಲೆಯಾಗಿತ್ತು. ನ್ಯಾಯ, ವೈಶೇಷಿಕ, ಮೀಮಾಂಸ, ಸಾಂಖ್ಯ, ಬುದ್ಧ ಮೊದಲಾದ ಆರು ದರ್ಶನಗಳಿಗೆ ಆವಾಸವಾಗಿತ್ತು. ಲಾಕುಲ ಸಿದ್ಧಾಂತ, ಪತಂಜಲಿ, ಯೋಗ ಶಾಸ್ತ್ರಗಳ ಬೀಡಾಗಿದ್ದಿತು. ಹದಿನೆಂಟು ಪುರಾಣಗಳಿಗೂ, ಧರ್ಮಶಾಸ್ತ್ರಗಳಿಗೂ, ಕಾವ್ಯ ನಾಟಕ, ನಾಟಿಕಾ (*Comedy*) ಗಳಿಗೂ ನಿವಾಸವಾಗಿತ್ತು. ಅಲ್ಲಿ ನಿರ್ಗತಿಕರಿಗೆ ಯಥೇಚ್ಛವಾಗಿ ಅನ್ನವು ಕೊಡಲ್ಪಡುತ್ತಿತ್ತು. ಕತೆಗಾರರೂ, ಸಂಗೀತಗಾರರೂ ಅಲ್ಲಿ ಪ್ರೋತ್ಸಾಹವನ್ನು ಪಡೆಯುತ್ತಿದ್ದರು. ವಿವಿಧ ಪಂಥದ ಸನ್ಯಾಸಿಗಳು ಅಲ್ಲಿರುತ್ತಿದ್ದರು. ಕ್ಷಪಣಕ (*Jain mendicant*) ರಿಗೂ, ಏಕದಂಡಿ, ತ್ರಿದಂಡಿ, ಹಂಸ, ಪರಮಹಂಸ ಮೊದಲಾದವರಿಗೆ ಅಲ್ಲಿ ಆಶ್ರಯವಿತ್ತು. ರೋಗಿಗಳ ಆರೈಕೆಯು ನಡೆಯುತ್ತಿತ್ತು. ಮುಂದೆ ಒಂದು ಶ್ಲೇಷಯುಕ್ತವಾದ ಕವಿತೆಯಲ್ಲಿ ಈ ಮಠದ ಘನತೆಯು ಅಚ್ಚುಕಟ್ಟಾಗಿ ವರ್ಣಿಸಲ್ಪಟ್ಟಿದೆ.

ಮಠವು ಹಿರಣ್ಯಕಶ್ಯಪ ಸಂಹಾರದಿಂದ (ಸುವರ್ಣ ದಾನಾದಿಗಳಿಂದ) ಪುರುಷಸಿಂಹನಂತೆಯೂ, ಎಲ್ಲ ಕಡೆಗೂ ಅತ್ಯುತ್ತಮವಿದ್ದುದರಿಂದ ಮಂದಾರ ಪರ್ವತದಂತೆಯೂ, ಆಕ್ರೂರನ ಶಬ್ದಗಳಿಂದ (ಸೌಮ್ಯವಚನಗಳಿಂದ) ಸಂತೋಷಪಡೆಯುವದರಿಂದ ವಾಸುದೇವನಂತೆಯೂ ಇದ್ದಿತು.

ಇಲ್ಲಿ ಬರುವ ಕವಿಕಲ್ಪನೆಯನ್ನು ನಾವು ಬಿಟ್ಟುಕೊಟ್ಟರೂ ಕೂಡ ಕೋಡಿಯ ಮಠದ ಘನತೆಗೆ ಯಾವ ರೀತಿಯಿಂದಲೂ ಕುಂದಿಲ್ಲ. ಮೇಲಿನ ವಿವರಣೆಯಿಂದ ಆ ಮಠದ ವರ್ಚಸ್ಸು ಆಗಿನ ಕಾಲಕ್ಕೆ ಎಷ್ಟಿತ್ತೆಂಬವನ್ನು ಊಹಿಸಬಹುದು. ಇದಕ್ಕೆ ಪೋಷಕವಾಗುವಂತಹ ಬೇರೆ ನಿದರ್ಶನಗಳನ್ನು ಸಂಶೋಧಕರು ಹುಡುಕಬೇಕು. ಈಗಿರುವ ಸಾಧನೆ

ಯಿಂದಲೇ ಊಹಿಸುವದಾದರೆ ಕೋಡಿಯ ಮಠವು ಆಗ ಜ್ಞಾನದ, ದಾನದ, ಧರ್ಮದ, ಕರ್ಮದ, ಸಚ್ಚಾರಿತ್ರ್ಯದ, ಸಚ್ಛೀಲದ ತವರುಮನೆಯಾಗಿದ್ದು ಒಂದು ಘನವಾದ ಸಂಸ್ಥೆಯಾಗಿತ್ತೆಂದು ಹೇಳಬಹುದು. ಮಾನವನ ಸುಖಸೌಕರ್ಯಕ್ಕೆ, ಮನೋವಿಕಾಸಕ್ಕೆ ಎಲ್ಲ ರೀತಿಯಿಂದಲೂ ಅನುಕೂಲ್ಯಗಳನ್ನು ಒದಗಿಸಿಕೊಡುವ ಹಾಗೂ ವಿವಿಧ ಮುಖವಾದ ಕಾರ್ಯಗಳನ್ನು ಒಂದೇ ಒಂದು ಸಂಸ್ಥೆಯು ಕೈಕೊಂಡಿರುವದನ್ನು ಇದೀಗ ಕಲ್ಪಿಸುವದೂ ಕೂಡ ನಮಗೆ ಸಾಧ್ಯವಿಲ್ಲದಾಗಿದೆ. ಇದು ಆಗಿನ ಕಾಲದ ನಮ್ಮ ಜನರ ಹೆಚ್ಚಳದ ದ್ಯೋತಕವಲ್ಲವೇ?

ಇದು ಆ ಸಂಸ್ಥೆಯ ವಿಷಯ. ಇನ್ನು ಅದನ್ನು ಅಲಂಕರಿಸಿದವರೂ ಶ್ರೇಷ್ಠರೇ ಆಗಿರಬೇಕಷ್ಟೇ. ನಾವು ಪರಿಶೀಲಿಸುವ ಬಿಜ್ಜಳನ ಕಾಲದಲ್ಲಿ ವಾಮಶಕ್ತಿದೇವನು ಕೋಡಿಯಮಠದ ಸ್ಥಾನಾಚಾರ್ಯನಾಗಿದ್ದನು. ಈ ಮೊದಲೇ ಆತನ ವಿಷಯವಾಗಿ ಕೆಲವು ಮಾತುಗಳನ್ನು ಹೇಳಿದ್ದಾಗಿದೆ. ಆತನ ಘನತೆಯು ಅಸಾಮಾನ್ಯವಾಗಿತ್ತೆಂಬದನ್ನು ನಾವು ಈಗ ಕಂಡುಕೊಳ್ಳಬಹುದು. ಶಿಕಾರಿಪುರದ ೧೦೩ ನೇ ಶಾಸನದಲ್ಲಿ ಆತನ ವರ್ಣನೆಯು ಹೀಗಿದೆ.

"ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣಮೋನುಷ್ಠಾನ ಜಪಸಮಾಧಿಶೀಲ ಗುಣ ಸಂಪನ್ನರುಂ, ವಿಬುಧಜನಪ್ರಸನ್ನರುಂ, ಸಕಳ ಕವಿ ನಿಕುರುಂಬಾಧಾರಂ, ಅನ್ನದಾನ, ಸುವರ್ಣದಾನ, ಕನ್ಯಾದಾನ, ಗೋದಾನ, ಭೂದಾನಾಭಯ ಭೈಷಜ್ಯಾನೇಕದಾನ ವಿನೋದರುಂ ಲಾಕುಳಾಗಮಾಭರಣರುಂ, ಸಮಸ್ತ ಶಾಸ್ತ್ರಾಗಮ ವಿಚಾರಚಾರ ಚತುರರುಂ ಗೌತುಮ ಮುನಿನಂದನರುಂ, ಬಲಿಪುರದ ದಕ್ಷಿಣ ಕೇದಾರೇಶ್ವರ ದೇವರ ದಿವ್ಯಪಾದ ಪದ್ಮಾರಾಧಕರಪ್ಪ ಶ್ರೀ ಮದ್ರಾಜಗುರು ವಾಮಶಕ್ತಿದೇವ..."

ಮೇಲಿನ ವರ್ಣನೆಯಿಂದ ವಾಮಶಕ್ತಿದೇವನ ಘನತೆಯ ಬಗೆಗೆ ಯೋಗ್ಯ ಕಲ್ಪನೆ ಬರದೇ ಇರಲಾರದು. ಶಿಕಾರಿಪುರದ ೧೦೪ ನೇ ಶಾಸನದಲ್ಲಿಯೂ "ಯಮನಿಯಮ...... ಶೀಳಗುಣ ಸಂಪನ್ನ...... ದಕ್ಷಿಣ ಕೇದಾರೇಶ್ವರ ದೇವರ ಸ್ಥಾನದಾಚಾರ್ಯ......" ಎಂಬದಾಗಿ ಆತನ ವರ್ಣನೆಯಿದೆ. ಶಿಕಾರಿಪುರದ ೧೦೨ ನೇ ಶಾಸನದಿಂದ ಇನ್ನೂ ಕೆಲವು ಸಂಗತಿಗಳನ್ನಿಲ್ಲಿ ಸಂಗ್ರಹಿಸುತ್ತೇನೆ. ಕವಿಕಲ್ಪನೆಯು ಒಂದು ಭವ್ಯ ರೂಪ

ವನ್ನು ಕೊಟ್ಟಿದ್ದರೂ ಸತ್ಯಾಂಶವನ್ನದು ಮರೆಮಾಡಲಾರದು. ವಾಮ ಶಕ್ತಿದೇವನು ಚಂದ್ರನಪ್ಪು ಪ್ರಭೆಯುಳ್ಳ ಮಣಿದೀಪವಾಗಿದ್ದನು. ಜಗತ್ತೆಲ್ಲ ಆತನನ್ನು "ಜೀಯಾ" ಎಂದು ಸಂಬೋಧಿಸುತ್ತಿತ್ತು. ಆತನ ಮುಖವು ಸರಸ್ವತಿಯ ನೃತ್ಯಶಾಲೆಯಾಗಿತ್ತು. ಆತನ ಹೃದಯವು ಕಾಮಧ್ವಂಸಿಯ ಬೀಡಾಗಿತ್ತು. ಆತನ ಕೀರ್ತಿಯು ಜಗತ್ತಿನಲ್ಲೆಲ್ಲ ಪಸರಿಸಿತ್ತು. ಅವನ ತಪಸ್ಸಿನ ಉಗ್ರತೆಗೆ ಕಾಮನು ಬೆದರಿ ಹೋಗಿದ್ದನು.

ಇನ್ನು ಈ ವಾಮಶಕ್ತಿಯ ವಂಶದವರ ವಿಚಾರ. ಷಿಕಾರಪುರದ೯೩, ೯೯ ೧೨೩ ನೇ ಶಾಸನಗಳಲ್ಲಿ ಕೋಡಿಯಮಠದ ಗುರುಗಳ ವಂಶಾವಳಿಯೂ ಅವರ ಘನತೆಯೂ, ವಿದ್ಯೆಯೂ, ಸಚ್ಚಾರಿತ್ರವೂ ವರ್ಣಿಸಲ್ಪಟ್ಟಿವೆ. ವಿಸ್ತಾರ ಭಯದಿಂದ ಅವುಗಳನ್ನಿಲ್ಲಿ ಕೊಡಲಾಗುವದಿಲ್ಲ. ಅವರ ವಂಶವು "ಮೂವರ ಕೋಣೆಯ ಸಂತತಿ" ಎಂಬದಾಗಿ ಉಕ್ತವಾಗಿದೆ. "ಮೂವರ ಕೋಣೆಯ ಸಂತತಿಶಕ್ತಿಪರಿಷೆಯೊಳ್ (ಷಿ. ೯೯)..." ಹಾಗೂ "ಪರ್ವತಾವಳಿಯೊಳ್ತಾನವಿರ್ಭವಿಸಿದ (ಷಿ. ೧೦೮)..." ಮತ್ತೂ "ಪರ್ವತಾವಳಿಯ ಮೂವರ ಕೋಣೆಯ ಸಂತತಿ (ಷಿ. ೧೦೪)......" ಇತ್ಯಾದಿ ವರ್ಣನೆಯು ಶಿಲಾಲೇಖಗಳಲ್ಲಿ ಕಂಡುಬರುತ್ತದೆ. ಅವರೂ ಕಾಳಾಮುಖರೇ ಹೌದು. ಇದು "ಕಾಳಾಮುಖರೆನಿಸಿದ ಕಾಳಾಮುಖರೊಳ್ (ಷಿ. ೯೯)......" ಎಂಬ ಮಾತಿನಿಂದ ಸ್ಪಷ್ಟವಾಗುತ್ತದೆ. ಆದರೆ ಈ ಮೂವರ ಕೋಣೆಯ ಸಂತತಿಯು ಕಾಳಾಮುಖರ ಬೇರೊಂದು ಶಾಖೆಯು. ಕಾಳಾಮುಖರಲ್ಲಿ ಕೆಲವು ಭೇದಗಳುಂಟು. ಆದರಲ್ಲಿ ಇವರು "ಶಕ್ತಿಪರಿಷೆ" ಗೆ ಸೇರಿದವರಾಗಿದ್ದರು.— "ಧರೆಗೆಸೆವ ಶಕ್ತಿ ಪರಿಷೆಗೆ (ಷಿ. ೯೪ ಹಾಗೂ ೯೮)..." ಇವರ ಮುಖ್ಯ ಮಠವೇ ಕೋಡೀಮಠವು. ಅದುವೇ ಇವರ ವಿದ್ಯಾಲಯವಾಗಿತ್ತು. ಇವರಿಗೆ "ಲಾಕುಳಾಗಮ ಭರಣರು" ಎಂಬದಾಗಿ ವಿಶೇಷಣವಿದೆ. ಆದರೆ ಇವರು ಲಾಕುಲೀಶ ಪಂಥವನ್ನು ಅನುಸರಿಸಿದವರೇನೂ ಅಲ್ಲ. ಆ ಪಂಥದ ತತ್ವಗಳನ್ನು ಅರಿತವರೆಂದು ಮಾತ್ರ ಅರ್ಥ ಮಾಡಿಕೊಳ್ಳಬೇಕು. ಹೀಗೆ ಉಕ್ತವಾದ ಮೂವರ ಕೋಣೆಯ ಸಂತತಿಯ ವಿಷಯವಾಗಿ ಹೆಚ್ಚಿನ ಸಂಗತಿಗಳೇನಾದರೂ ತಿಳಿಯುವವೋ ಎಂಬದನ್ನು ನೋಡಬೇಕಾಗಿದ.

ಎಪಿಗ್ರಾಫಿಕಾ ಇಂಡಿಕಾದ ೧ನೇ ಸಂಪುಟದಲ್ಲಿ ಆಬಲೂರ ಶಾಸನದ ವಿಸ್ತ್ರತ ವಿವರಣೆಯು ಬಂದಿದೆ. ಆ ಲೇಖದಲ್ಲಿ ಈ ಮೂವರ ಕೋಣೆಯ ಸಂತತಿಯ ವಿಷಯ ಕೆಲವು ವಿಷಯಗಳು ಸಂಗ್ರಹಿಸಲ್ಪಟ್ಟಿವೆ.— ಮೂವರ

ಕೋಣೆಯ ಸಂತತಿಯು ಕಾಳಾಮುಖರಿಗೆ ಸಂಬಂಧಿಸಿದ್ದಾಗಿದೆ. ಸ್ಥೂಲವಾಗಿ ಅವೆರಡೂ ಒಂದೇ ಎಂದು ಕಂಡುಬರುತ್ತದೆ. ಆದರೆ ಸೂಕ್ಷ್ಮ ನಿರೀಕ್ಷಣೆಯಿಂದ ಅದು ಹಾಗಲ್ಲವೆಂದು ತಿಳಿಯುತ್ತದೆ ಯಾಕಂದರೆ ಕಾಳಾಮುಖರ ವಿದ್ಯಾಲಯವು ಪಂಚಲಿಂಗ ಮಠವೆಂದು ಉಕ್ತವಾಗಿದೆ. (ಬಳ್ಳಿಗಾವೆ ೧೩೫ ನೇ ಶಾಸನ) ಆದರೆ ಮೂವರ ಕೋಣೆಯ ಸಂತತಿಯವರ ವಿದ್ಯಾಲಯವು ಕೇದಾರಸ್ಥಾನ ಅಥವಾ ಕೇದಾರ ಮಠವು ಆಗಿತ್ತು. ಕೇದಾರಮಠವು ಕನ್ನಡದಲ್ಲಿ ಕೋಡಿಯ ಮಠವಾಗಿರಬೇಕು. (ಈ ಕೋಡಿಯ ಮಠವೇ ಮೂವರ ಕೋಣೆಯ ಸಂತತಿಯವರ ಸ್ಥಾನವಾಗಿತ್ತೆಂದು ಈ ಮೊದಲೇ ಹೇಳಿದೆ.) ಮೂವರ ಕೋಣೆಯ ಸಂತತಿಯ ಸ್ಥಾಪಕನು ಮೊದಲು ಕಾಳಾಮುಖ ಸಂತತಿಯವನೇ ಆಗಿದ್ದರೂ ನಂತರ ಬೇರೆ ಪಂಥವನ್ನು ಸ್ಥಾಪಿಸಿರಬಹುದು. ಮೂಲಪುರುಷನ ಹೆಸರು ಕೇದಾರಶಕ್ತಿ. ಆತನ ಕಾಲವು ತಿಳಿದಿಲ್ಲ. ಕೇದಾರಶಕ್ತಿ, ಸೋಮೇಶ್ವರ, ಶ್ರೀಕಂಠ, ಸೋಮೇಶ್ವರ, ವಿದ್ಯಾಭರಣ, ವಾಮಶಕ್ತಿ, ಜ್ಞಾನಶಕ್ತಿ (೧೧೩೦) ಗೌತಮ, ವಾಮಶಕ್ತಿ. *II* (೧೧೫೫ ಕ್ರಿಶ) ಈ ಪ್ರಕಾರ ಕ್ರಮವಾಗಿ ಹೆಸರುಗಳು ಬರುತ್ತವೆ. *II* ವಾಮಶಕ್ತಿಯೇ ಈ ಮೊದಲು ವರ್ಣಿಸಲ್ಪಟ್ಟವನು. ಇವರೆಲ್ಲರೂ ರಾಜ ಗುರುಗಳಾಗಿಯೂ ಆನುವಂಶಿಕವಾಗಿ ಕೋಡಿಯಮಠದ ಆಚಾರ್ಯರಾಗಿಯೂ ಇದ್ದರೂ. ಶಿಲಾಲೇಖಗಳಲ್ಲಿ ಇವರ ಘನತೆಯು ವರ್ಣಿಸಲ್ಪಟ್ಟಿದೆ.

ಇನ್ನು ಈ ಬರಹವನ್ನು ಮುಗಿಸುವದಕ್ಕೆ ಮೊದಲು ಇನ್ನೊಂದು ಮಾತನ್ನು ಸೂಚಿಸಬೇಕಾಗಿದೆ. ಇತಿಹಾಸ ಸಂಶೋಧನ ಕಾರ್ಯದಲ್ಲಿ ಹೆಸರುಪಡೆದ ಶ್ರೀಮಾನ್ ಹಲಸಂಗಿ ಚನ್ನಮಲ್ಲಪ್ಪನವರು ಶಿವಾನುಭವದ ೧೯೨೭ ನೇ ವರುಷದ ಸಪ್ಟೆಂಬರದ ಸಂಚಿಕೆಯಲ್ಲಿ ಒಂದು ಮಹತ್ವದ ಲೇಖವನ್ನು ಪ್ರಕಟಿಸಿದ್ದಾರೆ. ಅದು ಬೆಳಗಾವಿ ಜಿಲ್ಹೆಯ ಹೂಲಿಯ ಪಂಚವಣ್ಣಿಗೆಯ ಮಠದ ವಿಷಯವಾಗಿ ಇದೆ. ಆ ಮಠದ ಕಾಗದ ಪತ್ರಗಳನ್ನೆಲ್ಲ ಅವಲೋಕಿಸಿ ಬಹು ಪೂರ್ವಕಾಲದಿಂದಲೂ ಆ ಮಠದ ಪಟ್ಟವನ್ನು ಅಲಂಕರಿಸಿದ ಸ್ವಾಮಿಗಳ ಹೆಸರುಗಳನ್ನು ಅನುಕ್ರಮವಾಗಿ ಕೊಟ್ಟಿದ್ದಾರೆ. ಆ ಹೆಸರುಗಳು ಶಿಲಾಲೇಖದ ಆಧಾರವನ್ನು ಅವಲಂಬಿಸಿವೆಯೆಂದು ಅವರು ಬರೆಯುತ್ತಾರೆ. ಅದರಲ್ಲಿ ಸ್ಥಿರಪಟ್ಟದ ೩೪ ನೇ ಸ್ವಾಮಿಗಳ ಹೆಸರು ವಾಮಶಕ್ತಿ ಎಂಬದಾಗಿ ಇದೆ. ಅವರ ಕಾಲವು

೧೧೨೬—೧೧೭೯ ಎಂಬದಾಗಿ ಇದೆ. ಈ ಬರಹದಲ್ಲಿ ಮೇಲೆ ಉಕ್ತವಾದ ಕೋಡಿಯಮಠದ ವಾಮಶಕ್ತಿಯ ಕಾಲವಾದರೂ ಸುಮಾರಾಗಿ ಇದೇ ಅಂದಮೇಲೆ ಸಮಕಾಲೀನರಾಗಿ ಸಾಮ್ಯಸಾದೃಶ್ಯವುಳ್ಳ ಈ ಎರಡೂ ವ್ಯಕ್ತಿಗಳೂ ಒಂದೇ ಆಗಿರಲಿಕ್ಕಿಲ್ಲವಷ್ಟೇ? ಹಾಗಾದರೆ ಮೈಸೂರ ಪ್ರಾಂತದ ಬಳ್ಳಿಗಾವಿ ಮಠಕ್ಕೂ ಮುಂಬಯಿ ಪ್ರಾಂತದ ಬೆಳಗಾವಿಯ ಹೂಲಿಯ ಮಠಕ್ಕೂ ತಳಕು ಹಾಕುವದು ಹೇಗೆ? ಇದೊಂದು ಸ್ವಾರಸ್ಯಯುಕ್ತವಾದ ವಿಷಯ. ಈ ಸಂದರ್ಭದಲ್ಲಿ ಹೊಳೆಯುವ ಇನ್ನೊಂದು ವಿಷಯವೆಂದರೆ ಹೂಲಿಯ ಪಂಚವಣ್ಣಿಗೆಮಠ ಈಗ ಲಿಂಗವಂತರದಾಗಿದೆ. ಆದರೆ ಪೂರ್ವಕಾಲದ ಅಲ್ಲಿಯ ಸ್ವಾಮಿಗಳ ಹೆಸರುಗಳೆಲ್ಲ ಕಾಳಾಮುಖರ ಹೆಸರುಗಳಾಗಿವೆ. ಹೂಲಿಯ ಮಠದ ೩೪ ನೇ ಸ್ಥಿರಪಟ್ಟಾಧಿಕಾರಿ ವಾಮಶಕ್ತಿಯೂ ಅದೇ ಹೆಸರಿನ ಅದೇ ಕಾಲದ ಕೋಡಿಯ ಮಠದ ವಾಮಶಕ್ತಿಯೂ ಒಂದೇ ಎಂದು ಊಹಿಸಬಹುದಾದರೆ ಹೂಲಿಯ ಪಂಚವಣ್ಣಿಗೆ ಮಠದಲ್ಲಿ ಆಗಿನ ಸ್ವಾಮಿಗಳು ಮೂವರ ಕೋಣೆಯವರೆಂದು ಕಲ್ಪಿಸಬೇಕಾಗುತ್ತದೆ. ಅರ್ಥಾತ್ ಈ ಮೂವರ ಕೋಣೆಯ ಸಂತತಿಯವರು ಬಸವನ ಕ್ರಾಂತಿಯಿಂದ ಲಿಂಗವಂತರಾಗಿರಬಹುದೋ? ಇದೊಂದು ಪ್ರಶ್ನೆ ಇತಿಹಾಸ ಸಂಶೋಧಕರನ್ನೆದುರಿಸುತ್ತದೆ.

ಇನ್ನು ಕೊನೆಯ ಮಾತು. ಈ ಬರಹದಲ್ಲಿ ನಾನು ಯಾವುದೊಂದು ನಿರ್ಧಾರ ಮಾಡಹೊರಟಿಲ್ಲ. ಹೊಸ ವಿಷಯವನ್ನೂ ಶೋಧಿಸಹೊರಟಿಲ್ಲ. ಕರ್ನಾಟಕದಲ್ಲಿ ೮೦೦ ವರುಷಗಳ ಹಿಂದೆ ಘನತೆಯುಳ್ಳ ಹಾಗೂ ವರ್ಚಸ್ಸುಳ್ಳದ್ದಾದ ಈಗ ಮಾತ್ರ ಯಾರಿಗೂ ಹೆಸರು ಸಹ ಗೊತ್ತಿಲ್ಲದ ಒಂದು ದೊಡ್ಡ ಸಂಸ್ಥೆ (ಬರಿಮಠವಲ್ಲ) ಯ ವಿಷಯವಾಗಿ ಬಿಜ್ಜಳನ ಕಾಲದ ಕೆಲವು ಶಿಲಾಲೇಖಗಳಲ್ಲಿ ಅಸ್ತವ್ಯಸ್ತವಾಗಿ ದೊರೆಯುವ ಸಂಗತಿಗಳನ್ನು ಕಲೆಹಾಕಿ ಆದಕ್ಕೊಂದು ರೂಪು ಕೊಡುವ ಯತ್ನ ಮಾಡಿದ್ದೇನೆ. ಆದರೂ ಒಂದು ವ್ಯವಸ್ಥಿತ ರೂಪು ಕೊಡಲು ಸಾಧ್ಯವಾಗಿದೆಯೆಂದು ನನಗನಿಸುವದಿಲ್ಲ. ಓದುಗರಲ್ಲಿ ಕುತೂಹಲವುಂಟಾಗಿ ಹೆಚ್ಚಿನ ಸಂಶೋಧನಕ್ಕಾಗಿ ಆಸಕ್ತಿಯುಂಟಾಗಬೇಕೆಂಬುದೇ ನನ್ನ ಉದ್ದೇಶ. ಅದು ಸಾಧ್ಯವಾಗುವದೇ ಈ ಬರಹದ ಸಾಫಲ್ಯ.

---

# ತ್ಯಾಗಾಂಗ ಭೋಗಾಂಗ ಯೋಗಾಂಗಳು.

(ವಿಜಾಪುರ ಶಿವಾನುಭವ ಕೂಟ)



## ತ್ಯಾಗಾಂಗ

"ತನುಗುಣವಳಿದಲ್ಲಿ ತ್ಯಾಗಾಂಗ; ಲಿಂಗದೊಡನೆ ಸಕಲಸುಖಗಳ ಭೋಗಿಸುವಲ್ಲಿ ಭೋಗಾಂಗ; ನಿಜದಲ್ಲಿ ಬೆರೆಯುಲು ಯೋಗಾಂಗ" ಎಂದು ಒಬ್ಬ ಶಿವಶರಣರು ಅಪ್ಪಣೆಕೊಡಿಸಿದ್ದಾರೆ. ತ್ಯಾಗಾಂಗವೆಂದರೆ ತನುಗುಣ ಗಳನ್ನಳಿಯುವದು. ತನುಗುಣಂಗಳೆಂದರಾವು? ಉಣ್ಣುವದು, ಉಡುವದು, ಉಪಭೋಗಿಸುವದು. ಹೊನ್ನು, ಹೆಣ್ಣು ಮಣ್ಣಿನಾಶೆಗಾಗಿ ಮನವೆಳಿಸುವದು. ತನ್ನ ಸ್ವಾರ್ಥಸುಖಕ್ಕಾಗಿ ಪರರ ಗೋಣು ಮುರಿಯುವ ಪಾಪದ ಕೆಲಸ ಮಾಡುವದು. ತನಗೆ ಇನ್ನೂ ಬೇಕು ಮತ್ತೂ ಬೇಕೆಂದು ತನ್ನ ಬಾಯಲ್ಲಿ ಮಣ್ಣುಹಾಕಿಕೊಂಡು ಹೊಲಮನೆ ಗಳಿಸಿ ಹಣ ಕೂಡಿಟ್ಟು ಹೆರವರ ಪಾಲು ಮಾಡಿ ಸತ್ತುಹೋಗುವದು. ಇವೆಲ್ಲ ತನುಗುಣಗಳನ್ನು ತ್ಯಾಗಮಾಡುವದೇ ತ್ಯಾಗಾಂಗವೆನಿಸುತ್ತದೆ.

ತ್ಯಾಗವೇ ಸುಖ ಭೋಗವೇ ದುಃಖ. ಬೇಕೆಂಬುವವನೇ ಭೋಗಿಯು. ಬೇಡೆಂಬುವವನೇ ತ್ಯಾಗಿಯು. ಭೋಗಿಯಾದ ಮನುಷ್ಯನು ಭೋಗ್ಯ ವಸ್ತುಗಳನ್ನು ಹೆಚ್ಚೆಚ್ಚಾಗಿ ಬಯಸುವನು. ತನ್ನ ಸ್ವಂತ ವಸ್ತುಗಳು ಸಾಲದೆ ಅನ್ಯರ ವಸ್ತುಗಳಿಗಾಗಿ ಹಂಬಲಿಸುವನು. ಪರಧನ, ಪರಸ್ತ್ರೀ, ಪರರ ಹೊಲಮನೆ ಮುಂತಾದವುಗಳಿಗಾಗಿ ದುರಾಶೆಯಿಂದ ಪಾಪದ ಕೆಲಸ ಮಾಡಲೆಳಿಸುವನು. ಮುಂದೆ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತಗಳು ಘಟಿಸಿದಾಗ ತನ್ನ ಒಂದೊಂದೇ ಪಾಪದ ಕೃತಿಯನ್ನು ಸ್ಮರಿಸಿಕೊಂಡು ಗೋಳಾಡುವನು. ಭೋಗಿಯು ತನ್ನ ಸುಖಕ್ಕಾಗಿ ಅಧಿಕಾರಬೇಕು, ಅಂದಣ ಬೇಕು, ಗೌರವ ಬೇಕೆಂದು ಹಂಬಲಿಸಿ ಬಹು ನಿಂದ್ಯಾಸ್ಪದ ಕೆಲಸವನ್ನೆಸಗಲಿಕ್ಕೂ ಹಿಂಜರಿಯುವದಿಲ್ಲ. ಆದರೆ ಪ್ರಸಂಗವಶಾತ್ ದೊರೆತ ದೊಡ್ಡಸ್ತನವು ಡಬ್ಬು ಬೀಳಲು ಅವನನ್ನು ಒಂದು ನಾಯಿಯು ಸಹ ಕೇಳುವದಿಲ್ಲ. ಭೋಗಿಯ ಮನೋರಥಗಳು ಮೊದಲು ಬೆಲ್ಲದಂತೆ ಸವಿಯಾಗಿ ತೋರಿ ಕೊನೆಯಲ್ಲಿ ವಿಷಕಾರಿಯಾಗಿ ಪರಿಣಾಮಿಸುವವು. ಇದು ನಿಜಸುಖವಲ್ಲ. ಭಗವದ್ಗೀತೆಯಲ್ಲಿ ಭೋಗಸುಖಕ್ಕೆ ರಾಜಸ ಸುಖವೆಂದು ಹೇಳಿದೆ. "ವಿಷ

ಯೇಂದ್ರಿಯ ಸಂಯೋಗಾದ್ಯತ್ತದಗ್ರೇಽ ವ್ಮತೋಪಮಂ। ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಂ ॥ ಅಂದರೆ ಮೊದಲು ಅಮೃತದಂತೆ ಮಧುರವಾಗಿ ಕೊನೆಗೆ ವಿಷಯವಾಗಿ ತೋರುವ ಸುಖವು ರಾಜಸಸುಖ ವೆನಿಸುತ್ತದೆ. ಆದುದರಿಂದ ಇಂಥ ಸುಖವು ಸರ್ವಥಾ ತ್ಯಾಜ್ಯವು.

ಆದರೆ ತ್ಯಾಗಿಯ ಮಾತು ಬೇರೆ. ಹೆರವರ ವಸ್ತುಗಳ ಬಗ್ಗೆ ಹಂಬ ಲಿಸುವದೊತ್ತಟ್ಟಿಗಿರಲಿ. ತನ್ನ ವಸ್ತುಗಳನ್ನು ಕೂಡ ಆತನು ತನಗಾಗಿ ಇಟ್ಟುಕೊಳ್ಳುವದಿಲ್ಲ. ತನ್ನ ತನು ಮನ ಧನ ಪ್ರಾಣಾಭಿಮಾನಗಳನ್ನೆಲ್ಲ ಸತ್ಕಾರ್ಯಕ್ಕಾಗಿಯೇ ವಿನಿಯೋಗಿಸುವನು. "ಪರೋಪಕಾರಾಯ ಸತಾಂ ವಿಭೂತಯಃ" ಎಂಬ ನೀತಿವಾಕ್ಯಕ್ಕನುಸರಿಸಿ ತ್ಯಾಗಿಯ ಸೊತ್ತೆಲ್ಲ ಪರೋ ಪಕಾರಕ್ಕಾಗಿಯೇ ಸಲ್ಲುವದು. ಚಂದನವು ಅರೆಯಿಸಿಕೊಂಡು ಸಣ್ಣಾಗು ವದೇನೋ ನಿಜ; ಊದಿನಕಡ್ಡಿಯು ಸುಟ್ಟುಕೊಂಡು ಸಾಯುವದೇನೂ ತಪ್ಪಿದ್ದಲ್ಲ. ಆದಾಗ್ಯೂ ಅವೆರಡು ಪರರಿಗೆ ಸುಗಂಧವನ್ನು ಬೀರುವದ ಕ್ಕಾಗಿಯೇ ತಮ್ಮ ದೇಹವನ್ನು ಸವಿಸುವದಿಲ್ಲವೇ? ಅದರಂತೆ ತ್ಯಾಗಿಯು ತನಗಾಗುವ ಅನೇಕ ದುಃಖಗಳನ್ನು ಸಹಿಸಿಕೊಂಡು, ತಾನು ತನ್ನ ಹೆಂಡರು ಮಕ್ಕಳೆಂಬ ಭಾವವನ್ನು ತೊರೆದು ಕೇವಲ ಪರಾರ್ಥದ ಸಲುವಾಗಿ ತನ್ನ ಅರ್ಥ ಪ್ರಾಣಾಭಿಮಾನಗಳನ್ನರ್ಪಿಸಲಿಕ್ಕೆ ಯಾವಾಗಲೂ ಸನ್ನದ್ಧನಾಗೇ ಇರುತ್ತಾನೆ. ದಧೀಚಿ ಋಷಿಯು ತನ್ನ ಬೆನ್ನೆಲುವನ್ನು ಇಂದ್ರ ನಿಗೆ ಕೊಟ್ಟು ಪ್ರಾಣಪರಿತ್ಯಾಗ ಮಾಡಲಿಲ್ಲವೇ? ಶಿಬಿಚಕ್ರವರ್ತಿಯು ಬೇಡ ನಿಗೆ ತನ್ನ ತೊಡೆಯ ಮಾಂಸವನ್ನಿತ್ತು ಕಪೋತದ ಜೀವ ಉಳಿಸಲಿಲ್ಲವೇ ? ಜೀಮೂತವಾಹನನು ಗರುಡನಿಗೆ ತನ್ನ ದೇಹದ ಮಾಂಸವನ್ನು ನೀಡಿ ಹಾವುಗಳ ಜೀವರಕ್ಷಣೆಮಾಡಲಿಲ್ಲವೇ? ಅವರು ಹಾಗೆ ಮಾಡಿದರೆಂದೇ ಆಚಂದ್ರಾರ್ಕ ಅವರ ಕೀರ್ತಿಯು ವಿರಾಜಿಸುತ್ತಿರುವದು. ಇದೇ ನಿಜ ವಾದ ಸುಖವು. ಇದಕ್ಕೆ ಭಗವದ್ಗೀತೆಯಲ್ಲಿ ಸಾತ್ವಿಕಸುಖವೆಂದು ಕರೆ ದಿದ್ದಾರೆ.

" ಯತ್ತದಗ್ರೇವಿಷಮಿವ ಪರಿಣಾಮೇಽ ಮೃತೋಪಮಂ।
ತತ್ಸುಖಂ ಸಾತ್ವಿಕಂ ಪ್ರೋಕ್ತಮಾತ್ಮಬುದ್ಧಿ ಪ್ರಸಾದಜಂ ॥

ನಿಜವಾದ ವೀರಶೈವರು ತ್ಯಾಗಿಗಳು. ಭೋಗಿಗಳಲ್ಲ. ಅವರು ತಮ್ಮ ತನುಮನಧನಗಳನ್ನೆಲ್ಲ ಗುರುಲಿಂಗಜಂಗಮಕ್ಕೆ ನಿರ್ವಂಚನೆಯಿಂದ ಸಮ ರ್ಪಿಸುವರು. ಜಗತ್ತಿನಲ್ಲಿ ಎಷ್ಟೋ ಜನರು ತಾವು ಉಂಡು ಹೆಚ್ಚಾಗಿ

ಉಳಿದುದನ್ನು ಎರಡನೆಯವರಿಗೆ ನೀಡಲಿಕ್ಕೆ ಹಿಂಜರಿಯುತ್ತಿರುತ್ತಾರೆ. ಇಂದಿನದು ನಾಳಿಗೆ ಬಂದೀತೆಂದೂ ಹೆಂಡರುಮಕ್ಕಳಿಗೆ ಉಪಯೋಗ ವಾದೀತೆಂದೂ ಕೂಡಿಹಾಕಲಿಕ್ಕೆ ಚಟಪಡಿಸುತ್ತಾರೆ. ಆದರೆ ನಮ್ಮ ಶಿವ ಶರಣರು ತಾವುಂಡು ಹೆಚ್ಚಾದುದನ್ನು ಅನ್ಯರಿಗೆ ಕೊಡುವದೊತ್ತಟ್ಟಿಗಿರಲಿ. ಮೊದಲು ಗುರುಲಿಂಗಜಂಗಮಕ್ಕೆ ನೀಡಿ ಮಿಕ್ಕ ಪ್ರಸಾದವನ್ನು ತಾವು ಸೇವಿಸುತ್ತಿದ್ದರು. ಇಂದಿನದು ನಾಳಿಗೆ ಬಂದೀತೆಂದು ಎಂದಿಗೂ ಕೂಡ ಹಾಕುತ್ತಿರಲಿಲ್ಲ. ಅಂತಹದು ತಂಗುಳವೆಂದೇ ಅವರು ಭಾವಿಸುತ್ತಿದ್ದರು. ಕೊಟ್ಟದ್ದು ವ್ಯರ್ಥ ಹೋಯಿತಲ್ಲ! ಎಂದು ಎಂದಿಗೂ ಅವರು ಹಳಹಳಿಬಡುತ್ತಿರಲಿಲ್ಲ. 'ಕೊಟ್ಟದ್ದು ತನಗೆ ಬೈಚಿಟ್ಟದ್ದು ಪರರಿಗೆ। ಕೊಟ್ಟು ನಾ ಕೆಟ್ಟೆನೆನಬೇಡ ಅದು ಮುಂದೆ। ಗಟ್ಟಿಹುದು ಬುತ್ತಿ ಸರ್ವಜ್ಞ॥ ಎಂಬೀ ಸರ್ವಜ್ಞನ ನುಡಿಯು ಅವರ ಆಚರಣೆಯಲ್ಲಿ ಬಂಧುರವಾಗಿ ಅಳವಟ್ಟಿದ್ದಿತು. ದಾಸೋಹಕ್ಕಾಗಿಯೇ ಅವರು ನಾನಾವಿಧವಾದ ಕಾಯಕಗಳನ್ನು ಮಾಡುತ್ತಿದ್ದರಲ್ಲದೆ ಧನವನ್ನು ಕೂಡಿಡುವದು ಪಾಪವನ್ನು ಮಡಲಲ್ಲಿ ಕಟ್ಟಿಕೊಂಡಂತೆಯೇ ಸರಿಯೆಂದು ತಿಳಿಯುತ್ತಿದ್ದರು. ಇದೇ ಅಲ್ಲವೆ ನಿಜವಾದ ತ್ಯಾಗಬುದ್ಧಿಯು? ಇವರೇ ಅಲ್ಲವೆ ನಿಜವಾದ ತ್ಯಾಗಾಂಗಿಗಳು?

## ಭೋಗಾಂಗ.

ಲಿಂಗಭೋಗೋಪಭೋಗಿಯಾಗಿರುವದೇ ಭೋಗಾಂಗವೆಂದು ಮೇಲೆ ಹೇಳಿದೆಯಷ್ಟೇ. ಪರಮಾತ್ಮನು ಕೊಟ್ಟ ವಸ್ತುವನ್ನು ಪರಮಾತ್ಮನಿಗರ್ಪಿಸದೆ ದುರಹಂಕಾರದಿಂದ ನಾನು ಗಳಿಸಿದ್ದೇನೆ. ನಾನು ಊಟ ಮಾಡುತ್ತೇನೆ. ಶಿವನ ಅಪ್ಪನದೇನು ಹೆದರಿಕೆ' ಎಂದು ಉಪಭೋಗಿಸುವ ವ್ಯಕ್ತಿಯು ಮಹಾ ಕೃತಘ್ನನು, ಪಾಪಿಯು. ಆತನು ವಸ್ತುವನು ಭೋಗಿಸುವವರ ಬದಲು ಪಾಪವನ್ನೇ ಭುಂಜಿಸುತ್ತಾನೆ. ಅಂತೆಯೇ ಸರ್ವಜ್ಞಮೂರ್ತಿಯು ಅಪ್ಪಣೆ ಕೊಡಿಸಿರುವದೇನಂದರೆ " ಲಿಂಗಕ್ಕೆ ತೋರಿಸದೆ ಅಂಗಕ್ಕೆ ಕೊಂಡರೆ। ತಿಂಗಳಲಿ ಸತ್ತ ಹಳೆ ನಾಯ ಮಾಂಸವನು ನುಂಗಿದಂತಕ್ಕು ಸರ್ವಜ್ಞ॥ ನಾಯಿಯೆಂದರೆ ಕೊಳಕ ಮಾಂಸವನ್ನು ಭುಂಜಿಸುವ ಕ್ಷುದ್ರ ಜೀವಿಯು. ಅಂಥ ಹಳೆನಾಯಿಯ ಮಾಂಸವನ್ನು ತಿನ್ನುವ ಮನುಷ್ಯನೆಂಥ ಕೊಳಕನಿರಬೇಕು? ಅರ್ಥಾತ್ ಅವನು ಬಹು ಪಾಪಿಷ್ಠನಿರಲೇಬೇಕು. ನಿತ್ಯ ಸಲಹುವ ತನ್ನ ಸ್ವಾಮಿಯನ್ನು ಬಿಟ್ಟು

ತನಗೆ ಒಂದು ತುಣುಕು ರೊಟ್ಟಿಯನ್ನು ಚಲ್ಲಿದವರನ್ನು ಹಿಂಬಾಲಿಸು ವದು ನಾಯಿಯ ಸ್ವಭಾವವಲ್ಲವೇ? ಅದರಂತೆ ತನಗೆ ಅನಂತ ಉಪ ಕಾರಗಳನ್ನು ಮಾಡಿದ ಪರವಸ್ತುವನ್ನು ಮರೆತು ಹೆರವರೆದುರಿಗೆ ಬಾಲ ಗುಂಡಾಡಿಸಿ ಹೊಟ್ಟೆ ಹೊರೆದುಕೊಳ್ಳುವ ಶ್ವಾನರೂಪೀ ನರನು ನಿರ್ಘೃ ಣನಲ್ಲವೇ?

ವೀರಶೈವರು ಲಿಂಗಪ್ರಸಾದಿಗಳು. ತಮ್ಮ ಶರಣವೃತ್ತಿಗಳಡಗಲೆಂದು ಭಕ್ತಿಪೂರ್ವಕವಾಗಿ ಪ್ರಸಾದವನ್ನು ಸೇವಿಸುವರು. ತುತ್ತಿಗೊಮ್ಮೆ ಶಿವಾ ಶರಣೆನ್ನುತ್ತ ಶಿವಾರ್ಪಣಬುದ್ಧಿಯಿಂದ ಊಟಮಾಡುವರು. ಆದರೆ ಬರೇ ಲಿಂಗಕ್ಕೆ ತೋರಿಸಿ ಊಟಮಾಡುವದೇ ಭೋಗಾಂಗವೆಂದು ತಿಳಿಯಕೂ ಡದು. ನಾವು ಯಾವದೇ ಕೆಲಸಮಾಡಿದರೂ ಲಿಂಗಮುಖವಾಗಿ ಮಾಡು ವದೇ ಭೋಗಾಂಗವು. ನಾನು ಮಾಡಿದೆ ನಾನು ಬಿಟ್ಟೆನೆಂಬ ಅಹಂ ಭಾವವನ್ನು ತೊರೆದು ದೇವರೇ ಮಾಡಿಸಿದನೆಂಬ ದೈನ್ಯಭಾವವನ್ನು ತಳೆ ಯುವದೇ ಭೋಗಾಂಗವು. "ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ" ಎಂಬೀ ಸ್ತೋತ್ರವು ಭೋಗಾಂಗದ ಲಕ್ಷಣ ವನ್ನೇ ಹೇಳುತ್ತದೆ. ಭಗವದ್ಗೀತೆಯಲ್ಲಿ "ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್। ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ"॥ ಅಂದರೆ ನೀನು ಮಾಡುವದು, ತಿನ್ನುವದು, ಯಜ್ಞ ಮಾಡುವದು, ಕೊಡುವದು, ತಪಸ್ಸುಮಾಡುವದು ಇವೆಲ್ಲವನ್ನು ಭಗವ ದರ್ಪಣಬುದ್ಧಿಯಿಂದ ಮಾಡು ಎಂಬುದಾಗಿಯೇ ಹೇಳಿದೆ.

ನಾನೇ ಮಾಡಿದೆನೆಂದು ಅಹಂಕಾರಬಡುವವರು ತಮಗೆ ಅಪಾಯ ಸಂಭವಿಸಲು ಗೋಳಾಡುವರು. ಶಿವನೇ ಸರ್ವಸ್ವವನ್ನು ಮಾಡಿಸಿದನೆಂಬು ವವರಿಗೆ ದುಃಖಕ್ಕೆ ಸ್ವಲ್ಪ ಮಾತ್ರವೂ ಎಡೆಯಿಲ್ಲ. ಆದುದರಿಂದ ಶಿವಾ ರ್ಪಣ ಬುದ್ಧಿಯಿಂದ ಕೆಲಸ ಮಾಡುವದು ಪರಮಸುಖಕ್ಕೆ ಸಾಧನ ವೆಂದು ಹೇಳಬಹುದು. ನಾನೆಂಬುವದೇ ಭವದ ಬೀಜ. ನೀನೆಂಬುದೇ ಸಾಯುಜ್ಯಪದ. ಮಾಡಿ ಮಾಡಿಹೆನೆಂದು ಒಡನಾಡಿದಲ್ಲಿ ಮಾಡಿ ದ್ದರ ಫಲವು ಹಾಳಾಯಿತ್ತು. ಅಂತೆಯೇ ಸರ್ವಜ್ಞ ಕವಿಯು ಹೇಳಿ ರುವದೇನಂದರೆ "ಆಡದೆ ಮಾಡುವನು ರೂಢಿಯೊಳಗುತ್ತಮನು। ಆಡಿ ಮಾಡುವನು ಮಧ್ಯಮನು ಅಧಮತಾ। ನಾಡಿಮಾಡದವಸರ್ವಜ್ಞ॥ ಆದರೆ ಆಡದೆ ಮಾಡುವವರನೇಕರು ದೊರೆದರು, ಅವರು ಮನದಲ್ಲಾದರೂ

ನಾ ಮಾಡಿದನೆಂಬ ಅಹಂಭಾವದಿಂದ ಆನಂದಬಡಬಹುದು. ಶಿವನೆ, ನೀನು ಮಾಡಿಸಿದೆಯೆಂದು ಹೇಳುವವರು ಬಹು ವಿರಳ. ಆದುದರಿಂದ ಅಂಥವರು ರೂಢಿಯೊಳಗುತ್ತಮರೆನಿಸಿಕೊಂಡರು. ಶಿವನ ಕಣ್ಣಲ್ಲಿ ಉತ್ತಮ ರೆನಿಸಿಕೊಳ್ಳಲಾರರು.

ಸ್ವಾಮಿರಾಮತೀರ್ಥರು ತಾವು ಮಾಡಿದ್ದೆಲ್ಲವನ್ನೂ ರಾಮನೇ ಮಾಡಿಸುತ್ತಿದ್ದಾನೆಂದು ಹೇಳುತ್ತಿದ್ದರು. ನಮ್ಮ ಶಿವಶರಣರೆಲ್ಲರು ಶಿವಾ ರ್ಪಣ ಬುದ್ಧಿಯಿಂದ ಪ್ರತಿಯೊಂದು ಕೆಲಸವನ್ನು ಮಾಡುತ್ತಿದ್ದರು. ಅವರು ಅನ್ಯರು ತಮ್ಮನ್ನು ನಿಂದಿಸುತ್ತಿದ್ದರೆ ಸಹಿಸಿಕೊಳ್ಳುವರೇ ವಿನಾ ಹೊಗಳಿದರೆಂದಿಗೂ ಸೈರಿಸುತ್ತಿರಲಿಲ್ಲ. ಇದಕ್ಕೆ ಬಸವಣ್ಣನವರ ದೃಷ್ಟಾಂ ತವೊಂದೇ ಸಾಕು. "ಎಮ್ಮವರೆನ್ನ ಹೊಗಳಿ ಹೊಗಳಿ ಹೊನ್ನಶೂಲದಲ್ಲಿ ಕ್ಕಿದರಯ್ಯಾ. ಅಹಂಕಾರ ಪೂರಾಯುಗಾಯುದಲ್ಲಿ ನಾನೆಂತು ಬದಕುವೆ? ನಾನೆಂತು ಬಾಳುವೆ? ಇದ ತಪ್ಪಿಸಿ ಎನ್ನನುಳುಹಿಕೊಳ್ಳಾ ಕೂಡಲಸಂಗ ಮದೇವಾ."

ನಾವು ಈ ಜಗತ್ತಿನಲ್ಲಿ ಒಂದಿಲ್ಲೊಂದು ಅಭಿಮಾನದ ದಶೆಯಿಂದ ಹೊಡೆದಾಡುತ್ತಿದ್ದೇವೆ. ಕೆಲವರಿಗೆ ದೇಹಾಭಿಮಾನ, ಕೆಲವರಿಗೆ ಅರ್ಥ ಪ್ರಾಣಾಭಿಮಾನ, ಕೆಲವರಿಗೆ ದೇಶಕೋಶಾಭಿಮಾನ, ಕೆಲವರಿಗೆ ಅಷ್ಟ ಮದಂಗಳಭಿಮಾನ ಈ ಮೇರೆಗೆ, ನಾನಾ ತರಹದಭಿಮಾನಗಳು ತುಂಬಿ ತುಳುಕುವವು. ಈ ಅಭಿಮಾನವೇ ಅಹಂಕಾರದ ಬೀಜವು. ಆ ಅಹಂಕಾ ರವೇ ದುಃಖಕ್ಕೆ ಮೂಲವು. ನಿರಹಂಕಾರಿಗಳು ನಿರಭಿಮಾನಿಗಳು ಆದ ವರು ಸರ್ವವೂ ಶಿವಾರ್ಪಣವೆಂಬ ಭಾವದಿಂದ ಸುಖಿಗಳಾಗಿ ಬಾಳುವರು. ಅಂಥವರೇ ಲಿಂಗಭೋಗೋಪ ಭೋಗಿಗಳು.

## ಯೋಗಾಂಗ

ಯೋಗಾಂಗವೆಂದರೆ ಯಾವಾಗಲೂ ಲಿಂಗದಲ್ಲಿಯೇ ತಲ್ಲೀನ ಮನಸ್ಕ ನಾಗಿರುವದು. ಶಿವಶರಣರಿಗೆ ಲಿಂಗದಲ್ಲಿಯೇ ನೋಟ. ಲಿಂಗದೊಡ ನೆಯೇ ಆಟ. ಲಿಂಗದಲ್ಲಿಯೇ ಕೂಟ. ಲಿಂಗದ ಹೊರತು ಅವರಿಗೆ ಬೇರೊಂದು ಕಾಣಿಸನು. ಯಾವದಾದರೊಂದು ಕೆಲಸವನ್ನು ಲಿಂಗಾರ್ಪಣ ಬುದ್ಧಿಯಿಂದ ಮಾಡಬೇಕೆಂದು ಹೇಳಿದಾಗ ನಾವು ಅಂಥ ಬುದ್ಧಿಯು ನ್ನುಂಟುಮಾಡಿಕೊಳ್ಳಬೇಕೆಂಬರ್ಥವಾಗುತ್ತದೆ. ಆದರೆ ಲಿಂಗಾಂಗ

ಸಮರಸಜ್ಞಾನಿಯಾದ ಶಿವಯೋಗಿಯ ಕಾರ್ಯಗಳೆಲ್ಲವೂ ಲಿಂಗಸ್ವರೂಪವಾಗಿಯೇ ಇರುತ್ತವೆ. ಯೋಗಿಗಳೇನೂ ಲಿಂಗಾರ್ಪಣ ಬುದ್ಧಿಯನ್ನು ಕಲ್ಪಿಸಿಕೊಳ್ಳುವ ಕಾರಣವಿಲ್ಲ. ಯೋಗಿಗಳು ಮುಟ್ಟಿದ್ದೇ ಪರುಷ, ನುಡಿದದ್ದೇ ಪ್ರಣವ. ನಡೆದದ್ದೇ ಅವಿಮುಕ್ತಿ ಕ್ಷೇತ್ರ. ಇರುವೆ ಮೊದಲು ಆನೆಕಡೆಯಾಗಿ ೮೪ ಲಕ್ಷ ಜೀವರಾಶಿಗಳನ್ನೆಲ್ಲ ಅವರು ಲಿಂಗಸ್ವರೂಪವೆಂದೇ ಕಾಂಬುವರು. ಅವರು ಮಾಡುವ ಪ್ರತಿನಿತ್ಯದ ಪ್ರತಿಯೊಂದು ಕಾರ್ಯವು ಲಿಂಗಮಯವಾಗಿರುತ್ತದೆ. "ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಶ್ರೇಷ್ಠರು" ಎಂದು ಬಸವಣ್ಣನವರು ಹೇಳಿದ್ದಾರೆ.

ಯೋಗವೆಂದರೆ ಸುಖದುಃಖಗಳಲ್ಲಿ ಸಮಬುದ್ಧಿಯುಳ್ಳವನಾಗಿರುವದು. ಭಗವದ್ಗೀತೆಯಲ್ಲಿ ಹೇಳಿರುವದೇನಂದರೆ "ಯೋಗಸ್ಥಃ ಕುರುಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ। ಸಿದ್ಧ್ಯಸಿದ್ಧ್ಯೋಃ ಸಮೋಭೂತ್ವಾ ಸಮತ್ವಂ ಯೋಗ ಉಚ್ಯತೇ॥ ಅಂದರೆ ಬುದ್ಧಿಯ ಸಮತ್ವಕ್ಕೆ ಯೋಗವೆಂದೆನ್ನುವರು. ಆದ್ದರಿಂದ ಆಸಕ್ತಿಯನ್ನು ಬಿಟ್ಟು ಯೋಗಸ್ಥನಾಗಿ ಸಿದ್ಧಿಅಸಿದ್ಧಿಗಳನ್ನು ಸಮವೆಂದೆನಿಸಿ ಕರ್ಮಗಳನ್ನಾಚರಿಸು ಎಂಬರ್ಥ.

ಹಿಂದೆ ಹೇಳಿದ ತ್ಯಾಗಾಂಗ ಭೋಗಾಂಗಗಳೆಲ್ಲ ಈ ಯೋಗಾಂಗದಲ್ಲಿ ಲಯವಾಗಿ ಹೋಗುತ್ತವೆ. ತ್ಯಾಗಾಂಗದಲ್ಲಿ ದಾನಪರೋಪಕಾರಾದಿ ಗುಣಗಳು ಸಮಾವೇಶವಾಗುತ್ತವೆ. ದಾನಪರೋಪಕಾರಗಳಿಗಾಗಿ ತನುಮನಧನ ಪ್ರಾಣಾದಿಗಳನ್ನರ್ಪಿಸುವ ಪುಣ್ಯಾತ್ಮನೇ ಮುಂದೆ ಶಿವಾರ್ಪಣ ಬುದ್ಧಿಯಿಂದ ಪ್ರತಿಯೊಂದು ಕೆಲಸವನ್ನು ಮಾಡುವನು. ಶಿವಾರ್ಪಣ ಬುದ್ಧಿಯಿಂದ ಕೆಲಸ ಮಾಡುವವನಿಗೆ ಸುಖದುಃಖಗಳೆಲ್ಲವೂ ಸಮನಾಗಿ ತೋರುವವು. ಅಂಗಗುಣಗಳನ್ನಳಿದು ಲಿಂಗಗುಣಗಳನ್ನು ಪಡೆದು ಲಿಂಗಾನಂದ ಸಮರಸದೊಳೋಲಾಡುವದೇ ತ್ಯಾಗಾಂಗ ಭೋಗಾಂಗ ಯೋಗಾಂಗಗಳ ರಹಸ್ಯವು.

ಷಟ್‌ಸ್ಥಲಗಳು ಈ ಮೂರು ಅಂಗಗಳಲ್ಲಿ ಬೆರೆತುಹೋಗುತ್ತವೆ. ಉದಾಹರಣಾರ್ಥ ಭಕ್ತ ಮಹೇಶಸ್ಥಲಗಳು ತ್ಯಾಗಾಂಗದಲ್ಲಿ ಬಂದು ಹೋಗುತ್ತವೆ. ಯಾಕಂದರೆ ಕಾಯಕ ದಾಸೋಹಗಳು ಭಕ್ತಸ್ಥಲದ ಲಕ್ಷಣಗಳು. ಗುರುವಿಗೆ ಸರ್ವಸ್ವವನ್ನರ್ಪಿಸಿ ಲೋಕಸೇವೆ ಮಾಡುವದು ಮಹೇಶಸ್ಥಲದ ಲಕ್ಷಣವು. ಇವೆರಡರಲ್ಲಿ ತ್ಯಾಗಬುದ್ಧಿಗೆ ಪ್ರಾಧಾನ್ಯವಿ

ರುವದು. ಪ್ರಸಾದಿ ಪ್ರಾಣಲಿಂಗಿಸ್ಥಲಗಳ ಭೋಗಾಂಗದಲ್ಲಿ ಬರುತ್ತವೆ. ಯಾಕೆಂದರೆ ಪ್ರಸಾದಿಯು ಲಿಂಗಾರ್ಪಣ ಬುದ್ಧಿಯಿಂದಲೇ ಪ್ರಸಾದವನ್ನು ಸೇವಿಸಿ ಆನಂದಿಸುವನು. ಪ್ರಾಣಲಿಂಗಿಯು ಜಗತ್ತಿನ ಪ್ರಾಣಿಗಳನ್ನೆಲ್ಲ ಲಿಂಗಸ್ವರೂಪವಾಗಿ ಕಾಣುವನು. ಯೋಗಾಂಗದಲ್ಲಿ ಶರಣ ಐಕ್ಯಸ್ಥಲಗಳು ಬಂದುಹೋಗುವವು. ಯಾಕಂದರೆ ಶರಣನು ಸುಖದುಃಖಂಗಳೆಂಬ ದ್ವಂದ್ವ ಸ್ಥಿತಿಯನ್ನು ಮೀರಿದಂಥವನು. ಐಕ್ಯನು ಲಿಂಗದಲ್ಲಿ ತನ್ಮಯನಾದವನು. ಸರ್ವಸ್ಥಲಗಳು ಐಕ್ಯಸ್ಥಲದಲ್ಲಿ ಐಕ್ಯವಾಗುವಂತೆ ತ್ಯಾಗಾಂಗ ಭೋಗಾಂಗಗಳಲ್ಲಿಯೇ ಅಡಗಿಹೋಗುವವು.

---

## ವೀರಶೈವರಲ್ಲಿ ಮೂರ್ತಿಪೂಜೆ.

ಶಿವಾನುಭವಕೂಟ ವಿಜಾಪುರ.

---

ವೀರಶೈವರಲ್ಲಿ ಮೂರ್ತಿಪೂಜೆ ಇದೆಯೇ? ಇದ್ದರೆ ಎಷ್ಟರಮಟ್ಟಿಗೆ ಇದೆ? ಎಂಬೀ ಪ್ರಶ್ನೆಯನ್ನು ಕುರಿತು ವಿವೇಚಿಸೋಣ. ವೀರಶೈವರು ಇಷ್ಟಲಿಂಗವನ್ನು ಪೂಜಿಸುವದರಿಂದ ಅವರು ಮೂರ್ತಿಪೂಜಕರೆಂದು ಯಾರಾದರೂ ಹೇಳಬಹುದು. ಆದರೆ ನಮ್ಮ ಶಿವಶರಣರು ಮೂರ್ತಿಪೂಜೆಯನ್ನು ಜರಿದು ನುಡಿದುದನ್ನು ನೋಡಿದರೆ ವೀರಶೈವರೆಂದಿಗೂ ಮೂರ್ತಿಪೂಜಕರಲ್ಲವೆಂದು ಸಹಜವಾಗಿ ಹೊಳೆಯುವದು. ಅಂದಮೇಲೆ ಇವೆರಡು ಪರಸ್ಪರ ವಿರುದ್ಧ ವಿಚಾರಗಳನ್ನು ಮೇಳಗೂಡಿಸುವ ಬಗೆ ಎಂತು? ಇಷ್ಟಲಿಂಗವೆಂದರೆ ಮೂರ್ತಿಯೇ ಅಲ್ಲವೇ ಹೇಗೆ? ಮೂರ್ತಿಪೂಜೆ ಎಂದರೆ ಇಷ್ಟಲಿಂಗ ಪೂಜೆಯನ್ನು ಬಿಟ್ಟು ಇತರ ಮೂರ್ತಿಪೂಜೆ ಎಂಬರ್ಥವೇ ಹೇಗೆ ಎಂದು ಯಾರಾದರೂ ಪ್ರಶ್ನೆಮಾಡಬಹುದು.

ನಿಜವಾಗಿ ವಿಚಾರಿಸಿದರೆ ಇಷ್ಟಲಿಂಗವೇನೋ ಮೂರ್ತಿಯೇ ಅಹುದು. ನಮ್ಮ ಶಿವಶರಣರಾದರೋ ಇಷ್ಟಲಿಂಗವನ್ನು ಧರಿಸಿಯೇ ಇದ್ದರು. ಹೀಗಿದ್ದು ಅವರು ಮೂರ್ತಿಪೂಜೆಯನ್ನು ನಿರಾಕರಿಸಿದುದೇಕೆ? ಇದಕ್ಕೆ ಉತ್ತರವಿಷ್ಟೇ. ಸರ್ವಸಾಮಾನ್ಯರಾದ ಜನರಲ್ಲಿ ಸದಾಚಾರಗಳು ನೆಲೆಗೊಳ್ಳಲೆಂದು ನಮ್ಮ ಶಿವಶರಣರು ದೇಹದಮೇಲೆ ಲಿಂಗವೆಂಬ ದೇವರ ಕಲ್ಪನೆಯನ್ನುಂಟುಮಾಡಿ ಆ ಮೂಲಕ ಜನರಲ್ಲಿ ಆಚಾರವನ್ನು ಪ್ರಚಾರಗೊಳಿಸಹತ್ತಿದರು. ಮತ್ತು ಆ ಲಿಂಗಮುಖವಾಗಿ ಸಾಮಾನ್ಯರಲ್ಲಿ ಭಕ್ತಿ

ಭಾವನೆಯನ್ನು ಪ್ರದೀಪ್ತಿಗೊಳಿಸಿದರು. ಭಕ್ತಿ ಇಲ್ಲದೆ ಮಾಡುವ ಡಂಭಾ ಚಾರಿಗಳನ್ನೂ ಅವರು ದೂಷಿಸಿರುವರು.

ಬಾಲಕರೂ ಸಾಮಾನ್ಯರೂ ತತ್ವಜ್ಞಾನ ವಿಷಯದಲ್ಲಿ ತೀರ ಪ್ರಾಕೃತಸ್ಥಿತಿಯಲ್ಲಿರುತ್ತಾರೆ. ಅವರಿಗೆ ನಿರಾಕಾರವಾದ ಪರಬ್ರಹ್ಮದ ವಿಷಯದಲ್ಲಿ ವಿಚಾರಗಳ ಗಂಧವು ತಿಲಮಾತ್ರವಾದರೂ ಹತ್ತುವದಿಲ್ಲ. ಆವರು ಸಾಕಾರವುಳ್ಳ ವಸ್ತುಗಳನ್ನು ಕಂಡರೆ ಆನಂದಪಡುವರು. ಹುಡುಗರು ಆಟಿಗೆ, ಚಿತ್ರ ಗೊಂಬೆಗಳನ್ನು ಕಂಡು ಹರ್ಷಪಡುವಂತೆ ಸಾಮಾನ್ಯರು ವಿವಿಧವಾದ ದೇವರ ಮೂರ್ತಿಗಳನ್ನು ಕಂಡು ಹಿಗ್ಗುವರು. ಅವರ ನೈಸರ್ಗಿಕ ಗುಣಕ್ಕನುಸರಿಸಿಯೇ ಯಾವದಾದರೊಂದು ಮೂರ್ತಿಯನ್ನು ದೇವರೆಂದು ಅವರಿಗೆ ಹಾದಿ ತೋರಿಸಿಕೊಟ್ಟು ಅವರಲ್ಲಿ ಸ್ವಚ್ಛತೆ, ಪವಿತ್ರತೆ, ಭಕ್ತಿ ಭಾವನೆಗಳನ್ನು ಹುಟ್ಟಿಸಿದರು.

ಮೂರ್ತಿ ಪೂಜೆಯಿಂದ ಜನರಲ್ಲಿ ಪವಿತ್ರತೆ, ಪರಿಶುದ್ಧತೆ ನೀತಿನಡಾವಳಿಗಳನ್ನುಂಟುಮಾಡುವ ಸಾಂಪ್ರದಾಯವು ಪೂರ್ವಕಾಲದಿಂದಲೂ ನಮ್ಮ ದೇಶದಲ್ಲುಂಟು. ಜನರಲ್ಲಿ ದೃಢವಾಗಿ ಬೇರೂರಿದ ಮೂರ್ತಿಪೂಜಾ ಕಲ್ಪನೆಯನ್ನು ಸಂಪೂರ್ಣ ಕಿತ್ತೊಗೆಯಲಿಕ್ಕೆ ಶಕ್ಯವಲ್ಲ. ಆದ್ದರಿಂದ ಶಿವಶರಣರು ಈ ಕಲ್ಪನೆಯ ದಿಶೆಯನ್ನು ಮಾತ್ರ ಬೇರೆ ಕಡೆಗೆ ಹೊರಳಿಸಿದರು. ಮೂರ್ತಿ ಮುಂತಾದ ನಾನಾ ದೈವಂಗಳ ಕಡೆಗೆ ಹರಿದು ಹಂಚಿಹೋಗಿ ಶಿಥಿಲವಾಗುತ್ತಲಿರುವ ಸಾಮಾನ್ಯರ ಚಿತ್ತವನ್ನು ಒತ್ತಟ್ಟಿಗೆ ಏಕಾಗ್ರಗೊಳಿಸಿ ಸಬಲವನ್ನಾಗಿ ಮಾಡಬೇಕೆಂಬ ಸದುದ್ದೇಶದಿಂದ ಇಷ್ಟಲಿಂಗದ ಹೊರತು ಅನ್ಯದೈವಂಗಳಿಗೆರಗಬಾರದೆಂಬ ಬಲವಾದ ನಿಯಮವನ್ನು ಹಾಕಿಬಿಟ್ಟರು. ಇಷ್ಟಲಿಂಗದಲ್ಲಿ ಒಮ್ಮೆ ಏಕಾಗ್ರವಾದ ಮನಸ್ಸು ಪ್ರಸಂಗ ವಶಾತ್ ಸ್ಥಾವರಾದಿ ಅನೇಕ ಅನ್ಯಮೂರ್ತಿಗಳ ಕಡೆಗೆ ತಿರುಗಿ ಶಿಥಿಲವಾದೀತೆಂದು ಅವರು ಅನ್ಯಮೂರ್ತಿಪೂಜೆಯನ್ನು ನಿರಾಕರಿಸಿದರು.

ಸ್ಥಾವರಾದಿ ನಾನಾ ದೈವಂಗಳನ್ನು ಶಿವಶರಣರು ನಿರಾಕರಿಸಿದುದಕ್ಕೆ ಇನ್ನಿತರ ಕಾರಣಗಳೂ ಉಂಟು. ಸ್ಥಾವರಾದಿ ದೈವಂಗಳಿಗೆ ಅಜ್ಞಾನಿಗಳಾದ ಜನರು ಮೂಢನಂಬಿಗೆಯಿಂದ ನಡೆದುಕೊಳ್ಳಲಾರಂಭಿಸಿ ದೇವರ ಹೆಸರಿನಿಂದ ಅನೇಕ ಅನಾಚಾರ ಅತ್ಯಾಚಾರಗಳನ್ನು ಮಾಡಹತ್ತಿದ್ದರು. ದೇವರಿಗೆ ದೇವದಾಸಿಯರನ್ನು ಬಿಟ್ಟು ನರ್ತನಮಾಡಹಚ್ಚಿದ್ದರು. ದೇವರಿಗೆ ಕುರಿ ಕೋಣ ಕೋಳಿಗಳನ್ನು ಬಲಿಕೊಡುತ್ತಿದ್ದರು. ದೇವರ ಹೆಸರಿ

ನಿಂದ ಜಾತ್ರೆಮಹೋತ್ಸವಾದಿಗಳನ್ನು ಮಾಡಿ ಪೂಜಾರಿಗಳೂ ಆಚಾರಿಗಳೂ ಅಜ್ಞಜನರಿಂದ ಯಥೇಚ್ಛವಾಗಿ ದುಡ್ಡು ಸುಲಿಯುತ್ತಿದ್ದರು. ಆ ಯಾತ್ರೆಗಳಲ್ಲಿ ಗಂಡಸರೂ ಹೆಂಗಸರೂ ಕೂಡಿ ಅನೇಕ ದುರಾಚಾರಗಳಿಗಿಂಬುಗೊಡುತ್ತಿದ್ದರು. ದೇವಾಲಯಗಳಿದ್ದಲ್ಲಿ ಆಟ, ತಮಾಷೆ, ವಿನೋದಗಳುಂಟಾಗಿ ಜನರಲ್ಲಿ ಅಪವಿತ್ರಭಾವನೆಗಳು ಹೆಚ್ಚಾಗಿದ್ದವು. ಎಷ್ಟೋ ಜನ ಯಾತ್ರಿಕರನ್ನು ಕಳ್ಳಕಾಕರು ದಾರಿಯಲ್ಲಿ ಸುಲಿದು ಕೊಂದುಹಾಕುತ್ತಿದರು. ದೂರದೂರಿನ ಜನರು ಆಸತ್ತು ಬೇಸತ್ತು ಬಳಲಿ ಬೆಂಡಾಗಿ ದಾರೀನಡೆದು ಯಾತ್ರೆಗೆ ಹೇರಳವಾದ ಹಣವನ್ನು ವೆಚ್ಚಮಾಡುತ್ತಿದ್ದರು. ತೀರ್ಥ ಯಾತ್ರೆಗಳನ್ನು ಮಾಡಿದವರಿಗೆ ಮಹಾಪುಣ್ಯ ಬರುತ್ತದೆಂದು ಸುಳ್ಳುಸೂತ್ರವನ್ನು ಜನರಲ್ಲಿ ಹರಡಿ ದಕ್ಷಿಣಾಪೇಕ್ಷೆಗಳಾದ ಆಚಾರ್ಯರು ಜನರಿಂದ ದುಡ್ಡುಸುಲಿಯುತ್ತಿದ್ದರು. ಒಮ್ಮೊಮ್ಮೆ ಜಾತ್ರೆಗೆ ಹೋದವರು ಅತ್ತೇ ಹೋಗುತ್ತಿದ್ದರು. ಇತ್ತ ಅವರ ಮನೆತನದ ಗೋಳನ್ನು ಶಿವನೇಬಲ್ಲ. ಇಂಥ ಅನೇಕ ಮಹದನರ್ಥಗಳು ಸಂಭವಿಸುತ್ತವೆಂದು ತಿಳಿದೇ ನಮ್ಮ ಶಿವಶರಣರು ಯಾತ್ರಿಕರನ್ನೂ, ಸ್ಥಾವರಾದಿ ದೈವಂಗಳನ್ನೂ, ತೀರ್ಥಯಾತ್ರೆಗಳನ್ನೂ ಯಥೇಚ್ಛವಾಗಿ ಖಂಡಿಸಿರುವರು.

ಆದರೆ ಇಷ್ಟಲಿಂಗಪೂಜೆಯು ಮೂರ್ತಿಪೂಜೆಯಾದರೂ ಇವೆಲ್ಲ ಅನರ್ಥಗಳಿಂದ ಅದು ದೂರವಾಗಿರುವದೆಂದೇ ಅದನ್ನು ಪ್ರಚಾರದಲ್ಲಿ ತಂದರು. ಆದರೆ ಮೂರ್ತಿಪೂಜೆಯೇ ಜನರ ಸಹಜ ಸ್ವಭಾವವಾಗಿದ್ದುದರಿಂದ ಅದನ್ನು ಕಿತ್ತೊಗೆಯಲು ದುಸ್ಸಾಧ್ಯವಾದ ಕಾರಣ ಹಾಗೆ ಮಾಡಬೇಕಾಯಿತು. ಈ ಇಷ್ಟಲಿಂಗಪೂಜೆಯಿಂದ ಸ್ಥಾವರಾದಿ ದೇಗುಲದ ದೈವಂಗಳಲ್ಲಿರುವ ಭಕ್ತಿ ಭಾವನೆಯು ಜನರಲ್ಲಿ ಬಹುಮಟ್ಟಿಗೆ ಕಡಿಮೆಯಾಯಿತು. ಎಷ್ಟೋ ಜನರು ಲಿಂಗಧಾರಿಗಳಾಗಿ ಆ ಮೂಲಕ ದೇಹಶುದ್ಧಿಯನ್ನು ಮಾಡಿಕೊಳ್ಳಲಾರಂಭಿಸಿದರು. ಆದರೂ ರೂಢಾಚಾರ ಪ್ರಿಯರಾದ ಹಠವಾದಿಗಳು ಕೊರಳಲ್ಲಿ ಲಿಂಗನ್ನು ಕಟ್ಟಿಕೊಂಡಿದ್ದರೂ ಸಾಂಪ್ರದಾಯವನ್ನು ಬಿಡಬಾರದೆಂದು ಗುಡಿ ಗುಂಡಾರ ಕಟ್ಟಿಸೋಣ, ಮೂರ್ತಿಸ್ಥಾಪನೆ, ರುದ್ರಾಭಿಷೇಕ, ತೇರುಕಟ್ಟಿಸೋಣ ಮುಂತಾದ ಕೆಲಸಗಳನ್ನು ಸಾಗಿಸ ಹತ್ತಿದರು ಆದರೆ ಗುಡಿಗುಂಡಾರಗಳನ್ನು ಕಟ್ಟಿಸಬಾರದೆಂತಲೂ, ಸ್ಥಾವರಲಿಂಗಗಳಿಗೆ ಪೂಜೆ ಪುನಸ್ಕಾರಗಳನ್ನು ಮಾಡಬಾರದೆಂತಲೂ ಶಿವಶರಣರು ಯಾವಾಗಲೂ ಉಪದೇಶಿಸುತ್ತಲೇ ಬಂದಿರುತ್ತಾರೆ.

ಶ್ರೀ ಪ್ರಭುದೇವರು ಅಪ್ಪಣೆ ಕೊಡಿಸಿದ್ದೇನಂದರೆ " ಕಲ್ಲದೇವರ ಮಾಡಿ, ಕಲ್ಲಮನೆಯ ಮಾಡಿ ಆ ಕಲ್ಲು ಕಲ್ಲಮೇಲೆ ಕೆಡೆದರೆ, ದೇವರೆತ್ತ ಹೋದರೋ? ಲಿಂಗಪ್ರತಿಷ್ಠೆಯ ಮಾಡುವವರಿಗೆ ನಾಯಕ ನರಕ ತಪ್ಪದು ಗುಹೇಶ್ವರಾ" ಇದಲ್ಲದೆ " ದೇಹವೇ ದೇಗುಲವಾಗಿರಲು, ಬೇರೆ ಮತ್ತೆ ದೇಗುಲವೇಕಯ್ಯಾ? ಹೇಳಲಿಲ್ಲ ಕೇಳಲಿಲ್ಲ ಗುಹೇಶ್ವರಾ ನೀನು ಕಲ್ಲಾದರೆ ನಾನೇನಪ್ಪೆನಯ್ಯಾ?" ಈ ವಚನಗಳು ಗುಡಿಗಳಿಗೂ ಸ್ಥಾವರಲಿಂಗಗಳಿಗೂ ಎಳ್ಳಷ್ಟು ಸಹ ಮಹತ್ವವನ್ನು ಕೊಟ್ಟಿಲ್ಲವೆಂಬನು ಸಹಜವು. ಲಿಂಗಾಂಗಿಗಳಾಗಿದ್ದು ಬೇರೆ ಲಿಂಗಕ್ಕೆ ಪ್ರಣಾಮ ಮಾಡುವ ಧರ್ಮಲಂಡರ ಮೂಢ ನಂಬಿಗೆಯನ್ನು ಪೂರಾ ಕಿತ್ತೊಗೆಯಬೇಕೆಂದು ಅಂಬಿಗರ ಚೌಡಯ್ಯನವರಂಥ ಪ್ರಚಂಡ ವಚನಕಾರರು ಸಾರಿಹೇಳಿದ್ದೇನಂದರೆ " ಕಟ್ಟಿದಾ ಲಿಂಗವ ಬಿಟ್ಟು ಬೆಟ್ಟದಾ ಲಿಂಗಕ್ಕೆ ಹೋಗಿ ಹೊಟ್ಟೆಯಡಿಯಾಗಿ ಬೀಳುವ ಲೊಟ್ಟೆಮೂಳರ ಕಂಡರೆ ಮೆಟ್ಟಿದಾ ಎಡಪಾದರಕ್ಷೆಯ ತೆಗೆದುಕೊಂಡು ಲಟಲಟನೆ ಹೊಡೆ ಎಂದಾತ ನಮ್ಮ ವೀರಾಧಿವೀರ ದಿಟ್ಟಧೀರ ಅಂಬಿಗರ ಚೌಡಯ್ಯ ನಿಜಶರಣನು. "

ಇದೇ ಪ್ರಕಾರ ಮೂರ್ತಿಪೂಜೆಯ ವಿರುದ್ಧವಾಗಿ ೧೨ ನೆಯ ಶತಮಾನದಲ್ಲಿ ಶಿವಶರಣರು ಕೈ ತೊಳೆದುಕೊಂಡು ಬೆನ್ನುಹತ್ತಿ ದೊಡ್ಡದೊಂದು ಚಳವಳಿಯನ್ನೆಬ್ಬಿಸಿದ್ದುದರಿಂದ ಅದು ಬಹುಮಟ್ಟಿಗೆ ಕಡಿಮೆಯಾಯಿತು. ಆದರೂ ರೂಢಾಚಾರವು ಕಾಲಾಂತರದಿಂದ ಒರತೆಯ ನೀರಿನಂತೆ ಪುನಃ ತಲೆದೋರುತ್ತಿತ್ತು. ಈಗಲೂ ಸಹ ಮೂಢನಂಬುಗೆಯ ಜನರು ಗುಡಿಗುಂಡಾರ ಯಾತ್ರೆಮಹೋತ್ಸವಗಳಿಗಾಗಿ ದುಡ್ಡು ಸೂರೆ ಮಾಡುವದೂ ಮೂರ್ತಿಸ್ಥಾಪನೆ ದೇವಾಲಯಸ್ಥಾಪನೆ ರುದ್ರಾಭಿಷೇಕಗಳಿಗಾಗಿ ವ್ಯರ್ಥಹಣವೆಚ್ಚಮಾಡುವದೂ ಕಂಡು ಬಂದೇ ಬರುತ್ತದೆ.

ಒಟ್ಟಿನ ಮೇಲೆ ನಮಗೆ ತಿಳಿಯುವದೇನಂದರೆ, ವೀರಶೈವರಲ್ಲಿ ಮೂರ್ತಿಪೂಜೆ ಇದ್ದರೆ ಇಷ್ಟಲಿಂಗದ ಹೊರತು ಅದು ಅನ್ಯಥಾ ಇಲ್ಲ. ಸ್ಥಾವರಾದಿ ಮೂರ್ತಿಗಳಂತೂ ಅವರಿಗೆ ದೂರೇ ದೂರ. ಸ್ಥಾವರಲಿಂಗ ಸ್ಥಾಪನೆ ಪೂಜೆಮಾಡುವವರಿಗೆ ನಾಯಕ ನರಕ ತಪ್ಪದೆಂದು ಶಿವಶರಣರೇ ಸಾರಿದ್ದಾರೆ. ಇಷ್ಟಲಿಂಗಪೂಜೆಗಾದರೂ ನಮ್ಮ ಶಿವಶರಣರು ತಾತ್ವಿಕದೃಷ್ಟಿಯಿಂದ ಅಷ್ಟು ಮಹತ್ವ ಕೊಟ್ಟಿಲ್ಲ. ಇಷ್ಟಲಿಂಗವು ಸಾಂಪ್ರದಾಯದೊ

ಳಗಿನ ಒಂದು ವ್ಯತ್ಯಾಸವಲ್ಲದೆ ಸಾಂಪ್ರದಾಯವನ್ನು ತೀರ ನಿರ್ಮೂಲಗೊಳಿಸಿದ್ದರ ಗುರುತಿಲ್ಲ. ಸಾಕಾರವನ್ನು ನಿರ್ಮೂಲಗೊಳಿಸುವದು ಧಾರ್ಮಿಕ ದೃಷ್ಟಿಯಿಂದಲೂ ಸಾಧ್ಯವಿಲ್ಲ. ಅಂತೆಯೇ ಶಿವಶರಣರು ಸಾಕಾರವಿಡಿದೇ ನಿರಾಕಾರದ ಕಡೆಗೆ ಜನರ ಲಕ್ಷವನ್ನು ತಿರುಗಿಸಹತ್ತಿದರು.

ಸಾಕಾರೋಪಾಸನೆಯು ವೀರಶೈವಧರ್ಮದ ಮೊದಲನೆಯ ಮೆಟ್ಟಿಲು. ಅದು ಕ್ರಿಯಾಭಕ್ತಿಗಳ ನೆಲಗಟ್ಟು. ಅದರಿಂದ ಜನರಲ್ಲಿ ದೇಹಾರೋಗ್ಯ, ಸ್ವಚ್ಛತೆ, ನಿರ್ಮಲ ಮನಸ್ಸುಗಳುಂಟಾಗಿ ಮುಂದಿನ ಜ್ಞಾನಾರ್ಜನೆಗೆ ಹೆಚ್ಚು ಅನುಕೂಲವಾಗಿರುವದರಿಂದ ಅದನ್ನು ಬಿಟ್ಟಿಲ್ಲ. ಭಕ್ತಿಮಾರ್ಗವು ಜ್ಞಾನ ಮಾರ್ಗಕ್ಕಿಂತ ಬಹುಜನರಿಗೆ ಪ್ರಿಯವಾಗಿರುತ್ತದೆ. ಯಾಕಂದರೆ ಲೋಕದಲ್ಲಿ ಜ್ಞಾನಿಗಳಿಗಿಂತಲೂ ಸಾಮಾನ್ಯರೇ ಅಧಿಕವಾಗಿದ್ದಾರೆ. ಜನತೆಯನ್ನು ವಶಪಡಿಸಿಕೊಂಡು ಅವರಿಂದ ಮಾನಮನ್ನಣೆಯನ್ನು ಪಡೆಯುವದಕ್ಕೆ ಭಕ್ತಿಮಾರ್ಗವು ಹಗುರಾದ ಮಾರ್ಗವು. ಅಂತೆಯೇ ಭಕ್ತಿಸಂಪನ್ನರಾದ ಬಸವಣ್ಣನವರು ಜ್ಞಾನನಿಧಿಗಳಾದ ಪ್ರಭು ಚೆನ್ನಬಸವಣ್ಣನವರಿಗಿಂತಲೂ ಜನರಲ್ಲಿ ಎಷ್ಟೋ ಪಟ್ಟು ಕೀರ್ತಿವಂತರಾದರು. ನಿಜವಾಗಿ ನೋಡಿದರೆ ವೀರಶೈವಧರ್ಮದಲ್ಲಿ ಜ್ಞಾನಮಾರ್ಗವೇ ಅಧಿಕವಾದುದು. ಶಿವಾನುಭವ ಮಂಟಪವು ಜ್ಞಾನದ ಆಗರವಾಗಿದ್ದಿತು. ಸಾಮಾನ್ಯರಿಗೆ ಇಷ್ಟಲಿಂಗ ಪೂಜೆಯನ್ನು ಪ್ರಾಮುಖ್ಯವಾಗಿ ಇಟ್ಟಂತೆ ಪ್ರಾಣಲಿಂಗ ಭಾವಲಿಂಗೋಪಾಸನೆಗಳು ಜ್ಞಾನವಂತರಿಗಾಗಿ ಇಡಲ್ಪಟ್ಟವು. ಮತ್ತು ಷಟ್‌ಸ್ಥಲೋಪಾಸನೆಯನ್ನು ಪ್ರಚಾರಗೊಳಿಸಿದರು.

ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳಿಗೆ ವೀರಶೈವ ಧರ್ಮದಲ್ಲಿ ಮಹತ್ವದ ಸ್ಥಾನಗಳುಂಟಾಗಿವೆ. ಅಷ್ಟಾವರಣಗಳನ್ನು ಸಾಮಾನ್ಯರು ಸಹ ಕ್ರಿಯೆಗಳಲ್ಲಿ ಆಚರಿಸಬಹುದಾಗಿದೆ. ಪಂಚಾಚಾರ ಷಟ್‌ಸ್ಥಲಗಳಿಗೆ ಮಧ್ಯಮ ಹಾಗೂ ಶ್ರೇಷ್ಠತರಗತಿಯ ಜನರು ಲಕ್ಷಕೊಡಬಹುದಾಗಿದೆ. ಬಾಹ್ಯಅಷ್ಟಾವರಣಗಳೆಲ್ಲವೂ ಸಾಕಾರವಸ್ತುಗಳಾಗಿವೆ. ಅಂತೆಯೇ ಅವುಗಳ ಬಗ್ಗೆ ಸಾಮಾನ್ಯರಿಗೆ ಪ್ರೇಮ ಹೆಚ್ಚು. ದೃಷ್ಟವಸ್ತುಗಳನ್ನು ಕಂಡು ಹಿಗ್ಗುವದು ಬಾಲರ ಹಾಗೂ ಸಾಮಾನ್ಯರ ಸ್ವಭಾವವೆಂದು ಹಿಂದೆ ಹೇಳಿದೆಯಷ್ಟೇ. ಪಂಚಾಚಾರಗಳೆಂದರೆ ಮನುಷ್ಯನು ಸಮಾಜ ಸುಧಾರಣೆಗಾಗಿ ಮಾಡತಕ್ಕ ಕರ್ತವ್ಯಗಳು ಅಥವಾ ಕೃತಿಗಳಾಗಿವೆ. ಇವುಗಳಿಗೆ ಮಧ್ಯಮ ತರಗತಿಯ ಜನರು ಮಹತ್ವ ಕೊಟ್ಟು ವರ್ತಿಸುವರು. ಪಂಚಾಚಾರಗಳಲ್ಲಿ ಕೃತಿ, ಸಮಾ

ಜಸೇವೆ ಪುಣ್ಯಕೆಲಸಗಳಿಗೆ ಹೆಚ್ಚು ಪ್ರಾಶಸ್ತ್ಯವುಂಟು. ಷಟ್‌ಸ್ಥಲಗಳು ತಾತ್ವಿಕ ಮಹತ್ತರ ಸ್ಥಾನಗಳಾಗಿವೆ. ಅವು ಆತ್ಮಸಾಕ್ಷಾತ್ಕಾರದ ವಿಚಾರ ಗಳನ್ನೇ ದೃಢೀಕರಿಸುತ್ತವೆ. ಆದರೆ ಲಿಂಗಾಂಗ ಸಾಮರಸ್ಯದ ವಿಷಯ ಗಳು ಸಾಮಾನ್ಯರಿಗೂ ಮಧ್ಯಮ ತರಗತಿಯವರಿಗೂ ನಿಲುಕದಂಥವು ಗಳಾಗಿವೆ. ಅವುಗಳನ್ನು ಸಮರ್ಪಕವಾಗಿ ಪ್ರತಿಪಾದಿಸಲು ಮಹಾಜ್ಞಾನಿ ಗಳೇ ಸಮರ್ಥರು.

ಕಡಿಮೆ ತರಗತಿಯಲ್ಲಿದ್ದವರಿಗೆ ಅಷ್ಟಾವರಣಗಳಲ್ಲಿಯ ಸ್ಥೂಲ ಪೂಜೆಗೆ ಅವಕಾಶವಿದೆ. ಹೆಚ್ಚಿನ ತರಗತಿಯ ಪಂಚಾಚಾರ ಷಟ್‌ಸ್ಥಲ ಗಳಲ್ಲಿ ಮೂರ್ತಿ ಪೂಜೆಯು ವಿರಳವಾಗುತ್ತ ಹೋಗುವದು. ಹೀಗೆ ತರಗತಿಗಳಿದ್ದದರಿಂದ ವೀರಶೈವರು ಸಂಪೂರ್ಣ ಮೂರ್ತಿ ಪೂಜಕ ರೆಂದರೆ ತುಂಬಾ ತಪ್ಪಾಗುತ್ತದೆ.

ಮೂರ್ತಿಪೂಜೆಯ ಕಲ್ಪನೆಯು ಹೇಗೆ ಪ್ರಾದುರ್ಭವಿಸಿ ಬೆಳೆಯಿ ತೆಂಬದನ್ನಷ್ಟು ವಿಚಾರಿಸುವಾ. ವೇದಕಾಲದ ಆರ್ಯರು ಮೂರ್ತಿಪೂ ಜಕರಾಗಿರಲಿಲ್ಲ. ಅವರು ಅಗ್ನಿ, ವರುಣ, ವಾಯು, ಇಂದ್ರಾದಿ ನಿಸ ರ್ಗರೂಪಗಳನ್ನೇ ದೇವರೆಂದು ಆರಾಧಿಸುತ್ತಿದ್ದರು. ಆದರೆ ಭರತಖಂಡದ ಮೂಲನಿವಾಸಿಗಳಾದ ದ್ರಾವಿಡರು ಮಾತ್ರ ನಾಗಪೂಜೆ ಸ್ಥಾವರಲಿಂಗ ಪೂಜೆಗಳನ್ನು ಮಾಡುತ್ತಿದ್ದರು. ಮುಂದೆ ಬೌದ್ಧರ ಕಾಲದಲ್ಲಿ ಬೌದ್ಧರ ಮೂರ್ತಿಗಳು ನಮ್ಮ ದೇಶದ ಆರ್ಯ ದ್ರಾವಿಡರ ಚಿತ್ತವನ್ನು ಆಕರ್ಷಿಸಿದವು. ಅಂದಿನಿಂದ ನಮ್ಮ ದೇಶದಲ್ಲಿ ಮೂರ್ತಿಪೂಜೆಗೆ ಆರಂಭವಾಯಿತು. ಅದ ರಂತೆಯೇ ಜೈನರಬಸ್ತಿಗಳೂ ಬಹುಮಟ್ಟಿಗೆ ನಮ್ಮವರ ಮೇಲೆ ತಮ್ಮ ವರ್ಚಸ್ಸನ್ನು ತೋರ್ಪಡಿಸಿದವು. ಬರಬರುತ್ತ ವಿಹಾರ, ಬಸ್ತಿ, ದೇವಾಲ ಯಗಳೂ ಹಾಗು ಮೂರ್ತಿಗಳೂ ಕಲಾಕೌಶಲ್ಯದ ದ್ಯೋತಕಗಳಾದವು. ಸುಂದರವಾದ ಲಲಿತಕಲೆಯ ಪ್ರದರ್ಶನ ಮಂದಿರಗಳಾದವು. ಆಗಿನ ಕಾಲದಲ್ಲಿ ಮುದ್ರಣ ಯಂತ್ರಗಳಿಲ್ಲದದ್ದರಿಂದ ಆಗಿನ ಇತಿಹಾಸವೂ ಕೂಡ ಕಲ್ಲಿನ ಮೂರ್ತಿಗಳ ಹಾಗೂ ಶಿಲಾ ಲಿಪಿಗಳ ಮುಖಾಂತರವಾಗಿ ಹೊರಹೊರಟಿತು. ಇದರ ಮೇಲಿಂದ ಮೂರ್ತಿಗಳ ಕಲ್ಪನೆಯು ಧಾರ್ಮಿಕಸ್ಥಿತಿಯಿಂದ ಕಲಾ ಕೌಶಲ್ಯ ಇತಿಹಾಸಗಳ ಕಡೆಗೆ ಹೆಚ್ಚು ತಿರುಗಿತು. ಮೊದಲು ಕಗ್ಗವಾಗಿದ್ದ ಗುಡಿಗಳೂ ಮೂರ್ತಿಗಳೂ ಸಂಸ್ಕೃತಿ ಸುಧಾರಣಾ ವಶದಿಂದ ಸೌಂದರ್ಯಯುಕ್ತವಾಗಿ ತೋರಹ

ತ್ತಿದವು. ಸಾಕಾರಕ್ಕೆ ಸೌಂದರ್ಯ ಒಂದುಗೂಡಲು ಬಂಗಾರಕ್ಕೆ ಕುಂದಣ ಹಾಕಿದಂತಾಯಿತು. ಆ ಕಲಾಸೌಂದರ್ಯವು ಪಾಮರರನ್ನಷ್ಟೇ ಅಲ್ಲ ಸುಶಿಕ್ಷಿತರನ್ನು ಕೂಡ ದಂಗು ಬಡಿಸುವಂತೆ ಮಾಡಿದವು. ಇದಕ್ಕೆ ಬಾದಾಮಿ, ಐಹೊಳ್ಳಿ, ಹಂಪಿ ಮೊದಲಾದ ಸ್ಥಳಗಳೇ ಸಾಕ್ಷಿಯಾಗಿವೆ. ಆದರೆ ವೀರಶೈವರು ಕಟ್ಟಿಸಿದ ಮಠಗಳು ಹೀಗಿರದೆ ಅವು ಶಿಕ್ಷಣಮಂದಿರಗಳಾಗಿದ್ದವು

ಸದ್ಯಕ್ಕೆ ಮೂರ್ತಿಪೂಜೆಯು ಪಾಶ್ಚಾತ್ಯರ ದೃಷ್ಟಿಯಲ್ಲಿ ಅಜ್ಞಾನಾಂಧಕಾರದ ಕುರುಹಾಗಿದೆ. ಹಿಂದಿನ ಕಾಡುಜನರು ನಡೆಯಿಸುತ್ತಿದ್ದ ಮೂಢ ಸಾಂಪ್ರದಾಯವಾಗಿದೆ. ನಮ್ಮ ಹಿಂದಿನ ಶಿವಶರಣರಾದರೂ ಇಷ್ಟಲಿಂಗಕ್ಕೆ ಮಹತ್ವದ ಸ್ಥಾನವನ್ನು ಕೊಟ್ಟಿರಲಿಲ್ಲ. ಉಪಾಸನೆಗೆ ಸಹಾಯವಾಗಬೇಕೆಂದು ಮನಸ್ಸಿನ ಏಕಾಗ್ರತೆಗಾಗಿ ಮಾತ್ರ ಅದನ್ನು ಉಪಯೋಗಿಸುತ್ತಿದ್ದರು. ಬಾಹ್ಯ ಆಚರಣೆಗೆ ಅವರು ಮಹತ್ವ ಕೊಟ್ಟಿಲ್ಲ. ಮನೋನೈರ್ಮಲ್ಯವಿಲ್ಲದೆ ವ್ಯರ್ಥವಾಗಿ ಪತ್ರಿ ಪುಷ್ಪಗಳನ್ನು ಒಟ್ಟಿ ಒಟ್ಟಿ ಪೂಜೆ ಮಾಡುವಂಥ, ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ ಡಣಾ ಡಂಗುರವಾಗಿ ಮೆರೆದಾಡುವಂಥ, ಡಾಂಭಿಕರನ್ನು ಅವರು ಒಳಿತಾಗಿ ಹಳಿದಿರುವರು. ಅವರ ವಚನಗಳನ್ನು ನೋಡಿದರೆ ಅಂತರಂಗ ಪರಿಶುದ್ಧತೆಗೆ ಅವರು ಹೆಚ್ಚು ಮಹತ್ವ ಕೊಟ್ಟಿರುವರು. ಇದರ ಮೇಲಿಂದ ನಮ್ಮ ಶಿವಶರಣರು ಹಳೇ ಮಾದರಿಯ ಸನಾತನ ವಾದಿಗಳಾಗಿರದೆ ಈಗಿನ ಹೊಸ ಮಾದರಿಯ ಪಾಶ್ಚಾತ್ಯ ವಿಚಾರವಾದಿಗಳಾಗಿದ್ದರು. ನಮ್ಮ ಶಿವಶರಣರು ಈಗಿನ ಸುಧಾರಕರಂತೆ ಲೋಕಸಂಗ್ರಹ ಕಾರ್ಯಗಳಿಗೂ ಆಧ್ಯಾತ್ಮ ವಿಚಾರಕ್ಕೂ ಹೆಚ್ಚು ಗಮನಿಸುತ್ತಿದ್ದರು.

ಇಷ್ಟಲಿಂಗಕ್ಕೆ ನಮ್ಮ ಶಿವಶರಣರು ಉಪಾಸನೆಯಲ್ಲಿ ಒಂದು ವಿಶಿಷ್ಟ ಸ್ಥಾನ ಮಾತ್ರ ಕೊಟ್ಟಿದ್ದರಿಂದ ಇಷ್ಟಲಿಂಗ ಹೋದರೆ ಪ್ರಾಣ ಬಿಡಬೇಕೆಂದು ಹೇಳುವ ಆರಣ್ಯ ಪಂಡಿತರ ನುಡಿಯನ್ನು ಕೇಳಿದರೆ ಅವರು ಅಜ್ಞಾನಾಂಧಕಾರದ ಕೊನೆಯ ಸೀಮೆಯನ್ನು ಮುಟ್ಟಿದವರೆಂದೇ ತಿಳಿಯಬೇಕು. ಇದು ಆಚಾರದ ಅತಿರೇಕವು. ಜೀವ ಬೇಡವಾದ ಪಾಪಿಯೊಬ್ಬನೇನೋ ಇಂಥ ಹೀನ ಕೆಲಸ ಮಾಡಿರಬಹುದು. ಇದು ಆತ್ಮಹತ್ಯವೆನಿಸುವದು. ವಚನಕಾರರು ಇದನ್ನು ಸಂಪೂರ್ಣವಾಗಿ ಹಳಿದಿರುವರು.

ತಮಗಿಂತ ಹೆಚ್ಚಿನವರಲ್ಲಿ ವಿಶ್ವಾಸವಿಡುವದು ಸಾಮಾನ್ಯಜನರ ಸ್ವಭಾವವು. ಯಾವದಾದರೊಂದು ವಿಶ್ವಾಸವನ್ನು ಹುಟ್ಟಿಸುವದರಿಂದ ಜನರು ಸನ್ಮಾರ್ಗಕ್ಕೆ ಹತ್ತುತ್ತಿದ್ದರೆ ಆ ವಿಶ್ವಾಸವು ಎಂತಹದಿದ್ದರೂ ಯೋಗ್ಯವೇ. ಆರಂಭದಲ್ಲಿ ದಡ್ಡಜನರಿಗೆ ಆ ತರಹದ ವಿಶ್ವಾಸವನ್ನುಂಟು ಮಾಡಲೇಬೇಕು. ಬಾಹ್ಯ ಇಷ್ಟಲಿಂಗ ಪೂಜೆಪುನಸ್ಕಾರಗಳಿಗಿಂತಲೂ ಅವರಲ್ಲಿದ್ದ ವಿಶ್ವಾಸಬಲವೇ ಅವರ ಉದ್ಧಾರಕ್ಕೆ ಹೆಚ್ಚುಸಹಾಯಕ ವಾಗುವದು.

ನಮ್ಮವರು ಕೇವಲ ದೇಹಶುದ್ಧಿಗಾಗಿ ಇಷ್ಟಲಿಂಗವೆಂಬ ಸಾಕಾರ ಮೂರ್ತಿಯ ಉಪಾಸನೆಮಾಡುವರು. ನಿಜವಾದ ಆತ್ಮಸಾಕ್ಷಾತ್ಕಾರಕ್ಕೆ ಅವರು ನಿರಾಕಾರವಸ್ತುವನ್ನೇ ನಂಬಬೇಕಾಗುತ್ತದೆ. ಹಣ್ಣನ್ನು ಕೂಡಿ ಕೊಂಡೇ ರಸವಿರುವಂತೆ ಸಾಕಾರವನ್ನು ಹಿಡಿದೇ ನಿರಾಕಾರವಿರುವ ದರಿಂದ ನಿರಾಕಾರ ಗ್ರಹಣಾರ್ಥವಾಗಿಯೇ ಸಾಕಾರವನ್ನು ಸ್ವೀಕರಿಸ ಬೇಕಾಗುವುದು. ರಸವನ್ನು ಹೀರಿ ಸಿಪ್ಪೆಯನ್ನು ತೆಗೆದೊಗೆಯುವಂತೆ ನಿರಾ ಕರಜ್ಞಾನವನ್ನು ಪಡೆದು ಸಮರಸ ಸ್ಥಿತಿಯು ಒದಗಿದಬಳಿಕ ಸಾಕಾರವು ಉಳಿಯಲಾರದು.

ಸಾಕಾರದಿಂದ ನಿರಾಕಾರಕ್ಕೆ ಹೋಗುವದೆಂದರೆ ನಾಸ್ತಿಕರಾಗ ಬೇಕೆಂತಲ್ಲ, ನಾಸ್ತಿಕ ನಿರಾಕಾರಶಬ್ದಗಳು ಪರಸ್ಪರ ಭಿನ್ನವಾದವುಗಳು. ನಾಸ್ತಿಕದಲ್ಲಿ ದೇವರಿದ್ದಾನೆಂಬ ಕಲ್ಪನೆಗೆ ಅವಕಾಶವಿಲ್ಲ. ನಿರಾಕಾರ ದಲ್ಲಿ ಆಸ್ತಿಕಬುದ್ಧಿಗಾಸ್ಪದವುಂಟು. ಬೌದ್ಧರು ಪ್ರತಿಪಾದಿಸುವ ಶೂನ್ಯವು ನಾಸ್ತಿಕ ತತ್ವವು. ವೀರಶೈವರು ಪ್ರತಿಪಾದಿಸುವ ಶೂನ್ಯವು ನಿರಾಕಾ ರವಾದ ಪರಬ್ರಹ್ಮ ವಸ್ತುವು. ನಿಜವಾಗಿ ವಿಚಾರಿಸಿದರೆ ದೃಶ್ಯವಾದ ನಮ್ಮ ದೇಹವೇ ಸಾಕಾರಮೂರ್ತಿಯು. ಅದೃಶ್ಯವಾದ ನಮ್ಮ ವಿಚಾರಗಳೇ ನಿರಾಕಾರವಸ್ತುಗಳು. ತನು ಶುದ್ಧವಾಗಿರುವದೇ ಮೂರ್ತಿಪೂಜೆಯು. ಮನ ಭಾವಗಳನ್ನು ಪರಿಶುದ್ಧವಾಗಿಟ್ಟುಕೊಳ್ಳುವದೇ ನಿರಾಕಾರಪೂಜೆಯು. ವೀರ ಶೈವತತ್ವವು ಇದನ್ನೇ ಪ್ರತಿಪಾದಿಸುತ್ತದೆ.

---

# ಷಡ್ವಿಧ ಭಕ್ತಿಗಳು.

(ವಿಜಾಪುರ ಶಿವಾನುಭವ ಕೂಟದ ಒಬ್ಬ ಸಭಾಸದ)

ವೀರಶೈವರಲ್ಲಿ ಶ್ರದ್ಧಾ, ನಿಷ್ಠಾ, ಅವಧಾನ, ಅನುಭಾವ, ಸುಜ್ಞಾನ ಸಮರಸಗಳೆಂದು ಷಡ್ವಿಧ ಭಕ್ತಿಗಳುಂಟು. ಇವು ಅನುಕ್ರಮವಾಗಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬೀ ಷಟ್ ಸ್ಥಲಗಳ ಮುಖ್ಯಲಕ್ಷಣಗಳಾಗಿವೆ. ಷಡ್ವಿಧ ಭಕ್ತಿಗಳು ಪರಸ್ಪರ ಸಂಬಂಧವುಳ್ಳವುಗಳಾಗಿ ಆತ್ಮವಿಕಾಸದ ಸೋಪಾನಗಳಂತಿವೆ. ಮನುಷ್ಯನ ಮನಸ್ಸು ಕ್ರಮ ದಿಂದ ಹೇಗೆ ವಿಕಾಸವಾಗುತ್ತ ಹೋಗುತ್ತದೆಂಬದನ್ನು ಶಾಸ್ತ್ರೋಕ್ತವಾಗಿ ಈ ಆರು ವಿಧ ಭಕ್ತಿಗಳು ಪ್ರತಿಪಾದಿಸುತ್ತವೆ.

ಶ್ರದ್ಧಾ ನಿಷ್ಠಾ ಭಕ್ತಿಗಳು ವಿಶೇಷವಾಗಿ ತನುವಿಗೂ, ಅವಧಾನ ಅನುಭಾವ ಭಕ್ತಿಗಳು ಮನಸ್ಸಿಗೂ, ಸುಜ್ಞಾನ ಸಮರಸ ಭಕ್ತಿಗಳು ಆತ್ಮನಿಗೂ ಸಂಬಂಧಿಸಿರುತ್ತವೆ. ತನುವಿಗೆ ಸಂಬಂಧಿಸಿದ ವಿಷಯಗಳು ಸ್ಥೂಲವಾಗಿರುವವು. ಮನಕ್ಕೆ ಸಂಬಂಧಿಸಿದ ವಿಷಯಗಳು ಸೂಕ್ಷ್ಮವಾಗಿರವವು. ಆತ್ಮನಿಗೆ ಅನುಸರಿಸಿದಂಥವುಗಳು ಸೂಕ್ಷ್ಮಕ್ಕಿಂತಲೂ ಸೂಕ್ಷ್ಮ ಅರ್ಥಾತ್ ಸಂಪೂರ್ಣ ನಿರಾಕಾರವಾಗಿರುವವು.

ಶ್ರದ್ಧಾ ನಿಷ್ಠಾ ಭಕ್ತಿಗಳು ಇಷ್ಟಲಿಂಗೋಪಾಸನೆಗೆ ಸಂಬಂಧಪಟ್ಟಿರುವದರಿಂದ ಅವುಗಲ್ಲಿ ಭಕ್ತಿ ಕ್ರಿಯೆಗಳು ಹೆಚ್ಚಾಗಿ ಸಮಾವೇಶವಾಗುತ್ತವೆ. ಅವಧಾನ ಅನುಭಾವ ಭಕ್ತಿಗಳು ಪ್ರಾಣಲಿಂಗೋಪಾಸನೆಯ ಕುರುಹುಗಳಾದ್ದರಿಂದ ಅವುಗಳಲ್ಲಿ ಏಕಾಗ್ರದೃಷ್ಟಿ, ಯೋಗಮಾರ್ಗಗಳು ಅಳವಟ್ಟಿರುತ್ತವೆ. ಸುಜ್ಞಾನ ಸಮರಸ ಭಕ್ತಿಗಳು ಭಾವಲಿಂಗೋಪಾಸನೆಯನ್ನನುಸರಿಸುವದರಿಂದ ಆತ್ಮಸಾಕ್ಷಾತ್ಕಾರ ಚಿದಾನಂದಗಳು ಅವುಗಳಲ್ಲಿ ಅಡಕವಾಗಿರುತ್ತವೆ.

ಇನ್ನು ಈ ಆರು ವಿಧ ಭಕ್ತಿಗಳಲ್ಲಿ ಒಂದೊಂದನ್ನೇ ಕುರಿತು ಸಂಕ್ಷೇಪವಾಗಿ ವಿವೇಚಿಸೋಣ,

## ೧ ಶ್ರದ್ಧಾ ಭಕ್ತಿ.

ಭಕ್ತಿಯಲ್ಲಿ ಅಂಧಭಕ್ತಿ ಎಂದೂ ತಾತ್ವಿಕ ಭಕ್ತಿಎಂದೂ ಎರಡುಭಾಗಗಳನ್ನು ಮಾಡಬಹುದು. ಅದರಂತೆಯೇ ಶ್ರದ್ಧೆಯಲ್ಲಿ ಅಂಧಶ್ರದ್ಧೆಯೆಂ

ತಲೂ ತಾತ್ವಿಕ ಶ್ರದ್ಧೆಯೆಂತಲೂ ಎರಡುಭಾಗ ಮಾಡಬಹುದು. ಅಂಧ ಶ್ರದ್ಧೆಯು ಸಾಮಾನ್ಯ ಜನರಲಕ್ಷಣವು. ತಾತ್ವಿಕ ಶ್ರದ್ಧೆಯು ಜ್ಞಾನಿಗಳ ಲಕ್ಷಣವು. ವೀರಶೈವರು ಪ್ರತಿಪಾದಿಸುವ ಶ್ರದ್ಧೆಯು ಅಂಧಶ್ರದ್ಧೆಯಲ್ಲ. ಆದರೆ ತಾತ್ವಿಕ ಶ್ರದ್ಧೆಯಾಗಿರುತ್ತದೆ. ಅನ್ಯರು ಅಂದದ್ದೇ ಪ್ರಮಾಣ, ಹೇಳಿದ್ದೇ ವೇದವಾಕ್ಯವೆಂದು ಗೋಣು ಹಾಕುತ್ತ ಹೋಗುವದು ವೀರ ಶೈವ ಲಕ್ಷಣವಲ್ಲ. ತಾನು ಸ್ವತಃ ಸಾರಾಸಾರ ವಿಚಾರ ಮಾಡಿ ಏನೂ ಬಗೆಹರಿಯದಿದ್ದ ಪಕ್ಷದಲ್ಲಿ ತನ್ನ ಶಂಕೆಗಳನ್ನೆಲ್ಲ ಸಂಪೂರ್ಣವಾಗಿ ಹೋಗಲಾಡಿಸಿ ಯೋಗ್ಯ ಮಾರ್ಗವನ್ನು ತೋರಿಸುವ ವ್ಯಕ್ತಿಯಲ್ಲಾಗಲಿ ತತ್ವದಲ್ಲಾಗಲಿ ತುಂಬಾ ವಿಶ್ವಾಸವಿಡುವದೇ ಉಜ್ವಲ ಶ್ರದ್ಧೆಯೆನಿಸಿ ಕೊಳ್ಳುತ್ತದೆ. ಷಟ್‌ಸ್ಥಲದಲ್ಲಿ ಭಕ್ತನ ಜ್ಞಾನಿ ಭಕ್ತನ ಶರಣ ಎಂಬ ಸ್ಥಲಗಳಿವೆ. ಈ ಸ್ಥಲಗಳು ಮೇಲ್ಕಂಡ ಅಭಿಪ್ರಾಯವನ್ನೇ ಸೂಚಿ ಸುತ್ತವೆ.

ಮೂಢ ನಂಬಿಗೆಯು ಅಜ್ಞಾನದ ಕುರುಹು. ಇದು ಏನೂ ತಿಳಿಯದ ಕಾಡು ಜನರ ಸಾಂಪ್ರದಾಯವು. ಆದರೆ ಸುವಿಚಾರಿಯಾದ ಮನುಷ್ಯನು ಸಾರಾಸಾರ ವಿಚಾರಿಸಿ ಒಂದು ವಸ್ತುವಿನಲ್ಲಾಗಲಿ, ವ್ಯಕ್ತಿ ಯಲ್ಲಾಗಲಿ, ತತ್ವದಲ್ಲಾಗಲಿ ಇಟ್ಟ ಅಚಲನಾದ ವಿಶ್ವಾಸವೇ ನಿಜ ವಾದ ಶ್ರದ್ಧೆಯು. ನಿಜ ಶ್ರದ್ಧೆಯಲ್ಲಿ ಪ್ರಮಾದಕ್ಕೆ ಇಂಬಿಲ್ಲ. ಅದರಲ್ಲಿ ಅದ್ಭುತವಾದ ಸಾಮರ್ಥ್ಯವಿರುತ್ತದೆ. ಈಗಿನ ಸುಧಾರಿಸಿದ ಜಗತ್ತಿನ ವ್ಯವಹಾರವು ಪರಸ್ಪರ ವಿಶ್ವಾಸದಿಂದಲೇ ನಡೆದಿದೆ. ಒಬ್ಬರಿಗೊಬ್ಬರು ವಿಶ್ವಾಸಘಾತಕಿಗಳಾದರೆ ಇಲ್ಲಿ ಒಂದರಗಳಿಗೆ ಸಹ ಶಾಂತತೆಯುಳಿಯಲು ಸಾಧ್ಯವಿಲ್ಲ.

ತಮಗಿಂತ ಹೆಚ್ಚು ಯೋಗ್ಯತೆಯ ವ್ಯಕ್ತಿಗಳು ಹೇಳುವ ಮಾತಿ ನಲ್ಲಿ ಯಾರಿಗಾದರೂ ವಿಶ್ವಾಸ ಹುಟ್ಟುವದು. ಬಾಲಕರು ಶಿಕ್ಷಕರಲ್ಲಿಯೂ ಸೈನಿಕರು ಸೇನಾಪತಿಯಲ್ಲಿಯೂ, ಶಿಷ್ಯರು ಗುರುಗಳಲ್ಲಿಯೂ, ರೋಗಿ ವೈದ್ಯರಲ್ಲಿಯೂ ವಿಶ್ವಾಸವಿಡುತ್ತಾರೆ. ಆ ವಿಶ್ವಾಸಕ್ಕೆ ತಕ್ಕಂತೆ ಅವರಿಗೆ ಫಲಗಳೂ ಲಭಿಸುವವು. ವಿಶ್ವಾಸದಿಂದ ಮಾನಸಿಕ ಬಲವು ಹೆಚ್ಚುವದು. ಸ್ವಲ್ಪ ದಡ್ಡರಿದ್ದ ಬಾಲಕರಿಗೆ ಶಿಕ್ಷಕರು ನೀವು ಪರೀಕ್ಷೆಯಲ್ಲಿ ನಿಶ್ಚಯವಾ ಗಿಯೂ ಉತ್ತೀರ್ಣರಾಗುವಿರಿ ಎಂದು ಹೇಳಿದರೆ ಆ ಹುಡುಗರಿಗೆ ಹುರು ಪು ಹುಟ್ಟಿ ಅಭ್ಯಾಸ ಮಾಡಿ ತೇರ್ಗಡೆ ಹೊಂದಬಹುದು. ಸೈನಿಕರು

ಯುದ್ಧದಲ್ಲಿ ಕಾಲ್ದೆಗೆಯುವ ಕಾಲಕ್ಕೆ ಸೇನಾಪತಿಯು ಅವರಿಗೆ ಜಯವಾಗುವದೆಂದು ಪ್ರೋತ್ಸಾಹಕೊಟ್ಟರೆ ಆ ಸೈನಿಕರು ಅವನ ಮಾತಿನ ಮೇಲೆ ವಿಶ್ವಾಸವಿಟ್ಟು ಇಮ್ಮಡಿ ಶೌರ್ಯದಿಂದ ಕಾದಾಡಬಹುದು. ಗುರುವು ತನ್ನ ಶಿಷ್ಯನಿಗೆ, ನೀನು ದಿನಾಲು ಎರಡುಹೊತ್ತು ಸ್ನಾನಮಾಡಿ ದೇವರಪೂಜೆಯನ್ನು ಮಾಡಿದ್ದಾದರೆ ನಿನ್ನ ಮನಸ್ಸಿನ ಚಿಂತೆಯೆಲ್ಲ ದೂರವಾಗುವದೆಂದು ಹೇಳಿದರೆ ಆ ಶಿಷ್ಯನು ಆ ಮಾತಿನಮೇಲೆ ವಿಶ್ವಾಸವಿಟ್ಟು ತನ್ನ ಮನೋವ್ಯಥೆಯನ್ನು ನೀಗಿಕೊಳ್ಳಬಹುದು. ವೈದ್ಯನು ರೋಗಿಗೆ ಇನ್ನು ಮೂರುದಿವಸಕ್ಕೆ ನಿನ್ನರೋಗವು ಪೂರಾ ವಾಸಿಯಾಗುವದೆಂದು ಹೇಳಲು ರೋಗಿಯು ಅದನ್ನು ನಂಬಿ ಕದಾಚಿತ್ ಗುಣಹೊಂದಬಹುದು. ಈ ಮೇರೆಗೆ ಹೆಚ್ಚಿನ ವ್ಯಕ್ತಿಗಳು ತಮ್ಮಕಿಂತಲೂ ಕಡಿಮೆಯುವರಲ್ಲಿ ಯೋಗ್ಯ ವಿಶ್ವಾಸವನ್ನು ಹುಟ್ಟಿಸಿ ಅವರನ್ನು ಹಾದಿಗೆ ತರುವದು ಉತ್ತಮೋಪಾಯವು.

ಆದರೆ ಆಯಾಯ ವ್ಯಕ್ತಿಗಳು ತಮ್ಮ ಪೂಜ್ಯರಲ್ಲಿ ವಿಶ್ವಾಸ ವಿಡುವದನ್ನು ಬಿಟ್ಟರೆ ಅವರಿಗೆ ವಿಶ್ವಾಸಬಲವು ತಪ್ಪಿ ಕದಾಚಿತ್ ಹಾನಿಯಾಗುವ ಸಂಭವವುಂಟು. ವಿಶ್ವಾಸವಿಡುವದರಿಂದ ಸದ್ಗತಿಯಾಗುತ್ತಿದ್ದರೆ ಅದನ್ನೆಂದಿಗೂ ಬಿಡಬಾರದು. ದುರ್ಗತಿಯಾಗುತ್ತಿದ್ದರೆ ಅದನ್ನೆಂದಿಗೂ ಇಡಬಾರದು. ಅಜ್ಞರನ್ನು ಮೋಸಗೊಳಿಸಬೇಕೆಂದು ಕೆಲವು ನಾಮಧಾರೀ ಸುಧಾರಕರು ಅವರ ಮನಸ್ಸಿನಲ್ಲಿ ಸುಳ್ಳು ಕಲ್ಪನೆಯನ್ನು ಹುಟ್ಟಿಸಿ ಅದರಲ್ಲಿ ವಿಶ್ವಾಸವಿಡುವಂತೆ ಮಾಡುವದೆಷ್ಟು ಪಾಪವೋ ಅಷ್ಟೇ ಸಾರಾಸಾರ ವಿಚಾರಿಸದೆ ಸುಮ್ಮನೆ ಮೂಕಕುರಿಯಂತೆ ಪೂಜ್ಯರು ಹೇಳಿದ್ದೆಲ್ಲ ನಿಜವೆಂದು ನಂಬುವದಾದರೂ ಪಾಪದ ಕೆಲಸವೇ ಸರಿ. ಒಬ್ಬ ಗುರುವು ಶಿಷ್ಯನ ದುಡ್ಡು ಎತ್ತಿಹಾಕಬೇಕೆಂದು “ನೀನು ರುದ್ರಾಭಿಷೇಕ ಮಾಡಿಸಿದರೆ ನಿನಗೆ ಆಯುರಾರೋಗ್ಯ ಸಂತಾನಗಳು ಸಮೃದ್ಧಿಸುವವೆಂದು” ಕಪಟದ ಮಾತು ಹೇಳುವದು ಪಾಪವು. ಅದರಂತೆ ಆ ಪಾಪಿಗೆ ಶಿಷ್ಯನು ಅಭಿಷೇಕಕ್ಕಾಗಿ ದುಡ್ಡು ಸುರುವಿ ಯಾವ ಗತಿಗೂ ಮುಟ್ಟದೆ ಹೋಗುವದೂ ಪಾಪವೇ. ತೀರ್ಥಯಾತ್ರೆ ಮಾಡಿದರೆ ಕೋಟಿ ಪುಣ್ಯ ಬರುವದು. ‘ಶಿವ’ ಎಂಬೆರಡಕ್ಷರಗಳನ್ನುಚ್ಚರಿಸಿದ ಮಾತ್ರಕ್ಕೆ ಸರ್ವಪಾಪಗಳು ನಾಶವಾಗುವವು ಎಂದು ಸುಳ್ಳು ಸೂತ್ರಗಳನ್ನು ಹೇಳುವದು ಪಾಪವು. ಅದನ್ನು ನಂಬಿ ನಡೆಯುವದೂ ಪಾಪವು. ನಿಜವಾದ ವೀರ

ಶೈವರು ಇಂಥ ಪಾಪದ ಕೆಲಸಗಳಲ್ಲಿ ಮೂಢನಂಬಿಗೆ ಇಡುವದಿಲ್ಲ. ಪೂಜ್ಯರಾದವರು ತಮ್ಮ ಶಿಷ್ಯರಿಗೆ ಇಂಥ ಅಂಧ ಶ್ರದ್ಧೆಯನ್ನಿಡಲು ಆಸ್ಪದಕೊಡುವದಿಲ್ಲ.

## ೨ ನಿಷ್ಠಾಭಕ್ತಿ.

ನಿಷ್ಠಾಭಕ್ತಿಯೆಂದರೆ ಒಮ್ಮೆ ನಂಬಿದ ವಸ್ತುವನ್ನಾಗಲಿ ಅಥವಾ ವ್ಯಕ್ತಿಯನ್ನಾಗಲಿ ಯಾವಾಗಲೂ ನಂಬಿಕೊಂಡಿರುವದು. ಮತ್ತು ತಾನು ನಂಬಿದ ತತ್ವವನ್ನೇ ಬಿಟ್ಟುಬಿಡದೆ ಆಚರಿಸುವದು. ಅಜ್ಞರಾದ ಸಾಮಾನ್ಯ ಜನರು ಏನೂ ಅರ್ಥವಿಲ್ಲದಂಥ ದೇಶಕಾಲ ಪರಿಸ್ಥಿತಿಗೆ ಬಾಧಿತರುವಂಥ ಕೆಲವು ರೂಢಾಚಾರಗಳನ್ನು ಹಠಾತ್ತಾಗಿ ನಡೆಯಿಸುವರು. ಅವರ ತಲೆಯ ಮೇಲೆ ಕಲ್ಲುಹಾಕಿದರೂ ಅವರು ಕೇಳುವದಿಲ್ಲ. ಹೊಲೆಯರನ್ನು ಮುಟ್ಟಬಾರದು; ಹೋಳಿಹುಣ್ಣಿವೆಯಲ್ಲಿ ಶಂಖವಾದ್ಯ ಮಾಡಬೇಕು; ಇತ್ಯಾದಿ ಸಾಂಪ್ರದಾಯಗಳು ಸುಧಾರಿಸಿದ ಸಮಾಜಕ್ಕೆ ಹ್ಯೇಯವಾದವುಗಳೂ ವಿಘಾತಕವಾದುವುಗಳೂ ಆಗಿವೆ. ಆದರೆ ಸಾಂಪ್ರದಾಯ ಪ್ರಿಯರಾದ ಸಾಮಾನ್ಯರು ಅವುಗಳನ್ನು ಹಠಾತ್ತಾಗಿಯೇ ಸಾಧಿಸುವರು. ಇಂಥ ದುರಾಗ್ರಹವು ವೀರಶೈವ ಮತವು ಪ್ರತಿಪಾದಿಸುವ ನಿಷ್ಠಾಭಕ್ತಿಯಲ್ಲ. ಇದು ಅಜ್ಞಾನಾಂಧಕಾರದ ಮೊಟ್ಟೆಯು. ಆದರೆ ಸುಜ್ಞಾನಿಗಳು ತಮಗೆ ತೋಚಿದ ಸತ್ಯವನ್ನು ಮರೆಮಾಚದೆ ಜನರಿಗುಪದೇಶಿಸುವರು. ಅವರಂತೆಯೇ ತಾವು ತಪ್ಪದೆ ನಡೆದುಕೊಳ್ಳುವರು. ಮುಗಿಲು ಹರಿದು ಬಿದ್ದರೂ ಜಗತ್ತೇ ತಮ್ಮ ವಿರುದ್ಧನಿಂತರೂ ಅವರು ತಮ್ಮ ಸತ್ಯವನ್ನು ಬಿಡುವದಿಲ್ಲ. ಇದು ದುರಾಗ್ರಹವಲ್ಲ; ಸತ್ಯಾಗ್ರಹವು. ವೀರಶೈವರು ಹೇಳುವ ನಿಷ್ಠಾಭಕ್ತಿಯೆಂದರೆ ಸತ್ಯಾಗ್ರಹವು. ಸತ್ಯಾಗ್ರಹಿಯಾದ ಮನುಷ್ಯನು ತನಗಿಂತಲೂ ಹೆಚ್ಚಿನವರಾದ ಜನರೊಡನೆ ಚರ್ಚಿಸಿ ತನ್ನ ವಿಚಾರಗಳು ತಪ್ಪೆಂದು ತೋರಿದರೆ ಅವುಗಳನ್ನು ವ್ಯತ್ಯಸ್ತಪಡಿಸಲು ಹಿಂದು ಮುಂದು ನೋಡುವದಿಲ್ಲ. ಹಾಗೆ ಮಾಡುವದು ಸಜ್ಜನರ ಲಕ್ಷಣವು; ಆತ್ಮಗೌರವಕ್ಕೆ ಕುಂದಕವಲ್ಲ, ಸೋತರೂ ಸಹ ದುರಾಗ್ರಹದಿಂದ ತನ್ನ ಹಟವನ್ನೇ ಸಾಧಿಸುವದು ಮೂರ್ಖತನದ ಲಕ್ಷಣವು; ವೀರಶೈವ ಲಕ್ಷಣವಲ್ಲ.

ನಮಗೆ ಯಾವದಾದರೊಂದು ಕೆಲಸದಲ್ಲಿ ಪೂರ್ಣ ವಿಶ್ವಾಸವಿದ್ದರೆ ಅದನ್ನು ಬಿಟ್ಟು ಬಿಟ್ಟು ಆಚರಿಸುವದರಿಂದ ನಮ್ಮ ಸಾಮರ್ಥ್ಯವು ಕುಗ್ಗು

ತ್ತದೆ. ನಿರಂತರವಾಗಿ ಅದನ್ನು ನಡೆಯಿಸಿದರೆ ಒಳ್ಳೇ ಬಲ ಉಂಟಾಗುತ್ತದೆ. ವಿಶ್ವಾಸವಿಟ್ಟ ಕಾರ್ಯವನ್ನು ಪ್ರತಿನಿತ್ಯ ಪುನಃ ಪುನಃ ಆಚರಿಸುವದರಿಂದ ನಮಗೆ ಬೇಸರವಾಗುವದರ ಬದಲು ಒಂದು ತರಹದ ಆವೇಶವೂ ಆನಂದವೂ ಉಂಟಾಗುತ್ತವೆ. ಪುನಃ ಪುನಃ ಮಾಡುವ ಆನಂದದ ಕೆಲಸಗಳಲ್ಲಿ ಮಂಜುಲ ನಿನಾದವಿರುತ್ತದೆಂದು ಬಲ್ಲವರು ಹೇಳುತ್ತಾರೆ. (*There is rhythm in repetition*) ಪ್ರಾತರ್ವಿಧಿ, ಸ್ನಾನ, ಊಟ, ಮುಂತಾದ ಕೆಲಸಗಳನ್ನು ದಿನಾಲು ನಾವು ತಪ್ಪದೆ ಮಾಡುತ್ತಿದ್ದೇವೆ. ಆದರಿಂದ ನಮಗೆ ಬೇಸರವಾಗುವ ಬದಲು ಸಂತೋಷವೇ ಆಗುವದು. ನಮ್ಮ ಪೂರ್ವಜರು ಪುನಃ ಪುನಃ ನಿಷ್ಠೆಯಿಂದ ಆಚರಿಸಿದ ನಡಾವಳಿಗಳು ರೂಢಾಚಾರಗಳಾಗಿ ಇಂದಿಗೂ ಹಾಗೆಯೇ ಉಳಿದಿರುವವು. ಮೊದಲು ನಿಷ್ಠೆಯಿಂದಾಚರಿಸುವಾಗ ಅವುಗಳಲ್ಲಿ ಒಂದು ಪ್ರಕಾರದ ಶಕ್ತಿ ಇದ್ದಿತು. ಆದರೆ ಬರಬರುತ್ತ ಅವು ಚಟಗಳಾಗಿ ಯಂತ್ರಗಳಂತೆ ಶಿಥಿಲವಾಗಿ ನಡೆಯಹತ್ತಿರುವವು.

ರೂಢಾಚಾರಗಳಾಗಲಿ ಸಾಂಪ್ರದಾಯಗಳಾಗಲಿ ಒಳಿತೂ ಉಂಟು, ಕೆಡಕೂ ಉಂಟು. ಆದರೆ ನಾವು ಯಾವದಾದರೊಂದು ಕಾರ್ಯವನ್ನು ನಿಷ್ಠೆಯಿಂದ ಸಾಗಿಸುವಾಗ ಒಳಿತು ಯಾವುದು, ಕೆಡಕು ಯಾವುದು, ಎಂಬದನ್ನು ಸಾರಾಸಾರ ವಿಚಾರಿಸಿ ಕೇವಲ ಒಳಿತನ್ನೇ ಅಂಗೀಕರಿಸಬೇಕು. ಸದಾ ದುರಾಚಾರಗಳನ್ನು ನಿಷ್ಠೆಯಿಂದ ಧ್ಯಾನಿಸುವ ವ್ಯಕ್ತಿಯು ಕೊನೆಗೆ ದುರಾಚಾರಿಯೇ ಆಗುವನು. ಸದಾ ಸದ್ವಿಷಯ ಚಿಂತನೆಮಾಡುವವನು ಸದ್ಗುಣಿಯೇ ಆಗುವನು. ನಾವು ನಮ್ಮ ಆಚಾರ ವಿಚಾರ ಉಚ್ಚಾರಗಳನ್ನು ಪ್ರತಿನಿತ್ಯ ಯಾವ ಪ್ರಕಾರ ನಡೆಯಿಸಿಕೊಂಡು ಹೋಗುವೆವೋ ನಮ್ಮ ಜೀವಿತವಾದರೂ ಅದೇ ಪ್ರಕಾರವಾಗುವದು. ಆದ್ದರಿಂದ ನಮ್ಮ ಆಚಾರ ವಿಚಾರ ಉಚ್ಚಾರಗಳಲ್ಲಿ ನಿಷ್ಠೆಯುಳ್ಳ ವರ್ತನವಿರಬೇಕೆಂದೇ ವೀರಶೈವ ಮತವು ಸಾರುತ್ತದೆ.

## ೩ ಅವಧಾನ ಭಕ್ತಿ.

ನಾವು ಯಾವದಾದರೊಂದು ಕೆಲಸವನ್ನು ಅತಿನಿಷ್ಠೆಯಿಂದ ಆಚರಿಸುವದರಿಂದ ಮನಸ್ಸಿನ ದೃಢತೆಯು ಉಂಟಾಗಿ ಒಂದು ತರಹದ ಗತಿಯು ಅಥವಾ ಏಕಾಗ್ರತಾಶಕ್ತಿಯು ಉಂಟಾಗುವದು. ನಾವು ಪ್ರತಿ

ನಿತ್ಯ ತೆಗೆದುಕೊಳ್ಳುವ ತುತ್ತು ಕಪಾಳಕ್ಕೆ ಹೋಗದೆ ಬಾಯಿಗೆ ಬರ ಲೇಬೇಕು. ಯಾಕಂದರೆ ಹಾಗೇ ಕೈಕೂತುಹೋಗಿದೆ. ಒಬ್ಬ ನುರಿತ ಚಿನಿವಾಲನು ಒಂದು ಬೆಳ್ಳಿಯ ಇಲ್ಲವೆ ಬಂಗಾರದ ಗಟ್ಟಿಯನ್ನು ಕೈಯ್ಯಲ್ಲಿ ಹಾರಾಡಿಸಿ ಅದರ ತೂಕವು ಇಷ್ಟೇ ಎಂದು ಹೇಳುವನು. ಯಾಕಂದರೆ ಅದರಲ್ಲಿ ಅವನ ಕೈಕೂತು ಹೋಗಿರುತ್ತದೆ. ಅದರಂತೆಯೇ ದಿನಾಲು ನಿಷ್ಠೆಯಿಂದ ಗುರಿ ಹೊಡೆಯಲಿಕ್ಕೆ ಕಲಿತ ಮನುಷ್ಯನು ಅದರಲ್ಲಿ ಗತಿ ಯನ್ನು ಹೊಂದಿದ ಬಳಿಕ ತಾನಿಟ್ಟ ಗುರಿಗೆ ತಪ್ಪದೆ ಹೊಡೆಯಲೇ ಬೇಕು. ಅದೇ ಮೇರೆಗೆ ನಾವು ನಿಷ್ಠೆಯಿಂದ ಆರಾಧಿಸುವ ವಸ್ತುವಿನ ಲ್ಲಾಗಲಿ ಅಥವಾ ನಮ್ಮ ಆದರ್ಶವಾದ ತತ್ವದಲ್ಲಾಗಲಿ ನಮ್ಮ ಮನಸ್ಸು ಏಕಾಗ್ರವಾಗಿ ಒಂದು ವಿಶಿಷ್ಟಗತಿಯನ್ನು ಹೊಂದುತ್ತದೆ. ಆ ಕಾರ್ಯ ಗತಿಯು ಅಚಲ ಹೊಂದದೆ ನಿಶ್ಚಲವಾಗಿ ಒಂದೇ ದಿಶೆಯಿಂದ ಹರಿದು ಹೋಗಹತ್ತಲು ಅದಕ್ಕೆ ಅವಧಾನವೆಂದೆನ್ನುವರು. ಈಸಲಿಕ್ಕೆ ಕಲಿಯುವ ಮನುಷ್ಯನು ಮೊದಲು ಮೊದಲು ಮನಬಲ್ಲಂತೆ ನೀರಿನಲ್ಲಿ ತನ್ನ ಕೈಕಾ ಲುಗಳನ್ನು ಬಡಿದು ದಣಿದುಕೊಂಡು ಕೊನೆಗೆ ಈಸುಗಲಿತ ಮೇಲೆ ಕ್ಲಪ್ತ ವಾದ ಚಲನಕ್ರಿಯೆಗಳನ್ನು ಮಾತ್ರ ಇಟ್ಟುಕೊಂಡು ಉಳಿದ ಅನಾವ ಶ್ಯಕವಾದ ದಣಿಸುವ ಕ್ರಿಯೆಗಳನ್ನು ತ್ಯಜಿಸುವನು. ಅದರಂತೆಯೇ ನಿಷ್ಠೆ ಯಿಂದ ಒಂದು ಕಾರ್ಯವನ್ನು ಮಾಡುವ ಮನುಷ್ಯನು ಮೊದಲು ನೂರೆಂಟು ತಪ್ಪುತಡೆಗಳನ್ನೂ ಅನಾವಶ್ಯಕವಾದ ವ್ಯವಹಾರಗಳನ್ನೂ ಮಾಡಿ ಕೊನೆಗೆ ಅದರಲ್ಲಿ ಗತಿಯುಂಟಾಗಲು ಅತ್ಯಾವಶ್ಯಕವಾದ ವ್ಯಾಪಾ ರಗಳನ್ನು ಮಾತ್ರ ಕಾಯ್ದಿಟ್ಟುಕೊಂಡು ಮುಂದೆ ತನ್ನ ಸಾಮರ್ಥ್ಯವನ್ನು ಹೆಚ್ಚಿಸುತ್ತ ಹೋಗುವನು. ಈ ಸ್ಥಿತಿಗೆ ಅವಧಾನವೆನ್ನುವರು.

ನಮ್ಮ ಮನಸ್ಸು ಒಂದು ವಸ್ತುವಿನಲ್ಲಾಗಲಿ ವಿಷಯದಲ್ಲಾಗಲಿ ಏಕಾಗ್ರವಾಗಿದ್ದರೆ ಕೊನೆಗೆ ಅದರಲ್ಲಿ ಒಂದು ತರಹದ ಕ್ಲಪ್ತತೆಯುಂಟಾ ಗುವದು. ಔಷಧೋಪಚಾರದಲ್ಲಿ ಗತಿಯಿದ್ದವನು ತತ್‌ಕ್ಷಣವೇ ರೋಗದ ಕಳೆಯನ್ನು ಕಂಡುಹಿಡಿಯುವನು. ಕಳ್ಳರನ್ನು ಹಿಡಿದುಕೊಡುವದರಲ್ಲಿ ನುರಿಪಡೆ ಹೊಂದಿದ ಫೌಜದಾರನು ಹೊಸ ಕಳ್ಳನನ್ನು ಹಿಡಿಯುವ ಉಪಾ ಯವನ್ನು ಶೀಘ್ರವೇ ಶೋಧಿಸುವನು. ಗಣಿತದಲ್ಲಿ ಗತಿಯಿದ್ದವನು ಹೊಸ ಲೆಕ್ಕವನ್ನು ನಿಮಿಷಮಾತ್ರದಲ್ಲಿ ಬಿಡಿಸಿಕೊಡುವನು. ಯಾವ ಯಾವ ವಿಷಯದಲ್ಲಿ ನಮ್ಮ ಮನಸ್ಸಿನ ವ್ಯವಹಾರವು ನಡೆಯುವದೋ

ಆಯಾಯ ವಿಷಯದಲ್ಲಿ ಆವರವರ ಅವಧಾನ ಶಕ್ತಿಗೆ ಅನುಗುಣವಾಗಿ ಪರಿಪೂರ್ಣತೆಯುಂಟಾಗುವದು.

ನಮಗೆ ಒಂದು ವಿಷಯದಲ್ಲಿ ಗತಿಯಿದ್ದರೆ ಅದನ್ನು ಮತ್ತೊಂದು ವಿಷಯಕ್ಕೆ ವರ್ಗೀಕರಣ ಮಾಡಲಿಕ್ಕೆ ಬರುವದಿಲ್ಲ. ಉದಾಹರಣಾರ್ಥ ಲಾಗಾ ಹೊಡೆಯುವದರಲ್ಲಿ ಗತಿಯುಳ್ಳ ಡೊಂಬನಿಗೆ ಮೋಟಾರ ನಡೆಯಿಸುವದರಲ್ಲಿಯೂ ಅದೇ ಗತಿಯುಂಟಾಗುವದೆಂದು ಹೇಳುವದು ನಗೆಗೇಡು. ಆದರೆ ಬಾವಿಯಲ್ಲಿ ಈಸಬಲ್ಲ ಮನುಷ್ಯನು ನದಿಯಲ್ಲಿಯೂ ಈಸಬಹುದು. ಅಂದರೆ ಒಂದು ವಿಷಯದಲ್ಲಿ ಗತಿಯುಂಟಾದ ಮನುಷ್ಯನು ಅದಕ್ಕೆ ಅನುರೂಪವಾದ ಬೇರೊಂದು ವಿಷಯದಲ್ಲೂ ಆ ಗತಿಯನ್ನು ಪಡೆಯಬಹುದು. ಆದರೆ ಭಿನ್ನವಾದ ಅನ್ಯ ವಿಷಯದಲ್ಲಿ ಅದೇ ಗತಿಯಾಗಲು ಶಕ್ಯವಿಲ್ಲ. ಆದುದರಿಂದ ನಿಷ್ಠೆಯಿಟ್ಟ ವಸ್ತುವಿನಲ್ಲಿ ತುಂಬಾ ಗತಿಯನ್ನು ಹೊಂದುವದೇ ಅವಧಾನ ಭಕ್ತಿಯ ಮುಖ್ಯ ಲಕ್ಷಣವು.

## ೪ ಅನುಭಾವಭಕ್ತಿ.

ಮನುಷ್ಯನು ಯಾವದಾದರೊಂದು ವಿಷಯದಲ್ಲಿ ಅವಧಾನಭಕ್ತಿಯಿಂದುಂಟಾದ ಸಾಮರ್ಥ್ಯವನ್ನು ಜಗತ್ತೆಂಬ ಒರೆಗಲ್ಲಿಗೆ ಹಚ್ಚಿ ಆಚರಿಸುವದೇ ಅನುಭಾವಭಕ್ತಿಯು. ಒಂದೇ ಗತಿಯುಳ್ಳ ಶಿವಶರಣರು ಹಿಂದಕ್ಕೆ ಶಿವಾನುಭವ ಮಂಟಪದಲ್ಲಿ ಕೂಡಿ ಪರಸ್ಪರ ವಿಚಾರ ವಿನಿಮಯ ಮಾಡಿ ನಾಗರಿಕ ಸಮಾಜದಲ್ಲಿ ಹೇಗೆ ವರ್ತಿಸಬೇಕೆಂಬದನ್ನು ತಿಳಿಸಿಹೇಳಿದರು. ಮತ್ತು ಹಾಗೆ ಆಚರಿಸಿ ತೋರಿಸಿದರು. ಧರ್ಮನೀತಿತತ್ವ ವಿಶಾರದನಾದವನು ವ್ಯವಹಾರದಲ್ಲಿ ಹೇಗೆ ನಡೆಯಬೇಕೆಂಬದನ್ನು ಸ್ವತಃ ಪ್ರಯೋಗಮಾಡಿ ಅರಿತುಕೊಳ್ಳುವನು. ಶಿಕ್ಷಣಶಾಸ್ತ್ರದಲ್ಲಿ ಗತಿಯುಳ್ಳವನು ವಿದ್ಯಾರ್ಥಿಗಳಿಗೆ ಕಲಿಸಿ ನೋಡಿ ಅನುಭವಪಡೆಯುವನು. ವೈದ್ಯಶಾಸ್ತ್ರದಲ್ಲಿ ನುರಿತವನು ರೋಗಿಗಳ ಪರೀಕ್ಷೆಮಾಡಿ ಅನುಭವ ಹೊಂದುವನು. ಇದೇ ಅನುಭಾವ ಭಕ್ತಿ ಎನಿಸುವದು.

ಮನುಷ್ಯನು ಒಂದು ವಿಷಯದಲ್ಲಿ ತನಗುಂಟಾದ ಗತಿಯನ್ನು ಜಗತ್ತಿನ ವ್ಯವಹಾರಕ್ಕೆ ಒರೆಹಚ್ಚಿ ನೋಡುವಾಗ ತನಗೆ ಯಾವ ಯಾವ ತೊಂದರೆಗಳು ಬರುತ್ತವೆಂಬದನ್ನು ಕಂಡುಹಿಡಿದು ಆ ತೊಂದರೆಗಳನ್ನು ನೀಗಲಿಕ್ಕೆ ಹೊಸ ಉಪಾಯಗಳಾವವೆಂಬದನ್ನು ಶೋಧಮಾಡಿ ಜಗತ್ತಿನ

ಜ್ಞಾನಭಾಂಡಾರಕ್ಕೆ ತನ್ನ ಅಳಲೀ ಭಕ್ತಿಯನ್ನು ಸಲ್ಲಿಸುವನು. ಈ ಜಗತ್ತಿನಲ್ಲಿ ನಾನಾವಿಧ ಶಾಸ್ತ್ರಗಳ ಬೆಳವಣಿಗೆಯಾಗಬೇಕಾದರೆ ಜಗತ್ತೆಂಬ ಪ್ರಯೋಗಶಾಲೆಯಲ್ಲಿ ಅನೇಕ ಪ್ರಯೋಗಗಳನ್ನು ಮಾಡಿಯೇತೀರಬೇಕಾಗುತ್ತದೆ. ಮನುಷ್ಯನು ಸ್ವತಃ ಎಷ್ಟೇ ಜಾಣನಿದ್ದರೂ ಜಗತ್ತಿನೆದುರಿಗೆ ತನ್ನ ಅನುಭವವನ್ನು ಪರೀಕ್ಷೆಗಿಟ್ಟಾಗ ಮಾತ್ರ ಅವನ ಬೆಳಕು ಹೊರಬೀಳುವದು. ಇದೇ ಅವನ ಪ್ರಗತಿಯ ಮುಂದಿನ ಮಾರ್ಗವು.

ನಮಗೆ ಯಾವದಾದರೊಂದು ವಿಷಯದ ಬಗ್ಗೆ ಅನುಭವವಾಗಬೇಕಾದರೆ ನಾವು ಮೂರು ವಿಷಯಗಳನ್ನು ಲಕ್ಷಿಸಬೇಕಾಗುತ್ತದೆ. ಅವು ಯಾವವೆಂದರೆ— ೧ ವಿಷಯಜ್ಞಾನ (*Cognition*) ೨ ಭಾವ (*affect*) ೩ ಪರಿಣಾಮ ಅಥವಾ ಕಾರ್ಯ (*conation*). ಉದಾಹರಣಾರ್ಥ "ಬೆಂಕಿಯು ಸುಡುತ್ತದೆ" ಎಂಬೀ ಅನುಭವವು ನಮಗಾಗಬೇಕಾದರೆ ಮೊದಲು ನಮಗೆ ಬೆಂಕಿಯೆಂಬ ವಸ್ತುವಿನ ಜ್ಞಾನವಾಗಬೇಕು. ಆ ಮೇಲೆ ಅದನ್ನು ಮುಟ್ಟಿನೋಡಿ ಅದು ಸುಡುತ್ತದೆಂಬ ಭಾವ ನಮಗುಂಟಾಗಬೇಕು. ಕೊನೆಗೆ ಬೆಂಕಿಯು ಸುಡುತ್ತದೆಂಬ ಅನುಭವವು ನಮಗೆ ಮನವರಿಕೆಯಾಗುವದು ಇದಕ್ಕೇ ಪರಿಣಾಮವೆನ್ನುವರು. ನಾವು ನಮಗುಂಟಾದ ವಿಷಯಜ್ಞಾನವನ್ನು ವ್ಯವಹಾರದಲ್ಲಿ ಉಪಯೋಗಿಸುತ್ತ ಹೋದಂತೆ ನಮಗೆ ಹೆಚ್ಚೆಚ್ಚು ಅನುಭವವಾಗುತ್ತ ಹೋಗುತ್ತದೆ.

ಅನುಭವವು ಪ್ರತ್ಯಕ್ಷಕಾರ್ಯದಲ್ಲಲ್ಲದೆ ಬರೇ ವಿಚಾರದಿಂದ ದೊರೆಯದು. ಲೋಕದಲ್ಲಿ ಭಿನ್ನ ಭಿನ್ನ ಪ್ರಕಾರದ ಅನುಭವವನ್ನು ಹೊಂದಲಪೇಕ್ಷಿಸುವವರಿಗೆ ಅನೇಕ ಸಾಧನಗಳಿವೆ. ವ್ಯಾಪಾರದಲ್ಲಿ ಅನುಭವ ಪಡೆಯಬೇಕೆಂಬುವವನು ವ್ಯಾಪಾರಸ್ಥರ ಸಹವಾಸ ಮಾಡುವನು. ಧಾರ್ಮಿಕ ವಿಷಯದಲ್ಲಿ ಅನುಭವ ಹೊಂದಲಪೇಕ್ಷೆಯುಳ್ಳವನು ಧರ್ಮಜ್ಞರಾದ ಮಹಾಪುರುಷರ ಸಂಗವನ್ನು ಸೇರುವನು, ನಾವು ಯಾವ ಯಾವ ವಿಷಯದಲ್ಲಿ ಜ್ಞಾನವನ್ನು ಹೊಂದಬೇಕೆನ್ನುತ್ತೇವೆಯೋ ಆಯಾಯ ವಿಷಯವಾಗಿ ಅನುಭವ ಹೊಂದಲು ಈ ಜಗತ್ತಿನಲ್ಲಿ ಬೇಕಾದಷ್ಟು ಕ್ಷೇತ್ರವಿದೆ. ಈ ವಿಶ್ವವು ಅಸಂಖ್ಯವಾದ ಅನುಭವಗಳ ತೊಡಕಿನಿಂದ ಹೆಣೆಯಲ್ಪಟ್ಟಿರುವದು. ಹಿಂದಿನ ಮಹಾವ್ಯಕ್ತಿಗಳು ಆಯಾಯ ವಿಷಯಗಳಲ್ಲಿ ತಮಗಾದ ಅನುಭವವನ್ನು ಬರೆದಿಟ್ಟಿದ್ದಾರೆ. ಅವುಗಳನ್ನು ನಾವು ತಿಳಿದು ವ್ಯವಹರಿಸಬೇಕು.

ಇದರ ಮೂಲಕ ನಮ್ಮ ಮನಸ್ಸು ಅತ್ಯಂತ ಸಾಮರ್ಥ್ಯವನ್ನು ಹೊಂದಿ ಅದರ ಪ್ರಕಾಶವು ಲಿಂಗರೂಪಾಗಿ ಹೊರಬೀಳಹತ್ತುವದು. ಇದೇ ಪ್ರಾಣ ಲಿಂಗಿ ಸ್ಥಲವೆನಿಸುವದು.

## ೫ ಸುಜ್ಞಾನಭಕ್ತಿ.

ಮನುಷ್ಯನಲ್ಲಿ ಅನುಭವವು ಹೆಚ್ಚಾಗುತ್ತ ಹೋದಂತೆ ಆತನ ಜ್ಞಾನ ಭಾಂಡಾರವಾದರೂ ಅಧಿಕವಾಗುತ್ತದೆ. ಜ್ಞಾನವೆಂದರೆ ಅನೇಕ ಅನುಭವಗಳ ಸಂಚಯವು. ನಾವು ಅನುಭವಗಳೆಂಬ ಇಟ್ಟಂಗಿಗಳ ಸಹಾಯದಿಂದ ಜ್ಞಾನವೆಂಬ ಮನೆಯನ್ನು ಕಟ್ಟಿಕೊಳ್ಳುತ್ತ ಸಾಗಿದ್ದೇವೆ. ನಮಗೆ ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಚಗಳೆಂಬ ಪಂಚೇಂದ್ರಿಯಗಳನ್ನು ದೇವರು ದಯಪಾಲಿಸಿದ್ದಾನೆ. ಅವು ಜ್ಞಾನದ ಮಹಾದ್ವಾರಗಳೆಂದು ತತ್ವಜ್ಞಾನಿಗಳು ಹೇಳುತ್ತಾರೆ. (*Senses are the gateways of knowledge*) ಮನುಷ್ಯನು ಚಿಕ್ಕವನಿದ್ದಾಗಿನಿಂದ ಇಂದ್ರಿಯ ಜನ್ಯವಾದ ಜ್ಞಾನವು ಉತ್ತರೋತ್ತರ ಅಧಿಕವಾಗುತ್ತ ಹೋಗಿ ಕಡೆಗೆ ಉದಾತ್ತಸ್ವರೂಪವನ್ನು ಹೊಂದುವದು.

ಈ ಇಂದ್ರಿಯ ಜನ್ಯವಾದ ಜ್ಞಾನವು ಸಾಮಾನ್ಯವಾಗಿ ಎಲ್ಲರಲ್ಲಿಯೂ ಇರುವದು. ಅದು ಪಶುಪಕ್ಷ್ಯಾದಿಗಳಲ್ಲಿಯೂ ಸಹ ಕಂಡುಬರುತ್ತಿದೆ. ನಮಗೆ ಸಪ್ಪಳದ ಜ್ಞಾನವಾಗುವಂತೆ ಪಶುಗಳಿಗೂ ಆಗುವದು. ನಮ್ಮ ಕಣ್ಣಿಗೆ ಗೋಚರವಾಗುವ ವಸ್ತುಗಳು ಪಶುಗಳ ಕಣ್ಣಿಗೂ ಬೀಳುವವು. ಆದರೆ ನಮಗೂ ಪಶುಗಳಿಗೂ ನಡುವಿರುವ ವ್ಯತ್ಯಾಸವಿಷ್ಟೇ. ನಾವು ಒಳಿತಾವುದು, ಕೆಡಕಾವುದು, ಜಗತ್ತಿನೊಡನೆ ಹೇಗೆ ವ್ಯವಹರಿಸಬೇಕು, ನಾಳಿನ ಆಲೋಚನೆಯೇನು, ಈ ನೊದಲಾದ ವಿಷಯಗಳನ್ನು ಕುರಿತು ಆಲೋಚಿಸುತ್ತೇವೆ. ಪಶುಗಳು ಹಾಗೆ ಮಾಡಲಸಮರ್ಥವಾಗಿರುತ್ತವೆ. ಅವುಗಳಿಗೆ ಇಂದ್ರಿಯ ಜನ್ಯಜ್ಞಾನ (*Perception*) ವು ಮಾತ್ರ ಇರುತ್ತದೆ; ಆದರೆ ವಿಚಾರಜನ್ಯಜ್ಞಾನ (*Reason*) ವಿರುವದಿಲ್ಲ. ಈ ವಿಚಾರಜನ್ಯಜ್ಞಾನವಾದರೂ ಸೋಸಿ ಸೋಸಿ ಶುದ್ಧವಾಗಿದ್ದರೆ ಅದೇ ಸುಜ್ಞಾನವೆನಿಸುತ್ತದೆ. ಸ್ತ್ರೀಯರನ್ನು ನೋಡಿ ಮೋಹಿಸುವದು ಸಾಮಾನ್ಯಜ್ಞಾನವು. ಸ್ತ್ರೀಯರನ್ನು ನೋಡಿಯೂ ಕೂಡ ವಿವೇಕದಿಂದ ಇಂದ್ರಿಯಗಳ ಪ್ರವೃತ್ತಿಯನ್ನು ತಡೆದು ಗಂಭೀರವಾಗಿರುವದು ಸುಜ್ಞಾನವು. ಪರಿಶುದ್ಧವಾದ ವಿಚಾರಜನ್ಯಜ್ಞಾನವೇ ವೀರಶೈವರು ಪ್ರತಿಪಾದಿಸುವ ಸುಜ್ಞಾನವು.

ಸುಜ್ಞಾನವು ಸಂಸ್ಕೃತಿ ಸಾಧಾರಣೆಗಳ ಲಕ್ಷಣವು. ಈಗ ಜಗತ್ತಿನ ತುಂಬ ಹರಡಿರುವ ಸುಧಾರಣೆಯೂ ಸಂಸ್ಕೃತಿಯೂ ಶಾಸ್ತ್ರಶೋಧಗಳೂ ಸುಜ್ಞಾನದ ಚಿಹ್ನಗಳಾಗಿವೆ. ಗಂಗಾನದಿಯ ಮುಖವು ಅನೇಕ ಪ್ರಕಾರವಾಗಿರುವಂತೆ ಸುಜ್ಞಾನಗಂಗೆಯ ಶಾಖೆಗಳಾದರೂ ಅನೇಕವಾಗಿರುವವು. ಉದಾಹರಣಾರ್ಥ ವ್ಯವಹಾರಜ್ಞಾನ, ರಾಜನೀತಿ, ಧರ್ಮಶಾಸ್ತ್ರ, ವಾಙ್ಮಯ ಇತ್ಯಾದಿ ವಿಷಯಗಳು ಜ್ಞಾನದ ಭಾಂಡಾರಗಳು ವೀರಶೈವ ಧರ್ಮದಲ್ಲಿ ನಡೆದಿರುವ ಆಚಾರವಿಚಾರಗಳೂ, ಕಸಬುಕಾಯಕಗಳೂ, ಪದ್ಧತಿಗಳೂ ಸುಜ್ಞಾನದ ಕುರುಹುಗಳಾಗಿವೆ.

ಒಂದು ಸಮಾಜವಾಗಲಿ ರಾಷ್ಟ್ರವಾಗಲಿ ಸುಜ್ಞವಾಗಿದೆಯೋ ಅಜ್ಞವಾಗಿದೆಯೋ ಎಂಬದನ್ನು ಪರೀಕ್ಷಿಸಬೇಕಾದರೆ ಬರೇ ಅಕ್ಷರಜ್ಞಾನವನ್ನು ಮಾತ್ರ ನಾವು ಪರೀಕ್ಷಿಸಕೂಡದು; ಅದರೊಳಗಿನ ದಿವ್ಯ ತತ್ವಗಳನ್ನೂ ಆಚಾರವಿಚಾರಗಳನ್ನೂ ಪರೀಕ್ಷಿಸಬೇಕಾಗುತ್ತದೆ. ಈ ದೃಷ್ಟಿಯಲ್ಲಿ ನಮ್ಮ ಶಿವಶರಣರು ಹಾಕಿಕೊಟ್ಟ ಮಾರ್ಗಗಳು ಜಗನ್ಮಾನ್ಯವಾಗಿವೆ.

## ೬ ಸಮರಸಭಕ್ತಿ.

ಮೇಲೆ ಹೇಳಿದ ಐದು ಭಕ್ತಿಗಳಲ್ಲಿ ಮೇಲಿನದು ಕೆಳಗಿನದರ ಸಾರವಾಗಿದ್ದು ಅದರಲ್ಲಿ ಕಟ್ಟಕಡೆಯ ಅಚ್ಚ ಸಾರವೇ ಸಮರಸಭಕ್ತಿಯೆನಿಸುತ್ತದೆ. ಕ್ಷೀರದೊಳಗಿನ ಘೃತದಂತೆಯೂ ಫಲದೊಳಗಿನ ರುಚಿಯಂತೆಯೂ ಕುಸುಮದೊಳಗಿನ ಗಂಧದಂತೆಯೂ ಸುಜ್ಞಾನದೊಳಗಡಗಿದ ಚಿದಾನಂದವೇ ಸಮರಸಭಕ್ತಿಯು. ಮನುಷ್ಯನು ಒಳ್ಳೆ ಸುಜ್ಞಾನಿಯಾಗಿ ತನ್ನ ಜ್ಞಾನದ ಮೂಲಕ ಉಂಟಾಗುವ ಆನಂದವೇ ಐಕ್ಯಸ್ಥಲವಾಗಿದೆ. ಅಜ್ಞಾನಿಗಳಿಗೂ ಆನಂದ ದೊರಕುವದು ಸುಜ್ಞಾನಿಗಳಿಗೂ ಲಭಿಸುವದು. ಆದರೆ ಸುಜ್ಞಾನಿಗಳ ಆನಂದವು ಅಜ್ಞಾನಿಗಳ ಆನಂದಕ್ಕಿಂತಲೂ ಅಧಿಕವಾದುದು. ಉದಾಹರಣಾರ್ಥ— ಕೊಲೆಮಾಡಿದ ಒಬ್ಬ ಅಜ್ಞಾನಿ ಮನುಷ್ಯನಿಗೆ ಯಾರಾದರೂ ಬುದ್ಧಿವಂತರು ನೂರು ಜನ ಗಣಂಗಳನ್ನು ತೃಪ್ತಿಪಡಿಸಿದರೆ ಕೊಲೆ ಮಾಡಿದ ಪಾಪವು ಹೋಗುತ್ತದೆಂದು ಹೇಳಿದರೆ ಆತನು ಹಾಗೆಯೇ ಮಾಡಿ ಆನಂದಪಡಬಹುದು. ಗ್ರಾಮದೇವತೆಗೆ ಒಂದು ಹೋತನ್ನು ಬಲಿಕೊಟ್ಟರೆ ನಿನ್ನ ಮೈಯ್ಯೊಳಗಿನ ರೋಗವು ನಿವಾರಣೆಯಾಗುವದೆಂದು ಒಬ್ಬ ಸಾಧುವು ಹೇಳಲು ಅಂಧಶ್ರದ್ಧೆಯುಳ್ಳ ಭಕ್ತನೊಬ್ಬನು ಹಾಗೆಯೇ ಮಾಡಿ ಆಕಸ್ಮಾತ್ ರೋಗವು ಗುಣವಾದರೆ

ಹಿಗ್ಗಬಹುದು. ಆದರೆ ಈ ಆನಂದವು ಆಯಾಯ ವ್ಯಕ್ತಿಗಳ ದೃಷ್ಟಿಯಲ್ಲಿ ಸರಿಯಾಗಿ ಕಂಡರೂ ಸುಜ್ಞರಾದವರಿಗೆ ಅದು ಕಾಲದಿಂದ ಚಟ್ಟದಂತಾಗುವದು.

ಸುಜ್ಞಾನಿಗಳಾದ ನಮ್ಮ ಶಿವಶರಣರು ಮೂಢ ನಂಬಿಗೆಯಿಂದ ಆನಂದಹೊಂದುವವರಾಗಿರಲಿಲ್ಲ. ಅವರ ಆನಂದವು ಉಜ್ವಲವಾದುದು. ಉದಾತ್ತವಾದುದು, ಗಂಭೀರವಾದುದು. ಅವರು ತಮ್ಮ ಸುಜ್ಞಾನದ ಬಲದಿಂದ ಶ್ರೇಷ್ಠತರಗತಿಯ ಧರ್ಮನೀತಿ ತತ್ವಗಳನ್ನು ವಚನ ವಾಙ್ಮಯದ ಮುಖಾಂತರವಾಗಿ ಜಗತ್ತಿನಲ್ಲಿ ಹರಡಿ ಅದರಂತೆ ಆಚರಿಸಿ ಆನಂದವನ್ನನುಭವಿಸಿದರು. ಒಬ್ಬರ ಗೋಣು ಮುರಿದು ದುಡ್ಡು ತಿಂದು ಆನಂದಬಡುವ ಅಜ್ಞಾನಿಗಿಂತಲೂ ಸತ್ಕಾರ್ಯಕ್ಕೆ ದುಡ್ಡು ಸೂರೆ ಮಾಡಿ ಆನಂದಬಡುವ ಸುಜ್ಞಾನಿಯು ಶ್ರೇಷ್ಠನಲ್ಲವೇ? ಲಿಂಗಪೂಜೆ ಮಾಡಿದರೆ ತನಗೆ ದ್ರವ್ಯ ಸಂತಾನ ಲಾಭವಾಗುವದೆಂದು ಲಿಂಗವನ್ನು ಪತ್ರಿ ಪುಷ್ಪಾದಿಗಳಿಂದ ಆರಾಧಿಸುವ ಅಜ್ಞಾನಯುತನಾದ ವ್ಯಾಪಾರಿ ಭಕ್ತನಿಗಿಂತಲೂ ನಿರ್ಮಲಾಂತಃಕರಣದಿಂದ ಪ್ರತಿಫಲಾಪೇಕ್ಷೆಯಿಲ್ಲದೆ ಆನಂದಾಶ್ರುಗಳನ್ನು ಸುರಿಸುತ್ತ ಲೋಲಾಡುವ ಸುಜ್ಞಾನಿ ಭಕ್ತನು ಎಷ್ಟೋಪಟ್ಟು ಮಿಗಿಲಲ್ಲವೇ? ನಮ್ಮ ಶಿವಶರಣರು ನಿಜವಾಗಿಯೂ ಸುಜ್ಞಾನ ಭಕ್ತರು.

ಅಜ್ಞಾನದಿಂದ ಆನಂದವಾಗುತ್ತಿದ್ದರೆ ಜಾಣರಾಗುವದು ಹುಚ್ಚುತನವೆಂದು ಒಬ್ಬ ಆಂಗ್ಲಕವಿಯು ಹೇಳಿದ್ದಾನೆ. (*If ignorance is bliss, it is folly to be wise*). ಆದರೆ ಬಡವರು ರೊಟ್ಟಿ ಚಟ್ನಿಯನ್ನು ತಿಂದೇ ಆನಂದಬಡುತ್ತಾರೆಂದು ತಿಳಿದು ಅವರಿಗೆ ಚಪಾತಿ ಸಕ್ಕರೆಯ ಸವಿಯನ್ನು ತೋರಿಸಬಾರದೆಂದು ಹೇಳುವದು ಮತ್ತಿಷ್ಟು ತಿಳಿಗೇಡಿತನವಲ್ಲವೇ? ಅಜ್ಞಾನದಿಂದ ಆನಂದವನ್ನು ಹೊಂದುವದು ತೀರ ಕಾಡಪದ್ಧತಿಯು. ಮೌಜು, ಮಜಲು, ಗಾನ, ಬಜಂತ್ರಿಗಳಿಂದ ಅಜ್ಞರು ಆನಂದಬಡುತ್ತಿದ್ದರೆ ಅದು ಆಯಾಯ ಕಲೆಯನ್ನರಿತು ಅನುಭವಿಸಿದ ಆನಂದವಲ್ಲ. ಏನೋ ಒಂದು ಕುತೂಹಲದಿಂದ ಪಡೆದ ಆನಂದವು; ಅದರಲ್ಲಿ ಅಷ್ಟು ಸ್ವಾರಸ್ಯವಿರುವದಿಲ್ಲ. ಅರಿದು ಅನುಭವಿಸಿದ ಆನಂದದಲ್ಲಿ ಹೆಚ್ಚಿಗೆ ಸ್ವಾದವಿರುತ್ತದೆ.

ಅಜ್ಞಾನಿಗಳಿಗೆ ದಿವ್ಯ ಜ್ಞಾನವನ್ನುಂಟುಮಾಡಿ ಆ ಮೂಲಕ ಅವರಲ್ಲಿ ನಿರ್ಮಲಾನಂದವನ್ನು ಹುಟ್ಟಿಸುವದು ಸುಜ್ಞಾನಿಗಳಿಗೆ ಪರಮಭೂಷ

ಣವು. ಆದರೆ ಸುಜ್ಞಾನಿಗಳೆನಿಸಿಕೊಳ್ಳುವವರು ಅಜ್ಞಾನಿಗಳ ಭಾವಿಕತನದ ದುರುಪಯೋಗವನ್ನು ಹೊಂದುತ್ತ ಸೊಬಗಿನಿಂದ ಅಂದಣದಲ್ಲಿ ಮೆರೆದಾಡುವದು ಲಾಂಛನಾಸ್ಪದವು. ನಮ್ಮ ಶಿವಶರಣರು ಅಜ್ಞರಾದ ಜನಸಾಮಾನ್ಯರನ್ನು ತಮ್ಮ ವಚನಗಳ ಬಲದಿಂದ ಸುಜ್ಞಾನದ ಸ್ಥಿತಿಗೊಯ್ದು ಅವರಲ್ಲಿ ನಿಜಾನಂದವನ್ನುಂಟುಮಾಡುತ್ತಿದ್ದುದು ಬಹು ಸಂತೋಷದ ಸಂಗತಿಯಾಗಿದೆ.

ಇಲ್ಲಿಯವರೆಗೆ ವಿವರಿಸಲ್ಪಟ್ಟ ಷಡ್ವಿಧ ಭಕ್ತಿಗಳನ್ನು ನೋಡಿದರೆ ಅವು ಆಧುನಿಕ ಮಾನಸಶಾಸ್ತ್ರ (*Modern Psychology*) ದೊಳಗಿನ ತತ್ವಗಳನ್ನೇ ಪ್ರತಿಪಾದಿಸುವವೋ ಏನೋ ಎಂಬಂತೆ ಭಾಸವಾಗುವದು. ಮನಸ್ಸಿನ ವಿಕಾಸವು ಕ್ರಮದಿಂದ ಹೇಗೆ ಬೆಳೆಯುತ್ತದೆಂಬದನ್ನು ಮಾನಸಶಾಸ್ತ್ರವು ಹೇಳುವಂತೆ ನಮ್ಮ ಷಟ್‌ಸ್ಥಲಶಾಸ್ತ್ರವು ಆರುವಿಧ ಭಕ್ತಿಗಳ ಮುಖಾಂತರವಾಗಿ ಮನೋವಿಕಾಸವನ್ನು ಪ್ರತಿಪಾದಿಸುತ್ತಿದೆ.

---

# ಜಂಗಮ.

(ಲೇಖಕರು:— ರಾ. ರಾ. ಕಲ್ಯಾಣಪ್ಪ ಬ್ಯಾಳಿ ಬಿ. ಏ ವಿಜಾಪುರ.)

ವಾ. ಷ. ನರನೆಂಬೆ ನರನಲ್ಲ ಹರನೆಂಬೆ ಹರನಲ್ಲ
ನರರೂಪಮಂ ತೋರಿ ಹರನಾಗಿ ನಲಿಯುವನು
ಪರಿಪರಿಯ ಕಷ್ಟಗಳ ಪರಿಹರಿಸಬೇಕೆಂದು ಸಂಚರಿಪನೀ ಧಾತ್ರಿಯೋಳ್ ।
ಪರಕಿಸುತಲೋಗರಾಚಾರ ಸದ್ಭಕ್ತಿಯನು
ನರಪಾಪ ಪುಣ್ಯಗಳಿಗನುಸರಿಸಿ ಫಲವಿತ್ತು
ಮೆರೆವ ವರಚರಮೂರ್ತಿಯಡಿಗಳ್ಗೆ ಪೊಡಮಡುವೆ ಪರಮ ಸದ್ಭಕ್ತಿಯಿಂದ ॥

ಜಂಗಮವು ಅಷ್ಟಾವರಣಗಳಲ್ಲಿ ಮೂರನೆಯದು. ಜಂಗಮವೆಂದರೇನು? ಜಂಗಮವೆಂದರೆ ಜ್ಞಾನಮೂರ್ತಿಯು. ಮೋಕ್ಷಕ್ಕೆ ಸಾಧನೀ

ಭೂತವಾದ ಜ್ಞಾನೋಪದೇಶ ಮಾಡುವವನು ಗುರುವೆಂದು ಕೆಲವರು ಗ್ರಹಿಸುತ್ತಾರೆ. ಉಪದೇಶಕನು ಗುರ ವೇನೋ ಅಹುದು. ಆದರೆ ಮೋಕ್ಷಕ್ಕೆ ಕಾರಣವಾದ ಜ್ಞಾನವೇ ಜಂಗಮವೆನಿಸಿಕೊಳ್ಳುತ್ತದೆ. ಈ ಜಗತ್ತಿನಲ್ಲಿ ಎಲ್ಲಕ್ಕೂ ಜ್ಞಾನವೇ ಶ್ರೇಷ್ಠವಾದುದು. ಶ್ರೀ ಭಗವದ್ಗೀತೆಯಲ್ಲಿ "ನ ಹಿ ಜ್ಞಾನೇನ ಸದೃಶಂ ಪವಿತ್ರ ಮಿಹ ವಿದ್ಯತೆ" ಎಂಬುದಾಗಿಯೂ ಸಿದ್ಧಾಂತ ಶಿಖಾಮಣಿಯಲ್ಲಿ 'ಸರ್ವಂ ಚಿದ್ರೂಪ ವಿಜ್ಞಾನಾಜ್ಜಂಗಮಾಧಿಕ್ಯ ಮುಚ್ಯತೇ' ಎಂದುದಾಗಿಯೂ ಹೇಳಿರುವದರಿಂದ ಜ್ಞಾನವೇ ಅಧಿಕವಾದುದೆಂದು ಸ್ಪಷ್ಟ ವಾಗುತ್ತದೆ. ವೀರಶೈವರು ಜ್ಞಾನಕ್ಕೇನೇ ಹೆಚ್ಚು ಪ್ರಾಶಸ್ತ್ಯಯನ್ನು ಕೊಟ್ಟಿರುವರು. ಕರ್ಮ, ಭಕ್ತಿ, ಯೋಗಮಾರ್ಗಗಳಿಂದ ಮೋಕ್ಷವು ದೊರೆಯುತ್ತಿದ್ದಾಗ್ಯೂ ಅವೆಲ್ಲವುಗಳಿಗಿಂತಲೂ ಸರ್ವೋತ್ಕೃಷ್ಟವಾದುದು ಜ್ಞಾನವೆಂದು ತಿಳಿದೇ ಬಸವಾದಿ ಪ್ರಮಥರ ಕಾಲದಲ್ಲಿ ಕೇವಲ ಷಟ್‌ಸ್ಥಲ ಜ್ಞಾನಸಂಪನ್ನರಾದ ಶ್ರೀ ಅಲ್ಲಮಪ್ರಭುದೇವರು ಹಾಗೂ ಶ್ರೀ ಚನ್ನಬಸವಣ್ಣನವರಿಗೆ ಎಲ್ಲ ಶಿವಶರಣರು ಶಿರಬಾಗಿ ಷಟ್‌ಸ್ಥಲ ಜ್ಞಾನಸಂಪಾದನೆಯನ್ನು ಮಾಡಿಕೊಂಡರು.

ಕರ್ಮ, ಭಕ್ತಿ, ಜ್ಞಾನ, ಯೋಗ ಈ ನಾಲ್ಕು ಮೋಕ್ಷ ಮಾರ್ಗಗಳಲ್ಲಿ ಭಕ್ತಿ ಜ್ಞಾನ ಮಾರ್ಗಗಳು ಮೇಲ್ತರದವು; ಉಳಿದವೆರಡೂ ಮಧ್ಯಮವು. ಭಕ್ತಿಯಿಂದ ಭಾವನೆಯು ಬಲಿಯುತ್ತದೆ. ಜ್ಞಾನದಿಂದ ಆನಂದವು ಲಭಿಸುತ್ತದೆ. ವಿಶೇಷತಃ ಜನರು ಇವೆರಡನ್ನೇ ಹೆಚ್ಚಾಗಿ ಅನುಸರಿಸುತ್ತಿರುವರು. ಉಳಿದವೆರಡು ಮಾರ್ಗಗಳನ್ನನುಸರಿಸುವಂಥವರು ಕಡಿಮೆ

ಈ ಭಕ್ತಿಜ್ಞಾನಗಳಲ್ಲಿ ಭಕ್ತಿಯು ಮೊದಲನೆಯ ಸ್ಥಿತಿಯು. ಜ್ಞಾನವು ಅದರ ಪರಿಪಕ್ವ ಸ್ಥಿತಿಯು ಭಕ್ತಿಯು ನಿಷ್ಕಲಂಕವಾದ ಶೈಶವವು. ಜ್ಞಾನವು ಅನುಭವಪೂರಿತವಾದ ವಾರ್ಧಕ್ಯವು. ಭಕ್ತಿಯು ಕೋಮಲವಾದ ಮಿಡಿಯು ಜ್ಞಾನವು ಪರಿಪಕ್ವವಾದ ಫಲವು. ಭಕ್ತಿಯು ಅತಿರೇಕವಾಗಿ ಜ್ಞಾನರೂಪದಿಂದ ಪರಿಣಮಿಸುತ್ತದೆ. ಕೆಲವರು ಭಕ್ತಿಯಲ್ಲಿಯೇ ಅಗ್ರಗಣ್ಯರಾಗಿ ಜಗತ್ತಿನಲ್ಲಿ ಬೆಳಗುವರು. ಶ್ರೀಮಾರುತಿ, ಚೈತನ್ಯ, ಕಬೀರ, ತುಕಾರಾಮ, ರಾಮದಾಸ, ಬಸವೇಶ್ವರ ಮುಂತಾದವರೆಲ್ಲರು ಭಕ್ತಾಗ್ರೇಸರರು. ಸಾಮಾನ್ಯವಾಗಿ ಭಕ್ತಿಯೇ ವಿಶೇಷತಃ ಜನಸಮುದಾಯಕ್ಕೆ ಪ್ರಿಯಕರವಾಗಿ ಕಾಣುವದು. ಅಂತೆಯೇ ಭಕ್ತಶ್ರೇಷ್ಠರಾದ ಶ್ರೀ ಬಸವಣ್ಣನವರು ತಮ್ಮ ಭಾವನಾಪ್ರಾಧಾನ್ಯದಿಂದ ಶ್ರೀ ಅಲ್ಲಮಪ್ರಭು ಚನ್ನಬಸವಣ್ಣನವರಿಗಿಂತಲೂ ಹೆಚ್ಚು ಕೀರ್ತಿಯನ್ನು ಪಡೆದರು.

ಭಕ್ತಜಂಗಮರ ಯೋಗ್ಯತೆಯನ್ನು ಅವರವರ ಗುಣಕರ್ಮಸ್ವಭಾವ ನಾದಿಗಳಿಂದಲೇ ನಿರ್ಧರಿಸಬೇಕಲ್ಲದೆ ಜಾತಿಯಿಂದ ಸರ್ವಥಾ ನಿರ್ಣಯಿಸಲಾಗದು. ಭಕ್ತಿಯಿಂದ ಮೋಕ್ಷ ಪಡೆಯುವದೆಂದರೆ ಎಳೆಮಿಡಿಯನ್ನು ಕೊಯ್ದು ತಿಂದು ಸಂತೋಷಬಡುವಂತೆ. ಜ್ಞಾನದಿಂದ ಮೋಕ್ಷ ಪಡೆಯುವದೆಂದರೆ ಪರಿಪಕ್ವವಾದ ಫಲವನ್ನು ಸೇವಿಸಿದಂತೆ. ಇದನ್ನರಿತೇ ನಮ್ಮ ಪೂರ್ವಜರು ಭಕ್ತಿಗಿಂತ ಜ್ಞಾನಕ್ಕೇನೇ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟಿರುವರು. ಆ ಜ್ಞಾನಮೂರ್ತಿಯೇ ಜಂಗಮವು.

" ಸರ್ವಲೋಕೋಪಕಾರಾಯ ಯೋ ದೇವಃ ಪರಮೇಶ್ವರಃ ।
ಚರತ್ಯತಿಥಿ ರೂಪೇಣ ನಮಸ್ತೇ ಜಂಗಮಾತ್ಮನೇ " ॥

ಅಂದರೆ ಸಾಕ್ಷಾತ್ ಪರಮಾತ್ಮನು ಜಂಗಮಮೂರ್ತಿಯಾಗಿ ಅತಿಥಿರೂಪದಿಂದ ಜಗತ್ತಿನ ಎಲ್ಲ ಪ್ರಾಣಿಗಳ ಉಪಕಾರಾರ್ಥವಾಗಿ ಸಂಚರಿಸುತ್ತಿರುವನೆಂದು ವೀರಶೈವ ಗ್ರಂಥಗಳಲ್ಲಿ ಪ್ರತಿಪಾದಿಸಿದೆ. ಇರುವೆ ಮೊದಲ್ಗೊಂಡು ಆನೆಯ ವರೆಗಿನ ಯಾವತ್ತೂ ಜೀವರಾಶಿಗಳಿಗೆಲ್ಲ ಲೇಸನೇ ಮಾಡುವಂಥವನೇ ಜಂಗಮನು. ಯೇಸುಕ್ರೈಸ್ತನು "ನಾನು ಸುಖಿಗಳ ಸ್ನೇಹಿತಿ ಹಿಡಿಯಲಿಕ್ಕೆ ಹುಟ್ಟಿಲ್ಲ ಆದರೆ ಪತಿತರನ್ನು ಪಾವನರನ್ನಾಗಿಮಾಡಲು ಜನ್ಮವೆತ್ತಿರುವೆನು " ಎಂದು ಹೇಳಿದ್ದಾನೆ. ಅದೇ ಪ್ರಕಾರ ಜಂಗಮರು ಜಗತ್ತಿನಲ್ಲಿ ಸಂಚರಿಸಿ ಎಲ್ಲ ಜೀವರಾಶಿಗಳ ಕಷ್ಟಗಳನ್ನು ದೂರಮಾಡುವವರು. ಕ್ರಿಸ್ತನು ತನ್ನ ಶಿಷ್ಯರಿಗೆ ' ಹಸಿದವರಿಗೆ ಅನ್ನವನ್ನಿಕ್ಕು; ಬತ್ತಲೆ ಇದ್ದವರಿಗೆ ವಸ್ತ್ರವನ್ನು ಕೊಡು; ರೋಗಗ್ರಸ್ತರ ಆರೈಕೆ ಮಾಡು; ಬಳಲುವವರನ್ನು ಸಮಾಧಾನಪಡಿಸು ' ಎಂದುಪದೇಶಿಸಿದನು. ಆ ಮೇರೆಗೆ ಕ್ರಿಸ್ತನ ಶಿಷ್ಯರು ಜಗತ್ತಿನಲ್ಲಿ ಸಂಚರಿಸಿ ಮಾನವಪ್ರಾಣಿಗಳಿಗೆ ಹಿತವನ್ನು ಮಾಡುವಂತೆ ಜಂಗಮರಾದರೂ ಲೋಕಸಂಗ್ರಹ ಕಾರ್ಯ ಮಾಡುವದರಲ್ಲಿಯೇ ಆನಂದಬಡುವಂಥವರು ' ಲಿಂಗಪೂಜೆಯ ಮಾಡುವೆನಯ್ಯಾ ಜಂಗಮವ ಕಾಂಬುವುದಕೆ ' ಎಂದು ಮಹನೀಯರು ಹಾಡಿಕೊಂಡಿರುವರು. ಆದರೆ ಜಂಗಮವಾಗಿ ಪ್ರಾಣಿಗಳ ಹಿತವನ್ನು ನೋಡದಿದ್ದರೆ ಲಿಂಗಪೂಜೆ ಮಾಡಿದ್ದು ವ್ಯರ್ಥ. ಬರೀ ಕಾವೀಲಾಂಛನ, ಪಾದುಕೆ, ಯೋಗದಂಡ, ಕಮಂಡಲು, ವೇತ್ರದಂಡ ಮುಂತಾದ ಪಂಚ ಲಕ್ಷಣಗಳಿಂದ ಕೂಡಿಕೊಂಡು ಒತ್ತಟ್ಟಿಗೆ ಮೂಲೆಯಲ್ಲಿ ಕುಳಿತುಕೊಂಡು ಲಿಂಗಪೂಜೆ ಮಾಡಿ ಮಠಮಾನ್ಯಗಳಿಗಾಗಿ ಹೊಡೆದಾಡುತ್ತ ಕುಳಿತುಕೊಳ್ಳುವ

ವರೆಂದಿಗೂ ಜಂಗಮರಾಗಲಾರರು. ಯಾವ ಪರಹಿತದ ಕಾರ್ಯವನ್ನೂ ಮಾಡದೆ ಬರೇ ಲಾಂಛನದಿಂದ ಪರಿಶೋಭಿಸುವವರು ಜಂಗಮರ ಸೋಗು ಗಳಲ್ಲದೆ ನಿಜವಾದ ಜಂಗಮರಲ್ಲ. 'ಲಾಂಛನಕ್ಕೆ ಶರಣೆಂಬೆ; ಲಾಂಛ ನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ ಕೂಡಲಸಂಗಮದೇವಾ. ನೀ ಸಾಕ್ಷಿ ಯಾಗಿ ಛೀ ಎಂಬೆನೆಂ'ದು ಶ್ರೀ ಬಸವಣ್ಣನವರು ಕೇವಲ ವೇಷಧಾರಿಗ ಳನ್ನು ಹೀಯಾಳಿಸಿರುವರು.

ಗುರು ಜಂಗಮರಲ್ಲಿ ಭೇದವೇನು? ಗುರುವೆಂದರೆ ಮೋಕ್ಷಕ್ಕೆ ಸಾ ಧನೀಭೂತವಾದ ಕ್ರಿಯಾ ಜ್ಞಾನಗಳನ್ನು ತಾನು ತಿಳಿದುಕೊಂಡು ಅವನ್ನೇ ಭಕ್ತಾದಿಗಳಿಗುಪದೇಶಿಸಿ ಮೋಕ್ಷದ ಮಾರ್ಗವನ್ನು ತೋರಿಸುವಂಥವನು. ಆದರೆ ಜಂಗಮನು ಸ್ವಾನುಭಾವಿಯಾಗಿ ಮೂರ್ತಿಮಂತ ಜ್ಞಾನವೇ ತಾ ನಾಗಿದ್ದುಕೊಂಡು ಅನ್ಯರಿಗೆ ಅನುಕರಣೀಯ ಮೂರ್ತಿಯಾಗಿರುವನು. ಮೋಕ್ಷ ಪಡೆಯಬೇಕೆಂಬಪೇಕ್ಷೆಯುಳ್ಳವರು ಗುರೂಪದೇಶ ಕೇಳಬೇಕು. ಅಥವಾ ಜಂಗಮವನ್ನು ಅನುಕರಣ ಮಾಡಬೇಕು. ಗುರುವಿಗೆ ಧರ್ಮ ತತ್ವಗಳೆಲ್ಲ ತಿಳಿದಿರಬಹುದು. ಆದರೆ ಅವು ಸ್ವಾನುಭವದಿಂದ ಆಚಾರ ದಲ್ಲಳವಟ್ಟಿರುವದು ಅವಶ್ಯವು. ಜಂಗಮವು ಎಲ್ಲ ತತ್ವಗಳನ್ನು ಅನುಭ ವಿಸಿ ಆಚರಿಸಿದಂಥವನು ಒಬ್ಬನಿಗೆ ಗುರುವಾದವನು ಇನ್ನೊಬ್ಬನಿಗೆ ಗುರುವಾಗಲಿಕ್ಕಿಲ್ಲ. ಆದರೆ ಜಂಗಮವು ಜಗದ್ಗುರುವು. ಇಂತಿಷ್ಟು ಕ್ಷೇತ್ರ ಜನಸಂಖ್ಯೆಗೆ ಗುರುವಾದವನು ಬೇರೆ ಕಡೆಯಲ್ಲಿ ಗುರುವೆಂದು ತಿಳಿಯ ಲ್ಪಡಲಿಕ್ಕಿಲ್ಲ. ಆದರೆ ಜಂಗಮವು ಹೋದ ಹೋದಲ್ಲಿ ಪೂಜಿಸಲ್ಪಡುವದು. ಗುರುವು ತನ್ನ ಸೂತ್ರಗೋತ್ರದವರಿಗಷ್ಟೇ ಪೂಜ್ಯನು. ಜಂಗಮವು ಎಲ್ಲ ಸೂತ್ರಗೋತ್ರಗಳಿಗೂ ಪೂಜ್ಯನು. ಗುರುವು ಕೆಲವು ನಿಯಮಗಳಿಂದ ಬದ್ಧನಾಗಿರುವನು. ಆದರೆ ಜಂಗಮವು ನಿರಾಭಾರಿಯೂ ನಿರ್ಲಿಪ್ತನೂ ಆಗಿರುವನು ಗುರುಗಳಲ್ಲಿ ತಾರತಮ್ಯಗಳಿರುವವು. ಮಠಸ್ಥರಿಗಿಂತ, ಪಟ್ಟದ್ದೇವರು; ಪಟ್ಟದ್ದೇವರುಗಳಿಗಿಂತ ಪಂಚಪೀಠಾಚಾರ್ಯರು ಹೆಚ್ಚೆಂದು ಭಾವಿಸಲ್ಪಡುತ್ತಿದ್ದಾರೆ. ಆಯಾ ತರಗತಿಗಳ ಮೇಲಿಂದ ಅವರಿಗೆ ಮಾನ ಮರ್ಯಾದೆಗಳು ದೊರೆಯುತ್ತವೆ. ಆದರೆ ಜಂಗಮದಲ್ಲಿ ಭಿನ್ನ ಭೇದ ವಿಲ್ಲ. ನಿರಂಜನ ಮೂರ್ತಿಗಳೆಲ್ಲರೂ ಸರಿ ಸಮಾನರೇ. ಆದುದರಿಂದ ಒಬ್ಬ ಜಂಗಮವು ಮತ್ತೊಂದು ಜಂಗಮವನ್ನು ಕಂಡರೆ ಪರಸ್ಪರ ಸಾ ಷ್ಟಾಂಗ ಹಾಕುವದುಂಟು. ಅರಸರು ತಮ್ಮ ತಮ್ಮ ದೇಶಗಳಲ್ಲಿ ಮಾನ

ಮನ್ನಣೆ ಹೊಂದುವಂತೆ ಗುರುಗಳು ಮರ್ಯಾದಿತವಾದ ತಮ್ಮ ಕ್ಷೇತ್ರದಲ್ಲಿಯೇ ಮನ್ನಿಸಲ್ಪಡುವರು. ಆದರೆ ವಿದ್ವಾಂಸರು ಎಲ್ಲಿ ಹೋದಲ್ಲಿ ಗೌರವಿಸಲ್ಪಡುವಂತೆ ನಿರಂಜನ ಮೂರ್ತಿಗಳಾದ ಜಂಗಮರು ವಂದಿಸಲ್ಪಡುವರು. ಜಂಗಮರು ಗುರುಗಳಂತೆ ಮಠ ಮಾನ್ಯ ದೀಕ್ಷೆ ಸಂಸ್ಕಾರ ಮುಂತಾದ ಕರ್ತವ್ಯಗಳಿಂದ ಬದ್ಧರಾಗಿರುವದಿಲ್ಲ. ಅವರು ನಿಸ್ಪೃಹಿಗಳು. 'ನಿಸ್ಪೃಹಸ್ಯ ತೃಣಂ ಜಗತ್'. ನಿಸ್ಪೃಹಿಗಳಾದವರಿಗೆ ಈ ಜಗತ್ತೇ ತೃಣಸಮಾನವು. ಗುರುಗಳ ಹಂಗಿನಲ್ಲಿ ಭಕ್ತರೂ ಭಕ್ತರ ಹಂಗಿನಲ್ಲಿ ಗುರುಗಳೂ ಇರುವರು. ಆದರೆ ಜಂಗಮರಿಗೆ ಯಾರ ಹಂಗೂ ಇಲ್ಲ. ಅವರಿಗೆ ಶಿವನದೊಂದೇ ಹಂಗು. ಜಂಗಮರಿಗೆ ಭಕ್ತರು ಭಕ್ತಿಪೂರ್ವಕವಾಗಿ ಕೊಟ್ಟರೆ ಶಿವನ ಅಪ್ಪಣೆಯೆಂದು ತಿಳಿದು ಅದನ್ನು ಸ್ವೀಕರಿಸಬಹುದು. ಕೊಡದಿದ್ದರೆ ಸಂತೋಷದಿಂದ ಬಿಡಬಹುದು. ಒಂದು ವೇಳೆ ಕೊಟ್ಟರೂ ನಿರಾಕರಿಸಬಹುದು. ಹಾಗೆ ಮಾಡುವದು ವಿರಕ್ತರಿಗೆ ಒಪ್ಪುತ್ತದೆ. ಕೊಟ್ಟರೆ ಬಿಡುವಂಥವರು ಮಹಾ ವೈರಾಗ್ಯ ಶಾಲಿಗಳು. ಆದರೆ ಗುರುಗಳು ಅಧಿಕಾರಸ್ಥರು. ಅವರು ಸಮಾಜೋದ್ಧಾರದ ಕೆಲಸ ಮಾಡುವರೆಂದು ತಿಳಿದು ಸಮಾಜವು ಅವರಿಗೆ ಆ ಅಧಿಕಾರಗಳನ್ನು ಕೊಟ್ಟಿದೆ. ಸರಕಾರದಲ್ಲಿ ಉತ್ತರೋತ್ತರ ನೌಕರರ ಕ್ರಮವಿರುವಂತೆ ಸಮಾಜದಲ್ಲಿ ಗುರುಗಳ ಕ್ರಮವಿರುವದು. ಸಮಾಜ ಬಂಧುರತೆಗೆ ಗುರುಗಳು ಬೇಕು. ಆಧ್ಯಾತ್ಮಿಕ ಪ್ರಗತಿಗೆ ಜಂಗಮರು ಬೇಕು. ಗುರು ಜಂಗಮಗಳೆರಡೂ ಸಮಾಜದ ದೊಡ್ಡ ಆಧಾರಸ್ತಂಭಗಳಾಗಿವೆ. ಆದರೆ ಸ್ವಾರ್ಥ ದೃಷ್ಟಿಯಿಂದ ಪರಸ್ಪರ ಹೊಡೆದಾಡುವ ಮರುಕ ಕಂಭಗಳು ನಮಗೆ ಬೇಡ. ಗುರುವಿನ ಕಾರ್ಯ ಕ್ಷೇತ್ರವು ಸಮಾಜದ ಶುಭಾಶುಭ ಕಾರ್ಯಗಳಿಗೂ, ದೀಕ್ಷಾದಿ ಸಂಸ್ಕಾರಗಳಿಗೂ, ಶಿಕ್ಷಣ ಸುಧಾರಣೆಗಳಿಗೂ, ಶಾಂತತೆ ಸುವ್ಯವಸ್ಥೆಗಳಿಗೂ ಮರ್ಯಾದಿತವಾಗಿದೆ. ಆದರೆ ಜಂಗಮದ ಕಾರ್ಯ ಕ್ಷೇತ್ರವು ಮಾನವರ ಆಧ್ಯಾತ್ಮಿಕ ಬೆಳವಣಿಗೆಗಾಗಿಯೂ ಲೋಕಸಂಗ್ರಹ ಕಾರ್ಯಕ್ಕಾಗಿಯೂ ಸಂಬಂಧಪಟ್ಟಿರುತ್ತದೆ. ಧರ್ಮ ರಕ್ಷಣೆ ಸಮಾಜೋದ್ಧಾರದ ಕೆಲಸಗಳು ಗುರುವಿನವು. ಧರ್ಮ ಜಾಗ್ರತೆ ಪರೋಪಕಾರಗಳು ಜಂಗಮರವು.

ಜಂಗಮದಲ್ಲಿ ಎಷ್ಟು ಪ್ರಕಾರಗಳುಂಟು? ಜಂಗಮವು ಒಂದೇ ಇದ್ದಾಗ್ಯೂ ಕಾರ್ಯಾಂತರದಿಂದ ಮೂರು ಪ್ರಕಾರಗಳನ್ನು ಕಲ್ಪಿಸಿದ್ದಾರೆ.

ಅವು ಯಾವವೆಂದರೆ ಸ್ಥಿರ, ಚರ, ಪರ. ಸ್ಥಿರ ಜಂಗಮರು ಮಠಗಳಲ್ಲಿ ಸ್ಥಾಯಿಯಾಗಿದ್ದುಕೊಂಡು ಬಂದಂಥ ಭಕ್ತಾದಿಗಳಿಗೆ ಉಪದೇಶಮಾಡು ವವರು; ಮತ್ತು ಅವರ ಕಷ್ಟಗಳನ್ನು ದೂರಮಾಡುವವರು. ಚರಜಂಗ ಮರೆಂದರೆ ದೇಶ ವಿದೇಶಗಳಲ್ಲಿ ಸಂಚರಿಸಿ ಲೋಕದ ದುಃಖನಿವಾರಣೆ ಯನ್ನು ಮಾಡಿ ಅವರಿಗೆ ಸದುಪದೇಶಮಾಡುವಂಥವರು ಸ್ವಾಮಿವಿವೇ ಕಾನಂದ ಸ್ವಾಮಿ ರಾಮತೀರ್ಥರವರಂತೆ ನಿರಪೇಕ್ಷಬುದ್ಧಿಯಿಂದ ಅವರು ಜಗತ್ತಿಗೆ ಧರ್ಮತತ್ವಗಳನ್ನು ಬೋಧಿಸುವವರಾಗಿರುತ್ತಾರೆ ಪರಜಂಗಮ ರೆಂದರೆ ಜನರ ದಟ್ಟಣೆಯಿಂದ ದೂರವಾದ ಏಕಾಂತಸ್ಥಳದಲ್ಲಿ ಕುಳಿತು ಕೊಂಡು ಕೇವಲ ಪರಮಾತ್ಮಚಿಂತನೆಯಲ್ಲಿಯೂ ಲಿಂಗಾನುಭವಗೋಷ್ಠಿ ಯಲ್ಲಿಯೂ ನಿರತರಾಗಿ ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವಂಥ ವರು. ಇವರು ಬೇಕು ಬೇಡೆಂಬೆರಡೂ ಭವಬೀಜಗಳನ್ನು ಹುರಿದವರು. ಲೋಕದೊಳಗಿದ್ದೂ ಇಲ್ಲದ ಮಹಿಮರು. ಮಂಗಲ ಶಿಶುವಿನಂತೆ ನಿಷ್ಕ ಲಂಕ ಹೃದಯದವರಾಗಿ ಎಲ್ಲರಿಂದಲೂ ವಂದಿತರಾಗಿ ಶೋಭಿಸುವರು.

ವೀರಶೈವರಲ್ಲಿರುವಷ್ಟು ಸ್ವಾಮಿಗಳೂ ಮಠಗಳೂ ಬೇರಾವ ಧರ್ಮ ದಲ್ಲಿಯೂ ಕಂಡುಬರುವದಿಲ್ಲ. ಅದರಿಂದ ವೀರಶೈವ ಧರ್ಮದ ಹೆಚ್ಚ ಳವೂ ಪಾವಿತ್ರ್ಯತೆಯೂ ವ್ಯಕ್ತವಾಗುತ್ತವೆ. ವೀರಶೈವರಲ್ಲಿರುವಷ್ಟು ಭಾವನಾ ಪ್ರಾಧಾನ್ಯವು ಅನ್ಯಮತೀಯರಲ್ಲಿ ಅಷ್ಟೊಂದು ಕಂಡುಬರುವದಿಲ್ಲ ಆದರೆ ಆ ಭಾವನೆಗೆ ತಕ್ಕಂಥ ತಿಳುವಳಿಕೆಯೂ ಸುಸಂಸ್ಕೃತಿಯೂ ಅವರಲ್ಲಿದ್ದರೆ ಅವರು ಜಗತ್ತಿಗೇನೇ ಅನುಕರಣಸೀಯರಾಗಬಹುದಾಗಿತ್ತು. ಆದರೆ ತಿಳುವಳಿಕೆಯುಳ್ಳವರಲ್ಲಿಯೂ ಸುಶಿಕ್ಷಿತರಲ್ಲಿಯೂ ಭಾವನೆಯು ಸ್ಥಿರವಾಗಿ ಉಳಿಯುವದೋ ಇಲ್ಲವೋ ಯಾರಿಗೆ ಗೊತ್ತು! ವೀರಶೈವರ ಸುದೈವ ದಿಂದ ಮಠಗಳೂ ಸ್ವಾಮಿಗಳೂ ಹೆಚ್ಚಿರುವದೇನೋ ನಿಜ. ಆದರೆ ಅವ ರಿಂದ ಸಮಾಜಸುಧಾರಣೆಯ ಕಾರ್ಯವೇನೂ ಆಗಿರದೆ ಹೆಸರಿಗೆ ಮಾತ್ರ ಅಸ್ತಿತ್ವದಲ್ಲಿರುವದೊಂದು ವಿಷಾದಕರವಾದ ಸಂಗತಿಯು. ತೀರ ಸ್ವಲ್ಪ ಮಹಾಸ್ವಾಮಿಗಳವರು ಮಾಡಿದ ಅಥವಾ ಮಾಡುತ್ತಿರುವ ಸಮಾಜ ಸೇವಾ ಕಾರ್ಯಗಳು ಚಿರಸ್ಮರಣೀಯವಾಗಿವೆ. ಆದರೆ ಉಳಿದ ಸ್ವಾಮಿ ಗಳಾದರೂ ಸ್ವಾರ್ಥಪರಾಯಣರಾಗದೆ ಅವರ ಅನುಕರಣ ಮಾಡಿದರೆ ನಮ್ಮ ಸಮಾಜವು ಈಗಿನಂತೆ ದುಃಸ್ಥಿತಿಗೀಡಾಗುತ್ತಿದ್ದಿತೇ?

ಜಂಗಮವು ಪರಮಾತ್ಮನ ಶಿಖಾಚಕ್ರದಿಂದುದ್ಭವಿಸಿರುವದೆಂದು ಕೆಲವರು ಪ್ರತಿಪಾದಿಸುವರು. ಶಿಖಾಚಕ್ರದಿಂದುದ್ಭವಿಸಿತೆಂದರೇನು? ಜಂಗಮ

ವೆಂದರೆ ಜ್ಞಾನವು, ಆ ಜ್ಞಾನದ ಮಸಸ್ಥಾನವು ಮಸ್ತಕವು. ಹೊಟ್ಟೆಯು ಕ್ರಿಯಾಸಿಧಿ ಎಂದೂ ಹೃದಯವು ಭಕ್ತಿನಿಧಿ ಎಂದೂ ಮಸ್ತಕವು ಜ್ಞಾನನಿಧಿ ಎಂದೂ ಶಾಸ್ತ್ರಜ್ಞರು ಗ್ರಹಿಸುತ್ತಾರೆ. ಆದುದರಿಂದ ಜಂಗಮವು ಅರ್ಥಾತ್ ಜ್ಞಾನವು ಪರಶಿವನ ಶಿಖಾಚಕ್ರದಲ್ಲಿ ಅಂದರೆ ಮಸ್ತಕದಲ್ಲುದ್ಭವಿಸಿತೆನ್ನುವದರಲ್ಲಿ ಯಾವ ದೋಷವೂ ಕಂಡುಬರಲಾರದು. ಪರಮಾತ್ಮನು ತನ್ನ ಜ್ಞಾನಮಾತ್ರದಿಂದ ಈ ಜಗತ್ತನ್ನು ನಿರ್ಮಿಸಿದನು. ಅಂತೆಯೇ ಜಂಗಮವು ಜಗದಾದಿ ಕಾರಣವೆಂದೆನ್ನುವರು.

ಆದುದರಿಂದ ಮಠಗಳಿಗೆ ಚೆನ್ನಾಗಿ ಸೋಸಿ ತೆಗೆದಂಥವರನ್ನೇ ಆರಿಸುವದು ವಿಹಿತ. ಒಂದು ವೇಳೆ ಅಂಥವರು ಸಕಾಲಕ್ಕೆ ದೊರೆಯದಿದ್ದ ಪಕ್ಷದಲ್ಲಿ ಮಠವು ಬರಿದಾದರೂ ಚಿಂತೆಯಿಲ್ಲ; ಭಕ್ತರು ಅದರ ವ್ಯವಸ್ಥೆಯನ್ನು ನೋಡಿಕೊಂಡು ಹೋಗಬೇಕೇ ವಿನಾ ಅಪಾತ್ರರಾದವರನ್ನೆಂದಿಗೂ ನೇಮಿಸಲಾಗದು. ದೋಷಭಾಗಿಗಳಾಗುವದು ಬಹುಶಃ ತಾರುಣ್ಯದಲ್ಲಿಯೇ ಹೆಚ್ಚು. ಆದುದರಿಂದ ತರುಣರಾದವರನ್ನೆಂದಿಗೂ ಸ್ವಾಮಿಗಳನ್ನು ಮಾಡಲಿಕ್ಕೆ ಆಸ್ಪದ ಕೊಡಬಾರದು. ಮೊದಲಿನ ೨೫ ವರ್ಷಗಳ ವರೆಗೆ ಅವರು ವಿದ್ಯಾಬುದ್ಧಿಯನ್ನು ಕಲಿತು ಆಚಾರವಿಚಾರಗಳಲ್ಲಿ ಸರಿಯಾಗಿದ್ದು ಪ್ರಪಂಚವನ್ನು ಬಿಡಲಿಕ್ಕೊಪ್ಪಿದರೆ ಅವರು ಮುಂದೆ ಸ್ವಾಮಿಗಳಾಗಲಿಕ್ಕೆ ಯೋಗ್ಯರೋ ಹೇಗೆಂಬುದನ್ನು ಪರೀಕ್ಷಿಸಲಿಕ್ಕೆ ಮುಂದಿನ ಕೆಲವು ವರ್ಷಗಳ ವರೆಗೆ ದೇಶಿಕರಾಗಿ ಧರ್ಮೋಪದೇಶ ಮಾಡುತ್ತ ದೇಶಸಂಚಾರ ಮಾಡುವಂತೆ ಮಾಡಬೇಕು. ಹೀಗೆ ಚನ್ನಾಗಿ ಪರೀಕ್ಷಿಸಿದ ಬಳಿಕ ಆಚಾರ ವಿಚಾರಗಳು ಸರಿಯಾಗಿದ್ದು ಸ್ವಾರ್ಥ ಕಾಮಾದಿ ದುರ್ಗುಣಗಳು ಅವರಲ್ಲಿಲ್ಲದಿದ್ದರೆ ದೈವದವರು ಅಂಥವರನ್ನು ಬಹುಮತದ ಪ್ರಕಾರ ಸ್ವಾಮಿಗಳ ಸ್ಥಾನಕ್ಕೆ ಆರಿಸಬೇಕು. ಮುಂದೆ ಎಲ್ಲರಿಂದಲೂ ಸಾಷ್ಟಾಂಗಹೊಂದಿ ಮೇಣೆ ಪಲ್ಲಕ್ಕಿಗಳಲ್ಲಿ ಮೆರೆಯುವಂಥ ಸ್ವಾಮಿಗಳು ಮೊದಲು ತಾವು ಎಷ್ಟು ವಿನಯಶೀಲರಾಗಿ ನಿರಪೇಕ್ಷಬುದ್ಧಿಯಿಂದ ಸಮಾಜಸೇವೆ ಮಾಡಬೇಕೆಂಬದನ್ನು ಮನದಟ್ಟಾಗಿಟ್ಟುಕೊಳ್ಳಬೇಕು. ಇದನ್ನೆಲ್ಲ ಬಿಟ್ಟುಕೊಟ್ಟು ಯಾವನಾದರೊಬ್ಬ ವಟುವಿಗೆ ನೀನೇ ಸ್ವಾಮಿಯೆಂದು ಅಡ್ಡಬಿದ್ದರೆ ಅದರಿಂದೆಂಥ ಸ್ವಾಮಿಗಳು ಸಿದ್ಧರಾಗುವರೆಂಬದನ್ನು ಸುಜ್ಞರೇ ಊಹಿಸಲಿ.

ದೇಶ ಕಾಲ ಪರಿಸ್ಥಿತಿಗನುಸರಿಸಿ ಸ್ವಾಮಿಗಳಾಗುವವರು ವಿದ್ಯೆಯಲ್ಲಿ ಪ್ರಾವೀಣ್ಯತೆಯನ್ನು ಪಡೆದಿರಬೇಕು. ಆದರೆ ಇಷ್ಟರಿಂದಲೇ ಅವರ ಬೆಲೆ

ಕಟ್ಟಲು ಅವಸರವಿಡಬಾರದು. ಆದರೆ ಕರ್ಮ, ಭಕ್ತಿ, ಜ್ಞಾನ, ಯೋಗ, ವೈರಾಗ್ಯ ಈ ಮೊದಲಾದ ಅಮೌಲ್ಯವಾದ ಗುಣಗಳೇ ಅವರನ್ನು ಪರೀಕ್ಷಿಸುವ ನಿಜವಾದ ಒರೆಗಲ್ಲುಗಳು. ಈ ಗುಣಗಳಿಲ್ಲದೆ ಬೇಕಾದಷ್ಟು ಪಾಂಡಿತ್ಯ ತತ್ವಶಾಸ್ತ್ರಗಳಲ್ಲಿ ಪಾರಾಂಗತರಾದರೂ ವ್ಯರ್ಥ. ರುಂಡವಿಲ್ಲದ ಮುಂಡದಂತೆ ಗುಣವಿಲ್ಲದ ಪಂಡಿತ ಸ್ವಾಮಿಗಳನ್ನು ತೆಗೆದು ಕೊಂಡು ಏನು ಸುಡಬೇಕು? ಇಂಥ ಪರಿಪಕ್ವಾವಸ್ಥೆಯು ಒಮ್ಮೆಲೆ ೧—೨ ವರ್ಷಗಳಲ್ಲಿ ಬರುವದು ಶಕ್ಯವಿಲ್ಲ. ಸಪೋದಿತ ೫೦ ವರ್ಷಗಳ ಪರಿಯಂತ ಪ್ರಯತ್ನಿಸಿ, ಅನುಭವಹೊಂದಿ, ಕಷ್ಟಸೋಸಿ ಆ ಗುಣಗಳನ್ನು ಸಂಪಾದಿಸಿ ಸ್ವಾಮಿಯಾದಾಗ ಅಂದಣದಲ್ಲಿ ಮೆರೆಯುವ ಅಧಿಕಾರಬರುವದು. ಆದುದರಿಂದ ಸ್ವಾಮಿಗಳಾಗತಕ್ಕವರನ್ನು ಪ್ರಾಚೀನ ಗುರಕುಲಗಳಂಥ ಪವಿತ್ರ ಸಂಸ್ಥೆಗಳಲ್ಲಿ ಚನ್ನಾಗಿ ಶಿಕ್ಷಣಕೊಡಿಸಬೇಕು. ಸ್ವಾಮಿಯ ಸ್ಥಾನಕ್ಕೆ ಅಯೋಗ್ಯರೆಂದು ಕಂಡುಬಂದವರನ್ನು ಆಗಲೇ ಬಿಡಿಸಿ ವಿವಾಹಮಾಡುವದುತ್ತಮ. ತನ್ನಿಂದ ತಾನೇ ಪಕ್ವವಾದ ಫಲವೇ ರುಚಿಯಾಗುವದಲ್ಲದೆ ಕಸಿಕು ಕಾಯಿಯನ್ನು ಕೊಯ್ದು ತಂದು ಕಾಯಿಸಿ ಹಣ್ಣು ಮಾಡಿದರೆ ಮಧುರ ಫಲವಾಗಲರಿಯದು. ನಮ್ಮಲ್ಲಿ ಸ್ವಾರ್ಥ ಬುದ್ಧಿಯು ಹೆಚ್ಚಾಗಿರುವದರಿಂದ ಅಣ್ಣತಮ್ಮಂದಿರ ಮಕ್ಕಳನ್ನಾಗಲಿ ಹತ್ತಿ ಹೊಂದಿದವರನ್ನಾಗಲಿ ಸ್ವಾಮಿಗಳ ಸ್ಥಾನಕ್ಕೆ ಮೀಸಲಿಡುವರು. ಅಂತರಂಗವನ್ನೇನೂ ಅರಿಯದ ಮುಗ್ಧ ಜನಗಳು ಕಾವೀಲಾಂಛನ, ಭಸ್ಮ ರುದ್ರಾಕ್ಷಿ ಮೊದಲಾದವುಗಳಿಗೆ ಮರುಳಾಗಿ ಮೂಢಭಾವನೆಯಿಂದ ಅಪಾತ್ರರಾದ ಸ್ವಾಮಿಗಳನ್ನೂ ಸಹ ಎತ್ತಿ ತಲೆಯಮೇಲೆ ಕೂಡ್ರಿಸಿಕೊಳ್ಳುವರು. ಈ ಸ್ಥಿತಿಯು ದೂರಾದಾಗಳೇ ವೀರಶೈವ ಸಮಾಜದಲ್ಲಿ ಸುಧಾರಣೆಯಾಗುವದು ಶಕ್ಯವು.



# ಸ್ಫುಟ ವಿಷಯುಗಳು.

ಈ ಸಂಚಿಕೆಯಲ್ಲಿ ಪ್ರಕಟವಾದ ಲೇಖಗಳ ಮುಖ್ಯೋದ್ದೇಶವನ್ನು ಚಕರಿಗೆ ಪರಿಚಯು ಮಾಡಿಕೊಡುವದು ಅವಶ್ಯವೆಂದು ತೋರುತ್ತದೆ ಈ ಖಗಳಲ್ಲಿ ಪ್ರಾಮುಖ್ಯವಾಗಿ (೧) ವಿಮರ್ಶಾತ್ಮಕ (೨) ಸಂಶೋಧನಾತ್ಮಕ ೩) ಚರ್ಚಾತ್ಮಕ ಲೇಖಗಳೆಂದು ಭಾಗಗಳನ್ನು ಮಾಡಬಹುದು.

ಶೂನ್ಯಸಂಪಾದನೆಯು ರಹಸ್ಯ ಎಂಬ ಲೇಖವು ವಿಮರ್ಶಾತ್ಮಕವಾದುದು. ಇದನ್ನು ಮಿ॥ ಕಲ್ಯಾಣಪ್ಪ ಬ್ಯಾಳಿ ಇವರು ಬರೆದಿದ್ದಾರೆ. ಈ ವರೆಗೆ ಆನೇಕ ಧಾರ್ಮಿಕ ಗ್ರಂಥಗಳು ಪ್ರಕಟವಾಗಿದ್ದು ಅವುಗಳನ್ನು ಇನ್ನು ಮೇಲೆ ಚನ್ನಾಗಿ ಪರಿಶೀಲಿಸಿ ಅವುಗಳಲ್ಲಿಯು ತತ್ವಗಳನ್ನು ಚರ್ಚಿಸುವದು ಈಗ ಅತ್ಯವಶ್ಯವಾಗಿದೆ. ಈ ವಿಧವಾಗಿರುವ ವೀರಶೈವ ವಾಙ್ಮಯುವು ಹೆಚ್ಚಾಗಿ ಬೆಳೆಯುಬೇಕಾಗಿರುತ್ತದೆ. ಆದ್ದರಿಂದ ವೀರಶೈವ ಸಮಾಜದಲ್ಲಿಯು ವಿದ್ವಾಂಸರು ಈ ಕಾರ್ಯದಲ್ಲಿ ವಿಶೇಷ ಮನಸ್ಸು ಹಾಕಬೇಕೆಂದು ನಮ್ಮ ಸೂಚನೆ ಇದೆ.

ಶೂನ್ಯ ಸಂಪಾದನೆಯುಲ್ಲಿ ಪ್ರತಿಪಾದಿತವಾದ ದಿವ್ಯ ವಿಚಾರಗಳನ್ನು ತಮಗೆ ಹೊಳೆದಂತೆ ಸುಲಭವಾದ ಶೈಲಿಯುಲ್ಲಿ ಮಿ॥ ಕಲ್ಯಾಣಪ್ಪನವರು ಶಿವಾನುಭವ ಸಂಚಿಕೆಗಳಲ್ಲಿ ಬರೆಯುತ್ತ ಬಂದಿದ್ದಾರೆ. ಶೂನ್ಯಸಂಪಾದನೆಯು ವೀರಶೈವ ಮತತತ್ವಗಳನ್ನು ಪ್ರಶ್ನೋತ್ತರ ರೂಪದಿಂದ ಪ್ರತಿಪಾದಿಸುವ ಉದಾತ್ತ ಗ್ರಂಥವಾಗಿದೆ. ಅದನ್ನು ಚನ್ನಾಗಿ ಪರಿಶೀಲಿಸಿದಲ್ಲಿ ಓದುವವರ ಮನಸ್ಸಿನಲ್ಲಿ ಬಗೆಬಗೆಯು ವಿಚಾರತರಂಗಗಳು ಉದ್ಭವಿಸದೆ ಇರಲಾರವು. ಆದುದರಿಂದ ವಚನ ವಾಙ್ಮಯುದಲ್ಲಿ ಗತಿಯುಳ್ಳವರು ಆ ಗ್ರಂಥದೊಳಗಿನ ಸಂಪಾದನೆಗಳನ್ನೆಲ್ಲ ಸೂಕ್ಷ್ಮವಾಗಿ ಅವಲೋಕಿಸಿ ತಮ್ಮ ವಿಮರ್ಶೆಗಳನ್ನು ಪ್ರಕಟಿಸಿದರೆ ಯೋಗ್ಯವಾಗದೆ ಇರದು.

"ಹರಿಹರನ ಕಾಲ" ಎಂಬೀ ಲೇಖವನ್ನು ವೇ. ಬುದ್ಧಯ್ಯಾ ಪುರಾಣಿಕ ಇವರು ಬರೆದಿದ್ದಾರೆ. "ಕೋಡಿಯುಮಠ" ಎಂಬ ಲೇಖವನ್ನು ಮಿ. ಎಸ್. ಎಸ್. ಮಾಳವಾಡ ಬಿ ಎ. (ಆನರ್ಸ) ಇವರು ಬರೆದಿರುವರು. ಇವೆರಡೂ ಲೇಖಗಳು ಸಂಶೋಧನಾತ್ಮಕವಾಗಿರುವವು. ಹರಿಹರ ಕವಿಯು ೧೧೬೫, ೧೨೩೦, ೧೨೦೦ ರಲ್ಲಿದ್ದನೆಂದು ಬೇರೆ ಬೇರೆ ಜನರು ಅನೇಕ

ಆಧಾರ ಪ್ರಮಾಣಗಳನ್ನು ಸಂಶೋಧಿಸಿ ತಮ್ಮ ಭಿನ್ನಾಭಿಪ್ರಾಯಗಳನ್ನು ಪ್ರಕಟಿಸಿದ್ದಾರೆ. ಇತಿಹಾಸ ಸಂಶೋಧನೆಯು ಸತ್ಯಾನ್ವೇಷಣೆಯ ಮೂಲಾಧಾರವು. ಸಂದಿಗ್ಧ ವಿಷಯಗಳನ್ನು ನಿಜ ಸ್ಥಿತಿಗೆ ತಂದು ಮುಟ್ಟಿಸಲಿಕ್ಕೆ ಸಂಶೋಧನೆಗಳು ಅವಶ್ಯವಾಗಿ ಬೇಕು. ಕೋಡಿಯಮಠದ ಇತಿಹಾಸವು ಬಳ್ಳಿಗಾವಿಯ ಶಿಲಾಲೇಖಗಳಿಂದ ತಿಳಿದು ಬರುತ್ತದೆ. ಅದು ಕಾಳಾಮುಖರ ಪೀಠವಾಗಿದೆ. ಈ ಲೇಖದಿಂದ ೧೨ ನೇ ಶತಮಾನದ ಸಾಮಾಜಿಕ ಸ್ಥಿತಿಗತಿಗಳು ನಮಗೆ ಗೊತ್ತಾಗುವವು. ಈ ಎರಡೂ ಲೇಖಗಳು ಸಂಶೋಧನಾತ್ಮಕವಾಗಿವೆ.

ಷಟ್‌ಸ್ಥಲಗಳ ಸಂಬಂಧದ ಕೆಲವು ಲೇಖಗಳೂ ಈ ಸಂಚಿಕೆಯಲ್ಲಿ ಬಂದಿರುತ್ತವೆ. ಶಿವಶರಣರು ಮನುಷ್ಯನ ಪ್ರಗತಿಯನ್ನು ಹ್ಯಾಗೆ ಉಂಟುಮಾಡಬೇಕೆಂಬದನ್ನು ಕುರಿತು ತಮ್ಮ ವಿವೇಚನೆಗಳಲ್ಲಿ ಸವಿಸ್ತಾರವಾಗಿ ನಿರೂಪಿಸಿರುವರು. ಈ ನಿರೂಪಣೆಗಳು ಬೇರೆ ಬೇರೆ ಸ್ಥಲಗಳ ವಿವರಣೆಗಳಲ್ಲಿ ಕಂಡುಬರುತ್ತವೆ. ಷಟ್‌ಸ್ಥಲಗಳು ಅವುಗಳ ಭಾಗಗಳು, ಉಪಭಾಗಗಳು ಇವುಗಳ ತತ್ವಗಳನ್ನು ಕಂಡುಹಿಡಿಯುವದು ಅವಶ್ಯವಿದೆ. ಈಗಿನ ಸಂಚಿಕೆಯಲ್ಲಿ ಷಡ್ವಿಧ ಭಕ್ತಿಗಳು ಮತ್ತು ೩ ಅಂಗಸ್ಥಲಗಳು ಹಾಗೂ ವೀರಶೈವದಲ್ಲಿ ಮೂರ್ತಿ ಪೂಜೆ ಮತ್ತು ಜಂಗಮ ಇವುಗಳ ಸಂಬಂಧವಾಗಿ ಲೇಖಗಳು ಬಂದಿವೆ. ಈ ಬಗೆಯ ವಿಷಯಗಳನ್ನು ಕುರಿತು ವೀರಶೈವ ವಿದ್ವಾಂಸರು ಹೆಚ್ಚಾಗಿ ಸಂಶೋಧಿಸಿದರೆ ವೀರಶೈವ ಧರ್ಮವು ಹಿಂದೂ ಧರ್ಮದ ವಿಚಾರ ಕ್ಷೇತ್ರದಲ್ಲಿ ಯಾವ ಸ್ಥಾನವನ್ನು ಹೊಂದಿದೆ ಎಂಬದನ್ನು ನಿಶ್ಚಯಿಸಲಿಕ್ಕೆ ಬಹಳ ಅನುಕೂಲವಾಗುವದು.

ಈ ಬಗೆಯ ವಿಷಯಗಳನ್ನು ವಿಚಾರಮಾಡಲಿಕ್ಕೆ ಬೇರೆ ಬೇರೆ ಕಡೆಗೆ ಶಿವಾನುಭವ ಕೂಟಗಳನ್ನು ಅಥವಾ ಮಂದಿರಗಳನ್ನು ಸ್ಥಾಪಿಸುವದು ಉಪಯುಕ್ತವೆಂದು ನಮಗೆ ತೋರುತ್ತದೆ. ಯಾವ ಪಟ್ಟಣದಲ್ಲಿ ಅಥವಾ ಊರಲ್ಲಿ ಇಂಥ ಧಾರ್ಮಿಕ ಗ್ರಂಥಗಳನ್ನು ಓದುವ ಅಭಿರುಚಿಯುಳ್ಳವರು ಇರುತ್ತಾರೋ ಅವರು ಒತ್ತಟ್ಟಿಗೆ ಸೇರಿಕೊಂಡು ವೀರಶೈವ ಮತದಲ್ಲಿಯ ಇಂಥ ಗೂಢ ತತ್ವಗಳನ್ನು ತಿಳಿಯಲಿಕ್ಕೆ ಪ್ರಯತ್ನಿಸಬೇಕು. ಮತ್ತು ತಮಗೆ ಕಂಡುಬಂದ ವಿಚಾರಗಳನ್ನು ಲೇಖ ಮೂಲಕ ಪ್ರಸಿದ್ಧಿಸಬೇಕು.

ಈ ವರೆಗೆ ಶಿವಾನುಭವ ಸಂಚಿಕೆಗಳಲ್ಲಿ ಹರೀಶ್ವರನ ರಗಳೆಗಳು, ಶಿವಶರಣರ ವಚನಗಳು, ಮತ್ತು ಸಾಂಪ್ರದಾಯಿಕ ಕಥೆಗಳು ಪ್ರಕಟ

ವಾಗುತ್ತ ಬಂದಿವೆ. ಇವುಗಳನ್ನು ಪ್ರತ್ಯೇಕವಾದ ಗ್ರಂಥಗಳ ರೂಪ ದಿಂದ ಪ್ರಸಿದ್ಧಮಾಡಲಾಗಿದೆ. ಹರೀಶ್ವರನ ರಗಳೆಗಳು ಕನ್ನಡವಾಙ್ಮಯ ದಲ್ಲಿ ಅತ್ಯಂತ ಮಹತ್ವವಾದವುಗಳು. ಇವುಗಳಲ್ಲಿ ಈ ಮಹಾಕವಿಯ ವಾಗ್ಝರಿಯು ಅಮೋಘವಾಗಿ ಹರಿದಿರುವದು. ಇವುಗಳ ಮೂಲಕ ಜನ ರಲ್ಲಿ ರಸಿಕತೆ, ಭಕ್ತಿಭಾವನೆ, ಆನಂದಗಳು ಉದ್ದೀಪ್ತವಾಗದೆ ಇರವು. ಈ ವರೆಗೆ ನಾವು ಈ ರಗಳೆಗಳ ನಾಲ್ಕು ಗ್ರಂಥಗಳನ್ನು ಪ್ರಕಟಿಸಿರು ವೆವು ೧ ನೇ ೪ ನೇ ಭಾಗಗಳಲ್ಲಿ ಪುರಾತನರ ಚರಿತ್ರೆಗಳು ಬಂದಿವೆ. ೨ ನೇ ಭಾಗದಲ್ಲಿ ಪ್ರಭುದೇವ ರೇವಣಸಿದ್ಧೇಶ್ವರರ ಚರಿತ್ರೆಗಳೂ ೩ ನೇ ಭಾಗದಲ್ಲಿ ಆದಯ್ಯ ಮತ್ತು ಶಂಕರದಾಸಿಮಯ್ಯ ಇವರ ಚರಿತ್ರೆಗಳೂ ಬಂದಿವೆ. ನಾವು ಪ್ರಕೃತ ಸಂಚಿಕೆಯಲ್ಲಿ ಈ ರಗಳೆಗಳ ೫ ನೇ ಭಾಗವನ್ನು ಪ್ರಕಟಮಾಡಲು ಪ್ರಾರಂಬಿಸಿದ್ದೇವೆ. ಈ ಭಾಗದಲ್ಲಿ ನಾವು ಬಾಣಕವಿ, ಹಲಾಯುಧ, ಉದ್ಭಟ, ಸಾಮವೇದಿ, ಕೆಂಭಾವಿ ಭೋಗಣ್ಣ ಮೊದ ಲಾದವರ ರಗಳೆಗಳನ್ನು ಪ್ರಕಟಿಸಬೇಕೆಂದಿರುವೆವು.

ಬಸವೇಶ್ವರ ಷಟ್‌ಸ್ಥಲವಚನದ ಕಥಾಸಾರನ್ನು ಹಾಗೂ ಉರಿಲಿಂ ಗಪೆದ್ದಿಗಳ ವಚನಗಳನ್ನು ಈ ಸಂಚಿಕೆಯಲ್ಲಿ ನಾವು ಹಾಗೆಯೇ ಮುಂದು ವರಿಸಿದ್ದೇವೆ.

ವೀರಶೈವ ಮತಸ್ಥಾಪಕರಾರು ಎಂಬ ವಿಷಯವು ಈ ಕಾಲದಲ್ಲಿ ವೀರಶೈವರ ಲಕ್ಷವನ್ನು ಬಹಳ ಎಳೆದಿರುವದಲ್ಲದೆ, ಇತರ ಮತದ ವರ ಲಕ್ಷವನ್ನೂ ಸಹ ಎಳೆದಿರುವದಾಗಿ ತೋರಿಬರುತ್ತದೆ. ಹೀಗಾಗು ವದು ಸ್ವಾಭಾವಿಕವದೆ. ಯಾಕಂದರೆ ವೀರಶೈವ ಧರ್ಮವು ಕರ್ನಾಟ ಕದ ರಾಜಕೀಯ, ಸಾಮಾಜಿಕ, ಮತ್ತು ವಾಙ್ಮಯದ ಇತಿಹಾಸದಲ್ಲಿ ಒಂದು ಮಹತ್ವದ ಕ್ರಾಂತಿಯನ್ನು ಮಾಡಿರುವದರಿಂದ ಈ ಕ್ರಾಂತಿಯು ಎಂದು ಮತ್ತು ಹೇಗೆ ಉಗಮಿಸಿತು, ಮುಂದೆ ಅದರ ಪ್ರವಾಹವು ಹೇಗೆ ಹರಿಯುತ್ತ ಹೋಯಿತು ಎಂಬದನ್ನು ಗೊತ್ತುಹಚ್ಚುವದು ಬಹಳ ಮಹ ತ್ವದ ವಿಷಯವಾಗಿದೆ. ಈ ವಿಷಯವಾಗಿ ಶ್ರೀಯುತ ಜೀರಗೆ ಬಸವ ಲಿಂಗಪ್ಪನವರು "ವೀರಶೈವ ಮತಸ್ಥಾಪಕರು ಯಾರು" ಎಂಬ ಗ್ರಂಥ ವನ್ನು ಹಾಗೂ ಶ್ರೀಯುತ ಕರ್ಲಮಂಗಲಂ ಶ್ರೀಕಂಠಯ್ಯನವರು "ವೀರ ಶೈವ ಮತಾಚಾರ್ಯರ ಕಾಲನಿರ್ಣಯ" ಎಂಬ ಗ್ರಂಥವನ್ನು ಪ್ರಕಟಿ ಸಿರುವರು. ಶ್ರೀಕಂಠಯ್ಯನವರು ತಮ್ಮ ಗ್ರಂಥದಲ್ಲಿ ಈ ವರೆಗೆ ಪ್ರಸಿದ್ಧ

ವಾಗಿರುವ ಚರಿತ್ರೆಗಳು, ರಗಳೆಗಳು, ಶಿಲಾಶಾಸನಗಳು, ಶಿವಾನುಭವ ಪತ್ರಿಕೆಯಲ್ಲಿಯ ಲೇಖಗಳು ಇವುಗಳನ್ನು ಎತ್ತಿ ಬಹು ವಿಸ್ತಾರವಾಗಿ ಚರ್ಚಿಸಿರುವರು. ಅವರ ಗ್ರಂಥವು ವಾಚನೀಯವಾಗಿದೆ. ಆದರೆ ಈ ಮಹತ್ವದ ವಿಷಯದಲ್ಲಿ ನಿಜಾಂಶಗಳಾವವೆಂಬದನ್ನು ದೃಢಪಡಿಸಿ ಹೇಳುವ ಸಮಯವು ಇನ್ನೂ ಬಂದಿಲ್ಲವೆಂತಲೇ ನಮ್ಮ ಅಭಿಪ್ರಾಯ. ಇದಕ್ಕೋಸ್ಕರ ನಾವು ಇನ್ನೂ ಕೆಲವು ದಿವಸ ತಡೆಯಬೇಕು. ನಾವು ಶೋಧಿಸತಕ್ಕ ಶಿಲಾಶಾಸನಗಳು, ಗ್ರಂಥಗಳು, ಸ್ಥಳೀಯ ಸಂಗತಿಗಳು ಬಹಳ ಇವೆ. ಇವುಗಳು ಇನ್ನೂ ಹೊರಬಿದ್ದಿಲ್ಲ. ಆದ್ದರಿಂದ ಸದ್ಯದ ಸ್ಥಿತಿಯಲ್ಲಿ ನಮಗೆ ಕಂಡುಬಂದ ಸಂಗತಿಗಳನ್ನು ಇದ್ದಕ್ಕಿದ್ದ ಹಾಗೆ ಜನರ ಮುಂದೆ ಇಡುತ್ತ ಹೋಗುವದೇ ನಾವು ಮಾಡತಕ್ಕ ಕಾರ್ಯವಾಗಿದೆ. ಈ ಪ್ರಕಾರ ನಮ್ಮ ಅಭಿಪ್ರಾಯವಿರುವದರಿಂದ ಮೇಲ್ಕಂಡ ಉಭಯ ಗ್ರಂಥಗಳಲ್ಲಿಯ ವಿಷಯಗಳು ಎಷ್ಟರಮಟ್ಟಿಗೆ ನಂಬಿಗೆಗೆ ಅರ್ಹವೆಂಬುದನ್ನು ನಾವು ಪರೀಕ್ಷಿಸಲು ಅಸಮರ್ಥರಿದ್ದೇವೆ. ಆದರೆ ಮೇಲ್ಕಂಡ ಗ್ರಂಥಗಳಲ್ಲಿ ಈ ವರೆಗೆ ಹೊರಪಟ್ಟ ಸಂಗತಿಗಳನ್ನು ಒತ್ತಟ್ಟಿಗೆ ಸಂಗ್ರಹಿಸಿರುವದರಿಂದ, ಸಂಶೋಧಕರಿಗೆ ಅವು ಬಹು ಉಪಯುಕ್ತವಾಗಿವೆ.



# ಹರಿಹರನ ರಗಳೆಗಳು.

ಭಾಗ ೫.

→*0*←

## ಬಾಣಶರಣರ ಮಹಾತ್ಮೆ.

**ಕಂದ**॥ ಕ್ಷೋಣೀತಳದೊಳ್ಮೆರೆದಂ
ಬಾಣ ನವಗದ್ಯ ಪದ್ಯ ಕಾವ್ಯಕಳಾಗೀ
ರ್ವಾಣನನುರ್ವೀಸುಮನೋ
ಬಾಣನ ನೊಲವಿಂದ ಹಂಪೆಯ ವಿರೂಪಾಕ್ಷಂ ।

### ರಗಳೆ.

ಭೂಮಿಯೊಳು ಕಂಧಾರವೆಂಬ ಪಟ್ಟಣದಲ್ಲಿ
ಭೂಮಿ ಪತಿಯೊಪ್ಪುವಂ ನಂದನೆಂಬರಸಲ್ಲಿ
ಆತನಗ್ಗದ ಕವಿಗಳೆನಿಸಿಕೊಂಡೊಪ್ಪುವರ್
ನೂತನಕಳಾಲಸಿತ ವಾಕ್ಯಮುಮನೊಪ್ಪುವರ್
ಬಾಣನು ಮಯೂರನುಂ ಕಾಳಿದಾಸಂ ನೋಡ
ಜಾಣರೆನಿಪಾ ಮೂವರುಂ ಪ್ರಸಿದ್ಧರ್ನೋಡ
ಅವರೊಳಗೆ ಸಜ್ಜನರ್ಶಿವಭಕ್ತಿ ಕಾಮಿಗಳ್
ಶಿವಭಕ್ತರುತ್ತಮರ್ಶಂಕರಪ್ರೇಮಿಗಳ್
ಎನಿಪ ಬಾಣಂ ಕಾಳಿದಾಸನುಂ ಸೈತಾಗಿ
ಮನದೊಳ್ಮಯೂರನೊಡತಣ ಮಚ್ಚರಂ ತಾಗಿ
ನಂದನೋಲಗದೊಳೊಂದು ದಿವಸಮಿರ್ಬರುಮಿರ್ದು
ಸಂದ ಕವಿತೆಯ ಪುರುಡು ಮನದೊಳಗೆ ಮಿಗೆ ಸಾರ್ದು
ಎಂದರಾ ನಂದಂಗೆ ತಾವಿರ್ಬರುಂ ಕೂಡಿ
ಸಂದಣಿಸಿದೇಕಾಂತದೊಳ್ನುಡಿಗಳಂ ನೀಡಿ
ಕವಿ ಮಯೂರನನಿಲ್ಲಿ ಪುಗಿಸಲಾಗದು ದೇವ

ಅವಯವಂ ಸರ್ವ ದುರ್ವರ್ಣವಾದುದು ದೇವ
ಎನಲಲ್ಲಿ ನಂದರಾಜಂ ಕೌತುಕಮನಾಳ್ದು
ಮನದೊಳಗಿದಂ ಪರೀಕ್ಷಿಪೆನೆಂನು ಬಗೆದಾಳ್ದು
ಅನಿಮಿತ್ತಲೋಕುಳಿಯನೊಪ್ಪದಿಂ ಹಣ್ಣಿದಂ
ತನತನಗೆ ಪರಿಜನಕ್ಕೆಲ್ಲ ನೆರೆ ಸಾರಿದಂ
ನಾಳೆಯೋಕುಳಿ ಎಂದು ಪುರಜನಕೆ ಪೇಳುತಿರೆ
ಆಳಿದ್ದು ಜನವೆಲ್ಲ ನೆರೆದು ಸಂಭ್ರಮಿಸುತಿರೆ

ಆರಿದನಾಗಳೆ ಮಯೂರಂ ಜಲಕ್ರೀಡೆಯಂ
ನೆರೆ ಬಾಣಕಾಳಿದಾಸರ ಮನಸಿನೋಜೆಯಂ
ಅರಿದು ಚಿಂತಿಸುತಿರಲ್ಕಸ್ತಮಯವಾಯಿತ್ತು
ಮೆರೆವ ಸೂರ್ಯನ ಕಾಂತಿಯಂಬುನಿಧಿಯೊಳಗಾಯ್ತು
ಮೆಲ್ಲಮೆಲ್ಲನೆ ತಮಂ ತೀವಿತ್ತು ಗಗನಮಂ
ಅಲ್ಲಲ್ಲಿ ಮುಸುಕಿದುದು ಪಸರಿಸಿತು ಲೋಕಮಂ
ಭೋಂಕೆನೊಗೆದುದು ಮುಂದೆ ಬೆಳ್ದಿಂಗಳಂತಲ್ಲಿ
ಶಂಕಿಸುತ್ತಂ ಸತಿಸಮೂಹ ಓಡಿತ್ತಲ್ಲಿ
ಇಂದ್ರದಿಗ್ವಿವರದಿಂ ಪೊರಮಟ್ಟನೊಪ್ಪದಿಂ
ಚಂದ್ರಮಂ ಲೋಕಮಂ ಧವಳಿಸುತ್ತೊಪ್ಪದಿಂ
ಬರಲಲ್ಲಿ ಶಿವಕೀರ್ತಿ ರಾಯ ಬಾಲೆಯ ತೆರದಿ
ಗಿರಿಸುತೆಯ ದರಹಾಸಮಂ ರಂಜಿಸುವ ತೆರದಿ
ಬಂದ ಚಂದ್ರಮನಿಂದೆ ರಾತ್ರಿಯೊಪ್ಪುತ್ತಿರಲ್
ಇಂದುಮಾರಾಶಿಯತ್ತತ್ತ ಸಾರುತ್ತಿರಲ್

ನಿದ್ರೆ ಇಲ್ಲದೆ ಮಯೂರಂ ಚಿಂತಿಸುತ್ತಿರ್ದು
ಭದ್ರಗುಣನೆಂತು ಮಾಡುವೆನೆಂದೆನುತ್ತಿರ್ದು
ಮನದೊಳಗೆ ನಿಶ್ಚಯಿಸಿದಂ ಭಾನುವಿಂದಿಂದೆ
ತನುವಿನ ವಿವರ್ಣಮಂ ತೀರ್ಚುವೆಂದಿಂದಿಂದೆ
ಎಂದು ಬೆಳಗಪ್ಪ ಜಾವದೊಳೆದ್ದು ನಡೆತಂದು
ಬಂದುದಕದೊಳಗೆ ಕಂಠಪ್ರಮಾಣಂ ನಿಂದು
ಸೂರ್ಯಾಭಿಮುಖನಾಗಿ ಕೆಯ್ಯೆತ್ತಿ ಪೊಡಮಟ್ಟು

ಸಾರ ಮಂತ್ರಂಗಳಂ ಮನದ ತುದಿಯೊಳಗಿಟ್ಟು
ತ್ರಿಜಗಮಂ ಬೆಳಗುವ ಮಹಾಕಾಂತಿ ಸಂಪನ್ನ
ಭುಜಗಭೂಷಣ ಸರ್ವಕಾರುಣ್ಯ ಸಂಪನ್ನ
ಲೋಕಕ್ಕೆ ಕಣ್ಣಾಗಿ ಕಾಣಿಸುವ ಮಹಿಮನೇ
ಲೋಕಕ್ಕೆ ಬೆಳಗಾಗಿ ಬೆಳಗುವಾದಿತ್ಯನೇ
ಜೀವರಾಯುಷ್ಯ ರಾಶಿಯನಳೆವನಿಶ್ಚಳನೆ
ಭಾವಿಸಲು ತಮಕುಲವನೋಡಿಸುವ ನಿರ್ಮಳನೆ
ಎಂದಲ್ಲಿ ಸೂರ್ಯಶತಕವನೋದಿ ಮೆಚ್ಚುತಂ
ಬಂದು ಮೆಯ್ಯಂಗೊಟ್ಟನಾದಿತ್ಯನುನ್ನತಂ
ಪಡೆದು ಬಂದ ಮಯೂರಮಯ್ಯನಾನಂದದಿಂ
ಪಡೆದು ಬರೆ ಮೈ ಸುವರ್ಣಚ್ಛಾಯೆಯಂದದಿಂ
ಇರೆ ಮನೆಯೊಳಿರ್ದಂ ಸುಖಾಸ್ವಾದಮನನಾಗಿ

ಪರಿದುದಿತ್ತಂ ತಮಂ ಜನದ ಮನಕನುವಾಗಿ
ಬೆಳಗಾಗೆ ನಂದಭೂಪಂ ನಗರಿಯಂ ಬರಿಸಿ
ತೊಳತೊಳಗುವೋಕುಳಿಯ ಕುಪ್ಪಸಮುಮಂ ತರಿಸಿ
ಎಲ್ಲರ್ಗೆ ಕೊಡುತುಂ ಮಯೂರಂಗೆಯುಂ ಕೊಟ್ಟು
ಎಲ್ಲರಂ ಸಿಂಗರಂ ಮಾಡಲ್ಕೆ ಬೀಳ್ಕೊಟ್ಟು
ನಡುವಗಲ್ನಂದ ರಾಜಂ ಸಿಂಗರಂ ಮಾಡಿ
ನಡೆತಂದು ಕಡು ಚಲ್ವೆಯರ ಮೊತ್ತದೊಡಗೂಡಿ
ನನೆಯ ಹರಿಗೆಗಳಿಂದೆ ಹೂವಿನ ಕಠಾರದಿಂ
ಮೊಸೆಯ ಮೊಗ್ಗೆಗಳ ಪಿಲ್ಲಣಿಗೆಯೊಯ್ಯಾರದಿಂ
ಕೇದಗೆಯ ಸಣ್ಣೆಸಳ ಕೂರಲಗು ಒಪ್ಪುತಿರೆ
ಪಾದರಿಗಳಿಂ ಸಮೆದ ಕಂಚುಳಿಕೆಯೊಪ್ಪುತಿರೆ
ಬಿದಿರಂಡೆ ಕೊಂಬು ಹೊಯಿಸಿಪ್ಪನಾಳಿಗಳೆಸೆಯೆ
ಪದೆಗೊರಲ ಪದ್ಮವದನೆಯರ ಹಂಬಂ ಮಸೆಯೆ
ಮುಂದಿರ್ದ ಪರಿವಾರಕೆಲ್ಲ ಕೆಯ್ಯಂ ಬೀಸಿ
ಸಂದಣಿಸಿ ಬೆರಿಸುತ್ತ ಪರಿಮಳಜಳಂ ಸೂಸೆ
ತಿರುಗಿದೊಡೆ ತಿರುಗಿ ನಿಂದನುವಾಗಲನುವಾಗೆ
ಬೆರಿಸಿದೊಡೆ ಬೆರಿಸಿ ಕಟ್ಟಿದಿರಾಗಲಿದಿರಾಗೆ

ಆಡುವವರೊಳ್ನಂದನಾ ಮಯೂರನನರಿದು
ನೋಡಿ ಹೊಯ್ ಹೊಯ್ ಬೆನ್ನನೊಡ್ಡೆನುತ್ತುಂ ಹೊಯ್ದು
ಹೊಯ್ಕೆ ಬೆನ್ನೊಡ್ಡಿದಂ ನಿಂದು ನೋಡದೆ ಮತ್ತೆ
ಕೆಯ್ಯಾರೆ ಹೊಯ್ದೊಡಂ ಕೆಲಕೆ ಸಾರದೆ ಮತ್ತೆ
ಇರೆ ನೊಂದೆ ಎಂದರಸನಲ್ಲಿ ಬೋಳೈಸುತ್ತೆ
ಹರುಷದಿ ಮಯೂರನಂ ನೋಡಿ ಸಂತೈಸುತ್ತೆ
ಬಾಸುಳಂ ನೋಳ್ಪ ನೆವದಿಂ ಕುಪ್ಪಸಂಗಳೆಯೆ
ಭಾಸುರ ಸುವರ್ಣ ಮಯವಾಗಿ ದೇಹಂ ಮೆರೆಯೆ
ತಿರುಗಿದಂ ಸರ್ವಸಂಭ್ರಮದೆ ತನ್ನರಮನೆಗೆ

ಕರೆ ಬಾಣ ಕಾಳಿದಾಸರನೆನುತ್ತುಂ ತನಗೆ
ಕೋಪವೇರುತ್ತ ಹುಸಿಗಲಸಿ ನಂದಂ ನೊಂದು
ತಾವಿಸುತೆ ಕರೆಹೋಗೆನುತ್ತೋಲಗದೊಳಂದು
ಇರೆ ಬಂದನಾ ಬಾಣನಾಸ್ಥಾನದೊಳಗಿಂಗೆ
ಹರುಷದಿಂ ಮುಕುಟಕೋಟಿಗಳ ನುಣ್ಬೆಳಗಿಂಗೆ
ಬಂದು ನಿಂದಿರೆ ಕಂಡು ನುಡಿದನರಸಂ ನೊಂದು
ಸಂದಣಿಪ ಕೋಪದಿಂ ನೋಡಿ ನಡುಗುತ್ತಂದು
ಇಂತು ಹುಸಿಯುಂ ಪೇಳ್ವರೆ ಮಯೂರನನರಿದು
ಸಂತತಂ ಹೊಂಬಣ್ಣವೆನಿಪ ದೇಹವನರಿದು

ಎನೆ ಬಾಣನೆಂದನೆಲೆ ನಂದನೆ ವಿಚಾರಿಪುದು
ತನುವಿನೊಳ್ಸುವರ್ಣ ಉಂಟು ಚಿತ್ರೈಸುವುದು
ತರಣಿಯಿಂ ಪೋದಿರಲ್ಪಡೆದನೀ ವರ್ಣಮಂ
ಅರಸ ಕೇಳ್ಪುಸಿನುಡಿವುದಿಲ್ಲ ದುರ್ವರ್ಣಮಂ
ಎಂದೊಡೆ ಮಯೂರನುಂಟೆಂದೊಡಂಬಡುತಮಿರೆ
ಮುಂದೆ ಬಾಣಂ ನಿಂದು ಮೂದಲಿಸಿಕೊಳುತಮಿರೆ

ಆದೊಡೇನಿಂತಿದಂ ಮಾಳ್ಪರಾರಿಂದೆನಲ್
ವಾದಕ್ಕೆ ಸೂರ್ಯನಿಂ ಪಡೆವುದೊಂದರಿದೆನಲ್
ಘುಡುಘುಡಿಸಿದಂ ಬಾಣನಾ ಸಭಾಪತಿಯೊಡನೆ
ವೃಡನ ಕರುಣವನಲ್ಲಿ ಬಲ್ಪಿಡಿದು ತೊಡಲೊಡನೆ

ಮುನ್ನುಳ್ಳುದಂ ಪಡೆದನಿಲ್ಲಿ ತಾಂ ಪೊಸತೇನು
ಬಿನ್ನಣಮದೇಕೆ ಮಿಗಿಲಂ ಪಡೆವೆನರಿದೇನು
ಸಡಿಫಡ ಇದೊಂದರಿವೆ ಕಡಿ ಕೆಯ್ಯನೊಂದಲ್ಲಿ
ತಡೆಯುದಾಗಳ್ಕಡಿಯಿಸಿದನೊಂದನಂತಲ್ಲಿ
ಕಡಿದ ಕೈ ಇರ್ದುದಾ ಯೊಡ್ಡೋಲಗದ ನಡುವೆ
ಮೃಡನಲ್ಲಿಗೆಯ್ತಂದನೊಲ್ದು ಭಕ್ತರ ನಡುವೆ
ಬಂದಲ್ಲಿ ರಂಗಮಂಟಪದೊಳಗೆ ಕುಳ್ಳಿರ್ದು
ಇಂದುಧರನತ್ತ ಮನದೊಳಗೆ ಹತ್ತಿರೆ ಸಾರ್ದು
ಹೃತ್ಕಮಳದೊಳಗಣ್ಕೆ ಶಿವಲಿಂಗಮಂ ತಂದು
ಸತ್ಯವೀಶ್ವರನೊಲ್ದು ಪೊಗಳತೊಡಗಿದನಂದು

ದೇವ ಓಂ ಜಯಜಯ ಮಹಾದೇವ ಕರುಣಿಸುದು
ದೇವ ಕಾಲಾಂತಕ ಮಹಾಕಾಲ ಕರುಣಿಪುದು
ದೇವ ಭೀಕರ ಮಹಾಕಾಳಗಳ ಕರುಣಿಪುದು
ದೇವ ಸುರರಾಪದ್ವಿನಾಶಕರ ಕರುಣಿಪುದು
ದೇವ ಚಂದ್ರಾಭರಣ ಭಾಳಾಕ್ಷ ಕರುಣಿಸುದು
ದೇವ ನಾರದಗೇಯ ಶುಭಚರಿತ ಕರುಣಿಪುದು
ದೇವ ನಾಗಾಜಿನ ಶುಭಾವರಣ ಕರುಣಿಸುದು
ದೇವ ತ್ರಿಲೋಕ ಜನ ತಿಮಿರಹರ ಕರುಣಿಸುದು
ದೇವ ಶರಣಾಬ್ಜ ಮುಖ ದಿನಮಣಿಯೆ ಕರುಣಿಪುದು
ದೇವ ಘಳಘಳಿಪ ತ್ರಿಶೂಲಧರ ಕರುಣಿಪುದು
ದೇವ ದುಸ್ತರತರ ತ್ರಿಪುರಹರ ಕರುಣಿಪುದು
ದೇವ ತ್ರಿಲೋಚನ ಮಹಾಗುರುವೆ ಕರುಣಿಪುದು
ದೇವ ಗಂಗಾವೃತ ಜಟಾಭಾರ ಕರುಣಿಪುದು
ದೇವ ಸದ್ಭಕ್ತಜನ ಪಾನಕರ ಕರುಣಿಪುದು
ಎಂದು ಪೊಗಳಲ್ಕಂಕರಂ ಸುಮ್ಮಸಿರುತಿರಲ್
ಒಂದುಮಂ ಕರುಣಿಸದೆ ಶಿವಲಿಂಗದೊಳಗಿರಲ್

ಅಂಬಿಕಾ ನೈತಂಬ ಬಿಂಬಲಂಪಟ ಹಸ್ತ
ಎಂಬ ನುಡಿಗೇಳ್ದು ನಸುನಗುತಭಯವರ ಹಸ್ತ

ಹೊಗಳದಿರು ಬಾಣ ಏನುಂ ಪೇಳೆನುತ್ತಮಿರೆ
ನಾಗಭೂಷಣ ಕರುಣಿಸೆನುತ ಕೈ ಮುಗಿವುತಿರೆ
ಕೆಯ್ಯೊಡನೆ ಕೊಯ್ದು ಕೈ ಪಲ್ಲವಿಸಿತಾತಂಗೆ
ಕೆಯ್ಯೊಡನೆ ಕಲ್ಪತರುವೈತಂದುದಾತಂಗೆ
ಬಂದ ಕಯ್ಯೊಂದಲ್ಲ ಬೇಡಿದವನಾದಿಯುಂ
ಅಂದು ಕೈಯ್ಯಿಲ್ಲದವರೆಲ್ಲರ್ಗೆ ದಾರಿಯುಂ
ನಿಂದು ಬಂದೆಲ್ಲರ್ಗೆ ಕೈಗಳಂ ಕೊಡಿಸುತುಂ
ಬಂದ ಭಕ್ತರ್ಗೆಲ್ಲ ಭಕ್ತಿಯಿಂದೆರಗುತಂ
ಕಹಳೆ ಮದ್ದಳೆ ಶಂಖಪಟಹ ನಾದಂಗಳಿಂ
ಬಹು ವಿಧದ ಕಿರು ಘಟೆಯು ಬಹಳ ಸ್ವನಂಗಳಿಂ
ಶರಣರೊಡಗೂಡಿ ಶಿವನಂ ಕೇಳಿಸುತ್ತಮಿರೆ
ಪರಿಪರಿಯು ಸಂತಸದ ಸುಖದೊಳೋಲಾಡುತಿರೆ

ನಂದರಾಜಂ ಕೇಳ್ದು ಕೌತುಕಮನೆಡೆಗೊಂಡು
ಬಂದು ಸಯ್ಗಡೆದು ಬಾಣನನಾಗಳಿದಿರ್ಗೊಂಡು
ಗಜಮಸ್ತಕದ ಮೇಲೆ ಪುರದೊಳಗೆ ಮೆರೆಯಿಸುತೆ
ನಿಜ ರಾಜಧಾನಿಯೊಳ್ ನೇಹದಿಂ ಮೆರೆಯಿಸುತೆ
ಇರಲಂದು ತೊಡಗಿಪರ ಸೇವೆಯುಂ ಪಿಂಗಿದಂ
ಹರನ ನಿಷ್ಠೆಯು ಭಾವಭಕ್ತಿಯೊಳ್ ಹೊಂಗಿದಂ
ಇಂತು ಪಲವುಂ ಕಾಲವೀಶನಂ ಪೊಗಳುತಿರೆ
ಸಂತತಂ ಶಿವನ ಮೆಲ್ಲಡಿಗೆ ತೊತ್ತಾಗುತಿರೆ
ಬಂದುದೊಂದಗ್ಗದ ವಿಮಾನವಾಕಾಶದಿಂ
ಅಂದು ನೋಳ್ಪರ ಕಣ್ಗೆ ಸೂರ್ಯ ಪ್ರಕಾಶದಿಂ
ಬರೆ ವಿಮಾನವನೇರಿ ರಜತಗಿರಿಗೆಯ್ತಂದು
ಪುರಹರನ ಚರಣಕ್ಕೆ ಸೈಗೆಡೆವುತುಂ ನಿಂದು
ಕಂಡು ಬಾಣಂಗೆ ಗಣಪದವಿಯುಂ ನಲಿದಿತ್ತು
ಖಂಡೇಂದುಮೌಳಿ ಪರಮ ಸ್ನೇಹಮುಂ ಪೊತ್ತು
ಭಕ್ತ ಜನದಿಚ್ಛೆಯುಂ ಸಲಿಸುವ ಕೃಪಾಸಿಂಧು
ಭಕ್ತರೇನೆಂದುದಂ ಮಾಡುವ ದಯಾಬಂಧು
ಭಕ್ತ ಗುರುಭಕ್ತನಿಧಿ ಭಕ್ತರ ಮನೋಹರಂ

ಭಕ್ತಗತಿಭಕ್ತ ಮತಿಭಕ್ತ ಸಂಪತ್ಕರಂ
ಪಂಪಾಪುರಾಂಬೋಧಿ ಪೂರ್ಣೇಂದು ಒಪ್ಪಿದಂ
ಹಂಪೆಯ ವಿರೂಪಾಕ್ಷನನವರತವೊಪ್ಪಿದಂ

ಕಂದ॥ ವಾಣೀಪತಿಹರಿಯರಿಯದ
ಜಾಣಂ ಕಲ್ಯಾಣ ಸದನನೆನಗೊಲವಿಂದಂ
ಕ್ಷೀಣತರಪದವ ನೀವುದು
ಬಾಣನ ಸುತನೆಂದು ಹಂಪೆಯ ವಿರೂಪಾಕ್ಷಾ ॥



# ಉದ್ಭಟದೇವರ ಮಹಾತ್ಮೆ.

ಕಂದ|| ಪಟುತರದಿಂ ಸತಿ ನುಡಿದಾ ।
ಘಟಿತಮೆನೆ ಘಟಿಯಿಸುವೆನೆನಲ್ಕೊಂಡೊಯ್ದಂ ॥
ನಿಟಿಲಾಕ್ಷಂ ಪುರಸಹಿತು ।
ದ್ಭಟದೇವನೆಮ್ಮ ಹಂಪೆಯ ವಿರೂಪಾಕ್ಷಂ ॥

## ರಗಳೆ.

ಉರ್ವಿಯೊಳೊಂದು ಪುರಂ ರಂಜಿಸುವುದು
ಶರ್ವನ ಸದ್ಭಕ್ತಿಯನುದ್ಧರಿಪುದು
ಅಲ್ಲಿರ್ಪಂ ಶಿವಭಕ್ತಿ ಸದರ್ಥಂ
ಸಲ್ಲಲಿತಂ ಶಿವನೊಳಗೇಕಾರ್ಥಂ
ಆತನ ಪೆಸರೆಸೆವುದ್ಭಟದೇವಂ
ನೂತನ ಚಿತ್ತ ಸುಪೂಜಾಭಾವಂ
ಬಲವರ್ಪುದು ಕಾಲೊಳಗಿಡಿದಿರ್ಪುದು
ನಲಿವರ್ಪುದು ಮನದೊಳ್ನಿಲಸಿರ್ಪುದು
ಕರಣಂಗಳ್ ಶಿವನುಪಕರಣಂಗಳ್
ಪರಿಚಾರಕರಿಂದ್ರಿಯ ವರ್ಗಂಗಳ್
ಹೃದಯ ಸರೋಜಂ ಸೆಜ್ಜೆಯದಾಗಿರೆ
ಸದಮಳ ಮನವೇ ಕುಸುಮವದಾಗಿರೆ
ಹರಣಂ [redacted]ಲಿಂಗವೆ ತಾನಾಗಿರೆ
ಪರಿಣಾಮವೆಯಮೃತಾನ್ನವದಾಗಿರೆ
ಆರಾಧಿಪನಿರುಳುಂ ಪಗಲುಂ ಸಲೆ
ಪೂರೈಸುವ ಪೂಜೆಯೊಳೀಶಂ ನಿಲೆ
ಶಿವನೊಳ್ನೋಟಂ ಶಿವನೊಳ್ಕೂಟಂ
ಶಿವನೊಳ್ಮಾಟಂ ಶಿವನೊಳ್ಬೇಟಂ
ಹಾಡುವುದೆಲ್ಲಂ ಸಕಲಸ್ತೋತ್ರಂ
ಮಾಡುವುದೆಲ್ಲಂ ಪೂಜಾಸ್ತೋತ್ರಂ

ನೆನೆದುದೆ ಎಲ್ಲಂ ಪರಮಧ್ಯಾನಂ
ತನುಚೇಷ್ಟೆಗಳೀಶ್ವರನನುಮಾನಂ
ತಾನಾಗಿರೆ ಭಕ್ತಿಯು ಕರುವಾದಂ
ನಾನಾ ಸಾಮರ್ಥ್ಯದ ನಿಧಿಯಾದಂ
ತ್ರೈಕಾಲಜ್ಞಾನಮನೊಳಕೊಂಡಂ
ಲೋಕೈಕ ಪ್ರಭುವಂ ಕೆಳೆಗೊಂಡಂ

ಇಂತುದ್ಭಟದೇವಂ ನೆರೆ ಮೆಱೆದಿರೆ
ಸಂತತ ಶಿವನಾನಂದದೊಳೊಪ್ಪಿರೆ
ತನ್ನ ಮನೋವಲ್ಲಭೆ ಎನಿಸಿರ್ಪಳ್
ಉನ್ನತ ಶಿವಪೂಜಾ ಸುಖಿಯಪ್ಪಳ್
ಮನಕವಯವವಾದಂತೆಸೆದಿರ್ಪಳ್
ತನುವೆರಡೊಂದೇ ಜೀವೆನಿಸಿರ್ಪಳ್
ಜೀವಕಳೆಗಳಂ ಕಲೆಯೊಳ್ತೋರ್ಪಳ್
ಭಾವದ ಬಳಿಕೆಯು ಬೆಳಸೆನಿಸಿರ್ಪಳ್
ಇಂತೆನಿಪಾ ವಲ್ಲಭೆಯುಂ ತಾನುಂ
ಸಂತ ಸುಖದೊಳೊಲಿದಿರ್ದುಂ ತಾನುಂ

ನೆತ್ತದ ಭರದಿಂದಾಡುತ್ತಿರೆಯಿರ್
ಮುತ್ತುವದಾಯಕ್ಕುತ್ಸವಿಸುತ್ತಿರೆ
ಇರ್ದಿರ್ದುದ್ಭಟದೇವಂ ನಸುನಗೆ
ಸಾರ್ದು ಶಿವೈಕ್ಯ ಜ್ಞಾನಿ ಕರಂ ನಗೆ
ಸೆಡೆದುಳ್ಸಯ್ವಳ್ಮನದೊಳ್ಮುನಿವಳ್
ಬಡವಾಡಳ್ ಮಾಸಿನಿ ಬಸವಳಿದಳ್
ಹಾಸಂಗಿಯನಿಳಿಪುತೆ ಹೊರೆಯಿಳಿದಳ್
ಲೇಸಾಯ್ತಾಟವೆನುತ್ತಂ ನುಡಿದಳ್
ಏಕಾಯ್ತೀಗಳ ಕಾರಣ ಹಾಸ್ಯಂ
ಏಕೆನ್ನಿಂದುಂಟೇಯುಪಹಾಸ್ಯಂ
ಏತರ ಕುಂದಂ ಕಂಡಿರಿ ನೀವೆನೆ
ಏತಕ್ಕಾದುದು ನಸುನಗೆ ನಿಮಗೆನೆ

ನಿನ್ನಯು ಕಾರಣವಲ್ಲಂಬುಜಮುಖಿ
ಎನ್ನಯು ಶರಣರ ಸಂಗಂ ಶಶಿಮುಖಿ
ಸೌರಾಷ್ಟ್ರದೊಳಿರ್ದೋಹಿಲದೇವಂ
ತಾರಾದ್ರಿಗೆ ನೆಗೆಯುತೆ ಶಿವಭಾವಂ
ಪಶುಪತಿಯೊಲವೊಚ್ಚತವಾಗಿರ್ದಂ
ಶಶಿಧರನೊಳ್ಸಂಮತವಾಗಿರ್ದಂ
ಓರ್ವನೆ ಪೋದಂ ದೇಶಿಗರಂದದಿ
ಶರ್ವನ ಕರುಣಂಬಡೆಯುದರಂದದಿ
ಘಂಟೆಯು ಮೊಳಗಾಗೆಯೆ ತಾಂ ಬಿರ್ದುದು
ನಂಟರ್ನಲ್ಲರ್ನೋಡುತ್ತಿರ್ದುದು
ಇದು ಕಾರಣದಿಂ ನಸು ನಗುತಿರ್ದೆಂ
ಸದಮಳ ಭಕ್ತಂಗಾಂ ನಗುತಿರ್ದೆಂ

ಎನೆ ಕಟಕಿಯು ನುಡಿ ಆಡಲು ಕಾಮಿನಿ
ಮನದೊಳ್ನಸುನಗುತೆಂದಳ್ಮಾನಿನಿ
ನಗೆಯೊಪ್ಪುವುದೀ ಪುರ ಸಹಿತೊಯ್ದಡೆ
ನಗೆ ಸಫಲಂ ನಗುವಂದದೊಳೊಯ್ದಡೆ
ಕುಳ್ಳಿರ್ದೆಲ್ಲರನಾಡಲ್ಬಹುದೇ
ಒಳ್ಳಿಯರಂ ಹೊಲ್ಲಹನೆನಬಹುದೇ
ಮಾತ ನುಡಿಯೆ ಮಾತಿನೊಳೇನಪ್ಪುದು
ನೂತನ ಗುಣಮಂ ತೋರಲ್ವೇಳ್ಪುದು

ಎಂದೊಡೆ ಮನದೊಳ್ ಘಡಿಘುಡಿಸುತ್ತುಂ
ಇಂದುಧರನ ಶರಣಂ ನೋವುತ್ತುಂ
ಪುರಮಂ ಕೊಂಡೊಯ್ದಪೆನರಿದಾವುದು
ಧರೆ ಚಿತ್ರವೆನಲ್ಕೊಯ್ದಪೆನೇವುದು
ನಾಡಿದು ಪೋಪೆಂ ಸೋಮನವಾರಂ
ಮಾಡುವುದುಂ ಮಾಡೆನುತುಂ ಧೀರಂ
ಇರೆ ಮಾನಿನಿಯಣಕಕ್ಕಣಕಿಸುತಿರೆ
ಹರಭಕ್ತಂ ಕೊಂಡೊಯ್ದಪೆನೆನುತಿರೆ

ಕೊಂಡೊಯ್ವಂ ಕೊಂಡೊಯ್ವಂ ಪುರವಂ
ಕಂಡರಿಯವೆ ಕೇಳುದ್ಭಟನಿರವಂ
ಎನುತಂ ದೆಸೆಗೈಗಾವುದರಂ ತರೆ
ತನಗುಳ್ಳವರಂ ನೆರೆ ಬರಿಸುತ್ತಿರೆ
ಸಾರಿಸುತುಂ ದೆಸೆದೆಸೆಗಟ್ಟುತ್ತಿರೆ
ಮೀರಿದ ಮಾತಂ ನೆರೆ ಹರಿವುತ್ತಿರೆ
ಎನಿತೆನಿತುಂ ಸತಿ ಸಂಭ್ರಮಿಸುತ್ತಿರೆ
ಅನಿತನಿತುಂ ಭಕ್ತಂ ಮೀರುತ್ತಿರೆ
ಸರ್ವ ಜನಂ ಶಿವಪುರಮಂ ತೀವುತೆ
ಶರ್ವನ ಗಣಪದಕೆಲ್ಲಂ ಬಯಸುತೆ
ಪಾಪಿಗಳುಂ ನಿಷ್ಪಾಪಿಗಳೆಲ್ಲಂ
ತಾಪತ್ರಯದಿಂ ಬೇವವರೆಲ್ಲಂ
ತಂಡದೊಳೆಯ್ತಂದೊಲವಿಂ ತೀವಿತು
ಕಂಡವರುಂ ಕೇಳ್ದವರುಂ ತೀವಿತು
ಇನಿತು ಪುರಂ ನರರಂತಾಯ್ತಂತಿರೆ

ಅನಿತಾ ಮಾನಿನಿ ನುಡಿಗಳ್ತೀವಿರೆ
ಕೊಂಡೊಯ್ದೊಡೆ ಕೈಲಾಸದೊಳಿರ್ಪೆಂ
ಅಂಡಲೆವ ದುರಿತಗಳ ನೀಗಿರ್ಪೆಂ
ಇಲ್ಲಾ ಭಕ್ತನನೇ ಭಂಗಿಸುವೆಂ
ಎಲ್ಲಾ ಪಿರಿಯರೊಳಂ ಪಿಂಗಿಸುವೆಂ
ಎರಡುಂ ಪರಿಯಿಂದೆನಗೇ ಕಾರ್ಯಂ
ಹರಭಕ್ತಂಗರಿದಘಟಿತ ಕಾರ್ಯಂ
ಎನುತುದ್ಭಟನಲ್ಲಿಗೆ ನಡೆತಂದಳ್
ಘನ ಮಹಿಮನ ಸನ್ನಿಧಿಗೆಯ್ತಂದಳ್
ಬಂದುದು ವಾರಂ ನಿಂದುದು ಜನವಿದೆ
ಇಂದವೆ ಕೊಂಡೊಯ್ವುದು ತಳ್ವಿಲ್ಲದೆ
ಎನಲುದ್ಭಟದೇವಂ ನಡೆತಂದಂ
ಮನದೊಳಗೆರಡಿಲ್ಲದನೆಯ್ತಂದಂ
ಬಂದು ಶಿವಾಲಯದೊಳಗಂ ಪುಗುತಂ

ನಿಂದುದ್ಧೂಳನದಿಂದಂ ಮಿಗುತಂ
ರುದ್ರಾಕ್ಷಿಗಳಂ ಮೇಳೈಸುತ್ತಂ
ರುದ್ರನನೊಳಗಳವಡಿಸುತೆ ಬರುತುಂ
ಶಿವಲಿಂಗಕ್ಕಭಿಷೇಕಂ ಮಾಡುತೆ
ನವ ಪರಿಮಳ ಪೂಜೆಗಳಂ ಮಾಡುತೆ
ಧೂಪಾರತಿಗಳ ನಲವಿಂದೆತ್ತುತೆ
ಭಾಪುರೆ ಶಿವ ಎಂದಭವನ ನೋಡುತೆ
ಆರೋಗಿಸಲಿತ್ತನುನಯದಿಂದಂ
ಧೀರಂ ತಾಂಬೂಲವನೊಲವಿಂದಂ
ಕುಡುತಂ ಸದಮಳ ಮತಿ ಕುಳ್ಳಿರ್ದಂ
ಕಡು ಸಲುಗೆಯು ಶರಣಂ ಕುಳ್ಳಿರ್ದಂ
ಉದ್ಭಟನದ್ಭುತ ಗುಣಿ ಕುಳ್ಳಿರ್ದಂ
ಸದ್ಭಕ್ತಂ ಯುಕ್ತಂ ಕುಳ್ಳಿರ್ದಂ
ಹರನಂ ಚಿತ್ತದೊಳಿರಿಸುತ್ತಿರ್ದಂ
ಹರಲೀಲೆಯನುದ್ಯೋಗಿಸುತಿರ್ದಂ
ಸ್ವೇದಂ ಗದ್ಗದಮುಣ್ಮುತ್ತಿರೆ ಇರೆ
ಸಾದರದಿಂ ಪುಳಕದಿ ನೆಗೆಯುತ್ತಿರೆ
ಆನಂದಜಲಂ ಕೋಡಿಗೊಳುತ್ತಿರೆ
ನಾನಾ ನೂತನ ರಸ ಒಸರುತ್ತಿರೆ
ಮೃಡ ಮೂರ್ತಿಯ ವರ್ಣನೆಯಂ ತೊಡಗಲ್

ಜಡೆಮುಡಿಗೊಂದೇ ಪದ್ಯಮನೆಸಗಲ್
ಪುರವೇಳ್ದುದು ಪುರವೇಳ್ದುದು ಶಿವ ಶಿವ
ನರಲೋಕಕ್ಕದ್ಭುತವೆನೆ ಶಿವ ಶಿವ
ಪದ್ಯಕ್ಕಂ ನೂರುಂ ಯೋಜನವಂ
ಚೋದ್ಯಂ ನೆಗೆವುತ್ತಿರ್ದುದು ನಭವಂ
ಪುರವಡರುತ್ತಿರೆ ಪುರಜನರರಿಯರು
ಧರಣಿಯ ಜನ ಬೆರಗಾಗುತ್ತಿರ್ದರು
ಪುರವಳಯಂ ಹರಿಗೋಲಂತಿರ್ದುದು
ಪುರಜನವೇರಿದ ಜನದಂತಿರ್ದುದು
ಗಗನಂ ಭವವಾರಿಧಿಯಂತಿರ್ದುದು

ಬಗೆ ಮಿಗೆ ಭರದಿಂದಡರುತ್ತಿರ್ದುದು
ದಾಂಟಿಸುವುದ್ಭಟನಂಬಿಗನಂತಿರೆ
ದಾಂಟ ನೆಗೆವುತ್ತಿರ್ದುದು ಬಣ್ಣಿಸುತಿರೆ
ಜಡೆಯಿಂ ಶ್ರೀಚರಣಂಬರೆ ಬಣ್ಣಿಸೆ
ತಡೆಯದೆ ನೂರುಂ ಪದ್ಯಂ ರಚಯಿಸೆ

ಕಾಮಾರಿಯ ಸದ್ಭಕ್ತನನರಿಯದೆ
ಕಾಮಿನಿ ನುಡಿದಳ್ಪೋಪುದನರಿಯದೆ
ಆದುದು ಮಧ್ಯಾಹ್ನವಿದೇನುದ್ಭಟ
ಪೋದುದು ನಿನ್ನಯ ಬಾಷೆಯುದುಕ್ಕಟ
ಎನೆ ನಸುನಗುತುಂ ಮೇಲುಂ ನೋಡೆನೆ
ದಿನಕರನೇರಿದ ಪೊಳ್ತಂ ನೋಡೆನೆ
ನೋಡಿದಳಂ ತಾ ಮಾನಿನಿ ಮೇಲಂ
ನೋಡಲ್ರಜತಾಚಲದ ವಿಶಾಲಂ
ಶಶಿರವಿಕೋಟಿಗಳಂ ಭಂಗಿಸುತಿರೆ
ಪೊಸ ಪೊಸ ಬೆಳಗಿಂ ಘುಳುಘುಳಿಸುತ್ತಿರೆ
ನೋಡಲ್ಕುಮ್ಮದೆ ಕಣ್ಣಂ ಮುಚ್ಚುತೆ
ನೋಡಿದ ಭಯದಿಂ ಮನದೊಳ್ಬೆಚ್ಚುತೆ
ಉದ್ಭಟದೇವಂಗಂ ಮೆಯ್ಯಿಕ್ಕುತೆ
ಅದ್ಭುತ ರಸದೊಳಗಾಳುತ್ತೇಳುತೆ
ಇರೆ ನೆಗೆದುದು ಪುರವಡರಿತು ನಭವಂ
ಸುರಗಿರಿಯಂ ಮೀರಿತ್ತತಿ ವಿಭವಂ

ಕೈಲಾಸಪುರ ದ್ವಾರದ ಮುಂದಂ
ಶೈಲಜೆಯರಸನ ಭವನದ ಮುಂದಂ
ನಿಂದಿರಲುದ್ಭಟದೇವಂ ಬಂದಂ
ಇಂದುಧರನ ಆಜ್ಞೆಗೆ ನಡೆತಂದಂ
ನಡೆತರುತಂ ಕಾರುಣ್ಯಾಂಬೋಧಿಗೆ
ಕಡು ಸಲಿಗೆಯ ಶರಣರ ಸಂತೋಷಿಗೆ
ನೆನೆವರ ಮನದಾನಂದ ಪ್ರತತಿಗೆ
ಅನುನಯದಿಂ ಬಣ್ಣಿಸುವರ ಸುಮತಿಗೆ

ಬ್ರಹ್ಮಾಂಡ ಪ್ರಕರಾವೃತ ಕೀರ್ತಿಗೆ
ಬ್ರಹ್ಮಂ ಪೆಸರಿಡಬಾರದ ಮೂರ್ತಿಗೆ
ನೆನೆಯುದ ಮುನ್ನಂ ಕರುಣಿಪ ದಾನಿಗೆ
ನೆನೆವರನಘದಿಂದೆತ್ತುವ ಮಾನಿಗೆ
ಮೆಯ್ಯಿಕ್ಕಿದನುದ್ಭಟದೇವಂ ಸಲೆ
ಮೆಯ್ಯೊಳ್ಪುಳಕಾವಳಿ ಕೀಲಿಸಿ ನಿಲೆ
ಕಂಡಾಗಳೆ ಶಂಕರನೊಲವಿಂದಂ
ಕಂಡಾ ನಂದೀಶ್ವರ ಧರೆಯಿಂದಂ
ಪುರ ಸಹಿತಂ ನಡೆತಂದವರುಂಟೇ
ತರುಣಿಯು ನುಡಿಯುಂ ಸಲಿಸಿದರುಂಟೇ
ಹರಲೀಲೆಯು ನೆರೆ ತಾಳ್ದವರುಂಟೇ
ಧರೆ ಚಿತ್ರವೆನಲ್ಬಂದವರುಂಟೇ
ಎಂದುದ್ಭಟದೇವನನೆತ್ತುತ್ತಂ
ಕುಂದದ ಕೃಪೆಯಿಂ ಬಿಗಿದಪ್ಪುತ್ತಂ
ಗಣ ಪದವಿಯನಾನಂದದಲೀವುತೆ
ಗಣ ಸಂತತಿಗತಿಶಯದಿಂದರಿಪುತೆ
ಪುರಮಂ ಶಿವಲೋಕದೊಳೊಲ್ದಿರಿಸುತೆ
ಪುರಜನಕೆಲ್ಲಂ ಕರುಣಪಸೀವುತೆ
ಶಶಿರವಿ ಶಿಖಿಲೋಚನನೊಪ್ಪಿರ್ದಂ
ಪಶುಪತಿ ಗಿರಿಜಾಪತಿಯೊಪ್ಪಿರ್ದಂ
ನೀಲಗಳ ನಿರ್ಮಳನೊಪ್ಪಿರ್ದಂ
ಕಾಲಹರಂ ಪುರಹರನೊಪ್ಪಿರ್ದಂ
ಭೀಮಂ ಭರ್ಗಂ ಭವನೊಪ್ಪಿರ್ದಂ
ಸೋಮಂ ಶಾಂತಂ ಶಿವನೊಪ್ಪಿರ್ದಂ
ಹೆಂಪಿನ ಹೆಚ್ಚಿನ ನಿಧಿಯೊಪ್ಪಿರ್ದಂ
ಹಂಪೆಯ ವಿರುಪಂ ತಾನೊಪ್ಪಿರ್ದಂ

**ಕಂದ||** ದೇವರ ದೇವಂ ದೇವರ
ಜೀವಂ ದಯೆಯಿಂದಲೆನಗೆ ಚಂದ್ರಾಭರಣಂ
ಭಾವಿಸಿ ಭಕ್ತಿಯನುದ್ಭಟ
ದೇವನ ಸುತನೆಂದು ಕುಡುಗೆ ಹಂಪೆಯರಾಯಂ||

# ಹಲಾಯುಧದೇವರ ರಗಳೆ.

ಕಂದ॥ ಶ್ರೀ ವಿಶ್ವೇಶ್ವರನಭವಂ
ದೇವ ಕುಲಾರ್ಕಂ ಪುರಾರಿವೆರದಂ ಶಿವಪ
ದ್ಭಾವಿ ಎನಿಪ್ಪ ಹಲಾಯುಧ
ದೇವನನೊಲವಿಂ ಹಂಪೆಯ ವಿರೂಪಾಕ್ಷಂ॥

## ರಗಳೆ.

ಉತ್ತರದಿಶಾಭಾಗದೊಳ್ಕೀರ್ತಿಯಂ ಪಡೆದು
ಒತ್ತರಿಪ ಮಾಯೆಯಂ ಸಚ್ಚರಿತದಿಂ ಗೆಲಿದು
ಇರ್ಪುದು ನವಗ್ರಾಮವೆಂಬ ಪುರವಂತಲ್ಲಿ
ಇರ್ಪನೋರ್ವಂ ಶಿವನ ಭಕ್ತನೊಲವಿಂದಲ್ಲಿ
ತನ್ನ ನಾಮಂ ಹಲಾಯುಧನೆಂಬುದಾಗಿರಲ್
ತನ್ನ ಕೆಯ್ಯಾರ್ಚನೆ ಶಿವಂಗೆ ಸವಿಯಾಗಿರಲ್
ನಡೆತಂದು ಶಿವನಿಳಯಮಂ ಪೊಕ್ಕು ಕೈಮುಗಿದು
ಮೃಡ ಮೂರ್ತಿ ಘನಕೀರ್ತಿ ಎನುತ ಕೆಯ್ಯಂ ಮುಗಿದು
ತೆಗೆದಪ್ಪಿ ಮುಂಡಾಡಿ ಮುದ್ದಾಡಿ ಮತ್ತಪ್ಪಿ
ನೆಗೆವ ಪುಳಕಂಗಳಂಗದೆ ಕೀಲಿಸುತ್ತಪ್ಪಿ
ಅಪ್ಪಳಿಯದಲ್ಲಿ ಮಜ್ಜನಕೆರೆದು ತಳ್ಕಿರಿದು
ತಪ್ಪಿ ತಡಬಡಿಸುತುಂ ಪೊಸಪೂಜೆಯಂ ಮೆರೆದು
ಕುಣಿಯುತ್ತೆ ಮಣಿಯುತ್ತೆ ಧೂಪಮಂ ನಲಿದಿತ್ತು
ತಣಿಯುತ್ತೆ ತೂಗುತ್ತೆಯಾರತಿಗಳಂ ಪೊತ್ತು
ಆರೋಗಣೆಯನಿತ್ತು ವೀಳೆಯಂಗಳನಿತ್ತು
ತಾರಾದ್ರಿಯರಸಂಗೆ ಸಕಳ ಸುಖಮುಮನಿತ್ತು
ಪೊಸಗಬ್ಬಮಂ ಗದ್ಯಪದ್ಯಂಗಳಂ ಪೇಳ್ದು
ಅಸಮಾಕ್ಷನೊಳ್ಸಂದ ಕಿಂಕರತೆಯಂ ತಾಳ್ದು
ಇರ್ಪನೊಪ್ಪುತ್ತಿರೆ ಹಲಾಯುಧಂ ಹರುಷದಿಂ
ಸರ್ಪಭೂಷಣನ ಸದ್ಭಕ್ತಿ ಸಂಸ್ಪರ್ಶದಿಂ

ಇರಲಾ ನವಗ್ರಾಮದ ಪ್ರಭುಗಳೆಲ್ಲರುಂ
ಹರುಷದಿಂ ಕೊಂಡಾಡುತಿರ್ಪರೊಲ್ದೆಲ್ಲರುಂ
ಆ ನವಗ್ರಾಮಕ್ಕೆ ತಾನೆ ಸಜ್ಜನನಾಗಿ
ಏನೆಂಬೆ ಶಂಕರಾರ್ಚನೆಗೆ ಸಿರಿಕರನಾಗಿ
ಎಲ್ಲರುಂ ಸದ್ಭಕ್ತರಂ ಯುಕ್ತರಂ ಮಾಡಿ
ಎಲ್ಲರುಂ ಸತತ ಪೂಜಾಸಕ್ತಿಯೊಳ್ಕೂಡಿ
ಭಾಳಕ್ಕೆ ಭೂತಿ ನಾಲಿಗೆಗೆ ಪಂಚಾಕ್ಷರಂ
ಗಳಭುಜಾದ್ಯಂಗಕೆ ರುದ್ರಾಕ್ಷಿ ವಿಸ್ತರಂ
ಕಿವಿಗೆ ಶಿವಕೀರ್ತಿ ಕಣ್ಗಳಿಗಚ್ಚ ಸುಖಜಳಂ
ತವಕಿಸುವ ಭಾವಕ್ಕೆ ಶಿವಮೂರ್ತಿಯುಜ್ವಳಂ
ಕೆಯ್ಗಳ್ಗೆ ಸುಖವೊಸರ್ವ ಸಂಪದದ ಕಂಪನಂ
ಮೆಯ್ಗೆ ನಳನಳಿಸಿ ಬಳೆ ಬಳೆವ ಪುಳಕದ ಬನಂ
ತೊಡಿಗೆಯಾಗಿರೆ ಮಾಡಿದಂ ನವಗ್ರಾಮದೊಳ್
ಮೃಡನಲ್ಲದರಿಯದ ಹಲಾಯುಧಂ ಪ್ರೇಮದೊಳ್
ಇಂತು ನೋಡುತ್ತಮಾಡುತ್ತ ಹಾಡುತ್ತಮಿರೆ
ಸಂತತಂ ಶಿವಭಕ್ತಿ ಪರ್ಬಿ ಪಲ್ಲವಿಸುತಿರೆ

ಒಂದು ದಿವಸಂ ನವಗ್ರಾಮದ ಪ್ರಭುಕುಳಂ
ಒಂದೂರ್ಗೆ ಬಂದೆಲ್ಲರುಂ ಭಕ್ತ ಸಂಕುಳಂ
ಪರಮ ಭಕ್ತಂ ಹಲಾಯುಧಗಣವರನ ಕೂಡೆ
ನೆರೆದು ಶಿವಗೋಷ್ಠಿಯಿಂದಾನಂದವಳ್ಕಾಡೆ
ಇರೆ ಮಾತುಮಾತಿಂಗೆ ಗೋಷ್ಠಿ ಮೀರುತ್ತಿರಲ್
ಹರಭಕ್ತರೊಳಧಿಕರ ಪ್ರಸಂಗಂ ಬರಲ್
ಓಹಿಲಯ್ಯಂ ಶರೀರಂ ಬೆರಸು ಪೋಗಲ್ಕೆ
ಸಾಹಸದೆ ನಸುನಗುತ ಪುರಸಹಿತ ಪೋಗಲ್ಕೆ
ಉದ್ಭಟಂಗಲ್ಲದಿನ್ನುಳಿದರ್ಗೆ ತೀರ್ವುದೇ
ಅದ್ಭುತ ರಸಂ ಮಿಕ್ಕ ಭಕ್ತರ್ಗೆ ಸಾರ್ವುದೇ

ಎನೆ ಹಲಾಯುಧದೇವನುಬ್ಬಸಂಗೊಂಡಲ್ಲಿ
ಮನದೊಳಗೆ ಶರಣನತಿ ಹುರುಡಿಸುತ್ತಂತಲ್ಲಿ

ಶಿವನೊಲ್ದೊಡರಿದೇನು ಪುರವನೊಯ್ದುದು ಪಿರಿದೆ
ಭವನ ಕಾರುಣ್ಯ ಉಳ್ಳೊಡೆ ತಾಸಿವೆಲ್ಲರಿದೆ

ಎಂದೊಡೆ ಹಲಾಯುಧಂಗೆಂದರಾ ಗೌಡಗಳ್
ಸಂದಣಿಸ ಕಟಿಕೆಗಳನಾಡಿದಪ್ರಭುವುಗಳ್
ಉದ್ಭಟನನಾಳಿಗೊಳ್ವಂ ಹಲಾಯುಧ ನಿನಗೆ
ಸದ್ಭಕ್ತನಪ್ಪೆ ನೆರೆ ಕೊರತೆಯುಂಟೇ ನಿನಗೆ
ಇಂತಾಳಿಗೊಳ್ವವರ್ಘನವಲ್ಲದಿರ್ಪರೇ
ಕಂತುಮದಹರನಲ್ಲಿಗೋರ್ವನೇ ಪೋಪರೇ
ಎಮ್ಮೀ ನವಗ್ರಾಮಮುಂ ಒಯ್ಯದಿರ್ಪಿರೇ
ಎಮ್ಮೆಲ್ಲರಂ ಶಿವನ ಮುಂದಿರಿಸದಿರ್ಪಿರೇ

ಎಂದ ಕಟಿಕಿಗಳಂ ಹಲಾಯುಧಂ ಕೇಳುತಂ
ನಿಂದು ಬಾಷೆಗಳನಿತ್ತಂ ಸಭೆಯೊಳುಬ್ಬುತಂ
ನಿಮ್ಮ ನುಡಿಯಲ್ಲ ಶಿವನ ಪ್ರೇರಣೆ ಎಂದೆನುತೆ
ನೀವೆಂದ ಮಾಳ್ಕೆಯಿಂ ಕೊಂಡು ಪೋದಪೆನೆನುತೆ
ಒಂದು ಪುರಮಂ ಕೊಂಡು ಪೋದನುದ್ಭಟನಲ್ಲಿ
ಸಂದಿಸಿ ನವಗ್ರಾಮ ಸಹಿತವೆಯ್ದುವೆನಿಲ್ಲಿ
ಉದ್ಭಟಂಗುಳ್ಳ ಚಂದ್ರಾಭರಣವೆನಗಿಲ್ಲ
ಅದ್ಭುತಂ ಮಾಳ್ಪೆನೀ ಕಟಿಕಿಗಳೆಮಗೆ ಸಲ್ಲ
ನಾಳೆ ಕೊಂಡೊಯ್ವಪೆಂ ಹೊಯ್ವಂಗುರವನೆಂದು
ಶೂಲಿಯಣುಗಂ ಹೊಯ್ಸಿದಂ ಧರೆ ನಡುಗಲಂದು
ಸಡಿಫಡ ನರೋರಗರೊಳಡ್ಡ ಬರ್ಪವನಾವ
ನಡೆಗೊಂಡು ಭಕ್ತಿಕಳೆಗಿದಿರಪ್ಪನಿನ್ನಾವ
ಎಂದು ಘರ್ಜಿಸಿ ಗಜರಿ ಶಿವರಾತ್ರಿಯಂ ಮಾಡಿ
ಮುಂದೆ ಬೆಳಗಾಗೆ ಭಸಿತೋದ್ಧೂಳನಂ ಮಾಡಿ
ನಡೆವೆಂ ನವಗ್ರಾಮ ಸಹಿತಾಗಿ ನೋಡೆನುತೆ
ಮೃಡನಾಲಯಕ್ಕೆ ಬಂದಂ ಸಾರು ಸಾರೆನುತೆ

ಬಂದು ಶಿವನಂ ನೋಡಿ ಶಂಕರಾ ಶಶಿಧರಾ
ಇಂದೆನಗೆ ಕರುಣಿಪುದು ಗಿರಿಜಾ ಮನೋಹರಾ

ದೇವ ನೀಂ ಕರುಣಿಸಿದೊಡೆನಗೆ ತೀರದುದುಂಟೆ
ದೇವ ನೀಂ ಕೃಪೆ ಮಾಡಲಾವುದೊಂದರಿದುಂಟೆ
ಕರುಣಿಸಲಿರುಂಪೆಯುದು ಬ್ರಹ್ಮನಾಗದೆ ದೇವ
ಕರುಣಿಸಲ್ಕಷಕನುಂ ವಿಷ್ಣುವಾಗದೆ ದೇವ
ಭಕ್ತರಭಿಮಾನವೇ ಭಕ್ತರಾಧೀನವೇ
ಭಕ್ತರನುಕೂಲವೇ ಭಕ್ತರ ನಿಧಾನವೇ
ಜಯ ಸುರನದೀತರಂಗಾವೃತಜಟಾಭಾರ
ಜಯ ಸುಧಾಕರ ಕಳಾಧರ ಮಂಗಳಾಕಾರ
ಜಯ ಲೋಚನತ್ರಯ ವಿರಾಜಿತ ಮಹಾ ಪ್ರಭುವೆ
ಜಯ ಸರ್ಪರಾಜಕುಂಡಲಮಂಡಿತ ಪ್ರಭುವೆ
ಜಯ ವಿಮಳಪಂಚಮುಖರಂಜಿತಸದಾಶಿವನೆ
ಜಯ ನೀಲಕಂಠ ಭವಹರ ಭವಾನೀ ಧವನೆ
ಜಯ ದಶಭುಜಾದಂಡ ಜಯ ಗಜಾಜಿನಗಾತ್ರ
ಜಯ ಪುಂಡರೀಕ ಚರ್ಮಾವರಣಕಟಿಸೂತ್ರ
ಜಯ ಕಮಳನೇತ್ರಪೂಜಿತಪಾದಸರಸಿರುಹ
ಜಯ ಸಕಳಭಕ್ತಕಾಮಿತಕಲ್ಪಭೂಮಿರುಹ
ಜಯ ನಿತ್ಯ ಜಯ ಸತ್ಯ ಜಯ ಭರ್ಗ ಜಯ ಭೀಮ
ಜಯ ರುದ್ರ ಜಯ ಭದ್ರ ಜಯ ರಾಮ ಜಯ ಸೋಮ

ಎಂದು ಪೊಗಳ್ವನಿತಕ್ಕೆ ಪುರವೇಳ್ದುವಮ್ಮಮ್ಮ
ಚಂದದ ನವಗ್ರಾಮವಾಗಸದೊಳವ್ವಮ್ಮ
ನೆಗೆಯೆ ಪೂಮಳೆಗರೆದವೀ ಧರಾತಳದೊಳಗೆ
ಜಗವರಿಯೆ ದುಂದುಭಿನಾದಂಗಳ್ಮೊಳಮೊಳಗೆ
ಗಗನದೊಳ್ಪೋಗುತಿರೆ ಲೋಕವೆಲ್ಲಂ ಕಂಡು
ಬಗೆಗಗೋಚರವಾಯ್ತೆನಲ್ ಕೌತುಕಂಗೊಂಡು
ಸುಖ ಗೋಷ್ಠಿ ಎತ್ತ ಮಾತಿನ ಮಾತು ತಾನೆತ್ತ
ನಿಖಿಳವರಿಯಲ್ ನವಗ್ರಾಮವೇರುವುದೆತ್ತ
ಒಂದು ಪುರ ಒಂದುದ್ಘಟನ ಕೂಡೆ ನೆರೆ ಪೋಯ್ತು
ಒಂದೆಂದೊಡೊಂಬತ್ತೆನಿಪ್ಪುದಿವರಿಂದಾಯ್ತು
ಆಹಾ ಹಲಾಯುಧನ ಭಾಷೆ ಕೇಳ್ವಗರ್ಗಸೆ

ಆಹಾ ಹಲಾಯುಧನ ಭಾಷೆ ಭಕ್ತಿಗೆ ಲೇಸೆ
ಎಂದಿಂತು ಜನವೆಲ್ಲ ತಲೆದೂಗಿ ಕೊಂಡಾಡೆ

ಬಂದೇರಿದವು ನವಗ್ರಾಮುವಮರರ್ನೋಡೆ
ಇಂದ್ರಾದಿದಿಕ್ಪಾಲ ಪುರವೆಲ್ಲವಂ ದಾಂಟಿ
ಚಂದ್ರ ಮಾರ್ತಾಂಡ ತಾರಾಲೋಕವಂ ದಾಂಟಿ
ಸತ್ಯಲೋಕಕ್ಕೆ ನೆಗೆದುವು ನವಗ್ರಾಮುವಿದು
ಸತ್ಯಶರಣನ ಹಲಾಯುಧನ ಸಾಮರ್ಥ್ಯವಿದು
ದೇವಲೋಕಕ್ಕೆ ಪೊಸತಾಗುತಿರೆ ನಡೆತಂದು
ದೇವ ನಂದೀಶ್ವರನ ಬಾಗಿಲ್ವರಂ ಬಂದು
ನಿಂದಿರಲ್ ಭರದಿಂದಲಿಳಿದಂ ಹಲಾಯುಧಂ

ಇಂದುವೌಳಿಯನೀಕ್ಷಿಸುತ್ತೆ ನಾ ನಾ ವಿಧಂ
ಪೊಗಳುತುಂ ಪೊಂಗುತುಂ ಮೆಯ್ಯಿಕ್ಕಿ ಪಟ್ಟಿರಲ್
ಬಗೆ ಸದಾಶಿವನ ಮೆಲ್ಲಡಿಗಳಂ ಮುಟ್ಟಿರಲ್
ಕಂಡು ಶಂಕರನಲ್ಲಿ ಗಣಕುಲಕೆ ತೋರುತುಂ
ತಂಡತಂಡದ ಪುಳಕ ದಿಂಡೆಗೊಳಲುರ್ಬುತುಂ
ನೋಡಯ್ಯ ನಂದೀಶ ಇಂತಪ್ಪ ಭಕ್ತನಂ
ನೋಡೇಕನಿಷ್ಠೆಗೂಡಿದ ಭಕ್ತಿಯುಕ್ತನಂ
ಮಾತುಮಾತಿಂಗಿಲ್ಲಿಗೆಯ್ದಿ ಬಂದವರುಂಟೆ
ಜಾತಿಸೂತಕವಳಿದು ನೀತಿಗೆಟ್ಟವರುಂಟೆ
ಒಂಬತ್ತು ಪುರವರ್ಗ ಸಹಿತ ಬಂದವರುಂಟೆ
ಅಂಬರದ ಬಟ್ಟೆಯೊಳ್ ನಂಬಿ ಬಂದವರುಂಟೆ
ಎನ್ನ ಭಕ್ತರ್ಗೆ ಮೂದಲೆ ಮಾತು ಸೈರಿಪುದೆ
ಎನ್ನ ಭಕ್ತಗೇ ಕಪಟಂಗಳುಂ ಸೈರಿಪುದೆ
ಎನ್ನ ಭಕ್ತರ್ಗೆ ಹಿಂದೊಂದು ಮುಂದೊಂದುಂಟೆ
ಎನ್ನ ಭಕ್ತರ್ಗೆ ಪುಸಿಗಳ ಪಸರವೇನುಂಟೆ
ನವವಿಧಂ ನವಪೂಜೆ ನವನವ ಪ್ರೇಮವಿವೆ
ನವರಸಾನ್ನವು ಭಕ್ತಿ ನವನವ ಗ್ರಾಮವಿವೆ
ಎನುತುಂ ಹಲಾಯುಧನನೆತ್ತಿ ತಕ್ಕೈಸುತುಂ

ಮನವಾರೆ ಗಣಪದವನೊಪ್ಪದಿಂದೀಯುತುಂ
ಆ ನವಗ್ರಾಮಮಂ ರುದ್ರಲೋಕದೊಳಿರಿಸಿ
ನಾನಾ ಸುಖಂಗಳಂ ಚಿತ್ತದೊಳಗಾದರಿಸಿ
ದುರಿತಹರನಂತಕಹರಂ ಪಂಚಶರಹರಂ
ಪುರಹರಂ ಜನನಹರನಗಜಾಮನೋಹರಂ
ಶಶಿಧರಂ ಫಣಿಧರಂ ಸುರುಚಿರ ಜಟಾಧರಂ
ವಿಷಧರಂ ಗಜಚರ್ಮಧರನತುಳಧರಂ
ಸುರ ಶಿರೋಮಾಲಾಧರಂ ದಕ್ಷಮುಖಹರಂ
ಸರಸಿಜಾಸನ ಶಿರಃಕಮಳಮಂಡಿತಕರಂ
ಸದಮಳಂ ಸುಖಮಯಂ ಸಕಳಗುಣನೊಪ್ಪಿದಂ
ಮದನಾರಿ ಹಂಪೆಯ ವಿರೂಪಾಕ್ಷನೊಪ್ಪಿದಂ ||

**ಕಂದ||** ಶ್ರೀವಾಣೀಪತಿಗಳ ಗುರು
ದೇವಂ ದಯೆಯಿಂದಲೆನಗೆ ಭಕ್ತಿಯನೊಲವಿಂ
ದೀವುತ್ತಿರ್ಕೆ ಹಲಾಯುಧ
ದೇವನ ಸುತನೆಂದು ಹಂಪೆಯ ವಿರೂಪಾಕ್ಷಂ ||



# ಸಾಮವೇದಿಗಳ ಮಹಾತ್ಮೆ.

**ಕಂದ**॥ ಧರಣೀ ತಳದೊಳ್ಮೆರೆದಂ ।
ಸರಾಗದಿಂ ಸಾಮವೇದಿಗಳ ನಹಿಕಟಕಂ ॥
ಕರುಣಾಕರನಪ್ರತಿಮಂ ।
ಪುರಮಥನಂ ದೇವ ಹಂಪೆಯ ವಿರೂಪಾಕ್ಷಂ ॥

## ರಗಳೆ.

ಉತ್ತರದಿಶಾಭಾಗದೊಳಗೆ ಭಾಸುರವೆನಿಸಿ
ಛತ್ತೀಸಪುರವಿರ್ಪುದೀ ಧರೆಗೆ ತೊಡವೆನಿಸಿ
ಆ ಪುರಂಗಳೊಳೊಂದು ಪುರದೊಳಿರ್ಪಂ ನೋಡ
ಪಾಪರಹಿತಂ ಸಾಮವೇದಿ ಎಂಬಂ ನೋಡ
ಸಾಮವೇದಂ ಒಂದು ರೂಪಾಗಿ ನೆಲಸಿರ್ಪ
ಭೂಮಿಯೊಳಗುಳ್ಳ ಶಾಸ್ತ್ರಂ ಜಿಹ್ವೆಯೊಳಗಿರ್ಪ
ಸಕಲ ಕಾವ್ಯಂ ನಾಟಕಂ ತನ್ನ ಮುಖವಪ್ಪ
ಸಕಲ ವೇದಾಂತ ಸಿದ್ಧಾಂತದಿಂದ ದೃಢವಪ್ಪ
ತರ್ಕ ತಂತ್ರಂ ವ್ಯಾಕರಣ ಕಳಾವಿದನಪ್ಪ
ಮಾರ್ಕೋಳಲ್ಬಾರದ ಮಹಾವಾಗ್ಮಿ ಎನಿಸಿಪ್ಪ
ಎಂತಪ್ಪ ಪಿರಿಯರುಂ ಬಂದು ಮೆಯ್ಯಿಕ್ಕುವರ್
ಎಂತಪ್ಪ ವಿದ್ವಾಂಸರುಂ ತನಗೆ ತೆಕ್ಕುವರ್
ವೇದಮಯವಾಚರಣೆ ನುಡಿ ಎಲ್ಲ ಶಾಸ್ತ್ರಮಯ
ವಾದುದೇನೆಂಬೆನಾತನ ಮನಂ ಕಾಂತಿಮಯ
ಎರಗನಾರ್ಗಂ ನೋಡ ತನಗೆರಗುವದು ಜಗಂ
ನೆರೆ ಹೊಗಳ ಹೊಗಳುವುದು ತನ್ನ ಧರೆ ಸೋಜಿಗಂ
ಶಿಷ್ಯರಾ ಮೂರು ಸಾಸಿರದ ಮೇಲೈನೂರು
ಪೋಷ್ಯ ವರ್ಗಂ ಧರೆಯ ಜನವೆಲ್ಲ ಸಲೆ ಮಾರು
ವಾಮ ಹಸ್ತದೊಳಲ್ಲದಿಕ್ಕನಕ್ಷತೆಗಳಂ
ವಾಮೇತರದೊಳಗ್ನಿ ನೆಲಸಿರ್ಪುದಗ್ಗಳಂ

ಇಂತಪ್ಪ ಪುಣ್ಯಕೀರ್ತಿಯುನೊಪ್ಪದಿಂ ಸಾರ್ದರ್
ಸಂತತಂ ಛತ್ರೀಸಪುರದೊಳಗೆ ಸುಖಮಿರ್ದರ್

ಒಂದು ದಿವಸಂ ಸಾಮವೇದಿಗಳ್ ಶಿಷ್ಯರುಂ
ಮುಂದು ಜಾವದೊಳೆದ್ದು ಕೂಡಿಕೊಂಡೆಲ್ಲರುಂ
ಆರಣವನೋದಲಾರಣ್ಯಕ್ಕೆ ನಡೆತಂದು
ಭಾರಣೆಯ ವಿದ್ವಾಂಸರೊಡಗೂಡಿ ಬರುತಂದು
ಅಶ್ವತ್ಥ ಮೂಲವೇದಿಕೆಯಲ್ಲಿ ಕುಳ್ಳಿರ್ದರ್
ವಿಶ್ವ ಜನವಾರುವರಿಯದ ಕಾನನದೊಳಿರ್ದರ್
ಋಚವರ್ಧ ಋಚವೆಂಬವಂ ನಲಿದು ಪೇಳುತುಂ
ರುಚಿಯುಸಲ್ವಾದವರೆ ಪಾದವಂ ಪೇಳುತುಂ
ಪದಪಾಳಿ ವರ್ಗ ಕ್ರಮಂಗಳಂ ತಿಳಿಪುತುಂ
ಪದುಳದಿಂದಂ ಇರ್ದರ್ ಹಸನಿದೆಂದರಿಪುತುಂ
ಬೆರಲಿಂದುದಾತ್ತಾನುದಾತ್ತಂಗಳಂ ತೋರಿ
ಸ್ವರಿತ ಪ್ರಚಯ ಮುಖ ಸ್ವರ ಭೇದಮುಂ ತೋರಿ
ಛಂದಸ್ಸು ಋಷಿ ದೇವತೆಗಳೆಂಬಿವಂ ಪೇಳ್ದು
ನಿಂದ ಮಧ್ಯಾನ್ಹ ಪರಿಯಂತರಂ ಮಿಗೆ ಪೇಳ್ದು
ನಡೆತಂದರಾ ಸಾಮವೇದಿಗಳ್ನಲವಿಂದೆ
ನಡೆತಂದರಾಕಾಶಗಮನದೊಳ್ನಲವಿಂದೆ
ಕೆಳಗೆ ಶಿಷ್ಯಪ್ರತತಿ ಕೈ ಮುಗಿದು ಬರುತಮಿರೆ
ಇಳೆಗೆ ಪೊಸತೆನೆ ಮೇಲೆ ಧೋವತಿಗಳಾರುತಿರೆ
ತಳಿರ್ಗಸೆ ಬೆಳಬೆಳಗೆ ಸುಲಿಪಲ್ ತೊಳತೊಳಗೆ
ನಳನಳಿಪ ಮೆಯ್ವೆಳಗು ಬನವೆಲ್ಲಮುಂ ಬೆಳಗೆ
ನಡೆತಂದರಿಟ್ಟ ಮುಟ್ಟಿಗಳಿಂ ಪವಿತ್ರದಿಂ
ನಡೆತಂದರಿಕ್ಕಿರ್ದ ಯಜ್ಞೋಪವೀತದಿಂ
ಬರುತಿರ್ದರಾ ಸಾಮವೇದಿಗಳ್ ಗಗನದೊಳ್
ಬರುತಿರ್ದರಾ ಶಿಷ್ಯರೆಲ್ಲ ಭೂವಳಯದೊಳ್

ಇತ್ತಲಾ ಛತ್ರೀಸಪುರದಿಂದೆ ನಡೆತಂದು
ಉತ್ತಮ ಶಿವಾರ್ಚಕರ್ಶ್ವಪಚ ದೇವರ್ಬಂದು

ಭವಿಗಳಾರುಂ ಸುಳಿಯಬಾರದಟ್ಟಡವಿಯೊಳ್
ಭವನನರ್ಚಿಸಲೆಂದು ಸರ್ವ ಸುಖವೃತ್ತಿಯೊಳ್
ಕಾಡ ಮೊಲ್ಲೆಯ ಮಲ್ಲಿಗೆಯ ಹೊದರ ತಳದೊಳಗೆ
ಕೂಡೆ ತಣ್ಪಿನ ಚಂದ್ರಕಾಂತ ಭೂಮಿಕೆಯೊಳಗೆ
ಕದಳೀದಳಂಗಳಿಂ ಕಮಲಪತ್ರಂಗಳಿಂ
ಮುದದಿಂದಶೋಕೆಮಾವುಗಳ ಕೆಂದಳಿರ್ಗಳಿಂ
ನಯಮಪ್ಪ ಮೃದುವಪ್ಪ ಸಿಂಹಾಸನವನಿಕ್ಕಿ
ಭಯಭಕ್ತಿಯಿಂ ಹಿಗ್ಗುತುಂ ಪ್ರೇಮರಸ ಉಕ್ಕಿ
ನದಿಯುಗ್ಗವಣಿಗಳಂ ಕುಣಿಕುಣಿದು ತಂದಿಳಿಪಿ
ಪದುಳದಿಂ ಬರ್ದುಕಿದೆಂ ಬರ್ದುಕಿದೆನೆನುತ್ತಿಳುಪಿ
ಸಂಪಿಗೆಯ ಮಲ್ಲಿಗೆಯ ಮೊಲ್ಲೆಯುಚ್ಚಲರ್ಗಳಂ
ಕಂಪಿಸುತೆ ಪುಳುಕಿಸುತೆ ಪೊಚ್ಚ ಪೊಸಪೂಗಳಂ
ಕೊಂಡು ಬಂದೆನ್ನಯ್ಯ ಎನ್ನರಸ ಬಾರೆಂದು
ಖಂಡೇಂದು ಮೌಳಿ ಫಣಿಕುಂಡಲನೆ ಬಾರೆಂದು
ಭಕ್ತಜನ ಬಾಂಧವನೆ ಬಾರಯ್ಯ ಬಾರೆಂದು
ಮುಕ್ತಿಪ್ರದಾಯಕನೆ ಬಾರಯ್ಯ ಬಾರೆಂದು
ಸೆಜ್ಜೆಯಿಂ ಶಿವಲಿಂಗಮಂ ತೆಗೆದು ಬೋಳೈಸಿ
ಸಜ್ಜನ ಸ್ನೇಹಮಂ ಮನದೊಳಗೆ ಮೇಳೈಸಿ
ತಳಿರ ಸಿಂಹಾಸನದ ಮೇಲೆ ಬಿಜಯಂಗೈಸಿ
ದಳದಳನೆ ಸುರಿವಶ್ರುಧಾರೆಯಂ ಸಂತಯಿಸಿ
ಇರವಂತಿಯೊಂದರಲನುತ್ತಮಾಂಗದೊಳಿರಿಸಿ
ಹರುಷದಿಂ ನಲಿಯುತ್ತೆ ನರೆ ನೋಡುತಾದರಿಸಿ
ಮುಂಡಾಡಿ ಮುದ್ದಾಡಿ ಕಣ್ಣದೊಳಗೊತ್ತುತುಂ
ಕೊಂಡಾಡಿ ಕೊನೆದಾಡಿಯುರದೊಳಚ್ಚೊತ್ತುತುಂ
ಮತ್ತೆ ಬಿಜಯಂಗೆಯ್ಸಿ ನೋಡುತುಂ ತೂಗಾಡಿ
ಬಿತ್ತರಿಪ ಲಲ್ಲೆಯಿಂ ನೇಹದೊಳಗೋಲಾಡಿ
ಕೈ ಚಪ್ಪಳಿಕ್ಕುತುಂ ಬಿಕ್ಕುತುಂ ಬೀಗುತುಂ
ವೈಚಿತ್ರ ರಸದೊಳಗೆ ತೇಗಿ ತೂಗಾಡುತುಂ
ಕಂಪಿಸುತೆ ಕಳಲುತೆಂತಕ್ಕೆ ಮಜ್ಜನಕ್ಕೆರೆದು
ಜೊಂಪಿಸುತೆ ಜೋಲುತ್ತೆ ಒರ್ಮೊರ್ಮೆ ಮೈಮರೆದು

ಕಳವಳಿಸಿ ಲಿಂಗ ಶಿವಲಿಂಗ ಕರುಣಿಸುದೆನುತೆ
ಅಳವಳಿದು ತ್ರಿಳಿ ಉಳಿದು ಲಿಂಗ ಕರುಣಿಸುದೆನುತೆ
ಮೆಲ್ಲನೆಚ್ಚತ್ತು ಪುಳಕಿಸುತೆ ಪೂಜಿಸಲೆಂದು
ಸಲ್ಲಲಿತ ಕಯ್ಗಳಿಂ ಸಂತವಿಡುತುಂ ಬಂದು
ಮೊಲ್ಲೆಯುಚ್ಚರಲ್ಗಳಂ ಸಿರಿಮುಡಿಗೆ ಸಾರ್ಚುತುಂ
ಸಲ್ಲಲಿತ್ರ ಸಂಪಿಗೆಯರಲ್ಗಳಂ ತೀವುತುಂ
ಎಸಳೊಂದು ಮರೆಯಾಗಿ ಕಣ್ಗೆಟ್ಟು ಕರಗುತುಂ
ಎಸಳಂ ಸಿವಾರಿಸಲ್ಕಣ್ಬಂದು ನಲಿಯುತುಂ
ಕೆಯ್ಗೆ ಬಂದಂತೆ ಪೂಜಿಸುತಂ ನಮಸ್ಕರಿಸಿ
ಮೆಯ್ಗೆ ಬಂದಂತೆ ಪೊರಳುತ್ತಂ ನಮಸ್ಕರಿಸಿ
ನಾಲಿಗೆಗೆ ಬಂದಂತೆ ಪೊಗಳುತುಂ ಪಾಡುತುಂ
ಲೀಲೆ ಕಾಲಾದಂತೆ ತಿರುಗಿ ಬಂದಾಡುತುಂ
ದುಂಡಿಸಿ ಪಟಂ ನೆಗೆದು ಪೆರ್ಚಿ ಪೊರೆ ಏರುತುಂ
ತಂಡತಂಡದ ಪುಳಕ ದಿಂಡೆಗೊಂಡುಬ್ಬರ್ತುಂ

ಇಂತು ಮಧ್ಯಾಹ್ನ ಪರ್ಯಂತವರ್ಚಿಸಿ ಬಳಿಕ
ಸಂತಸದ ಮಳೆಗರೆದು ಕಣ್ತೀವಿದಂ ಬಳಿಕ
ಪರಮನಾರೋಗಣೆಗೆ ಹರುಷದಿಂದಂ ನೋಡಿ
ಸುರಚಿರಸ್ಥಾನದೊಳ್ ಮೂರುಕಲ್ಲಂ ಕೂಡಿ
ಮೇಲೊಂದು ಪಾತ್ರೆಯಂ ಪದುಳದಿಂ ತಂದಿರಿಸಿ
ಲೀಲೆಯಿಂ ತಳದೊಳಗ್ನಿಜ್ವಾಲೆಯಂ ಬರಿಸಿ
ಕಪಟರಹಿತಂ ಜಾತಿಧರ್ಮದೋಗರವಿರಲ್
ಶ್ವಪಚನಾಮಕ್ಕೆ ತಾನನುಕೂಲನಾಗಿರಲ್
ಆ ಕಪಾಲದನಡುವೆಯಾಯೋಗರವನಿಕ್ಕಿ
ಲೋಕವುಂ ಸೋಂಕದ ಸಮರ್ಥ ಮನದೊಳಗುಕ್ಕಿ
ಭಸಿತದಿಂದೆಲ್ಲವಂ ನೆರೆ ಶುದ್ಧಮಾಡುತುಂ
ಶಶಿಧರ ಧ್ಯಾನಮಂ ಹೃದಯದೊಳ್ಮಾಡುತುಂ
ಪಾಕವಂ ಮಾಡುತುಂ ಶ್ವಪಚಯ್ಯನಿರುತಮಿರೆ
ಆಕಸ್ಮಿತಂ ಸಾಮವೇದಿಗಳ್ಬರುತುಮಿರೆ

ಸ್ಪ್ರಾಹುರಾನಂದ ಜ್ಯೋತಿರಕ್ಷರಂ। ಅಹಮೇವ ಪರಬ್ರಹ್ಮ ಮತ್ತೋ ಹ್ಯನ್ಯಂ ನ ವಿದ್ಯತೆ। ಏತಸ್ಮಾದ್ವಿಶ್ವರೂಪತ್ವಂ ನಿಶ್ಚಿತಂ ಪರಮಾತ್ಮಭಿಃ। ಏಕತ್ವೆ ಚ ಪೃಥಕ್ತ್ವೇ ಚ ಪ್ರೋಕ್ತಮೇವಮನಾಮಯಂ। ಅಹಂ ತತ್ವ ರಮಂ ಬ್ರಹ್ಮ ಪರಮಾತ್ಮಾ ಸನಾತನಃ॥ ಎಂದುದಾಗಿ ಲಿಂಗವೇ ಪರ ಬ್ರಹ್ಮ. ಮತ್ತಂ ಮಾನವಪುರಾಣೆ॥ ಋತಂ ಸತ್ಯಂ ಪರಬ್ರಹ್ಮ ಪುರುಷಂ ಸೋಮಮೀಶ್ವರಂ। ಊರ್ಧ್ವರೇತಂ ಸಮುತ್ಪತ್ತಿಸ್ಥಿತಿ ಸಂಹಾರ ಕಾರಣಂ। ವಿಶ್ವರೂಪಂ ವಿರೂಪಾಕ್ಷಂ ಚಂದ್ರಮೌಲಿಂ ಘೃಣಾನಿಧಿಂ। ಹಿರಣ್ಯ ಬಾಹು ಮದ್ವಂದ್ವಂ ಹಿರಣ್ಯ ಪತಿಮೀಶ್ವರಂ। ಅಂಬಿಕಾಯಾಃ ಪತಿಂ ಸಾಕ್ಷಾದು ಮಾಯಾಃ ಪತಿಮುಕ್ರಿಯಂ। ಪರತತ್ವ ಸಮಾಖ್ಯಾತಂ ಶಿವಂ ಧ್ಯಾ ಯಂತಿ ಸಂತತಂ। ಎಂದುದಾಗಿ ಲಿಂಗವೇ ಪರಬ್ರಹ್ಮ. "ವಿಶ್ವತಶ್ಚಕ್ಷು ದೇವ ಏಕ ಏವ" ಎಂದುದಾಗಿ, ಬಹಳ ಬಹಳ ಚಕ್ಷು, ಬಹಳ ಬಹಳ ಮುಖನು, ಬಹಳ ಬಹಳ ಪಾದನು, ಇಂತಹ ಬಹಳವುಳ್ಳ ಲಿಂಗವೇ ಪರಬ್ರಹ್ಮ ಕಾಣಿರಣ್ಣಾ. ಯತೋ ವಾಚೋ ನಿವರ್ತಂತೆ ಅಪ್ರಾಪ್ಯ ಮನಸಾ ಸಹ। ನಾದಬಿಂದು ಕಳಾತೀತಂ ಗುರುಣಾ ಲಿಂಗಮುದ್ಭವಂ" ಎಂದು ದಾಗಿ ಮನ, ವಾಕ್ಯ, ನಾದ ಬಿಂದುಗಳಿಗತೀತವಾದ ಮಹಾ ಬಹುಳ ಲಿಂಗವನು ಶ್ರೀಗುರು ನಿರೂಪಿಸಿಕೊಟ್ಟನಾಗಿ ಈ ಲಿಂಗವೇ ಪರಬ್ರಹ್ಮ ಕಾಣಿರಣ್ಣಾ. ಇದು ಕಾರಣ ಲಿಂಗವೇ ಪರಬ್ರಹ್ಮವೆಂದು ಅರಿದು ಧ್ಯಾನಿಸಿ ಪೂಜಿಸಿ ಮಹದಾನಂದ ಮುಕ್ತಿಯನೆಯ್ದಿದರು ಬ್ರಹ್ಮ ವಿಷ್ಣು ಮುಖ್ಯ ವಾದ ದೇವಜಾತಿ ಋಷಿಜನಂಗಳು. ಇದು ಪುರಾಣಪ್ರಸಿದ್ಧ. ಇನ್ನು ಕಲಿಯುಗದಲ್ಲಿ ದೃಷ್ಟವ ನೋಡಿರೇ. ಬಸವರಾಜದೇವರು ಮುಖ್ಯವಾದ ಅಸಂಖ್ಯಾತ ಪುರಾತನರು ಇದನರಿದು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ ಲಿಂಗವೇ ಸಾಕಾರ ನಿರಾಕಾರ ಸಂಸಿದ್ಧವೆಂದು ಅರಿದು ಧ್ಯಾನಿಸಿ ಪೂಜಿಸಿ ಮಹದಾನಂದ ಮುಕ್ತಿಯನೈದಿದರು ಕಾಣಿರಣ್ಣಾ.

**ಭಾವಃ**— ಬ್ರಹ್ಮದ ಸ್ವರೂಪದ ವಿಷಯವಾಗಿ ಅನೇಕರು ಬಹು ವಾಗಿ ಹೇಳುವದುಂಟು. ಸಾಕಾರದಿಂದಲೇ ಪರಬ್ರಹ್ಮವನ್ನು ಸಾಧಿಸ ಬೇಕೆಂದು ಅನೇಕರು ತರ್ಕಿಸುವದುಂಟು. ಬೇರೆ ಕೆಲವರು ಪರಬ್ರಹ್ಮವನ್ನು ಜ್ಞಾನದಿಂದ ಅರಿಯಬೇಕೆಂತಲೂ ಹೇಳುವದುಂಟು. ಆದರೆ ಈ ಬಗೆ ಯಾಗಿ ಪರಬ್ರಹ್ಮವು ಸಿಕ್ಕದು. ಅದರ ತೊಡಕು ಬಲು ಹೆಚ್ಚಿನದು, ಆಶ್ಚರ್ಯಕರವಾದದ್ದು. ಬ್ರಹ್ಮನು ಸಹ ಇದನ್ನು ಕುರಿತು ಅಹಂಕರಿಸಿ

ನುಡಿಯಲು ತನ್ನ ತಲೆಯನ್ನು ಕಳೆದುಕೊಂಡನು. ಮತ್ತು ಆ ತಲೆಯು ಶಿವನ ಹಸ್ತದಲ್ಲಿ ಕಂಗೊಳಿಸುತ್ತಲಿದೆ. ಸನತ್ಕುಮಾರನು ಅದೇ ಬಗೆಯ ಅಹಂಕಾರದಿಂದ ಒಂಟೆಯ ಸ್ವರೂಪನಾದ. ಆದ್ದರಿಂದ ಪರಬ್ರಹ್ಮನ ನಿಜಸ್ಥಿತಿಯನ್ನು ತಿಳಿದುಕೊಂಡು ಸರಿಯಾದ ಮಾರ್ಗದಿಂದ ನಡಿಯಿರೆಂದು ವಚನಕಾರನು ಇಲ್ಲಿ ಎಚ್ಚರು ಕೊಟ್ಟಿರುವನು.

ಆಮೇಲೆ ವಚನಕಾರನು ಪರಬ್ರಹ್ಮದ ಸ್ವರೂಪವನ್ನು ಕುರಿತು ವೇದಾಗಮೋಪನಿಷತ್ತುಗಳು ಏನು ಹೇಳುತ್ತಲಿವೆಂಬದನ್ನು ಕುರಿತು ಇಲ್ಲಿ ಸವಿಸ್ತಾರವಾಗಿ ನಿರೂಪಿಸಿರುವನು. ಪರಬ್ರಹ್ಮನು ಒಬ್ಬನೇ ಇದ್ದಾನೆಂನು ಅಥರ್ವಣವೇದವು ಹೇಳುತ್ತಲಿದೆ. ಪರಬ್ರಹ್ಮನು ಸತ್ಯನಾಗಿದ್ದಾನೆ, ಆತನೊಬ್ಬನೇ ಪುರುಷನು. ಅವನಿಗೆ ಅನೇಕ ವರ್ಣಗಳಿದ್ದರೂ ಅವೆಲ್ಲವುಗಳ ಸ್ವರೂಪವು ಆತನೇ. ಆತನು ಉರ್ಧ್ವರೇತುವು ವಿರೂಪಾಕ್ಷನು ವಿಶ್ವರೂಪನು ಇದ್ದಾನೆಂದು ಶೃತಿಗಳೂ ಉಪನಿಷತ್ತುಗಳೂ ಹೇಳುತ್ತಲಿವೆ. ಹರಿಬ್ರಹ್ಮರ ನಡುವೆ ಲಿಂಗದ ಸ್ವರೂಪದ ಬಗ್ಗೆ ವಾದವು ಉಂಟಾಗಲು ಆ ಉಭಯತರು ಪರಬ್ರಹ್ಮನ ಆಡಿಮುಡಿಯನ್ನು ತಿಳಿಯದೆ ಹೋದರು. ಲಿಂಗಪುರಾಣದಲ್ಲಿ, ಪರಮಾತ್ಮನು ಜ್ವಾಲಾಮಾಲೆಯಿಂದ ಆವೃತನಾಗಿ ಅತ್ಯಂತ ಕಾಂತಿಮಯನಾಗಿದ್ದಾನೆ. ಪ್ರಕಾಶಮಾನವಾದ ಒಂದು ಕಂಭದಂತೆ ಹೊಳೆಯುತ್ತಿದ್ದಾನೆ. ಆದರೂ ಕೂಡ ಆತನು ಶಾಂತಮೂರ್ತಿಯು, ಇಂಥ ಲಿಂಗಮೂರ್ತಿಗೆ ನಮಸ್ಕಾರವೆಂದು ಹೇಳಿದೆ. ಯಜುರ್ವೇದದಲ್ಲಿ ಕೂಡ, ಈಶ್ವರನು ಎಲ್ಲ ವಿದ್ಯೆಗಳಿಗೆ ಸ್ವಾಮಿಯು, ಎಲ್ಲ ಸೃಷ್ಟ ಪದಾರ್ಥಗಳಿಗೂ ಒಡೆಯನು, ಬ್ರಹ್ಮ ಬ್ರಾಹ್ಮಣರಿಗೆಲ್ಲರಿಗೂ ಅಧಿಪತಿಯು ಎಂದು ಹೇಳಿದೆ. ಆದಿತ್ಯ ಪುರಾಣದಲ್ಲಿ, ಪರಬ್ರಹ್ಮನು ಎಂದರೆ ಈಶಾನ, ರುದ್ರ, ಭಗವಾನ್ಮಹೇಶ್ವರ, ಮಹಾದೇವ ಮೊದಲಾದ ಹೆಸರುಗಳುಳ್ಳವನಾಗಿ ಒಬ್ಬನೇ ಇದ್ದಾನೆಂದು ಹೇಳಿದೆ. ಕೂರ್ಮ ಪುರಾಣದಲ್ಲಿ ಮತ್ತು ಈಶ್ವರ ಗೀತೆಯಲ್ಲಿ ಪರಬ್ರಹ್ಮನು ಕಣ್ಣಿಂದ ಕಾಣಲಿಕ್ಕೆ ಅಸಾಧ್ಯನು, ಎಲ್ಲ ಪದಾರ್ಥಗಳಿಗೂ ಕಾರಣನು, ಭಗವಾನ್ ಮಹೇಶ್ವರನು, ಸಾಕ್ಷಾತ್ ಮಹಾದೇವನು ಎಂಬುದು ನಿಃಸಂಶಯವೆಂದು ಹೇಳಿದೆ. ಹಾಗೆಯೇ ಲಿಂಗದೊಳಗೆ ಜಗತ್ತೆಲ್ಲ ಅಡಗಿಕೊಂಡಿದೆ, ಅಂಥ ರುದ್ರನಿಗೆ ಶರಣು ಹೋಗಬೇಕೆಂದು ಹೇಳಿದೆ. ಕೂರ್ಮ ಪುರಾಣ ಮತ್ತು ಈಶ್ವರ ಗೀತೆಯಲ್ಲಿ ಪರಮಾತ್ಮನು ಅವ್ಯಕ್ತನು. ಎಲ್ಲದಕ್ಕೂ ಕಾರಣನು, ಆನಂದ

ಸ್ವರೂಪನು, ಜ್ಯೋತಿಯಂತೆ ಪ್ರಕಾಶಮಾನನು, ಕ್ಷಯರಹಿತನು, ಇಂಥ ಸ್ವರೂಪದವನಿದ್ದರೂ ಪರಮಾತ್ಮನೆಂದರೆ ತಾನೇ, ಅವನು ತನ್ನನ್ನು ಬಿಟ್ಟು ಇಲ್ಲ. ಅದುಕಾರಣ ಪರಮಾತ್ಮನು ವಿಶ್ವರೂಪನೆಂದು ತಿಳಿದುಬರುತ್ತದೆ. ಅವನು ಒಬ್ಬನೇ ದೇವನಿದ್ದಾನೆ. ಒಬ್ಬನೇ ಇದ್ದರೂ ಎಲ್ಲದರಲ್ಲಿಯೂ ಪ್ರತ್ಯೇಕವಾಗಿ ವಾಸಿಸುತ್ತಾನೆ. ಅವನಿಗೆ ದೋಷಾದಿ ಗುಣಗಳು ತಾಕಲಾರವು. ಹೀಗಿದ್ದರೂ ಮನುಷ್ಯನು ತಾನೇ ಪರಬ್ರಹ್ಮ ವಸ್ತುವು, ಸನಾತನನು. ಹೀಗೆ ತನಗೂ ಪರಬ್ರಹ್ಮನಿಗೂ ಇರುವ ಸಂಬಂಧವು ಇದರಲ್ಲಿ ತೋರಿಸಲ್ಪಟ್ಟಿದೆ. ಮಾನವಪುರಾಣದಲ್ಲಿ ಪರಮಾತ್ಮನು ಸತ್ಯನು, ಪುರುಷನು, ಸೋಮನು, ಈಶ್ವರನು, ಊರ್ಧ್ವರೇತುವು, ಉತ್ಪತ್ತಿ ಸ್ಥಿತಿ ಸಂಹಾರ ಕಾರಣನು, ವಿಶ್ವರೂಪನು, ಚಂದ್ರಮೌಲಿಯು, ವಿರೂಪಾಕ್ಷನು, ಹಿರಣ್ಯಬಾಹುವು, ಅದ್ವಂದ್ವನು, ಹಿರಣ್ಯಪತಿಯು, ಅಂಬಿಕಾಪತಿಯು, ಉಮಾಪತಿಯು, ಕ್ರಿಯಾರಹಿತನು ಎಂದು ಮೊದಲಾಗಿ ಹೊಗಳಲ್ಪಟ್ಟವನಾಗಿ ಎಲ್ಲರ ಧ್ಯಾನಕ್ಕೆ ಪಾತ್ರನೆಂದು ವರ್ಣನೆಯು ಕಂಡುಬರುತ್ತದೆ. ಪರಮಾತ್ಮನಿಗೆ ಬಹಳ ಬಹಳ ಚಕ್ಷುಗಳು, ಬಹಳ ಬಹಳ ಮುಖಗಳು, ಬಹಳ ಬಹಳ ಪಾದಗಳು ಇರುತ್ತವೆಂದು ಒಂದು ವಚನದಲ್ಲಿ ಇಲ್ಲಿ ಹೇಳಿದ್ದಾನೆ. ಶೃತಿಗಳಲ್ಲಿ ಪರಬ್ರಹ್ಮನು ಮಾತಿಗೆ ನಿಲುಕದವನು, ಮನಸ್ಸಿಗೂ ಸಹ ಹತ್ತದವನು, ನಾದ ಬಿಂದು ಕಳಾತೀತನು ಎಂದು ಹೇಳಿದೆ. ಗುರುವು ಕೊಟ್ಟಂಥ ವಸ್ತುವು ಈ ಪರಬ್ರಹ್ಮ ವಸ್ತುವೇ ಇದೆ, ಆದ್ದರಿಂದ ಈ ಲಿಂಗವು ಸಹ ಪರಬ್ರಹ್ಮವೇ ಎಂದು ಹೇಳಿದ್ದಾನೆ. ಇಂಥ ಲಿಂಗವನ್ನು ಭಜಿಸಿ ಪೂಜಿಸಿ ಹರಿಬ್ರಹ್ಮಾದಿಗಳೂ ಋಷಿಜನಗಳೂ ಮಹದಾನಂದ ಮುಕ್ತಿಪದವನ್ನು ಹೊಂದಿದರು. ಇದೇ ರೀತಿಯು ಕಲಿಯುಗದಲ್ಲಿಯೂ ಕಂಡುಬರುತ್ತದೆ. ಈ ಪಾಪಮಯವಾದ ಯುಗದಲ್ಲಿಯೂ ಕೂಡ ಪರಮಾತ್ಮನನ್ನು ತಿಳಿದು ಅವನನ್ನು ಸೇವಿಸಿದರೆ ಮುಕ್ತಿಪದವು ದೊರೆಯುತ್ತದೆ ಎಂದು ವಚನಕಾರನು ಹೇಳಿ, ಬಸವರಾಜ ದೇವರು ಹಾಗೂ ಅಸಂಖ್ಯಾತ ಪುರಾತನರು ಈ ಮಾರ್ಗವನ್ನು ಅನುಸರಿಸಿ ಮೋಕ್ಷಪದವನ್ನು ಹೊಂದಿದರೆಂದು ಉದಾಹರಣೆಗಳನ್ನು ಕೊಟ್ಟಿದ್ದಾನೆ. ಉರಿಲಿಂಗಪೆದ್ದಿ ಪ್ರಿಯವಿಶ್ವೇಶ್ವರನು ಸಾಕಾರನೂ ಹೌದು, ನಿರಾಕಾರನೂ ಹೌದು. ಇಂಥ ಪರಮಾತ್ಮನನ್ನು ಧ್ಯಾನಿಸಿ, ಪೂಜಿಸಿ, ಮಹದಾನಂದ ಮುಕ್ತಿ ಪದವನ್ನು ಪಡೆಯಿರೆಂದು ವಚನಕಾರನು ಇಲ್ಲಿ ಉಪದೇಶಿಸಿದ್ದಾನೆ.

**ವಚನ:** — ೧೨. ಶ್ರೀಗುರು ಸ್ವಾಮಿ ಕರುಣಿ ಕೊಟ್ಟ ಪ್ರಾಣ ಲಿಂಗವು ಪಂಚಬ್ರಹ್ಮ ಮುಖವುಳ್ಳ ವಸ್ತುವೆಂದರಿವುದು. ಆ ಪಂಚ ಬ್ರಹ್ಮ ಮುಖ ಸಂಜ್ಞೆಯು ಭೇದವೆಂತೆಂದೊಡೆ, ಆವುದಾನೊಂದು ಶಿವ ಸಂಬಂಧವಾದ ಪರಮ ತೇಜೋ ಲಿಂಗವು ತನ್ನ ಭೋಗಾದಿ ಕಾರಣ ಮೂರ್ತಿಗಳಿಂದುದಯವಾದ ಬ್ರಹ್ಮಾದಿ ತೃಣಾಂತವಾದ ದೇಹಿಗಳಿಂದಲು ವ್ಯೋಮಾದಿ ಭೂತಂಗಳಿಂದಲು ಇತ್ಯಾದಿ ಸಮಸ್ತ ತತ್ವಂಗಳಿಂದಲು ಮೇಲಣ ತತ್ವವಪ್ಪುದೇ ಕಾರಣವಾಗಿ ಪರವೆಂಬ ಸಂಜ್ಞೆಯುದುಳ್ಳುದಾಗಿ ಹುದು. ಅನಂತಕೋಟಿ ಬ್ರಹ್ಮಾಂಡಂಗಳ ತನ್ನೊಳಗಡಗಿಸಿಕೊಂಡು ಸಮಸ್ತ ಜಗಜ್ಜನನಕ್ಕೆ ತಾನೇ ಕಾರಣವಾಗಿ ಅವ್ಯಕ್ತ ಲಕ್ಷಿತವಾದ ನಿಮಿತ್ತಂ ಗೂಢವೆಂಬ ಸಂಜ್ಞೆಯುದುಳ್ಳುದಾಗಿಹುದು. ತಾನು ಶೂನ್ಯ ಶಿವತತ್ವ ಭೇದವಾಗಿ ಅಯಸ್ಕಾಂತ ಸನ್ನಿಧಿಯಿಂದ ಲೋಹವೇ ಹೇಗೆ ಭ್ರಮಿಸುವುದೋ ಹಾಗೆ ಬ್ರಹ್ಮಾದಿಗಳ ಹೃತ್ಕಮಲ ಮಧ್ಯದಲ್ಲಿದ್ದು ತನ್ನ ಚಿಚ್ಛಕ್ತಿಯ ಸನ್ನಿಧಿ ಮಾತ್ರದಿಂದ, ಅಹಮಾದಿಗಳಿಂ ವ್ಯೋಮಾದಿ ಭೂತಗಳಿಂ, ಸೃಷ್ಟಿಸುವದಕ್ಕೆ ತಾನೇ ಕಾರಣವಪ್ಪುದರಿಂದ ಶರೀರಸ್ಥ ವೆಂಬ ಸಂಜ್ಞೆಯುದುಳ್ಳುದಾಗಿಹುದು. ತನ್ನ ಸೃಷ್ಟಿ ಶಕ್ತಿಯಿಂದ ದಯ ವಾದ ಸಮಸ್ತ ಸಂಸಾರಾದಿ ಪ್ರಪಂಚವು, ತನ್ನಿಂದವೇ ಕಾರಣವಪ್ಪು ದರಿಂ ಅನಾದಿವತ್ತೆಂಬ ಸಂಜ್ಞೆಯುದುಳ್ಳುದಾಗಿಹುದು. ತನ್ನ ಮಾಯಾ ಶಕ್ತಿಯಿಂದುದಯವಾದ ಸ್ತ್ರೀಲಿಂಗ ಪುಲ್ಲಿಂಗ ನಪುಂಸಕಲಿಂಗವೆಂಬ ತ್ರಿಲಕ್ಷಿತವಾದ ಸಮಸ್ತ ಪ್ರಪಂಚವು ವರ್ತಿಸುವುದಕ್ಕೆ ತಾನೇ ಕ್ಷೇತ್ರ ವಾದ ಕಾರಣ, ಲಿಂಗಕ್ಷೇತ್ರವೆಂಬ ಸಂಜ್ಞೆಯುದುಳ್ಳುದಾಗಿಹುದು. ಈ ಪ್ರಕಾರದಿಂ ಪರಬ್ರಹ್ಮ ಲಿಂಗವು ಪಂಚಮುಖ ಸಂಜ್ಞೆಯನುಳ್ಳುದಾಗಿಹು ದೆಂದರಿವುದು. ಅದೆಂತೆಂದೊಡೆ, ಅದಕ್ಕೆ ವಾತುಳಾಗಮದಲ್ಲಿ, ಅಖಿಳಾ ರ್ಣವಲಾಯಾನಾಂ ಲಿಂಗತತ್ವಂ ಪರಂ ತತಃ ಶ್ಲೋ॥ ಪರಂ ಗೂಢಂ ಶರೀರಸ್ಥಂ ಲಿಂಗಕ್ಷೇತ್ರಮನಾದಿವತ್ । ಯಥಾದಿವ್ಯೈಶ್ವರಂ ತೇಜಸ್ತ ಲ್ಲಿಂಗಂ ಪಂಚಸಂಜ್ಞಕಂ ॥ ಎಂದೆನಿಸುವ ಲಿಂಗವು. ಮತ್ತಂ, ವಾಶಿಷ್ಠ ದಲ್ಲಿ ಶ್ಲೋ॥ ಪಿಂಡಬ್ರಹ್ಮಾಂಡಯೋರೈಕ್ಯಂ ಲಿಂಗಸೂತ್ರಾತ್ಮನೋರಪಿ । ಸ್ವಬಾಹ್ಯಕೃತಯೋರೈಕ್ಯಂ ಕ್ಷೇತ್ರಜ್ಞ ಪರಮಾತ್ಮನೇಃ ॥ ಎಂದೆನಿಸುವ ಲಿಂಗವು. ಮತ್ತಂ ಬ್ರಹ್ಮಾಂಡ ಪುರಾಣದಲ್ಲಿ ॥ಶ್ಲೋ॥ ಅಧಿಷ್ಠಾನಾಂ ಸಮಸ್ತಸ್ಯ ಸ್ಥಾವರಸ್ಯ ಚರಸ್ಯ ಚ । ಜಗತೋ ಯದ್ಭವೇತ್ತತ್ವಂ ತದ್ದಿವ್ಯ

ಸ್ಥಲಮುಚ್ಯತೇ ॥ ಎಂದೆನಿಸುವ ಲಿಂಗವು. ಮತ್ತಂ ಶಿವರಹಸ್ಯ ॥ಶ್ಲೋ॥ ಮಹಾಲಿಂಗಮಿದಂ ದೇವೀ ಮನೋತೀತಮಗೋಚರಂ। ನಿರ್ನಾಮಂ ನಿರ್ಗುಣಂ ನಿತ್ಯಂ ನಿರಂಜನಂ ನಿರಾಮಯಂ ॥ ಎಂದೆನಿಸುವ ಲಿಂಗವು. ಮತ್ತಂ ಉತ್ತರವಾತುಳದಲ್ಲಿ ॥ಶ್ಲೋ॥ ಆದ್ಯಂತಶೂನ್ಯಮಮಲಂ ಪರಿಪೂರ್ಣಮೇಕಂ ಸೂಕ್ಷ್ಮಂ ಪರಾತ್ಪರಮನಾಮಯಮಪ್ರಮೇಯಂ। ಭಾವೈಕಗಮ್ಯಮಜಡಂ ಶಿವತತ್ವಮಾಹುಶ್ಚಿಚ್ಛಕ್ತಿಸಂಸ್ಫುರಣ ರೂಢ ಮಹಾತ್ಮಲಿಂಗಂ ॥ ಎಂದೆನಿಸುವ ಲಿಂಗವು. ಮತ್ತಂ ಅಥರ್ವಣ ವೇದದಲ್ಲಿ ॥ಶ್ಲೋ॥ ಶಿವಾತ್ಪರಾತ್ಪರಂ ಸೂಕ್ಷ್ಮಂ ನಿತ್ಯಂ ಸರ್ವಗತಾವ್ಯಯಂ। ಅನಿಂದಿತಮನೌಪಮ್ಯಮಪ್ರಮಾಣಮನಾಮಯಂ ॥ ಶುದ್ಧತ್ವಾಚ್ಛಿವಮುದ್ದಿಷ್ಟಂ ಪರಾದೂರ್ಧ್ವಂ ಪರಾತ್ಪರಂ ॥ ಎಂದೆನಿಸುವ ಲಿಂಗವು, ಮತ್ತಂ ಸಾಮವೇದದಲ್ಲಿ ॥ಶ್ಲೋ॥ ಅನಂತಮವ್ಯಕ್ತಮಚಿಂತ್ಯಮೇಕಂ ಹರಂತಮಾಶಾಂಬರ ಮಂಬರಾಗಂ। ಲೋಕೈಕನಾಥಂ ಭುಜಗೇಂದ್ರಹಾರಂ। ಅಜಂ ಪುರಾಣಂ ಪ್ರಣಮಾಮಿ ನಿತ್ಯಂ ॥ " ಅಣೋರಣೀಯಾನ್ಮಹತೋಮಹೀಯಾನ್ " ಎಂದೆನಿಸುವ ಲಿಂಗವು. ಮತ್ತಂ ಶಿವಧರ್ಮಪುರಾಣದಲ್ಲಿ ಶ್ಲೋ॥ ಆಕಾಶಂ ಲಿಂಗಮಿತ್ಯಾಹುಃ ಪೃಥ್ವೀ ತಸ್ಯಾದಿಪೀಠಿಕಾ। ಆಲಯಸ್ಸರ್ವ ಭೂತಾನಾಂ ಲಯನಾಲ್ಲಿಂಗಮುಚ್ಯತೆ ॥ ಎಂದೆನಿಸುವ ಲಿಂಗವು. ಮತ್ತಂ ಗಾರುಡ ಪುರಾಣದಲ್ಲಿ ಶ್ಲೋ॥ ಲಿಂಗಮಧ್ಯೆ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ। ಲಿಂಗ ಬಾಹ್ಯಾತ್ಪರಂ ನಾಸ್ತಿ ತಸ್ಮೈ ಶ್ರೀಗುರವೇ ನಮಃ ಎಂದೆನಿಸುವ ಲಿಂಗವು. ಮತ್ತಂ ಯಜುರ್ವೇದದಲ್ಲಿ ಶ್ಲೋ॥ ವಿಶ್ವತಶ್ಚಕ್ಷುರುತ ವಿಶ್ವತೋಮುಖ ವಿಶ್ವತೋಬಾಹುರುತ ವಿಶ್ವತೋಪಾತ್ ಸ ಬಾಹುಭ್ಯಾಂ ದಮತಿ ಸಂಪದಸ್ತ್ರೈದ್ಯಾರ್ವಾಭೂಮೀ ಜನಯನ್ನಿವ ಏಕಏವ ॥ ಎಂದೆನಿಸುವ ಲಿಂಗವು. ಮತ್ತಂ ಗಾಯತ್ರೀ ॥ ಓಂ ಭೂಃ ಓಂ ಭುವಃ ಓಂ ಸುವಃ ಓಂ ಮಹಃ ಓಂ ಜನಃ ಓಂ ತಪಃ ಓಂ ಸತ್ಯಂ ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೆವಸ್ಯ ಧೀಮಹಿ ಧೀಯ್ಯೋ ಯೋನಃ ಪ್ರಚೋದಯಾತ್ । ಎಂದೆನಿಸುವ ಲಿಂಗವು. ಮತ್ತಂ ಸ್ಕಂದಪುರಾಣದಲ್ಲಿ ಶ್ಲೋ॥ ಲೀಯತೆ ಗಮ್ಯತೆ ಯತ್ರ ಏನ ಸರ್ವಂ ಚರಾಚರಂ ತದೇವ ಲಿಂಗಮಿತ್ಯುಕ್ತಂ ಲಿಂಗ ತತ್ವಪರಾಯಣೈಃ ಎಂದೆನಿಸುವ ಲಿಂಗವು ಮತ್ತಂ ಜ್ಞಾನವೈಭವಖಂಡದಲ್ಲಿ ಶ್ಲೋ॥ ಲೀಯತೆ ಲಯ ಸಂಪ್ರೋಕ್ತಂ ಗಕಾರಂ ಸೃಷ್ಟಿರುಚ್ಯತೆ। ಲಯನಾದ್ಗಮನಂ ಚೈವ ಲಿಂಗ ಶಬ್ದಮಿಹೋಚ್ಯತೆ

ಎಂದೆನಿಸುವ ಲಿಂಗವು. ಮತ್ತಂ ಮಹಿಮ್ನದಲ್ಲಿ ಶ್ಲೋ॥ ಚಕಿತಮಭಿಧತ್ತೆ ಶೃತಿರಪಿ॥ ಎಂದೆನಿಸುವ ಲಿಂಗವು. ಮತ್ತಂ ಶಿವಧರ್ಮೋತ್ತರದಲ್ಲಿ॥ ನ ಜಾನಂತಿ ಪರಂ ಭಾವಂ ಯಸ್ಯ ಬ್ರಹ್ಮ ಸುರಾದಯಃ॥ ಎಂದೆನಿಸುವ ಲಿಂಗವು. ಮತ್ತಂ ಪುರುಷಸೂಕ್ತದಲ್ಲಿ॥ ಅತ್ಯತಿಷ್ಠದ್ದಶಾಂಗುಲಂ ಎಂದೆನಿಸುವ ಲಿಂಗವು. ಮತ್ತಂ ಉಪನಿಷತ್ತಿನಲ್ಲಿ॥ ಯತೋವಾಚೋ ನಿವರ್ತಂತೆ ಅಪ್ರಾಪ್ಯ ಮನಸಾ ಸಹ॥ ಎಂದೆನಿಸುವ ಲಿಂಗವು. ಮತ್ತಂ ಕೂರ್ಮ ಪುರಾಣದಲ್ಲಿ॥ ವಾಚಾತೀತಂ ಮನೋತೀತಂ ಭಾವಾತೀತಂ ನಿರಂಜನಂ। ಅವರ್ಣಮಕ್ಷರಂ ಬ್ರಹ್ಮನಿತ್ಯಂ ಧ್ಯಾಯಂತಿ ಯೋಗಿನಃ॥ ಎಂದೆನಿಸುವ ಲಿಂಗವು. ಮತ್ತಂ ಋಗ್ವೇದದಲ್ಲಿ॥ ಅಯಂ ಮೇ ಹಸ್ತೋ ಭಗವಾನ್ ಅಯಂ ಭಗವತ್ತರಃ। ಅಯಂ ಮೇ ವಿಶ್ವಭೇಷಜಃ ಅಯಂ ಶಿವಾಭಿಮರ್ಶನಃ। ಅಯಂ ಮಾತಾ ಅಯಂ ಪಿತಾ ಅಯಂ ಜೀವಾತುರಾಗಮತ್॥ ಎಂದೆನಿಸುವ ಲಿಂಗವು. ಮತ್ತಂ ಉತ್ತರ ವಾತುಳದಲ್ಲಿ॥ ಸ ಬಾಹ್ಯಾಭ್ಯಂತರಂ ಸಾಕ್ಷಾಲ್ಲಿಂಗ ಜ್ಯೋತಿ ಪರಂ ಸ್ವಕಂ ತಿಲೆ ತೈಲಮಿವ ಭಾತಿಮರಣ್ಯಾಮಿವ ಪಾವಕಃ। ಕ್ಷೀರೇ ಸರ್ಪಿರಿವ ಸ್ರೋತ್ರೆ ಶಂಭುಸ್ಸುಸ್ಥಿರ ಮಾತ್ಮನಿ। ಏಕೋಯಂ ಪುರುಷೋ ವಿಶ್ವಸ್ತೈಜಸಃ ಪ್ರಾಜ್ಞರೂಪಕಃ ಸರ್ವೇಷ್ವಂಗೇಷು ಸಂಯುಕ್ತಮುಪಾಸ್ತೆ ಲಿಂಗಮುದ್ವಯಂ॥ ಎಂದೆನಿಸುವ ಲಿಂಗವು. ಮತ್ತಂ ಶಿವರಹಸ್ಯದಲ್ಲಿ॥ ಹರರೂಪಂ ಕಾಯ ಸಂಬಂಧ ಗುರುರೂಪಂ ಪ್ರಾಣ ಸಂಯುತಂ। ಅಶರೀರಾತ್ಮ ಸಂಬಂಧ ಗುರು ಶಿಷ್ಯಮನುಗ್ರಹಂ॥ ಎಂದೆನಿಸುವ ಲಿಂಗವು. ಮತ್ತಂ ಲೈಂಗ್ಯದಲ್ಲಿ॥ ಅನಯೋರ್ದೃಷ್ಟಿ ಸಂಯೋಗಾಜ್ಜಾಯತೆ ಜ್ಞಪ್ತಿ ರೂಪಿಣೀ। ತಯೈವ ವೇದ ದೀಕ್ಷಾ ಸ್ಯಾನ್ಮಂತ್ರ ರೂಪೇಣ ತಾಂ ಶೃಣು॥ ಎಂದೆನಿಸುವ ಲಿಂಗವು. ಮತ್ತಂ ಸೌರಪುರಾಣದಲ್ಲಿ॥ ಹಸ್ತ ಮಸ್ತಕ ಸಂಯೋಗಾತ್ಕಲಾ ವೇದೇತಿ ಗೀಯತೆ। ಗುರುಣೋದೀರಿತಾಕರ್ಣಯಾ ಮಾಸ ಮಂತ್ರೇತಿ ಕಥ್ಯತೆ। ಶಿಷ್ಯ ಪಾಣಿ ತತಿ ದತ್ತಯಾ ದೀಕ್ಷಾ ಸಾ ಕ್ರಿಯೋಚ್ಯತೆ॥ ಎಂದೆನಿಸುವ ಲಿಂಗವು. ಮತ್ತಂ ಕಾಳಿಕಾ ಖಂಡದಲ್ಲಿ॥ ಅಂಗಂಚ ಲಿಂಗಂಚ ಮುಖಂಚ ಹಸ್ತೆ ಶಕ್ತಿಶ್ಚ ಭಕ್ತಿಶ್ಚ ತಥಾರ್ಪಣಂಚ। ಆನಂದಮೇವ ಸ್ವಯಮರ್ಪಣಂಚ ಪ್ರಸಾದರೂಪೇಣ ಭವೇತ್ರಿ ತತ್ವಂ॥ ಎಂದೆನಿಸುವ ಲಿಂಗವು. ಮತ್ತಂ ಶಂಕರಸಂಹಿತೆಯಲ್ಲಿ॥ ತದೇವ ಹಸ್ತಾಂಬುಜ ಪೀಠ ಮಧ್ಯೇ ನಿಧಾಯ ಲಿಂಗಂ ಪರಮಾತ್ಮ ಚಿನ್ಹಂ। ಸಮರ್ಚಯೇದೇಕಧಿಯೋಪಚಾರೈರ್ನರಶ್ಚ

ಬಾಹ್ಯಾಂತರ ಭೇದ ಭಿನ್ನಂ॥ ಎಂದೆನಿಸುವ ಲಿಂಗವು. ಮತ್ತಂ ವೀರಾಗಮದಲ್ಲಿ॥ ಭಾವಸ್ಥಾನಾಂಗ ಲಿಂಗೇಷು ಪ್ರಾಣೇ ಲಿಂಗಾಂತರದ್ವಯಂ। ಸನ್ನಿಧಾನಾತ್ಪರಂ ಲಿಂಗಂ ಸ್ಥಾಪ್ಯಂ ತತ್ರೈವ ಧೀಮತಾಂ॥ ಎಂದೆನಿಸುವ ಲಿಂಗವು. ಮತ್ತಂ ಶಿವರಹಸ್ಯದಲ್ಲಿ ॥ ಕರ್ಣದ್ವಾರೇ ಯಥಾ ವಾಕ್ಯಂ ಗುರುಣಾ ಲಿಂಗಮೀರ್ಯತೆ। ಇಷ್ಟ ಪ್ರಾಣಸ್ತಥಾ ಭಾವ ಸ್ತ್ರಿಧಾವೈಕ್ಯಂ ವರಾನನೆ॥ ಎಂದೆನಿಸುವ ಲಿಂಗವು. ಮತ್ತಂ ಶಿವರಹಸ್ಯದಲ್ಲಿ ॥ ಏಕ ಮೂರ್ತಿಸ್ತ್ರಯೋ ಭಾಗಂ ಗುರುರ್ಲಿಂಗಂತು ಜಂಗಮಂ। ಜಂಗಮಂಚ ಗುರುರ್ಲಿಂಗಂ ತ್ರಿವಿಧಂ ಲಿಂಗಮುಚ್ಯತೆ॥ ಎಂದೆನಿಸುವ ಲಿಂಗವು. ಗುರು ಲಿಂಗ ಜಂಗಮ ರೂಪಾಗಿ ಎನ್ನ ಕರಸ್ಥಲಕ್ಕೆ ಬಿಜಯಂಗೈದು ಕರತಲಾಮಲಕವಾಗಿ ತೋರುತೈದಾನೆ. ಆಹಾ ಎನ್ನ ಪುಣ್ಯವೇ! ಆಹಾ ಎನ್ನ ಭಾಗ್ಯವೇ! ಆಹಾ ಎನ್ನ ಸತ್ಯವೇ! ಆಹಾ ಎನ್ನ ನಿತ್ಯವೆ! ಶಿವ ಶಿವ ಮಹಾದೇವ ಮಹಾದೇವ ಮಹಾದೇವ ನೀನೇ ಬಲ್ಲೆ ನೀನೇ ಬಲ್ಲೆ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ ॥ ೩ ॥

ಭಾವಃ— ಗುರುವು ಕೊಡುವಂಥ ಲಿಂಗವು ಪ್ರಾಣಲಿಂಗವಾಗಿದೆ. ಹೇಗೆಂದರೆ ಪರಬ್ರಹ್ಮವು ಎಲ್ಲ ವಸ್ತುಗಳಲ್ಲಿ ಚೈತನ್ಯಾತ್ಮಕವಾಗಿರುವದರಿಂದ ಅದೇ ಪ್ರಾಣಲಿಂಗವಾಗಿ ಮನುಷ್ಯನಲ್ಲಿ ತೋರುತ್ತದೆ. ಆ ಪ್ರಾಣಲಿಂಗವೇ ಗುರುಮುಖದಿಂದ ಇಷ್ಟಲಿಂಗವಾಗಿ ಭಕ್ತನ ಹಸ್ತದಲ್ಲಿ ಉತ್ಪನ್ನವಾಗುತ್ತದೆ. ಇಂಥ ಲಿಂಗವೇ ಪರಬ್ರಹ್ಮ ವಸ್ತುವು. ಈ ವಸ್ತುವು ಪಂಚಮುಖಸಂಜ್ಞೆಯುಳ್ಳದಾಗಿದೆ. ಇದು ಐದು ತೆರದ ಗುಣಗಳಿಂದ ಗುರುತಿಸಲ್ಪಡುತ್ತಿದೆ.

ಪರಬ್ರಹ್ಮ ವಸ್ತುವು ಪರವಾಗಿದೆ. ಹೇಗೆಂದರೆ, ಇದು ತನ್ನ ಲೀಲಾಮಾತ್ರದಿಂದ ಈ ಸೃಷ್ಟಿಯನ್ನು ಕಲ್ಪಿಸಿದ್ದು ಈ ಸೃಷ್ಟಿಯಲ್ಲಿ ಬ್ರಹ್ಮ ಮೊದಲ್ಗೊಂಡು ತೃಣದ ವರೆಗೂ ಅನೇಕ ವಸ್ತುಗಳೂ ಜೀವಜಂತುಗಳೂ ಉತ್ಪನ್ನವಾಗಿವೆ. ಇವುಗಳ ಉತ್ಪತ್ತಿಯು ಪಂಚಭೂತಗಳಿಂದ ಇದ್ದು ಈ ಭೂತಗಳಿಗೆ ಮೇಲೆ ಇರುವಂಥಾದ್ದೇ ಪರಬ್ರಹ್ಮವೆನಿಸುವದು ಇದರಿಂದ ಪರಬ್ರಹ್ಮ ವಸ್ತುವು ಪರವೆಂದು ಹೇಳಲ್ಪಟ್ಟದೆ.

ಹಾಗೆಯೇ ಅದು ಗೂಢ ಲಕ್ಷಣವುಳ್ಳದಾಗಿದೆ. ಯಾಕಂದರೆ ಯಾವತ್ತು ಬ್ರಹ್ಮಾಂಡವನ್ನು ತನ್ನೊಳಗೆ ಅಡಗಿಸಿಕೊಂಡು ಸಮಸ್ತ ಜಗಜ್ಜನನಕ್ಕೆ ತಾನೇ ಕಾರಣವಾಗಿದೆ.

ಅದು ಶರೀರಸ್ಥವಾಗಿದೆ. ಶರೀರಸ್ಥವೆಂದರೆ, ಶಿವತತ್ವವು ಶೂನ್ಯ ಸ್ಥಿತಿಯಲ್ಲಿ ಪ್ರಾರಂಭದಲ್ಲಿ ಇದ್ದು ಅದು ಮುಂದೆ ಶಿವ ಶಕ್ತಿ ಎಂದು ಭೇದವನ್ನು ಹೊಂದುವದು. ಹೀಗೆ ಉತ್ಪನ್ನವಾದ ಶಕ್ತಿಯು ಪದಾರ್ಥಗಳ ಹೃದಯದಲ್ಲಿದ್ದು ಅಲ್ಲಿ ತನ್ನ ಸನ್ನಿಧಿಮಾತ್ರದಿಂದ ಜಗತ್ತನ್ನು ಹುಟ್ಟಿಸಲಿಕ್ಕೆ ಕಾರಣವಾಗುವದರಿಂದ ಅದು ಶರೀರಸ್ಥವೆಂದು ಹೇಳಲ್ಪಟ್ಟಿದೆ.

ಪರಮಾತ್ಮನಿಗೆ ಅನಾದಿವತ್ ಎಂಬ ಸಂಜ್ಞೆಯೂ ಇದೆ. ಯಾಕಂದರೆ ಪರಮಾತ್ಮನ ಸೃಷ್ಟಿಶಕ್ತಿಯಿಂದ ಸಮಸ್ತ ಸಂಸಾರಾದಿ ಪ್ರಪಂಚವು ಮೊದಲು ಹುಟ್ಟುವದರಿಂದ ಅನಾದಿ ಎಂದು ಪರಮಾತ್ಮನು ಹೇಳಲ್ಪಟ್ಟಿದ್ದಾನೆ.

ಪರಮಾತ್ಮನಲ್ಲಿರುವ ಈ ಸೃಷ್ಟಿಶಕ್ತಿಗೆ ಮಾಯಾಶಕ್ತಿ ಎಂತಲೂ ಒಂದು ಹೆಸರು ಇದೆ. ಈ ಮಾಯಾ ಶಕ್ತಿಯಿಂದ ಪುಲ್ಲಿಂಗ, ಸ್ತ್ರೀಲಿಂಗ ನಪುಂಸಕಲಿಂಗ ಎಂಬ ತ್ರಿವಿಧ ಲಿಂಗಗಳುಳ್ಳ ಸಮಸ್ತ ಪ್ರಪಂಚವು ವ್ಯವಹರಿಸುತ್ತದೆ. ಈ ವ್ಯವಹರಣೆಗೆ ತಾನೇ ಸ್ಥಾನವಾದ್ದರಿಂದ ಲಿಂಗಕ್ಷೇತ್ರವೆಂಬ ಸಂಜ್ಞೆಯು ಪರಮಾತ್ಮನಿಗೆ ಬಂದಿದೆ.

ಮೇಲ್ಕಂಡ ವಿಷಯಗಳಿಗೆ ಅನುಸರಿಸಿ ವಚನಕಾರನು ಅನೇಕ ಗ್ರಂಥಾಧಾರಗಳನ್ನು ಮುಂದೆ ವಿವರಿಸಿರುವನು. ಅವು ಯಾವವೆಂದರೆ:—

ವಾತುಳಾಗಮದಲ್ಲಿ ಪರಮಾತ್ಮನಿಗೆ ಈ ಸಂಜ್ಞೆಗಳಿವೆ ಎಂದು ಹೇಳಿದ ಒಂದು ಉಕ್ತಿಯನ್ನು ವಚನಕಾರನು ಇಲ್ಲಿ ಉದಹರಿಸಿರುವನು. ಅದರಲ್ಲಿ ಈ ಆರೂ ಸಂಜ್ಞೆಗಳ ಹೆಸರುಗಳು ಬಂದಿವೆ. ವಾಶಿಷ್ಠದಲ್ಲಿ ಪರಮಾತ್ಮನು ಕ್ಷೇತ್ರಜ್ಞನೆಂದು ಹೇಳಲ್ಪಟ್ಟಿದ್ದಾನೆ. ಯಾಕೆಂದರೆ ಇಲ್ಲಿಯೇ ಪಿಂಡ ಬ್ರಹ್ಮಾಂಡಗಳ ಐಕ್ಯತೆಯು ಇದೆ. ಈ ಲಿಂಗದ ಸಂಬಂಧವು ಎಲ್ಲದರಲ್ಲಿಯೂ ಇದೆ. ಅಂತರಂಗ ಮತ್ತು ಬಹಿರಂಗ ಇವುಗಳಲ್ಲಿಯೂ ಐಕ್ಯತೆಯು ಇದರ ಮೂಲಕವಾಗಿಯೇ ಉಂಟಾಗುತ್ತದೆ. ಬ್ರಹ್ಮಾಂಡ ಪುರಾಣದಲ್ಲಿ ಹೇಳಿದ್ದೇನೆಂದರೆ, ಪರಬ್ರಹ್ಮವು ಸಮಸ್ತ ಸ್ಥಾವರಾದಿಗಳ ವ್ಯವಹಾರಕ್ಕೆ ಸ್ಥಾನವಾಗಿದೆ. ಈ ಸ್ಥಾನವು ಪ್ರಪಂಚಾತ್ಮಕವಾದುದಲ್ಲ. ದಿವ್ಯ ಲಕ್ಷಣವುಳ್ಳದು ಇದೆ. ಶಿವರಹಸ್ಯದಲ್ಲಿ ಪರಬ್ರಹ್ಮವು ಮಹಾಲಿಂಗವು, ಮನಸ್ಸಿಗೆ ಅತೀತವು, ಅಗೋಚರವು, ಹೆಸರಿಲ್ಲದ್ದು, ನಿರ್ಗುಣವು, ನಿತ್ಯವು, ಶುದ್ಧವು, ದೋಷರಹಿತವು ಎಂದು ವರ್ಣಿಸಲ್ಪಟ್ಟಿದೆ. ಉತ್ತರವಾತುಳದಲ್ಲಿ ಪರಬ್ರಹ್ಮವು ಆದ್ಯಂತ ಶೂನ್ಯವು, ಮಲರಹಿತವು,

ಬಂದರೆ ವೀರಶೈವಕ್ಕೆ ವಿರೋಧವು. ನಿನಗೆ ಶಿವನೇ ವಿಶ್ವೇ ದೇವರಾಗಿ ಬಂದಾನೆನಲು ಶಿವನ ಕುರುಹು. ನನಗೆ ಹೇಗೆ ತಿಳಿದೀತೆನಲು ಶ್ವಪಚ ವೇಷದಿಂದ ಬಂದುದೇ ಕುರುಹೆನಲು ಆಗ ಸಾಮವೇದಿ ಭಸಿತ ರುದ್ರಾಕ್ಷಿಗಳ ಧರಿಸಿ ಶಿಷ್ಯರನು ಶಿವಭಕ್ತರನು ಕರಿಸಿ ಶಿವನ ಬರವ ನೋಡುತ್ತಿರಲು ಆಗ ಶಿವನು ಸತ್ತ ಕರುವ ಸಂಭೋಳಿಗೋಲ ಹಿಡಿದುಕೊಂಡು ಬಂದು ಸಮ್ಮಾರ್ಜನೆಯ ಮೇಲೆ ಪಾದವ ಮಡಗಲು ಕೊರಳಲ್ಲಿ ಲಿಂಗವ ಕಂಡು ಪಾದವ ಹಿಡಿಯುಲು ಆಷ್ಟರೊಳಗೆ ಸತ್ತ ಕರುವೇ ತ್ರಿಶೂಲದಲ್ಲಿದ್ದ ಹೆಣವಾಗಿ ಪಂಚಮುಖ ದಶಭುಜ ಉಟ್ಟ ಹೊದ್ದ ಅರಿವೆಗಳೇ ಹುಲಿ ಗಜ ಚರ್ಮಗಳಾಗಿ ಕಿವಿಯಲ್ಲಿಟ್ಟ ಎಲುಮೇ ನಾಗಕುಂಡಲಗಳಾಗಿ ಕ್ರಿಯಲ್ಲಿರ್ದ್ದ ಸಂಭೋಳಿಗೋಲೆ ಕಂಕಾಳವಾಗಿ ಶಿವನು ನಿಜರೂಪ ತೋರಿ ಸಾಮವೇದಿಯ ಕೈಲಾಸಕ್ಕೆ ನಡೆ ಎನಲು ಎನ್ನ ಗುರುವ ಬಿಟ್ಟು ಬಾರೆನೆನಲು ಆಗ ಶ್ವಪಚಯ್ಯನನು, ಛತ್ತೀಸ ಪುರಗಳನು, ಸಾಮವೇದಿಯನು ಶಿವನು ಕೈಲಾಸಕ್ಕೆ ಕರೆದೊಯ್ದರು. ಸಾಕ್ಷಿ:— ವಾಯುವ್ಯ ಸಂಹಿತೆ, ಜನ್ಮಸ್ವಪಾಕ-ಮಧ್ಯಸ್ತು ಹರಚರಣವಂದನ ರತಸ್ಯ ಮಹಾಚಾನೀಶ್ವರ ಭೋಕ್ತೋ ಭವಾಮಿ ಭವನೇಪಿ ಶಕ್ರಸ್ಯ.

---

## ೧೫೦ ನೆಯ ವಚನದ ಕಥೆ. (೨೩—೩೭)

### ಇಳೆಯಾಂಡ ಗುಡಿಮಾರ.

ಇಳೆಯಾಂಡಗುಡಿ ಎಂಬ ಪುರದಲ್ಲಿ ಇಳೆಯಾಂಡಗುಡಿಮಾರಯ್ಯಗಳಿರ್ಪರು. ಅವರು ಚಿತ್ತವೆಂಬ ಭೂಮಿಯಲ್ಲಿ ಶಿವಸ್ನೇಹವೆಂಬ ನೇಗಿಲು ಅದಕ್ಕೆ ಅಹಂಕಾರವೆಂಬ ಈಸು ಷಡುವರ್ಗವೆ ಮನವೆಂಬ ಹಗ್ಗ ಇಷ್ಟನು ಮಾಡಿಕೊಂಡು ನಿಷ್ಠೆ ಎಂಬ ಬೀಜವ ಬಿತ್ತಿ ಜ್ಞಾನವೆಂಬ ಸಸಿಯ ಶಿವಾನಂದವೆಂಬ ಮಳೆಯಿಂದ ಸಾಕುತ್ತ ಇಂತು ಅಂತರಂಗ ಬಹಿರಂಗದ ಆರಂಭವ ಮಾಡುತ್ತ ಮತ್ತೆ ಮಾನ್ಯದ ಹೊಲನ ಜಂಗಮಕ್ಕೆ ಕೊಟ್ಟು ಸರಿಯಾಗಲು, ಉಳಿದ ಹೊಲ ಆಭರಣಂಗಳ ಮಾರಿ ಜಂಗಮಕ್ಕೆ ನೀಡುತ್ತ ಮತ್ತೆ ತಾವು ಹೊದ್ದುದ ಸತಿಯುಟ್ಟುದ ಜಂಗಮಕ್ಕೆ ಕೊಟ್ಟು, ಮತ್ತೆ ಮಗುದೊಂದು ತನಗೊಂದು ಕೈಪ ಸತಿಗೊಂದರಿವೆ ಇಂತಹ ಬಡತನದಲ್ಲಿದ್ದು ಜಂಗಮದ ಭಕ್ತಿಯ ಬಿಡಲಿಲ್ಲ. ಮತ್ತೆ ಧನಧಾನ್ಯವಿ

ಲ್ಲದಿರಲು ತನುವನರ್ಪಿಸುವೆನೆಂದು ಇಳಿಯಾಂಡಗುಡಿಮಾರಯ್ಯನು ತೊಂಭತ್ತುವರುಷ ಪರಿಯಂತರ ಜಂಗಮಕ್ಕೆ ನೀಡುತ್ತಿರಲು ಇತ್ತ ಶಿವನು ಭಕ್ತನ ಕಾಡಿ ನೋಡುವೆನೆಂದು ನರೆ ತೆರೆ ಜೋಲುವ ಹುಬ್ಬು ಕೋಲ ಹಿಡಿದು ಶಿವನು ವೃದ್ಧನಾಗಿ ಮಳೆಯೊಳಗೆ ಮಾರಯ್ಯನ ಮನೆಗೆ ಬಂದು ಹಲ್ಲು ಗಿಟಿಗಿಟಿ ಎನಲು ಅವರು ಕೇಳಿ ಕರದೊಯ್ದು ಗುಡಿಸಲು ಹಿರಿದು ಬೆಂಕಿಯು ನೊಟ್ಟಿ ಕೊಡಲು ಕಾಸಿಕೊಂಡು ಹಸಿದು ಅಂಬಕಳ ಉಂಟೇ ಎನಲು ತಮಗೆ ಮೂರು ದಿನ ಉಪವಾಸವೆನ್ನದೆ ರಾತ್ರೆಯಲ್ಲಿ ಹೊಲಕೆ ಹೋಗಿ ಬಿತ್ತಿದ ಬತ್ತವ ಆಯ್ದು ತಂದು ಹುರಿದು ಅಂಬಳವ ಮಾಡಿ ಹರಿವೆಯ ಸೊಪ್ಪ ತರುವುದಕ್ಕೆ ಮಗನು ಅಲ್ಲಿ ಹಾವು ಕಚ್ಚಿ ಸಾಯಲು ಅವನ ಲೆಕ್ಕಿಸದೆ ತಾನೇ ತಂದು ತಾಳಿಸಿ ಬಾಳೆ ಎಲೆಯಲ್ಲಿ ಎಡೆಮಾಡಿ ಸಲಿಸಿ ಎನಲು ಆಗ ನಿನ್ನ ಮಗನು ನಮ್ಮ ಪಜ್ತಿಗೆ ಬನ್ನಿ ಎನಲು ಆಗ ಮಗನ ಎಬ್ಬಿಸಿಕೊಂಡು ಬರಲು ಆಗ ಶಿವನು ಮೂವರನು ಕೈಲಾಸಕ್ಕೆ ಕರಕೊಂಡು ಹೋದರು.

---

## ೧೬೯ ನೆಯ ವಚನದ ಕಥೆ. (೨೬—೫೬)

### ಸಗರ ಕರ್ತವೀರ್ಯ.

ಈರೇಳು ರತ್ನ ಹದಿನೆಂಟು ಲಕ್ಷ ಗಜ ನಾರಿಯರು ನಾಲ್ಕು ಲಕ್ಷವು ಮೂವತ್ತೆರಡು ಸಾವಿರ ಮಕ್ಕಳು ರಥಂಗಳು ಸೂರ್ಯನ ರಥಕ್ಕೆ ಸಲೆ ಮಿಗಿಲೆನಿಸುವ ರಥಂಗಳು ಸಾಲದೆ ಸಿರಿಗೆ ನೆಲೆವನೆ ಎನಿಸುವ ಸಾಜಿತಪುರ ಮೂರುವರೆ ಕೋಟಿ ಬಂಧುಗಳು ಮೂವತ್ತೆರಡು ಕೋಟಿ ಜಾತ್ಯಶ್ವ ಇಪ್ಪತ್ತೆರಡು ಕೋಟಿ ವೈಗಾವಲ ವೀರಭಟರು ಛಪ್ಪನ್ನದೇಶದ ರಾಯರುಗಳೆಲ್ಲರೂ ಕಪ್ಪಗಾಣಿಕೆಯಂ ತೆತ್ತು ಬಹರು. ಕೂಡಲಸಂಗಮದೇವ ನಿಮ್ಮ ಕೃಪೆ ತಪ್ಪಿದಲ್ಲಿ ಆ ಸಗರ ಕರ್ತವೀರ್ಯರು ಒಂದು ಕ್ಷಣಕೆ ಮಡಿದರು.

---

# ೧೭೦ ನೆಯ ವಚನದ ಕಥೆ. (೨೬---೫೮)

## ಕೋಲ ಶಾಂತಯ್ಯ

ಬಿಜ್ಜಳರಾಯನ ಚಾವಡಿಯ ಕಂಭ ಕುಸಿದಿರಲು ಬಿಚ್ಚಿ ಕಟ್ಟಿ ಸೆಂದು ಬಸವೇಶ್ವರಗೆ ಹೇಳಲು ಅವರು ಕೋಲ ಶಾಂತಯ್ಯಗೆ ಹೇಳಲು ಅವರು ಹರಿದಾಸನೆಂಬ ಉಪ್ಪಾರಗೆ ಹೇಳಲು ಅವರು ಚಿತ್ರದಲ್ಲಿದ್ದ ಜಂಗ ಮವ ಕಂಡು ಇವ ಕಂಡ ಕಂಡ ಭಕ್ತರಲ್ಲಿ ಉಂಡು ದೊಳ್ಳು ಬೆಳಸಿ ಕೊಂಡವನೇ ಎಂದು ಹಾರೆಯಲ್ಲಿ ತಿವಿಯಲು, ಆಗ ಕೋಲಶಾಂತಯ್ಯ ಕಂಡು, ತಿವಿಯ ಬೇಡೆನಲು ಮೀರಿ ತಿವಿಯಲು ಹರಿದಾಸನ ತಲೆಯ ಹೊಯ್ಯಲು, ಅದ ಕೇಳಿ ಬಿಜ್ಜಳ, ಬಸವಣ್ಣ ಉಪ್ಪಾರನ ಕೊಲ್ಲಬಹುದೆ, ಅವ ಜಂಗಮವನಿರಿಯಬಹುದೇ ಎನಲು ಹಾಗಾದರೆ ಕರೆಯಿರಿ ಎನಲು ಚಿತ್ರದ ಸಂಗಮನಾಥ ಬನ್ನಿ ಎನಲು ಹಾಗೆ ಬಂದು ಎಲೆ ಬಸವಣ್ಣಾ ಹಾರೆ ತಾಗಿ ನೊಂದೆವೆನಲು ಅದು ನೀವು ನೊಂದುದಲ್ಲ ನಾ ನೊಂದೆನೆಂದು ಜಂಗಮದೇವನ ಸಂತೈಸಿ ತಮ್ಮ ಗೃಹಕ್ಕೆ ಕರ ಕೊಂಡು ಹೋದರು. ಇತ್ತ ಬಿಜ್ಜಳ ಇವನ ರಕ್ಷಿಸಿ ಎನಲು ಆಗ ಕೋಲ ಶಾಂತಯ್ಯನು ಹರಿದಾಸನ ಕೋಲ ಮುಟ್ಟಿಸಿ ಪ್ರಾಣವ ಪಡೆದರು.

---

## ಸುದೇವಿ ನರವರ್ಮ.

ಕಿಷ್ಕಿಂಧ ಪರ್ವತದಲ್ಲಿ ಕಲ್ಯನೆಂಬ ಮುನಿ ಪ್ರತಿಷ್ಠಿಸಿ ಕಲ್ಯಲಿಂಗಕ್ಕೆ ಕೆಂಪು ದಾಸಾಳದ ಹೂವ ಧರಿಸಿರಲು ಅದು ಮಾಂಸವೆಂದು ಹದ್ದು ಬಂದು ಲಿಂಗ ಸಮೀಪದಲ್ಲಿ ಕುಳಿತು ಮಾಂಸವಲ್ಲವೆಂದು ಹಾರಿ ಹೋಗಿ ಸಾಯಲು ಅದರ ಜೀವವ ಯಮನ ಬಳಿಗೊಯ್ಯಲು ಅವ ಇದರ ಪುಣ್ಯವೇನೆಂದು ಚಿತ್ರಗುಪ್ತರ ಕೇಳಲು ಅವರು ಲಿಂಗದ ಬಳಿಯಿಂದ ಹಾರಿದಾಗ ದೂಳು ಹಾರಲು ರಜವ ಗುಡಿಸಿದ ಫಲವಹುದೆಂದು ಕಳು ಹಲು ಅದು ವಸುವರ್ಮನೆಂಬ ಅರಸನ ಮಗಳಾದ ಸುದೇವಿ ಎಂಬ ನಾಮದಿಂದ ಪುಟ್ಟಿ ನರವರ್ಮರಾಜನ ಮದುವೆಯಾಗಿ ಅವನ ಸಾವಿರ ಸತಿಯರೊಳಗೆ ಪಟ್ಟದ ರಾಣಿಯಾಗಿರುವಾಗ ಒಂದು ಕಸಬರಿಗೆಗೆ ಚಿನ್ನದ

ತುಂಬು ಸೂರೆಪುಟದ ಗವಸಣಿಗೆಯು ಹಾಕಿಸಿ ಆದ ತಕ್ಕೊಂಡು ಅಂದಣ ವನೇರಿ ಲಿಂಗದ ಗುಡಿಗೆ ಹೋಗಿ ಕಸವ ಗುಡಿಸುವಾಗ ಉದ್ದಾಲನೆಂಬ ಮುನಿ ಕಂಡು ನಿನ್ನಲ್ಲಿ ಗೌಡಿಯರಿದ್ದು ನೀನು ಗುಡಿಸುವ ಕಾರಣವೇ ನೆನಲು ಅವರು ಗುಡಿಸಿದ ಪುಣ್ಯ ಆವರಿಗೆ ಎನಲು ಆಗ ಮುನಿ ತಿಳಿದು ಪೂರ್ವದಲ್ಲಿ ರಕ್ಕೆಯಿಂದ ದೂಳು ಹಾರಿಸಿದ ಫಲದಿಂದ ಈ ಪದವಿಯಾ ಯಿತ್ತು ಗುಡಿಸಬಹುದೆಂದು ತನ್ನಾಶ್ರಮಕ್ಕೆ ಹೋಗಲು ಇತ್ತ ಈ ನರ ವರ್ಮರಾಜನು ಪೂರ್ವದಲ್ಲಿ ಮೊಲನಾಗಿರುವಾಗ ಲಿಂಗದ ಸುತ್ತಳ ಕರಿ ಕೆಯು ಮೇಯಲು ಆ ಲಿಂಗಕ್ಕೆ ಶುಚಿಯಾದಂತಾಗಲು ಆ ಫಲದಿಂದ ಅರಸನಾಗಿ ಹುಟ್ಟಿದನು. ಅದು ಕಾರಣದಿಂದ ಸತಿಪತಿಗಳು ಇಬ್ಬರೂ ಲಿಂಗದ ಗುಡಿಯಲ್ಲಿ ಹುಟ್ಟಿದ ಹುಲ್ಲು ರಜಗಳ ತೆಗೆದುಕೊಂಡು ಸುಖ ದಲ್ಲಿ ಕೈಲಾಸಕ್ಕೆ ಹೋದರು.

---

## ೧೭೬ ನೆಯ ವಚನದ ಕಥೆ. (೨೭—೬೩)

### ಬಾಲಚಂಡಯ್ಯ.

ಸ್ತೋತ್ರವನರಿಯೆ, ಮಂತ್ರವನರಿಯೆ. ಕೂಸ ಕೊಂದ ಭೂತನಂತೆ ಕೈಲಿ ದೇವರ ಹಿಡಿದುಕೊಂಡು ಸುಮ್ಮನೆ ಇರಲಾಗದು. ಅದೆಂತೆಂದೊಡೆ ಪೂಜಾಕೋಟಿ ಸಮಸ್ತೋತ್ರಂ ಎಂದುದಾಗಿ ಬಾಲಚಂಡಯ್ಯಗಳು ಮುಗ್ಧ ಭಾವದಿಂದ ಮಳಲ ಲಿಂಗವ ಮಾಡಿ ಆಕಳ ಹಾಲ ನೆರೆದು ಎಕ್ಕೆ ಕಕ್ಕೆ ಹೂವಿನಲ್ಲರ್ಚಿಸಿ ದಂಡಣ ದತ್ತಣವೆಂದು ಕುಣಿದಾಡಲು ಅವರ ತಂದೆ ಇದೇನೆಂದು ಕೇಳಲು ಕಾಲಿಲೊದೆಯಲು ಅವನ ಕಾಲ ಕತ್ತರಿಸಿ ಆಲುತ್ತಿರಲು ಶಿವನೊಲಿದನು.

---

## ೧೭೭ ನೆಯ ವಚನದ ಕಥೆ. (೨೭—೬೪)

ಕಾಲನನುಲ್ಲಂಘಿಸಿದ ಭಕ್ತರ ಕಥೆಯು ಕೇಳಿ ಮಾರ್ಕಂಡೇಯನಿಂದ ಭಂಗಿತನಾಗನೆ? ಮಳೆಯ ರಾಜನಿಂದೆ ವಂದಿಸಿಕೊಳ್ಳನೇ? ಶ್ವೇತನಿಂದ

ಉರಿಸಿಕೊಳ್ಳನೆ? ಪುರುಷರ್ಗೆ ೧೦೦ ವರುಷವೆಂಬ ಮಾದಿರಾಜಯ್ಯನು ಒಂದು ವರುಷ ಮೀರನೆ? ಹೀಗೆ ಕಾಲಕರ್ಮಕ್ಕೆ ಶಿವನೇ ಅಧಿಕನೆಂದು ಕಾಲಕರ್ಮಂಗಳ ಖಂಡಿಸಿದರು.

---

## ೧೭೯ ನೆಯ ವಚನದ ಕಥೆ. (೨೭—೬೬)

### ಕಲಕೇತ ಬ್ರಹ್ಮಯ್ಯ.

ಕಲ್ಯಾಣದಲ್ಲಿ ಕಲಕೇತ ಬ್ರಹ್ಮಯ್ಯಗಳು ಮುಂಜುಟ್ಟಕಟ್ಟಿ ನೊಸಲಲ್ಲಿ ವಿಭೂತಿಯನಿಟ್ಟು ಕಿವಿಯಲ್ಲಿ ಕೆಂದಳಿರ ಧರಿಸಿ ಕಾವಿನ ಕಪ್ಪಡವನುಟ್ಟು ಎಡದ ಪಾದದಲ್ಲಿ ಅಂದುಗೆ ಬಲದ ಪಾದದಲ್ಲಿ ಗೆಜ್ಜೆ ದಕ್ಷನ ಕುರಿದಲೆಯ ಕೋಡಿನ ತೆರ ಬಲಿದ ಕೊಂಬಂ ತನ್ನ ಎಡದ ಕೈಯ್ಯಲ್ಲಿ ಪಿಡಿವು ಗಿಲಿಕೆ ಘಲಿಲೆನುತೆ ಬಲಿಯ ಕೊಂದ ವಿಷ್ಣುವಿನ ನಟ್ಟೆಲುವ ಹಿಡಿದಂತೆ ಬೆಳಗಂದಂಗೆಯುಂ ಬಲದ ಕೈಯ್ಯಲ್ಲಿ ಪಿಡಿದು ತಿರುಹುತ್ತ ಇಂತಪ್ಪ ವೇಷವನಳವಡಿಸಿಕೊಂಡು ಮುಗುಳ್ನಗೆಯ ನಗುತ್ತ ಶಿವಭಕ್ತರ ಗೃಹಕ್ಕೆ ಬಂದು ಮೋರೆಯ ಮುರಿಕಿಸುತ್ತ ನಗಿಸುತ್ತಂ ಭೃಂಗೀಶ್ವರನಂತೆ ಕೋಡಂಗಿಯಾಟವನಾಡುತ್ತ ಪಾಡುತ್ತ ಶಿವಭಕ್ತರಲ್ಲಿ ಧಾನ್ಯವ ಬೇಡಿ ತಂದು ಜಂಗಮಾರ್ಚನೆಯ ಮಾಡುತ್ತಿರಲು ಶಿವನು ಕಾಲಕೇತ ಬ್ರಹ್ಮಯ್ಯಂಗೆ ಬೇಡಿದಷ್ಟು ದ್ರವ್ಯವ ಕೊಡಲು ಬೇಡಿದ ಬಡ ಭಕ್ತರಿಗೆ ಕೊಟ್ಟರು.

---

## ೧೮೦ ನೆಯ ವಚನದ ಕಥೆ. (೬೭—೬೭)

### ವಿದಳ.

ಶಿವನಾಮದ ಮಹತ್ವ. ಲಿಂಗಪುರಾಣದಲ್ಲಿ ಶಿವರಹಸ್ಯದಲ್ಲಿ ವಿದಳನೆಂಬರಸು ಬಾಲತ್ವದಿಂದಿರೆ ತಂದೆ ಮೃತವಾಗೆ ತನ್ನ ಪಟ್ಟವಾಗಲು ಸುರಾಪಾನವೆಂಬ ಮಂತ್ರಿ ವಿದಳನೆಂಬರಸನಿಗೆ ಬುದ್ಧಿಯ ಹೇಳುವಲ್ಲಿ ಅಹರ ಕಡ ಪ್ರಹರ ಕೊಲ್ಲು ಎಂಬು ಹೇಳಲು ಅಹರ ಪ್ರಹರವೆಂದು ಮೃತವಾಗೆ ಶಿವನೊಲಿದನು.

---

## ೧೮೧ ನೆಯ ವಚನದ ಕಥೆ (೨೭—೩೮)

### ರಾವಣ.

ಪೂರ್ವದಲ್ಲಿ ಲಂಕೆಯಲ್ಲಿ ರಾವಣನ ತಾಯಿ ಕೈಕಸೆ ಎಂಬವಳು ಹಿಟ್ಟಿನಲ್ಲಿ ರಜತಾದ್ರಿಯ ಮಾಡಿ ಅದರ ಮೇಲೆ ಲಿಂಗವ ಮಾಡಿರಿಸಿ ಪೂಜಿಸುತ್ತಿರಲು ಅದ ಮಗ ಕಂಡು ಏನು ಮಾಡುತ್ತಿದ್ದೆ ಎನಲು ಶಿವನ ಪೂಜೆ ಮಾಡುವೆನೆನಲು ಹಿಟ್ಟಿನಲ್ಲಿ ಗಿರಿಯನೇಕೆ ಮಾಡಿದೆ, ಅದ ನಾವಿಲ್ಲಿಗೆ ತಂದೆವೆಂದು ಹೋಗಿ ರಜತಾದ್ರಿಯನೆತ್ತಲು ಶಿವನು ಉಂಗುಷ್ಟದಿಂದ ಒತ್ತಲು ಕೆಳಗೆ ಸಿಕ್ಕಿ ಸಾವಿರ ವರುಷ ಇರಲು ಪಾರ್ವತಿ ಪರಮೇಶ್ವರರು ಪುಷ್ಪಕದಲ್ಲಿ ಹೋಗುವಾಗ ಕಪಿ ಮರಿಯ ಹಾಕಿ ಮರದ ಮೇಲಕೆ ನೆಗೆವಾಗ ಅದರ ಮಾಂಸ ಸಿಕ್ಕಿ ಒಣಗಿ ಝೇಂಕರಿಸುತಿರಲು, ಅದ ಶಿವನು ಪ್ರೀತಿಯಲ್ಲಿ ಕೇಳುವದ ಕಂಡು, ತನ್ನ ಕೈಯ್ಯನು ತಲೆಯನು ಕಡಿದು ಅದಕ್ಕೆ ನರವ ಕಟ್ಟಿ ರಾವಣ ಹಸ್ತವ ಮಾಡಿ ನುಡಿಸುವಾಗ ಆ ನಾದಕ್ಕೆ ಶಿವ ಮೆಚ್ಚಿ ಆ ತಲೆಯನು ಕೈಯ್ಯನು ಕೊಟ್ಟು ಲಂಕೆಗೆ ಕಳುಹಿದರು.

---

### ಬ್ರಹ್ಮ.

ಬ್ರಹ್ಮನು ಅಹಂಕರಿಸೆ ಹರನು ಶಿರಚ್ಛೇದವ ಮಾಡಿ ಸೋಮಾಷ್ಟಕದಿ ನುತಿಸೆ ಕರದಲ್ಲಿ ಪಿಡಿದನು.

---

## ೧೮೨ ನೆಯ ವಚನದ ಕಥೆ. (೩೮—೭೪)

### ಸೂರಸಾನಾಂಬೆ.

ಪೋರಾಂಡವೆಂಬ ಅಗ್ರಹಾರದಿ ಸೂರಸಾನಾಂಬೆಯು ಜಂಗಮಾರಾಧನೆಯ ಮಾಡುತ್ತಿರೆ ವಿಪ್ರರ್ನೆರೆದು ಆ ಊರ ರಾಜನಿಗೆ ಹೇಳೆ ಹೊರಡಿಸೆನೆ ಅವರು ಸೂರಸಾನಾಂಬೆಯ ಗೃಹವ ಆರೈವ ಸಮಯದಿ ಶಿವನು ಅಂತ್ಯಜ ವೇಷದಿಂ ಬರೆ ಸೂರಸಾನಾಂಬೆಯು ಮುಂದಿರಕ್ಕೆ ಬಿಜಯಂಗೈಸಿ ನೈವೇದ್ಯವ ನೀಡಿ ಆರೋಗಣೆಯ ಮಾಡು

ವಲ್ಲಿ ಭೂಸುರರ್ನೆರೆದು ಮನೆಯು ಕೆಡಹಿ ಕದವನೊಡೆದು ಅಂತ್ಯ ಜನ ಹೊಡೆಯಲು ಸೂರಸಾನಾಂಬೆಯು ವಿಪ್ರರಿಗೆ ಮನೆಯಲ್ಲಿ ಲಿಂಗವ ತೋರಿ ವಿಪ್ರರು ಸೂರಸಾನಾಂಬೆಗೆ ವಂದಿಸಿ ಹೋದರು. ಸುರಸಾನಾಂ ಬೆಯು ಸುಖದಿಂದಿರ್ದಳು.

---

## ೨೧೫ ನೆಯ ವಚನದ ಕಥೆ. (೩೨--೧೦೨)

ಗ್ರಂಥಃ— ಈಶ್ವರೋವಾಚ, ಸ್ಥಾವರಂ ಜಂಗಮುಶ್ಚೈವ ದ್ವಿವಿಧಂ ಲಿಂಗ ಮುಚ್ಯತೆ। ಜಂಗಮುಂಚಾವಮಾನಂಚ ಸ್ಥಾವರಂ ನಿಃಫಲಂ ಭವೇತ್॥ ಟೀಕುಃ— ಸ್ಥಾವರ ಜಂಗಮುವೆಂದು ಈ ಎರಡು ಒಂದೇ ಲಿಂಗವೆಂದು ಹೇಳಲ್ಪಟ್ಟಿತ್ತು. ಜಂಗಮುವನು ಉದಾಸೀನವ ಮಾಡಿದರೆ ಸ್ಥಾವರ ಲಿಂಗದಲ್ಲಿ ಮಾಡಿದ ಪೂಜೆ ನಿಃಫಲವಹುದು.

---

## ೨೨೩ ನೆಯ ವಚನದ ಕಥೆ. (೩೩--೧೧೦)

### ಬಲಿ.

ಬಲೀಂದ್ರ ತನ್ನ ದೇಶಕ್ಕೆ ಸುಖವ ಶಿವನಿಂ ಪಡೆದು ಯಜ್ಞವ ಮಾಡಲು ವಿಷ್ಣು ತನ್ನ ಭೋಗ ಹೋದೀತೆಂದು ವಾಮನಾವತಾರದಿಂ ದಾನವನ ಕೇಳಿ ತ್ರಿವಿಕ್ರಮಾವತಾರದಿಂ ಮೆಟ್ಟಿದನು.

---

### ಕರ್ಣ.

ಕೌರವರಾಯನು ಕರ್ಣಗೆ ದಳವಾಯಿ ಪಟ್ಟವ ಕಟ್ಟಿ ದಂಡು ಕಳುಹಲು ಇದ ಕೇಳಿ ಪಾಂಡವರು ಕರ್ಣನ ಮೇಲೆ ನಾಲ್ಕು ಸಾವಿರ ರಥ ಹದಿನಾರು ಸಾವಿರ ಕುದುರೆ ನೂರು ಘಟ ಆನೆ ಲಕ್ಷ ಕಾಲಾಳು

ಗಳಿಂದ ತಾಗಲು ಕರ್ಣನ ಬಲದೊಳಗೆ ಹತ್ತುಸಾವಿರ ಕುದುರೆ ಸಾವಿರ ಆನೆ ಕಾಲಾಳುಗಳ ಭೀಮ ಕೆಡಹಿದ. ಆ ಮೇಲೆ ಅರ್ಜುನ ಕೃಷ್ಣನ ಸಾರಥಿಯ ಮಾಡಿಕೊಂಡು ರಣಕ್ಕೆ ಬಂದು ಈತನ ಆಯುಧದ ಗಣನೆ ಎಷ್ಟೆಂದರೆ ಮೂಗುಳಂಬುಗಳು ಸಾವಿರದೇಳು ನೂರು, ಒಂಬತ್ತು ಸಾವಿರ ಮಿಟ್ಟೆಯಂಬುಗಳು, ಕವಲಂಬುಗಳು ಹನ್ನೆರಡು ಸಾವಿರ, ಮನೆಯ ಬೋಳಂಬು ನಾಲ್ಕು ಸಾವಿರ, ನಾಳಿಯಂಬುಗಳು ಹತ್ತು ಸಾವಿರ, ಇಷ್ಟನು ಆರು ಬಂಡಿಗಳ ಮೇಲೆ ತುಂಬಿ ಮತ್ತೆ ಪರಶು ಮುಸಲ ಮುಸುಂಡಿ ಸೆಲೆಹ ಪರಿಘ ತೋಮರ ಚಕ್ರ ಅಸಿ ಮುದ್ಗರ ತ್ರಿಶೂಲ ಕಠಾರಿ ಬೆಟಿಕ ಪಿಂಡಿವಾಳ ಸುರಿಗೆ ಮೊದಲಾದಾಯುಧಂಗಳ ಒಂದು ಬಂಡಿಯಲ್ಲಿ ತುಂಬಿಕೊಂಡು ಬರಲು ಇತ್ತ ಕರ್ಣನು ಶಲ್ಯನ ಸಾರಥಿಯ ಮಾಡಿ ಕೊಂಡು ಎಂಟುನೂರು ಬಂಡಿಗಳಲ್ಲಿ ಅಂಬುಗಳ ತುಂಬಿಕೊಂಡು ರಣಕ್ಕೆ ಬಂದು ಇನ್ನೂರ ಬಿಲ್ಲ ರಥದ ಮೇಲೆ ಎಡಗಡೆಯ ಮಡಗಿಕೊಂಡು ಅರ್ಜುನನ ಕೂಡೆ ಕಾಳಗವ ಮಾಡುವಾಗ ಆನೆಗಾನೆ ಕಾದುವಂತೆ ರಾಮರಾವಣರು ಕಾದುವಂತೆ ಕಾದುತ್ತಿರಲು ಆಗ ಅರ್ಜುನನ ಕಡೆಗೆ ಹರಿವಿರಿಂಚಿ ಇಂದ್ರಾದಿ ದಿಕ್ಪಾಲಕರಾದರು. ಇನ್ನು ಕರ್ಣನ ಸಾಹಿಗಳು ಹನ್ನೆರಡು ರಾಶಿ ನಕ್ಷತ್ರ ಆಕಾಶ ವಾಯು ಅಗ್ನಿ ಸಮುದ್ರಂಗಳು. ಆ ಮೇಲೆ ಕರ್ಣನೆಚ್ಚಂಬುಗಳ ಅರ್ಜುನ ಕತ್ತರಿಸಿ ತನ್ನಂಬುಗಳಿಂದವನ ಧ್ವಜವ ಕತ್ತರಿಸಿದ. ಮತ್ತೆ ಹತ್ತಂಬಿನಲ್ಲಿ ಬಿಲ್ಲ ಕತ್ತರಿಸಿದ. ಆ ಮೇಲೆ ಕರ್ಣ ಶಸ್ತ್ರವ ಬಿಡಲು ಕಿಡಿಗಳನು ಹೊಗೆಯನು ಉಗುಳುತ್ತ ಆಕಾಶದ ನಕ್ಷತ್ರಗಳನೆಲ್ಲ ಉರುಹುತ್ತ ಬಾಯಲ್ಲಿ ವಿಷದ ನೊರೆಯ ಕಾರುತ್ತ ಛಠ ಛಠಾ ಎಂದು ಕಿಡಿಗಳನುದುರಿಸುತ್ತ ಆಕಾಶವೆಲ್ಲ ಹೊಗೆಯಿಂದಂಧಕಾರವಾಗಲು ಆಗ ಇಂದ್ರನು ಭಯದಿಂದ ಅರ್ಜುನಂಗೆ ನಿರ್ವಿಘ್ನಮಸ್ತು ಎಂದು ಹರಿಸಿದನು. ಬಳಿಕ ಅರ್ಜುನ ಧರ್ಮ ಕೃಷ್ಣರು ಶಿವನ ಜಪಿಸುತ್ತಿರಲು ಆಗ ಶಾಪಾಸ್ತ್ರ ತಪ್ಪಿಹೋಗಲು ಆಗ ಶಲ್ಯನು ಮತ್ತೆ ಸರ್ಪಾಸ್ತ್ರದಿಂದೆಸೆಯುಲು ಕರ್ಣ ಮತ್ತೆ ಎಸೆಯುಲು ಕುದುರೆಗಳು ಕಂಗೆಟ್ಟು ಭರದಿಂದೆ ಆನೆಗಳು ಒದರಿದವು. ರಥಗಳುರಿದವು ವಿಷದ ಜ್ವಾಲೆಯಿಂದೆ. ಭೀಮ ಅರ್ಜುನಾದಿಗಳು ಮಂತ್ರವ ಜಪಿಸುತ್ತ ತಮ್ಮ ಬಾಣಂಗಳ ಇದಿರಾಗಿ ಬಿಡಲು ಅವನೆಲ್ಲ ಸರ್ಪಾಸ್ತ್ರ ನುಂಗುತ್ತ ಬರುವುದ ಅರ್ಜುನ ಕಂಡು ರಥವ ಐದಂಗುಲವ ನೆಲದೊಳಗೆ ಇಳಯ ಮೆಟ್ಟಿದ. ಆಗಲಾ

ಸರ್ಪಾಸ್ತ್ರ ಬಂದು ಕಿರೀಟವ ಕತ್ತರಿಸಿಕೊಂಡು ಹೋಗಲು ಬಳಿಕ ಅರ್ಜುನ ಉರಿಯನುಗುಳುವ ಬಾಣದಲ್ಲಿ ಕರ್ಣನ ಎದೆಯನೆಸೆಯಲು ಅದರಲ್ಲಿ ಸಾಯನೆಂದು ಕೃಷ್ಣ ವಿಪ್ರ ವೇಷದಲ್ಲಿ ಕರ್ಣನ ಸಮೀಪಕ್ಕೆ ಬಂದು ನೀನು ತ್ಯಾಗಿ ಎಂಬುದ ಕೇಳಿ ಬೇಡುವದಕ್ಕೆ ಬಂದೆನೆನಲು, ಸಿಂಹಾಸನದಲ್ಲಿರುವಾಗ ಬೇಡಲಿಲ್ಲ, ರಣದಲ್ಲಿ ಬೇಡಿದರೆ ಏನಿದೆ, ಎನಲು ನಿನ್ನ ಕವಚವ ಕೊಡು ಎನಲು ಕೊಟ್ಟನು. ಆ ಮೇಲೆ ಅರ್ಜುನ ಶಿವನಲ್ಲಿ ಪಡೆದ ಪಾಶುಪತಾಸ್ತ್ರದಿಂದ ಕೂಡೆ ಗಿರಿಜಾದೇವಿಯರು ಕೊಟ್ಟ ಅಂಜನಾಸ್ತ್ರದಿಂದ ಕರ್ಣನ ಶಿರವ ಕತ್ತರಿಸಲು ಆವ ಮೃತನಾದನು.

## ಖಚರ.

ಖಚರನೆಂಬ ರಾಜ ಹೇಡಿಯಾಗಿರಲು ಅರಿರಾಯರು ದೇಶವ ಹಾಳುಮಾಡುತ್ತಿರಲು ಖಚರನು ಶಿವನ ಕುರಿತು ತಪವ ಮಾಡಿ ಪರಾಕ್ರಮದ ಸ್ತ್ರೀಯಂ ಪಡೆದು ಬಲದ ಭುಜದಲ್ಲಿ ಹುದುಗಿಕೊಂಡು ಅರಿರಾಯರ ಬಲವ ಸಂಹರಿಸಿ ತನ್ನೂರಿಗೆ ಬಂದು ಯಜ್ಞವನ್ನಿಕ್ಕುತ್ತಿರಲು ನಾರಾಯಣ ಕಪಟ ಭಿಕ್ಷಾರ್ಥಿಯಾಗಿ ಬಂದು ಅಸ್ತಿಯ ದಾನವ ಬೇಡೆ ಕೊಟ್ಟ ರಣದಲ್ಲಿ.

## ಶಿಬಿ.

ಉತ್ತರದೇಶದಲ್ಲಿಯ ವಂಜರಿ ಎಂಬ ನದಿಯ ತೀರದಲ್ಲಿದ್ದ ರಾಯ ರತ್ನಾಪುರವೆಂಬ ಪಟ್ಟದಲ್ಲಿ ಶಿಬಿಚಕ್ರವರ್ತಿ ಎಂಬ ರಾಯ ಯಜ್ಞಾದಿ ಕರ್ಮಂಗಳ ಮಾಡುವುದ ಕೇಳಿ ತಮ್ಮ ಪದಂಗಳು ಹೋದಾವೆಂದು ವಿಷ್ಣು ಬೇಂಟೆಕಾರನಾಗಿ ಬ್ರಹ್ಮ ಪಾರಿವಾಳವಾಗಿ ಇಂದ್ರ ಗಿಡಗನಾಗಿ ಪಾರಿವಾಳವನಟ್ಟಿಕೊಂಡು ಬರಲು ಆ ಕಪೋತ ಅವನ ಮರೆಯ ಹೊಗಲು ಆ ವಿಷ್ಣು ಹಕ್ಕಿಯ ಕೊಡು ಎನಲು ಇದ ಕೊಡೆನು ಮತ್ತೇನಾದರೂ ಕೊಟ್ಟೇನೆನಲು ಅದನೊಲ್ಲೆ ಆ ಪಕ್ಷಿಯ ತೂಕ ನಿನ್ನ ಮಾಂಸವ ಕೊಡು ಎನಲು ಒಳಿತೆಂದು ಆ ಹಕ್ಕಿಯನೂ ತನ್ನ ಮಾಂಸವನೂ ತಕ್ಕಡಿಯಲ್ಲಿಕ್ಕಿ ತೂಗಲು ಆ ಹಕ್ಕಿಗೆ ಸರಿ ಬಾರದಿರಲು ಮತ್ತೆ ತನ್ನ ದೇಹವನ್ನೆಲ್ಲ ಕೊಯ್ದು ಕೊಟ್ಟನು.

## ೨೩೫ ನೆಯ ವಚನದ ಕಥೆ (೩೫---೨೩೫)

### ದಸರಯ್ಯ

ರಾಮುಕೊಂಡೆ ಎಂಬ ಪುರದಲ್ಲಿ ದಸರಯ್ಯನೆಂಬ ಶರಣನು ಹಿಂಸೆಯ ಮಾಡಬಾರದೆಂಬ ಭಾವದಿಂದ ಆಚರಿಸುತ್ತಿರಲು ಒಂದು ದಿನ ಪುಷ್ಪವನೆತ್ತುವಾಗ ಆ ಗಿಡ ನೊಂದೆನೆನಲು ಮತ್ತೆ ಚಿವುಟಲು ಅದಕ್ಕೆ ರಕ್ತ ಸುರಿಯಲು ಕಂಡು ಆ ಗಿಡವ ಕೆಳಗೆ ಸಮ್ಮಾರ್ಜನೆಯ ಮಾಡಿ ಉದು ರಿದ ಹೂವ ತಂದು ಶಿವಪೂಜೆಯ ಮಾಡುತ್ತಿರಲು ಒಂದು ದಿನ ತಲೆಯ ಮೇಲೆ ಗುದ್ದಿದ ಮೋಟಮಲ್ಲನ ನಿಜ ಜಂಗಮವ ಮಾಡಿ ಬಸವಣ್ಣನು ಶಿವನಾಗಮಯ್ಯಗಳ ಬೆರಳಲ್ಲಿ ಅಮೃತವ ಕರಿಸಿದಂತೆ ಬೆರಳುಗಳ ಚಿಗುರಿಸಿದರು. ಚೋಳಚಿಕ್ಕರ ಕೊರಳ ಬದನೆಯಕಾಯಿಗಳ ಲಿಂಗವ ಮಾಡಿದಂತೆ ಈತನ ಬರಿಯ ಸೆಜ್ಜೆಯೊಳಗೆ ಲಿಂಗವನುಂಟುಮಾಡಿ ಆ ಚರಮೂರ್ತಿಯು ದಸರಯ್ಯನು ಶಿವನೊಳೇಕಾರ್ಥವಾದರು.

---

## ೨೪೫ ನೆಯ ವಚನದ ಕಥೆ (೩೭---೭೪೫)

### ಎಡೆಮಟದ ನಾಗಯ್ಯ.

ಚೋಳಮಂಡಲದ ಕಾಂಚೀಪುರ ಹೊರವಳಿಯದ ಅರ್ಧ ಕೋಶ ದಲ್ಲಿ ಎಡೆಯ ಮಟದ ನಾಗಯ್ಯಗಳು ಸೀಮಾಲಂಘನ ಶೀಲಸಂಪನ್ನರಾಗಿ ಗುರು ಲಿಂಗ ಜಂಗಮದ ಭಕ್ತಿಯ ಕೇಳಿ ಬಸವೇಶ್ವರನು ಅವರ ದರ್ಶನವ ಮಾಡಬೇಕೆಂದು ಆ ಚೋಳನು ಕಪ್ಪವ ಕೊಡನೆಂದು ಬಿಜ್ಜಳನ ಚತು ರಂಗಬಲ ಸಹವಾಗಿ ಆ ನಾಗಯ್ಯಗಳ ದರ್ಶನವ ಮಾಡಿ ಅಲ್ಲಿ ೭ ದಿನ ಭಕ್ತಿಯ ಮಾಡಿ ಬೀಳ್ಕೊಂಡು ಕಲ್ಯಾಣಕ್ಕೆ ಬಂದರು.

---

## ೨೪೯ ನೆಯ ವಚನದ ಕಥೆ (೩೭—೧)

### ಭೀಮ.

ಭೂತದಯವಿಲ್ಲದವರ ಮಾಟವೆಂಬುದಕ್ಕೆ ಕಥೆ— ಪಾಂಡುವಿನ ಮಗ ಧರ್ಮರಾಯ ಋಷಿಗಳಿಗೆ ನೀಡುವಾಗ ಭೀಮನು ಋಷಿಗಳ ಕರೆ

ವುದಕ್ಕೆ ಹೋಗಿ ಇವರು ಗಮ್ಮನೆ ಸ್ನಾನವ ಮಾಡರೆಂದು ಎರಡು ಕಯ್ಯಲ್ಲಿ ಅವರ ಜಡೆಯ ಹಿಡಿದು ನೀರೊಳಗೆದ್ದದ್ದು ತೆಗೆದು ಕರೆದುಕೊಂಡು ಹೋಗಿ ನೀಡಿಸುತ್ತಿರಲು ಒಂದು ದಿನ ಧರ್ಮನು ಎಲೆ ಋಷಿಗಳಿರಾ, ನೀವು ಉಂಬು ವುದು ಉಡುವುದು ವೃಷ್ಟಾನ್ನ, ಬಡವಾದಿರೇಕೆನಲು ನಿನ್ನ ತಮ್ಮ ಬಂದು ನಮ್ಮ ಜಡೆಯ ಹಿಡಿದು ನೀರೊಳಗೆ ಮುಳುಗಿಸಿ ತೆಗೆವನು, ಬಡವಾ ದೆವೆನಲು ಅದಕ್ಕೆ ಧರ್ಮನು ತಮ್ಮನ ಮನಸ್ಸು ನೊಂದೀತೆಂದು ದೃಷ್ಟವ ತೋರಬೇಕಾಗಿ ಗಂಧಮಾದನ ಪರ್ವತದ ಮುನಿಯ ಕರತಾರೆಂದು ಕಳು ಹಲು ಅಲ್ಲಿಗೆ ಹೋಗಿ ಎಲೇ ಕಿಂದಮ ಋಷಿಯೆ ನಿನ್ನ ಮೈ ಸುವರ್ಣ ವಾಗಿ ಇದೆ, ನಿನಗೆ ಸೂಕರನ ಮುಖವಾದ ಕಾರಣವೇನೆನಲು ಅನೇಕ ದಾನಗಳ ಮಾಡಿದೆನು, ಮೃದು ವಾಕ್ಯವ ನುಡಿಯದ ಕಾರಣ ಈ ಮುಖ ವಾಯಿತ್ತೆನಲು ಅದ ಕೇಳಿ ಅಂಜಿ ಭೀಮನು ಭಯಭಕ್ತಿಯಿಂದ ಕರೆ ದೊಯ್ದು ನೀಡಿದನು.

---

## ೨೫ಳ ನೆಯ ವಚನದ ಕಥೆ. (೩೮---೬)

### ಸೇದಿರಾಜ.

ಚೋಳಮಂಡಲದ ತಿರುವಾಲೂರೊಳಗೆ ಸೇದಿರಾಜನೆಂಬ ಶರಣ ರಿರ್ಪರು. ಆಗವರಿಗಂತೆ ಜಂಗಮವೇ ಪ್ರಾಣ, ಅವರ ನುಡಿಯೇ ಶಿವನ ನುಡಿ, ಅವರ ಬೀಳುಡಿಗೆಯೇ ಹೊದಿಕೆ, ರಾಜ್ಯವೆಲ್ಲ ಜಂಗಮ ದೇವ ರದೆಂದು ಇರಲು, ಆಗ ಸೇದಿ ರಾಜರ ದಾಯಾದಿಗಳು ನಮಗೆ ರಾಜ್ಯವ ಪಾಲು ಮಾಡೆನಲು ನಿಮಗೇಕೆ ಪಾಲೆನಲು ಅವರು ಬಿಟ್ಟು ಹೋಗಿ ಜಂಗಮವೇಷವ ಧರಿಸಿ ಅತಿರಥ ಸಮರಥ ಮಹಾರಥ ಬಲವಂತ ರೆಂಬವರ ಕೂಡಿಕೊಂಡು ಸೇದಿರಾಜನ ವಧಿಸುವೆವೆಂದು ಮನೆಗೆ ಬರಲು ಆ ಸೇದಿರಾಜ ನಮಸ್ಕರಿಸಿ ಏನು ಕಾರಣ ಬಂದಿರೆನಲು ನಿನಗೆ ಆಗ ಮಂಗಳ ಕೇಳಿಸುವುದಕ್ಕೆ ಬಂದೆವೆನಲು ಬದುಕಿದೆನೆಂದು ಕುಳ್ಳಿರಿಸಿ ದೇವಾನ್ನವ ನೀಡಲು ಸಲಿಸಿದ ಬಳಿಕ ಇನ್ನು ಆಗಮಂಗಳ ಹೇಳಿಹೆವೆ ನಲು ಕೇಳುವಾಗ ಪುಸ್ತಕದ ಹಾಗೆ ಮಾಡಿಕೊಂಡು ಬಂದು ಆಯು ಧದಿಂದ ಸೇದಿರಾಜಯ್ಯನನಿರಿಯಲು ಆ ಕಪಟವೇಷವ ಧರಿಸಿ ವಿಭೂತಿ ರುದ್ರಾಕ್ಷಿಗಳು ಇಂತಪ್ಪ ಭಕ್ತರ ಕೊಲಬಹುದೆ ಎಂದು ಅರಸು ದೇವಾ

ಅಲಗು ಒತ್ತಿ ಕೈ ನೊಂದಿತ್ತು, ಎಂದು ತನ್ನ ಮಂತ್ರಿಯು ಕರೆದು ಇವರನಾರು ಕೊಲ್ಲದ ಹಾಗೆ ಕಳುಹಿಸಿ ಬಾ ಎಂದು ಹೇಳಿ ತನ್ನೆದೆಯಲ್ಲಿ ಮೂಡಿದಲಗ ಕೇಳಲು ಆದಕ್ಕೆ ಶಿವ ಮೆಚ್ಚಿ ಇಂತು ಜಂಗಮನ ನಂಬಿದವರುಂಟೆ ಎಂದು ತನ್ನೊಳಗೆ ಇಟ್ಟುಕೊಂಡನು.

---

## ನೊನವಿಡುನೈನಾರ.

ತ್ರಿಣಕಾವೇರಿ ಎಂಬ ಪುರದಲ್ಲಿ ಮೊನೆವಿಡುನೈನಾರೆಂಬ ಶರಣರಿರ್ಪರು. ಅವರ ಪಟ್ಟದ ರಾಣಿಗೆ ಪ್ರಾಯ ಹೋಗಲು ಮತ್ತೊಂದು ಹೆಣ್ಣ ಮದುವೆಯಾಗಿ ಗುರುಲಿಂಗಜಂಗಮ ಭಕ್ತಿಯ ಮಾಡುತ್ತಿರಲು ಒಂದು ದಿನ ತನ್ನ ಪತಿಯು ಮಂಡೆಗೆ ಎಣ್ಣೆಯನೊತ್ತುವಾಗ ನರೆಯ ಕಂಡು ಮುಪ್ಪು ಬರಬಹುದೆ ಎಂದು ತನ್ನ ಹಣೆಯ ಮುಟ್ಟಿಕೊಳ್ಳಲು ಆದ ಪತಿ ಕಂಡು ಹೆಣ್ಣುಗಳಿಗೆ ಆರೋಚಿಕೆಯಾಯಿತ್ತಲ್ಲಾ ಎಂದು ಒಂದು ಏಕಾಂತಸ್ಥಳದಲ್ಲಿ ಕುಳಿತು ಶಿವಧ್ಯಾನವ ಮಾಡಲು ಶಿವನು ಪ್ರತ್ಯಕ್ಷನಾಗಿ ಇನ್ನೇನು ಬೇಕೆಂದು ಕೇಳಲು ಮುಪ್ಪುಬಾರದಂತೆ ಸಂಜೀವನ ರತ್ನವ ಪಾಲಿಸೆನಲು ಕಯ್ಯಲ್ಲಿ ರತ್ನವ ಕೊಟ್ಟು ಶಿವನು ಬಯಲಾದನು. ಬಳಿಕ ರತ್ನವ ಮಸ್ತಕದ ಪಶ್ಚಿಮ ಚಕ್ರದ ಬಳಿಯ ಸೀಳಿ ಮಡಗಿಕೊಳಲು ಆಮೇಲೆ ಹದಿನಾರು ವರುಷದ ಪ್ರಾಯದಲ್ಲಿ ಬಹುಕಾಲವಿರುತಿರಲು ಬಳಿಕ ಒಬ್ಬ ವಿಟಮೂರ್ತಿ ಭಿಕ್ಷಕ್ಕೆ ಬರಲು ಎಡೆಮಾಡಿ ಸ್ವಾಮಿ ಸಲಿಸಿ ಎನಲು ನಾವು ಸಲಿಸುವುದಕ್ಕೆ ಬರಲಿಲ್ಲವೆನಲು ಮತ್ತೇತಕ್ಕೆ ಬಂದಿರೆನಲು ನೀನಾವಾಗಲು ಪ್ರಾಯವಾಗಿ ಇರುತ್ತಿದ್ದೆ, ಇದೇನು ಕಾರಣವೆಂದು ಕೇಳಬಂದೆವೆನಲು ಆ ಮಾತಿಗೆ ನಾನು ಸಂಜೀವನ ರತ್ನವ ಪಡೆದೇವೆ ಎನಲು ಆ ರತ್ನವ ನಮಗೆ ಕೊಡು ಎನಲು ಆ ವಿಟಮೂರ್ತಿಯು ಕೆಯ್ಯಲ್ಲಿ ಕೊಡಲಿಯ ಕೊಟ್ಟು ನನ್ನ ತಲೆಯೊಳಗೆ ಒಡೆದು ಅದನು ತಕ್ಕೊಳ್ಳಿ ಎನಲು ಆಗ ತಲೆಯನೊಡೆಯಲು ಶಿವ ಪ್ರತ್ಯಕ್ಷನಾಗಿ ಮೊನೆಯಿಡುನೈನಾರ ಕೈಲಾಸಕ್ಕೆ ಒಯ್ದನು.

---

## ಸಿಂಧುಮರಾಳ.

ಸಿಂಧುಮರಾಳ ರಾಯನು ತನುಮನಧನವ ಅಭಿಮಾನಗಳನು ಜಂಗಮ ದೈವತವೆಂದು ತನ್ನ ಪುರದಲ್ಲಿ ಸಾರುತ್ತಿರಲು ಬಳಿಕ ಒಂದು

ದಿನ ಓರ್ವ ಚರಮೂರ್ತಿ ಮನೆಗೆ ಬಂದು ಅರ್ಥ, ಪ್ರಾಣ, ಅಭಿಮಾನ ನಮ್ಮದೆಂದ ಮೇಲೆ ನೀನಿಲ್ಲಿರಬೇಡ ಹೋಗೆನಲು ರಾಜ್ಯವ ಬಿಟ್ಟು ಹೋಗುವಾಗ ಶಿವನು ಜಂಗಮನಾಗಿ ಬಂದು ದಾರಿಯಲ್ಲಿ ಕಂಡು ಎಲೆ ಸಿಂಧುಮರಾಳ ಧನಮನವ ಕೊಟ್ಟೆ, ಅಭಿಮಾನವ ಕೊಟ್ಟೆ, ತನುವ ನಮಗೆ ಕೊಡು ಎನಲು, ಸ್ವಾಮಿ ತೆಗೆದುಕೊಳ್ಳಿ ಎನಲು, ಆಗ ನೆತ್ತಿಗೆ ಕರಗಸವ ಹಾಕಿ ಕೊರೆವಾಗ ಭಕ್ತನ ಎಡಗಣ್ಣಲಿ ನೀರು ಸುರಿಯಲು ನಾವು ಒಲ್ಲೆವೆನಲು ಆ ಮಾತಿಗೆ ರಾಯನೆಂದನು, ಬಲದ ಭಾಗ ನಿಮ ಗರ್ಪಿತವಾಯಿತ್ತು, ಎಡದ ಭಾಗ ವ್ಯರ್ಥವಾಯಿತ್ತಲ್ಲಾ ಎಂದು ನೀರು ಬಂದವೆಂದು ಬಿನ್ನವಿಸಲು ಶಿವ ಮೆಚ್ಚಿ ನಿರೂಪ ತೋರಿ ಕೈಲಾಸಕ್ಕೆ ಕರೆದೊಯ್ದರು

---

## ೨೭೧ ನೆಯ ವಚನದ ಕಥೆ. (೪೧—೨೩)

ಕೊಡುವ ಲಿಂಗವನು ಬೇಡಿಕೊಳಲರಿಯದೆ ಕೊಡದ ಮಾನವರ ನಾಸೆಗೈವ ಲಿಂಗವಂತರನೇನೆನ್ನಬಹುದು? ಕೊಟ್ಟನು ನೋಡಿರೆ ಲಿಂಗವು ಮಾರ್ಕಂಡೇಯ ಮಳೆಯ ರಾಜಂಗೆ ಆಯುಷ್ಯವ ಕೊಟ್ಟನು ನೋಡಿರೆ ಲಿಂಗವು ಚೋಳಂಗೆ ಹೊನ್ನ ಮಳೆಯನು ದಾಸಂಗೆ ತವನಿಧಿಯ ಭಾಗ್ಯವನು.

---

## ೨೭೮ ನೆಯ ವಚನದ ಕಥೆ. (೪೨—೩೧)

### ಭರ್ತೃಹರಿ.

ಉಜ್ಜಯಿನಿಯಲ್ಲಿ ಚಂದ್ರಗುಪ್ತನೆಂಬ ರಾಜನು ಗೋವಿಂದ ಭಗವಾನು ಎಂಬ ಮುನಿಗೆ ನಾಲ್ವರ ಮದುವೆಯ ಮಾಡಿದನು. ಅವರಾರೆಂದರೆ ಗೋದತ ವಿಪ್ರನ ಮಗಳು ಶರ್ವಾಣಿ, ಈಕೆಯ ಮಗ ಭಟ್ಟಿ, ಚಂದ್ರ ಗುಪ್ತರಾಜನ ಮಗಳು ಮಲ್ಲಿಕಾಮಾನಿನಿ, ಈಕೆಯ ಮಗ ವಿಕ್ರಮ, ನಳಗೋನೆಂಬ ಶೂದ್ರನ ಮಗಳು ರತ್ನಜೋಳಿ ಈಕೆಯ ಮಗ ಶಬರಮುನಿ, ಧನದತ್ತನೆಂಬ ಕೋಮಟಿಗನ ಮಗಳು ಹೇಮವರ್ಣಿನಿ, ಈಕೆಯ ಮಗು

ಭರ್ತೃಹರಿ. ಹೆಂಡತಿ ಅನಂಗ ಲೇಖೆಯ ಕೂಡೆ ರಾಜ್ಯವಾಳುತ್ತಿರಲು ಅಲ್ಲಿ ಶರಶರ್ಮನೆಂಬ ವಿಪ್ರನು ತಪವ ಮಾಡಿ ದೇವಿಯರ ಕೈಯ್ಯ ಮುಪ್ಪುಬಾರದ ಹಣ್ಣ ಪಡೆದು ತಂದು ಭರ್ತೃಹರಿಗೆ ಕೊಡಲು ಇವಗೆ ದ್ರವ್ಯವ ಕೊಟ್ಟು ಕಳುಹಿ ಆದ ಹೆಂಡತಿಯು ಕೈಯ್ಯ ಕೊಡಲು ಅವಳು ಕುದುರೆಯ ಗೋವಗೆ ಕೊಡಲು ಆದ ಭರ್ತೃಹರಿ ಕಂಡು ಹಣ್ಣೆಲ್ಲಿ ಎಂದು ಹೆಂಡತಿಯು ಕೇಳಲು ಅದು ಹೋಯಿತ್ತೆಂದಳು. ಆಗ ಇವಳು ಜಾರೆ ಎಂದು ತಿಳಿದು ವಿಕ್ರಮಗೆ ರಾಜ್ಯವ ಕೊಟ್ಟು ದೇಶಾಂತರವ ಹೋಗಲು ಅಲ್ಲಿ ಒಬ್ಬ ಕಳ್ಳ ಜೇಡರಲ್ಲಿ ಕಳವ ಮಾಡಿ ನೂಲ ಹರ ವಿಯ ಒಯ್ವಾಗ ಆ ನೂಲ ತುದಿ ಸಿಕ್ಕಿ ಬೆಚ್ಚುತ ಬಂದು ಭರ್ತೃ ಹರಿಯ ಬಳಿಯ ಬೀಳಲು ಬಳಿಕ ಹೆಜ್ಜೆವಿಡಿದು ಬಂದು ಇವನೇ ಕಳ್ಳನೆಂದು ಅರಸಿಗೊಪ್ಪಿಸಲು, ತಲೆಯ ಹೊಯ್ವಾಗ ದೇವರ ನೆನೆ ಎನಲು ಇಂತೆಂದನು, ತಾ ಜಾರೆಯಾಗಿ ಮೊಲೆಯುನುಂಬ ಮಗ ಪರಪುರುಷನೆಂದು ಮುಖವ ಮುಚ್ಚುವಳು. ಒಬ್ಬ ವಿಪ್ರನು ಒಬ್ಬರ ಮನೆಯ ಕಟ್ಟೆಯ ಮುಟ್ಟುವನಲ್ಲವೆಂದು ನಂಬಿಸಿ ಓರ್ವ ಮುಸಿಯು ನನ್ನ ಲಾಕುಳ ಒಳಗಿರ್ದ ದ್ರವ್ಯವನೊಯ್ದನು. ಒಂದು ಬಕ ಸಣ್ಣ ಮೀನು ಬಂದಡೆ ಬಿಟ್ಟು ಧ್ಯಾನವ ಮಾಡುವಂತೆ ದೊಡ್ಡ ಮೀನು ಬಂದರೆ ತಿಂಬುದು. ಒಬ್ಬ ಚೋರನು ಹಗಲು ತಪಸ್ಸು ಮಾಡುತ ಇರುಳು ಕಳವ ಮಾಡುವ. ಈ ಚೋರನ ನೂಲ ಹೆಜ್ಜೆ ನವಗೆ ಬಂದುದು ಎನಲು, ಆಗ ನೂಲಗೊಂಡು ಹೋಗಿ ಆ ಕಳ್ಳನ ಹಿಡಿವು ಈತನ ಬಿಟ್ಟರು.

---

## ೩೧೮ ನೆಯ ವಚನದ ಕಥೆ. (೪೮—೭೦)

### ಬಾಣ.

ಕಂಧಾರವೆಂಬ ಪಟ್ಟಣದಲ್ಲಿ ನಂದರಾಜನೆಂಬ ರಾಜನಿರ್ಪನು. ಅಲ್ಲಿ ಬಾಣ, ಮಯೂರಗಳೆಂಬ ಕವಿಗಳಿರ್ಪರು. ಬಳಿಕ ಒಂದು ದಿನ ಅರಸು ಜಲಕ್ರೀಡೆಗೆ ಹೋಗಬೇಕೆಂದು ಮಯೂರನ ಕರೆ ಎನಲು ಆಗ ಬಾಣನು ಅವ ಕುಷ್ಟನು ಜಲ ಕೇಳಿಗೆ ಬರುವುದು ಹೇಗೆನಲು ಆ ದಿನ ಉಳಿಯಲು ಇತ್ತ ಮಯೂರನು ಸೂರ್ಯನ ನುತಿಸಲು ಅವ ಬಂದು

ಏನು ಬೇಕೆನಲು ನನ್ನ ಕುಷ್ಠವ ತೊಲಗಿಸೆನಲು ನನ್ನ ಕೆಯ್ಯಲಾಗದು ನಿನ್ನ ಮೈ ಮಿಂಚುವ ಹಾಗೆ ಕಿರಣವ ಕೋ ಎಂದು ಕೊಡಲು ಮೈ ಮಿಂಚಾಗಿ ಬೆಳ್ಳಗಾಗಿ ಅರಸು ಜಲಕೇಳಿಗೆ ಹೋಗುವಾಗ ತಾನೂ ಹೋಗಲು ನಂದರಾಜ ಕಂಡು ಎಲೆ ಬಾಣ ಇವನ ಮೈ ಕುಷ್ಠವೆಂದೆ ತೋರಾ ಎನಲು ಸೂರ್ಯನ ಕಿರಣದಿಂದ ಮರೆಯಾಗಿ ಇದೆ ಎನಲು ಆ ಕಿರಣವ ಪಡೆವುದು ಸಾಮಾನ್ಯವೇ ಎನಲು ಆಗ ಬಾಣ ನನ್ನ ಕೆಯ್ಯ ಖಂಡಿಸಿ ಈಗಳೆ ಪಡೆಯುತ್ತೇನೆಂದು ತಾನೆ ತನ್ನ ಕೆಯ್ಯ ಖಂಡಿಸಿ ಕೊಂಡು ಶಿವನ ನುಡಿಸಿದನದೆಂತೆನೆ ದೇವ ಘುಳುಘುಳಿಪ ತ್ರಿಶೂಲಧರ ಕರುಣಿಸುದು ದೇವಗಂಗಾವೃತ ಜಟಾಭಾರ ಕರುಣಿಪುದು ದೇವ ತ್ರಿಲೋಚನ ಮಹಾಗುರುವೇ ಕರುಣಿಪುದು ಅಂಬಿಕಾ ನಿತಂಬ ಲಂಪಟಹಸ್ತವೇ ಎಂಬ ನುಡಿಗೇಳಿ ದೇವಿಯರು ಕೋಪಿಸಿ ಅವ ಭಂಡುಗೆಳೆವುತಿದ್ದಾನೆ ಎಂದು ಶಿವಂಗೆ ಹೇಳಲು ಶಿವ ಬಂದು ಎಲೆ ಬಾಣ ಹೀಗೇಕೆ ಭಂಡುಗೆಯ್ದೆ ಎನಲು ಮೋಟರಿಗೆ ಕೆಲೆವುದು ಸಹಜವೆನಲು ಆಗ ಮೆಚ್ಚಿ ಹಸ್ತಗಳ ಕೊಟ್ಟು ಇನ್ನೇನು ಬೇಕು ಎನಲು ಮೋಟ ಮೂಂಡರಿಗೆ ಕೈಕಾಲು ಕೊಡುವ ವರವ ಕೊಡು ಎನಲು ಕೊಟ್ಟು ಕೈಲಾಸಕ್ಕೆ ಕರೆದೊಯ್ದನು.

---

## ೩೨೧ ನೆಯ ವಚನದ ಕಥೆ. (೪೮—೭೩)

### ಕಿನ್ನರಯ್ಯ.

ಹೂದೂರಲ್ಲಿ ಕಲಿದೇವಿ ಎಂಬ ಭಕ್ತೆಯ ಪುತ್ರನಾದ ಕಿನ್ನರಯ್ಯಗಳು ಅಕ್ಕಸಾಲೆಯ ಕಾಯಕದಲ್ಲಿದ್ದು ಆಭರಣಂಗಳ ಮಾಡುವಾಗ ಜಂಗಮ ಬಂದು ಬೇಡಲು ಆದರೊಳಗೆ ಕತ್ತರಿಸಿಕೊಟ್ಟು ಮತ್ತೆ ಒಡೆಯುವರಿಗೆ ತೂಕಕ್ಕೆ ಸರಿ ಮಾಡಿ ಕೊಟ್ಟು ಇರುತ್ತಿರಲು ಮತ್ತೊಂದು ದಿನ ತಮ್ಮ ಗುರುಗಳು ಆಭರಣವ ಮಾಡೆಂದು ಹೊನ್ನವ ಕೊಡಲು ಅವ ಮಾಡಿ ತೂಗಲು ಕಡಿಮೆಯಾದುದ ಕಂಡು ಗುರುವು ಕೋಪಿಸಲು ಆ ಕಿನ್ನರಯ್ಯ ನಮ್ಮಲ್ಲಿ ವಂಚನೆ ಇಲ್ಲ ಈ ಕಾಯಕವ ಬಿಡಿಸಲೆಂದು ಶಿವನು ಹೀಗೆ ಮಾಡಿದನೆಂದು ಅಕ್ಕಸಾಲೆಯ ಉದ್ಯೋಗವ ಬಿಟ್ಟು ಕಲ್ಯಾಣಕ್ಕೆ ಬಂದು ತ್ರಿಪುರಾಂತಕೇಶ್ವರ ಮುಂದೆ ಕಿನ್ನರ ವೀಣೆಯ

ನುಡಿಸಲು ಹನ್ನೊಂದು ಹಣವ ಪಡೆದು ಜಂಗಮಾರ್ಚನೆಯು ಮಾಡು ತ್ತಿರಲು ಒಂದು ದಿನ ಮೋಳಿಗೆಯ್ಯನ ಸಮಯಾಚಾರದ ದೇವರು ಮಜ್ಜನವ ನೀಡುವುದಕ್ಕೆ ಕೆರೆಗೆ ಬರಲು ಆಗ ಕಿನ್ನರಯ್ಯನ ಭಕ್ತಿಯು ದೇವರು ಆ ದೇವರಿಗೆ ಒಂದು ವಸ್ತ್ರವ ಕೊಡಲು ಸೆಜ್ಜೆಗೆ ಧರಿಸಿಕೊಂಡು ಮನೆಗೆ ಬರಲು ಆಗ ಮೋಳಿಗೆಯ್ಯನ ಸತಿ ವಸ್ತ್ರವೆಲ್ಲಿಯದೆನಲು ಕಿನ್ನರ ಯ್ಯನ ಮನೆಯ ದೇವರು ಕೊಟ್ಟರೆನಲು ಅವರು ಇಷ್ಟಲಿಂಗವ ಬಿಟ್ಟು ಸ್ಥಾವರಕ್ಕೆ ಹೋಗುವವರ ವಸ್ತ್ರ ನಿಮಗೇಕೆನಲು ಮತ್ತವರಿಗೆ ಕೊಡಲು ಆ ಕಿನ್ನರಯ್ಯಗಳ ದೇವರು ನಾವು ಕೊಟ್ಟ ವಸ್ತ್ರವ ತಿರಿಗಿ ಕೊಟ್ಟಿಹೆ ಎನಲು ನಿಮ್ಮ ಭಕ್ತರು ಸ್ಥಾವರವ ಭಜಿಸುತ್ತ ಇದ್ದಾರೆ, ನಮ್ಮ ಭಕ್ತರಿಗೆ ಆಗ ದೆಂದು ಕೊಟ್ಟೆವೆನಲು ಕಿನ್ನರಯ್ಯ ಆ ಮಾತ ಕೇಳಿ ನಮಗೆ ಹಿಂಗಸ ಬಹುದೆ? ಐಕ್ಯವಾದೆವೆನಲು ಮೋಳಿಗಯ್ಯನು ನಾವು ಸ್ಥಾವರವ ಬಿಡು ಎಂದರೆ ಹೀಗೆ ಐಕ್ಯವಾದೆನೆಂಬುವರೇ ಎನಲು ಅದ ಕೇಳಿ ಶರಣರು ಅವರೆಂದಂತೆ ಇಷ್ಟಲಿಂಗದಲ್ಲಿ ಹಣವ ತೆಗೆದುಕೊಳ್ಳಿ ಎನಲು ಹಾಗಾ ಗಲೆಂದು ಕರಸ್ಥಲದ ಲಿಂಗದ ಮುಂದೆ ಕಿನ್ನರಯ್ಯ ನುಡಿಸಿ ಹನ್ನೊಂದು ಹಣ ಹಾಗವ ಪಡೆದು ಸುಖದಲ್ಲಿದ್ದರು.

---

## ೩೨೩ ನೆಯ ವಚನದ ಕಥೆ. (೪೮--೭೩)

### ಮೋಳಿಗೆ ಮಾರಯ್ಯ.

ಕಲ್ಯಾಣದಲ್ಲಿ ಮೋಳಿಗೆ ಮಾರಯ್ಯ ಕಟ್ಟಿಗೆಯ ಮಾರಿ ಜಂಗಮಾ ರ್ಚನೆಯು ಮಾಡುತ್ತಿರಲು ಇವರ ಭಕ್ತಿವಿಶೇಷವಂ ಚರಮೂರ್ತಿಗಳು ಕೊಂಡಾಡುತ್ತಿರಲು ಅದಂ ಬಸವಣ್ಣ ಕೇಳಿ ಮೋಳಿಗಯ್ಯನ ಮನೆಗೆ ಭಕ್ತಿವೇಷದಿಂದ ಬಂದು ಲಿಂಗಾರ್ಚನೆಯು ಮಾಡಿ ಪ್ರಸಾದವನನುಭವಿಸಿ ಹೋದಾಗ ಇವರು ಬಡವರೆಂದು ಹೊನ್ನ ಜಾಳಿಗೆಯನಿಟ್ಟು ಹೋಗಲು ಅದಂ ಮೋಳಿಗೆಯ್ಯಂ ಕಂಡು ಭಕ್ತರು ನಿರ್ಧನಿಕರು ತಾನು ಧನಿಕನೇ ಎಂನು ಕೋಪಿಸಿ ಹೊನ್ನಂ ಬಿಟ್ಟು ಜಂಗಮದ ಪಾದೋದಕವ ಕಟ್ಟಿ ಗೆಯ ಮೇಲೆ ತಳಿದು ಹೊನ್ನ ದಂಡಂಗಳಂ ಮಾಡಿ ಜಂಗಮಾಳಿಗೆ ಕೊಟ್ಟರು. ಬಸವಣ್ಣ ಮರಳಿ ಭಯಗೊಂಡು ಎನ್ನ ತಪ್ಪ ಸೈರಿಸೆಂದು ಮೋಳಿಗೆಯ್ಯನ ಚರಣಕ್ಕೆರಗಿದನು.

---

## ೩೩೪ ನೆಯ ವಚನದ ಕಥೆ. (೪೮--೭೬)

### ಆಯುದಕ್ಕಿ ಮಾರಯ್ಯ.

ಆಯ್ದಕ್ಕಿ ಮಾರಯ್ಯನು ಆಯ್ದಕ್ಕಿಯಿಂದ ನಿಚ್ಚ ೧೦೦೦ ಜಂಗಮಕ್ಕೆ ನೀಡಿ ಶಿವನೊಲಿದನು.

---

## ೩೩೬ ನೆಯ ವಚನದ ಕಥೆ. (೪೯--೭೮)

### ಚಂಡ ಸೋಮವ್ವೆ.

ಮುನ್ನ ಭೋಜರಾಜನ ಸಭೆಯಲ್ಲಿ ಈರ್ವರು ಪಂತಿ ಊಟದ ಭಟರು ಇದ್ದರು. ಚಂಡ ಸೋಮವ್ವೆ ಅಸ್ತಮಯದಿ ಜಂಗಮದ ಮಂಡೆಯೂರುವುದಕ್ಕೆ ಸೂರ್ಯನ ನಿಲಿಸಿದಳು.

---

## ೩೩೭ ನೆಯ ವಚನದ ಕಥೆ. (೫೦--೮೮)

### ಮಾದಾರ ಚನ್ನಯ್ಯ.

ಕರಿಕಾಲ ಚೋಳನ ಕುದುರೆಗೆ ಹುಲ್ಲ ಹೇರುವ ಕಬಾಡಿಗರಿಗೆ ಒಡೆಯನಾಗಿ ಮಾದಾರ ಚನ್ನಯ್ಯ ಗುರು ಕಾರುಣ್ಯವ ಪಡೆದು ಜಂಗಮಾರ್ಚನೆಯ ಮಾಡುತ್ತ ಮುಗಿಲ ಮರೆಯ ಚಂದ್ರನಂತೆ ಎಳ್ಳಿನೊಳಗಿರ್ದ ಎಣ್ಣೆಯಂತೆ ಕಾಷ್ಠದೊಳಗಿರ್ದಗ್ನಿಯಂತೆ ಭೂಮಿಯ ಮರೆಯಲ್ಲಿ ನಿಧಾನವಿಪ್ಪಂತೆ ಲೋಕದ ಕಣ್ಣಿಂಗೆ ಮರೆಯಾಗಿರುತ ಆ ಮೇಲೆ ಕಬಾಡಿಗರ ಕೂಡಿಕೊಂಡು ಅಡವಿಗೆ ಹೋಗಿ ಹುಲ್ಲ ಕೊಯ್ದು ಕಟ್ಟಿ ಎಂದು ಅವರ ಕಳುಹಿ ತಾವು ನಿರ್ಮಲೋದಕದಿಂದ ಮಜ್ಜನಕ್ಕೆ ನೀಡಿ ಭಸಿತವ ಧರಿಸಿ ಕಾಡನೊಲ್ಲೆ ಮಲ್ಲಿಗೆಯರಳ ಧರಿಸಿ ಶಿವಪೂಜೆಯ ಮುಗಿದುಕೊಂಡು ಕಬಡವ ಹೇರಿಕೊಂಡು ಬಂದು ಲಾಯದಲ್ಲಿ ಕೆಡಿವಿಸಿ ಮನೆಗೆ ಹೋಗಲು ಸತಿ ಉದಕವ ತಂದು ಪಾದಾರ್ಚನೆಯ ಮಾಡಿ ಒಳಗೆ ಮೂರ್ತವ ಮಾಡಿಸಿ ಎಡೆ ಮಾಡಲು ಲಿಂಗಕ್ಕರ್ಪಿಸಿ ಸಲಿಸುವಾಗ ಅಮೃತದಿಂದ ನೂರ್ಮಡಿ ಸವಿಯಾಗಲು ಆಗ ಶಿವ ಬಂದು ಚನ್ನಯ್ಯನೊಡನೆ ಸಲಿಸುತ್ತಿದ್ದನು. ಒಂದು ಸುರಿಕಿಗೆ ನನ್ನ ಪದವ

ಕೊಟ್ಟೆನು, ಮುಂದೆ ಸವಿದರ್ಶಿಸುವುದಕ್ಕೆ ಪದಗಳಿಲ್ಲವೆಂದು ಶಿವನು ಚನ್ನಯ್ಯನೊಡನೆ ಅಂಜುತ ಉಂಡು ಹೋಗಲು ಆಮೇಲೆ ಚೋಳ ರಾಯ ಚನ್ನಯ್ಯನ ನೋಡುವದಕ್ಕೆ ಕಾಲನಡೆಯಲ್ಲಿ ಎಡಬಲದಲ್ಲಿ ಮುಕುಟ ವರ್ಧನರೊಳಗೆ ಬರುವಾಗ ಎನ್ನ ಗತಿಯೇ ಎನ್ನ ಮತಿಯೇ ಎನ್ನ ನಿಧಿಯೇ ಎನ್ನ ಸುಧೆಯಾದ ಚನ್ನಯ್ಯನ ಕಂಡಿರೇ ಎಂದು ಚೋಳರಾಯ ಬಂದು ಪಾದದ ಮೇಲೆ ಬೀಳಲು, ಎನ್ನಯ್ಯ ಚೋಳ ರಾಯ ನೀವಿಲ್ಲಿಗೆ ಬರಬಹುದೆ, ನೀನು ಭಾನು ಕುಲ, ನಾನು ಕ್ಷೀಣ ಕುಲವೆಂದು ಪಾದವ ಬಿಡು ಎನಲು ನಿಮ್ಮ ಪಾದವ ಬಿಟ್ಟು ನಾ ಬಾಳೆನೆಂದು ಆನೆಯ ಮೇಲೆ ಕುಳ್ಳಿರಿಸಿಕೊಂಡು ಲಿಂಗದ ಗುಡಿಗೆ ಬಂದು ಆನೆಯನಿಳಿಸಿ ಲಿಂಗದ ಮುಂದೆ ಚನ್ನಯ್ಯನ ನಿಲಿಸಲು ಆಗ ಕೋಪದಿಂದ ಶಿವನಿಗೆ ನುಡಿದರು. ಚೋಳರಾಯ ಹಿಡಿತರಿಸುವುದಕ್ಕೆ ನಾನೇನ ಮಾಡಿದೆ ಹೇಳಯ್ಯ, ನಿಮ್ಮ ನಾನು ಪದವಿಯ ಬೇಡಿದೆನೆ ಅರಿ ಯದೆ ಅಂಬಲಿಯನರ್ಶಿಸಿದರೆ ಹೀಗೆ ಲೋಕದಲ್ಲಿ ಪ್ರಕಟ ಮಾಡುವರೆ ಎನಲು ಆಗ ಶಿವನಿಂತೆಂದನು, ಅರಿಯದೆ ಚೋಳನ ಹೇಳಿದೆವು, ಸೈರಿಸು ಕೋಪವೇಕೆಂದು, ಭಾಪುರೆ ಮಾದಾರ ಚನ್ನಯ್ಯ ಎಂದು ಕೊಂಡಾಡಿ ಹೂವಿನ ಮಳೆಯ ಕರಿಸಿ ಚನ್ನಯ್ಯನ ಪುಷ್ಪಕದೊಳಗೆ ಮಡಗಿ ಕೈಲಾಸಕ್ಕೆ ಕೊಂಡೊಯ್ದರು.

---

## ಚೇರಮರಾಯ.

ಕೇರಳ ದೇಶದಲ್ಲಿ ಚೇರಮರಾಯನೆಂಬ ಶರಣನು ವೈರಾಗ್ಯದಿಂದ ರಾಜ್ಯವ ಬಿಟ್ಟು ಹೋಗುವಾಗ ಚೋಳರಾಯನು ಬಂದು ತಿರುವಂಜಿ ಕಾಳನಾಥನೆಂಬ ಲಿಂಗಕ್ಕೆ ಬಿನ್ನೈಸಿದನು, ಎಲೆ ಲಿಂಗವೆ ನಿಮ್ಮ ಪಾದವ ಬಳಿಯಿಂದ ಚೇರಮರಾಯನೇಕೆ ಬಿಟ್ಟರೆನಲು ಆಗ ಲಿಂಗದೊ ಳಗಿಂದ ನುಡಿದ ಶಿವನು, ಎಲೆ ಚೇರಮ ನಿನ್ನನೇನು ಬೇಸರಿಸಿದೆವು ರಾಜ್ಯವ ಬಿಟ್ಟು ಹೋಗುವದೇಕೆನಲು, ಆ ಮಾತಿಗಿಂತೆಂದನು, ನಿಮ್ಮ ನಾಂಟ್ಯವ ತೋರಿದರೆ ಹೋಗೆನೆನಲು ಆಗ ಶಿವನು ತಾಂಡವನಾಡಲು ನೋಡಿ ಸಂತುಷ್ಟನಾಗಿ ದಿನ ಹೀಗೆ ತೋರಿ ಎನಲು, ನಿಚ್ಚ ಹೀಗೆ ತೋ ರುವರುಂಟೆ ಎಂದು ಹಾಗಾದರೆ ದಿನ ನಮ್ಮ ಪಾದದ ಅಂದುಗೆಯ

ಧ್ವನಿಯು ತೋರಿವು ಎನಲು, ಹಾಗಾಗಲಿ ಸ್ವಾಮಿ ಎಂದು ಚೇರಮ ರಾಯ ಲಿಂಗಪೂಜೆಯ ಮಾಡುತ್ತ ಜಂಗಮಂಗೆ ನೀಡುತ್ತ ಸುಖದಲ್ಲಿದ್ದರು.

---

## ೩೪೭ ನೆಯ ವಚನದ ಕಥೆ. (೫೨--೯೮)

### ಚೋರ ಚಿಕ್ಕಯ್ಯ. ನಿಜಲಿಂಗ ಚಿಕ್ಕಯ್ಯ.

ಮಾಂಡವ್ಯದಲ್ಲಿ ಮಹಾದೇವ ರಾಣಿಯರು ಮನೆಯಲ್ಲಿ ಇದ್ದ ಮೂರು ಸಾವಿರ ಚರಮೂರ್ತಿಗಳ ಬಸವೇಶ್ವರನು ಗುಪ್ತದಲ್ಲಿ ಒಯ್ದ ಸುದ್ದಿಯನು ಮಹಾದೇವ ರಾಣಿಯರು ಕೇಳಿ ನಮ್ಮ ಭಕ್ತಿಯ ಕೆಡಿಸಿದವನ ಇರಿದು ಬನ್ನಿ ಎಂದು ಈರ್ವರ ಬಂಟರ ಕಳುಹಲು ಅವರು ಕಲ್ಯಾಣಕ್ಕೆ ಬಂದು ಸರ್ವಾಂಗೋದ್ಧೂಳನವ ಮಾಡಿ ರುದ್ರಾಕ್ಷಿಯ ಧರಿಸಿಕೊಂಡು ಕರಿಯ ಬದನೆಯಕಾಯ ಲಿಂಗ ಮಾಡಿ ಕೊರಳಲ್ಲಿ ಧರಿಸಿಕೊಂಡು ಚರಮೂರ್ತಿಗಳ ಕೂಡೆ ಬಸವೇಶ್ವರನ ಅರಮನೆಗೆ ಹೋದರದೆಂತೆಂದೊಡೆ ವಿಟವೇಷನು ಲಿಂಗದ ಗುಡಿಯ ಹೊಕ್ಕಂತೆ ಹೆರೂರ ಹೆಣ್ಣು ಲಿಂಗದ ಮರೆಯ ಹೊಕ್ಕಂತೆ ಕತ್ತಲೆ ಸೂರ್ಯನ ಬಳಿಗೆ ಹೋಗುವಂತೆ ಪರುಷದ ಪುತ್ಥಳಿಯ ಇರಿವ ಸುರಿಗಿಯಂತೆ ಆಯುಧವ ಮುಚ್ಚಿಕೊಂಡು ಚರಮೂರ್ತಿಗಳ ನಡುವೆ ಕುಳಿತು ಲಿಂಗಪೂಜೆಯ ಮಾಡುವುದಕ್ಕೆ ಹೋಗುತ್ತಿರಲು ಆದ ಬಸವೇಶ್ವರನು ತಿಳಿದು ಸಂಗಮೇಶ್ವರನ ಪಾದವ ತೋರಿಸ ಬಂದಿರೋ, ಅಯ್ಯ, ನೀವು ಬಂದ ಕಾರ್ಯವ ತಿಳಿದೆವು, ಲಿಂಗಪೂಜೆಯ ಮಾಡಿ, ಎಂದು ನೋಟಪರುಷದಿಂದೆ ನೋಡಲು, ಅವರು ಹಿಂದೆ ಮಾಡಿದ ಪಾಪವೆಲ್ಲ ಹೋಗಿ ಕೊರಳೊಳಗಿರ್ದ ಬದನೆಯಕಾಯಿಗಳೆ ಇಷ್ಟಲಿಂಗಗಳಾಗಿ ಒಪ್ಪುತ್ತಿರಲು ಚಂದ್ರ ಸಾರಿದ ಬೆಳುದಿಂಗಳಂತೆ ಚಂದನವ ಸಾರಿದ ವೃಕ್ಷದಂತೆ ಬಸವೇಶ್ವರನ ಸಾರಿ ಭವಿಜನ್ಮವಳಿದು ಭಕ್ತರಾಗಿರಲು ಅವರಿಗೆ ಚೋರಚಿಕ್ಕಯ್ಯ ನಿಜಲಿಂಗ ಚಿಕ್ಕಯ್ಯನೆಂದು ಹೆಸರಿಟ್ಟರು. ಆ ನಿಜಲಿಂಗ ಚಿಕ್ಕಯ್ಯನ ತಳವಾರ ಗಂಗಯ್ಯ ತನ್ನ ಮನೆಗೆ ಬಿನ್ನಹವ ಮಾಡಿಕೊಂಡು ಹೋಗಿ ಪಾದಾರ್ಚನೆಯ ಮಾಡಿ ಹೋಳಿಗೆ ಮಹೂರ್ತವ ಮಾಡಿಸಿ ಶಿವಾರ್ಚನೆಯ ಮಾಡಿಸಿ ಪಾದೋದಕ ಪ್ರಸಾದವ ಸಲಿಸುತ್ತಿರಲು ಆ ಮೇಲೆ ಅರಸಿನ ಮನೆಯ ಕನ್ನವ ಕೊರೆದುಕೊಳ್ಳಲು ಗಂಗಯ್ಯನ ಕರಿಸಲು ನೀವು ಪವಡಿಸಿರಿ ಎಂದು ಚಿಕ್ಕಯ್ಯನವರಿಗೆ ಹೇಳಿ ಹೋಗಲು ಇತ್ತ ಗಂಗಯ್ಯನ ಹೆಂಡತಿ ಚಿಕ್ಕಯ್ಯನ

ಸಂಭೋಗಕ್ಕೆ ಕರೆಯಲು ಎಲೆ ತಾಯೆ ನಾ ನಿನ್ನ ಮಗನೆನಲು ಮತ್ಸರದಿಂದ ತನ್ನ ಲಿಂಗವ ಆತನ ಹಡಪದೊಳಗೆ ಹಾಕಲು ಅದನರಿಯದೆ ಐನಾಳಿ ಎಂಬ ಹಳ್ಳಿಯಿಂದ ಉದಯದಲ್ಲಿ ಎದ್ದು ಹೋಗಿ ಕಲ್ಯಾಣದ ಪುಷ್ಪದ ತೋಟದೊತ್ತಿನಲ್ಲಿ ಶಿವಪೂಜೆಯ ಮಾಡುತ್ತಿರಲು ಇತ್ತ ಗಂಗಯ್ಯ ಮನೆಗೆ ಬಂದು ನಿಜಲಿಂಗ ಚಿಕ್ಕಯ್ಯನೆಲ್ಲಿ ಎಂದು ಹೆಂಡತಿಯ ಕೇಳಲು ನನ್ನ ಸಂಭೋಗಕ್ಕೆ ಕರೆಯಲು ಒಲ್ಲೆ ನೆನಲು ನನ್ನ ಲಿಂಗವ ತೆಗೆದು ಕೊಂಡು ಹೋದನೆನಲು ಮೂಡಲಲ್ಲಿ ಉದಯಿಸುವ ಸೂರ್ಯ ಪಡುವ ಣದಿಕ್ಕಿನೊಳು ಉದಯವಾದರೂ ನಮ್ಮ ಚಿಕ್ಕಣ್ಣಗಳು ಮೀರೆದಪ್ಪುವರಲ್ಲವೆನಲು ಈತನು ಆತನ ಕಡೆಯಾದನೆಂದು ಅರಸಿಗೆದೂರ ಹೇಳಿದಳು. ಆಗ ಅರಸಿನಾಳುಗಳು ಬಂದು ಚಿಕ್ಕಯ್ಯನ ಹಡಪದ ಮೇಲೆ ಮಡಗಿದ ಲಿಂಗವ ಕಂಡು ಆಕೆ ಹೇಳಿದ ಮಾತು ಸಹಜವೆಂದು ಚಿಕ್ಕಯ್ಯಗಳ ಶಿರವ ನಿಳುಹಲು ಆ ಶಿರಸ್ಸು ಆಕಾಶಕ್ಕೆ ನೆಗೆದು ಪಂಚಾಕ್ಷರಿಯ ಜಪಿಸುತ್ತ ಮುಂಡ ಬೆರಳಿನಲ್ಲಿ ಅಂಗುರಮಾಲೆಯ ತಿರುಹುತ್ತಿರಲು ಈ ವಾರ್ತೆಯ ಬಸವೇಶ್ವರನು ಕೇಳಿ ಬಿಜ್ಜಳನ ಮೇಲೆ ಕೋಪಿಸಲು ಅವ ನುಡಿದನು. ತಪ್ಪಿದವರಿಗೆ ಆಜ್ಞೆಯ ಮಾಡದೆ ಬಿಟ್ಟೆವೆನಲು ಆ ಶರಣ ಸತ್ತುಬಿದ್ದರೆ ತಪ್ಪಹುದೆನಲು ನೋಡು ನಡೆ ಎನಲು ಆಗ ಅಲ್ಲಿಗೆ ಹೋಗಿ ಶಿರ ಪಂಚಾಕ್ಷರಿಯ ಜಪಿಸುವದ ಕಂಡು ಬಿಜ್ಜಳನು ಪ್ರಾಣವ ಪಡೆಯಿರಿ ಎನಲು ಆಗ ಬಸವೇಶ್ವರನು ಶಿವಗಣಂಗಳ ನೆನೆದು ನಿಜಲಿಂಗ ಚಿಕ್ಕಯ್ಯನ ಮಸ್ತಕವ ಮುಂಡದ ಮೇಲೆ ಮಡಗಿ ಎಬ್ಬಿಸಲು ಹೀಗೆ ಶಿವ ಮಹಿಮೆಯ ಮರೆದು ಶಾಂಭವಲೋಕಕ್ಕೆ ಹೋದರು

---

## ೩೫೩ ನೆಯ ವಚನದ ಕಥೆ. (೫೨—೧೦೪)

### ನಿಂಬಿಯಕ್ಕ.

ಚೋಳದೇಶದಲ್ಲಿ ಪಡಳೂರಲ್ಲಿ ಕೊಟ್ಟಣದ ನಿಂಬಿಯಕ್ಕನೆಂಬ ಶರಣಿ ಇದ್ದಳು. ಸಿರಿಯಾಳ ಸೆಟ್ಟಿ ಶಿವಗೆ ಮಗನ ಕೊಟ್ಟೆನೆಂದು ಅಹಂಕರಿಸಲು ನಿಂಬಿಯಕ್ಕನ ಮನೆಗೆ ಆ ಸೆಟ್ಟಿಯನು ಕರಕೊಂಡು ಬರಲು ನಿಂಬಿಯಕ್ಕ ಕಂಡು ನಮಸ್ಕರಿಸಿ ಕುಳ್ಳಿರಿಸಿ ಆ ಮೇಲೆ ಅಡಿಗೆಯ ಮಾಡಿರಿಸಿರಲು ಅದ ಮಗನೆಂಜಲ ಮಾಡಿದವನ ಕೊಂದುಹಾಕಲು ಅದಕ್ಕೆ

ಶಿವ ಮೆಚ್ಚಿ ಕೈಲಾಸಕ್ಕೆ ನಡೆ ಎನಲು ನಿಮ್ಮ ಕೂಡೆ ಬರುವುದೇನೆನಲು ನಮ್ಮ ಲಿಂಗದ ಕೂಡೆ ಬಂದೆನೆನಲು ಆ ಶಿವನಚ್ಚರಿವಟ್ಟು ಮಗನ ಪ್ರಾಣವ ಪಡೆದು ಕೈಲಾಸಕ್ಕೆ ಕಳುಹಿದನು.

## ೩೫೪ ನೆಯ ವಚನದ ಕಥೆ. (೫೩—೧೦೫)

ಮಕುಟಾಗಮದಲ್ಲಿ ಶಿವಪಾದ ಚರಾಗಾರಾ ದಾಸಿಭಕ್ತೋಚ್ಛಿತಾಶನಃ। ಶುನಶಾಃ ಸೂಕರಾ ಯಾಂತಿ ಯುಯಜೂಕಗತಿಮಿಮಾಂ। ಶಿವಪಾದ ಚರಾಗಾರ ದಾಸಿಭಕ್ತೋಂದೆತಾಶನಾಃ। ಶಿವಪಾದಚರಾಗಾರ ಶಿವಭಕ್ತರ ಮನೆಯಲ್ಲಿಯ ದಾಸಿ, ಭಕ್ತೋತಾಶನಾಃ ದಾಸಿಯುಂಡು ಚೆಲ್ಲಿದನ್ನವೆ ಆಹಾರವಾಗುಳ್ಳಂತಹ, ಶುನಕಾಃ ಜನಂಗಳು, ಸೂಕರಾಃ ವರಾಹಂಗಳು, ಈ ಯಾಯಜೂಕಗ ತಿಮಿಮಾಂ ಬಹಳ ಯಜ್ಞವ ಮಾಡಿದಾತನ ಗತಿಯನ್ನು ಯಾಂತಿ ಎಯ್ದುತಿರ್ದಪವು

## ೩೬೧ ನೆಯ ವಚನದ ಕಥೆ (೫೪—೧೧೨)

### ಹೆರೂರ ನಾಚಯ್ಯ

ಹೆರೂರ ನಾಚಯ್ಯ ಜಂಗಮಕ್ಕೆ ತನುವನಿರಿದಿತ್ತು ಶಿವನೊಲಿದನು.

### ಅನುಮಿಷಯ್ಯ

ಅನುಮಿಷಯ್ಯಗಳು ಶಿವನಿಗೆ ಮನಕೊಟ್ಟು ಒಲಿಸಿದರು.

### ಮೊನೆಧರ ಗಣನಾಥ

ಚೋಳಮಂಡಲದ ಕರಊರಲ್ಲಿ ಮೊನೆಧರ ಗಣನಾಥನೆಂಬ ಶಿವಶರಣನಿರ್ಪನು. ಆತನು ಗುರುಲಿಂಗ ಜಂಗಮದ ಭಕ್ತಿಯ ಮಾಡುತ್ತ ಅನ್ಯದೈವಂಗಳ ಜರಿವುತ್ತಿರಲು ಒಂದು ದಿನ ಶಿವನು ಜಂಗಮರೂಪ ತಾಳಿ ಮನೆಗೆ ಬರಲು ದಿವ್ಯಾನ್ನಗಳ ನೀಡಲು ಸಲಿಸಿ ಹೋಗುವಾಗ ಸಾವಿರ ವರಹದ ಗಂಟಿದೆ ನಿನ್ನ ಕೈಯ್ಯಲ್ಲಿರಲಿ ನಾವು ಬಂದು ತೆಗೆದುಕೊಂಡು ಹೋದೆವೆಂದು ಕೊಟ್ಟು ಹೋಗಿ ಅರುವತ್ತು ವರುಷದ ಮೇಲೆ ಬಂದು, ಎಲೆ ಭಕ್ತ ನಮ್ಮ ಹೊನ್ನ ಗಂಟು ತಾರೆಂದು ಕೇಳಲು ತಕ್ಕೊಳ್ಳಿ

ಎಂದು ಹಸ್ತದಲ್ಲಿ ಕೊಡಲು ಅದಕ್ಕೆ ವರುಷ ಒಂದಕ್ಕೆ ಬಡ್ಡಿ ಹಣ ಎರಡು ಸಾವಿರವಾಗುತ್ತದೆ, ಹೀಗೆ ಅರುವತ್ತು ವರುಷಕ್ಕೆ ಲಕ್ಷವು ಇಪ್ಪತ್ತುಸಾವಿರ ವರಹವ ಕೊಡು ಎನಲು ಅಷ್ಟನು ಕೊಡಲು ಆಗ ಶಿವನು ತನ್ನೊಳೇಕಾರ್ಥವ ಮಾಡಿಕೊಂಡನು.

ತನುವನಿತ್ತೊಲಿಸುವಡೆ ನಾನು ವಹಿಲಯ್ಯನೆ ಮನವನಿತ್ತೊಲಿಸುವಡೆ ನಾನು ಅನುಮಿಷಯ್ಯನೆ ಧನವನಿತ್ತೊಲಿಸುವಡೆ ನಾ ಸೇದಿರಾಜನೆ?

---

## ೪೦೮ ನೆಯ ವಚನದ ಕಥೆ. (೬೧—೧೫೯)

### ಮೋದಾರ ಕೇತಯ್ಯ.

ಮೋದಾರ ಕೇತಯ್ಯಗಳು ಬಿದಿರುಕಾಯಕದಿಂದ ಜಂಗಮಾರ್ಚನೆಯ ಮಾಡುತ್ತಿರಲು ಬಳಿಕ ಒಂದು ದಿನ ಶಿವನು ಇವರ ಮನವ ನೋಡಬೇಕೆಂದು ಬಿದಿರ ಕಡಿವಾಗ ಹೊನ್ನುಗಳು ಸುರಿಯಲು ಕೇತಯ್ಯಗಳು ಕಂಡು ಈ ಮರಕೆ ಹುಳು ಸುರಿವುತ ಐದಾವೆಂದು ಬಿಟ್ಟು ಮೇಳೆಯ ಹತ್ತಿ ಕಡಿವಾಗ ಶಿವನು ಬಸವೇಶ್ವರನ ಜಂಗಮ ಪ್ರಾಣತ್ವವ ನೋಡಬೇಕೆಂದು ಮಳೆಯಿಂದ ಈತನ ಕೆಡಹಲು ಆತ ಬಿದ್ದು ಐಕ್ಯವಾದುದ ಬಸವಣ್ಣ ಕಂಡು ತಾವು ಐಕ್ಯವಾದರು. ಅದ ಮಡಿವಾಳಯ್ಯ ಕಂಡು ಭಕ್ತನ ಒಯ್ದಿರೆ ಎಂದು ಶಿವನ ಮೇಲೆ ಕೋಪಿಸಿ ಇಬ್ಬರ ಪ್ರಾಣವನು ಪಡೆದರು.

### ಬಾಲಸಂಗಯ್ಯ

ಬಸವೇಶ್ವರಗೆ ಬಾಲಸಂಗಯ್ಯಗಳು ಮೊದಲಾದ ಗಣಂಗಳು ದ್ರವ್ಯವ ಕೊಟ್ಟರು.

## ೪೦೯ ನೆಯ ವಚನದ ಕಥೆ. (೬೧—೧೬೦)

### ಸೋಮಣ್ಣ

ಮಂಗಲೂರಲ್ಲಿ ಸೋಮಣ್ಣನು ಲಿಂಗದ ಮಸ್ತಕದಲ್ಲಿ ನೈವೇದ್ಯವ ನಿರಿಸಿ ಜಂಗಮವೇ ಮುಖವೆನಲು ಜಂಗಮಕ್ಕರ್ಪಿಸಿ ಶಿವನೊಲಿದನು.

---

## ೪೩೩ ನೆಯ ವಚನದ ಕಥೆ. (೬೩--೧೭೩)

ಗ್ರಂಥಃ—ಪಿತಗುರುಃ ಪತಿರ್ಲಿಂಗಂ ಸ್ವದೈವಂ ಜಂಗಮಃ ಪ್ರಭುಃ ತತ್ಸರ್ವ ಪ್ರಯತ್ನೇನ ತಸ್ಯ ಆರಾಧನಂ ಕುರು ॥ಟೀಕು॥ ಗುರು ಶ್ರೀಗುರುವು ಪಿತ ತಂದೆಯು ಲಿಂಗವು ಪತಿಃ ಪುರುಷನು ಜಂಗಮಃ ಜಂಗಮುವು ಸ್ವದೈವಂ ತನ್ನ ದೈವವು ತಸ್ಮಾತ್ ಅದು ಕಾರಣದಿಂದೆ ಪ್ರಭುಃ ಜಂಗಮುವೇ ಒಡೆಯನೆಂದು ಸರ್ವ ಪ್ರಯತ್ನೇನ ಸಮಸ್ತ ಪ್ರಯತ್ನದಿಂದೆ ತಸ್ಯ ಆ ಜಂಗಮುದ ಆರಾಧನಂ ಪೂಜೆಯನು ಕುರು ಮಾಡು

---

## ೪೩೯ ನೆಯ ವಚನದ ಕಥೆ. (೬೪--೧)

### ಬಸವ

ಬಸವೇಶ್ವರನ ಶಿವನು ವಿಶ್ವತೋಮುಖವಾಗಿ ಬಂದು ಕಾಡಿ ನೋಡಿ ಬೇಡಿದರೆ ತೊಲಗದೆ ಕೊಡುವೆನೆಂದು ಭಾಷೆಪ್ರತಿಜ್ಞೆಯ ಪ್ರಸ್ಥಾವದ ವಚನ

---

## ೪೩೦ ನೆಯ ವಚನದ ಕಥೆ. (೬೪---೨)

ಬಸವಣ್ಣನು ಬೇಡುವರಿಲ್ಲದೆ ಬಡವಾದೆನೆಂದು ವಚನವ ಹಾಡಲು ಮಡಿವಾಳಯ್ಯಗಳು ಅದ ಕೇಳಿ ಪಾದದಲ್ಲಿ ಬಿದ್ದು ಹನಿಗಳ ಹಾಕಿಸಲು ನವರತ್ನಗಳಾಗಲು ಅವ ವಿಟ ಜಂಗಮ ದೇವರುಗಳು ಕೊಂಡು ಹೋಗಿ ವೇಶ್ಯಾಂಗನೆಯರಿಗೆ ಕೊಡಲು ಅವರು ರತ್ನ ಖಚಿತದ ಉಪ್ಪರಿಗೆಗಳ ಮಾಡಿಸಿ ಸುಖದಲ್ಲಿದ್ದರು.

## ೪೪೫ ನೆಯ ವಚನದ ಕಥೆ. (೬೬—೧೭)

ಅರಸಿನ ಐಶ್ವರ್ಯವ ಎಣಿಸುವಡೆ ಸೀತೆಗೆ ಸರಿ ಮಿಗಿಲೆನಿಸುವ ಸತಿಯರೆಂಟು ಕೋಟಿ. ಮತಿವಂತ ಶಿರಃ ಪ್ರಧಾನರೆಂಟು ಕೋಟಿ. ಲೆಕ್ಕವಿಲ್ಲದ ಪಾಯದಳವು ಲಕ್ಷ. ಕುಮಾರರು ದಿಕ್ಪಾಲಕರು ಅವನ ಮನೆಯಲ್ಲಿ ಬಂಧನದಲ್ಲಿಪ್ಪರು. ಸುರಸತಿಯರೆಲ್ಲರ ತಾ ಸೆರೆ ಮಾಡಿ ಆಳಿದ. ಶಿವನೇ ನೀ ಕರುಣಿಸಿದಂತಿರದೆ ಪರವಧುವಿನ ಬೇಟ ವಚನ ಪ್ರಾಣವ

ಕೊಂಡಿತ್ತು. ಇದನರಿದು ಪರವಧುವಿಗೆ ಎಳಸುವರ ಕಂಡು ಗರುಡನ ಕಂಡ ಸರ್ಪ ಧರೆಗಿಳಿವಂತೆ ಅಡಗಿಪ್ಪನಯ್ಯ ಕೂಡಲಸಂಗಮದೇವಾ.

---

## ೪೫೭ ನೆಯ ವಚನದ ಕಥೆ. (೬೮—೧)

### ಮನುಜೇಂದ್ರ ಚೋಳ.

ಸುಸ್ಥಿರವೆಂಬ ಪುರದಲ್ಲಿ ಮನುಜೇಂದ್ರ ಚೋಳರಾಯನು ನವರತ್ನ ದಿಂದ ಗುಡಿಯ ಕಟ್ಟಿಸಿ ಲಿಂಗವ ನಿಲ್ಲಿಸಿ ಪೂಜಿಸುತ್ತಿರಲು ಒಂದು ದಿನ ಲಿಂಗಮಜ್ಜನಕ್ಕೆ ತೈಲಬೇಕೆಂದು ಎಳ್ಳ ಒಣಗಿಸುತ್ತಿರಲು ಆಗ ಮುನೀಂದ್ರ ನೆಂಬರಸು ಎಳ್ಳ ಕದ್ದು ಮೆಲುವಾಗ ಮನುಜೇಂದ್ರ ಚೋಳನ ಬಳಿಗೆ ಹಿಡಿತರಲು ನೀನು ಕಳ್ಳನಲ್ಲ, ಎಳ್ಳನೇಕೆ ಕದ್ದೆ ಎನಲು ಆ ಮುನೀಂದ್ರ ನೆಂದನು ನಾನು ತಪಸ್ಸಿಗೆ ಹೋಗುವಾಗ ಒಂದು ಹೊಲದಲ್ಲಿ ಎಳ್ಳ ಮೊಟ್ಟೆಯ ಕಳ್ಳರು ಕಟ್ಟುವಾಗ ಆ ಹೊಲದ ಬೆಚ್ಚು ನಗಲು ಅವರು ನೀನೇಕೆ ನಕ್ಕೆ ಎನಲು ನಾನು ಮೊದಲ ಜನ್ಮದಲ್ಲಿ ವಿಪ್ರನು, ನನ್ನ ಆಕಳು ಹೊಲಕ್ಕೆ ತುಡುಗ ತಿಂಬುವದಕ್ಕೆ ಹೋಗಲು ಅರಸು ಕೇಳಿ ದರೆ ದಂಡವ ಕೊಂಡಾನೆಂದು ಸುನೆಗೆ ಹೊಡಕೊಂಡು ಬರುವಾಗ ಒಂದು ಎಳ್ಳು ಅದರ ಕಾಲಿನಲ್ಲಿ ಸಿಡಿದು ಬಂದು ಬಾಯೊಳಗೆ ಬೀಳಲು ನಾನು ಕೆಲವು ದಿನಕೆ ಮರಣವಾಗಲು ಯಮದೂತರು ಕರೆದೊಯ್ದು ಇವಗೆ ಎಳ್ಳು ಋಣವಿಹುದು, ಒಕ್ಕಲಿಗನಿಗೆ ಎತ್ತಾಗಲಿ ಎಂದು ಕಳುಹಿ ದರು. ನಾನು ಒಂದು ಎಳ್ಳಿನಲ್ಲಿ ಹೀಗೆ ಎತ್ತಾಗಿ ಸತ್ತು ಬೆಚ್ಚಾದೆನು. ಈಗ ಇಷ್ಟು ಎಳ್ಳ ಕದ್ದರೆ ಏನಾಗದೆಂದು ನಕ್ಕೆನೆನಲು ಅದ ಕೇಳಿ ಲಿಂಗದ ಋಣಕ್ಕೆ ಹೋದೆನೆಂದು ಮುನೀಂದ್ರನು ಮನುಜೇಂದ್ರರಾಯನ ಕೂಡೆ ಹೇಳಲು ಆ ಮನುಜೇಂದ್ರನು ನಿನ್ನ ಋಣಸ್ಥನಾದೆನೆಂದು ಬಾಯೊಳಗಣ ಎಳ್ಳ ತೆಗೆದುಕೊಂಡು ಮೆಲುವಾಗ ಶಿವನು ನಿಮ್ಮಿಬ್ಬರ ಋಣಸ್ಥನಾದೆನೆಂದು ಅವರ ಎಳ್ಳ ಮೆದ್ದು ಕೈಲಾಸಕ್ಕೆ ಅವರಿಬ್ಬರನು ಕರಕೊಂಡು ಹೋದರು

---

R. N. B. 2554.

# ಶಿವಾನುಭವ



ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ.

ವಿಜಾಪುರ



ಸಂಪುಟ ೯ ಸಂಚಿಕೆ ೩

ಸಪ್ಟಂಬರ

೧೯೩೪

ವಾ. ವರ್ಗಣಿ ೪-೪-೦ ] [ ಬಿಡಿಸಂಚಿಕೆ ೦-೧೨-೦

# ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೯] ಸಪ್ಟಂಬರ ೧೯೩೪ [ಸಂಚಿಕೆ ೩

## ಶೂನ್ಯಸಂಪಾದನೆಯ ರಹಸ್ಯ.

(ಲೇ:— ಮಿ॥ ಬ್ಯಾಳಿ ಕಲ್ಯಾಣಪ್ಪನವರು ಬಿ. ಎ. ಶ್ರೀ ಸಿದ್ಧೇಶ್ವರ
ಹೈಸ್ಕೂಲು ವಿಜಾಪುರ.)

### ೬. ಮರುಳು ಶಂಕರದೇವರ ಸಂಪಾದನೆ.

ಈ ಸಂಪಾದನೆಯಲ್ಲಿ ಪ್ರತಿಪಾದಿತವಾಗಿರುವ ಕಥಾಸಾರವಿಷ್ಟೇ. ಮರುಳಶಂಕರದೇವರೆಂಬ ಮಹಾ ಶಿವಶರಣರು ಶ್ರೀ ಬಸವಣ್ಣನವರ ಪ್ರಸಾದ ಮಂದಿರದಲ್ಲಿ ಯಾರಿಗೂ ತಮ್ಮ ನಿಜತ್ವವನ್ನು ಹೊರಪಡಿಸದೆ ಗುಪ್ತ ರೀತಿಯಾಗಿ ಸಮಗ್ರ ೧೨ ವರ್ಷ ಅಡಿಗೆ ಮಾಡುವ ಮತ್ತು ಊಟಕ್ಕೆ ನೀಡುವ ಸೇವಾ ಕಾರ್ಯವನ್ನು ವಹಿಸಿಕೊಂಡಿದ್ದು ಪ್ರಸಂಗ ವಶಾತ್ ಅಲ್ಲಿಗೆ ಶ್ರೀ ಪ್ರಭುದೇವರ ಮೂರ್ತಿಯು ದಯಮಾಡಿಸಿದ್ದನ್ನು ಕಂಡು ಪರಮಾನಂದದೊಳೋಲಾಡಿ ಪ್ರಭುದೇವರನ್ನು ಮನವಾರೆ ಕೊಂಡಾಡಿದರು. ಅಲ್ಲಿ ನೆರೆದ ಶರಣರ ಬಳಗವು ಮರುಳಶಂಕರದೇವರ ಮಹಾ ಮಹಿಮೆಯನ್ನು ಸಾನಂದಾತಿರೇಕದಿಂದ ಹೊಗಳಿದರು. ಇಷ್ಟಾದ ಬಳಿಕ ಮರುಳಶಂಕರದೇವರು ಪ್ರಭು ಬಸವೇಶ್ವರರನ್ನು ಸ್ಮರಿಸುತ್ತ ಎಲ್ಲ ಶರಣರ ಸಮಕ್ಷಮವಾಗಿ ಲಿಂಗೈಕ್ಯರಾದರು. "ಶರಣರ ಮಹಿಮೆಯನ್ನು ಮರಣದಲ್ಲಿ ನೋಡು" ಎಂಬೀ ಗಾದೆಗನುಸರಿಸಿ ಶಿವಶರಣರ ವೃಂದವೆಲ್ಲ ಮರುಳಶಂಕರದೇವರ ನಿಜಸ್ಥಿತಿಗೆ ತಲೆದೂಗಿ ಆನಂದಪರವಶರಾಗಿರ್ದರು. ಈ ಕಥಾಪ್ರಸಂಗವನ್ನೇ ಸ್ವಲ್ಪ ವಿಸ್ತಾರವಾಗಿ ಪ್ರತಿಪಾದಿಸೋಣ.

ಶ್ರೀ ಪ್ರಭುದೇವರು ಬಸವರಾಜದೇವರ ರಾಜಭವನಕ್ಕೆ ಒಳ್ಳೆ ಸಂಭ್ರಮದಿಂದ ಹೊರಟ ಸಮಯಲ್ಲಿ ಅಲ್ಲಿಯೇ ಸಮೀಪದಲ್ಲಿ ಪ್ರಸಾದ ಕುಂಡ

ದಲ್ಲಿ ಸೇವೆ ಮಾಡುತ್ತಿದ್ದ ಮರುಳಶಂಕರದೇವರು ಶರಣ ತಿಂಥಿಣಿಯಿಂದೊಡಗೂಡಿದ ಪ್ರಭುದೇವರನ್ನು ಕಂಡು ಆನಂದಭರಿತರಾಗಿ ಮೆಲ್ಲ ಮೆಲ್ಲನೆ ಪೊರಮಡಹತ್ತಿದರು. ವಸಂತನು ಬರಲು ಮಾಮರವು ಹೂ ಬಿಡುವಂತೆ ಸ್ವಾತಿ ಮಳೆಯಾಗಲು ಸಮುದ್ರದೊಳಗಣ ಶುಕ್ತಿಯು ಮೌಕ್ತಿಕವನ್ನು ಧರಿಸುವಂತೆ, ಸೂಜಿಗಲ್ಲ ಕಂಡು ಸೂಜಿಯು ತನ್ನ ಸ್ಥಾನವನ್ನು ಬಿಟ್ಟು ಏಳುವಂತೆ, ಪೌರ್ಣಿಮೆಯ ಚಂದ್ರನುದಯಕ್ಕೆ ಸಾಗರವು ಉಬ್ಬುಬ್ಬಿ ಹೊರಚಲ್ಲುವಂತೆ ಮರುಳಶಂಕರದೇವರು ಪ್ರಭುವಿನ ನಿಲವನ್ನು ಕಂಡು ಶಿವಯೋಗಾನಂದದಲ್ಲಿ ತನುವ ಮರೆದು ಮುಂದೆ ಸಾಗಿದರೆಂದು ಕವಿಯು ಉತ್ಪ್ರೇಕ್ಷೆ ಮಾಡಿದ್ದಾನೆ.

ಇತ್ತ ಪ್ರಭುದೇವರಿಗೆ ಮರುಳಶಂಕರದೇವರ ನಿಲವು ಜ್ಞಾನಚಕ್ಷುವಿಂಗೆ ಆತ್ಮನ ನಿಲವು ತೋರಿದಂತೆಯೂ ಅಂಜನವುಳ್ಳವರಿಗೆ ಕಡವರದಿರವು ತೋರಿದಂತೆಯೂ ಕಂಗೊಳಿಸಿತು. ಆಗ ಪ್ರಭುದೇವರು "ನಮ್ಮ ಗುಹೇಶ್ವರ ಲಿಂಗದ ಕಣ್ಣ ಮುಂದೆ ನಿಮ್ಮ ದಯದಿಂದ ಒಂದಾಶ್ಚರ್ಯವಂ ಕಂಡು ಬದುಕಿದೆನು ಕಾಣಾ ಸಂಗನ ಬಸವಣ್ಣಾ" ಎಂದು ನಿರೂಪಿಸಲು ಬಸವರಾಜ ದೇವರು "ಕೂಡಲ ಸಂಗಮದೇವಾ, ನಿಮಗಿಂತ ಬೇರೊಂದಾಶ್ಚರ್ಯವಿಲ್ಲವೆಂದು ಶ್ರುತಿಗಳು ಹೊಗಳುತ್ತಿರಲು ನೀವು ಕಂಡಾಶ್ಚರ್ಯವಾವುದೆನಗೊಮ್ಮೆ ನಿರೂಪಿಸಾ ಪ್ರಭುವೇ" ಎಂದು ಬೆಸಗೊಂಡರು.

ಆಗ ಪ್ರಭುದೇವರು "ಮಹದಾಕಾಶದ ಮರೆಯಲ್ಲಿರ್ದ ಶಾಂತಾರ್ಕನ ನಿಲವೋ, ಮಾಯೆಯ ಮರೆಯಲ್ಲಿರ್ದ ಪರಾತ್ಪರ ಲಿಂಗಜ್ಞಾನ ಜ್ಯೋತಿಯ ನಿಲವೋ, ಮುಕ್ತಿಯು ತನ್ನಿಂದ ತಾನೇ ಕರಿಗೊಂಡುದೋ, ಧವಳದ ಕಾಂತಿಯ ನಿಲವೋ, ಆವ ನಿಲವೆಂದರಿಯಬಾರದು. ಗುಹೇಶ್ವರನ ಕಂಗಳಿಗೊಂದಾಶ್ಚರ್ಯ ತೋರಿತ್ತು ಕಾಣಾ ಸಂಗನ ಬಸವಣ್ಣಾ" ಎಂದುದಾಗಿ ಶ್ರುತಪಡಿಸಲು ಬಸವಣ್ಣನವರು 'ನೀವು ಕಂಡಾಶ್ಚರ್ಯವನ್ನು ನನಗೆ ಸ್ಪಷ್ಟವಾಗಿ ನಿರೂಪಿಸಬೇಡವೇ ಪ್ರಭುವೇ' ಎಂದು ಅಂಗಲಾಚಿ ಕೇಳಿಕೊಂಡರು.

ಅದಕ್ಕೆ ಪ್ರಭುದೇವರು ಅಪ್ಪಣೆಕೊಡಿಸಿದ್ದೇನೆಂದರೆ "ಬೀದಿಯಲ್ಲಿ ಬಿದ್ದ ಮಾಣಿಕ್ಯವು ಹೂಳಿದ್ದ ನಿಧಾನವಾರಿಗೂ ಕಾಣಬಾರದು ನೋಡಾ. ಮರಣವುಳ್ಳವರಿಗೆ ಮರುಜೀವಣಿ ಸಿಕ್ಕುವದೆ? ಪಾಪಿಯ ಕಣ್ಣಿಗೆ ಪರುಷ ಕಲ್ಲಾಗಿಪ್ಪಂತೆ ಇಪ್ಪರಯ್ಯಾ ಶಿವಶರಣರು. ನಮ್ಮ ಗುಹೇಶ್ವರನ ಶರಣ

ಮರುಳಶಂಕರದೇವರ ನಿಲವ ನೋಡಾ ಸಂಗನಬಸವಣ್ಣಾ. ಪ್ರಸಾದವೇ ಕಾಯವಾಗಿ, ಪ್ರಸಾದವೇ ಪ್ರಾಣವಾಗಿ, ಪ್ರಸಾದವೇ ಜ್ಞಾನವಾಗಿ, ಪ್ರಸಾದವೇ ಲಿಂಗಭೋಗೋಪಭೋಗಿಯಾಗಿಪ್ಪ ನಮ್ಮ ಗುಹೇಶ್ವರಲಿಂಗದಲ್ಲಿ ನಿಜಪ್ರಸಾದಿ ಮರುಳಶಂಕರದೇವರ ನಿಲವ ನೋಡಾ ಸಂಗನಬಸವಣ್ಣಾ ಮರುಳಶಂಗರದೇವರು ನಿಮ್ಮ ಘನವಾದ ಪ್ರಸಾದದ ಕುಳಿಯೊಳಗೆ ಹನ್ನೆರಡು ವರುಷ ಪರಿಯಂತರ ತಮ್ಮ ನಿಜಸ್ವರೂಪವಂ ಮರೆಯಿಸಿಕೊಂಡಿರುತ್ತಿರಲು ಇದುವರೆಗೆ ಆ ರಹಸ್ಯವಾರಿಗೂ ಕಂಡಿಲ್ಲ ನೋಡಾ ಸಂಗನಬಸವಣ್ಣಾ."

ಅಷ್ಟರಲ್ಲಿ ಮರುಳಶಂಕರದೇವರು ಪ್ರಸಾದಕುಂಡದಿಂದ ನಲಿನಲಿದು ಬಂದು ಪ್ರಭುದೇವರಿಗೆ ನಮಸ್ಕಾರ ಮಾಡಿ ಬಿನ್ನೈಸಿದುದೇನಂದರೆ "ಗರ್ಭದೊಳಗಣ ಶಿಶುವು ನವಮಾಸವ ಹಾರೈಸಿಕೊಂಡಿರ್ದಂತೆ ಇದ್ದೆನಯ್ಯಾ. ಇಂದಿಗೆ ಎನ್ನ ಜನ್ಮ ಸಫಲವಾಯಿತ್ತು ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ ಶಾಂತಮಲ್ಲಿಕಾರ್ಜುನದೇವಯ್ಯಾ ಬಸವರಾಜದೇವರ ದಯೆಯಿಂದ ಪ್ರಭುದೇವರ ಶ್ರೀಮೂರ್ತಿಯನ್ನು ಕಂಡು ಬದುಕಿದೆನು. ನಿಮ್ಮ ಧರ್ಮ ನಿಮ್ಮ ಧರ್ಮ ಶರಣುಶರಣಾರ್ಥಿ ಸಕಲ ಪ್ರಮಥರ್ಗೆ ಪ್ರಭುದೇವರ ಕಾರುಣ್ಯದಿಂದ ಬದುಕಿದೆನು."

ಆಗ ಪ್ರಭುದೇವರು ಬಸವಣ್ಣನವರಿಗೆ ಮರುಳಶಂಕರದೇವರ ನಿಲವನ್ನು ಈ ಪ್ರಕಾರ ನಿರೂಪಿಸಿದರು. "ಕಂಡೆಯಾ, ಬಸವಣ್ಣ, ಕಣ್ಣಿನೊಳಗಿನ ಬೊಂಬೆಯ ಸೂತ್ರದ ಇರವಿನಂತೆ, ನವನೀತದೊಳಡಗಿಪ ಸಾರದ ಸವಿಯಂತೆ, ಅಂಗವಿಲ್ಲದ ಕುರುಹು, ಭಾರವಿಲ್ಲದ ಬಯಲು, ಬೆಳಗನರಿಯದ ಜ್ಯೋತಿಯು, ಗುಹೇಶ್ವರಲಿಂಗದಲ್ಲಿ ಮರುಳಶಂಕರದೇವರ ನಿಲವ ಕಂಡೆಯಾ ಸಂಗನಬಸವಣ್ಣಾ." ಅದಕ್ಕೆ ಮರುಳಶಂಕರದೇವರು ನಿರಹಂಭಾವದಿಂದ "ಪರುಷದ ದೆಶೆಯಿಂದ ಪಾಷಾಣದ ಕುಲ ಹರಿವಂತೆ ಸಂಗನಬಸವಣ್ಣನ ದೆಶೆಯಿಂದ ಬಂದು ನನ್ನನ್ನುದ್ಧರಿಸಿದೆಯಲ್ಲ ಪ್ರಭುವೆ, ನಿಮ್ಮ ಕಾರುಣ್ಯದಿಂದ ಬದುಕಿದೆನು ನೋಡಾ." ಎಂದು ನುಡಿದರು.

ಈ ಪ್ರಕಾರ ಮರುಳಶಂಕರದೇವರ ಪ್ರಭಾವವನ್ನು ಕಂಡು ನೆರೆದ ಶಿವಶರಣರೆಲ್ಲರು ಆಶ್ಚರ್ಯದಿಂದ ತಲೆದೂಗುತ್ತಿರಲು ಬಸವಣ್ಣನವರು ಇಷ್ಟು ದಿವಸ ತಮ್ಮಂಗಳದಲ್ಲಿಯೇ ಮಹಾಲಿಂಗಸ್ವರೂಪಿಯಾದ ಶರಣ

ನಿರುತ್ತಿರಲು ಆತನ ನಿಲವನರಿಯದೆ ಕೆಟ್ಟೆನಲ್ಲ! ಎಂದು ಚಿಂತಾಕ್ರಾಂತ ರಾಗಿ ನುಡಿದುದೇನೆಂದರೆ—“ಅಯ್ಯಾ, ನಿಮ್ಮ ಶರಣರು ಬಂದೆನ್ನ ಅಂಗಳದೊಳಗೆ ರಕ್ಷಿಸಿಹೆನೆಂದರಿದು ನಿಂದಿರಲು, ನಾನು ತೆರಹುಮರ ಹಾಗಿದ್ದೆ ಕೆಟ್ಟೆನಯ್ಯಾ! ನಾನು ಕೆಟ್ಟ ಕೇಡಿಂಗೆ ಕಡೆಯಿಲ್ಲವಯ್ಯಾ ಕೂಡಲಸಂಗಮದೇವಯ್ಯಾ, ಎನ್ನ ಭಕ್ತಿ ಸಾವಿರ ನೋಂಪಿಯು ನೋಂತು ಹಾದರದಲ್ಲಿ ಅಳಿದಂತಾಯಿತ್ತಯ್ಯಾ. “ಅಯ್ಯೋ, ನಡುತೊರೆಯೊಳಗೆ ಹರಗೋಲನಿಳಿದಂತಾಯಿತ್ತೆನ್ನ ಭಕ್ತಿ. ಮರನೇರಿ ಕೈಯ್ಯ ಬಿಟ್ಟಂತಾಯಿ ತ್ತೆನ್ನ ಭಕ್ತಿ. ಶಿವಶಿವಾ ಕೆಟ್ಟೆನಲ್ಲಾ. ಗುರುವೆ ಕೂಡಲಸಂಗಮದೇವಾ ಈ ಮರುಳಶಂಕರದೇವರ ಕೃಪೆ ಎನಗಿನ್ನೆಂತಪ್ಪುದು ಹೇಳಾ ಪ್ರಭುವೆ.

ಅದಕ್ಕೆ ಪ್ರಭುದೇವರು ಅಪ್ಪಣೆಕೊಡಿಸಿದ್ದೇನಂದರೆ “ಹೂ ಮಿಡಿಯ ಹರಿದು ಒತ್ತಿ ಹಣ್ಣುಮಾಡಿಹೆನೆಂದರೆ ಹಣ್ಣಾಗಬಲ್ಲುದೆ? ಪರಿಮಳವಿಲ್ಲದ ನನೆಯ ನರಳಿಸಿ ಮುಡಿದಿಹೆನೆಂದರೆ ಸೌರಭ ಉಂಟೆ? ಶಿವಶರಣರ ನಿಲ ವಕಾಂಬ ಕಾಲಕ್ಕೆ ಕಾಣಬಹುದಲ್ಲದೆ ಎಲ್ಲ ಹೊತ್ತು ಕಾಣಬಹುದೇ? ಗುಹೇಶ್ವರನ ಶರಣರ ನಿಲವ ಕಂಡ ಬಳಿಕ ಮರಹು ಬೆಳಗ ಕಂಡ ಕತ್ತಲೆಯಂತೆ ಹರಿವುದು ನೋಡಾ ಸಂಗನಬಸವಣ್ಣಾ.”

ಇದನ್ನು ಕೇಳಿ ಬಸವಣ್ಣನವರು “ಮುಗಿಲ ಮರೆಯ ಮಿಂಚಿನಂತೆ ಒಡಲ ಮರೆಯ ಆತ್ಮನಂತೆ, ನೆಲದ ಮರೆಯ ನಿಧಾನದಂತೆ, ಇಪ್ಪ ನಿಮ್ಮ ನಿಲವನಾರು ಬಲ್ಲರು? ದೇವಾ, ನಿಮ್ಮ ನಿಲವ ಹಲಕಾಲದಿಂದ ಕಂಡು ಕಂಡು ಮರೆದು ಮತಿಗೆಟ್ಟು ಮರುಳಾದೆನು. ಎನ್ನ ತಪ್ಪಿಂಗೆ ಕಡೆಯಿಲ್ಲ ಕಾಣಾ ತ್ರಾಹಿ ತ್ರಾಹಿ ಕೂಡಲಸಂಗಮದೇವಾ.” ಎಂದು ಮರುಳಶಂಕರದೇವರ ಶ್ರೀಪಾದಕ್ಕೆ ಶರಣುಮಾಡಿದರು.

ಆಗ ಮರುಳಶಂಕರದೇವರು ಬಸವರಾಜದೇವರು ನರಲೋಕದವ ರಲ್ಲಿ ಸಾಕ್ಷಾತ್ ಮಹಾಲಿಂಗಸ್ವರೂಪವೆಂದೇ ಸಂಸ್ಕೃತ ಶ್ಲೋಕಗಳಿಂದ ಈ ಪ್ರಕಾರ ಕೊಂಡಾಡಿದರು. “ಏಕಬೀಜ ಸಮಾವೃಕ್ಷಂ ಏಕಲಿಂ ಗಂತು ಪೂಜನಂ। ಏಕಧ್ಯಾನ ಸಮಾಚಿತ್ತಂ ಊರ್ಧ್ವಲಿಂಗಂತು ಪೂಜನಂ। ಏಕಾಕ್ಷರಂ ತು ಪೂಜಾನಾಂ ಮಹಾಲಿಂಗಂತು ದರ್ಶನಂ॥ ಇಂತೆಂ ದುದಾಗಿ ನಿಮ್ಮ ಶರಣಬಸವಣ್ಣನು ಲೋಕದ ಮರ್ತ್ಯನೆಂದರೆ ಅಘೋರ ನರಕ ಕಾಣಾ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಭುವೆ ಶಾಂತಮಲ್ಲಿಕಾರ್ಜುನ

ದೇವಯ್ಯಾ ನಿಮ್ಮ ಶರಣಬಸವಣ್ಣನ ನಿಲವ ನೀವೇ ಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯಾ ನಿಮ್ಮ ಧರ್ಮ ನಿಮ್ಮ ಧರ್ಮ."

ಆಗ ಬಸವಣ್ಣನವರು ಮರುಳಶಂಕರದೇವರ ಮಹಾತ್ಮೆಯನ್ನು ಚೆನ್ನಬಸವಣ್ಣನವರೆದುರಿಗೆ ಈ ಪರಿ ಕೊಂಡಾಡಿದರು. "ಲಿಂಗಜಂಗಮದ ಒಕ್ಕು ಮಿಕ್ಕು ಪ್ರಸಾದವ ಕೊಂಡು ಮಿಕ್ಕು ಮೀರಿದ ಮಹಾಪ್ರಸಾದಿಯ ನೋಡಾ. ತನ್ನ ಕಂಡಿಹರೆಂದು ಜಗದ ಕಣ್ಣಿಂಗೆ ಮಾಯದ ಮಂಜ ಕವಿಸಿ ನಿಜಪದದಲ್ಲಿ ತದ್ಗತನಾದನು. ಕೂಡಲಸಂಗಮದೇವರಲ್ಲಿ ಮರುಳಶಂಕರದೇವರ ನಿಲವ ನೋಡಾ ಚೆನ್ನಬಸವಣ್ಣಾ." ಅದಕ್ಕೆ ಚೆನ್ನಬಸವಣ್ಣನವರು "ಲಿಂಗಜಂಗಮಪ್ರಸಾದಿಯಾಗಿ ಸತ್ಯಶರಣರ ಅಂಗಳದೊಳಗೆ ಬಿದ್ದ ಅಗುಳನೆತ್ತಿಕೊಂಡಿಪ್ಪೆನೆಂದು ನಿಮ್ಮ ಪ್ರಸಾದದ ಕುಳಿಯೊಳಗೆ ಹನ್ನೆರಡು ವರುಷ ಪರಿಯಂತರ ಪ್ರಸಾದಿಯಾಗಿರ್ದ ಕೂಡಲಚೆನ್ನಸಂಗನಶರಣ ಮರುಳಶಂಕರದೇವರ ಶ್ರೀಪಾದದ ಘನವನು ನಿಮ್ಮಿಂದೆ ಕಂಡು ಬದುಕಿದೆನು ಕಾಣಾ ಸಂಗನಬಸವಣ್ಣಾ." ಎಂದು ಬಿನ್ನೈಸಿದರು.

ಆ ಮೇಲೆ ಮರುಳಶಂಕರದೇವರು ಚೆನ್ನಬಸವರಾಜದೇವರನ್ನು ಭಕ್ತಿಪುರಸ್ಸರವಾಗಿ ಕೊಂಡಾಡಿದುದೇನೆಂದರೆ "ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಇಂತು ಷಡುಸ್ಥಲ ಚಕ್ರವರ್ತಿಯಯ್ಯ ಚೆನ್ನಬಸವಣ್ಣನು. ಷೋಡಶಾಧಾರಂ ಸರ್ವಂ ಸರ್ವಾಚಾರಂತು ಲಿಂಗಯೋಃ। ಷಡೂರ್ಮಿ ತ್ರಿವಿಧಂ ಏಕಂ ತಸ್ಮಾತ್ ಲಿಂಗಪ್ರಯೋಜನಂ"॥ ಇಂತಪ್ಪ ಲಿಂಗಾಂಗಿಯಯ್ಯ ಚೆನ್ನಬಸವಣ್ಣನು. ಆಚಾರವೆ ಕಾಯ, ಆಚಾರವೆ ಪ್ರಾಣ, ಆಚಾರವೆ ಲಿಂಗ, ಆಚಾರವೆ ಸಂಗ, ಇಂತಪ್ಪ ಆಚಾರಸನ್ನಿಹಿತನಯ್ಯ ನಮ್ಮ ಚೆನ್ನಬಸವಣ್ಣನು. ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ ಶಾಂತಮಲ್ಲಿಕಾರ್ಜುನದೇವಯ್ಯಾ ನಿಮ್ಮ ಶರಣ ಚೆನ್ನಬಸವಣ್ಣನ ನಿಲವ ನೀವೇ ಬಲ್ಲಿರಿ ನಾನೆತ್ತ ಬಲ್ಲೆನಯ್ಯಾ ನಿಮ್ಮ ಧರ್ಮ ನಿಮ್ಮ ಧರ್ಮ."

ಆ ಮೇಲೆ ಶಿವಶರಣರು ಒಬ್ಬರ ಹಿಂದೊಬ್ಬರು ಮರುಳಶಂಕರದೇವರ ಮಹಿಮೆಯನ್ನು ಕೊಂಡಾಡಿದ ಪರಿಯನ್ನು ಇದರಡಿಯಲ್ಲಿ ವಿವರಿಸಲಾಗಿದೆ.

೧. **ಸಿದ್ಧರಾಮೇಶ್ವರರು**:— "ಸತ್ಯ ಮುಕ್ತಿಯ ಕಳೆಯ ನೋಡಾ. ನಿತ್ಯ ತತ್ವದ ಇರವ ನೋಡಾ. ಆದಿಯ ಮೂರ್ತಿಯಲ್ಲ. ಅನಾದಿಯ ಮೂರ್ತಿಯಲ್ಲ. ಮರುಳಶಂಕರದೇವರ ನಿಲವ ಪ್ರಭು ಬಸವಣ್ಣನಿಂದೆ ಕಂಡು ಬದುಕಿದೆನು ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

೨. **ಹಡಪದಪ್ಪಣ್ಣಗಳು**:— "ಆಹಾ, ಎನ್ನ ಮುಕ್ತಿಯ ಮುಕುರದ ಇರವ ನೋಡಾ. ಆಹಾ, ಎನ್ನ ಸತ್ಯ ಸ್ವಾನುಭಾವದ ಕಳೆಯ ನೋಡಾ. ಆಹಾ, ಅಷ್ಟಮದಂಗಳ ಹಂಗನಳಿದು ನಿಷ್ಠೆ ನಿಬ್ಬೆರಗಾಗಿ ನಿಂದ ಚಿತ್ಸುಖಿಯ ನೋಡಾ. ಬಸವ ಪ್ರಿಯ ಕೂಡಲ ಚೆನ್ನ ಸಂಗವು ದೇವಯ್ಯ. ಪರಮ ಪ್ರಸಾದಿ ಮರುಳ ಶಂಕರ ದೇವರ ನಿಲವ ಪ್ರಭು ಬಸವಣ್ಣನವರಿಂದ ಕಂಡು ಬದುಕಿದೆನು ಬದುಕಿದೆನು."

೩. **ಮಡಿವಾಳ ಮಾಚಯ್ಯ ದೇವರು**:— "ಮೂರರನೊಳಕೊಂಡ ಆರ ಮೂರಿನಿಂದ ಘನವನೇನೆಂಬೆನಯ್ಯ. ನುಡಿವರೆ ವಾಚಾತೀತ ನೋಡುವರೆ ಕಂಗಳಿಗಸಾಧ್ಯ. ಮಹದ ಬೆಳಗು ತಾನಾಗಿ ನಿಂದ ಮರುಳ ಶಂಕರ ದೇವರ ನಿಲವ ಬಸವಣ್ಣನಿಂದ ಕಂಡು ಬದುಕಿದೆನು ಕಾಣಾ ಕಲಿದೇವರ ದೇವಾ

೪. **ಕಿನ್ನರಿ ಬ್ರಹ್ಮಯ್ಯಗಳು**:— "ಆಕಾರವೆಂಬೆನೆ? ನಿರಾಕಾರವಾಗಿದೆ. ನಿರಾಕಾರವೆಂಬೆನೆ ಅತ್ತಿತ್ತ ತೋರುತ್ತಲಿದೆ. ತನ್ನನಳಿದು ನಿಜವುಳಿದು ಮಹಾಲಿಂಗ ತ್ರಿಪುರಾಂತಕನ ನಿಲವನೊಳಕೊಂಡ ಮರುಳಶಂಕರದೇವರ ಮೂರ್ತಿಯನ್ನು ನಿನ್ನಿಂದ ಕಂಡು ಬದುಕಿದೆನು ಕಾಣಾ ಸಂಗನ ಬಸವಣ್ಣ."

ಈ ಮೇರೆಗೆ ಎಲ್ಲ ಗಣಂಗಳು ಮರುಳ ಶಂಕರ ದೇವರನ್ನು ಸ್ತುತಿಸಲು ಅವರು ಒಂದೇ ವಚನದಲ್ಲಿ ಎಲ್ಲರನ್ನು ಈ ಪ್ರಕಾರ ಕೊಂಡಾಡಿದರು. "ಎನ್ನ ಜ್ಞಾನಾತ್ಮ ಚೇತನಯ್ಯಾ ಪ್ರಭುದೇವರು. ಎನ್ನ ಪರಮಾತ್ಮ ಚೇತನಯ್ಯ ಸಿದ್ಧರಾಮಯ್ಯ ದೇವರು. ಎನ್ನ ಚಿನ್ಮಯಾತ್ಮ ಚೇತನಯ್ಯಾ ಸಂಗನಬಸವಣ್ಣನು. ಎನ್ನ ನಿರ್ಮಲಾತ್ಮ ಚೇತನಯ್ಯಾ ಷಡುಸ್ಥಲಬ್ರಹ್ಮ ಚೆನ್ನಬಸವಣ್ಣನು. ಎನ್ನ ಮಹದಾತ್ಮ ಚೇತನಯ್ಯ ಬಸವಣ್ಣನ ನಿಜ ಸುಖಿ ಅಪ್ಪಣ್ಣನು. ಎನ್ನ ಜೀವಾತ್ಮ ಚೇತನಯ್ಯ ಮಡಿವಾಳಮಾಚಯ್ಯನು. ಎನ್ನ ಅರುವಿನ ಚೇತನಾತ್ಮಕನಯ್ಯ ಕಿನ್ನರಿ ಬ್ರಹ್ಮಯ್ಯನು.

ಇಂತಪ್ಪ ಪ್ರಮಥರ ಕರುಣದಿಂದೆ ಶುದ್ಧ ಸಿದ್ಧ ಪ್ರಸಿದ್ಧ ಪ್ರಭುವೇ ಶಾಂತ ಮಲ್ಲಿಕಾರ್ಜುನಯ್ಯಾ ಬದುಕಿದೆನು ಕಾಣಾ ನಿಮ್ಮ ಧರ್ಮ.

ಆ ಮೇಲೆ ಮರುಳಶಂಕರದೇವರು ಪ್ರಭುದೇವರ ಹಾಗೂ ಬಸವರಾಜದೇವರ ಸ್ತೋತ್ರವನ್ನು ಅನುಕ್ರಮವಾಗಿ ಈ ಪರಿಯಾಗಿ ಮಾಡಿದರು. ನಿಸ್ಸಂಗತ್ವಂ ನಿರಾಭಾರಿ ನಿಸ್ಸೀಮಂ ನಿರುಪಾಧಿಕಂ । ನಿರ್ಲೇಹಂ ನಿರ್ಮಳಂ ನಿತ್ಯಂ ಸತ್ಯಜಂಗಮಲಕ್ಷಣಂ ॥ "ಮಹಾಲಿಂಗಂ ತ್ರಯೋಲಿಂಗಂ । ತ್ರಿವಿಧಂ ಷಡ್ವಿಧೋಮುಖಂ । ತ್ರಿವಿಧೇಕ ಮುಖೋಲಿಂಗಂ ಮಹಾಲಿಂಗಂತು ದರ್ಶನಂ ॥ ಎಂಬುದಾಗಿ ಒಂದು ಮೂರು ಮಾಡಿಕೊಂಡನಯ್ಯಾ ಬಸವಣ್ಣನು. ಮೂರು ಆರ ಮಾಡಿಕೊಂಡನಯ್ಯಾ ಬಸವಣ್ಣನು. ಮೂರ ಒಂದ ಮಾಡಿಕೊಂಡನಯ್ಯ ಬಸವಣ್ಣನು. ಇಂತಪ್ಪ ಸರ್ವಾಂಗಲಿಂಗಿ ಬಸವಣ್ಣನ ಪ್ರಸಾದವ ಕೊಂಡು ನಾನು ಬದುಕಿ ಈಗ ಬಸವಣ್ಣನ ಮುಂದೆ ಬಯಲಾಗಿ ಹೋದೆನಯ್ಯಾ ನಿಮ್ಮ ಧರ್ಮ ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ ಶಾಂತಮಲ್ಲಿಕಾರ್ಜುನದೇವಯ್ಯಾ."

ಹೀಗೆ ನುಡಿದು ಮರುಳಶಂಕರದೇವರು ನಿರ್ವಯಲಾದರು. ಬಸವಾದಿ ಪ್ರಮಥರು ಅವರ ಮಹಿಮಾತಿಶಯವನ್ನು ಬಹು ಪರಿಯಾಗಿ ಕೊಂಡಾಡಿದರು. ಬಸವಣ್ಣನವರು "ಅಯ್ಯಾ, ನಿಮ್ಮ ಶರಣರು ಪರಮಸುಖಿಗಳಯ್ಯಾ. ಅಯ್ಯಾ ನಿಮ್ಮ ಶರಣರು ಕಾಯವೆಂಬ ಕರ್ಮಕ್ಕೆ ಹೊದ್ದದ ನಿಃಕಾಮಿಗಳಯ್ಯಾ. ಕೂಡಲಸಂಗಮದೇವಯ್ಯ ನಿಮ್ಮ ಶರಣರ ಘನಕ್ಕೆ ನಮೋ ನಮೋ ಎನುತಿರ್ದೆನು." ಎಂದುಸುರಿದರು.

ಚೆನ್ನಬಸವರಾಜದೇವರು "ಕಾಯವಳಿದರೇನು? ಕಾಯವುಳಿದರೇನು? ಕಾಯ ಬಯಲಾದರೇನು? ಮನ ಮನ ಲಯವಾಗಿ ಘನಕ್ಕೆ ಘನವಾದ ಶರಣರ ಕಂಡಡೆ ಕೂಡಲಚೆನ್ನಸಂಗಮನೇನು ಶಬ್ದ ಮುಗ್ಧವಾಗಿರಬೇಕಲ್ಲದೆ ಚೋದ್ಯಕ್ಕೆ ಕಾರಣವೇನು ಹೇಳಾ, ಸಂಗನಬಸವಣ್ಣಾ? ನಿಮ್ಮ ಶರಣರು ಕಾಯವೆಂಬ ಕಂಥೆಯ ಕಳೆಯದೆ ಬಯಲಾದರೆ ನಿಜವೆಂದು ಪರಿಣಾಮಿಸಬೇಕಲ್ಲದೆ ಅಂತಿಂತೆನಲುಂಟೆ ಸಂಗನಬಸವಣ್ಣಾ" ಎಂದು ನಿರೂಪಿಸಿದರು.

ಕೆಲವು ಮಹಾತ್ಮರು ಯಾರಿಗೂ ಗೊತ್ತಾಗದಂತೆ ಗುಪ್ತವಾಗಿ ಹೇಗೆ ವಾಸಿಸುತ್ತಿರುವರೆಂಬದು ಮರುಳಶಂಕರದೇವರ ಪ್ರಸ್ತಾವದಿಂದ

ಗೊತ್ತಾಗುತ್ತದೆ. ಮರುಳಶಂಕರದೇವರು ಮಾತಿನ ಪ್ರಸಂಗದಲ್ಲಿ ಆಗಮಗಳೊಳಗಿನ ಸಂಸ್ಕೃತ ಶ್ಲೋಕಗಳನ್ನು ಉದಹರಿಸಿದ್ದು ನೋಡಿದರೆ ಇವರು ಮಹಾವಿದ್ವಾಂಸರೂ ತತ್ವವೇತ್ತರೂ ಇರಲೇಬೇಕೆಂದು ಯಾರಿಗಾದರೂ ಹೊಳೆಯದಿರದು. ಇಂಥ ಮಹಾ ಜ್ಞಾನಿಗಳು ಕೂಡ ತಮ್ಮ ಅಹಂಭಾವವನ್ನು ಧಿಃಕ್ಕರಿಸಿ ಬಸವಣ್ಣನವರ ಪ್ರಸಾದಕುಂಡದಲ್ಲಿ ಸೇವೆಮಾಡುತ್ತ ೧೨ ವರುಷವನ್ನು ಕಳೆದದ್ದು ನೋಡಿದರೆ ಇವರಂಥ ನಿರಹಂಕಾರಿಗಳು ಜಗತ್ತಿನಲ್ಲಿ ದೊರೆಯುವದೇ ಇಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಇವರ ಉದಾಹರಣೆಯು ಮೇಲಿಂದ ಮಹಾಜ್ಞಾನಿಗಳು ಸಹ ಬಸವಣ್ಣನವರ ವಿಷಯದಲ್ಲಿ ಎಷ್ಟು ಭಕ್ತಿವಂತರಾಗಿದ್ದರೆಂಬದು ಸ್ಪಷ್ಟ ವ್ಯಕ್ತವಾಗುತ್ತದೆ. ನಿರಂಜನ ವಸ್ತುವಾದ ಪ್ರಭುದೇವರ ದರ್ಶನಕ್ಕಾಗಿಯೇ ಅವರು ಬದುಕಿದ್ದು ಅವರ ದರ್ಶನವಾದ ನಂತರವೇ ನಿರ್ವಯಲಾದುದನ್ನು ನೋಡಿದರೆ 'ಶರಣರ ಮಹಿಮೆಯನ್ನು ಮರಣದಲ್ಲಿ ನೋಡೆಂಬ' ದಿವ್ಯ ತತ್ವವು ನಮ್ಮ ಜ್ಞಾಪಕಕ್ಕೆ ಬರುತ್ತದೆ. ಆಗಿನ ಕಾಲದಲ್ಲಿ ಇಂಥ ಅಜ್ಞೇಯರು ಮಹಾನುಭಾವಿಗಳು ಆದ ಶಿವಶರಣರು ಬೆಳಕಿಗೆ ಬಾರದೆ ಎಷ್ಟು ಜನರು ಆಗಿ ಹೋದರೋ ನಾವರಿಯೆವು. ಇಂಥ ಸಂದರ್ಭದಲ್ಲಿ ಗ್ರೇ ಎಂಬ ಆಂಗ್ಲ ಕವಿಯು ಹಾಡಿದ ಕವನವು ನಮಗೆ ನೆನಪಾಗುತ್ತದೆ.

Full many a gem of purest ray serene  
The dark unfathomed caves of occean bear  
Full many a flower is born to blush unseen  
And wastes its sweetness on the desert air

ಅಂದರೆ ಅಗಾಧವಾದ ಸಮುದ್ರದ ತಳಭಾಗದಲ್ಲಿ ಉಜ್ವಲವಾದ ಅನರ್ಘರತ್ನಗಳೆಷ್ಟೋ ಅಡಗಿಕೊಂಡಿರುವಂತೆಯೂ ಕಾನನದಲ್ಲಿ ಸುವಾಸಿಕ ಕುಸುಮಗಳನೇಕ ಹುಟ್ಟಿ ತಮ್ಮ ಪರಿಮಳವನ್ನು ಅಲ್ಲಿಯೇ ಲಯಗೊಳಿಸುವಂತೆಯೂ ಅನೇಕ ಮಹಾ ಮಹಿಮರು ಯಾರಿಗೂ ಗೊತ್ತಿಲ್ಲದ ಸ್ಥಳದಲ್ಲಿ ಜನ್ಮತಾಳಿ ಯಾರಿಗೂ ಗೊತ್ತಾಗದಂತೆ ಗತಿಸಿ ಹೋಗುವರು.

# ಶ್ರೀ ಬಸವೇಶ್ವರ.

(ಲೇಖಕಃ —ಆನಂದಕವಿ ಕುರಗುಂದ)

(ಸಾರಂಗ ರಾಗ— ಆದಿತಾಳ.)

ಸಮತಾಭಾವದ ಶ್ರೀ ಬಸವೇಶನ
ಪ್ರೇಮಾದರದಿಂ ಪಾಡುತ ನಮಿಸುವ ॥ಪಲ್ಲ॥

೧

ಭಕ್ತಿಯ ಬೆಳಕನು
ಲೋಕಕೆ ಬೀರಿ
ಮುಕ್ತಿಯ ಮಾರ್ಗವ
ಮೋದದಿ ತೋರಿ
ಜನಕಲ್ಯಾಣಕೆ ಪ್ರಾಣವನೀಡಿದ

೨

ಶಿವಾನುಭವದ
ಸವಿಯನು ತಿಳಿಸಿ
ಮೃದುವಚನಾಮೃತ
ಪದುಳದಿ ಸುರಿಸಿ
ಕೃತಿಯಿಂ ಜನತಾಹಿತವನು ಗೈದಿಹ

೩

ಕಾಯಕ ರೂಪದ
ವರ ಕೈಲಾಸಕೆ
ಸೋಪಾನವನು
ಪ್ರೇಮದಿ ರಚಿಸಿ
ಕೀರ್ತಿಯ ಪೊಂದಿಹ ಸುಂದರ ಶರಣನ

# ಹರಿಹರನ ಗ್ರಂಥಗಳು.

(ಲೇಖಕ:— ಬುದ್ಧಯ್ಯಾ ಪುರಾಣಿಕ ಧಾರವಾಡ.)

ಭೀಮಕವಿಯು (ಕ್ರಿ. ಶ. ೧೩೬೯) ತನ್ನ ಬಸವಪುರಾಣದಲ್ಲಿ,

"ಸರಸ ಮೃದುಮಧುರೋಪಮೆಗಳಂ। ಕುರಿಸೆ ವಸ್ತುಕವರ್ಣಕಂಗಳ। ನೆರಪಿಹರನಂ ಹರಗಣಂಗಳನ್ನೆದೆ ಕೀರ್ತಿಸಿದ। ಧರೆಗುಭಯ ಕವಿಶರಭ ಭೇರುಂ। ಡರಸು ಕವಿ ಹರಬುಧವರನು॥" ಎಂದೂ,

ಪದ್ಮಣಾಂಕನು (ಸು. ಕ್ರಿ. ಶ ೧೩೮೫) ತನ್ನ ಪದ್ಮರಾಜಪುರಾಣದಲ್ಲಿ,

"ಚದುರಿಂಪು ಸೊಂಪಲಂಕೃತಿ ಚಮತ್ಕೃತಿ ರೀತಿ। ಮೃದುಮಧುರ ಸರಸೋಪಮಾದ್ಯಖಿಳಲಕ್ಷಣಾ। ಭ್ಯುದಿತ ವಸ್ತುಕವರ್ಣಕಂಗಳಿಂ ಶಿವನಂ ಶಿವೈಕ್ಯರಂ ನುತಿಸುತಿರ್ದ। ಶಿವಕವೀಂದ್ರಂ" ಎಂದೂ

ಹಾಗು ನೀಲಕಂಠಾಚಾರ್ಯನ (ಸು. ಕ್ರಿ. ಶ. ೧೪೮೫) ತನ್ನ ಆರಾಧ್ಯಚಾರಿತ್ರದಲ್ಲಿ,

"ಕಂಪಮರ್ದಚಂದನದ ಪಂಕದೊಳ್ ಪರಿಮಳಂ। ಪೆಂಪುವಡೆದಂತೆ ರಸಭರಿತ ಪ್ರಬಂಧದೊಳ್। ಸೊಂಪುದೋರುವ ಶಬ್ದ ಸಂದರ್ಭವೊಪ್ಪುತಿರೆ ಪೊಸತಪ್ಪ ಯುಕ್ತಿಯಿಂದಂ॥ ಇಂಪಾಗಿ ಶಿವಗಣ ಪ್ರಕರಮಂ ಕೊಂಡಾಡಿ। ಪಂಪೆಯೊಳು ಪಂಪಾ ವಿರೂಪಾಕ್ಷನೊಳಗವಿದ। ಹಂಪೆಯ ಹರೀಶ್ವರಂ।" ಎಂದೂ,

ಹಂಪೆಯ ಹರಿಹರನನ್ನು ಸ್ತುತಿಸಿದ್ದಾರೆ.

ಮೇಲ್ಕಂಡ ಸ್ತುತಿಪದ್ಯಗಳಲ್ಲಿ ಹರಿಹರನು ಶಿವನನ್ನು ಹಾಗೂ ಶಿವಭಕ್ತರನ್ನು ಸ್ತುತಿಸಿರುವನೆಂದು ಹೇಳಿರುವರಷ್ಟೇ. ಆತನ ಗ್ರಂಥಗಳ ನಾಮನಿರ್ದೇಶವೇನೂ ಮಾಡಿಲ್ಲ. ಇದರಂತೆ ವಿರುಪಾಕ್ಷಪಂಡಿತನು (ಕ್ರಿ. ಶ. ೧೫೮೪) ತನ್ನ ಚನ್ನಬಸವಪುರಾಣದಲ್ಲಿ ಹರಿಹರನ ಗ್ರಂಥಗಳಿಗೆ "ಮಹಾಕಾವ್ಯ" ಎಂದು ಹೇಳಿದ್ದಾನೆ. ಆದರೆ ಶಾಂತಲಿಂಗದೇಶಿಕನು (ಕ್ರಿ. ಶ. ೧೬೭೨) ತನ್ನ ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರದಲ್ಲಿ "ಸರಸ ಮೃದುಮಧುರೋಪಮೆಗಳಿಂದ ವಸ್ತುಕ ವರ್ಣಕದಿಂದ ಶಿವನಂ ಶಿವಗಣಂಗಳನು ರಗಳೆಗಳಿಂದ ನುತಿಸಿ ವಚನದ ರಚನೆ ಹೆಚ್ಚು

ವಂತೆ ಗಿರಿಜೆಯ ಕಲ್ಯಾಣವಂ ರಚಿಸಿದನು. ಶತಕಾಷ್ಟಕಾಕ್ಷರಮಾಲಾ ಗದ್ಯ ಮೊದಲಾದವುಗಳಿಂದ ಶಿವನಂ ನುತಿಸಿದನು" ಎಂದು ಗ್ರಂಥಗಳ ನಾಮನಿರ್ದೇಶಮಾಡಿರುವನಲ್ಲದೆ ಅವುಗಳ ಮಹತ್ವವನ್ನು ಹೇಳಿರುವನು. ಇವುಗಳ ಆಧಾರಗಳ ಮೇಲಿಂದ ಕರ್ನಾಟಕ ಕವಿಚರಿತೆಕಾರರು ತಮ್ಮ ಕವಿಚರಿತೆಯ ಪ್ರಥಮಸಂಪುಟದ ೨೨೪ ನೇ ಪುಟದಲ್ಲಿ "ಹರಿಹರನು ಗಿರಿಜಾಕಲ್ಯಾಣ, ಪಂಪಾಶತಕ, ಶಿವಗಣದ ರಗಳೆಗಳು, ಮುಡಿಗೆಯ ಅಷ್ಟಕ, ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಅಲ್ಲದೆ ರಕ್ಷಾಶತಕ, ಶಿವಾಕ್ಷರಮಾಲೆ ಎಂಬ ಗ್ರಂಥಗಳನ್ನೂ ರಚಿಸಿರುವಂತೆ ತಿಳಿಯಬರುತ್ತದೆ. ಇವು ನಮಗೆ ದೊರೆತಿಲ್ಲ"ವೆಂದು ಬರೆದಿರುವರು.

ಸಿದ್ಧನಂಜೇಶನ (ಸು. ಕ್ರಿ॥ ಶ॥ ೧೬೫೦) ರಾಘವಾಂಕ ಚಾರಿತ್ರದ ೧೪ಳ ನೆಯ ಸಂಧಿಯಲ್ಲಿ ಸೂಚಿಸಿರುವ ವಿಷಯಗಳ ಆಧಾರದ ಮೇಲಿಂದ ಕವಿಚರಿತೆಕಾರ ತಮ್ಮ ಕವಿಚರಿತೆಯ ಪ್ರಥಮ ಸಂಪುಟದ ೨೩೨ ನೆ ಪುಟದಲ್ಲಿ "ಹರೀಶ್ವರನು ಈ ಗ್ರಂಥಗಳನ್ನು ರಘಟಾರೂಪವಾಗಿ ಬರೆದುದರಿಂದ ಜನರು "ರಗಳೆಯ ಕವಿ" ಎಂದು ಈತನನ್ನು ಪರಿಹಾಸ ಮಾಡಿದಂತೆಯೂ ಈ ಅಪವಾದವನ್ನು ನೀಗುವದಕ್ಕಾಗಿ ಈತನು ಗಿರಿಜಾಕಲ್ಯಾಣವೆಂಬ ಮಹಾಕಾವ್ಯವನ್ನು ಬರೆದು ತನ್ನ ಪ್ರೌಢಿಮೆಯನ್ನು ತೋರಿಸಿದಂತೆಯೂ" ಹೇಳಿರುವರು. ಇದರ ಮೇಲಿಂದ ನೋಡಲಾಗಿ ಹರಿಹರನ ಕಾವ್ಯ ಸ್ಫೂರ್ತಿಯಲ್ಲಿ ಇಬ್ಭಾಗ ಮಾಡಿದಂತೆಯಾಗಿರುವದು ಎಂದು ಕಂಡು ಬರುವದು. ಈ ತಿಳುವಳಿಕೆಯ ಪ್ರಕಾರ, ಒಬ್ಬ ಕವಿಯು ರಗಳೆಯಲ್ಲಿ ಎಷ್ಟೇ ಚನ್ನಾಗಿ ಗ್ರಂಥ ರಚನೆ ಮಾಡಲಿ, ಅದೇನೂ ಗಣ್ಯವಾಗತಕ್ಕದ್ದಲ್ಲ; ಕವಿಗೆ ಗೌರವ ಬರ ಬೇಕಾದರೆ ಆತನು ಚಂಪೂಕಾವ್ಯವನ್ನು ರಚಿಸಬೇಕು ಎಂಬ ಭಾವವಿರುವಂತೆ ತೋರುತ್ತದೆ. ಆದರೆ ಈ ವಿಷಯವಾಗಿ ಪ್ರೊಂ ಟಿ. ಎಸ. ವೆಂಕಣಯ್ಯ ಎಂ. ಎ ಕನ್ನಡ ಪ್ರೊಫೆಸರ, ಮಹಾರಾಜರವರ ಕಾಲೇಜು, ಮೈಸೂರ, ಇವರು ತಮ್ಮ ಬಸವರಾಜದೇವರ ರಗಳೆಯ ಪೀಠಿಕೆಯ ೨೧ ನೆಯ ಪುಟದಲ್ಲಿ "ರಗಳೆಗಳನ್ನು ಬರೆದ ಮೇಲೆ ಗಿರಿಜಾಕಲ್ಯಾಣವನ್ನು ಹರಿಹರನು ಬರೆದನೆಂಬ ಅಭಿಪ್ರಾಯವೂ ಜನರ ಹಾಸ್ಯಕ್ಕೆ ಭಯಪಟ್ಟು ಅವರನ್ನು ಮೆಚ್ಚಿಸುವದಕ್ಕಾಗಿ ಚಂಪೂಕಾವ್ಯವನ್ನು ರಚಿಸಿದನೆಂಬ ಐತಿಹ್ಯವೂ ಸಂಶಯಾಸ್ಪದವಾದುದು. ರಗಳೆಗಳನ್ನು ಬರೆದದ್ದಕ್ಕಾಗಿ ಹರಿಹರನು ತಲೆ ಬಗ್ಗಿಸಬೇಕಾದದ್ದೇನೂ

ಇರಲಿಲ್ಲ. ಒಂದು ವೇಳೆ ಆತನು ಗಿರಿಜಾಕಲ್ಯಾಣವನ್ನು ರಚಿಸದೆಯೇ ಹೋಗಿದ್ದರೂ ಆತನಿಗೆ ಕನ್ನಡ ಸಾಹಿತ್ಯದಲ್ಲಿ ದೊರೆತಿರುವ ಸ್ಥಾನಕ್ಕೆ ಏನೂ ಚ್ಯುತಿ ಬರುತ್ತಿರಲಿಲ್ಲ. ಸಾಹಿತ್ಯ ದೃಷ್ಟಿಯಿಂದ ಈ ರಗಳೆಗಳು ಅನೇಕ ಚಂಪೂ ಗ್ರಂಥಗಳಿಗಿಂತಲೂ ಹೆಚ್ಚು ಆದರಣೀಯವೂ ಗೌರವಾರ್ಹವೂ ಆಗಿವೆ.” ಎಂದು ಬರೆದಿರುವರು. ಈ ಪ್ರಕಾರವಾಗಿ ಈ ಕಾವ್ಯಗಳ ಬಗ್ಗೆ ಭಿನ್ನಾಭಿಪ್ರಾಯ ಉಂಟಾಗಬೇಕಾದರೆ “ಪಿಂಡೆ ಪಿಂಡೆ ರುಚಿರ್ಭಿನ್ನಾ” ಎಂಬ ನ್ಯಾಯದಂತೆ ಕೌತುಕದಿಂದ ಕಾವ್ಯಪರಿಶೀಲನೆ ಮಾಡುವವರ ಮನಸಿನ ವೃತ್ತಿಯು ಪರಿಣಾಮವೇ ಹೊರ್ತು ಬೇರೊಂದೇನೂ ಅಲ್ಲ.

ದಕ್ಷಿಣ ದೇಶದೊಳಗೆ ಶಿವಕಂಚಿ ರಾಮೇಶ್ವರ ಮೊದಲಾದ ಶೈವ ದೇವಸ್ಥಾನಗಳೊಳಗೆ ಪ್ರತಿಯೊಂದು ಕ್ಷೇತ್ರದಲ್ಲಿ ಆ ಆ ಕ್ಷೇತ್ರದ ಅಧಿದೈವತವು ಗರ್ಭಸ್ಥಾನದಲ್ಲಿಯೂ ಅದರ ಬಲಭಾಗಕ್ಕೆ ೬೩ ಪುರಾತನರ ವಿಗ್ರಹಗಳ ಸ್ಥಾಪನೆಯೂ ಇರುವದು. ಇದರಂತೆಯೇ ಬುನಾದಿ ಕಾಲದಲ್ಲಿ ಶೈವ ಅಥವಾ ವೀರಶೈವನಾದ ಪ್ರತಿಯೊಬ್ಬ ಕವಿಯು ಮೊದಲು ಶಿವನನ್ನು ಆ ಮೇಲೆ ಶಿವನ ಸದ್ಭಕ್ತರಾದ ೬೩ ಪುರಾತನರನ್ನು ಸ್ತುತಿಸುವ ಪರಿಪಾಠವಿತ್ತು. ಆದುದರಿಂದಲೇ ಶ್ರೀ ನಿಜಗುಣಶಿವಯೋಗಿಯು ತನ್ನ ಆರು ಶಾಸ್ತ್ರಗಳಲ್ಲಿ ಮೊದಲಿನದಾದ ಕೈವಲ್ಯ ಪದ್ಧತಿಯಲ್ಲಿ ಶ್ರೀ ಶಿವನನ್ನು ಸ್ತುತಿಸಿ ಆ ಬಳಿಕ ಕಡೆಗೆ ತ್ರಿವಿದಿಯಲ್ಲಿ ೬೩ ಪುರಾತನರನ್ನು ಸ್ತುತಿಸಿರುವನು. ಹಾಗು ಶ್ರೀ ಶಂಕರಾಚಾರ್ಯರಾದರೂ ತಮ್ಮ ಗ್ರಂಥಗಳಲ್ಲಿ ಬೇಡರ ಕಣ್ಣಪ್ಪನನ್ನು ಸ್ತುತಿಸಿರುವರು. ಇದರ ಅನುಕರಣವನ್ನೇ ಹರಿಹರನು ಮಾಡಿ ಮೊದಲು ಮಹಾಕಾವ್ಯವಾದ ತನ್ನ ಗಿರಿಜಾಕಲ್ಯಾಣದಲ್ಲಿ ಶಿವನನ್ನು ಸ್ತುತಿಸಿ ಬಳಿಕ ೬೩ ಪುರಾತನರನ್ನು ರಗಳೆ ಛಂದಸ್ಸಿನಲ್ಲಿ ಸ್ತುತಿಸಿದ್ದರೂ ಸ್ತುತಿಸಿರಬಹುದು. ಆದುದರಿಂದ ಹರಿಹರನು ಮೊದಲು ಗಿರಿಜಾಕಲ್ಯಾಣವನ್ನು ಆ ಮೇಲೆ ಪುರಾತನರ ರಗಳೆಗಳನ್ನು ಬರೆದಿರಬಹುದೆಂದು ತೋರುತ್ತದೆ.

ಯಾವದಾದರೊಂದು ಹಳೆ ಗ್ರಂಥವನ್ನು ಪರೀಕ್ಷಿಸಬೇಕಾದರೆ ಅದಕ್ಕೆ ಬಹಿರಂಗಸಾಧನಗಳೆಂತಲೂ ಅಂತರಂಗಸಾಧನಗಳೆಂತಲೂ ಹೀಗೆ ಎರಡು ಬಗೆಯ ಸಾಧನಗಳು ಅವಶ್ಯವಾಗಿ ಬೇಕಾಗುವವು. ಈ ವರೆಗೆ ನಾವು ಮೇಲೆ ಹೇಳಿರುವ ಯಾವತ್ತು ಸಾಧನಗಳು ಬಹಿರಂಗಸಾಧನಗಳೆಂದೆ

ನಿಸುವವು. ಇನ್ನು ಅಂತರಂಗ ಸಾಧನಗಳೆಂದರೆ ಸ್ವತಃ ಹರಿಹರ ಕವಿಯು ತನ್ನ ಗ್ರಂಥಗಳಲ್ಲಿ ಅವುಗಳನ್ನು ತಾನೇ ಮಾಡಿರುವನೆಂಬ ಬಗ್ಗೆ ಏನಾದರೂ ಉಲ್ಲೇಖವು ಇರುವದೋ ಹ್ಯಾಗೆ ಈ ರೀತಿಯಾಗಿ ಹರಿಹರನ ಪ್ರತಿ ಒಂದು ಗ್ರಂಥವನ್ನು ಶೋಧಿಸಬೇಕಾಗಿದೆ. ಯಾಕಂದರೆ ಹಿಂದಿನ ಹಳೆ ಗ್ರಂಥಗಳಲ್ಲಿ ಕೆಲವರು ತಮಗೆ ಬೇಕಾಗಿದ್ದನ್ನು ಸೇರಿಸಿದ್ದು ಹಾಗೂ ಬೇಡಾದದ್ದನ್ನು ತೆಗೆದುಹಾಕಿದ್ದು ಕಂಡುಬರುತ್ತದೆ. ಭಗವದ್ಗೀತೆಯಲ್ಲಿಯೂ ಕೂಡ ಇಂಥ ಕ್ಷೇಪಕ ಶ್ಲೋಕಗಳು ಅನೇಕವಿರುವವು ಮತ್ತು ಅವು ಯಾವು ಎಂಬುದನ್ನು ತೋರಿಸಿ ಮಿ॥ ಬಾಳ ಗಂಗಾಧರ ಟಿಳಕರವರು ತಮ್ಮ 'ಗೀತಾರಹಸ್ಯ' ವೆಂಬ ಗ್ರಂಥದಲ್ಲಿ ವಿಸ್ತಾರವಾಗಿ ಬರೆದಿರುವರು. ಯಾವತ್ತು ವಿದ್ವಜ್ಜನರ ಕೈಯಲ್ಲಿ ದಿನಂಪ್ರತಿ ಮಾಡುವ ಭಗವದ್ಗೀತೆಯ ಹಾಡು ಹೀಗಾದ ಮೇಲೆ ಯಾರೂ ದಿಕ್ಕಿಲ್ಲದ ಪರದೇಶಿಯಂತೆ ಇರುವ ವೀರಶೈವ ಹಳೆ ಗ್ರಂಥಗಳ ಹಾಡು ಹೇಗಾಗಿರಬಹುದು ಎಂಬದರ ಕಲ್ಪನೆಯು ಬಂದಕೂಡಲೆ ಮನಸು ಹೌಹಾರಿ ಹೋಗುವದು. ಸದ್ಯದಲ್ಲಿಯೂ ಕೂಡ ಇಂಥ ಬಿಡುವಿಕೆಯೂ ಸೇರಿಸುವಿಕೆಯೂ (*ommissions & commissions*) ನಡೆದಿರುವವು. ಇತ್ತಕಡೆಗೆ ವೀರಶೈವ ವಿದ್ವಾನರು ಯಾರೂ ಮನಸ್ಸು ಹಾಕದ್ದರಿಂದ ಬೆಕ್ಕು ಇಲ್ಲದ ಮನೆಯಲ್ಲಿ ಇಲಿಯ ಚಲ್ಲಾಟವಾದಂತೆಯಾಗಿದೆ. ಇರಲಿ. ಇನ್ನೂ ಅಂತರಂಗಸಾಧನಗಳಿಂದ ಪ್ರತಿಒಂದು ಗ್ರಂಥವನ್ನು ಒರೆಗೆ ಹಚ್ಚಿ ನೋಡೋಣ.

## ೧ ಗಿರಿಜಾಕಲ್ಯಾಣ.

ಹರಿಹರನು ತನ್ನ ಕವಿತಾಚಾತುರ್ಯವನ್ನು ಈ ಗ್ರಂಥದಲ್ಲಿ "ಜಾಣಂ ರಸಿಕಂ ಸುಜನ। ಪ್ರಾಣಂ ಕವಿತಾನಿಧಾನನಧಿಕಂ ಪುಣ್ಯಾ। ಕ್ಷೋಣಂ ವರಗಿರಿಜಾ ಕ। ಲ್ಯಾಣಮನೊರೆದಂ ವಿವೇಕಿ ಹರಿಹರದೇವಂ॥ ಎಂದೂ ಹಾಗೂ ಈ ಗ್ರಂಥದ ಉತ್ಕೃಷ್ಟತೆಯನ್ನು "ಸುರತರುವಿನಂತೆ ಸುಜನರ। ಸಿರಿಯಂತೆ ಸರೋಜದಂತೆ ಸುಧೆಯಂತೆ ಸುಧಾ। ಕರ ಕಿರಣದಂತೆ ಹಂಪೆಯ ಹರಿದೇವನ ಕಾವ್ಯಮಖಿಲಸೇವ್ಯಂ ನವ್ಯಂ॥" ಎಂದೂ ಹೇಳಿಕೊಂಡಿರುವನಲ್ಲದೆ ಪ್ರತಿಒಂದು ಆಶ್ವಾಸದ ಕೊನೆಯಲ್ಲಿ "ಇದು ಸಮಸ್ತ ಸುರಾಸುರ ನಿಕರ ಮಕುಟಖಚಿತ ದಿನಕರ ಕರಾಧಿಕ್ಯ ಮಾಣಿಕ್ಯ ಪ್ರಭಾ ಪುಂಜರಂಜಿತ ಸಂಪಚ್ಚರಣನೆನಿಪ ಪಂಪಾ ವಿರೂಪಾಕ್ಷ ಶ್ರೀ ಪಾದಕಮಲ ಮಕರಂದ ಮಧುಕರಾಯಮಾನ ಸತ್ಕವೀಶ್ವರ ಹಂಪೆಯ ಹರಿ

ಹರದೇವ ವಿರಚಿತಮಪ್ಪ ಶ್ರೀ ಗಿರಿಜಾಕಲ್ಯಾಣ ಮಹಾಪ್ರಬಂಧದೊಳ್" ಎಂಬ ಗದ್ಯವನ್ನು ಹೇಳಿರುವನು.

## ೨ ಪಂಪಾಶತಕ.

ಇದು ಪಂಪಾವಿರೂಪಾಕ್ಷನ ಸ್ತುತಿಯಾಗಿದೆ. ಇದರಲ್ಲಿ ನೂರು ವೃತ್ತಗಳಿವೆ. ಈ ಶತಕದ ಉತ್ಕೃಷ್ಟತೆಯನ್ನು ಹರಿಹರನು ಈ ಕಾವ್ಯದಲ್ಲಿ " ಜಯಜಯ ಪುಣ್ಯಮಾರ್ಗಮಿದು ಸಾತ್ವಿಕ ಲಕ್ಷಣ ಮಿಂತಿದಾದ್ಯರ। ನ್ವಯಮಿದನೂನ ಭಕ್ತಿರಸಪೂರಮಿದುತ್ತಮ ಶೀಲಭಕ್ತರಾ॥ ಶ್ರಯಮಿದು ತಪ್ಪದೆಂದು ಶರಣರ್ ಮಿಗೆ ಬಣ್ಣಿಸೆ ಪೇಳ್ದನಾಹ ಹಂ। ಪೆಯ ಹರಿದೇವನೀ ಶತಕಮಂ ಸಕಲೇಷ್ಟಫಲಪ್ರದಾತೃವಂ॥" ಎಂದು ಕೊನೆಯ ಪದ್ಯದಲ್ಲಿ ಹೇಳಿದ್ದಾನೆ.

## ೩ ರಗಳೆಗಳು.

ಶರಣರಗಳೆ, ನಂಬಿಯಣ್ಣನ ರಗಳೆ, ಶಿವಗಣದ ರಗಳೆಗಳು, ಎಂಬ ಹೆಸರುಳ್ಳ ಕೈಬರಹದ ಹಳೇ ಗ್ರಂಥಗಳು ದೊರೆಯುತ್ತವೆ. ಅವುಗಳಲ್ಲಿ ಹಾಲಿನಲ್ಲಿ ನೀರು ಬೆರಸಿದಂತೆ ಹರಿಹರನ ಅರವತ್ತು ಮೂರು ಪುರಾತನರ ರಗಳೆಗಳ ಜೊತೆಗೆ ಇನ್ನೂ ಕೆಲವು ಶಿವಶರಣರ ರಗಳೆಗಳು ಸಂಕಲನವಾಗಿರುತ್ತವೆ. ಈ ಸಂಕಲನಗಳಲ್ಲಿರುವ ಯಾವತ್ತು ರಗಳೆಗಳು ಹರಿಹರನವೆಂದು ಭಾಸವಾಗುತ್ತದೆ. ಆದುದರಿಂದಲೆ ಕವಿಚರಿತೆಕಾರರಂಥ ವಿದ್ವನ್ಮಣಿಗಳು ಕೂಡ ತಮ್ಮ ಕವಿಚರಿತೆಯ ಪ್ರಥಮ ಸಂಪುಟದ ೨೩೨ ನೆಯ ಪುಟದಲ್ಲಿ "ಶಿವಗಣದ ರಗಳೆಗಳು ಎಂಬ ಗ್ರಂಥವು ಪ್ರಾಯಿಕವಾಗಿ ರಘಟಾರೂಪವಾಗಿದೆ. ಅಲ್ಲಲ್ಲಿ ಗದ್ಯಕಂದ ವೃತ್ತಗಳೂ ದೊರೆಯುತ್ತಿವೆ. ಇದರಲ್ಲಿಯ ರಗಳೆಗಳ ಸಂಖ್ಯೆಯು ಇಷ್ಟೇ ಎಂದು ನಿರ್ಧರಿಸಲಾಗುವದಲ್ಲ. ಕೆಲವರು ನೂರೊಂದು ರಗಳೆಗಳೆಂದೂ, ಕೆಲವರು ನೂರಿಪ್ಪತ್ತು ರಗಳೆಗಳೆಂದೂ ಹೇಳುತ್ತಾರೆ. ನಮಗೆ ಸಂಪೂರ್ಣವಾದ ಪ್ರತಿಯು ದೊರೆತಿಲ್ಲ. ಈ ಗ್ರಂಥದಲ್ಲಿ ತಮಿಳ ಭಾಷೆಯಲ್ಲಿ ಬರೆದಿರುವ ಪೆರಿಯಪುರಾಣವೆಂಬ ಗ್ರಂಥದಲ್ಲಿ ವರ್ಣಿತರಾದ ಅರವತ್ತುಮೂವರೆಂಬ ಶಿವಭಕ್ತರ ಮೇಲೆಯೂ ಇತರ ಶಿವಭಕ್ತರ ಮೇಲೆಯೂ ರಗಳೆಗಳು ದೊರೆಯುತ್ತವೆ. ಒಂದು ಪ್ರತಿಯ ಅಂತ್ಯದಲ್ಲಿ ಈ ಪದ್ಯವಿದೆ. ಹಂಪೆಯ ಶಂಕರದೇವರ। ಹಂಪೆಯ ಗುರುಮಾದಿರಾಜದೇವರ ಮತ್ತಂ। ಹಂಪೆಯ

ಮಾವರಶರ ದಮಿ। ಯಿಂ ಪೊಗಳ್ದಂ ರಸಿಕ ಚಕ್ರಹರಿಹರ ದೇವಂ॥" ಎಂದು ಬರೆದಿರುವರು.

ಈ ಆಧಾರದ ಮೇಲಿಂದಲೂ ಮತ್ತು ಶರಣರಗಳೆ ಹಾಗು ನಂಬಿಯಣ್ಣನ ರಗಳೆ ಎಂಬ ಕೈಬರಹದ ಎರಡು ಗ್ರಂಥಗಳ ಆಧಾರದ ಮೇಲಿಂದಲೂ ಪ್ರೊಫೇಸರ ವೆಂಕಣಯ್ಯನವರು ತಮ್ಮ ಬಸವರಾಜ ದೇವರ ರಗಳೆಯ ಪೀಠಿಕೆಯ ೧೨ ನೆಯ ಪುಟದಲ್ಲಿ "ಈ ಸಂಕಲನಗಳಲ್ಲಿರುವ ರಗಳೆಗಳಲ್ಲಿ ಕೆಲವು ಹರಿಹರ ಕೃತವಾದವು; ಕೆಲವು ಹರಿಹರನವಲ್ಲ, ಬೇರೆ ಕವಿಗಳು ರಚಿಸಿದವು; ಇನ್ನೂ ಕೆಲವು ಹರಿಹರಕೃತವೆಂದು ಸುಪ್ರಸಿದ್ಧವಾದುವಲ್ಲ; ಆದರೆ ಆತನವೇ ಎಂದು ತೋರುವವು ಎಂದು ಹೀಗೆ ಮೂರು ಗುಂಪುಗಳನ್ನು ಮಾಡಿರುವರು.

೧ ನೇಯ ಗುಂಪಿಗೆ ಸೇರಿದ ಹರಿಹರಕೃತವಾದವು ಎಂದು ಸುಪ್ರಸಿದ್ಧವಾದ ಅರವತ್ತುಮೂವರ ಪುರಾತನರ ರಗಳೆಗಳನ್ನು ತಾನೇ ರಚಿಸಿದಿರುವದಾಗಿ ಹರಿಹರನೇ ತನ್ನ ತಿರುನೀಲಕಂಠರ ರಗಳೆಯ ಆದಿಯಲ್ಲಿ "ನೋಡೆಲೆ ಹಂಪೆಯ ಪ್ರಭುವಿನೊಳ್ ಸಲೆಸಂದರುವತ್ತುಮೂವರಂ। ಕೂಡೆ ಜಗಜ್ಜನಂ ಬಯಸಿ ಬಣ್ಣಿಸುತಿಪ್ಪರುವತ್ತುಮೂವರಂ। ಪಾಡುತ ವಾಡುತಂ ಪೊಗಳ್ವೆನುನ್ನತಿವೆತ್ತರುವತ್ತುಮೂವರಂ। ಬೇಡಿತನೀವರಂ ಸುಕೃತಜೀವರನಪ್ರತಿಮ ಪ್ರಭಾವರಂ॥ ಎಂದು ಹೇಳಿರುವನು. ಆದುದರಿಂದ ಈ ೬೩ ಪುರಾತನರ ರಗಳೆಗಳು ಹರಿಹರಕೃತವೆಂದು ನಂಬಲಿಕ್ಕೆ ಯಾವ ಅಭ್ಯಂತರವು ಇಲ್ಲವು. ಈ ಪುರಾತನರು ಅರುವತ್ತುಮೂರೆಂದು ಉಕ್ತರಾಗಿದ್ದರೂ ನಿಜವಾಗಿಯೂ ಅವರ ಸಂಖ್ಯೆಯು ಅರುವತ್ತಾರೆಂದು ಅರವತ್ತುಮೂವರ ಕಥಾಗರ್ಭದ ಕೊನೆಯಲ್ಲಿ "ಮತ್ತಂ ಅರವತ್ತುಮೂರನೆಯವರು ಹಿಂದಿಬ್ಬರೊಂದಾಗಿ ಮೆರೆದ ಎಡಗಣ ಪೆರುಮಾಳೆಯರು ಕೂಡಿ ಅರವತ್ತುಮೂವರು ಪುರಾತನರು ಮತ್ತಂ 'ಲೋಕಂ ದಣಿಯೆ ಹೊಗಳೆ ಹೊನ್ನ ಮಳೆಯುಮಂ ಕರೆಸಿದ ಕರಿಕಾಲಚೋಳ, ಕೈಲಾಸಮಂ ಸೂರೆಗೊಂಡ ನಂಬಿಯಕ್ಕಂಗಳು, ಶಿವನಂ ದಣಿಯೆ ಉಣಿಸಿದ ಮಾದರ ಚನ್ನಯ್ಯಂಗಳೊಳಗಾಗಿ ಚೋಳದೇಶದ ಅರುವತ್ತಾರು ಪೂಜೆ ಪುರಾತನರು ಇಂತು ಶಿವನೊಳು ಶಂಕರನೊಳು ಪರಮಭಕ್ತಿಯಿಂ ಶರೀರಂ ಬೆರಸಿ ಸಂದ ಅರುವತ್ತುಮೂವರ ದಿವ್ಯ ಚರಿತ್ರಮಂ ಹಂಪೆಯ ಮಾದರಸರ ಕಾರುಣ್ಯದ ಶಿಶು ಹಂಪೆಯ ಹರಿಹರದೇವಂ ಬಿನ್ನಸಂಗೆಯ್ವ

ಪುರಾಣಮಂ ಸಕಲ ಭಕ್ತರು ಸುಚಿತ್ತದಿಂದ ಅವಧರಿಸುವುದೆಂತೆಂದೊಡೆ" ಎಂದು ಕೊನೆಯಲ್ಲಿ ಇರುವ ಈ ವಾಕ್ಯಗಳಿಂದ ಗೊತ್ತಾಗುತ್ತದೆ. ಆದುದರಿಂದ ಪುರಾತನರ ರಗಳೆಗಳು ಹರಿಹರನವೆಂದು ಸಹಜ ಸಿದ್ಧವಾಗುವದು.

ಪ್ರೊಫೆಸರ ವೆಂಕಣಯ್ಯನವರು ತಮ್ಮ ಬಸವರಾಜದೇವರ ರಗಳೆಯ ಪೀಠಿಕೆಯ ೧೩ ನೆಯ ಪುಟದಲ್ಲಿ "ಹರಿಹರನವಲ್ಲದ ರಗಳೆಗಳ ಸಂಖ್ಯೆಯು ಕಡಿಮೆ; ಅವು ಆತನವಲ್ಲವೆಂದು ಅವುಗಳ ಅಂಕಿತ ಮೊದಲಾದವುಗಳಿಂದ ತಿಳಿದುಬರುತ್ತದೆ. ಉದಾಹರಣೆಗೆ-ಗಂಗೋತ್ಪತ್ತಿಯ ರಗಳೆಯಲ್ಲಿ ಅದು ಪಾಲ್ಕುರಿಕೆ ಸೋಮನಾಥನದೆಂದು ಸ್ಪಷ್ಟವಾಗಿ ಉಕ್ತವಾಗಿದೆ; ಪುನರ್ದೀಕ್ಷೆಯ ರಗಳೆಯಲ್ಲಿ ಶಂಕರಲಿಂಗ ಎಂಬ ಅಂಕಿತವೂ ಚೋಳಿಯಕ್ಕನ ರಗಳೆ ಅಮ್ಮವ್ವೆಯರಗಳೆ ಎಂಬಿವುಗಳಲ್ಲಿ 'ಗುರುವಿಶ್ವೇಶ' ಎಂಬ ಅಂಕಿತವೂ ದೊರೆಯುತ್ತವೆ ಎಂದು ಬರೆದಿರುವರು. ಇವುಗಳ ವಿಷಯವಾಗಿ ಅಂತರಂಗ ಬಹಿರಂಗ ಮೊದಲಾದ ಯಾವ ಆಧಾರಗಳನ್ನು ಕೊಡದೆ ಪ್ರೊಫೇಸರ ವೆಂಕಣಯ್ಯನವರು ಅಂಕಿತ ಮೊದಲಾದವುಗಳಿಂದಲೆ ಇವುಗಳನ್ನು ಬಿಟ್ಟಿರುವರು.

ಮೂರನೆಯ ಗುಂಪಿಗೆ ಸೇರಿದ ಹರಿಹರಕೃತವೆಂದು ಸುಪ್ರಸಿದ್ಧವಲ್ಲದಿದ್ದರೂ ಆತನವೆಂದು ತೋರುದ ರಗಳೆಗಳ ಸಂಖ್ಯೆ ಹೆಚ್ಚು. ಉದಾಹರಣೆಗೆ ಬಸವರಾಜದೇವರ ರಗಳೆ, ಮಹಾದೇವಿಯಕ್ಕಗಳ ರಗಳೆ, ರೇವಣಸಿದ್ಧೇಶ್ವರ ರಗಳೆ, ಶಂಕರದಾಸಿಮಯ್ಯನ ರಗಳೆ, ದಕ್ಷಾಧ್ವರ ರಗಳೆ, ಪಿಂಡೋತ್ಪತ್ತಿಯ ರಗಳೆ, ಪ್ರಭುವಿನ ರಗಳೆ, ತೆಲಗುಜೊಮ್ಮಣ್ಣನ ರಗಳೆ, ಹೇದೂರ ಹೆಂಗೂಸಿನ ರಗಳೆ, ಕೋಳೂರ ಕೊಡಗೂಸಿನ ರಗಳೆ, ಕೆಂಭಾವಿಯ ಭೋಗಣ್ಣನ ರಗಳೆ ಇತ್ಯಾದಿ. ಇವುಗಳ ವಿಷಯವಾಗಿ ಪ್ರೊಫೇಸರ ವೆಂಕಣಯ್ಯನವರು ತಮ್ಮ ಬಸವರಾಜದೇವರ ರಗಳೆಯ ಪೀಠಿಕೆಯ ೧೩ ವ ೧೪ ನೆಯ ಪುಟಗಳಲ್ಲಿ "ರಚನಾಕ್ರಮದಲ್ಲಿಯೂ ಅಂಕಿತದಲ್ಲಿಯೂ ಅರವತ್ತುಮೂವರು ಪುರಾತನರ ರಗಳೆಗಳಿಗೂ ಇವಕ್ಕೂ ವಿಶೇಷವಾದ ಹೋಲಿಕೆ ಇರುವದರಿಂದ ಇವು ಹರಿಹರಕೃತವೆಂಬುವದಕ್ಕೆ ಈ ಹೋಲಿಕೆ ಸಾಧನವಾಗಿದೆ. ಹಾಗೂ ಹರಿಹರನು ಅರುವತ್ತುಮೂವರ ರಗಳೆಗಳನ್ನಲ್ಲದೆ ಇನ್ನೂ ಅನೇಕ ರಗಳೆಗಳನ್ನು ಬರೆದನೆಂದು ತಿಳಿದುಬರುವದರಿಂದಲೂ ಹಾಗೂ ಈ ರಗಳೆಗಳನ್ನು ಬೇರೊಬ್ಬ ಕವಿ ಬರೆದನೆಂಬುದಕ್ಕೆ

ಆಧಾರವಾವದೂ ಇಲ್ಲದಿರುವದರಿಂದಲೂ ಇವು ಆತನವೆಂದು ಅಂಗೀಕರಿಸುವದು ಸ್ವಾಭಾವಿಕವೂ ನ್ಯಾಯುವೂ ಆಗಿದೆ" ಎಂದು ಹೇಳಿರುವರು.

ಇವರಾದರು ಈ ಗ್ರಂಥಗಳು ಹರಿಹರನವು ಎಂಬುವದಕ್ಕೆ ಅಂತರಂಗ ಬಹಿರಂಗ ಸಾಧನಗಳನ್ನು ಕೊಡದೆ ಕೇವಲ ಎರಡರಲ್ಲಿಯು ಸಮಾನ ಗುಣಗಳಿಂದ ಅವು ಹರಿಹರನವು ಆಗಬಹುದೆಂದು ಊಹಿಸಿರುವರು. ಇದು ತೀರ ತಪ್ಪೆಂದು ತೋರುವದು. ಅದು ಹೇಗಂದರೆ— ರಚನಾಕ್ರಮದಲ್ಲಿ ಅರವತ್ತುಮೂರು ಪುರಾತನ ರಗಳೆಗಳಿಗೂ ಇವಕ್ಕೂ ವಿಶೇಷವಾದ ಹೋಲಿಕೆ ಇರುವದರಿಂದ ಇವು ಹರಿಹರ ಕೃತವೆಂದು ಹೇಳುವರು. ಆದರೆ ಇವಕ್ಕೂ ೨ ನೆಯ ಗುಂಪಿಗೆ ಸೇರಿಸಿದ ಹರಿಹರನವಲ್ಲದ ರಗಳೆಗಳಿಗೂ ರಚನಾ ಕ್ರಮದಲ್ಲಿ ಹೋಲಿಕೆ ಇರುವದು. ಅಂದ ಮೇಲೆ ೨ ನೆಯ ಗುಂಪಿನ ರಗಳೆಗಳು ಹರಿಹರನವು ಯಾಕಾಗಬಾರದು? ಅಥವಾ ಇವು ಹರಿಹರನವಲ್ಲವೆಂದು ಯಾಕಾಗಬಾರದು? ಕೇವಲ ರಚನಾ ಕ್ರಮದಿಂದ ಯಾವದೂ ನಿಶ್ಚೈಯಿಸಲಿಕ್ಕೆ ಬರುವದಿಲ್ಲ. ಇನ್ನು ಅಂಕಿತದಲ್ಲಿ ಪುರಾತನರ ರಗಳೆಗಳಿಗೂ ಇವಕ್ಕೂ ವಿಶೇಷವಾದ ಹೋಲಿಕೆ ಇರುವದರಿಂದ ಇವು ಹರಿಹರಕೃತವೆಂದು ಅನ್ನುವರು. ಆದರೆ ಶ್ರೀ ನಿಜಗುಣ ಶಿವಯೋಗಿಗಳಂತೆ 'ಶಂಭುಲಿಂಗ'ವೆಂಬ ಅಂಕಿತವನ್ನು ಇಟ್ಟುಕೊಂಡು ಪದಗಳನ್ನು ಮಾಡುವವರು ಈಗ್ಯೂ ವೀರಶೈವರಲ್ಲಿ ಜೀವಂತವಿರುವರು. ಅವರ ಹಾಡುಗಳನ್ನು ಕೇಳುವವರಿಗೆ ಅಂಕಿತಗಳ ಮೇಲಿಂದ ಇವು ಒಬ್ಬನವೇ ಎಂದು ಭಾಸವಾಗುತ್ತದೆ. ಆದರೆ ವಸ್ತು ಸ್ಥಿತಿಯು ಹಾಗೆ ಇರುವದಿಲ್ಲ. ರಗಳೆಗಳ ಸ್ಥಿತಿಯಾದರೂ ಈ ಪದ್ಯಗಳಂತೆ ಇರುವದು. ಆದುದರಿಂದ ಅಂಕಿತಗಳ ಮೇಲೆ ಅಷ್ಟು ಭರವಸೆ ಕೊಡಲಿಕ್ಕೆ ಬರುವದಿಲ್ಲ.

ಕವಿಚರಿತೆಕಾರರು ತಮ್ಮ ಕವಿಚರಿತೆಯ ಪ್ರಥಮ ಸಂಪುಟದ ೨೩೨ ನೆಯ ಪುಟದಲ್ಲಿ ನಿರಾಧಾರವಾಗಿ ಹೇಳಿರುವದನ್ನು ಆಧಾರವಾಗಿ ಇಟ್ಟುಕೊಂಡು ಹರಿಹರನು ಅರವತ್ತುಮೂವರ ರಗಳೆಗಳನ್ನಲ್ಲದೆ ಇನ್ನೂ ಅನೇಕ ರಗಳೆಗಳನ್ನು ಬರೆದನೆಂದು ತಿಳಿದುಬರುತ್ತದೆಂದು ಪ್ರೊ. ವೆಂಕಣ್ಣಯ್ಯನವರು ಬರೆದಿರುವರು. ಆದರೆ ಇದರಿಂದ ಕುರುಡನ ಕೈ ಕುರುಡ ಹಿಡಿದು ಪಾರಾದಂತೆಯಾಗಿರುವದು. ಮಹಿಮಾ ರಗಳೆ, ಭೃಂಗಿ ರಗಳೆ ಇವುಗಳಲ್ಲಿ ಹರಿಹರನ ಹೆಸರೋ ಅಥವಾ ಆತನ ಗುರುಪರಂಪರೆಯೋ ಉಕ್ತವಾಗಿ ಅವು ಹರಿಹರನವೆಂಬುದು ಸ್ಥಿರ

ಪಡುತ್ತವೆ ಎಂದು ಹೇಳುವರು. ಇದರ ಬಗ್ಗೆ ರಗಳೆಗಳೊಳಗಿನ ಶ್ಲೋಕ ಗಳನ್ನು ಕೊಟ್ಟಿದ್ದರೆ ಒಳಿತಾಗುತ್ತಿತ್ತು. ಆದರೆ ಹಾಗೆ ಮಾಡಿಲ್ಲ. ಮೇಲಾಗಿ ಇಂಥ ಸಂಶಯಕ್ಕೆ ನಾವು ಈ ಮೊದಲೇ ಉತ್ತರಕೊಟ್ಟಿರುವೆವು. ಮೂರ ನೆಯ ಗುಂಪಿಗೆ ಸೇರಿದ ಭೋಗಣ್ಣನ ರಗಳೆಯನ್ನು ಹರಿಹರನು ಬರೆದ ನೆಂಬುದಕ್ಕೆ ಅದರ ಅಂಕಿತ ರಚನಾಕ್ರಮಗಳ ಆಧಾರವಲ್ಲದೆ ಪಂಪಾಶ ತಕದಲ್ಲಿಯೂ ಆಧಾರವು ದೊರೆಯುತ್ತದೆ. ಆ ಶತಕದಲ್ಲಿ ಶಿವಶರಣರ ಮಹಿಮೆಯನ್ನು ಕೊಂಡಾಡುವಾಗ ಪುರಾತನರಲ್ಲಿ ಕೆಲವರ ಹೆಸರಿನ ಜೊತೆಗೆ ಜೊಮ್ಮಯ್ಯ, ಭೋಗಣ್ಣ, ದಾಸಿಮಯ್ಯ, ಕೊಡಗೂಸು ಇವರ ಹೆಸರುಗಳು ಉಕ್ತವಾಗಿವೆ, (ಪ. ೫೯, ೬೬, ೬೭). ಅಲ್ಲಿ ಸೂಚಿತವಾಗಿರುವ ಅವರ ಮಹಿಮೆಯನ್ನು ನೋಡಿದರೆ ಅವರು ತೆಲಗು ಜೊಮ್ಮಯ್ಯ, ಕೆಂಭಾವಿಯ ಭೋಗಣ್ಣ, ಜೇಡರ ದಾಸಿಮಯ್ಯ, ಕೋಳೂರ ಕೊಡ ಗೂಸು ಎಂದು ಗೊತ್ತಾಗುತ್ತದೆ. ಪುರಾತನರ ರಗಳೆಗಳನ್ನು ಬರೆದಂತೆಯೇ ಈ ಶಿವಶರಣರ ರಗಳೆಗಳನ್ನೂ ಹರಿಹರನು ಬರೆದಿರಬೇಕೆಂಬುದರಲ್ಲಿ ಸಂಶಯವಿಲ್ಲ. ಮೇಲೆ ಹೇಳಿದ ರಗಳೆಗಳ ಸಂಕಲನಗಳಲ್ಲಿ ಈ ಎಲ್ಲ ರಗ ಳೆಗಳೂ ಸಿಕ್ಕುತ್ತವೆ ಎಂದು ಬರೆದಿರುವರು. ಆದರೆ ಪಂಪಾಶತಕದಲ್ಲಿ ಹೇಳಿರುವ ಶಿವಶರಣರ ಮಹಿಮೆಗಳ ಕೂಡ ಜೊಮ್ಮಯ್ಯ, ಭೋಗಣ್ಣ, ದಾಸಿಮಯ್ಯ ಮತ್ತು ಕೊಡಗೂಸುಗಳ ಮಹಿಮೆಗಳನ್ನು ಹೇಳಿದ ಮಾತ್ರಕ್ಕೆ ಪುರಾತನರ ರಗಳೆಗಳನ್ನು ಬರೆದಂತೆ ಹರಿಹರನು ಇವರ ರಗಳೆಗಳನ್ನು ಬರೆದಿರಬೇಕೆಂಬುವ ನಿರ್ಬಂಧವಲ್ಲ. ಕಡೆಗೆ ಈ ರಗಳೆಗಳನ್ನು ಬೇರೊಬ್ಬ ಕವಿಯು ಬರೆದನೆಂಬುದಕ್ಕೆ ಆಧಾರವಾವುದೂ ಇಲ್ಲದಿರುವದರಿಂದಲೂ ಅವು ಹರಿಹರನವೆಂದು ಅಂಕೀಕರಿಸುವದು ಸ್ವಾಭಾವಿಕವೂ ನ್ಯಾಯವೂ ಆಗಿದೆ ಎಂದು ಬರೆದಿರುವರು. ಕರ್ತೃಗಳ ಹೆಸರಿಲ್ಲದ ಮೂಲಕ ಇವು ಹರಹರನವು ಎನ್ನಬೇಕಾದರೆ ಕವಿಚರಿತೆಕಾರರು ಶೋಧಿಸಿದ ಎಷ್ಟೋ ಗ್ರಂಥಗಳಿಗೆ ಕರ್ತೃಗಳೇ ಗೊತ್ತಾಗಿಲ್ಲ; ಅಂದ ಮೇಲೆ ಅವು ಯಾವತ್ತು ಗ್ರಂಥಗಳು ಹರಿಹರನವು ಎನ್ನಬೇಕಾದೀತು. ಒಡೆಯನು ಗೊತ್ತಾಗದ ವಸ್ತುವಿಗೆ ಸಾರ್ವಭೌಮ ಸರಕಾರದವರು ಮಾಲಿಕರಾಗುವಂತೆ ಬೇವಾ ರಸ ಗ್ರಂಥಗಳಿಗೆ ಹರಿಹರನೇ ಮಾಲಿಕನೆಂದು ಇವರ ಹೇಳಿಕೆಯು ಮೇಲಿಂದ ಆಗುವದು ಈ ಯಾವತ್ತು ಮೇಲಿನ ಕಾರಣಗಳಿಂದ ವಿಚಾ ರಿಸಲಾಗಿ ೩ ನೆಯ ಗುಂಪಿಗೆ ಸೇರಿದ ಯಾವತ್ತು ರಗಳೆಗಳು ಹರಿಹರನ ವಲ್ಲವೆಂದು ಸ್ಪಷ್ಟ ಗೊತ್ತಾಗುವದು.

ಹರಿಹರಕೃತವೆಂದು ತೋರುವ ೩ ನೆಯ ಗುಂಪಿಗೆ ಸೇರಿದ ಅನೇಕ ರಗಳೆಗಳಲ್ಲಿ ಬಸವರಾಜದೇವರ ರಗಳೆಯು ಒಂದಾಗಿರುವದು. ಈ ಬಸವ ರಾಜದೇವರ ರಗಳೆಯು ಬಗ್ಗೆ ಇದು ಹರಿಹರನದೆಂದು ಪ್ರೊಫೆಸರ ವೆಂಕಣ್ಣಯ್ಯನವರು ತಮ್ಮ ಬಸವರಾಜದೇವರ ರಗಳೆಯ ಪೀಠಿಕೆಯ ಪುಟ ೧೫ ರಿಂದ ೨೧ ರ ವರೆಗೆ ಅನೇಕ ಊಹೆಗಳನ್ನು ಮಾಡಿ ಅದು ಹರಿಹರನದು ಎಂದು ಸಿದ್ಧಮಾಡಿರುವದನ್ನು ಚನ್ನಾಗಿ ಪರಿಶೀಲಿಸಬೇಕಾಗಿದೆ. ಪ್ರೊಫೆಸರ ವೆಂಕಣ್ಣಯ್ಯನವರು ತಮ್ಮ ಬಸವರಾಜದೇವರ ರಗಳೆಯಲ್ಲಿ ೧೫ ನೆಯ ಪುಟವಲ್ಲಿ "ಸಿದ್ಧನಂಜೇಶನ ರಾಘವಾಂಕ ಚರಿತ್ರದಲ್ಲಿ ಒಂದು ಕಡೆ ರಾಘವಾಂಕನು ಕುಮಾರವ್ಯಾಸನಿಗೆ ಹರಿಹರನ ಮಹತ್ವವನ್ನು ವರ್ಣಿಸುವ ಸಂದರ್ಭದಲ್ಲಿ (ಸಂ. ೧೪ ಪ. ೧೨೦)

ಮತ್ತೆ ಕೇಳೆಲೆ ಕುಮಾರವ್ಯಾಸ ಬಸವಿನಿಪ್ಪತ್ತೈದು ಸ್ಥಲದ ರಗಳೆಯು ಮಾಡಿ ನಲಿವುತ್ತುದಾತ್ತ ಭಕ್ತಿಯೊಳು ವಿರೂಪಾಕ್ಷನೆಡೆಗೊಯ್ಯಲಿನಿತು ಮಿಗಿಲಾದುದೆಂದು । ಹೊತ್ತಗೆಯ ತೆಗೆದುಕೊಂಡುರೆ ನುಂಗಿದಂ ಚನ್ನೆ ಇತ್ತ ಪಾಲ್ಗುಡಿದಂತೆ ಸರ್ವರುಂ ಪೊಗಳಿದರು. ಚಿತ್ತಜಮದಾರಣ್ಯದಾವ ಹರಿಹರದೇವ ಕವಿಚಕ್ರವರ್ತಿಯೆಂದು ॥ ಎಂಬ ಪದ್ಯವು ದೊರೆಯುತ್ತದೆ.

ಇದರಲ್ಲಿ ಪ್ರಶಸ್ತಪಡಿಸಿರುವ ಭಾಗದಿಂದ ಹರಿಹರನು ಬಸವಣ್ಣನವರ ಚರಿತ್ರೆಯನ್ನು ಇಪ್ಪತ್ತೈದು ಸ್ಥಲಗಳುಳ್ಳ ರಗಳೆಯ ಗ್ರಂಥವನ್ನಾಗಿ ರಚಿಸಿದನೆಂದು ಗೊತ್ತಾಗುತ್ತದೆ. ಈ ಗ್ರಂಥವೇ ಬಸವರಾಜದೇವರ ರಗಳೆಯಾಗಿರಬೇಕು. ನಮಗೆ ದೊರೆತಿರುವ ಸುಮಾರು ಹದಿಮೂರು ಸ್ಥಲಗಳಲ್ಲಿ ಕಥೆ ಅರ್ಧವಾಗಿರುವದು ಇದನ್ನು ಸಮರ್ಥಿಸುತ್ತದೆ" ಎಂದು ಬರೆದಿರುವರು. ರಾಘವಾಂಕ ಚರಿತ್ರಕರ್ತೃವಾದ ಸಿದ್ಧನಂಜೇಶನ (ಸು. ಕ್ರಿ. ಶ. ೧೬೫೦) ಕಾಲಕ್ಕೂ ಚರಿತ್ರನಾಯಕನಾದ ರಾಘವಾಂಕ (ಸು. ಕ್ರಿ. ಶ. ೧೨೦೦) ನಿಗೂ ಸುಮಾರು ೪೫೦ ವರ್ಷಗಳ ಅಂತರವಿರುವದು; ಮತ್ತು ಸುಮಾರು ಕ್ರಿ. ಶ. ೧೨೦೦ ರಲ್ಲಿದ್ದ ರಾಘವಾಂಕನು ಸುಮಾರು ಕ್ರಿ. ಶ. ೧೪೩೦ ರಲ್ಲಿದ್ದ ಕುಮಾರವ್ಯಾಸನಿಗೆ ಹರಿಹರನು ಮಹತ್ವವನ್ನು ವರ್ಣಿಸಿದನೆಂದು ಹೇಳಿದ ಮಾತಿಗೆ ಸುಮಾರು ೨೩೦ ವರ್ಷಗಳ ಅಂತರವಾಗುವದು. ಸಿದ್ಧನಂಜೇಶನಿಗೂ ಕುಮಾರವ್ಯಾಸನಿಗೂ ಸುಮಾರು ೨೨೦ ವರ್ಷಗಳ ಅಂತರವಾಗುವದು. ಅಂದಮೇಲೆ ಸುಮಾರು ಕ್ರಿ. ಶ. ೧೬೫೦ ರಲ್ಲಿದ್ದವನು ಸುಮಾರು ಕ್ರಿ. ಶ. ೧೨೦೦ ರಲಿ ಮತ್ತು ಸುಮಾರು

ಕ್ರಿ. ಶ. ೧೪೩೦ ರಲ್ಲಿದ್ದವರ ನಡುವೆ ನಡೆದ ಮಾತನ್ನು ಹೇಳುತ್ತಾನೆಂದು ಹೇಳಿದರೆ ಯಾರೂ ನಂಬಲಿಕ್ಕಿಲ್ಲ. ಆದುದರಿಂದ ರಾಘವಾಂಕ ಚರಿತ್ರೆಯೊಳಗಣ ಬಸವರಾಜದೇವರ ರಗಳೆಯ ವಿಷಯವು ಸುಳ್ಳೆಂದು ಸಿದ್ಧವಾಗುವದು. ಆದರೆ ಆ ಗ್ರಂಥದೊಳಗಣ ಯಾವತ್ತು ಸಂಗತಿಗಳು ಸುಳ್ಳೆಂದು ಭಾವಿಸಲಿಕ್ಕೆ ಬರಲಾರದು.

"ಹರೀಶ್ವರನವೆಂದು ಗೊತ್ತಾಗುವ ರಗಳೆಗಳಲ್ಲಿ ಕಂಡುಬರುವ ಭಾವಗಳೂ ಮಾತಿನ ಧೋರಣೆಯೂ ಕೆಲವು ವೇಳೆ ಅವೇ ಮಾತುಗಳೂ ಬಸವರಾಜದೇವರ ರಗಳೆಯಲ್ಲಿ ಕಂಡುಬರುತ್ತವೆ." ಎಂದು ಹೇಳಿ ಇಹಪಗೆಯಾಂಡರ ರಗಳೆಯಲ್ಲಿ ಶಿವನು ಆತನನ್ನು ಪರೀಕ್ಷಿಸುವದಕ್ಕಾಗಿ ಸುಖಿಜಂಗಮನ ವೇಷದಲ್ಲಿ ಬಂದಂತೆ ಬಸವರಾಜದೇವರ ರಗಳೆಯಲ್ಲಿಯೂ ಶಿವನು ಬಸವಣ್ಣನವರ ಭಕ್ತಿಯನ್ನು ಪರೀಕ್ಷಿಸುವದಕ್ಕಾಗಿ ಸುಖಿಜಂಗಮವೇಷದಿಂದ ಬರುತ್ತಾನೆ! ಹಾಗು ಭೋಗಣ್ಣನ ರಗಳೆಯಲ್ಲಿ ಕೆಂಭಾವಿಯ ಬ್ರಾಹ್ಮಣರು ಚಂದಿಮರಸನಲ್ಲಿಗೆ ಹೋಗಿ ಭೋಗಣ್ಣನು ಶಿವಶರಣನೆಂದು ಒಬ್ಬ ಹೊಲೆಯನನ್ನು ಮನೆಯಲ್ಲಿ ಸೇರಿಸಿಕೊಂಡನೆಂದು ದೂರಿದಂತೆ ಬಸವರಾಜದೇವರ ರಗಳೆಯಲ್ಲಿಯೂ ಮಂಗಳವಾಡದ ಬ್ರಾಹ್ಮಣರು ಬಿಜ್ಜಳನಲ್ಲಿಗೆ ಹೋಗಿ ಬಸವಣ್ಣನು ನಾಗಿದೇವನೆಂಬ ಪೊಲೆಯನ ಮನೆಯಲ್ಲಿ ಊಟಮಾಡಿದನೆಂದು ದೂರುತ್ತಾರೆ" ಎಂದು ಎರಡು ಉದಾಹರಣೆಗಳನ್ನು ಕೊಟ್ಟು ಬಸವರಾಜದೇವರ ರಗಳೆಯನ್ನು ಹರಿಹರನು ಮಾಡಿರುವನೆಂದು ಸಾಧಿಸಿರುವರು. ಇದು ತೀರ ತಪ್ಪು. ಯಾಕಂದರೆ ಬೇರೆ ಗ್ರಂಥಗಳಲ್ಲಿಯ ಭಾವಗಳೂ ಮಾತಿನ ಧೋರಣೆಯೂ ಒಂದಾದರೆ ಅವು ಒಬ್ಬನವೆಂದು ಹೇಳಲಿಕ್ಕೆ ಬರಲಾರದು. ಯಾಕಂದರೆ ಹೋಮರನ ಇಲಿಎಡದಲ್ಲಿಯ ಭಾವವು ಮತ್ತು ಮಾತಿನ ಧೋರಣವು ವಾಲ್ಮೀಕಿಯ ರಾಮಾಯಣದಲ್ಲಿಯೂ ಕಂಡುಬರುತ್ತವೆ. ಅಂದಮೇಲೆ ಹೋಮರನು ರಾಮಾಯಣವನ್ನು ರಚಿಸಿದನೆಂದೂ ಹಾಗು ವಾಲ್ಮೀಕಿಯು ಇಲಿಎಡ ರಚಿಸಿದನೆಂದೂ ಹೇಳಲಿಕ್ಕೆ ಬರಲಾರದು. ಇದರಂತೆ ೧೭ ನೆಯ ಶತಮಾನದಲ್ಲಿದ್ದ ಷಡಕ್ಷರ ದೇವನ ಹಾಗು ಶೆಕ್‌ಸ್ಪಿಯರನ ಕಾವ್ಯಗಳಲ್ಲಿಯ ಭಾವವೂ ಮಾತಿನ ಧೋರಣವೂ ಒಂದಾದರೆ ಇವರಿಬ್ಬರು ಒಬ್ಬನೇ ಎಂದು ಅನ್ನಲಿಕ್ಕೆ ಬರಲಾರದು. ಯಾಕಂದರೆ ವರಕವಿಗಳಲ್ಲಿ ಸಮಾನ ಭಾವಗಳೂ ಮಾತಿನ ಧೋರಣವೂ ಸಹಜವಾಗಿ ಬರುತ್ತದೆ.

ಬಸವರಾಜ ದೇವರ ರಗಳೆಯ ಪೀಠಿಕೆಯ ೧೮ ನೆಯ ಪುಟದಲ್ಲಿ "ಕೈಲಾಸದ ಪ್ರಮಥಗಣಗಳು ಭೂಲೋಕದಲ್ಲಿ ಶಿವಶರಣರಾಗಿ ಹುಟ್ಟಲು ಕಾರಣವು ಅವರು ಕೈಲಾಸದಲ್ಲಿ ಮಾಡಿದ ಯಾವದೋ ಒಂದು ತಪ್ಪು ಎಂಬುದು ಹರಿಹರನ ಒಂದು ಅಪೂರ್ವವಾದ ಭಾವನೆಯೆಂದು ಕಂಡು ಬರುತ್ತದೆ. ಈ ವಿಧವಾದ ಭಾವನೆಯು ನಂಬಿಯಣ್ಣ, ರೇವಣಸಿದ್ಧ, ಮಹಾದೇವಿಯಕ್ಕ, ಇವರ ರಗಳೆಗಳಲ್ಲಿ ಕಂಡುಬರುತ್ತದೆ." ಎಂದೂ ಹಾಗು ೧೯ ನೆಯ ಪುಟದಲ್ಲಿ "ಬಸವಣ್ಣನವರ ಜನನದ ವಿಚಾರದಲ್ಲಿ ಈ ತೆರನಾದ ಕಲ್ಪನೆ ನಮಗೆ ತಿಳಿದಿರುವ ಮಟ್ಟಿಗೆ ಮತ್ತಾವ ವೀರಶೈ ಗ್ರಂಥದಲ್ಲಿಯೂ ಕಂಡುಬರುವದಿಲ್ಲವಾದದ್ದರಿಂದಲೂ ಹರಿಹರನ ಇತರ ರಗಳೆಗಳಲ್ಲಿ ಇದೇ ತರದ ಕಲ್ಪನೆ ಕಂಡುಬರುವದರಿಂದಲೂ ಈ ರಗಳೆ ಹರಿಹರ ಕೃತವಾಗಿರಬೇಕೆಂಬುದಕ್ಕೆ ಇದು ಒಂದು ಸಾಧನವಾಗಿದೆ" ಎಂದು ಹೇಳಿರುವರು. ಆದರೆ ಹಿಂದೂ ಧರ್ಮಶಾಸ್ತ್ರದ ಹಳೇ ಗ್ರಂಥಗಳಲ್ಲಿ ಯಾವನಾದರೊಬ್ಬ ಮಹಾತ್ಮನ ಉದಯಕ್ಕೆ ಪ್ರಬಲವಾದ ಎರಡು ಕಾರಣಗಳು ಹೇಳಲ್ಪಡುತ್ತವೆ. ೧ ನೆಯದು "ಕ್ಷೀಣೆ ಪುಣ್ಯೆ ಮರ್ತ್ಯ ಲೋಕಂ ವಿಶಂತಿ" ಎಂಬ ನ್ಯಾಯದಂತೆ ಶಿವನ ಸಾಮಿಪ್ಯದಲ್ಲಿರುವ ಪುಣ್ಯಾತ್ಮನು ಸಂಗ್ರಹಿಸಿದ ಪುಣ್ಯರಾಶಿಯು ತೀರಿದ ಕೂಡಲೆ ಮೇಲೆ ಹೇಳಿದಂತೆ ಯಾವದಾದರೊಂದು ಶಾಪಕ್ಕೆ ಒಳಗಾಗಿ ಮರ್ತ್ಯದಲ್ಲಿ ಜನ್ಮವೆತ್ತುವನು. ಈ ಬಗೆಯ ಕಲ್ಪನೆಯು ರಾಮಾಯಣಾದಿ ಅನೇಕ ಗ್ರಂಥಗಳಲ್ಲಿ ಸಿಗುವದು. ೨ ನೆಯದು ''ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ತದಾ ತದಾ ಸಂಭವಾಮಿ ಯುಗೆ ಯುಗೆ" ಎಂಬ ನ್ಯಾಯದಂತೆ ಶಿವಸಾಯುಜ್ಯದಲ್ಲಿರುವ ಪುಣ್ಯಾತ್ಮನು ಧರ್ಮದ ಗ್ಲಾನಿಯ ಕಾಲಕ್ಕೆ ಜನೋದ್ಧಾರಕ್ಕಾಗಿ ಅವತರಿಸುವನು. ಈ ತರಹದ ಕಲ್ಪನೆಗಳು ಭಗವದ್ಗೀತಾ ಮೊದಲಾದ ಗ್ರಂಥಗಳಲ್ಲಿ ಸಿಗುವವು. ೧ ನೆಯ ತರಹದ ಶಾಪದ ಕಾರಣವು ರಗಳೆಗಳಲ್ಲಿ ಕಂಡು ಬರುವದು; ಇಷ್ಟರ ಮೇಲಿಂದಲೇ ಈ ಯಾವತ್ತು ರಗಳೆಗಳು ಹರಿಹರನವು ಎಂದು ಹೇಳಲಿಕ್ಕೆ ಬರಲಾರದು. ಹರಿಹರನವಲ್ಲದ ೨ ನೆಯ ಗುಂಪಿಗೆ ಸೇರಿದ ರಗಳೆಗಳಲ್ಲಿಯೂ ಕೂಡ ಈ ಶಾಪದ ಕಾರಣವು ಕಂಡುಬರುತ್ತದೆ. ಆದುದರಿಂದ ಈ ಬಸವರಾಜ ದೇವರ ರಗಳೆಯು ಹರಿಹರನವಲ್ಲವೆಂದು ಸಹಜ ಸಿದ್ಧವಾಗುವದು.

ಬಸವರಾಜ ದೇವರ ರಗಳೆಯ ಪೀಠಿಕೆಯ ೧೯ ನೆಯ ಪುಟದಲ್ಲಿ "ಶಾಸನಗಳಲ್ಲಿಯೂ ಬಸವಪುರಾಣಾದಿ ವೀರಶೈವ ಗ್ರಂಥಗಳಲ್ಲಿಯೂ ಬಿಜ್ಜ

ಳನ ರಾಜಧಾನಿ ಕಲ್ಯಾಣವೆಂದು ಉಕ್ತವಾಗಿದೆ. ಆದ ಕಾರಣ ಇದು ಸುಪ್ರಸಿದ್ಧವಾದ ವಿಷಯ. ಬಸವರಾಜ ದೇವರ ರಗಳೆಯಲ್ಲಾದರೋ ಬಿಜ್ಜಳನ ರಾಜಧಾನಿ ಮಂಗಳವಾಡವೆಂದು ಹೇಳಿದೆ. ಹೆಸರಿನ ಹೋಲಿಕೆಯಿಂದ ಈ ಎರಡು ಪಟ್ಟಣಗಳೂ ಒಂದೇ ಎಂದು ತೋರಬಹುದು. ಆದರೆ ರೇವಣಸಿದ್ಧರ ರಗಳೆಯಲ್ಲಿ ಅವರು ಕಲ್ಯಾಣಕ್ಕೆ ಹೋಗಿ ಅಲ್ಲಿಂದ ಬಿಜ್ಜಳನ ರಾಜಧಾನಿಯಾದ ಮಂಗಳವಾಡಕ್ಕೆ ಬಂದರೆಂದು ಹೇಳಿರುವದರಿಂದ ಇವೆರಡೂ ಬೇರೆ ಬೇರೆ ಸ್ಥಳಗಳೆಂದು ಹರಿಹರನ ಅಭಿಪ್ರಾಯವೆಂಬುದು ಸ್ಪಷ್ಟವಾಗುತ್ತದೆ. ಅಪ್ರಸಿದ್ಧವಾದ ಮಂಗಳವಾಡವು ಬಿಜ್ಜಳನ ರಾಜಧಾನಿಯೆಂಬ ಅಭಿಪ್ರಾಯವು ರೇವಸಿದ್ಧಪುರಾಣ, ಬಸವರಾಜ ದೇವರ ರಗಳೆ ಇವೆರಡರಲ್ಲಿಯೂ ಇರುವದರಿಂದ ಇವೆರಡನ್ನೂ ಒಬ್ಬ ಕವಿಯೇ ಬರೆದಿರಬೇಕೆಂಬುದಕ್ಕೆ ಅವಕಾಶವಾಗುತ್ತದೆ" ಎಂದು ಬರೆರುವರು. ಇದು ತಪ್ಪು. ಯಾಕಂದರೆ ಚತುರ್ಮುಖ ಬೊಮ್ಮರಸನು (ಸು. ಕಿ. ಶ. ೧೫೦೦) ರೇವಣಸಿದ್ಧೇಶ್ವರ ಪುರಾಣವನ್ನು ಬರೆದಿದ್ದಾನೆ. ಕವಿಚರಿತೆಯ ೨ ನೆಯ ಸಂಪುಟದ ೧೫೯ ನೆಯ ಪುಟದಲ್ಲಿ "ರೇವಣಸಿದ್ಧ ಚರಿತವನ್ನು ಈಶಾನ್ಯ ಶಿವಗುರು ಸಂಸ್ಕೃತದಲ್ಲಿಯೂ ಹರೀಶ್ವರನು ರಗಳೆಯ ರೂಪವಾಗಿ ಕನ್ನಡದಲ್ಲಿಯೂ ಬರೆದಿದ್ದಾರೆ; ಈ ಉಭಯ ಮತವನ್ನರಿದು ತಾನು ಈ ಕಾವ್ಯವನ್ನು ಬರೆದಂತೆ ಕವಿ ಹೇಳುತ್ತಾನೆ" ಎಂದು ಹೇಳಿದೆ. ಅಂದಮೇಲೆ ಅಪ್ರಸಿದ್ಧವಾದ ಮಂಗಳವಾಡವು ಬಿಜ್ಜಳನ ರಾಜಧಾನಿಯೆಂಬ ಅಭಿಪ್ರಾಯವು ಈಶಾನ್ಯ ಶಿವಗುರುಗಳ ಸಂಸ್ಕೃತ ರೇವಣಸಿದ್ಧ ಚರಿತದಲ್ಲಿಯೂ ಬರಬೇಕಾದೀತು; ಮತ್ತು ಸಂಸ್ಕೃತ ರೇವಣಸಿದ್ಧ ಚರಿತೆ, ಕನ್ನಡ ರೇವಣಸಿದ್ಧೇಶ್ವರ ರಗಳೆ ಹಾಗು ರೇವಣಸಿದ್ಧೇಶ್ವರ ಪುರಾಣ ಈ ಮೂರರಲ್ಲಿಯ ಮುಖ್ಯಾಂಶವು ಒಂದೇಯಾಗಬೇಕು. ಇದರ ಸ್ಪಷ್ಟೀಕರಣವು ಎಲ್ಲಿಯೂ ಆಗಿಲ್ಲ. ಇದು ಅಲ್ಲದೆ ಮರಿರಾಚವಟ್ಟೇಶನ (ಸು. ಕಿ. ಶ. ೧೫೫೦) ತಾರಾವಳಿಯಲ್ಲಿಯ ೧೮ ನೆಯ ಪದ್ಯದಲ್ಲಿಯೂ ಕೂಡ ಈ ಮಂಗಳವಾಡದ ಉಲ್ಲೇಖವಿದ್ದು, ಅಲ್ಲಿ ಅಕ್ಕಮಹಾದೇವಿಗೆ ಶ್ರೀಅಲ್ಲಮಪ್ರಭುವಿನ ಪಾದ ದರ್ಶನವಾದಂತೆ ಹೇಳಿದೆ. ಅಂದಮೇಲೆ ಮಂಗಳವಾಡವೆಂಬ ಗ್ರಾಮದ ನಾಮ ನಿರ್ದೇಶವನ್ನು ಎರಡೂ ಗ್ರಂಥಗಳಲ್ಲಿ ಮಾಡಿದ ಮಾತ್ರಕ್ಕೆ ಅವೆರಡೂ ಒಬ್ಬ ಕವಿಯವು ಎಂದು ಹೇಳಲಿಕ್ಕೆ ಬರಲಾರದು. ಯಾಕಂದರೆ ಈ ಮಂಗಳವಾಡ ಗ್ರಾಮದ ಹೆಸರನ್ನು ಅನೇಕ ಕವಿಗಳು ಹೇಳಿರುವರು.

ಬಸರಾಜದೇವರ ರಗಳೆಯು ಪೀಠಿಕೆಯು ೨೦ನೆಯು ಪುಟದಲ್ಲಿ" ಅಲ್ಲದೆ ಈ ರಗಳೆಯಲ್ಲಿ ಕಂಡುಬರುವಕವಿತಾ ಸಾಮರ್ಥ್ಯವು ಹರಿಹರನ ಕವಿತಾ ಸಾಮರ್ಥ್ಯಕ್ಕೆ ಸಮಾನವಾಗಿದೆ. ಹರಿಹರನವೆಂದು ಗೊತ್ತಾಗಿರುವ ರಗಳೆಗಳನ್ನು ಓದಿ ಈ ರಗಳೆಯನ್ನು ಓದಿದರೆ ಎರಡರಲ್ಲಿಯೂ ಒಬ್ಬಕವಿಯು ಕೈವಾಡವೇ ಕಂಡುಬರುತ್ತದೆ. ಈ ರಗಳೆಯನ್ನೂ ಬೇರೊಬ್ಬ ಕವಿ ಬರೆದನೆಂಬುದಕ್ಕೆ ಸಾಧನವಾವದೂ ಇಲ್ಲ; ಇಷ್ಟು ಕವಿತಾಸಾಮರ್ಥ್ಯವುಳ್ಳ ಮತ್ತೊಬ್ಬ ಕವಿಯಿದ್ದರೆ ಅವನೂ ಹರಿಹರನಂತೆ ಪ್ರಖ್ಯಾತಿಗೆ ಬರಬೇಕಾಗಿತ್ತು. ಅಂಥ ಕವಿ ಯಾರೂ ಇದ್ದಂತೆ ತಿಳಿದುಬಂದಿಲ್ಲವಾದ ಕಾರಣ ಈ ರಗಳೆ ಹರಿಹರನದೇ ಎಂದು ಸಿದ್ಧಾಂತ ಮಾಡಿದರೆ ದೋಷವಾಗಲಾರದು,, ಎಂದು ಬರೆದಿರುವರು. ಈ ಯಾವತ್ತೂ ಶಂಕೆಗಳಿಗೆ ನಾವು ಈ ಮೊದಲೆ ಸಮರ್ಪಕವಾಗಿ ಉತ್ತರಕೊಟ್ಟಿರುವೆವು. ಪ್ರಮಾಣಾಂತರವಿಲ್ಲದೆ ಕವಿತಾ ಸಾಮರ್ಥ್ಯದ ಮೇಲೂ, ಕೈವಾಡದ ಮೇಲೂ ಬೇರೊಬ್ಬಕವಿಯು ಸಿಗದ್ದರಿಂದಲೂ ಬೇರೊಬ್ಬನಿದ್ದರೆ ಆತನೂ ಹರಿಹರನಂತೆ ಪ್ರಖ್ಯಾತಿಗೆ ಬರುತ್ತಿದ್ದನೆಂತಲೂ, ಮೊದಲಾದ ಸಂಶಯುಗಳನ್ನು ನಂಬಿಕೊಂಡು ಗ್ರಂಥ ಕರ್ತೃವಿನನ್ನು ನಿರ್ಧರಿಸುವದು ತೀರ ತಪ್ಪು.

ಹೀಗೆ ಹರಿಹರನು ಬಸವರಾಜದೇವರ ರಗಳೆಯನ್ನು ಬರೆದನೆಂಬುದಕ್ಕೆ ನಮಗೆ ಅನೇಕ ಸಂಶಯುಗಳು ಬರುವವು. ಏಕಂದರೆ ಬಸವೇಶ್ವರರ ಜೀವನ ಚರಿತೆಯನ್ನು ಕುರಿತು ಬಸವ ಪುರಾಣ ಮೊದಲಾದವುಗಳನ್ನು ರಚಿಸಿದ ಕವಿಗಳು ಹರಿಹರನು ಬಸವೇಶ್ವರರ ಚರಿತೆಯನ್ನು ಬರೆದಿರುವನೆಂಬ ಅಂಶವನ್ನು ಹೇಳಿಲ್ಲ; ಅಲ್ಲದೆ ಆತನ ಗ್ರಂಥದಿಂದ ವಿಷಯವನ್ನು ಎತ್ತಿಕೊಂಡಂತೆಯೂ ಕಾಣುವದಿಲ್ಲ. ಅವರಿಗೆ ಹರಿಹರನ ಹಾಗು ಆತನ ಕಾವ್ಯಗಳ ಪರಿಚಯವಿರಲಿಲ್ಲವೆಂದು ಹೇಳಲಾಗುವದಿಲ್ಲ. ಉದಾಹರಣಾರ್ಥವಾಗಿ ಭೀಮ ಕವಿಯು ಚನ್ನಬಸವ ಪುರಾಣದಲ್ಲಿ ಹರಿಹರನನ್ನು ಸ್ತುತಿಸಿದ್ದಾನೆ. ಷಡಕ್ಷರದೇವನಂತೂ ಹರಿಹರನನ್ನೇ ಮೇಲ್ಪಂಕ್ತಿಯಾಗಿ ಇಟ್ಟುಕೊಂಡು ತನ್ನ ಗ್ರಂಥಗಳನ್ನು ಬರೆದಿರುವನು. ಹರಿಹರನಾದರು ವೀರಶೈವ ಕವಿಗಳಲ್ಲಿ ಬಹಳೇ ಪ್ರಸಿದ್ಧನಾದ ಪೂರ್ವ ಕವಿಯು. ಆದ್ಯ ಕವಿ ಎಂದೂ ಹೇಳಬಹುದು. ಇಂಥ ಮಹಾಕವಿಯು ವೀರಶೈವ ಮತೋದ್ಧಾರಕರಲ್ಲಿ ಅಗ್ರೇಸರನಾದ ಬಸವೇಶ್ವರನ ಚರಿತ್ರೆಯನ್ನು ಬರೆದಿದ್ದ ಪಕ್ಷದಲ್ಲಿ ಮುಂದಿನ ಪುರಾಣ ಲೇಖಕರು ಹೀಗೆ ಅದನ್ನು ಅಲಕ್ಷಮಾಡುತ್ತಿದ್ದರೇ?

ಶಿವಶರಣರ ಪುರಾಣಗಳನ್ನು ಈಚೆಗೆ ಬರೆದವರು ಆ ಶಿವಶರಣರ ಚರಿತ್ರೆಗಳನ್ನು ಹರಿಹರನು ಬರೆದಿದ್ದ ಪಕ್ಷದಲ್ಲಿ ಅದನ್ನು ತಮ್ಮ ಪುರಾಣಗಳಲ್ಲಿ ಸೂಚಿಸುತ್ತಿದ್ದರು. ಇಷ್ಟು ಶ್ರೇಷ್ಠವಾದದ್ದೆಂದು ಹೇಳುವ ಗ್ರಂಥದ ಸುದ್ದಿಯನ್ನು ಬಸವಪುರಾಣ ಲೇಖಕನಾದ ಒಬ್ಬ ಕವಿಯಾದರೂ ಎತ್ತದಿರುವದು ಈ ವಿಷಯದಲ್ಲಿ ಸಂಶಯುವನ್ನುಂಟುಮಾಡುತ್ತದೆ. ಹೀಗೆ ಸಂಶಯಕ್ಕೆ ಆಸ್ಪದವಿರುವದರಿಂದ ಇನ್ನೆಯ ಗುಂಪಿಗೆ ಸೇರಿಸಿದ ಯಾವತ್ತು ರಗಳೆಗಳು ಹರಿಹರನವಲ್ಲವೆಂದು ನಮಗೆ ತೋರುತ್ತದೆ.

## ೪ ಮುಡಿಗೆಯ ಅಷ್ಟಕ.

ಸಿದ್ಧನಂಜೇಶನ (ಸು॥ ಕಿ॥ ಶ॥ ೧೬೫೦) ರಾಘವಾಂಕ ಚರಿತ್ರದ ಆಧಾರದ ಮೇಲಿಂದ ಕವಿಚರಿತೆಕಾರರು ತಮ್ಮ ಕವಿಚರಿತೆಯ ಪ್ರಥಮ ಸಂಪುಟದ ೧೩೪ ನೆಯ ಪುಟದಲ್ಲಿ "ಹರಿಶ್ವರನು ಒಂದಾನೊಂದು ಕಾಲದಲ್ಲಿ ತಲೆಬಾಗಿ ಈಶ್ವರ ದರ್ಶನ ಮಾಡುತ್ತಿರುವಾಗ ಅವನ ಮಂಡೆಯೊಳ್ ತಳೆದ ರುದ್ರಾಕ್ಷವಿತತಿ ಪ್ರಸುಮದ ಟೊಪ್ಪಿಗೆ ಕೆಳಕ್ಕೆ ಬೀಳಲು ಬ್ರಾಹ್ಮಣರು ಹಸಿತಮುಖರಾಗಿ'' ಹರಿಹರನು ಮುಡಿಗೆಯನೇತಕಿಕ್ಕಿದನೋ ಎನ್ನಲು ಹರೀಶ್ವನು ಅದನ್ನೇ ಮುಡಿಗೆ ಮಾಡಿ ಶಿವಸ್ತುತಿರೂಪವಾದ ಈ ಅಷ್ಟಕವನ್ನು ಹೇಳಿದಾಗ ಅದನ್ನು ಯಾರೂ ತೆಗೆಯಲಾರದೆ ಹೋಗಲು ಚಂಡೇಶನು ಆ ಟೊಪ್ಪಿಗೆಯನ್ನು ತೆಗೆದು ಹರೀಶ್ವರನ ತಲೆಯ ಮೇಲಿಟ್ಟು ಅಂತರ್ಧಾನವಾದನು,, ಎಂದು ಬರೆದಿರುವರು. ಇದು ಪಂಪಾವಿರೂಪಾಕ್ಷನ ಸ್ತುತಿರೂಪವಾದ ಅಷ್ಟಕವದೆ. ವಿರುಪಾಕ್ಷೇಶ್ವರನ ಸ್ತೋತ್ರದ ಹೊರ್ತಾಗಿ ಇದು ಹರೀಶ್ವರನೆಂದಂಬುದಕ್ಕೆ ಅನ್ಯ ಯಾವ ಅಂತರಂಗದ ಆಧಾರಗಳನ್ನು ಕೊಟ್ಟಿರುವದಿಲ್ಲ.

## ೫ ರಕ್ಷಾಶತಕ ಶಿವಾಕ್ಷರಮಾಲಾ

ಈ ಗ್ರಂಥಗಳು ನಮಗೆ ದೊರೆತಿಲ್ಲ. ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರದಲ್ಲಿ ಈ ಗ್ರಂಥಗಳ ಬಗ್ಗೆ ಹೇಳದೆ.

ಹರಿಹರನು ವೀರಶೈವರಲ್ಲಿ ಬಹಳೇ ಪ್ರಸಿದ್ಧ ಕವಿಯಾಗಿರುವದರಿಂದ ಆತನು ಹೇಳಿರುವ ವಿಷಯಗಳಿಗೆ ನಾವು ವಿಶೇಷ ಮಹತ್ವ ಕೊಡಬೇಕಾಗುತ್ತದೆ. ಆದರೆ ಇವುಗಳು ಎಷ್ಟರಮಟ್ಟಿಗೆ ನಿಜವೆಂಬುದನ್ನು ಬೇರೆಬೇರೆ

ಪುರಾಣಗ್ರಂಥಗಳ ತುಲನಾತ್ಮಕ ವಿವೇಚನೆಯಿಂದಲೂ, ಸ್ಥಲಿಕ ಐತಿಹಾಸಿಕ ಕುರುಹುಗಳ ಸೂಕ್ಷ್ಮ ನಿದರ್ಶನೆಯಿಂದಲೂ, ತಾಮ್ರಪಟ ಶಿಲಾಲೇಖಗಳಿಂದಲೂ, ಸಮಕಾಲಿಕ ವಾಙ್ಮಯದಿಂದಲೂ, ಗೊತ್ತುಪಡಿಸುವದು ಅತ್ಯವಶ್ಯವಿರುತ್ತದೆ. ಸುಮ್ಮ ಸುಮ್ಮನೆ ಯಾವದಾದರೊಂದು ಅಪ್ರಸಿದ್ಧವಾದ ಗ್ರಂಥವನ್ನು ಆಧಾರವಾಗಿ ಇಟ್ಟುಕೊಂಡು ಅದರಲ್ಲಿ ಹೇಳಿದ್ದನ್ನೆಲ್ಲ ನಿಜವೆಂದು ಹೇಳಲಿಕ್ಕೆ ಬರಲಾರದು. ಈ ರೀತಿಯ ಸಂಶೋಧನ ಕಾರ್ಯಗಳ ಕಡೆಗೆ ನಮ್ಮ ವೀರಶೈವ ವಿದ್ಯಾವಂತರು ಹೆಚ್ಚಿಗೆ ಲಕ್ಷ್ಯಕೊಡುವದು ಅವಶ್ಯವದೆ.

---

## ಲಿಂಗಪೂಜೆ.

(ಈಶ್ವರ ಸಣಕಲ್ಲ ರಚಕವಿ)

೧

ಮಲವಳಿಸಿ ಜೀವನವ
ನಿಳೆಗೆ ಸಲಿಸಿದ ಗಂಗೆ
ಯಲಿ ಮೀಯುತಿಹನು ತಾ ಲಿಂಗಯ್ಯನು

೨

ಕಾಯಜಾದಿಗಳುರುಹಿ
ಕಾಯ ಭಸ್ಮವ ಮಾಡಿ
ಈಯುವ ವಿಭೂತಿಯನೆ ಧರಿಸುತಿಹನು

೩

ಮೋಹವಿಷರವ ಸುಟ್ಟು
ದೇಹಭಾವವ ಬಿಟ್ಟು
ಲೋಹಿತಾಕ್ಷಿಯ ಲಲಾಟಕೆ ತಳೆವನು

೪

ಮೂಮೂರು ಕೋಟಿಗಳ
ಮೂಮೂರು ಕೂಟಗಳ
ಸೀಮೆಯನು ಮೀರ್ದ ಪತ್ರಿಯ ಕೊಳುವನು

೫

ಅರಳಿಸುತ ಹೃದಯವನು
ಪರಿಮಳವ ಪೂರಸವ
ಧರೆಗೀಯ್ವ ಸುಮಗಳನೆ ತಾ ಮುಡಿವನು

೬

ಸವೆ ಸವೆಯಿಸುತ ತನುವ
ಭುವಿಗೆ ತಣ್ಪನು ಕೊಡುವ
ಧವಳ ಶ್ರೀ ಗಂಧವನೆ ಪೂಸಿಕೊಳುವಂ

೭

ಈ ಕ್ಷಿತಿಯ ಮುಸಲ ಪ್ರ
ತ್ಯಕ್ಷ ಘಾತಕ್ಕಳುಕ
ದಕ್ಷತಗಳರ್ಪಣೆಗೆ ಹಿಗ್ಗುತಿಹನು

೮

ಒಡಲ ನೇಹವ ಹೀರಿ
ಬಿಡದೆ ಪೊಡವಿಗೆ ಬೆಳಕ
ಕೊಡುವ ದೀಪದ ಬಳಿಯೊಳವನು ನಲಿವಂ

೯

ಕಳೆದು ದುರ್ವಾಸನೆಯು
ಹೊಳೆಹೊಳೆವ ತೇಜದಲಿ
ಮುಳುಗಿರ್ದ ಧೂಪಕ್ಕೆ ವೈದೋರ್ವನು

೧೦

ಎಂದೆಂದು ಒಳ ಹೊರಗು
ಒಂದೆ ಬಗೆಯೊಂದೆ ನುಡಿ
ಯಂದದೊಳಗಿಹ ಗಂಟೆಯಾಲಿಸುವನು

೧೧

ತ್ಯಾಗ ಭೋಗದೊಳುರಿದು
ಯೋಗ ಭೋಗದಿ ಬೆರೆದ
ತ್ಯಾಗಿ ಕರ್ಪೂರದಾರತಿಗೆಯೊಲೆವನು

೧೨

ತನುಮನವ ತೊಳೆತೊಳೆದು
ನೆನಹ ಪಾಶದಿ ಬಿಗಿವ
ಘನ ಮಂತ್ರ ಬಲಕೆ ಕಿವಿ ಬಾಯ್ದೆರೆವನು

೧೩

ಸುಟ್ಟರೂ 'ಹಾ' ಎನದೆ
ಅಟ್ಟರೂ 'ಓ' ಎನದೆ
ಗಟ್ಟಿಗೊಂಡಿಹ ಪ್ರಸಾದವ ಸೇವಿಸಂ

೧೪

ನಿತ್ಯ ತೃಪ್ತಿಯು ನೀರ
ಮತ್ತೆ ಕುಡಿಯುತೆ ಸತ್ಯ
ನಿತ್ಯ ಸಾನಂದೈಕ್ಯನಾಗುತಿಹನು

೧೫

ವ್ಯಾಪ್ತ ವಿಶ್ವನ ಲಿಂಗನನು ಪೂಜಿಸೀ ಸರ್ವ
ಗುಪ್ತ ಜೀವಿಗಳಾದ ಉಪಕರಣಗಳು ತಮ್ಮ
ದೀಪ್ತವಹ ಸುವಿಶಾಲ ಹೃದ್ಭಕ್ತಿ ತ್ಯಾಗ ನಿಷ್ಠಾ ಶೀಲ ಜ್ಞಾನದಿಂದೆ
ಪ್ರಾಪ್ತ ಸೇವೆಯು ಗೈಯುತೊಂದೊಂದೆ ಗುಣದಿಂದೆ
ತೃಪ್ತಿಗೊಳಿಸುತಲಿರಲು ಲಿಂಗನನ್ನೀ ಗುಟ್ಟ
ಲುಪ್ತವಾಗಿಸಿ ಗೈವ ಲಿಂಗಪೂಜೆಯು ಮಂಗಪೂಜೆ ಹೋ ಭಂಗಪೂಜೆ



# ನೊಣವಿನಕೆರೆ ಕರಿಬಸವ ಮಹಾಸ್ವಾಮಿಗಳ ಸಂಕ್ಷಿಪ್ತ ಜೀವನಚರಿತ್ರೆ.

(ಲೇಖಕಃ—ಯಜಮಾನ್ ರುದ್ರಯ್ಯಾ ಹೊನ್ನುಡಿಕೆ; ತುಮುಕೂರು.)

ಸುಪ್ರಸಿದ್ಧವಾದ ಡೊಂಬಳ ಸಂಸ್ಥಾನದ ಚರವರಾಧ್ಯಕ್ಷರಾದ ಶ್ರೀಮನ್ನಿರಂಜನ ಗುರುವರಾನ್ವಯ ಪರಂಪರ ಸೂತ್ರಾನುವರ್ತಿಗಳಾದ, ಚೀಲಾಳಸಮಯದ ವಿರಕ್ತ ಚರಮೂರ್ತಿಗಳು ಕ್ರಿ. ಶ. ೧೪೩೫ರ ಸುಮಾರಿನಲ್ಲಿ ಅಂದರೆ ಈಗ್ಗೆ ಸುಮಾರು ೫೦೦ವರ್ಷಗಳ ಹಿಂದೆ ಮಹಾ ವೈರಾಗ್ಯಶೀಲರಾಗಿ ಶಿವಯೋಗಾನುಸಂಧಾನ ತಪಶ್ಚರ್ಯ ಕ್ರಿಯೆಗಳನಾಚರಿಸುತ್ತ, ಭಕ್ತರ ಉದ್ಧಾರಕ್ಕಾಗಿ, ಶಿಷ್ಯರ ಪ್ರಾರ್ಥನೆಯಂತೆ ದೇಶಾಟನೆ ಮಾಡಲುಪಕ್ರಮಿಸಿದರು. ಪಟ್ಟಣಕ್ಕೆ ಪಂಚರಾತ್ರಿ ಹಳ್ಳಿಗೆ ಏಕರಾತ್ರಿಯಂತೆ ಸಂಚರಿಸುತ್ತಾ ಸದ್ಭಕರ ಸೇವೆಯನ್ನು ಕೈಕೊಂಡು, ಮಧ್ಯ ಪ್ರಾಂತವಾದ ತುಮಕೂರು ಪಟ್ಟಣಕ್ಕೆ ದಯಮಾಡಿಸಿ, ಅಲ್ಲಿನ ಭಕ್ತರ ಪ್ರಾರ್ಥನೆಯಂತೆ, ಊರಿಗೆ ಪೂರ್ವ ಭಾಗದಲ್ಲಿ ಒಂದು ಶಿವಾಲಯವನ್ನು ಕಟ್ಟಿಸಿ ಸೋಮೇಶ್ವರಾಭಿಧಾನದಿಂದ ಶಿವಲಿಂಗ ಪ್ರತಿಷ್ಠೆಯನ್ನು ಮಾಡಿಸಿದರು; ಮತ್ತು ಸೋಮೆಕಟ್ಟೆ ಎಂಬ ಕಟ್ಟೆಯೊಂದನ್ನು 'ಸೋಮೆಕಟ್ಟೆಮಠ' ವೊಂದನ್ನೂ ಕಟ್ಟಿಸಿ ಅಲ್ಲಿಯೇ ಇರಹತ್ತಿದರು. ಅಲ್ಲಿ ಶಿವಯೋಗವನಾಚರಿಸುತ್ತಾ ಸದ್ಭಕ್ತಿ, ಸದಾಚಾರ, ತತ್ವಮಸ್ಯಾದಿ ಮಹಾ ವಾಕ್ಯಾರ್ಥಾನುಭವಗಳನ್ನು ಭಕ್ತಾದಿಗಳಿಗೆ ಬೋಧಿಸುತ್ತಾ ಜ್ಞಾನನಿಧಿಗಳಾಗಿ ನೆಲೆಗೊಂಡಿದ್ದರು.

ಕೆಲವು ಕಾಲಾನಂತರ ಈ ಪರಂಪರೆಯ ಸೂತ್ರಾನುವರ್ತಿಗಳಾದ ಸಿದ್ದೇಶ್ವರ ಸ್ವಾಮಿಗಳೆಂಬವರು ಕಡುವೈರಾಗ್ಯದಿಂದ ನಿಸ್ಸಂಗ ನಿರ್ಗೋಷ್ಠಿಗಳಂ ಬಯಸಿ, ಸಂಚಾರ ಹೊರಟು, ತಿಪಟೂರು ತಾಲೂಕು ನೊಣವಿನಕೆರೆ ಎಂಬ ಗ್ರಾಮದ ಸಮೀಪದ ವನಾಂತರದಲ್ಲಿ ವೃಕ್ಷಮೂಲವನ್ನಾಶ್ರಯಿಸಿಕೊಂಡು, ತಪಸ್ಸು ಮಾಡುತ್ತ ಅಂತರ್ಮುಖಿಗಳಾಗಿರುವಲ್ಲಿ, ಹಾಗಲವಾಡಿ ಪಾಳೆಯಗಾರರಾದ ಮುದಿಯಪ್ಪ ನಾಯಕ ಎಂಬವರು ವಿನೋದಾರ್ಥವಾಗಿ ಶಿಕಾರಿಮಾಡಿಕೊಂಡು ಅದೇಕಾಡಿಗೆ ಬಂದು ತಪೋನಿಷ್ಠರಾದ, ಜಟಾಧಾರಿಗಳಾಗಿರುವ ಸಿದ್ದೇಶ್ವರ ಸ್ವಾಮಿಗಳನ್ನು ದೂರದಲ್ಲಿ ನೋಡಿ, ಕರಡಿ ಎಂದು ಭಾವಿಸಿ ಗೋಲಿಯಿಂದ ಹೊಡೆದು ಸಮೀಪಕ್ಕೆ ಬಂದು ನೋಡುವಲ್ಲಿ ಗುಂಡಿನೇಟನ್ನು ಸೈರಿಸಿಕೊಂಡು ಯೋಗಾನುಸಂಧಾನದಲ್ಲಿರುವ

ಮೂರ್ತಿಗಳಂ ನೋಡಿ, ಭಯಭರಿತನಾಗಿ ಅಪರಾಧ ಕ್ಷಮಾಪಣೆಯನ್ನು ಬೇಡಿಕೊಳ್ಳಲು, ಕೃಪಾದೃಷ್ಟಿಯಿಂದ ಅಭಯವಂ ಪಾಲಿಸಿ ಜ್ಞಾನದೀಕ್ಷೆಯಂ ಮಾಡಿ ಲಿಂಗಾಂಗಸಾಮರಸ್ಯವನ್ನನುಗ್ರಹಿಸಿ ಶಿಷ್ಯನನ್ನಾಗಿ ಮಾಡಿಕೊಂಡು ತನ್ಮೂಲಕ ಅಲ್ಲಿಯೇ ಒಂದು ಮಠವನ್ನು ಸ್ಥಾಪಿಸಿಕೊಂಡಿದ್ದರು; ಕಾಡುಸಿದ್ಧೇಶ್ವರ ಮಠವೆಂದು ಹೆಸರಾಯಿತು. ಆ ಮಹಿಮರು ಕೆಲವು ದಿವಸದ ಮೇಲೆ ಉತ್ತರಾಧಿಕಾರಿಗಳಿಗೆ ತಮ್ಮ ಚರಪಟ್ಟವನ್ನನುಗಹಿಸಿ ಲಿಂಗೈಕ್ಯರಾಗಿ, ಅಲ್ಲಿಯೇ ಪೂಜ್ಯವಾದ ಗದ್ದುಗೆಯಾಗಿರುತ್ತದೆ.

ಇತ್ತೀಚೆಗೆ ಇವರ ಪರಂಪರೆ ಸೂತ್ರಾನುವರ್ತಿಗಳಾಗಿ ೧೬ ನೇ ಚರವರಾಧ್ಯಕ್ಷರಾದ ಶ್ರೀಮನ್ನಿರಂಜನ ಗುರುವರೇಣ್ಯರಾದ ಕರಿವೃಷಭ ದೇಶಿಕೇಂದ್ರ ಸ್ವಾಮಿಗಳು ಕ್ರಿ. ಶ. ಸುಮಾರು ೧೮೦೮ ನೇ ಸಂವತ್ಸರದಲ್ಲಿ ಪ್ರಸಿದ್ಧವಾದ ಶ್ರೀಮದ್ದಕ್ಷಿಣ ಕಾಶಿ ಕಕುದ್ಗಿರಿ ಸುಕ್ಷೇತ್ರವೆಂಬ ಶಿವಗಂಗಾ ಮಹಾ ಪರ್ವತಕ್ಕೆ ದಕ್ಷಿಣ ಭಾಗದಲ್ಲಿರುವ "ಆದರಂಗಿ" ಗ್ರಾಮವೆಂಬ ಪುಣ್ಯ ಕ್ಷೇತ್ರದಲ್ಲಿ ಮರುಳಾರಾಧ್ಯರ ಸದ್ವಂಶದಲ್ಲಿ ರಾಚಪ್ಪ ದೇವರೆಂಬವರ ಔರಸ ಪುತ್ರರಾಗಿ ಅವತರಿಸಿ ಬಾಲ್ಯ ವಯಸ್ಸಿನಲ್ಲಿಯೇ ವೈರಾಗ್ಯಶೀಲರಾಗಿ ವೇದಾಂತ ಶಾಸ್ತ್ರವನ್ನಭ್ಯಾಸ ಮಾಡುತ್ತ ಗುರುಮಾರ್ಗವನ್ನವಲಂಬಿಸಿ ನೊಣವಿನಕೆರೆ ಮಠಕ್ಕೆ ಬಂದು ಗುರು ಶುಶ್ರೂಷೆಯಂ ಮಾಡುತ್ತ ಸುಮಾರು ತಮ್ಮ ೧೬ ನೇ ವಯಸ್ಸಿನಲ್ಲಿ ಆ ಮಠದ ಚರವರ್ಯರಾದ ಶ್ರೀಮನ್ನಿರಾಭಾರಿ ರುದ್ರಸ್ವಾಮಿಗಳವರ ಕರಕಂಜೋದ್ಭವರಾಗಿ ಚರಪಟ್ಟವನ್ನನುಗ್ರಹಿಸಿಕೊಂಡರು. ಅಲ್ಲಿ ಹೂದೋಟದಲ್ಲಿ ಯೋಗಶಾಲೆಯೊಂದನ್ನು ರಚಿಸಿಕೊಂಡು ತೂಗುಮಂಚದಲ್ಲಿ ಕುಳಿತು ಶಿವಯೋಗಾನುಸಂಧಾನದಿಂದ ತಪಸ್ಸನ್ನಾಚರಿಸುತ್ತ ಮಹಾ ಸಿದ್ಧಿಗಳನೇಕವಂ ಪಡೆದು ಶಿಷ್ಯವರ್ಗಕ್ಕೆ ಭಕ್ತಿ, ಜ್ಞಾನ, ವೈರಾಗ್ಯಾದಿಗಳನ್ನು ಬೋಧಿಸುತ್ತ ಮಹಾ ಮಹಿಮರಾಗಿದ್ದರು.

ಪ್ರತಿ ವರ್ಷದ ಶ್ರಾವಣಮಾಸದಲ್ಲಿ ಒಂದು ತಿಂಗಳು ಪೂರ್ತಿಯಾಗಿ ನೊಣವಿನಕೆರೆ ಭಕ್ತರ ಪ್ರಾರ್ಥನೆಯಂತೆ ಪಲ್ಲಕ್ಕಿ ಉತ್ಸವದೊಡನೆ ಗ್ರಾಮಕ್ಕೆ ಬಿಜಯಂಗೈದು ಆರಾಧ್ಯ ಚಿಕ್ಕಣ್ಣ ಶೆಟ್ಟರ ಮನೆಯಲ್ಲಿ ಪ್ರತಿ ದಿನವೂ ಮಹಾ ರುದ್ರಾಭಿಷೇಕದೊಡನೆ ಮಹಾಪಾದಪೂಜಾಕ್ರಮವನ್ನು ನೆರವೇರಿಸಿ ಭಕ್ತರ ಭಕ್ತಿಯನ್ನು ಕೈಕೊಳ್ಳುತ್ತ ಇದ್ದರು. ಅಲ್ಲದೆ ವರ್ಷಕ್ಕೊಮ್ಮೆ ತಮ್ಮ ಎಲ್ಲ ಶಿಷ್ಯರನ್ನು ಮಠಕ್ಕೆ ಬರಮಾಡಿಕೊಂಡು ಒಂದು ತಿಂಗಳ

ವರೆಗೆ ಅನುಭವ ಮಂಟಪದಲ್ಲಿ ವಚನಶಾಸ್ತ್ರಗಳು ಶೂನ್ಯಸಂಪಾದನೆ ಮೊದಲಾದ ಅನೇಕ ಶಿವಾನುಭವ ಗ್ರಂಥಗಳನ್ನು ಪಾರಾಯಣ ಮಾಡಿಸಿ ಸಹಜಾರ್ಥವನ್ನು ಅಪ್ಪಣೆ ಕೊಡಿಸುತ್ತಿದ್ದುದು ಕಲ್ಯಾಣದ ಪ್ರಥಮ ಗೋಷ್ಠಿಯಂತೆ ಕಂಗೊಳಿಸುತ್ತಿದ್ದಿತು.

ಸದಾನಂದ ಸ್ವರೂಪಿಗಳಾದ ಮಹಾ ಸ್ವಾಮಿಗಳು ತಮ್ಮ ಅನುಭವ ಸೂತ್ರಗಳನ್ನು ತಮ್ಮ ಆನಂದ ರೂಪದ ಕೈವಲ್ಯ ವಚನಗಳಿಂದ ಅಪ್ಪಣೆ ಕೊಡಿಸಿದ್ದಾರೆ. (ಇವಾಗಲೇ ಶಿವಾನುಭವದ ವಾಚಕರಿಗೆ ಪರಿಚಿತವಾಗಿವೆ.)

ಈ ಸ್ವಾಮಿಗಳ ಜೀವಿತ ಕಾಲದಲ್ಲಿ ನಡೆದ ಕೆಲವು ಸಂಗತಿಗಳನ್ನು ಇಲ್ಲಿ ವಿವರಿಸುವದು ಅಪ್ರಕೃತವೆನಿಸಲಾರದು. ಸ್ವಾಮಿಗಳ ಶಿಷ್ಯಾಗ್ರಣಿಗಳಲ್ಲೊಬ್ಬರಾಗಿದ್ದ ಮಲ್ಲೇನಹಳ್ಳಿ ಕೈ. ಚನ್ನಬಸವಯ್ಯನವರು ಸ್ವಾಮಿಗಳ ದರ್ಶನಾಶೀರ್ವಾದಕ್ಕಾಗಿ ಒಮ್ಮೆ ಮಠಕ್ಕೆ ಹೋಗಿದ್ದರು. ಇವರು ಲೋಕವ್ಯವಹಾರದಲ್ಲಿ ಚತುರರಾಗಿದ್ದರೂ ಅಷ್ಟೇನೂ ಪಾಂಡಿತ್ಯವಿರಲಿಲ್ಲ. ಕವಿತಾಶಕ್ತಿಯಂತೂ ಏನೂ ಇರಲಿಲ್ಲ; ಅದನ್ನು ಗುರುವಿನ ಅನುಗ್ರಹದಿಂದಲೇ ಪಡೆದರು. ಸ್ವಾಮಿಗಳು ಪ್ರಾತಃಕಾಲ ದಂತಧಾವನ ಮಾಡುತ್ತ ಬಳಿಯಲ್ಲಿದ್ದ ಚನ್ನಬಸವಯ್ಯನವರನ್ನು ಕುರಿತು "ನಿನಗೇನಾದರೂ ಕವಿತಾ ಮಾಡಲು ಬಂದರೆ ಹೇಳಪ್ಪ" ಅಂದರು; ಅವರು ತನಗೆ ಬರುವದಿಲ್ಲೆಂದರು. "ಹಾಗಾದರೆ ಇಲ್ಲಿ ಬಾ" ಎಂದು ಕರೆದು ಅವರ ನಾಲಿಗೆಯನ್ನು ನೀಡಿಸಿ ತಾವು ಹಲ್ಲನ್ನು ಉಜ್ಜುತ್ತಿದ್ದ ಕಡ್ಡಿಯಿಂದ ನಾಲಗೆಯ ಮೇಲೆ ಪ್ರಣವಾಕ್ಷರವನ್ನು ಬರೆದು "ಈಗ ಏನಾದರೂ ಹೇಳುವುದಕ್ಕೆ ಬಂದರೆ ಹೇಳಪ್ಪ" ಎಂದರು. ಸ್ವಲ್ಪ ಹೊತ್ತಾದ ನಂತರ ಚನ್ನಬಸವಯ್ಯನವರು ಸುಶ್ರಾವ್ಯವಾದ ಅನೇಕ ಕವನಗಳನ್ನು ರಚಿಸಿ ಹಾಡಿದ್ದಲ್ಲದೆ ತನ್ನ ಗುರುವಂಶದ ಹಿಂದಿನ ೧೬ ಚರಪಟ್ಟಗಳ ಚರಿತ್ರೆಯನ್ನೆಲ್ಲಾ ಹಾಡಿ ಹೇಳಿದರೂ ಪೂರ್ವ ವೃತ್ತಾಂತವೇನೂ ತಿಳಿಯದೆ ಇದ್ದ ಇವರ ಚಾರಿತ್ರಿಕ ಕವನಗಳನ್ನು ಕೇಳಿ ಎಲ್ಲರೂ ನಿಬ್ಬೆರಗಾದರು. ಅಲ್ಲಿಂದ ಮುಂದೆಯೇ ಇವರು ಕವಿತಾ ಮಾಡಲು ಪ್ರಾರಂಭಿಸಿದ್ದು ಅನೇಕ ಸ್ತೋತ್ರಗಳನ್ನೂ ಅನುಭವ ಪದ್ಯಗಳನ್ನೂ ರಚಿಸಿದ್ದಾರೆ.

ಸ್ವಾಮಿಗಳನ್ನು ಶ್ರಾವಣಮಾಸದಲ್ಲಿ ಪ್ರತಿದಿನವೂ ಮಠದಿಂದ ಪಲ್ಲಕ್ಕಿಯಲ್ಲಿ ಉತ್ಸವದೊಡನೆ ಬಿಜಯಂಗೈಸಿ ಕೈ. ಚಿಕ್ಕಣ್ಣಶೆಟ್ಟರ ಮನೆಯಲ್ಲಿ ಪಾದಪೂಜೆಯನ್ನು ನಡೆಸುತ್ತಿದ್ದುದು ಪದ್ಧತಿಯಾಗಿತ್ತು. ಇದು ಪರಮ

ತೀಯರಿಗೆ ಸಹನೆಯಾಗದೆ ಮಾರ್ಗದಲ್ಲಿದ್ದ ಬೇಟೆರಾಯಸ್ವಾಮಿ ದೇವಾಲಯದ ಮುಂದೆ ಉತ್ಸವದೊಡನೆ ಬರಲಾಗದೆಂದು ತಡೆದರು. ಸದರೀ ಚಿಕ್ಕಣ್ಣ ಶೆಟ್ಟರು ಇನ್ನೂ ಬಾಲ್ಯ ವಯಸ್ಸಿನವರು; ಲೋಕಾನುಭವವಿಲ್ಲದವರು; ಆದರೂ ಸ್ವಾಮಿಗಳಿಂದ ಆಶೀರ್ವಾದವಂ ಪಡೆದು ಹೋಗಿ ಡಿವಿಜನ್ ಅಧಿಕಾರಿಯಾಗಿದ್ದ ಬೌರಿಂಗ್ (Mr. Bowring) ಸಾಹೇಬರ ದಿವಾಣಿಯಲ್ಲಿ ದಾವೆ ಮಾಡಿದರು. ಹಿಯರಿಂಗಿನ ಹಿಂದಿನ ರಾತ್ರಿ "ಚೆನ್ನಾಗಿ ವಿಮರ್ಶಿಸಿ ತೀರ್ಪು ಕೊಡಬೇಕೆಂ" ದು ಸ್ವಾಮಿಗಳು ಹೋಗಿ ತಿಳಿಸಿ, ಹರಸಿ, ಅಂತರ್ಧಾನವಾದಂತೆ ಬೌರಿಂಗ್ ದಂಪತಿಗಳು ಸ್ವಪ್ನವನ್ನು ಕಂಡರು. ಇಬ್ಬರೂ ಬೆಳಿಗ್ಗೆ ಮಾತನಾಡಿಕೊಂಡು ಆಶ್ಚರ್ಯಪಟ್ಟು ಸ್ವಾಮಿಗಳನ್ನು ಕೊಂಡಾಡಿದರು. ಸ್ವಾಮಿಗಳಲ್ಲಿ ಅವರಿಗೆ ಬಹಳ ಭಕ್ತಿಯುಂಕುರಿಸಿತು. ಆ ದಿನ ವಿಚಾರಣೆ ಮಾಡಿ ಬೇಟೆರಾಯನು ಪ್ರತ್ಯಕ್ಷವಾಗಿ ಬಂದು ಉತ್ಸವವಾಗಕೂಡದೆಂದು ಸ್ವಾಮಿಗಳೊಡನೆ ಹೇಳುವ ವರೆಗೂ ಉತ್ಸವವನ್ನು ತಡೆಯಕೂಡದೆಂದು ತೀರ್ಮಾನ ಕೊಟ್ಟರು. ಚಿಕ್ಕಣ್ಣ ಶೆಟ್ಟರು ಉತ್ಸಾಹದಿಂದ ಬಂದು ಸ್ವಾಮಿಗಳಲ್ಲಿ ಅರಿಕೆ ಮಾಡಿದರು. ಆದರೆ ಪುನಃ ಉತ್ಸವವನ್ನು ನಡೆಯಿಸಲು ಸ್ವಾಮಿಗಳು ಸಮ್ಮತಿಸಲಿಲ್ಲ.

"ಉತ್ಸವವು ನಮಗೇತಕೋ ನಮಗಿನ್ನು ಹುಚ್ಚಾಗಿ ತೋರುತಿಹುದು।
ಇಚ್ಛೆಯಿಲ್ಲದ ಮನಕೆ ಉತ್ಸವವು ಬೇಕೆಂಬ ಹುಚ್ಚಣ್ಣಗಳು ಕೇಳಿರೋ"
ಎಂಬ ಪದ್ಯವನ್ನು ಹಾಡಿದ್ದೂ ಆಗಲೇ.

ಬೌರಿಂಗ್ ದಂಪತಿಗಳು ಭಕ್ತಿಯಿಂದ ಮಠಕ್ಕೆ ಒಂದು ಸಾರಿ ಬಂದು ಸ್ವಾಮಿಗಳ ಪಾದದರ್ಶನವನ್ನೂ, ಆಶೀರ್ವಾದವನ್ನೂ ಹೊಂದಿ, ಕೃತಾರ್ಥರಾದೆವೆಂದು ಭಾವಿಸಿ ಹಿಂದುರಿಗಿದರು.

ಸ್ವಾಮಿಗಳಿಗೆ ಅನೇಕ ಮತಗಳ ಶಿಷ್ಯರಿದ್ದರು; ಆ ಪೈಕಿ ನೊಣವಿನಕೆರೆ ಗ್ರಾಮದ ಶ್ರೀ ವೈಷ್ಣವನೊಬ್ಬನು. ಈತನು ಸ್ವಾಮಿಗಳಲ್ಲಿ ಅತ್ಯಂತ ಭಕ್ತಿಯಿಂದಿದ್ದುದೂ, ಮತ್ತು ಸ್ವಾಮಿಗಳಿಂದ ತೀರ್ಥಪ್ರಸಾದವನ್ನು ಪಡೆದುಕೊಳ್ಳುತ್ತಿದ್ದುದೂ ಸ್ವಮತೀಯರಾದ ಶ್ರೀವೈಷ್ಣರೆಲ್ಲರಿಗೂ ಬಹಳ ಅನಿಷ್ಟವಾಗಿ ಕಂಡುಬಂತು. ಅವರಲ್ಲೊಬ್ಬನು ಈ ಶಿಷ್ಯನು ತನಗೆ ಕೊಡಬೇಕಾಗಿದ್ದ ನೂರು ರೂಪಾಯಿಗಳ ಸಾಲವನ್ನು ಹಿಂದಿರುಗಿ ಕೊಡಬೇಕೆಂದು ಬಹಳ ಕಾಟ ಕೊಡಲುಪಕ್ರಮಿಸಿದನು. ಸ್ವಾಮಿಗಳು ಶಿಷ್ಯನು ನಿರ್ಧನಿ ಎಂಬದನ್ನು ಕಂಡು ಅಸಲು ಹಣವನ್ನು ತೆಗೆದುಕೊಂಡು,

ಲೆಕ್ಕತೀರಿಸಿಕೊಳ್ಳುವದಾದರೆ ತಾವು ಕೊಡುವದಾಗಿ ಹೇಳಿಕಳುಹಿಸಿದರು. ಎಷ್ಟು ಒಡಂಬಡಿಸಿದರೂ ಕೇಳದೆ ದಾವೆ ಮಾಡಲು ಹೊರಟುಹೋದನು. ಆದರೆ ಮಧ್ಯದಾರಿಯಲ್ಲಿ, ಎಲ್ಲಾ ಕಾಗದಗಳೂ ಇದ್ದು ಈ ಪತ್ರವೊಂದು ಮಾತ್ರ ಮಾಯವಾಗಿರುವದನ್ನು ಕಂಡು ಆಶ್ಚರ್ಯಚಕಿತನಾಗಿ ತಿರುಗಿ ಮನೆಗೆ ಬಂದು ಎಲ್ಲಿ ಹುಡಿಕಿದರೂ ಸಿಕ್ಕದಿರಲು ಇದು ಸ್ವಾಮಿಗಳ ತಂತ್ರ ದಿಂದಲೇ ನಡೆದಿರಬೇಕೆಂದು ಬಗೆದನು. ಇದರ ಪ್ರತಿಕಾರಕ್ಕಾಗಿ ಪ್ರಸಿದ್ಧ ಮಾಂತ್ರಿಕನೊಬ್ಬನನ್ನು ಕರೆಯಿಸಿ ಸ್ವಾಮಿಗಳಿಗೆ ಮಾಟ (ಶೂನ್ಯ) ಮಾಡಿ ಸಿದನು. ಸ್ವಾಮಿಗಳು ತಮ್ಮ ಯೋಗಶಾಲೆಯಲ್ಲಿ ಕುಳಿತು. ಲಿಂಗಾನಂದ ಪರವಶರಾಗಿರಲು ಎರಡು ಮಂತ್ರ ಪುತ್ಥಳಿಗಳು ಬಂದು ಇಣಿಕಿ ನೋಡುತ್ತಾ ಸ್ವಾಮಿಗಳ ಮೇಲೆ ಕೈ ಮಾಡಲಾರದೆ ಹತಾಶರಾಗಿ ಭಯದಿಂದ ನಡ ಗುತ್ತಾ ನಿಂತಿದ್ದವು. ಸ್ವಾಮಿಗಳಿಗೆ ಇದು ಗೋಚರಿಸಿ "ನಿಮ್ಮ ಒಡೆಯನ ಆಜ್ಞೆಯನ್ನು ನೀವು ಪಾಲಿಸಬಹುದು" ಎಂದು ತಿಳಿಸಲು ಅವು ತಮ್ಮ ಅಶಕ್ತತೆಯನ್ನರುಹಿ ಕ್ಷಮಾಪಣೆಯನ್ನು ಕೇಳಿ, ಮುಂದೇನು ಮಾಡಬೇ ಕೆಂದು ಬೇಡಿಕೊಂಡವು. "ನಮ್ಮ ಮೇಲೆ ನಿಮ್ಮ ಶಕ್ತಿ ನಡೆಯದಿದ್ದರೆ ನಿಮ್ಮನ್ನು ಯಾರು ಕಳಿಸಿದರೋ ಅವರ ಮೇಲೆಯೇ ನಿಮ್ಮ ಶಕ್ತಿಯನ್ನು ಉಪಯೋಗಿಸಬಹುದೆಂ" ದು ಹೇಳಿ ಕಳುಹಿಬಿಟ್ಟರು. ಸೂರ್ಯೋದಯ ದೊಳಗಾಗಿ ಆ ಸಾವುಕಾರನ ಮನೆಯಲ್ಲಿ ಇಬ್ಬರು (ಆತನ ಹೆಂಡತಿಯೊ ಬ್ಬಳೂ ಸೇರಿ) ಸತ್ತರು. ಆತನು ಓಡಿ ಬಂದು ಸ್ವಾಮಿಗಳಲ್ಲಿ ಶರಣಾ ಗತನಾದನು. ಸ್ವಾಮಿಗಳು ಆತನಲ್ಲಿ ಕೃಪೆದೋರಿ ಕೃತಾರ್ಥನನ್ನಾಗಿ ಮಾಡಿದರು. ಇವೇ ಮೊದಲಾದ ಅನೇಕ ಪವಾಡಗಳು ನಡೆದುದನ್ನು ಈಗಲೂ ವೃದ್ಧರು ಹೇಳುತ್ತಿದ್ದಾರೆ. ಹೀಗೆ ಸುಮಾರು ೪೦ ವರ್ಷಗಳ ಕಾಲ ಮಹಾ ಮಹಿಮರಾಗಿ ಶೋಭಿಸುತ್ತಿದ್ದು ತಮ್ಮ ಕೃಪೆಗೆ ಪಾತ್ರರಾಗಿ ಶುಶ್ರೂ ಷೆಯನ್ನು ಕೈಕೊಂಡಿದ್ದ ಮರಿ ಸ್ವಾಮಿಗಳಿಗೆ "ಕರಿಬಸವ ಸ್ವಾಮಿಗಳೆಂಬ ಅಭಿಧಾನದಿಂದ ಬ್ರಹ್ಮೋಪದೇಶವನ್ನನುಗ್ರಹಿಸಿ ಷಟ್ಸ್ಥಲಾದಿ ಏಕೋತ್ತರ ಶತಸ್ಥಲದ ಮರ್ಮಗಳನ್ನೆಲ್ಲಾ ಬೋಧಿಸಿ ತಮ್ಮ ವಿರಕ್ತಿಯ ಚರಪಟ್ಟವನ್ನು ಸಹ ದಯಪಾಲಿಸಿ ಕ್ರಿ. ಶ. ೧೮೭೫ರ ಸುಮಾರಿನಲ್ಲಿ ತಮ್ಮ ಶಿಷ್ಯಮಂಡಲಿ ಯನ್ನೆಲ್ಲಾ ಬರಮಾಡಿಕೊಂಡು ತಾವು ಲಿಂಗೈಕ್ಯರಾಗುವ ಕಾಲವನ್ನು ಎಲ್ಲರಿಗೂ ಅಪ್ಪಣೆಕೊಡಿಸಿ, ಮಹಾಗಣಾರಾಧನೆಯ ಮಾಡಿಸಿ ಮಹಾ ಗಣಗೋಷ್ಠಿಯೊಡನೆ ಆನಂದವಾಗಿ ಶಿವಾರ್ಚನೆಯಂ ಮಾಡಿ, ಸರ್ವ ರಿಗೂ ತೀರ್ಥಪ್ರಸಾದಗಳಂ ದಯಪಾಲಿಸಿ ಅರ್ಪಣಾನಂತರ, ಮಠದಲ್ಲಿ

ಮೊದಲೇ ಶಾಸ್ತ್ರೀಯವಾಗಿ ನಿರ್ಮಿಸಿದ್ದ, ಕ್ರಿಯಾಸಮಾಧಿ ಬಳಿಗೆ ದಯ ಮಾಡಿಸಿ, ಗದ್ದುಗೆಯ ಮೇಲೆ ಮಂಡಿಸಿ, ಶಿಷ್ಯರು ಜಯಘೋಷವನ್ನು ಮಾಡುತ್ತಿರಲು ಯೋಗಾನುಸಂಧಾನದಿಂದ ಮಹಾ ಮಂತ್ರೋಚ್ಚಾರಣೆಯಂ ಮಾಡುತ್ತಾ ಸಮಾಧಿನಿಷ್ಠರಾಗಿ ಶಿವಸಾಯುಜ್ಯವಂ ಹೊಂದಿದರು. ಅಲ್ಲಿಯೇ ಗದ್ದುಗೆಯಾಗಿರುತ್ತದೆ.

ಈ ಮಹಾಸ್ವಾಮಿಗಳ ಶಿಷ್ಯವರ್ಗದಲ್ಲಿ ಅಗ್ರಗಣ್ಯರಾದ, ಗುಬ್ಬಿ ತಾಲೂಕು ಮಲ್ಲೇನಹಳ್ಳಿ ಚನ್ನಬಸವದೇವರೆಂಬುವರು ಗೃಹಸ್ಥಾಶ್ರಮವಂ ಪರಿಗ್ರಹಿಸಿ ಲೌಕಿಕ, ಪಾರಮಾರ್ಥಿಕಗಳೆರಡರಲ್ಲಿಯೂ ವಿಚಕ್ಷಣರಾಗಿ ಶಿವಾನುಭವ ರಾಜಯೋಗಿಗಳಾಗಿ, ಭಕ್ತರಿಗೆ ಜ್ಞಾನಬೋಧೆ ಮಾಡುತ್ತಾ, ತಮ್ಮ ಅನುಭವದ ಪದ್ಯಗಳನ್ನು ಬಹಳವಾಗಿ ಬರೆದಿದ್ದಾರೆ.

ಮತ್ತೊಬ್ಬರು ಹೊನ್ನುಡಿಕೆಯಲ್ಲಿದ್ದ ಗಂಗಾಧರ ಸ್ವಾಮಿಗಳೆಂಬುವರು ಗುಬ್ಬಿ ತಾ॥ ನಿಟ್ಟೂರಲ್ಲಿ ಪುನೀತರಾದ ಚಿಕ್ಕಣಾರ್ಯ ಭದ್ರಾಂಬಾ ಎಂಬ ಮಾತಾಪಿತೃಗಳಿಂದುದಿಸಿ ಬಾಲ್ಯ ವಯಸ್ಸಿನಲ್ಲಿಯೇ ಅನೇಕ ವೇದಾಂತ, ಸಿದ್ಧಾಂತ, ಶಿವಾನುಭವ ಶಾಸ್ತ್ರಂಗಳನ್ನು ಅಭ್ಯಾಸ ಮಾಡಿ ಬಹುಕಾಲ ಗುರುಕುಲ ವಾಸವಂ ಮಾಡಿ, ಸ್ವಲ್ಪಕಾಲ ಶಂಭುಲಿಂಗನ ಬೆಟ್ಟದಲ್ಲಿ ತಪಸ್ಸು ಕೂಡ ಮಾಡಿ, ಮಹಾಸ್ವಾಮಿಗಳ ಕೃಪೆಗೆ ಪಾತ್ರರಾಗಿ "ಪೂರ್ಣಾನುಗ್ರಹ" ವಂ ಪಡೆದು, ಸಂಸಾರ ಶಿವಯೋಗಿಗಳಾಗಿ, ತುಮಕೂರು ಮತ್ತು ಮೈಸೂರು ಜಿಲ್ಲೆಗಳಲ್ಲಿ ಅನೇಕ ಶಿಷ್ಯರಿಗೆ ಮಹಾ ಮಂತ್ರವನ್ನುಪದೇಶಿಸಿ ಪುನೀತರಂ ಮಾಡಿ ಕ್ರಿ ಶ. ೧೯೧೫ ರಾಕ್ಷಸ ಸಂವತ್ಸರದಲ್ಲಿ ಪಂಚಭೌತಿಕ ಕಾಯವನ್ನು ಬಿಟ್ಟು ಲಿಂಗೈಕ್ಯರಾದರು. ಮಲ್ಲೇಶನ ಹಳ್ಳಿಯಲ್ಲಿ ನಿಕ್ಷೇಪವಾಗಿರುತ್ತೆ.

ಈ ಸ್ವಾಮಿಗಳ ಇನ್ನೊಬ್ಬರು ಶಿಷ್ಯರೆಂದರೆ ಗುಬ್ಬಿ ಗ್ರಾಮವಾಸಿಗಳಾದ ಕಿಡಿಗಣ್ಣಪ್ಪನವರೆಂಬವರು. ಅವರ ಕೆಲವು ಕವನಗಳನ್ನು ಇದೇ ಸಂಚಿಕೆಯ ಮತ್ತೊಂದೆಡೆ ಕಾಣಬಹುದು. (ಇಲ್ಲಿ ಸ್ವಾಮಿಗಳ ಶಿಷ್ಯರಲ್ಲಿ ಕವಿತ್ವ ಬಲ್ಲವರನ್ನು ಮಾತ್ರ ತೆಗೆದುಕೊಂಡಿದೆ.)

ಇಂತು, ಹಿಂದಿನ ಸ್ವಾಮಿಗಳು ಅಪ್ಪಣೆ ಕೊಡಿಸಿರುವ ವಚನ ಪದ್ಯಗಳ ಆಧಾರದಿಂದಲೂ, ಪರಂಪರೆಯವರು ಅಪ್ಪಣೆ ಕೊಡಿಸುತ್ತಿದ್ದ ಮುಖವಚನಗಳ ಅನುಭವದಿಂದಲೂ, ಹಾಗಲವಾಡಿ ಪಾಳೆಯಗಾರರ ವಂಶಾವಳಿಯ ಸಹಾಯದಿಂದಲೂ ಯಥೋಚಿತವಾಗಿ, ನನ್ನ ಅಲ್ಪ

ಮತಿಗೆ ತೋರಿದಂತೆ ಬರೆದಿರುತ್ತೇನೆ. ಕವನಗಳು ಈ ಮೊದಲೇ ಶಿವಾನುಭವದ ವಾಚಕರಿಗೆ ಅರ್ಪಿತವಾಗಿದ್ದು, ಕವಿಯ ವೃತ್ತಾಂತ ಮಾತ್ರ ತಿಳಿಯದೆ ಇದ್ದ ಈ ನ್ಯೂನತೆಯನ್ನು ಪರಿಹರಿಸಲು ಈ ಪುಟ್ಟ ಲೇಖನವನ್ನು ಬರೆದಿದ್ದಾಗಿದೆ.

---

## ಸೋಮೆಕಟ್ಟೆ ಕರಿವೃಷಭೇಂದ್ರ ಕೈವಲ್ಯ ಪದಗಳು.

(ಸಂಗ್ರಾಹಕ— ಎಚ್. ಆರ್. ಮಹಾಂತಯ್ಯ ಹೊನ್ನುಡಿಕೆ ಜಿ. ತುಮಕೂರು)

---

(ನೊಣವಿನಕೆರೆ ವಿರಕ್ತಮಠದ ಚರಮೂರ್ತಿಗಳಾಗಿದ್ದ ಕೈ. ಸೋಮೇಕಟ್ಟೆ ಕರಿಬಸವಸ್ವಾಮಿಗಳು ರಚಿಸಿದ್ದ ಸುಮಾರು ಐವತ್ತು ಪದಗಳನ್ನು ಶಿವಾನುಭವದ ವಾಚಕರೆದುರಿಗೆ ಇದಕ್ಕೆ ಮೊದಲೇ ಇಟ್ಟಿದ್ದೆನು. ಅಜ್ಞಾತವಾಗಿದ್ದ ಇನ್ನೆರಡು ಪದಗಳು ಸಿಕ್ಕಿದ್ದರಿಂದ ಅವನ್ನು ಈಗ ಬರೆದು ಕಳುಹಿಸಿದ್ದೇನೆ.

ಅಲ್ಲದೆ ಈ ಸ್ವಾಮಿಗಳ ಭಕ್ತಾಗ್ರಣಿಗಳಲ್ಲೊಬ್ಬರಾಗಿದ್ದ ಶರಣರಾದ ಕಿಡಿಗಣ್ಣಪ್ಪನವರಿಂದ ರಚಿತವಾಗಿದ್ದ ಹನ್ನೊಂದು ಪದಗಳನ್ನು ಇದರೊಂದಿಗೆ ವಾಚಕರಿಗೆ ಅರ್ಪಿಸಿದ್ದೇನೆ. ಇವರು ಮೈಸೂರು ಸೀಮೆಯಲ್ಲಿ ತುಮಕೂರು ಜಿಲ್ಲಾ, ಗುಬ್ಬಿಗ್ರಾಮದಲ್ಲಿದ್ದವರು. ಶಿವಾನುಭವಿಗಳು. ಭಕ್ತಿಯ ಉದ್ರೇಕದಲ್ಲಿ ತನ್ನ ಗುರುವಿಗಾಗಿ ರಚಿಸಿ ಹಾಡಿದ ಪದಗಳಿವು.)

---

ಹಬ್ಬಿಗೆ ಸುಕ್ಷೇತ್ರಕೆಂದು ಹೋಗಿ ಯಾತ್ರೆ ಮಾಡಿ ಬಂದೆ
ಹಬ್ಬಿಗೆಯು ದಿಂಬದೊಳಗುಂಟು, ಓ! ಕರಿವೃಷಭಲಿಂಗ
ಶಂಭು ಭಕ್ತರಿಗೊಬ್ಬ ಬೇರುಂಟು ॥ಪ॥

ಆರು ಗಿರಿಯ ಹತ್ತಿಮೇಲೆ ಮೂರು ಕೊಳದ ಮಧ್ಯದಲ್ಲಿ
ಏರಿ ಕಂಡೆನು ಪಶ್ಚಿಮದ್ವಾರವ, ಓ! ಕರಿವೃಷಭಲಿಂಗ
ಸಾರಿ ನೋಡಿದೆ ಈಶಾನ್ಯಪಟ್ಟಣವ ॥೧॥

ಏಳು ನದಿಗಳುಂಟು ಅಲ್ಲಿ ಫಾಳಲೋಚನನಿರುವ ಸ್ಥಲದಿ
ತಾಳ ಮುದ್ದಳೆ ಭೇರಿ ನಗಾರಿಯು, ಓ! ಕರಿವೃಷಭಲಿಂಗ
ವೇಳೆ ವೇಳೆಗೆ ತಾವೇ ನುಡಿವುವು ॥೨॥

ಗಿರಿಯು ಶಿಖರನ ಮೇಲೆ ಮತ್ತೆ ಇರುವುವೈದು ಕಲಶವಲ್ಲಿ
ಬರುವ ಹೋಗುವ ಬೀದಿಗಳ್ನಾಲ್ಕುಂಟು ಓ! ಕರಿವೃಷಭಲಿಂಗ
ನಾರಿಯರಿಬ್ಬರು ಸಾರುತ್ತಿರ್ದಾರು ॥೩॥

ಹಿರಿಯು ಹುಲಿಗಳಾರನು ಕಡಿವೆ ಬರುವ ಗಜಗಳೆಂಟನು ತಡೆದೆ
ಹರಿಯು ಮೆಟ್ಟಿ ಮೇಲೆ ನಾ ನಿಂದೆ, ಓ! ಕರಿವೃಷಭಲಿಂಗ
ನೀರಬೊಂಬೆಯು ಬಿಗಿದು ಕಟ್ಟಿದೆನು ॥೪॥

ಪೂರ್ವದಲ್ಲಿ ಎದ್ದ ಸೂರ್ಯ ತಾರೆಗಳೆಲ್ಲರ ದಾಂಟಿ
ಸಾರಿ ಹಂಸನ ಮನೆಯ ಕಂಡೆನು ಓ! ಕರಿವೃಷಭಲಿಂಗ
ಧೀರತನದಲ್ಲಿ ಒಬ್ಬನೆ ಹೊಕ್ಕೆನು ॥೫॥

ಸರ್ಪನ ಹೆಡೆಯು ಮೇಲೆ ಮತ್ತೆ ಕರ್ಪೂರವ ಹಚ್ಚಿರಿ
ಸಿರ್ಪ ಶಿವನ ಘನದೋಳ್ ಬೆರೆದೆನು ಓ! ಕರಿವೃಷಭಲಿಂಗ
ಮುಪ್ಪುರವ ಮೊದಲೇ ತೊರೆದೆನು ॥೬॥

ಆರು ಮೂರು ಬಾಗಿಲ ನಡುವೆ ತಾರಾ ಮಿಂಚಿನ ಬಯಲ ಒಳಗೆ
ಉರಿವ ಜ್ಯೋತಿಯನೊಂದ ಕಂಡೆನು ಓ! ಕರಿವೃಷಭಲಿಂಗ
ಸ್ಮರಿಸಿ ಭಾವದಾರತಿ ಎತ್ತುವೆನು ॥೭॥

ಇಂತು ಹಬ್ಬಿಗೆಯ ಸ್ಥಲವ ನಿಂತು ನೋಡಿದೆನಯ್ಯ ಗುರುವೆ
ಅಂತ ಕಾಂತನೆ ಪಥವ ಕೂಡಿದೆನು. ಓ! ಕರಿವೃಷಭಲಿಂಗ ನಿ
ಶ್ಚಿಂತ ಮಲ್ಲನು ನೀನೆಯಾಗಿರ್ದು ॥೮॥

ಮೂರು ವರ್ಣದ ಮಧ್ಯದಲ್ಲಿ ಸೇರಿ ಇರುವ ಸೋಮೆಕಟ್ಟಿ
ಪ್ರೇಮದೊಡೆಯು ನೀನೆಯಾಗಿರ್ದೆ. ಓ! ಕರಿವೃಷಭಲಿಂಗ
ಸಾರ ಸುಧೆಯನು ಸವಿದು ಸುಖಿಸಿದೆ ॥೯॥

---

ಘಟವೇ ಬರಬೇಕೆಂಬ ಹಟವ ಮಾಡಲಿಬೇಡ
ಘಟದ ಮೇಲಣ ಆಶೆ ಬಿಡಿರೋ ಕೈಯ ॥ಪ॥
ಘಟ ಮಠದೊಳಗೆಲ್ಲ ಸ್ಫುಟವಾಗಿ ಉರಿವ ಜ್ಯೋತಿ
ಸಿಟಿಲ ಭ್ರೂ ಮಧ್ಯದೊಳು ಇಡಿರೊ ಕೈಯ ॥೧॥

ನಾವೆ ಬರಬೇಕೆಂಬ ನ್ಯಾಯ ಮಾಡಲಿ ಬೇಡಿ
ನಿಮ್ಮ ಮಾರ್ಗವು ನಮಗೆ ದೂರವಯ್ಯ ಬಹು ದೂರವಯ್ಯ ॥೨॥
ಸೋಮೆಕಟ್ಟೆ ಕರಿವೃಷಭೇಂದ್ರನು ಇನ್ನು ಈ ಹಾದಿ
ಯ ಮೆಟ್ಟನಯ್ಯ ಇನ್ನು ಮೆಟ್ಟನಯ್ಯ ॥೩॥

---

## ಗುಬ್ಬಿ ಕಿಡಿಗಣ್ಣಪ್ಪನವರು ಹಾಡಿದ ಪದಗಳು.

ಬಾರೋ ಎನ್ನ ಮನ ಸಾರೊ ನಿನ್ನ ಸರಿ ಯಾರೋ ಕರಿವೃಷಭಾರ್ಯನೆ ॥ಪ॥
ಅಂಧಕಾಸುರ ಭಂಜನ ಬಂಧನ ದುರಿತ ವಿಮೋಚನ
ಚಂದದಿ ಭಕ್ತರ ವೃಂದವ ಪೊರೆಯುವ ಚಂದ್ರಕಳಾಧರ ಸುಂದರ ॥೧॥

ಹರಿ ಬ್ರಹ್ಮಸುರ ವಂದಿತ ವರಗಣ ಮುನಿ ಜನ ಸೇವಿತ
ಸೂರಿಜನ ವಿಹಾರ ಭಜಕ ಮಂದಾರ ಕರ್ಮ ವಿದೂರನೆ ॥೨॥

ಕಂಗಳಾಲಯ ದೇವನೆ ಮಂಗಳಮಯ ಸ್ವಭಾವನೆ
ತಿಂಗಳ ಸೂಡಿದ ಗಂಗೆಯ ರಮಣನೆ ಅಂಗಜಮದ ಸಂಹರನೆ ॥೩॥

ವರ ಚಾಪಕ ಪುರಿ ವಾಸನಾಗಿರುವಾ ಪಾವಕ ನೇತ್ರನ
ಕರೆದು ಹರುಷದಿ ಶಿರವನು ತಡಹುತ ಪರಿಪರಿ ಲಾಲನೆ ಮಾಡುವ ॥೪॥

ವರ ಮುಕ್ಷುಕ ಪುರಿ ವಾಸನಾಗಿರುವಾ ಸೋಮೆಕಟ್ಟೆ ಈಶನ
ಪರಿಪರಿಯಿಂದಲಿ ಚರಣವ ಪೂಜಿಪ ಪರಮ ಭಕ್ತರಿಗೆ ವರವೀವನ ॥೫॥

---

ಬಾರಯ್ಯ ತ್ರಿಪುರ ಸಂಹರ ಸುಕುಮಾರ ಜನಕ ಮೇರುಧೀರ
ವಾರಿಜ ಭವನುತ ಶೌರಿ ಸೋದರಿ ಪ್ರಿಯ ಘೋರದುರಿತ ಸಂಹಾರ ಮನೋ
ಹರ ॥ಪ॥

ವಾರಣಚರ್ಮ ವಿಭೂಷ ಭೂರಿದಾನವ ಜನ ಶಿಕ್ಷ ಗೌರಿ ಮನೋಹರ
ಗರಳಕಂಧರ ಗುರುತರ ಮೌನಿ ವಂದಿತ ಪರಮ ಪಾವನ ಶಿವ ॥೧॥

ಖಂಡೇಂದುಧರ ಪರಮೇಶ ಅಖಂಡ ಭೂಮಂಡಲ ಘೋಷ ಕುಂಡ
ಲಿತುದಿಯಗ್ರ
ಪುಂಡರೀಕದೊಳು ಮಂಡಿತ ಪರಶಿವ ಚಂಡ ಪ್ರಕಾಶನೆ ॥೨॥

ವರಮುಕ್ತುಕ ಪುರಿವಾಸ ಚಂದ್ರಧರ ಸೋಮೆಕಟ್ಟೆ ಈಶ
ಪರಮಪಾವನ ಗುರು ಕರಿವೃಷಭಾರ್ಯನ ಕರಕಮಲದೊಳಿಹ ಸುರುಚಿರ ಶಿವ ಲಿಂಗ ॥೩॥

---

ಬನ್ನಿರಿ ಸ್ವಾಮಿಗುರುವೆ ನಾ ನಿಮಗೊಂದು ಬಿನ್ನಹವ ಮಾಡಿಕೊಳುವೆ।
ನಿನ್ನಕೃಪೆಯಿಟ್ಟು ನಿತ್ಯಾನಿತ್ಯ ವಸ್ತು ವಿವೇಕವನು ಚನ್ನಾಗಿ ಬೆಸಸೊ ಗುರುವೇ ॥ ಪ॥

ಮರ್ತ್ಯಲೋಕದ ಕರ್ತೃವು ನೀನು ನಾನಾರ್ಥ ವಿಗ್ರಹ ರೂಪವು।
ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣನಿಗೆ ಗೊತ್ತು ದಯಪಾಲಿಸಯ್ಯ॥೧॥

ಆಶ್ರಮದ ರೀತಿಯಲ್ಲ ಇದು ಒಂದು ಕೋತಿಯಂತೆ ನುಡಿವುದಲ್ಲ।
ಆಶ್ರಮದ ಮುದ್ರೆಯು ಗದ್ದುಗೆಯ ಪಾವುಗೆಯ ನೀನಿರ್ದುದನು ಪಾಲಿಸಯ್ಯ॥೨॥

ಮುಕ್ತ ಬಿನ್ನೈಸಿ ಇರುವ ಸೋಮೆಕಟ್ಟೆ ಯುಕ್ತ ಕರಿವೃಷಭೇಂದ್ರನ।
ತ್ಯಕ್ತ ಮಾಡದೆ ನಿನ್ನ ತೋಳ್ತೊಡೆಯ ಮೆಲಿರಿಸಿ ರಕ್ಷಿಪುದು ಗುರುರಾಯನೆ। ॥೩॥

---

ಬನ್ನಿರಿ ಪರಮಗುರುವೆ ನಿಮಗೊಂದು ಬಿನ್ನಹವ ಮಾಡಿಕೊಳುವೆ।
ಚನ್ನಾಗಿ ಈ ವಸ್ತು ಆದಿ ಅಂತ್ಯವನೆನಗೆ ನಿರ್ಣಯಿಸಿ ಬೆಸಸಿ ಗುರುವೆ॥ ಪ॥

ಯಾರ್ಯಾರು ನೋಡಲಿಲ್ಲ ನೀ ಕೇಳ್ವ ಪರಿಪೂರ್ಣತ್ವ ತೋರದಲ್ಲ।
ಬಲ್ಲಂತ ಹಿರಿಯರೊಳು ಸೊಲ್ಲಿಗಾಸ್ಪದವಲ್ಲ ಅಲ್ಲವರೊಳಿರುತಿಹುದು ನೋಡಿ ॥೧॥

ತಾಯಿ ತಂದೆಗಳಿಲ್ಲವು ಇದಕಿನ್ನು ನಾಮಸೀಮೆಗಳಿಲ್ಲವು।
ರೂಪು ಕ್ರಿಯಗಳೆಂಬ ವ್ಯಾಪಾರವದಕಿಲ್ಲ ಕಾಲನೇಮಗಳಿಲ್ಲವು ॥೨॥

ದಿಕ್ಕುದೆಸೆ ತೋರದೆನಗೆ ಭಾವಕ್ಕೆ ಮಿಕ್ಕುಮೀರಿಯೆ ನಿಂತಿದೆ।
ಆ ವಿಧಿಯು ಹರಿರುದ್ರರರಸಿ ಕಾಣರು ಎಂದು ನಿಗಮ ಶೃತಿ ನುಡಿವುತಿಹುದು ॥೩॥

ಏನೇನು ಏನಿಲ್ಲದ ನಿಜವಿದನು ಏನೆಂದು ನುಡಿಗಶಕ್ಯ।
ಊರಮುಂದಣ ಕಣವು ಸೂರೆನಲು ಅವರವರ ಸೇರುವ ಲಭ್ಯದಂತೆ ॥೪॥

ರತ್ನ ಬಿದ್ದಿರೆ ಬೀದಿಲಿ ಆ ರತ್ನವನು ಮತ್ತೆ ಜನರೆಲ್ಲ ಕಂಡು।
ರತ್ನ ತನ್ನದು ನನ್ನದೆಂದು ಹೊಯ್ದಾಡುವೋಲ್ ವಿಸ್ಮಯವು ತೋರಿತಲ್ಲ॥೫॥

ಆದಿ ಪರಶಿವನೆಂಬರು ಕೆಲರಾದಿ ವಿಷ್ಣುವೆಂಬರು ಮೇಲೆ।
ಪ್ರಕೃತಿಯು ಗಣಪ ಜಿನ್ನ ಭೈರವನಲ್ಲಾ ಖುದಾ ಸರ್ವೇಶಯೆನುತಿರ್ಪರು॥೬॥

ಎಲ್ಲಕಾಧಾರ ವಾಗಿ ಮತ್ತೆಲ್ಲ ಕಂತ್ಯವಾಗಿ ಎಲ್ಲ ದೇವರ ದೇವ।
ಅಲ್ಲಮ ಪ್ರಭುವೆಂದು ಸೊಲ್ಲಿಸುತ್ತಿಹುದು ನೋಡಿ ॥೭॥

ಇಂತಪ್ಪ ವಸ್ತುವಿನ ಗದ್ದುಗೆಯು ಎಂತೆನಲು ನಗುವರಯ್ಯ।
ಅಂತರಂಗದ ಗುರುವು ಬಿಳಿಯ ಕಂಬಳಿಯ ಕಪ್ಪು ನೀಲ ಉದ್ಯಾಲ್ದೇಖವು ॥೮॥

ಅಷ್ಟದಳ ತೊಟ್ಟಿಲೆನಿಸಿ ಈರೇಳು ಸೃಷ್ಟಿಯಲ್ಲವನಡಿಗಿಸಿ।
ಮುಟ್ಟಿ ಕುರುಹಿಡಿಸಿದನು ಗುರುರುದ್ರ ಸೋಮೆಕಟ್ಟಿ ಪಟ್ಟದ ಕರಿವೃಷಭೇಂದ್ರನ ॥೯॥

---

ಚಂದ್ರಧರನೆ ಎನ್ನಬಂಧನ ಹರಿಸೆಂದು ಇಂದು ನಾ ಬೇಡಿಕೊಂಬೆ।
ಮಂದಮತಿಯೊಳು ಮಾಡಿದಪರಾಧವನು ನೀನು ನೋಡದೆ ನಿನ್ನಯ।
ಕಂದನೆನುತಲಿ ಎನ್ನರಕ್ಷಿಸು ಮಂದರಾಚಲವಾಸ ಈಶ ॥ಪ॥

ಗಜ ಚರ್ಮಾಂಬರ ಈಶ ಭಜಕ ಜನರಪೋಷ ತ್ರಿಜಗವಂದಿತ ಮಹೇಶ।
ಭಕ್ತರಾವಾಸ ಭುಜಗ ಭೂಷಣ ಸುಜನಪೋಷಣ ಕುಜನಶಿಕ್ಷಕ।
ಭಜಕ ರಕ್ಷಕ ಅಜಹರಿ ಮುನಿನಮಿತಪಾದ ರಜತಾದ್ರಿ ಗಿರಿವಾಸದೇವ॥೧॥

ಲೋಕೇಶನು ತರಿದನು ಬೇಕೆಂಬ ಕೋರಿಕೆ ಕಾಕುಮಾಡಿತು ಎನ್ನನು ಸೊರಗಿದೆ ನಾನು।
ನೀಕರುಣದಲಿ ನೋಡಿ ಭವವನು ನೂಕಿಜನನವ ಸಾಕುಮಾಡುತ।
ಲೋಕಪಾವನ ಬೇಡಿಕೊಂಬೆನು ಪಾಕಶಾಸನ ವಂದ್ಯಸಲಹೈ ॥೨॥

---

ಎಷ್ಟೊಂದು ಬೇಡಲಿ ದೃಷ್ಟವುೂರುತಿ ಕೃಪೆ ಹುಟ್ಟಿಸಲಹೈ ಎನ್ನನು ಸಾರಿ ಹೆನಾನು।
ಸೃಷ್ಟಿಯೊಳಗೆಲ್ಲ ಅಧಿಕವಾಗಿಹ ಶ್ರೇಷ್ಠ ಸೋಮೆಕಟ್ಟೆ ಗುರುವರ।
ಪಟ್ಟದ ಕರಿವೃಷಭ ನೀ ಕೃಪೆಯಿಟ್ಟು ಸಲಹೋ ಜೀಯ।

ಕೊಡು ಎನಗೆ ವರವ ಕರಿವೃಷಭೇಂದ್ರನೇ ಬೇಡುವೆ ನಾ ನಿಮ್ಮ ವರವನು.॥ಪ॥

ಆಡೋದ ಬದ್ಧ ಮಾತಾಡೋದೆಲ್ಲ ಕುಟಿಲ ನೋಡಿದರೇನು ಹುರುಳಿಲ್ಲವು.
ಬೇಡಿಕೊಂಬೆನು ನಿಮ್ಮ ಕೂಡಿಯಗಲದೆನ್ನ ನೋಡು ನಿಮ್ಮ ಕರುಣ ದೃಷ್ಟಿಯಲಿ. ॥೧

ಕರಮುಗಿವೆನು ಮನ್ನಿಸಯ್ಯ ಶ್ರೀಗುರುನಾಥ ನೆರೆಹೊರೆಯವರೆಲ್ಲ ನಗುತಿಹರು.
ಮರವಯಿಂದಲಿ ಮಾಡಿದ ತಪ್ಪುಗಳನು ಚರಣಕೆ ವಂದಿಪೆನು ಸಲಹೊ ಪ್ರಿಯ ॥೨॥

ಇಷ್ಟೊಂದು ಕೋಪವು ನಿಮ್ಮೊಳಗಿರ್ದೊಡೆ ನಷ್ಟವಾಗದೆ ನಾನುಳಿವೆನೆ
ಶ್ರೇಷ್ಠ ಸೋಮೆಕಟ್ಟೆ ಕರಿವೃಷಭೇಂದ್ರನ ಬಿಟ್ಟು ಹೋಗದೆಯನ್ನ ಸಲಹೊ ಜೀಯ ॥೩॥

---

ನನ್ನಿರವನಾನರಿದೆ ಇತರ ಸಂಗವ ತೊರೆದೆ
ಕುನ್ನಿ ದೇಹವಿದು ನನ್ನದಲ್ಲೆಂದರಿದೆ

ಅಂಬಲಿಯಾದರೂ ಸಮನೆ ಹಾಲುಸಕ್ಕರೆ ಸಮನೆ
ಕಂಬಳಿಯಾದರೂ ಸಮನೆ ಕಾಶ್ಮೀರ ಶಾಲಾದ್ರು ಸಮನೆ॥೧॥

ಶರಣು ಮಾಡಿದರೊಂದೆ ಸೇರದಿರ್ದರೂ ಒಂದೆ
ಸೆರಗಿಡಿದೆಳೆದರೂ ಒಂದೆ ಶ್ವಾನೆ ಉಪಚರಿಸಿದರೂ ಒಂದೆ ॥೨॥

ಮಠದಲಾದರೂ ಒಂದೆ ನದೀ ತಟದಲಾದರೂ ಒಂದೆ
ಮಂಚದ ಮೇಲಾದರೂ ಒಂದೆ ಕಾದ ಹಂಚಿನ ಮೇಲಾದರೊಂದೆ ॥೩॥

ಸಂಚಿತವಿದ್ದಂತೆಯಾದರೂ ನಡೆಯಲೆಂದು ಶಾಬಾಸಾದರು ಒಂದೆ॥
ಆಭಾಸಾದರೂ ಒಂದೆ ಶಾಬಾಸಾಭಾಸಿಗೆ ನಿಲುಕ ಈ ಬಾಸು ನಾವೆಯಾಗಿ ॥೪॥

ಶ್ರೇಷ್ಠನಾದರು ಎನಲಿ ಬಹು ಕಷ್ಟನೆಂದರೂ ಎನಲಿ।
ಇಷ್ಟ ಸೋಮೆಯ ಕಟ್ಟಿ ಕರಿವೃಷಭಗೇನಿಲ್ಲವಾಗಿ ॥೫॥

---

ಲಿಂಗದೇವ ನಿಮ್ಮ ಸೂತ್ರ ಹ್ಯಾಂಗೆ ಹ್ಯಾಂಗೆ ನಟಿಸುತಿರ್ಪೆ
ಮಂಗಮನುಜ ನಾನೇ ನರಿಯೆ ಮಂಗಳಾತ್ಮಕ ನೀನೆ ಬಲ್ಲೆ ॥ಪ॥

ಇರುವೆ ಮೊದಲು ಆನೆ ಅಂತ್ಯ ಇರುವ ಜೀವ ಬಸುರಿನಲ್ಲಿ
ತೊಳಲಿ ತೊಳಲಿ ಬಳಲಿ ಬಂದೆನು ನಿಮ್ಮ ಕಾಣದೆ ॥೧॥

ಎನ್ನ ಅಂತರಂಗದಲ್ಲಿ ಇರುವ ಚಿಂತೆಯನೆಲ್ಲ ಬಲ್ಲೆ
ಕಾಂತ ನೀನೆ ಬಂದು ಕೂಡೇಕಾಂತವಾಸಿಯೆ ॥೨॥

ವಿರಹ ತಾಳಲಾರೆನಯ್ಯ ಪರಮಸೋಮೆಯ ಕಟ್ಟೆ ಪ್ರಿಯ
ಶರಣು ಹೊಕ್ಕೆನಯ್ಯ ಜೀಯ, ಕರಿವೃಷಭಲಿಂಗಯ್ಯ ॥೩॥

---

ಎಂತಾಯಿತೆಂತಾಯಿತು ಶ್ರೀಗುರುಬೋಧೆಯೆಂತಾಯಿತೆಂತಾಯಿತು
ಎಂತಾಯಿತೆಂತಾಯಿತೆಂತಾಯಿತೆನ್ನೊಳು ಅನಂತ ಬೆಳಗು ತುಂಬಿತು ॥ಪ॥

ದೂರದಿ ಕರೆದನಲ್ಲೆ ಎನ್ನನು ಬಾರೆಂದು ಜರೆದನಲ್ಲೆ ದೂರದಿ ಕರೆದೆನ್ನ
ಬಾರೆಂದು ಬೆರೆಯಲು ಮೇರೆದಪ್ಪಿರುವಂತಾಯಿತು ತನ್ನೊಳಗೆ ತಾನು ॥೧॥

ನಿರಿವಿಡಿದು ಸೆಳೆದನಲ್ಲೆ ಎನ್ನೊಳು ಕೂಡಿ ಇರು ಎಂದು ಒರೆದನಲ್ಲೆ ನಿರಿವಿಡಿದೆಳೆದುತಾ
ಒರೆಯಲು ಎನ್ನಯ ಅರಿವು ಉಕ್ಕಿತು ಎನ್ನ ಹರಿದು ಹೋಯಿತು ಪಾಪ ॥೨॥

ಬೇಗ ಹೋಗಗೊಡದೆ ಎನಗೊಂದು ರಹಸ್ಯವ ತೋರಿದನೆ, ರಹಸ್ಯದೊ
ಳಗೊಂದು ಕಪ್ಪೆ ಸರ್ಪವನುಂಗಿ ಮೋಸಹೋಗದ ಮುನ್ನ ರಹಸ್ಯವ ಬೆಸಸಿದ ॥೩॥

ಕರಕಮಲಮಧ್ಯದಲಿ ಶ್ರೀಗುರುಕೊಟ್ಟ ವರ ಇಷ್ಟವನು ಪೂಜಿಸಿ ಕರಕಮಲದೊಳಿರ್ದ
ವರ ಇಷ್ಟವನು ಪೂಜಿ ನರರಿಗೆ ಒರೆಯದಂತಿರುವ ನಾನೇನೆಂದು ॥೪॥

ನಾನಾರ್ಥದ ತತ್ವವು ಇದನು ನೀಜ್ಞಾನಾರ್ಥದಿ ನೋಡಲು ನಾನಾರ್ಥವು ಎಲ್ಲಾ
ಜ್ಞಾನಾರ್ಥವೆಯಾಗಿ ಬೋಧಮಯನು ಸೋಮೆಕಟ್ಟೆ ದೇವನೊಳಾಯ್ತು ॥೫॥

---

ಸ್ತುತಿಮಾಡಿದರೀಗ ಅತಿಸಿಂದ್ಯಖತಿಗೊಂಬೆ ಹೇ ಮನವೇ ಮನವೇ
ಸ್ತುತಿಮಾಡಿನವರು ಎನ್ನಿತರರೆಂದೆನಬೇಡ, ಹೇ ಮನವೇ ಮನವೇ ॥ಪ॥

ಕೊಂಡಾಡುವರ್ಕೆಲರ್ನಿಂದ್ಯಮಾಡುವರ್ಕೆಲರ್ ಹೇ ಮನವೇ ಮನವೆ
ಅಖಂಡ ತತ್ವವೆಂದು ನೀ ಮಂಡಲತ್ರಯ ತಿಳಿ, ಹೇ " ॥೧॥

ಕಂಡಿ ಎಲ್ಲವ ಮುಚ್ಚಿ ಉದ್ದಂಡನ ಧ್ಯಾನಿಸು, ಹೇ "
ತಂಡ ತಂಡಾ ಪ್ರಭೆ ಕಂಡು ನೀ ಸುಖಮಿರು, ಹೇ " ॥೨॥

ಕರಮನ ಭಾವದೊಳಿರುವಂಥ ಲಿಂಗವೇ, ಹೇ "
ಗುರುಮುಖದೊಳು ಕರಸ್ಥಲದ ಲಿಂಗವ ಕಂಡು, ಹೇ " ॥೩॥

ಸ್ಥಿರವಾಗಿ ಭಜಿಸು ನೀ ಪರಿತ್ಯದು ಭವಮಾಲೆ, ಹೇ "
ಶರಣರ ನಡೆಗಳ ಜರಿದು ನೀ ನಡೆಯದಿರು, ಹೇ ,, ॥೪॥

ಮರ್ತ್ಯಲೋಕದ ಬಾಳು ನಿತ್ಯವಲ್ಲದು ಜಳ್ಳು, ಹೇ ,,
ಕರ್ತೃತ್ವವಿದ್ದಲ್ಲಿ ಭೃತ್ಯನಾಗಿರು ನೀನು, ಹೇ ,, ॥೫॥

ಜನಮೆಚ್ಚಿ ನಡೆದರೆ ಗುರುಮೆಚ್ಚುವನಲ್ಲ ಹೇ ,,
ಗುರುಮೆಚ್ಚಿ ನಡೆದರೆ ಜನಮೆಚ್ಚುವದಿಲ್ಲ, ಹೇ ,, ॥೬॥

ಇಷ್ಟಲಿಂಗದಿ ಭಕ್ತಿ ದೃಷ್ಟಿಯ ಬಲಿದಿರು, ಹೇ ,,
ದಿಟ್ಟ ಸೋಮೆಯಕಟ್ಟೆ ದೇವ ನೀನಾಗುವೆ, ಹೇ ಮನವೇಮನವೇ ॥೭॥

---

ಸುಷುಮ್ನೆ ದೊರೆವುದೆ ಮುಕ್ತಿ ಪರಬ್ರಹ್ಮದ ನಿಜವನು ತಿಳಿವುದೆ ಮುಕ್ತಿ ॥ಪ॥

ಎರಡೊಂದುಗೂಡುವತ ನಕ ಎರಡರ ಮಥನದಿ ಶಿಶುಹುಟ್ಟುವತನಕ
ಶಿಶುವನು ಭಕ್ಷಣೆ ಮಾಡುವತನಕ ಅಲ್ಲಿ ಖಂಡಿತನಾಗಿ ಅಖಂಡನಾಗುವ ತನಕ ॥೧॥

ಮೊಸರು ಗಡಿಗೆ ಮಂತನಿಡದೆ ಒಳ್ಳೆ । ಹಸನಾಗಿ ಕಡೆವ ಸಮಯಕೆ ಕೈಗೊಡದೆ
ಜಠರಾಗ್ನಿಯೊಳಗಡ ನಿಡದೆ । ನಿಟಿಲ ಭ್ರೂಮಧ್ಯದೊಳಡಗಿಸಿ ಕೊಳದೆ ॥೨॥

ಕೆಟ್ಟ ಮನುಜರಿದ ಬಿಟ್ಟು ತಮ್ಮ ದೃಷ್ಟಿಗೆ ಬಿದ್ದ ಅರ್ಥಕೆ ಎದೆಗೊಟ್ಟು
ಕೆಟ್ಟು ಹೋಹರು ತಾವು ಭ್ರಷ್ಟ ಸೋಮೆಕಟ್ಟೆದೇವನ ಪಾದವರಿಯದ ಬಿಟ್ಟು ॥೩॥



# ಬಸವನ ತತ್ವಬೋಧ ಅಥವಾ ಸುವಿಚಾರದ ಬೆಳಕು.

( ಎಸ್. ಎಸ್. ಮಾಳವಾಡ. ಬಿ. ಏ. ಆನರ್ಸ್ ಬೆಳಗಾವ)

ಒಮ್ಮೆ ಧಾರವಾಡದ ಮುರಘಾರಾಜ ಬೋರ್ಡಿಂಗಿನಲ್ಲಿ ಬೆಂಗಳೂರಿನ ಓರ್ವ ಪ್ರಸಿದ್ಧ ಸಾಹಿತಿಗಳ ಭಾಷಣವಾಯಿತು. ಅವರು ಭಾಷಣದ ಪ್ರಾರಂಭಕ್ಕೆ ಹೀಗೆ ಹೇಳಿದರು.

"ಮಹನಿಯರೇ, ವೀರಶೈವರಲ್ಲಿಯೇ ಕೆಲವರು ಬಸವನನ್ನು ನಿಂದಿಸುವರಂತೆ. ನಿಮ್ಮಲ್ಲಿ ಬಸವ ವಿರೋಧಿ ಪಕ್ಷವೇ ಉಂಟಾಗಿದೆಯಂತೆ. ನಿಮಗೆ ಬಸವನು ಬೇಡಾಗಿದ್ದರೆ ದಯವಿಟ್ಟು ನಮಗೆ (ಭಾಷಣಕಾರರು ಬ್ರಾಹ್ಮಣರು) ಅವನನ್ನು ಕೊಟ್ಟು ಬಿಡಿ. ನಾವು ಆತನನ್ನು ಪೂಜಿಸುವದಕ್ಕೆ ಹಾತೊರೆಯುತ್ತಿದ್ದೇವೆ." ಇತ್ಯಾದಿ. ಅರ್ಥಾತ್ ಬಸವನ ತತ್ವಗಳನ್ನು ಅರಿತವರು ಆತನೊಬ್ಬ ಜಗದ್ವಂದ್ಯ ವಿಭೂತಿಯೆಂದು ಒಪ್ಪುತ್ತಾರೆ.

ಬಸವನು ದೂರದೃಷ್ಟಿ ಶಾಲಿಯು. ಜಗನ್ಮಾನ್ಯ ತತ್ವಗಳು ಆತನವು. ಜಗದ್ವಂದ್ಯ ವಿಭೂತಿ ಅವನು. ಆದರೇನು? ಕರ್ನಾಟಕದ ಹೊರಗೆ ಬಸವನ ಹೆಸರು ಹೆಚ್ಚಾಗಿ ಕೇಳಬರುವದಿಲ್ಲ. ಕರ್ನಾಟಕದಲ್ಲಿಯೂ ಕೂಡ ಆತನು ವೀರಶೈವರಿಗೇ ಮಾನ್ಯನು. ಅಲ್ಲಿಯೂ ಕೂಡ ಬಸವನ ವಿರೋಧೀ ಪಕ್ಷ. ಸಮಾಜದಲ್ಲಿ ಉಚ್ಚನೀಚ ಭೇದವನ್ನು ಕಲ್ಪಿಸಿ ತಮಗೆ ಅನುಚಿತ ಅಧಿಕಾರಗಳನ್ನು ಕಲ್ಪಿಸಿಕೊಂಡು ಅಟ್ಟಹಾಸ ಮಾಡಬೇಕೆನ್ನುವ ತಂಡವೊಂದು ಈಚೆಗೆ ಬಸವನನ್ನು ದೂಷಿಸುತ್ತದೆ. ಅದಕ್ಕೆ ಕಾರಣವೇನಂದರೆ ಬಸವನು ಉಚ್ಚನೀಚ ಭೇದವನ್ನು ತೆಗೆದು ಹಾಕಿ ಎಲ್ಲರೂ ಸಮಾನರೆಂದು ತಿಳಿದನು. ವಿಚಿತ್ರ. ಯಾವದಕ್ಕಾಗಿ ಬಸವನು ಪೂಜ್ಯನೆಂದು ಗಣಿಸಲ್ಪಡಬೇಕಾಗಿತ್ತೋ ಅದೇ ಕಾರಣಕ್ಕಾಗಿ ಸ್ವಾರ್ಥಿಗಳು ಅವನನ್ನು ತೆಗಳುವರು. ಅಂತಹರ ದೃಷ್ಟಿಯು ಕಲುಷಿತವಾಗಿರುವದರಿಂದ ಅವರ ನಿಂದೆಗೆ ಗಮನ ಕೊಡುವದು ಅವಶ್ಯವಿಲ್ಲ. ಬಸವನ ಚಾರಿತ್ರ್ಯವನ್ನೂ, ಸಾಧನೆಯನ್ನೂ, ತತ್ವಗಳನ್ನೂ ಅರಿತವರು ನಿರ್ವಿಕಾರ ಮನಸ್ಸಿನಿಂದ ನಿಶ್ಚಯಿಸುವದಾದರೆ, ಬಸವನು ಮಹದ್ವಿಭೂತಿಯೇ ಸರಿ. ಆದರೆ ಬಸವನ ಚಾರಿತ್ರ್ಯವನ್ನೂ, ಸಾಧನೆಯನ್ನೂ, ತತ್ವ

ಗಳನ್ನೂ ಅರಿತವರು ಕಡಿಮೆ. ಅರಿಯುವದಕ್ಕೆ ಅನುಕೂಲ ಸಾಧನಗಳ ಅಭಾವ. ಅದಕ್ಕಾಗಿಯೇ ಬಸವನಿಗೆ ದುರದೃಷ್ಟಿಶಾಲಿ ಎನ್ನುವದು. ಹನ್ನೆರಡನೇ ಶತಮಾನದಲ್ಲಿ ಮಹತ್ವದ ಕ್ರಾಂತಿಯನ್ನುಂಟು ಮಾಡಿ, ಕರ್ನಾಟಕದ ಸಾಮಾಜಿಕ, ಧಾರ್ಮಿಕ. ಆರ್ಥಿಕ, ನೈತಿಕ, ಸಾಹಿತ್ಯ ರಂಗಗಳಲ್ಲಿ ಹೊಸದೊಂದು ಕಳೆಯನ್ನು ತಂದು ಸರ್ವತೋಮುಖ ಬೆಳವಣಿಗೆಗೆ ಕಾರಣನಾದ ಮಹಾಪುರುಷನ ಜೀವನ ಚರಿತ್ರೆಯು ಇನ್ನೂ ಸ್ಪಷ್ಟವಾಗಿ ದೊರೆತಿಲ್ಲ. ಬಸವನ ಧವಳಮೂರ್ತಿಯು ಸ್ವಕೀಯರ ಅತಿರೇಕ ಚಿತ್ರದಿಂದ, ಪರಕೀಯರ ಕಾಡಿಗೆಯಿಂದ ಮಸಕಾಗಿ ಹೋಗಿದೆ. ವೀರಶೈವ ಪುರಾಣಕಾರರ ಮನಸೋಕ್ತ ಹೊಗಳಿಕೆಯಿಂದಾಗಲಿ, ಜೈನ ಪುರಾಣಗಳ ತೆಗಳಿಕೆಯಿಂದಾಗಲಿ, ಬಸವನ ಮೂರ್ತಿ ಸ್ವರೂಪವನ್ನು ಕಂಡುಕೊಳ್ಳುವದು ಸಾಧ್ಯವಿಲ್ಲ. ಇತಿಹಾಸವೂ ನಮಗೆ ಈ ದಾರಿಯಲ್ಲಿ ಬೆಂಬಲವಾಗಿ ನಿಂತಿಲ್ಲ. ಹೀಗಾಗಿ ಬಹು ಜನರಿಗೆ ಬಸವನ ಚರಿತ್ರದ ವಿಷಯವಾಗಿ ಅಜ್ಞಾನ. ಇನ್ನು ಆತನ ತತ್ವಗಳ ರೀತಿಯೂ ಹೀಗೆಯೇ. ಕೆಲವರು ತಿಳಿದು ಕೊಳ್ಳಲಿಕ್ಕೆ ಪ್ರಯತ್ನ ಮಾಡಿಲ್ಲ. (ಬಸವನ ಭಕ್ತರಾದ) ಎಷ್ಟೋ ಜನರಿಗೆ ಆತನ ತತ್ವಗಳೇ ತಿಳಿದಿಲ್ಲ. ಬಸವ ವಿರೋಧಿಗಳು ಆತನ ತತ್ವಗಳನ್ನು ತಪ್ಪಾಗಿ ತಿಳಿದುಕೊಂಡಿದ್ದಾರೆ. ಸರಿಯಾಗಿ ತಿಳಿದು ಕೊಂಡವರು ಇದ್ದರೂ, ಅದನ್ನು ಒಪ್ಪದ ಹಟಮಾರಿಗಳು ಕೆಲವರು. ಕೆಲವು ನಿಸ್ಸೀಮ ಬಸವ ಭಕ್ತರಿಗೆ ವಿಶಾಲ ದೃಷ್ಟಿಯಿಲ್ಲದ್ದರಿಂದ ಬಸವ ತತ್ವ ಪ್ರಸಾರಣೆಯು ಚನ್ನಾಗಿ ನಡೆದಿಲ್ಲ. ಅಂತೂ, ಇಂತೂ, ಕುಂತೀ ಮಕ್ಕಳಿಗೆ ರಾಜ್ಯವಿಲ್ಲವೆಂಬಂತೆ ಬಸವನಿಗೆ ದೊರೆಯಬೇಕಾದ ಮನ್ನಣೆ ದೊರೆತಿಲ್ಲ.

ಇತ್ತೀಚಿನ ಪರಿಸ್ಥಿತಿಯು ಸ್ವಲ್ಪ ಆಶಾಜನಕವಾಗಹತ್ತಿದೆ. ಬಸವನ ಘನತೆಯನ್ನು ಜನರು ಆರಿಯಹತ್ತಿದ್ದಾರೆ. ಅಷ್ಟೇ ಏಕೆ? ಇಂದಿನ ಅಸ್ತವ್ಯಸ್ತ ಧರ್ಮರಚನೆಯಲ್ಲಿ ಸುಧಾರಣೆಯುಂಟಾಗಬೇಕಾದರೆ ಬಸವ ತತ್ವಗಳೇ ತರುಣೋಪಾಯವೆಂಬದು ಜನರಿಗೆ ನಿದರ್ಶನಕ್ಕೆ ಬರಹತ್ತಿದೆ. ಬಸವನು ಜನತೆಯ ಮನವನ್ನು ಆಕರ್ಷಿಸಹತ್ತಿದ್ದಾನೆ.

ಬಸವನ ಚರಿತ್ರ, ಸಾಧನೆ, ತತ್ವಗಳ ಅರಿವು ನಮಗೆ ಅವಶ್ಯಕವಷ್ಟೇ. ಈ ಪುಟ್ಟ ಬರಹದಲ್ಲಿ ಅವೆಲ್ಲವುಗಳ ವಿವರಣೆಗೆ ಅವಕಾಶವಿಲ್ಲ. ಇಷ್ಟಲ್ಲದೆ

ಇತಿಹಾಸ ಬೆಂಬಲವಿಲ್ಲದ್ದರಿಂದ ಬಸವನ ಚರಿತ್ರವನ್ನು ನಿಷ್ಕರ್ಷವಾಗಿ ಹೇಳಲಿಕ್ಕೆ ಸಾಧ್ಯವಿಲ್ಲದಾಗಿದೆ. ಆದರೆ ಬಸವನ ವಚನಗಳಿಂದ ಆತನ ತತ್ವಗಳನ್ನು ಅರಿಯಬಹುದು. ಕನ್ನಡ ಸಾಹಿತ್ಯ ಕೃತಿ ರತ್ನಗಳಾದ ವಚನಗಳನ್ನು ಅಭ್ಯಾಸಿಸುವದು ಕನ್ನಡಿಗರ ಕರ್ತವ್ಯವೆಂಬದನ್ನು ಬೇರೆ ಹೇಳುವ ಆವಶ್ಯವಿಲ್ಲ. ಈ ಬರೆಹದಲ್ಲಿ ಬಸವನ ವಚನಗಳಿಂದ ಸಂಗ್ರಹಿಸಲ್ಪಟ್ಟ ಬಸವನ ತತ್ವಗಳ ವಿಷಯವಾಗಿ ಕೆಲವು ಮಾತುಗಳನ್ನು ಪ್ರಸ್ತಾಪಿಸಬೇಕೆಂದಿದ್ದೇನೆ

ಕರ್ಮಕಾಂಡದಲ್ಲಿ ಮುಳುಗಿ ಏಳುತ್ತಿದ್ದ ಧರ್ಮದ ವಿರುದ್ಧವಾಗಿ ಬಂಡಾಯ ಹೂಡಿದನು ಬಸವ. ಅಂತೆಯೇ ಆತನು ವಚನಗಳಲ್ಲಿ (೧) ಡಾಂಭಿಕ ವ್ರತನಿಯಮಗಳ ಖಂಡನವನ್ನು ಚನ್ನಾಗಿ ಮಾಡಿದ್ದಾನೆ. "ಮಾತಿನಂತೆ ಮನವಿಲ್ಲದ ಜಾತಿ ಡೊಂಬರನ್ನು ತೆಗಳಿದ್ದಾನೆ." ಆಂತರಿಕ ಭಕ್ತಿಯಿಲ್ಲದೆ ಇಲ್ಲದ ಸೋಗು ನಟಿಸುವ ಕಪಟಿಗಳನ್ನು ಕಂಡರೆ ಆತನಿಗೆ ಕಡುಕೋಪ. "ಗೀತವ ಹಾಡಿದಡೇನು? ಶಾಸ್ತ್ರಪುರಾಣಗಳ ಕೇಳಿದಡೇನು? ವೇದ ವೇದಾಂತವ ನೋಡಿದಡೇನು?" ಎಂದು ಕೇಳುತ್ತಾನೆ ಬಸವ. ಆ ಮಾತಿನಲ್ಲಿ ಹುರುಳಿದೆ. "ಮನವರಿದು ಪೂಜಿಸಿದೊಡೆ ಏನು ಮಾಡಿದರೆ ಏನು." ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ. ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ. ನೀರ ಕಂಡಲ್ಲಿ ಮುಳುಗಿ ಮರಕಂಡಲ್ಲಿ ಸುತ್ತುವರಯ್ಯ" ತನುಮನಧನವ ಸಮರ್ಪಿಸದೆ ಇದ್ದರೆ ಹಲವು ಮಣಿಯ ಕಟ್ಟಿ ಕುಣಿದಾಡಿದರೇನು? ಆದಕಾರಣ ಕೋಟ್ಯಾನುಕೋಟಿ ಜಪಮಾಡಿ ಕೋಟಲೆಗೊಳ್ಳಲೇಕೆ? ಎಂಬುದೇ ಬಸವನ ಆಶಯ. (೨) ಬಸವನು ಒಣ ಶಾಸ್ತ್ರ ಪುರಾಣಗಳನ್ನು ಸೇರುವದಿಲ್ಲ. ಯಾಕಂದರೆ ಓದಿದರೇನು, ಕೇಳಿದರೇನು ಶಿವಪದ ಗೊತ್ತಿಲ್ಲದಿದ್ದರೆ? ಶಾಸ್ತ್ರವು ಘನವೆಂಬೆನೆ? ಕರ್ಮವ ಭಜಿಸುತ್ತಿಹುದು. ವೇದ ಘನವೆಂಬೆನೆ? ಪ್ರಾಣವಧೆಯ ಹೇಳುತ್ತಿದೆ. ಸ್ಮೃತಿಯು ಘನವೆಂಬೆನೆ? ಮುಂದಿಟ್ಟು ಅರಸುತ್ತಿದೆ. ಅಲ್ಲೆಲ್ಲಿಯು ನೀನಿಲ್ಲ ಎಂದು ಸಾರುತ್ತಾನೆ. ಭಕ್ತಿಯು ಮಾತಿನ ಮಾಲೆಯಲ್ಲಿಲ್ಲ. ಮಂತ್ರಗಳ ತಂತ್ರದಲ್ಲಿಲ್ಲ. ಶುಷ್ಕ ಆಚಾರದಲ್ಲಿಲ್ಲ. ಧರ್ಮದ ವೇದದಲ್ಲಿಲ್ಲ. ತತ್ವಗಳ ಮೋಸವಲ್ಲಿಯೂ ಇಲ್ಲ. ಆದಕ್ಕೆ ಬಸವನು ಹೇಳುವದು ವೇದಕ್ಕೊರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳನಿಕ್ಕುವೆ. ಆಗಮದ ಮೂಗ ಕೊಯ್ಯುವೆ ಎಂದು ಲೆಕ್ಕವಿಲ್ಲದಷ್ಟು ದೇವತೆಗಳನ್ನು ಕಲ್ಪಿಸಿಕೊಂಡು ಹಲವು ಕೊಂಬೆಗೆ ಹಾಯುತ್ತಿದ್ದ, ಜನರು

ಅನಾವಶ್ಯವಾದ ಕಲಹಗಳಲ್ಲಿ ತೊಡಗಿದ್ದರು ಆಗಲೂ ಕೂಡ. ಅವರ ಅಜ್ಞಾನವನ್ನು ಹೋಗಲಾಡಿಸುವದಕ್ಕೆ ಬಸವನು ಏಕ ಕಂಠದಿಂದ ಉದ್ಘೋಷಿಸಿದನು (೩) ದೇವನೊಬ್ಬನೇ ಎಂದು. "ನಂಬಿದ ಹೆಂಡತಿಗೆ ಗಂಡನೊಬ್ಬನೇ ಕಾಣಿರೋ. ನಂಬಬಲ್ಲ ಭಕ್ತರಿಗೆ ದೇವನೊಬ್ಬನೇ ಕಾಣಿರೋ." ಈ ಮಾತುಗಳು ಎಷ್ಟು ಮಾರ್ಮಿಕವಾಗಿವೆ? "ದೇವನೊಬ್ಬ ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ." ಅನೇಕ ದೇವಗಳನ್ನು ನಂಬುವವರ ಹಟಮಾರಿತನವನ್ನು ಹೋಗಲಾಡಿಸುವದಕ್ಕೆ ಇಂತಹ ಮಾತುಗಳನ್ನು ತೀಕ್ಷ್ಣವಾಗಿಯೂ ಹೇಳಿದ್ದಾನೆ. ಮನದಲ್ಲಿ ನಾಟುವಂತೆಯೂ ಹೇಳಿದ್ದಾನೆ. "ಹಾಳು ಮೊರಡಿಗಳಲ್ಲಿ, ಊರ ದಾರಿಗಳಲ್ಲಿ ಕೆರೆ ಭಾವಿ ಹೂಗಿಡ ಮರಂಗಳಲ್ಲಿ, ಗ್ರಾಮದ ಮಧ್ಯದಲ್ಲಿ, ಚೌಪಥ ಪಟ್ಟಣ ಪ್ರದೇಶದಲ್ಲಿ ಹಿರಿಯಾಲದ ಮರದಲ್ಲಿ... ಮಾರಯ್ಯ, ಬೀರಯ್ಯ ಖೇಚರಗಾವಿಲ, ಅಂತರ ಬೆಂತರ, ಕಾಳಯ್ಯ, ಮಾಳಯ್ಯ ಕೇತಯ್ಯಗಳೆಂಬ ನೂರು ಮಡಿಕೆ" ಗಳು ಬೇಡೆಂದು ಸಾರಿಸಾರಿ ಹೇಳಿದ್ದಾನೆ. ಮತ್ತೂ ಮಡಿಕೆಯೇ ದೈವವು, ಮರದಲ್ಲಿ ದೈವವು. ಬೀದಿಯ ಕಲ್ಲೇ ದೈವವು. ಹಣವೇ ದೈವ ಎಂಬದಾಗಿ ಅತ್ತಲಿತ್ತ ಅರಸುವದರಲ್ಲೇನೂ ಹುರುಳಿಲ್ಲ. ದೇವನೊಬ್ಬನೇ. ಇಬ್ಬರು, ಮೂವರು ದೇವರು ಎಂಬದಾಗಿ ಉಬ್ಬುಬ್ಬಿ ಮಾತಾಡುವವರಿಗೂ ಇದನ್ನೇ ಹೇಳಿದ್ದಾನೆ. ಅವಸರ ಬಂದರೆ ಮಾಡುವ ದೈವಗಳನ್ನು ಹಾಸ್ಯ ಮಾಡಿದ್ದಾನೆ.

ಒಂದೇ ದೇವರಲ್ಲಿ ನಿಜವಾದ ಭಕ್ತಿಯು ಬೇಕು. ಕರ್ಮಠರ ಪೊಳ್ಳುತನದಲ್ಲಿ, ವರ್ಣಾಶ್ರಮದ ಜೊಳ್ಳುತನದಲ್ಲಿ ಬಸವನ ನಂಬಿಗೆಯಿಲ್ಲ. ಸದುದ್ದೇಶದಿಂದ ಕಲ್ಪಿತವಾಗಿದ್ದರೂ ವರ್ಣಾಶ್ರಮಗಳು ದುರುದ್ದೇಶ ಸಾಧನೆಗೆ ಸಹಾಯವಾದವು. ಗುಣಕರ್ಮ ವಿಭಾಗದಿಂದ ಏರ್ಪಡಿಸಲ್ಪಟ್ಟ (चातुर्वर्ण्यं मयासृष्टं गुणकर्म विभागशः) ಚತುರ್ವರ್ಣಗಳಿಗೆ ಜನ್ಮವೇ ತಳಹದಿಯಾಗಿ ಸ್ವಾರ್ಥ ಸಾಧನೆಗೆ. ಪರಕೀಯರನ್ನು ಕಾಲ್ಕೆಳಗೆ ತುಳಿಯುವದಕ್ಕೆ ಉಪಯೋಗಿಸಿದ್ದನ್ನು ನೋಡಿ ಬಸವನು ಸಂತಾಪಗೊಂಡನು. ಸಹಜವೇ ಇದು. ಯಾಕಂದರೆ ಯೋಗ್ಯತೆಯು ಇಲ್ಲದೆ ಹೆಸರಿನಿಂದ ಮಾತ್ರ ದೊಡ್ಡವರಾಗಿ ಮೆರೆದು ಸ್ವಾರ್ಥಿಗಳಾಗಿ ಅನ್ಯರನ್ನು ಹತ್ತಿಕ್ಕುವದು ದಯಾರ್ದ್ರ ಹೃದಯದ ಬಸವನಿಗೆ ಹೇಗೆ ಸಹನವಾದೀತು? ಅಷ್ಟಲ್ಲದೆ ಈ ರೀತಿಯ ಅನ್ಯಾಯಕ್ಕೆ ಶಾಸ್ತ್ರ ಪ್ರಮಾಣಗಳನ್ನು ಹೇಳಿ ಸುಲಿಗೆಗೆ

ಕಟ್ಟಳೆಯು ಬೆಂಬಲವನ್ನು ತೋರಿಸುವದನ್ನು ನೋಡಿ ಬಸವನು ಸಂತಾಪಗೊಂಡು ವರ್ಣಾಶ್ರಮದ ಜೊಳ್ಳುತನವನ್ನೂ, ಕರ್ಮಠರ ಪೊಳ್ಳುತನವನ್ನೂ, ಸಾರಿ, ಸಾರಿ ಹೇಳಬೇಕಾಯಿತು. (೪) ಮನುಷ್ಯನು ಜಾತಿಯಿಂದ, ಉದ್ಯೋಗದಿಂದ ಮೇಲು, ಕೀಳುಗಳನ್ನು ಪಡೆಯಲಾರನೆಂಬ ಜಗನ್ಮಾನ್ಯ ತತ್ವವನ್ನು ಬಸವನು ಸಾರಿದನು. ಕುಲದಲ್ಲಿ ಹೆಚ್ಚುಕಡಿಮೆಗಳಿಲ್ಲವೆಂದು ಉದ್ಘೋಷಿಸಿದನು. "ಕುಲವೊಂದೇ ತನ್ನ ತಾನರಿದಂಗೆ" ಕುಲಮದವಳಿಯುದನ್ನಕ್ಕರ ಶರಣನಾಗಲಾರನು. (जन्मानां जायते शूद्रः क्रियाणां जायते ब्राह्मणः) ಸಾಧನೆಯಿಂದ, ಗುಣದಿಂದ, ಯೋಗ್ಯತೆಯಿಂದ ಕೀಳುದೆಸೆಯಲ್ಲಿದ್ದ ಮಾನವನೂ ಉಚ್ಚಪದವಿಗೇರಬಹುದೆಂಬದನ್ನು ತೋರಿಸಿದನು. ವ್ಯಾಸ ಭೋಯಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ, ಮಂಡೋದರಿ ಕಪ್ಪೆಯ ಮಗಳು. ಆದುದರಿಂದ ಕುಲವನರಸಬಾರದು. ಕುಲದಿಂದೇನಾಗುತ್ತದೆ? ಸಾಕ್ಷಾತ್ ಅಗಸ್ತ್ಯ ಕಬ್ಬಲಿಗ, ದುರ್ವಾಸ ಮಚ್ಚಿಗ. ಕಶ್ಯಪ ಕಮ್ಮಾರ, ಕೌಂಡಿಲ್ಯ ನಾಯಿದ. ಆದುದರಿಂದ ಇವರೆಲ್ಲರ ಘನತೆಯೇನು ಕಡಿಮೆಯಾಗಿಲ್ಲವಷ್ಟೇ. ನಮಗೆ ಬೇಕಾದುದು ಕುಲವಲ್ಲ. ಆಚಾರ, ವಿಚಾರ. ಬಸವನು ಈ ತತ್ವವನ್ನು ಎಷ್ಟು ಕಳಕಳಿಯಿಂದ ಪಾಲಿಸಿದನೆಂಬದನ್ನು ಆತನ ಅನುಯಾಯಿಗಳ ಹೆಸರುಗಳಿಂದ, ಅನುಭವ ಮಂಟಪದ ಚರ್ಚೆಗಳಿಂದ ಕಂಡುಕೊಳ್ಳಬಹುದು. ಕುಲವು ಹೀನ ದೀನವೆಂದು, ಕನಿಷ್ಠವೆಂದು ತಿಳಿಯಲ್ಪಟ್ಟವರನ್ನೂ ತನ್ನ ಸಮಾನಸ್ಕಂಧರೆಂದೂ, ತನ್ನಕಿಂತಲೂ ಹೆಚ್ಚೆಂದು ಭಾವಿಸಿದನು, ಆ ಬಸವ. ಯಾಕಂದರೆ ಆತನು ಯೋಗ್ಯತೆಯನ್ನು ನೋಡಿದನು. ಕುಲವನ್ನಲ್ಲ. ಈ ಬುದ್ಧಿ ವೈಶಾಲ್ಯವು ಮಹತ್ವರಾದವರ ಹೆಗ್ಗುರುತು. ಬಸವನು ಮಹಾತ್ಮನೆಂಬುದಕ್ಕೆ ಬೇರೆ ನಿದರ್ಶನಗಳೇ ಬೇಡ. ಸಂಕುಚಿತ ಬುದ್ಧಿಯುವರಿಗೆ ಕಲುಷಿತ ಮತದವರಿಗೆ, ಬಸವನ ಈ ತತ್ವವು ಮಾನ್ಯವಾಗದಿದ್ದರೆ ಹೋಗಲಿ. ಅದರಿಂದೇನಬೇಕಾಗಿದೆ? ನಿಂದಕರಿಂದಲೂ ಮಹಾತ್ಮರ ಘನತೆಯು ಇನ್ನೂ ಹೆಚ್ಚು ಪ್ರಕಾಶಕ್ಕೆ ಬರುತ್ತದೆ.

ಹಿಂದುಗಳ ಕುಟಿಲತನದಿಂದ, ಕ್ರೂರತನದಿಂದ, ಉಂಟಾದ ಅಸ್ಪೃಶ್ಯವರ್ಗವನ್ನು ಮೇಲಕ್ಕೆತ್ತಿ ೮೦೦ ವರುಷಗಳ ಪೂರ್ವದಲ್ಲಿಯೇ ಇಂದಿನ ಗಾಂಧಿ ತತ್ವಕ್ಕೆ ದಾರಿತೋರಿಸಿದನು ಬಸವ. ಹೆಸರಿನಿಂದ ಹೊಲೆಯರು ಬೇರೆ. ನಿಜವಾದ ಹೊಲೆಯರು ಬೇರೆ ಎಂಬದನ್ನು ತೋರಿಸಿದನು.

(೫) ಕೊಲ್ಲುವವನೇ ಮಾದಿಗನು. ಹೊಲಸು ತಿಂಬುವವನೇ ಹೊಲೆಯನು. ಅವುಗಳಲ್ಲಿಲ್ಲದಿದ್ದರೆ ಹೊಲೆಯರ ಜಾತಿಯಲ್ಲಿ ಹುಟ್ಟಿದರೂ, ಶ್ರೇಷ್ಠನೇ, ಪೂಜ್ಯನೇ. ಮಾದಿಗ ಶಿವಭಕ್ತನಾದರೆ ಆತನ ಹೊರೆಯಲ್ಲಿ ಭೃತ್ಯನಾಗುವದು ಕಡು ಲೇಸೆಂದು ಬಸವ ಹೇಳುತ್ತಾನೆ. ಹಾಗೆ ಮಾಡಿ ತೋರಿಸಿದ್ದಾನೆ. ಅಪ್ಪನು ನಮ್ಮ ಮಾದರ ಚನ್ನಯ್ಯ, ಬೊಪ್ಪನು ನಮ್ಮ ಡೋಹರ ಕಕ್ಕಯ್ಯನೆಂದು ಹೇಳುವದನ್ನು ನೋಡಿದರೆ ಗುಣಿಯು ಗುಣವನ್ನು ಹೇಗೆ ಅರಸುತ್ತಾನೆಂಬದನ್ನು ಕಾಣಬಹುದು. ಗುಣಿಗಳ ಎದುರಿಗೆ ತಲೆಬಾಗಿಸುವ ಬಸವನ ಈ ಗುಣಕ್ಕೆ ವಿಪರೀತ ಅರ್ಥವನ್ನು ಕಲ್ಪಿಸುವ ಮಂದಮತಿಗಳು ನಮ್ಮಲ್ಲಿದ್ದಾರೆ. ಅಂತಹರು ಬಸವರ ಚರಿತ್ರವನ್ನು ಇನ್ನೂ ಸೂಕ್ಷ್ಮವಾಗಿ ಅವಲೋಕಿಸಬೇಕು. ಕಲುಷಿತ ಬುದ್ಧಿಯನ್ನು ಬಿಡಬೇಕು. ಆಗ ಹೊಳೆಯುವದು ಬಸವನ ತತ್ವಗಳ ಬೆಳಕು. ಹೋಮದ ನೆವದಿಂದ ಹೋತನ್ನು ತಿನ್ನುವವರೇ ಹೊಲೆಯರಲ್ಲದೆ ಆ ಜಾತಿಯಲ್ಲಿ ಹುಟ್ಟಿದವನು ಹೊಲೆಯನಲ್ಲವೆಂಬ ಮಾತನ್ನೇ ಬಸವನು ಉದ್ಘೋಷಿಸಿದನು. ಅಂತೆಯೇ, ಆತನು ಹೊಲೆಯರಾದಾಗ್ಯೂ ಯೋಗ್ಯತೆಯಿದ್ದವರನ್ನು ಮನ್ನಿಸಿದನು, ಪೂಜಿಸಿದನು. ಶ್ವಪಚನಾದರೇನು? ಲಿಂಗ ಭಕ್ತನೇ ಕುಲಜ. ಅಂತೆಯೇ ಡೋಹರ ಕಕ್ಕಯ್ಯನನ್ನೂ ಮಾದರ ಚನ್ನಯ್ಯನನ್ನೂ ಬಸವನು ಮನ್ನಿಸುತ್ತಾನೆ. ಅವರು ತನ್ನ ತಂದೆಯೆಂದು ಹೇಳಿ. ಅವರ ಗೊತ್ರವೇ ತನ್ನ ಗೋತ್ರವೆಂದು ಹೇಳಿ. ಲಿಂಗವಿದ್ದಲ್ಲಿ ಹೊಲೆ ಎಲ್ಲಿಯದು? ಹೊಲೆಯ ಹೊಲಬಿಗನಾದರೆ ಅವನ ಹೋರಿಯಲ್ಲೇಕಿರಬಾರದು? ಶ್ವಪಚಯ್ಯ ಸನ್ನಿಧಿಯಿಂದ ಭಕ್ತಿಯ ಸದ್ಗುಣವ ನಾನರಿತೆನೆಂದು ಬಸವನು ಹೇಳುವದು ಆತನ ವಿಶಾಲಹೃದಯದ ದ್ಯೋತಕವಲ್ಲವೇ? ಉತ್ತಮ ಕುಲದಲ್ಲಿ ಹುಟ್ಟಿದ ಬಸವ ಹೀನ ಕುಲದಲ್ಲಿ ಹುಟ್ಟಿದವರನ್ನು ಅವರ ಯೋಗ್ಯತೆಗಾಗಿ ಮನ್ನಿಸುವದು ದೋಷವು ಹೇಗಾದೀತು? ಸದ್ಭಕ್ತರನ್ನು ಸೇವಿಸುವದು ತಪ್ಪೇ? ಅರಸರ ಮನೆಯಲ್ಲಿ ಅರಸಿಯಾಗುವದಕ್ಕಿಂತ, ಭಕ್ತರ ಮನೆಯಲ್ಲಿ ತೊತ್ತಾಗಿರುವದು ಕಡು ಲೇಸು. ತಾವು ಹೀನರಾಗಿದ್ದು ದೊಡ್ಡವರ ಗೋತ್ರದಿಂದ ಮೆರೆಯುವವರಿಗೆ ತಿಳಿಹೇಳುವದಕ್ಕಾಗಿ ತಾನು ಕಕ್ಕಯ್ಯ, ಚನ್ನಯ್ಯನ ಗೋತ್ರದವನೆಂದು ಹೇಳಿದನು.

ಮಹಾತ್ಮರ ಇನ್ನೊಂದು ಲಕ್ಷಣವೆಂದರೆ ವಿನಯ. ಬಸವನ ವಚನಗಳಲ್ಲಿ ಎಲ್ಲೆಲ್ಲಿಯೂ ಇದು ಕಂಡುಬರುತ್ತದೆ. ನನಗಿಂತ ಕಿರಿಯರಿಲ್ಲ

ವೆಂದೇ ಆತನು ಹೇಳುವದು. ತಾನು ಭಕ್ತಿ ಭಾಂಡಾರಿಯಾದರೂ ತನ್ನ ಭಕ್ತಿಯೇನೂ ಹೆಚ್ಚಿನದಲ್ಲವೆಂದು ಹೇಳುವನು. ಸದುವಿನಯುವೇ ಸದಾ ಶಿವನ ಒಲುವೆಯಯ್ಯಾ. ಆತ್ಮ ಸ್ತುತಿಯನ್ನು ಕೇಳುವದೇ ಅವನಿಗೆ ಬೇಡ. ಶರಣರ ಮನೆಯ ಕಿಂಕರರ ಕಿಂಕರನು ತಾನೆಂದು ಹೇಳುತ್ತಾನೆ. ಅವರ ತೊಕ್ತಿನ ತೊತ್ತಿನ ಪಡಿದೊತ್ತಿನ ಮಗನು. ಅಂತು ಆತನು ಕೀಳಾಗಲೊಲ್ಲದೆ, ಮೇಲಾಗಲೊಲ್ಲನು. ಇದು ನಿಜವಾದ ದೊಡ್ಡಸ್ತಿಕೆ. ವಿನಯ ಭಾಂಡಾರಿಯು ಆದ ಬಸವನು ಬೋಧಿಸುವದೇನು? (೬) ನಮ್ರ ಭಾವ. ನಯವಾದ ಮಾತುಗಳು. ಅಯ್ಯಾ ಅಂದರೆ ಸ್ವರ್ಗ ಎಲವೊ ಎಂದರೆ ನರಕ. ಈ ನಯಮಾತಿನಲ್ಲಿ, ಸೌಮ್ಯ ರೀತಿಯಲ್ಲಿ, ಸಾಧು ಸ್ವಭಾವದಲ್ಲಿ ಸ್ವರ್ಗವು ಅಡಕವಾಗಿದೆ. ಬಸವನ ಶುದ್ಧ ಅಂತರಾಳವು ಹೇಗೆ ಸುಣ್ಪಿನ ನುಡಿಗಳಲ್ಲಿ ಹೊರ ಹೊಮ್ಮಿದೆ ನೋಡಿರಿ. ಮನುಷ್ಯನ ಮಾತುಗಳಿಂದ ಅವನ ಹೃದಯವನ್ನೂ ಅರಿತುಕೊಳ್ಳಬಹುದಲ್ಲವೇ? ಶುದ್ಧ ಒರಟತನದಿಂದ ಏನು ತಾನೀ ಪ್ರಯೋಜನ? ಬಂದಿರಿ, ಹದುಳ ವಿದ್ದಿರೆಂದರೆ ನಿಮ್ಮ ಸೈಸಿರಿ ಹಾರಿ ಹೋಹುದೇ? ಕುಳ್ಳಿರೆಂದರೆ ನೆಲ ಉರುಳಿ ಹೋಗುವದೇ? ಒಡನೆ ನುಡಿದರೆ ಶಿರಹೊಟ್ಟೆಯೊಡೆವುದೆ? ಒಣ ಜಂಭದಿಂದ ಏನನ್ನು ಸಾಧಿಸ ಬಲ್ಲೆವು? ಕಂಡ ಭಕ್ತನಿಗೆ ಕೈಮು ಗಿವಾತನೇ ಭಕ್ತ. ಭಕ್ತ ಭಕ್ತನ ಮನೆಗೆ ಬಂದರೆ ಭೃತ್ಯಾಚಾರವ ಮಾಡಬೇಕು. ಹಿಂದಾಗಿ ಭೃತ್ಯಾಚಾರವ ನುಡಿದು. ವಿನಯ ಧ್ಯಾನ ವುಳ್ಳರೆ, ದೇವರು ಎತ್ತಿಕೊಂಬ. ಇನ್ನೂ ಕೇಳಿ ಬಸವನ ವಾಣಿಯನ್ನು. ಮೃದು ವಚನಗಳೇ ಸಕಲ ಜಪಗಳಯ್ಯಾ. ಬಸವನು ಭಕ್ತಿ ಭಾಂಡಾರಿ, ಅಷ್ಟೇ ಅಲ್ಲ, ವಿನಯ ಭಾಂಡಾರಿಯೂ ಅಹುದು.

ಲೋಕಕಲ್ಯಾಣಕಾರಕ ಬುದ್ಧಿಯ ಬಸವನು, ಸದಾಚಾರಿಯಾದ ಬಸವನು, (೨) ಇಂದ್ರಿಯ ಸುಖತ್ಯಾಗವನ್ನು ಬೋಧಿಸುತ್ತಾನೆ. ದೇಹ ಸುಖವೇ ಧ್ಯೇಯವನ್ನಾಗಿಟ್ಟುಕೊಳ್ಳುವದು ಅದೆಂತಹ ದೊಡ್ಡಿಸ್ತಿಕೆ? ಅದುವೇ ಇತಿ ಶ್ರೀಯೆಂದು ತಿಳಿದರೆ ಜೀವನ ವಿಕಾಸಕ್ಕೆ ಮಾರ್ಗವೆಲ್ಲಿ? ಅಂಗದಿಚ್ಛೆಗೆ ಮದ್ಯ ಮಾಂಸಗಳನ್ನು ತಿನ್ನುವರು. ಕಂಗಳಿಚ್ಛೆಗೆ ಪರ ವಧುವ ನೆರೆವರು. ಲಿಂಗಲಾಂಛನಧಾರಿಯಾದಲ್ಲಿ ಫಲವೇನು? ತುಪ್ಪದ ಸವಿಗೆ ಅಲಗ ನೆಕ್ಕುವ ಸೊಣಗನ ಬಾಳುವೆಯಲ್ಲವೇ ಇದು? ಕಾಯ ವಿಕಾರ ಕಾಡುವದು. ಇಂದ್ರಿಯ ವಿಕಾರ ಸುಳಿಯುವದು. ಪಂಚೇಂದ್ರಿಯ

ಸಪ್ತಧಾತು ಹರಿಹಂಚು ಮಾಡಿ ಕಾಡುವವಾದರೂ ಅವನ್ನೆದುರಿಸಲೇ ಬೇಕು. ಅದುವೇ ಧೀರತನ. ವೀರತನ. ಹಾಗಲ್ಲದಿದ್ದ ಜೀವನವು ಸೊಣಗನ ಜೀವನದಂತೇ ಎಂದು ಬಸವನು ಹೇಳಲಿಲ್ಲವೇ?

ಇಷ್ಟಾಗಿಯೂ ಬಸವನು ಭಾವನಾ ಪೂರಿತನಾದ ಹುಚ್ಚನಲ್ಲ. ಸಂಸಾರವನ್ನು ಬಿಟ್ಟು ಓಡಿಹೋಗಬೇಕೆಂದು ಹೇಳುವ ಹೇಡಿಯೂ ಅಲ್ಲ. ಅಷ್ಟೇ ಏಕೆ? (೮) ಇಹದಿಂದಲೇ ಪರವೆಂಬ ಸುಂದರ ಪೂರ್ಣ ತತ್ವದವನು ಬಸವ. ಪ್ರವೃತ್ತಿ ಮಾರ್ಗವನ್ನು ನಿವೃತ್ತಿಮಾರ್ಗವನ್ನು ಸಮರಸವಾಗಿ ಬೆರೆಯಿಸುವದು ಕರ್ನಾಟಕ ಸಂಸ್ಕೃತಿಯ ಕುರುಹು. ಅದಕ್ಕೆ ಬಸವನು ಅತ್ಯುತ್ತಮ ಉದಾಹರಣೆ. ಪರಲೋಕವೆಂಬುದು ಇರುವದಾದರೆ, ಅಲ್ಲಿ ಹೋಗುವದು ಅವಶ್ಯವಿದ್ದರೆ ಇಹುದು. ಅದಕ್ಕೆ ಅನಿವಾರ್ಯವಾದ ಸಾಧನವೇ ಸರಿ. ಮೃತ್ಯಲೋಕವೆಂಬದು ಕರ್ತಾರನ ಕಮ್ಮಟವಯ್ಯಾ. ಇಲ್ಲಿ ಸಲ್ಲುವರು, ಅಲ್ಲಿಯೂ ಸಲ್ಲುವರಯ್ಯ. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ. ಬಸವನು ಹುಚ್ಚ, ಆದರ್ಶವಾದಿಯಲ್ಲ. ಆತನ ಬೋಧನೆಯು ತರ್ಕಶುದ್ಧವೂ, ವಿಚಾರ ಪ್ರಧಾನವಾಗಿಯೂ ಇದೆ. ಇಂದ್ರಿಯ ನಿಗ್ರಹವ ಮಾಡಿದರೆ ಹೊಂದುವವು ದೋಷಂಗಳು. ಮುಂದೆ ಬಂದು ಕಾಡುವವು ಪಂಚೇಂದ್ರಿಯಗಳು. ಸತಿಪತಿ ರತಿಸುಖವ ಬಿಟ್ಟರೇ ಸಿಂಧು ಬಲ್ಲಾಳರು? ಇಂದ್ರಿಯ ದಮನಕ್ಕೆ ಮಿತಿ ಇರುವದೆಂಬದನ್ನು ಇಂದಿನ ಮನಃ ಶಾಸ್ತ್ರಜ್ಞರು ಒಪ್ಪುವದಿಲ್ಲವೇ ?

ಸುಲಭ ಸಾಧ್ಯವಾದ ಬೋಧನೆಯೇ ಬಸವನ ಉದ್ದೇಶವಾಗಿತ್ತು. ತತ್ವಗಳ ಜಾಲವು ಅವನಿಗೆ ಬೇಡಾಗಿತ್ತು. ಕರ್ಮ ಕಾಂಡದ ತೊಡಕು ಬೇಕಾಗಿದ್ದಿಲ್ಲ. ಶುಷ್ಕವ್ರತ ನಿಯಮಗಳಿಂದ ಅವನು ಬೇಜಾರ ಪಟ್ಟುಕೊಂಡಿದ್ದನು. ತನ್ನ ಅನುಯಾಯಿಗಳೇ ಆದ ಲಿಂಗವಂತರ ಶುಷ್ಕ ಆಚಾರಗಳನ್ನಾದರೂ ಆತನು ಅಲ್ಲಗಳೆದನು. ಬಂಡಿತುಂಬ ಪತ್ರಿಯ ತಂದು ಕಂಡ ಕಂಡಲ್ಲಿ ಮಜ್ಜನಕ್ಕೆರೆದರೆ ಏನಾಗಬೇಕು? ಉಣ್ಣದ ಲಿಂಗಕ್ಕೆ ಬೋನವ ಹಿಡಿದು ಉಣುವ ಜಂಗಮ ಬಂದರೆ ಹೊರದೂಡುವದು ಧರ್ಮವೇನು? ಬಸವ ಭಕ್ತರೆಂದು ತಿಳಿದುಕೊಂಡು ಎಷ್ಟೋ ಜನರಿಗೆ ಬಸವನ ತತ್ವಗಳೇ ತಿಳಿದಿಲ್ಲವೆಂದು ಮೇಲೆ ಹೇಳಿದೆನಷ್ಟೇ. ಅಂತಹರು ಬಸವನ ಈ ಮಾತುಗಳನ್ನೇ ತಿಳಿದುಕೊಂಡಿಲ್ಲ. (೯) ಜಾತಿಭೇಧವಿಲ್ಲ.

ಸೂತಕ ಭೇದವಿಲ್ಲವೆಂದು ಹೇಳಿದ ಬಸವನೆತ್ತ? ಲಿಂಗವಂತರಲ್ಲಿಯೇ ಅಸಂಖ್ಯ ಜಾತಿಗಳನ್ನು ಕಲ್ಪಿಸಿಕೊಂಡು ತಾವು ಶ್ರೇಷ್ಠರೆಂದು, ಉಳಿದ ವರು ಕನಿಷ್ಠರೆಂದು ಲಿಂಗವಂತರಲ್ಲಿಯೇ ಭೇದವನ್ನು ಕಲ್ಪಿಸಿಕೊಳ್ಳುವ ಈ ಮಂದಮತಿಗಳಾದ ಬಸವನ ಭಕ್ತರೆತ್ತ? ಇಷ್ಟಾಗಿಯೂ ತಾವೇ ಧಾರ್ಮಿ ಕರೆಂದು, ಅವರ ಕಲ್ಪನೆ. ವಿಚಿತ್ರವಲ್ಲವೇ? ಧರ್ಮವೇ ಅಧರ್ಮವಾ ಗಿಯೂ, ಅಧರ್ಮವೇ ಧರ್ಮವಾಗಿಯೂ ಇರುವ ಈ ತಿರುವು ಮುರುವು ಸ್ಥಿತಿಯು ಅಳಿಯಲಿಕ್ಕೆ ಬಸವನ ತತ್ವಗಳ ಪ್ರಸಾರಣೆಯ ಅವಶ್ಯಕತೆಯು ಎಷ್ಟಿದೆಯೆಂದು ಬೇರೆ ಹೇಳಬೇಕೇ? ಬಸವ ವಿರೋಧಿಗಳ ಕಣ್ಣಿಗಿರುವ ಕಲುಷಿತ ಗಾಜನ್ನು ತೆಗೆಯುವದು ಅವಶ್ಯವಿದ್ದಂತೆಯೇ ಬಸವ ಭಕ್ತರೆಂದು ತಿಳಿದುಕೊಂಡವರನ್ನು, ಅವರ ಅಗಾಧವಾದ ಅಜ್ಞಾನದಿಂದ ಎಚ್ಚರಿಸು ವದೂ, ಅವಶ್ಯವಿದೆ. ಬಸವನ ಸುಲಭ ಸಾಧ್ಯ ಬೋಧನೆಯನ್ನು ಕೇಳಿ ಅವನಿಗೆ ಬೇಕಾದುದು ಬಾಹ್ಯ ನಾಟಕವಲ್ಲ. (೧೦) ಅಂತರಂಗ ಶುದ್ಧಿ. ಕಳಬೇಡ, ಕೊಲಬೇಡ. ಹುಸಿಯ ನುಡಿಯಲುಬೇಡ. ಮುನಿಯಬೇಡ. ಅನ್ಯರಿಗೆ ಅಸಹ್ಯ ಪಡಬೇಡ. ತನ್ನ ಬಣ್ಣಿಸಬೇಡ. ಇದಿರು ಹಳಿಯಲು ಬೇಡ. ಇದೇ ಅಂತರಂಗ ಶುದ್ಧಿ. ಇದೇ ಬಹಿರಂಗ ಶುದ್ಧಿ. ಎಂತಹ ದಿವ್ಯ ವಚನಗಳಿವು? ವಿಶ್ವ ಧರ್ಮದ ಸಾರವೇ ಇವುಗಳಲ್ಲಿದೆ ಎಂದು ಹೇಳಿ ದರೆ ಅತಿಶಯೋಕ್ತಿಯಾಗದು. ಇಂದಿನ ನಮ್ಮ ಧರ್ಮದಲ್ಲಿಯ ಕಗ್ಗತ್ತ ಲೆಯನ್ನು ಹೊಡೆದೋಡಿಸಲಿಕ್ಕೆ ಬಸವನ ಸುವಿಚಾರದ ಬೆಳಕು ಬೇಕೇ ಬೇಕು ಈ ಬರಹವನ್ನು ಮುಗಿಸುವಾಗ ಬಹು ಜನರು ಹೇಳುವಂತೆ ನಾನಾದರೂ" ಕೊಡದೊಳಗೆಷ್ಟು ನಿಲ್ವದು ಸಮುದ್ರ ಜಲಂ„ ಎಂದು ಹೇಳಲೇಬೇಕು.ಆದರೆ ನಾನು ಹೇಳುವದು ಔಪಚಾರಿಕವಲ್ಲ. ಅಲಂಕಾ ರಿಕವೂ ಅಲ್ಲ. ಯಥಾರ್ಥವು ಮಾತ್ರ.

---

# ಐಕ್ಯಸ್ಥಲಂ.

(ಲೇಖಕ:— ವಿದ್ವಾನ್ ಬಿ. ಯಂ. ವೀರಭದ್ರಯ್ಯ ಬೋರ್ಡ್ ಮಿಡಲ್ ಸ್ಕೂಲ
ಗಿದ್ದಲೂರ.)



## (ಮಂಜರಿ)

ಎನಗಾಗಿ ಗುರುವರಂ ಮನುಜರೂಪಿನಲಿ
ಕರುಣದಿಂದೈತಂದು ಕರಗತವಾಗೆ
ಪರಲಿಂಗ ತತ್ವಮಂ ನಿರುತತೋರಿದನು

ಅಮ್ಮಮ್ಮಯಾಪರ ತತ್ವಮಿಂತೆಂದು
ಉಸಿರಲಾರಣ್ಣಾವರ್ ಪೆಸರಿಲ್ಲ ತನಗೆ
ಒಂದಾದೊಡಂ ನಾಮ ವಿಲ್ಲದ ತನಗೆ
ಪರಮಾತ್ಮತಾನೆಂದು ಪರತತ್ವವೆಂದು
ಗುರುತತ್ವತಾನೆಂದು ಪರಶಿವನೆಂದು
ಪರಲಿಂಗತಾನೆಂದು ಶೂನ್ಯವಿದೆಂದು
ಗುರುಗುಹೇಶ್ವರನೆಂದು ಕೂಡಲಸಂಗ
ದೇವಯ್ಯತಾನೆಂದು ಕೂಡಲಚನ್ನ
ಸಂಗಯ್ಯ ತಾನೆಂದು ಮತ್ತಿಂತು ಕಪಿಲ
ಸಿದ್ಧಮಲ್ಲಯ್ಯೆಂದು ಪ್ರಮಥಪುಂಗವರು
ಹಲವು ನಾಮಂಗಳಿಂ ಬೋಧಿಸುತ್ತಿಹರು

ಆರೆಂತು ಕರೆದಡಂ ತಾನೆತಾನಾಗಿ
ನಿಶ್ಚಲತ್ವಕ್ಕೆಲ್ಲ ನಿಲವು ತಾನಾಗಿ
ಅಂದಿಂದು ಒಂದೆಡೆಯಲ್ಲಾದೊಡಿನಿತು
ಸಂದಿಲ್ಲದಿಡಿದಿರ್ಪ ನಿಬಿಡನಾಗಿರ್ಪ
ಆಗಸಕ್ಕತ್ತತ್ತ ದೆಸೆಗತ್ತಮತ್ತ
ಪಾತಾಳಕತ್ತತ್ತ ಮಿತಿ ಮೇರೆಗತ್ತ
ಸ್ವರ್ಗಲೋಕಕ್ಕತ್ತ ಸತ್ಯ ಲೋಕಕ್ಕೆ
ಅತ್ತತ್ತ ವೈಕುಂಠ ಲೋಕಕ್ಕಮತ್ತ
ಕೈಲಾಸಕತ್ತತ್ತ ಎಲ್ಲ ಲೋಕಕ್ಕೆ

ಅತ್ತತ್ತ ತಾನಾಗಿ ಯಾವರಿಸಿರ್ಪ
ಆತನಿಲ್ಲದ ತಾಣ ಸೂಜಿನ ಮೊನೆಯುಃ
ಸೋಂಕಿದ ಎಡೆಯುನಿತಿಲ್ಲ ಮತ್ತಿಲ್ಲ
ಅಣುವಲ್ಲಿಯಣುವಾಗಿ ಮನದಲ್ಲಿ ಘನವು
ತಾನಾಗಿ ಬಳಿಯಲ್ಲಿ ದೂರದಲ್ಲಿರ್ಪ
ಎಲ್ಲಿ ನೋಡಿದಡಲ್ಲಿ ಕಾಣಿಸುತಿರ್ಪ
ಈ ಚರ್ಮ ನೇತ್ರಕ್ಕೆ ಎಂತು ಕಾಣಿಸುವ
ಗುರುಕೃಪಾದತ್ತ ನೇತ್ರಕ್ಕೆ ಕಾಣಿಸುವ
ಆ ನೋಳ್ಪ ಸಂಪದವಾರು ಬಣ್ಣಿಪರು
ಪ್ರಭುದೇವ ಬಣ್ಣಿಪಂ ಬಸವ ಬಣ್ಣಿಪನು
ಶ್ರೀಚೆನ್ನಬಸವನುಂ ಬಣ್ಣಿಸಲಾರ್ಪ
ನಂತಪ್ಪ ಪ್ರಮಥರುಂ ಬಣ್ಣಿಸಲಾರ್ಪ
ರಲ್ಲದೆ ಮಿಕ್ಕರ ಪ್ರಾಪ್ತಿ ತಾನಲ್ಲ

ಅದನೇನನೆಂಬೆನೈಯಾಲಿಂಗತತ್ವ
ವಂತೆಂದು ಮಿಂತೆಂದುಮೆನಲಾಗದಯ್ಯ
ಅಂತಿಂತು ತಾನೆಂಬರರಿಯುರೆಳ್ಳನಿತು
ಪೇಳಲು ಪೆಸರಿಲ್ಲ ರೂಪು ತಾನಲ್ಲ
ಕ್ರಿಯೆ ಮೊದಲಿಲ್ಲ ಈ ತ್ರಯಕೆ ಮಿೞರಿರ್ಪ
ಜ್ಞಾತೃ ತಾನೆಂಬಮೋ ಜ್ಞಾತೃ ತಾನಲ್ಲ
ಜ್ಞೇಯ ತಾನೆಂಬಮೋ ಜ್ಞೇಯ ತಾನಲ್ಲ
ಜ್ಞಾನ ತಾನೆಂಬಮೋ ಜ್ಞಾನ ತಾನಲ್ಲ
ಅಜ್ಞಾನವೆಂಬಮೋ ಅಜ್ಞಾನಮಲ್ಲ
ಜ್ಞಾನ ಅಜ್ಞಾನಕ್ಕೆ ಮಿೞರಿ ತಾನಿರ್ಪ
ಜಗತು ತಾನೆಂಬಮೋ ಜಗತು ತಾನಲ್ಲ
ಜಗದೊಡೆಯನೆಂಬಮೋ ಜಗದೊಡೆಯನಲ್ಲ
ಜಗ ಜಗದೊಡೆಯರ್ಗೆ ಮಿೞರಿ ತಾನಿರ್ಪ
ದ್ರಷ್ಟ ತಾನೆಂಬಮೋ ದ್ರಷ್ಟ ತಾನಲ್ಲ
ದೃಶ್ಯ ತಾನೆಂಬಮೋ ದೃಶ್ಯ ತಾನಲ್ಲ
ದ್ರಷ್ಟೃ ದೃಶ್ಯಂಗಳ್ಗೆ ಮಿೞರಿ ತಾನಿರ್ಪ

ಕ್ಷೇತ್ರತಾನೆಂಬವೋ ಕ್ಷೇತ್ರತಾನಲ್ಲ
ಕ್ಷೇತ್ರಜ್ಞನೆಂಬವೋ ಕ್ಷೇತ್ರಜ್ಞನಲ್ಲ
ಕ್ಷೇತ್ರ-ಕ್ಷೇತ್ರಜ್ಞಗೇ ಪಾತ್ರತಾನಲ್ಲ
ಕ್ಷರವು ತಾನೆಂಬವೋ ಕ್ಷರವು ತಾನಲ್ಲ
ಅಕ್ಷರವೆಂಬವೋ ಅಕ್ಷರವಲ್ಲ
ಅಕ್ಷರಕ್ಷರಗಳ್ಗೆ ಅತಿಶಯನಯ್ಯ
ದೇಹ ತಾನೆಂಬವೋ ದೇಹ ತಾನಲ್ಲ
ದೇಹಿ ತಾನೆಂಬವೋ ದೇಹಿ ತಾನಲ್ಲ
ದೇಹಿದೇಹಂಗಳ ತೆರನು ತಾನಲ್ಲ
ಅಂಡರೂಪೆಂಬವೋ ಅಂಡರೂಪಲ್ಲ
ಪಿಂಡರೂಪೆಂಬವೋ ಪಿಂಡರೂಪಲ್ಲ
ಪಿಂಡಾಂಡರೂಪಿಂಗೆ ಬೇರಾದನಯ್ಯ
ಸತ್ತು ತಾನೆಂಬವೋ ಸತ್ತು ತಾನಲ್ಲ
ಅಸತು ತಾನೆಂಬವೋ ಅಸತು ತಾನಲ್ಲ
ಸದಸತ್ತುಗಳ ಪಥಾತೀತನಾಗಿರ್ಪ

ಅಂತಪ್ಪ ತತ್ವವನೆಂತು ಪೂಜಿಸಲು
ಶೀತಲ ತೋಯಾಭಿಷೇಕ ವಿಭೂತಿ
ಗಂಧಾನುಲೇಪನ ವಿಂತಿವೆಲ್ಲವನು
ಮುಟ್ಟಿ ಮಾಡುವವೆನಲ್ ಮೂರ್ತಿ ತಾನಲ್ಲ
ಚಿತ್ರ ನಾನಾ ವರ್ಣ ಪತ್ರ ಪುಷ್ಪಗಳ
ಲಿಖಿತ ಲತಾಪುಷ್ಪ ಗುಚ್ಛ ವೃಕ್ಷಕಶ
ಕುಂತವಿರಾಜಿತ ದಿವ್ಯಾಂಬರಗಳ
ಮುಕುರಾದಿಯಂ ತೋರಿ ಪೂಜಿಸವೆನಲು
ಚಕ್ಷುರಿಂದ್ರಿಯವಿಲ್ಲ ವಿವಿಧ ಸುಗಂಧ
ಧೂಪಾದಿಯಂ ತೋರಿ ಪೂಜಿಪವೆನಲು
ಘ್ರಾಣೇಂದ್ರಿಯವದಿಲ್ಲ ಷಡ್ರಸಯುಕ್ತ
ಷಡ್ವಿಧಾಹಾರ ಮರ್ಪಿಸಿ ಪೂಜೆಗೈವ
ವೆನಲು ಜಿಹ್ವೇಂದ್ರಿಯವದು ನೆಲೆಯಿಲ್ಲ
ಸುರುಚಿರ ಘಂಟೆ ತಾನಾದ ಮೃದಂಗ
ನಿನದ ವೀಣಾ ನಿಕ್ವಣ ಸ್ತೋತ್ರಗರ್ಭ

ಸರಸಕವಿತ್ವ ನೈಪುಣ್ಯವೆಲ್ಲವನು
ಕೇಳಿಸಿ ಪೂಜಿಪ್ಪವೋ ಶ್ರುತಿಯಿಲ್ಲ
ಇಂದ್ರಿಯ ಹೀನನನೆಂತು ಪೂಜಿಸಲು
ಮೂರ್ತಿ ಹೀನನನೆಂತು ಮುಟ್ಟಿ ಪೂಜಿಸಲು
ನೋಡಿ ಪೂಜಿಪ್ಪವೋ ರೂಹು ತಾನಲ್ಲ
ಕೇಳ್ದು ಪೂಜಿಪ್ಪವೋ ನಾದ ತಾನಲ್ಲ
ಘ್ರಾಣಿಸಿ ಪೂಜಿಸಲ್ ಗಂಧ ತಾನಲ್ಲ
ಸವಿ ನೋಡಿ ಪೂಜಿಸಲ್ ರಸವು ತಾನಲ್ಲ
ಕೈ ಮುಟ್ಟಿ ಪೂಜಿಸಲ್ ಮೂರ್ತಿ ತಾನಲ್ಲ

ಅಮ್ಮಮ್ಮ ಇಂದ್ರಿಯಾತೀತ ತತ್ವವದು
ಮಾತಿಂಗೆ ಮೀರಿದ ಮಹನೀಯ ತತ್ವ
ಮನಸಿಂಗೆ ಮೀರಿದ ಮಹನೀಯ ತತ್ವ
ಎನಿತು ಜಗಂಗಳ್ ಎನಿಬರು ನಿರ್ಜ
ರಾಧಿಪರೆನಿಬರು ಪದ್ಮಸಂಭವರು
ಎನಿಬರು ವಿಷ್ಣುಗಳ್ ಎನಿಬರು ರುದ್ರ
ರೆನಿಬರು ಮನುಗಳು ಎನಿಬರು ಸಿದ್ಧ
ಸಾಧ್ಯಾದಿಗಳ್ ಪುಟ್ಟಿಯಳಿಯುತ್ತೆ ಮತ್ತೆ
ಪುಟ್ಟುತ್ತೆಯಳಿಯುತ್ತೆ ಸಂಸೃತಿಯಲ್ಲಿ
ಬೀಳುತ್ತೆಏಳುತ್ತೆ ಕಂದಿಕುಂದುತ್ತೆ
ದಿಕ್ಕನ್ನು ದೆಸೆಯನ್ನು ಕಾಣದೆ ಬಳಲು
ತಿರೆ ತಾನು ಜಳುಕದೆ ಬಳುಕದಳುಕದೆ
ಪುಟ್ಟು ಸಾವರಿಯದೆ ಒಂದನರಿಯದೆ
ಅರಿವೆಂಬುದಕೆ ಮೀರಿಯೆಲ್ಲಕ್ಕೆ ಮೀರಿ
ಕಾಲಕ್ಕೆ ಮೀರಿ ತಾ ದೇಶಕ್ಕೆ ಮೀರಿ
ಪಾತ್ರಕ್ಕೆ ಮೀರಿ ತಾ ಪುಣ್ಯ ಪಾಪಕ್ಕೆ
ಮೀರುತ್ತೆ ವಿಧಿ ನಿಷೇಧಂಗಳ್ಗೆ ಮೀರಿ
ಬ್ರಾಹ್ಮಣ ಕ್ಷತ್ರಿಯ ವೈಶ್ಯವು ಶೂದ್ರ
ವೆನಿಪ ಚಾತುರ್ವರ್ಣ ಸರಣಿಗೆ ಮೀರಿ
ಬ್ರಹ್ಮಚಾರಿ ಗೃಹಸ್ಥ ವನವಾಟವಾಸಿ
ಸನ್ಯಾಸಿಯೆಂತೆಂಬ ಚತುರಾಶ್ರಮಕ್ಕೆ

ಮೀರುತ್ತೆ ಇದು ವೀರಶೈವವು ಮತ್ತ
ಮಿದು ವೀರ ವೈಷ್ಣವವಿದು ಗಾಣಪತವು
ಇದು ಸೌರವಿಂತಿದು ಬೌದ್ಧವು ಜೈನ
ವಿದು ಮುಹಮ್ಮದವಿದು ಕ್ರೈಸ್ತವವೆಂಬ
ಮತಭೇದನಾಮಕ್ಕೆ ಅತಿಶಯನಾಗಿ
ಬಂಧಕ್ಕೆ ಮೀರಿ ತಾ ಮೋಕ್ಷಕ್ಕೆ ಮೀರಿ
ಇಂತಿವೆಲ್ಲವು ತನ್ನ ಗರ್ಭದಲ್ಲಿರಲು
ತಾನೊಂದರಲ್ಲಿಯು ತಗುಳದೆ ಇರ್ದು
ನಿರ್ಮಲನಾಗಿರ್ದು ನಿಶ್ಚಲನಿರ್ದು
ನಿರ್ವಿಕಾರತ್ವಕ್ಕೆ ನಿಲವು ತಾನಾಗಿ
ಶರಣಸ್ಥಲದ ಮೇಲೆ ಐಕ್ಯಸ್ಥಲಕ್ಕೆ
ಪಕ್ಕಾಗಿ ಗುರುಕೃಪಾಪಾತ್ರರ್ಗೆ ಕರತ
ಲದೆ ನಿಂತು ಕಾಣಿಪುದಿಂತಪ್ಪ ತತ್ವ
ವನು ತೋರಿ ಗುರುವರಂ ಬಯಲಾದನಯ್ಯ
ಕನಸಿನೊಳ್ ಕಂಡರ್ಥವೆಲ್ಲ ಜಾಗ್ರದೊಳು
ಪುಸಿಯಾಗಿ ಪೋಪಂತೆ ಗುರುಶಿಷ್ಯಭಾವ
ವಡಗಿತ್ತು ಗುರುವಿಲ್ಲ ಶಿಷ್ಯನುಮಿಲ್ಲ
ಬೋಧಿಪರಿಲ್ಲಂತು ಬೋಧೆಯಾಲಿಪರು
ಮೊದಲಿಲ್ಲ ಬೋಧೆಯೆಂಬುದುಮಿಲ್ಲ ನಾನು
ನೀನೆಂಬುದಡಗಿತ್ತು ಮಾತಿಲ್ಲಮಾಯ್ತು
ಮೌನದಿಂ ಗುರುತತ್ವ ಮೆರೆಯುತಿರ್ದತ್ತು.



# ಶೈವಮತ ಮತ್ತು ವೀರಶೈವ ಮತಗಳ ಪ್ರಸ್ಫುರಣ.

(ಲೇಖಕ:— ಜೀರಗೆ ಬಸವಲಿಂಗಪ್ಪ, ರಿಟೈರ್ಡ್ ಹೈಕೋರ್ಟು ಹೆಡ್‌ಟ್ರಾನ್ಸ್ಲೇಟರು, ಅರಳೇಪೇಟೆ, ಬೆಂಗಳೂರುಸಿಟಿ)



ವೀರಶೈವ ಅಥವಾ ಲಿಂಗಾಯತ ಮತವು ಶೈವವಾದ ನಂತರ ಉತ್ಪನ್ನವಾಗಿದೆ ಎಂಬುದಕ್ಕೆ ಸೊನ್ನಲಾಪುರದ ಸಿದ್ಧರಾಮೇಶ್ವರ ಸಂಪ್ರದಾಯಾನುಗತ ಶಿವಯೋಗೀಶ್ವರನಿಂದ ರಚಿತವಾದ ಸಿದ್ಧಾಂತ ಶಿಖಾಮಣಿಯಲ್ಲಿ ಹೀಗೆ ಬರೆದಿರುತ್ತದೆಃ—

"ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೆ ಶಿವೋದಿತೇ ॥
ನಿರ್ದಿಷ್ಟ ಮುತ್ತರೇ ಭಾಗೇ ವೀರಶೈವ ಮತಂಪರಂ ॥ "

ಇದರ ಅರ್ಥವೇನೆಂದರೆ ಶಿವೋಕ್ತವಾದ ಕಾಮಿಕಾದಿ ಆಗಮಗಳಲ್ಲಿ ಮೊದಲಿನ ಭಾಗವು ಶೈವವೆಂದೂ ಕಡೆಯಭಾಗವು ವೀರಶೈವವೆಂದೂ ಅರ್ಥ. ಇದರಿಂದ ಮೊದಲು ಶೈವವಿದ್ದದ್ದು ಆ ಮೇಲೆ ವೀರಶೈವವಾಗಿದೆ ಎಂದು ನೈಜವಾಗಿ ತಿಳಿದುಕೊಳ್ಳಬೇಕು. ಪ್ರಕೃತಿಯಲ್ಲಿ ಯಾವ ವಸ್ತುವೇ ಆಗಲಿ ಕ್ರಮಕ್ರಮವಾಗಿ ವಿಕಸನಹೊಂದುತ್ತ ಹೋಗುತ್ತದೆ. ನೆಲದಲ್ಲಿ ಬೀಜವನ್ನು ನಟ್ಟ ಮೇಲೆ ಮೊದಲು ಮೊಳಕೆಯಾಗುತ್ತದೆ, ಆ ಮೇಲೆ ಗಿಡವಾಗುತ್ತದೆ, ಆ ಮೇಲೆ ಎಲೆಗಳಾಗುತ್ತವೆ, ಆ ಮೇಲೆ ಹೂವಾಗುತ್ತದೆ, ಆ ಮೇಲೆ ಹಣ್ಣಾಗುತ್ತದೆ. ಒಂದರ ಸಂಬಂಧವನ್ನು ಒಂದು ಬಿಟ್ಟಿರುವದಿಲ್ಲ. ಆದರಂತೆಯೇ ಜನರು ಮೊದಲು ಕಾಲ್ನಡೆಯಲ್ಲೇ ನಡೆಯುತ್ತಿದ್ದರು, ಅನಂತರ ಮೃಗಗಳ ಮೇಲೆ ಸ್ವಾರಿ ಮಾಡುವದನ್ನು ಕಂಡುಹಿಡಿದರು, ಅನಂತರ ಗಾಡಿಗೆ ಅಶ್ವಗಳನ್ನು ಕಟ್ಟಿ ನಡೆಸುವದನ್ನು ಕಂಡುಹಿಡಿದರು, ಅನಂತರ ಹವೆ ಯಂತ್ರದಿಂದ ಗಾಡಿಗಳನ್ನು ನಡೆಸುವದನ್ನು ಕಂಡುಹಿಡಿದರು, ಅನಂತರ ಮೋಟಾರ (ಸ್ವಯಂ ಚಲನರಥ) ವನ್ನು ಕಂಡುಹಿಡಿದರು. ಇವುಗಳೆಲ್ಲವೂ ಒಂದಕ್ಕೊಂದು ಸಂಬಂಧಿಸಿಕೊಂಡಿರುತ್ತವೆ. ಇವುಗಳಲ್ಲಿ ಕಾಲಭೇದದಿಂದ ಹೆಚ್ಚುಕಡಿಮೆ ಏನೂ ಆಗುವದಿಲ್ಲ. ಆಯಾಯ ಕಾಲಕ್ಕೆ ಅದದೇ ಸ್ತುತ್ಯವಾಗಿರುತ್ತದೆ. ಒಟ್ಟಿನಮೇಲೆ ಆಲೋಚಿಸಿದರೆ ಹಿಂದಣದಾದ ಮಾತ್ರಕ್ಕೆ ಈಚಿನದಕ್ಕಿಂತ

ಶ್ರೇಷ್ಠವೆಂದೆನ್ನುವದಕ್ಕಾಗುವದಿಲ್ಲ. ಅದಕ್ಕೆ ಬದಲಾಗಿ ಈಚಿನದೇ ಹಿಂದಿನದಕ್ಕಿಂತ ಸುಧಾರಿಸಿದ್ದನ್ನಬೇಕು. ಏತಕ್ಕಂದರೆ ಪ್ರಕೃತಿಯಲ್ಲಿ ಸಮಸ್ತ ವಿಚಾರಗಳೂ ವರ್ಧಿಸಿಕೊಂಡು ಹೋಗ ತಕ್ಕವುಗಳಾಗಿರುತ್ತವೆ. ಇದೇ ತತ್ವವನ್ನೆ ಮತಕ್ಕೂ ಅನ್ವಯಿಸಬೇಕಾಗಿರುತ್ತದೆ. ಮೊದಲಿನ ಶೈವಕ್ಕಿಂತಲೂ ಈಚಿನ ವೀರಶೈವ ಅಥವ ಲಿಂಗಾಯತವು ಸುಧಾರಿಸಿದ್ದಾಗಿರುತ್ತದೆ.

ಇದರ ಮಾತಿಷ್ಟಕ್ಕೆ ನಿಲ್ಲಲಿ. ಶೈವವನ್ನು ಅಂಟಿಸಿಕೊಂಡು ಬಂದಿರುವದರಿಂದ ವೀರಶೈವ ಅಥವ ಲಿಂಗಾಯತವು ಪುರಾತನವೆಂದೆನ್ನಲೇಬೇಕು. ವೀರಶೈವವನ್ನು ನದಿಯ ಮುಖದಂತೆ ಭಾವಿಸಿದರೆ, ಮೊದಲಿನ ಶೈವವನ್ನು ನದಿಯ ಮೂಲಸ್ಥಾನವನ್ನಾಗಿ ಭಾವಿಸಬಹುದು. ಪಾಶ್ಚಾತ್ಯ ಪಂಡಿತರು ವೇದಗಳ ಶೋಧನದಿಂದ ವೇದದಲ್ಲಿ ಬೇರೆ ಅರ್ಥದಲ್ಲಿ ರುದ್ರ ಶಬ್ದವಿದ್ದದ್ದು ಆ ಮೇಲೆ ಶಿವ ಶಬ್ದವಾಗಿ, ಶೈವವಾಗಿ ಬೇರೆ ಅರ್ಥದಲ್ಲಿ ವಿಷ್ಣು ಶಬ್ದವಿದ್ದದ್ದು ಅನಂತರ ಮತ್ತೊಂದರ್ಥದಲ್ಲಿ ವೈಷ್ಣವವಾಗಿ ವೇದಗಳ ಕಾಲದಿಂದೀಚೆಗೆ ಬಹು ಪುರಾತನದಿಂದ ಶೈವ ವೈಷ್ಣವ ಮತಗಳು ನಡೆದು ಬಂದಿವೆ ಎಂದು ಅಭಿಪ್ರಾಯ ಪಡುತ್ತಾರೆ. ಶೈವಕ್ಕೆ ಮುಖ್ಯ ಕ್ರಿಯೆಯಾದ ಲಿಂಗಪೂಜೆಯು ವೇದಗಳ ನಂತರ ಬಹು ಪುರಾತನದಿಂದ ಬಂದುದಾಗಿರುತ್ತದೆಂದು *Professor H. H. Wilson* ಸಾಹೇಬರು ತಮ್ಮ *Hindu Religion* ಎಂಬ ಪುಸ್ತಕದಲ್ಲಿ ಅಭಿಪ್ರಾಯ ಪಟ್ಟಿರುತ್ತಾರೆ. ಹೇಗಂದರೆ:--

> "The worship of Ling is perhaps the most ancient form of object of homage adopted in India, sub sequently to the ritual of Vedas........."

ಆದರೆ ಈಚೆಗೆ ಪಂಜಾಬಿನಲ್ಲಿ ಹರಪ್ಪಾ ಮಹಾಂಜೋ ದಾರೊ ಎಂಬ ಸ್ಥಳಗಳಲ್ಲಿ ಭೂಶೋಧನ ಮಾಡಿದ್ದರಲ್ಲಿ ಹೊರಬಿದ್ದ ಕೆಲವು ಕಟ್ಟಡಗಳು ಮುಂತಾದವುಗಳಲ್ಲಿ ಲಿಂಗಗಳು ಸಿಕ್ಕಿರುವದರಿಂದ ಭೂಗರ್ಭ ಶೋಧನ ಶಾಸ್ತ್ರದ ಪ್ರಕಾರ ಇದು ಆರ್ಯವೇದಗಳಿಗಿಂತ ಮೊದಲಿನ ದ್ರಾವಿಡರ ಕಾಲದ್ದೆಂದು ಸಿದ್ಧಾಂತ ಮಾಡಿರುತ್ತಾರಾಗಿ ಲಿಂಗಪೂಜೆಯು ವೇದಗಳಿಗಿಂತ ಮೊದಲು ದ್ರಾವಿಡರಲ್ಲೇ ಇತ್ತೆಂದು ತಿಳಿಯಬೇಕಾಯಿತು. ಈ ಕಾರಣದಿಂದ ಲಿಂಗಪೂಜೆಯ ಮತವು ವೇದಗಳಿಗಿಂತ ಮೊದಲಿನ

ದಾದ ಕಾರಣದಿಂದ ಲಿಗಂಪೂಜೆಯ ಪ್ರಾಚೀನತ್ವಕ್ಕೆ ವೇದಗಳನ್ನು ಆರಿಸಿ ಕೊಂಡು ಹೋಗುವ ಅವಶ್ಯಕತೆ ಏನೂ ಕಾಣುವದಿಲ್ಲ.

ಈ ರೀತಿ ವೇದಗಳಿಗಿಂತ ಮೊದಲಿಂದ ಬಂದದ್ದಾಗಲೀ ಅಥವಾ ವೇದಗಳಿಗಿಂತ ಈಚಿಗೆ ಬಂದದ್ದಾಗಲೀ ಶೈವವು ಆಗಿಂದಾಗ್ಯೆ ರೂಪಾಂ ತರವನ್ನು ಹೊಂದುತ್ತಾ ಹೋಗಿರುತ್ತದೆ. ವೇದಗಳ ಕಾಲದಿಂದ ಹಿಡಿದು ಭಾರತ ರಾಮಾಯಣಗಳ ಕಾಲದ ವರಿಗಿನ ಶೈವವು ಅಂದರೆ ಕ್ರಿ. ಪೂ. ೮೦೦ ರ ವರಿಗಿನ ಶೈವವು ಆರ್ಯರ ಜಾತಿಯನ್ನು ಮುಂದುಮಾಡಿ ಕೊಂಡು ಶಿವಭಕ್ತಿಯನ್ನು ಹಿಂದುಮಾಡಿಕೊಂಡು ಬಂದಿದ್ದಂತ ಸಾಧಾ ರಣ ಶೈವವಾಗಿತ್ತೆಂದು ತದ್ಗ್ರಂಥಗಳ ವಿಷಯದಿಂದ ಗೊತ್ತಾಗುತ್ತದೆ. ಆದರೆ ದಕ್ಷಿಣದಲ್ಲಿ ದ್ರಾವಿಡರಲ್ಲೇನಾದರೂ ಜಾತಿಯನ್ನು ಹಿಂದುಮಾಡಿ ಶಿವಭಕ್ತಿಯನ್ನು ಮುಂದುಮಾಡಿರತಕ್ಕ ಜನಾಂಗವೇನಾದರೂ ಇತ್ತೋ ಏನೋ ಎಂಬ ಯೋಚನೆಯುಂಟಾಗುತ್ತದೆ. ರಾಮಾಯಣದಲ್ಲಿ ಲಂಕೆಯ ರಾವಣನನ್ನು ಕೇವಲ ಶೈವನನ್ನಾಗಿ ವರ್ಣಿಸಿರುವದರಲ್ಲಿ ದಕ್ಷಿಣದಲ್ಲಿ ರಾಮಾಯಣದ ಕಾಲದಲ್ಲೇ ಕೇವಲ ಶೈವವಿದ್ದಿರಬಹುದೆಂದು ಊಹಿ ಸಬೇಕಾಗಿರುತ್ತದೆ. ಆದರೆ ದುರದೃಷ್ಟದಿಂದ ದ್ರಾವಿಡರು ಆರ್ಯಋಷಿ ಗಳು ವೇದಗಳನ್ನು ಬಾಯಲ್ಲಿ ಹೇಳುವ ಪದ್ಧತಿಯನ್ನು ಮಾಡಿಕೊಂಡು ಬಂದಂತೆ ಮಾಡಿಕೊಂಡುಬರಲಿಲ್ಲವಾಗಿ ಆಗಿನ ಶೈವದ ಸ್ಥಿತಿಯನ್ನು ತಿಳಿ ಯಲವಕಾಶವಿಲ್ಲವಾಗಿದೆ. ಆದರೆ ಬೌದ್ಧ ಜೈನರ ಕಾಲದಿಂದೀಚೆಗೆ ಅಂದರೆ ಕ್ರಿ. ಶ. ಪೂ. ೬೦೦ ರಿಂದೀಚೆಗೆ ಕ್ರಿ. ಶ. ೮೦೦ ರವರಿಗೂ ಜಾತಿಯನ್ನು ಹಿಂದುಮಾಡಿ ಶಿವಭಕ್ತಿಯನ್ನು ಮುಂದುಮಾಡುವ ಕೇವಲ ಶೈವವು ಪ್ರಚಲಿಸಿದಂತೆ ಕಾಣುತ್ತದೆ. ಈ ಕಾಲದಲ್ಲಿ ಅಂದರೆ ಕ್ರಿ. ಶ. ಪೂ. ೪೦೦ ರಿಂದಲೇ ಹದಿನೆಂಟು ಪುರಾಣಗಳು ಪ್ರಾರಂಭವಾದವೆಂದು Vincent Smith ಸಾಹೇಬರು ತಮ್ಮ Early History of India ಎಂಬ ಪುಸ್ತಕ ದಲ್ಲಿ ಬರೆದಿರುತ್ತಾರೆ. ಹೇಗೆಂದರೆ:—

> " I may add that Puranas in some shape were already authoritative in the fourth century B. C."

Professor H. H. Wilson ಸಾಹೇಬರು ತಮ್ಮ Hindu Religions ಎಂಬ ಪುಸ್ತಕದಲ್ಲಿ ಆಗಮಗಳು ಕೆಲವು ಮೊದಲಿನವು ಇರಬಹುದೆಂ

ತಲೂ, ಕೆಲವು ಕ್ರಿ. ಶ. ಪ್ರಾರಂಭದಲ್ಲಿ ಆದವುಗಳಾಗಿರಬಹುದೆಂತಲೂ ಹೇಳುತ್ತಾರೆ. ಹೇಗೆಂದರೆ:—

"Some of the Tantras are of earlier composition... On the other band there appears no indication of Tantrika notion in the Mahabharata and the name of Tantra in the sense of a religious text book does not occur in the vocabulary of Amarsimha. It may, therefore, be inferred that the system originated at some period in the early centuries of Christianity".

ಈ ರೀತಿ ಕೇವಲ ಶೈವವು ಪ್ರಸರಿಸಿದುದರ ಫಲವಾಗಿ ಕ್ರಿ. ಪೂ. ೪೦೦ ರಿಂದ ಹಿಡಿದು ಕ್ರಿ. ಶ. ೮೦೦ ರವರಿಗೂ ಹದಿನೆಂಟು ಪುರಾಣಗಳೂ, ಆಗಮಗಳೂ ಹುಟ್ಟುತ್ತ ಬಂದವೆಂದು ಗೊತ್ತುಮಾಡಿಕೊಳ್ಳಬೇಕಾಗಿದೆ. ಇವುಗಳನ್ನನುಸರಿಸಿದ ಕೇವಲ ಶೈವಗಳು ಎರಡು ಕಂಡುಬರುತ್ತವೆ. ಅವು ಯಾವವೆಂದರೆ ಕಾಶ್ಮೀರ ಪ್ರಾಂತದ ಕ್ರಿ. ಶ. ಶಾಸನ ಶೈವವೊಂದು, ತಮಿಳು ದೇಶದ ಶಿವಸಿದ್ಧಾಂತ ಶೈವವೊಂದು ಆಗಿರುತ್ತದೆ. ಕಾಶ್ಮೀರ ದೇಶದಲ್ಲಿ ಸುಮಾರು ಕ್ರಿ. ಶ. ೯೦೦ ರಲ್ಲಿ ವಸುಗುಪ್ತನೆಂಬುವನು ಶಿವನು ಬಂಡೆಯಲ್ಲಿ ಬರೆದನೆಂಬ ಲಿಪಿಯನ್ನು ನೋಡಿದನೆಂತಲೂ ಅದನ್ನು ತ್ರಿಕ ಶಾಸನವೆಂಬ ಹೆಸರಿನಿಂದ ಪ್ರಚಾರ ಮಾಡಿದನೆಂತಲೂ ಗೊತ್ತಾಗಿದೆ. ತ್ರಿಕವೆಂದರೆ ಜೀವಿಗಳಾದ ಪಶುಗಳು, ಪಾಶವೆಂದರೆ ಬದ್ಧತೆಯುಳ್ಳದ್ದು, ಪತಿ ಎಂದರೆ ಜಗತ್ತಿಗೆ ಒಡೆಯನಾದ ಶಿವನು ಎಂದು ಅರ್ಥ. ಈ ತ್ರಿಕ ಶಾಸನ ಶೈವಕ್ಕೆ ವಸುಗುಪ್ತನೇ ಸ್ಥಾಪಕನೆಂದು ತಿಳಿಯಬೇಕಾಗಿದೆ. ಅವನಿಂದೀಚೆಗೆ ಕೆಲವು ಆಚಾರ್ಯರು ಗ್ರಂಥಗಳನ್ನು ಬರೆದಿರುತ್ತಾರೆ. ತಮಿಳುದೇಶದ ಶಿವಸಿದ್ಧಾಂತ ಶೈವವು ಸುಮಾರು ಕ್ರಿ.ಶ. ೨೦೦ ರವರಿವಿಗೂ ಹಿಂದಕ್ಕೆ ಹೋಗುತ್ತದೆ. ಈ ಶಿವ ಸಿದ್ಧಾಂತ ಶೈವವನ್ನು ಪ್ರಚಾರಮಾಡಿದವರಲ್ಲಿ ಜ್ಞಾನ ಸಂಬಂಧನೇ ಮುಖ್ಯವಾದವನು. ಇವನಂತೆ ಸುಂದರನಾಯನಾರ್, ತಿರುವಾಕರೀಶರ್, ಮಾಣಿಕ್ಯವಾಚಕರ್ ಮೊದಲಾದವರು ತಮಿಳಿನಲ್ಲಿ ಶಿವಸಿದ್ಧಾಂತ ಗ್ರಂಥಗಳನ್ನು ಬರೆದಿರುತ್ತಾರೆ. ಮೇಲೆ ಹೇಳಿದ ಎರಡು ಶೈವಗಳು ಕ್ರಿಸ್ತಶಕದಿಂದೀಚೆಗೆ ಪ್ರಕಾಶಕ್ಕೆ ಬಂದಂತೆ ಕಂಡರೂ, ಸಾಧಾರಣ ಶೈವವು ವೇದಗಳ ಕಾಲದಿಂದಲೂ ಅಥವಾ

ವೇದಗಳಿಗಿಂತ ಮೊದಲಿನಿಂದಲೂ ಬಂದಿರುತ್ತದೆಂದು ತಿಳಿಯಬೇಕು. ಈ ಎರಡು ಶೈವಗಳೊಳಗೆ ತಮಿಳು ದೇಶದ ಶಿವಸಿದ್ಧಾಂತ ಶೈವರಲ್ಲಿ ಅರುವತ್ತುಮೂವರು ಪುರಾತನರೆಂಬ ಶರಣರು ಪ್ರಸಿದ್ಧಿಪಡೆದಿರುತ್ತಾರೆ. ಈ ಅರುವತ್ತುಮೂರು ಪುರಾತನರ ವಿಷಯವಾಗಿ ಶೆಕ್ಕಿರಾರ್ ಎಂಬ ತಮಿಳು ಗ್ರಂಥಕಾರನು ಪೆರಿಯ ಪುರಾಣವೆಂಬದಾಗಿ ಸುಮಾರು ಕ್ರಿಸ್ತ ಶಕ ಹನ್ನೆರಡನೇ ಶತಮಾನದಲ್ಲಿ ಸ್ವಲ್ಪ ಹೆಚ್ಚುಕಡಿಮೆ ಬಸವೇಶ್ವರನ ಕಾಲದಲ್ಲಿ ಬರೆದಿರುತ್ತಾನೆ. ಬಸವೇಶ್ವರನು ರೂಪಿಸಿದ ಅಷ್ಟಾವರಣ ಪಂಚಾಚಾರ ಷಟ್ಸ್ಥಲಗಳ ಭಾವವು ಅರುವತ್ತುಮೂವರಲ್ಲಿ ಒಬ್ಬೊಬ್ಬ ರಲ್ಲಿ ಒಂದೊಂದು ಭಾಸವಾಗುತ್ತದೆ. ಈ ವಿಚಾರದಲ್ಲಿ "ಅರುವತ್ತುಮೂ ವರು ಶೈವ ಪುರಾತನರನ್ನು ಬಸವಾದಿಗಳು ಏಕೆ ಪುರಸ್ಕರಿಸಿದರು" ಎಂಬ ಲೇಖನದಲ್ಲಿ ೧೯೩೨ ನೆ ಎಪ್ರಿಲ ತಿಂಗಳ ಶಿವಾನುವ ಪತ್ರಿಕೆಯಲ್ಲಿ ಸವಿಸ್ತಾ ರವಾಗಿ ತರ್ಕಿಸಿರುತ್ತೇನೆ. ಬಸವೇಶ್ವರನು ತನ್ನ ವಚನದಲ್ಲಿ ಈ ಅರುವ ತ್ತುಮೂವರು ಪುರಾತನರಲ್ಲಿ ಅನೇಕರನು ಆಸಕ್ತಿಯಿಂದ ಪ್ರಸ್ತಾಪಿಸಿರು ತ್ತಾನೆ.

ಕೇವಲ ಶೈವಗಳಲ್ಲಿ ಮೇಲೆ ಹೇಳಿದ ಎರಡು ಶೈವಗಳಲ್ಲದೆ ಕರ್ಣಾ ಟಕದಲ್ಲಿ ಬಸವೇಶ್ವರನಿಂದ ಹುಟ್ಟಿದ ವೀರಶೈವ ಅಥವಾ ಲಿಂಗಾಯತ ಶೈವವು ಮೂರನೆಯದಾಗಿರುತ್ತದೆ. ಇದಕ್ಕೆ ಲಿಂಗಧಾರಣವೂ, ಅಷ್ಟಾ ವರಣ ಪಂಚಾಚಾರ ಷಟ್ಸ್ಥಲವೆಂಬ ತತ್ವವೂ ಮುಖ್ಯ ಲಕ್ಷಣವಾಗಿರು ತ್ತದೆ. ಈ ವೀರಶೈವ ಅಥವಾ ಲಿಂಗಾಯತ ಧರ್ಮಕ್ಕೆ ಮುಖ್ಯ ಲಕ್ಷ ಣವಾದ ಲಿಂಗಧಾರಣವು ಬಸವೇಶನಿಂದ ಕಲ್ಪಿತವಾದದ್ದೇ ಅಥವಾ ಅವ ನಿಗೆ ಮೊದಲು ಯಾರಲ್ಲಾದರೂ ಇತ್ತೇ ಎಂಬುದೊಂದು ಪ್ರಶ್ನೆ. ತಮಿಳು ದೇಶದ ಶಿವಸಿದ್ಧಾಂತ ಶೈವರಾದ ಅರುವತ್ತುಮೂವರು ಪುರಾತನರೆಲ್ಲರೂ ದೇವಸ್ಥಾನಗಳಲ್ಲಿ ಸ್ಥಾವರಲಿಂಗಗಳನ್ನು ಪೂಜಿಸುತ್ತಿದ್ದರೇ ಹೊರತು ದೇಹದಲ್ಲಿ ಲಿಂಗವನ್ನು ಧರಿಸುತ್ತಿದ್ದಿಲ್ಲವೆಂದು ಅವರ ಕಥೆಗಳಿಂದಲೂ, ಅವರ ಗ್ರಂಥಗಳಿಂದಲೂ ತಿಳಿನೀರಿನಂತೆ ಸ್ಪಷ್ಟವಾಗಿ ಕಾಣುತ್ತದೆ. ಇನ್ನು ಕಾಶ್ಮೀರದೇಶದ ತ್ರಿಕ ಶಾಸನ ಶೈವರಲ್ಲೇನಾದರೂ ಕಿಂಚಿತ್ತು ಲಿಂಗಧಾ ರಣವು ಇತ್ತೇ ಎಂದು ವಿಚಾರಮಾಡಿದರೆ ಅವರ ಗ್ರಂಥಗಳಲ್ಲಿ ಕಂಡು ಬರುವದಿಲ್ಲವೆಂದು ತೋರುತ್ತದೆ. ಅವರ ಗ್ರಂಥಗಳನ್ನು ಹೆಚ್ಚು ಶೋಧನೆ ಮಾಡಿಲ್ಲವಾದದರಿಂದ ಹೆಚ್ಚು ಶೋಧನೆಮಾಡಿ ನಿಜ ವಿಚಾರವನ್ನು ತಿಳಿ ದುಕೊಳ್ಳಬೇಕಾಗಿರುತ್ತದೆ.

ಅದರ ಮಾತು ಅಷ್ಟಕ್ಕಿರಲಿ. ಇನ್ನು ಬಸವೇಶನಿಗೆ ಹಿಂದೆ ಸಮೀಪದಲ್ಲಿ ಬಸವೇಶನ ಮತಸ್ಥಾಪನೆಯ ಸ್ಥಳವಾದ ಕರ್ನಾಟಕದಲ್ಲಿ ಯಾವ ಶೈವರಿದ್ದರೆಂಬ ವಿಚಾರವನ್ನು ಮಾಡೋಣ. ಕರ್ನಾಟಕದ ಎಲ್ಲಾ ಶಿಲಾಶಾಸನಗಳಿಂದಲೂ ಬಸವೇಶನಿಗೆ ಮೊದಲು ಕಾಳಾಮುಖ, ಲಕುಲೀಶ ಮೊದಲಾದ ಶೈವಗಳಿದ್ದಂತೆ ಸ್ಪಷ್ಟವಾಗಿ ಕಂಡುಬರುತ್ತದೆ. ಈ ಕಾಳಾಮುಖ ಲಕುಲೀಶರು ಕಾಶ್ಮೀರದ ಬ್ರಾಹ್ಮಣರಿಗೆ ಉಂಬಳಿ ಕೊಟ್ಟಂತೆ ಶಾಸನಗಳಲ್ಲಿರುವದರಿಂದ ಕಾಳಾಮುಖ ಲಕುಲೀಶರು ಕಾಶ್ಮೀರದಿಂದ ಬಂದು ಕರ್ನಾಟಕದಲ್ಲಿ ನೆಲೆಗೊಂಡ ಶೈವವೆಂದು ಚಾರಿತ್ರಶೋಧಕರು ನಿರ್ಧರಿಸಿರುತ್ತಾರೆ. ಬಸವೇಶನಿಗೆ ಅಂಗದಲ್ಲಿ ಲಿಂಗವನ್ನು ಧರಿಸುವ ವಿಧಾನವು ಹೇಗೆ ಹೊಳೆಯಿತೆಂಬುದೊಂದು ಪ್ರಶ್ನೆ. ಬಸವೇಶನಿಗೆ ಮೊದಲು ಕ್ರಿ. ಶ. ೫೦೦ ರಲ್ಲಿನ ವಾಕಟದ ಶಿಲಾಶಾಸನದಲ್ಲಿ ಒಬ್ಬ ರಾಜಪುತ್ರನು ಹೆಗಲಮೇಲೆ ಲಿಂಗವನ್ನು ಹೊತ್ತು ಶಂಭುವನ್ನು ಮೆಚ್ಚಿಸಿದನೆಂದು ಬರೆದಿರುವದಾಗಿ ಡಾಕ್ಟರ ನಂದಿಮಠರವರು ಹೇಳುತ್ತಾರೆ. ಆದರೆ ಈ ರೀತಿ ಲಿಂಗವನ್ನು ಹೊತ್ತದ್ದು ಆಕಸ್ಮಿಕವಾಗಿ ಮನಸ್ಸಿಗೆ ಬಂದು ಹೊತ್ತದ್ದೇ ಹೊರತು ಅದು ಒಂದು ಪದ್ಧತಿಯಾಗಿತ್ತೆಂದು ಹೇಳುವದಕ್ಕೆ ಬರುವದಿಲ್ಲ. ಆದರೆ ಅದರಿಂದೀಚೆಗೆ ಶಂಕರಾಚಾರ್ಯರ ಕಾಲದಲ್ಲಿ ಕ್ರಿ. ಶ. ೮೦೦ ರಲ್ಲಿ ಶಂಕರಾಚಾರ್ಯರ ಸನ್ನಿಧಿಯಲ್ಲಿದ್ದ ಆನಂದಗಿರಿಯಿಂದ ಬರೆಯಲ್ಪಟ್ಟಿರುವ ಶಂಕರದಿಗ್ವಿಜಯದಲ್ಲಿ ಶಂಕರಾಚಾರ್ಯರು ವಾದ ಮಾಡಿದರೆಂದು ಹೇಳುವ ಆರು ವಿಧ ಶೈವಗಳಿದ್ದವೆಂದು ಹೇಳುವದರಲ್ಲಿ ಕೆಲವರು ಲಿಂಗಮುದ್ರೆಯನ್ನು ದೇಹದ ಬೇರೆ ಬೇರೆ ಭಾಗಗಳಲ್ಲಿ ಹಾಕಿಕೊಳ್ಳುತ್ತಿದ್ದರೆಂದೂ, ಕೆಲವರು ಡಮರುವಿನ ಮುದ್ರೆಯನ್ನು ಹಾಕಿಕೊಳ್ಳುತ್ತಿದ್ದರೆಂದೂ, ಕೆಲವರು ತ್ರಿಶೂಲವನ್ನೂ ಲಿಂಗವನ್ನೂ ತಲೆಯ ಮೇಲೆ ಹೊರುತ್ತಿದ್ದರೆಂದೂ ಬರೆದಿರುವವಾಗಿ Professor H. H. Wilson ಸಾಹೇಬರು ತಮ್ಮ "Hindu Religions" ಎಂಬ ಪುಸ್ತಕದಲ್ಲಿಯೂ, Monier Williams ಸಾಹೇಬರು ತಮ್ಮ 'Religious thought and Life in India" ಎಂಬ ಪುಸ್ತಕದಲ್ಲಿಯೂ ಹೇಳುತ್ತಾರೆ. ಹಾಗಾದರೆ ಮೇಲೆ ಹೇಳಿದ ಲಿಂಗವನ್ನು ಧರಿಸುತ್ತಿದ್ದವರು ಯಾರು? ಇದೊಂದು ಏಕ ಗ್ರಂಥದ ಹೊರತು ಈ ವಿಚಾರವು ಮತ್ತಾವ ದೇಶ, ಕಾಲ, ತರ್ಕಗಳು ಗೊತ್ತಾಗಿರುವ ಗ್ರಂಥಗಳಲ್ಲಿ ಕಂಡುಬರುವದಿಲ್ಲ. ಹೀಗೆ ಲಿಂಗಧರಿಸುತ್ತಿದ್ದವರು ಇದ್ದರೆ ಬಸವೇಶನು ಇವರ ಹೆಸರುಗಳಾವವಾದರೂ

ಇದ್ದರೆ ಏತಕ್ಕೆ ಎತ್ತಿಕೊಳ್ಳಲಿಲ್ಲ? ಸ್ಥಾವರ ಲಿಂಗಪೂಜಕರಾದ ಶೈವ ಪುರಾತನರ ಹೆಸರುಗಳನ್ನು ಎತ್ತಿ ಇವರ ಹೆಸರನ್ನು ಎತ್ತಿಕೊಳ್ಳದೆ ಬಿಡುತ್ತಿದ್ದನೆ? ಉತ್ತರದ ಕಾಳಿದಾಸ, ಬಾಣ, ಮಯೂರ ಮೊದಲಾದ ಸಾಧಾರಣ ಶೈವರ ಹೆಸರನ್ನಾದರೂ ಎತ್ತಿ ಇವರ ಹೆಸರನ್ನು ಬಿಡುತ್ತಿದ್ದನೆ? ಒಂದು ವೇಳೆ ಲಿಂಗವನ್ನು ತಲೆಯ ಮೇಲೆ ಧರಿಸುತ್ತಿದ್ದವರು ಅತಿ ವಿರಳವಾಗಿ ಇದ್ದರೆ ಅವರು ಶೈವರಲ್ಲೇ ಅಡಕವಾಗಿದ್ದರೇ ಹೊರತು ಅವರದೊಂದು ಪ್ರತ್ಯೇಕ ಸಮಾಜವಿದ್ದಿಲ್ಲವೆಂದು ಖಂಡಿತವಾಗಿ ಹೇಳಬಹುದು. ಮತ್ತು ತಲೆಯ ಮೇಲೆ ಲಿಂಗವನ್ನು ಹೊರುತ್ತಿದ್ದ ಶರಣರ ಚರಿತ್ರಗಳಾವವೂ ಬಸವೇಶನಿಗೆ ಮೊದಲು ಶಾಸನದಲ್ಲಾಗಲೀ, ದೇಶಕಾಲಕರ್ತೃಗಳು ಗೊತ್ತಾಗಿರುವ ಸ್ವತಂತ್ರ ಗ್ರಂಥಗಳಲ್ಲಾಗಲೀ ಕಂಡುಬರುವದಿಲ್ಲ. ಈ ಶಂಕರಾಚಾರ್ಯರು ವಾದ ಮಾಡಿದ ಆರು ವಿಧ ಶೈವರು ಕಾಶ್ಮೀರದ ತ್ರಿಕ ಶಾಸನ ಶೈವಕ್ಕೆ ಸಂಬಂಧಪಟ್ಟವರೋ ಅಥವಾ ಯಾವ ಶೈವರೋ ಗೊತ್ತಾಗುವದಿಲ್ಲ. ಶಂಕರಾಚಾರ್ಯರಿಂದೀಚೆಗೆ ಬಸವೇಶನಿಗೆ ಮೊದಲು ಕರ್ನಾಟಕದಲ್ಲಿದ್ದ ಶೈವರು ಕಾಳಾಮುಖರು, ಲಕುಲೀಶರು ಪಾಶುಪತರು ಎಂದು ಅವರ ಶಾಸನಗಳಿಂದ ಗೊತ್ತಾಗುತ್ತದೆ. ಬಸವೇಶನಿಗೆ ಮೂಲ ಕಾರಣವಾದ ಲಿಂಗಧಾರಣವು ಈ ಲಕುಲೀಶ ಕಾಳಾಮುಖರಲ್ಲೇನಾದರೂ ಇತ್ತೇ ಎಂಬ ವಿಚಾರಮಾಡಬೇಕಾಗಿರುತ್ತದೆ. ಕಾಳಾಮುಖ ಅಥವಾ ಲಕುಲೀಶರ ಕೆಲವು ಶಾಸನಗಳಲ್ಲಿ ಬಸವೇಶನಿಗಿಂತ ಮೊದಲು "ಲಿಂಗಿ" ಶಬ್ದ ಪ್ರಯೋಗಗಳು ಕಂಡುಬರುತ್ತವೆ. ' ಶಿಕಾರಿಪುರದ ತಾಲೂಕು ಬೆಳಗಾವಿಯ ಹತ್ತಿರವಿರುವ ೯೪ ನೆ ಶಾಸನ ೪ ನೇ ಕಲ್ಲು ಕ್ರಿ. ಶ. ೧೧೯೪ ರಲ್ಲಿ ಬರೆಯಲ್ಪಟ್ಟಿದ್ದರಲ್ಲಿ ಹೀಗೆ ಬರೆದಿರುತ್ತದೆ–

"ಪಾರ್ವರಂ ಕವಿಲೆಯುಂ ಸ್ತ್ರೀ ಬಾಳರಂ ಲಿಂಗಿಯು
ಪ್ರವರಂ ಕೊಂದವನಂ ಸಗೋತ್ರ ಸಹಿತಂ ಬೀಳ್ಗುಂ ಮ
ಹಾಘೋರದೊಳ್"

ಇದರೊಳಗೆ "ಲಿಂಗಿ" ಎಂದರೆ ಸ್ಥಾವರ ಲಿಂಗ ಪೂಜಕರು, ಬ್ರಹ್ಮಚಾರಿ ಎಂದು ಮೊದಲಾಗಿ ಶಾಸನ ಶೋಧಕರು ಅರ್ಥಮಾಡಿರುತ್ತಾರೆ. "ಲಿಂಗಿ" ಎಂದರೆ ಲಿಂಗಧಾರಿ ಎಂದು ಅರ್ಥಮಾಡಿರುವದಿಲ್ಲ. ಲಿಂಗಿ ಧಾರಿ ಎಂದು ಶಾಸನಗಳಲ್ಲಿ ಇನ್ನೆಲ್ಲಾದರೂ ಕಂಡುಬಂದರೆ ಅಂಗ ಲಿಂಗ ಧಾರಣದ ವಿಚಾರದಲ್ಲಿ ನಿರ್ಧರವಾಗಿ ಹೇಳಬಹುದು. ಹಾಗೆ

ಎಲ್ಲೂ ಸ್ಪಷ್ಟವಾಗಿ ಶಿಕ್ಕುವದಿಲ್ಲ. ವೀರಶೈವ ಅಥವಾ ಲಿಂಗಾಯತ ಕವಿಗಳಲ್ಲಿ ಆದಿ ಕವಿ ಎಂದು ಗಣಿಸಲ್ಪಟ್ಟಿರುವ ಹಂಪೆಯ ಹರೀಶನ ಗ್ರಂಥಗಳಲ್ಲಿ ಬಸವೇಶನಿಗೆ ಮೊದಲಿನ ಸ್ಥಿತಿಯೂ ಬಸವೇಶನ ಮತಪ್ರಸರಣದ ಈಚಿನ ಸ್ಥಿತಿಯೂ ಚಿತ್ರಿಸಲ್ಪಟ್ಟಿವರುವದರಿಂದ ಕೆಲವು ವಿಷಯಗಳು ಗೊತ್ತಾಗುತ್ತವೆ. ಹಂಪೆಯ ಹರಿಹರನು ಯಾವಯಾವ ಶರಣರನ್ನು ಶೈವರನ್ನಾಗಿಯೇ ವರ್ಣಿಸಿರುತ್ತಾನೋ ಅವರನ್ನು ಈಚಿನ ಕವಿಗಳು ವೀರಶೈವರನ್ನಾಗಿ ವರ್ಣಿಸಿರುತ್ತಾರೆ. ಮೊದಲು ಕವಿಯ ಮಾತಿನಲ್ಲಿ ನಾವು ಹೆಚ್ಚು ಚಾರಿತ್ರಿಕ ಮೌಲ್ಯವನ್ನಿಡಬೇಕಾಗಿರುತ್ತದೆ. ಹಂಪೆಯ ಹರಿಹರನು ಬಸವೇಶನ ಕಾಲದ ಶರಣರನ್ನು ವರ್ಣಿಸಿರುವದರಲ್ಲಿ ಬಸವೇಶನು ಮೊದಲು ಶೈವಬ್ರಾಹ್ಮಣನಾಗಿದ್ದು ತಾಯಿ ತಂದೆಗಳಲ್ಲಿ ವಾದಮಾಡಿ ಜನಿವಾರವನ್ನು ಕಿತ್ತು ಬಿಸುಟು ಸಂಗಮೇಶ್ವರದೇವಾಲಯಕ್ಕೆ ಬಂದು ಅಲ್ಲಿ ರಾತ್ರಿ ಮಲಗಿರುವಾಗ್ಯೆ ಸಂಗಮನಾಥನು ಸ್ವಪ್ನದಲ್ಲಿ ಬಂದು ಬೆಳಿಗ್ಗೆ ದೇವಸ್ಥಾನದಲ್ಲಿರುವ ವೃಷಭವಿಗ್ರಹದ ಬಾಯಿಂದ ಲಿಂಗವು ಹೊರಡುವದೆಂತಲೂ, ಅದನ್ನು ತಾನು ಧರಿಸಿಕೊಳ್ಳಬೇಕೆಂತಲೂ ಹೇಳಿ ಹೋದಂತಾಗಲೂ, ಎದ್ದ ಮೇಲೆ ಸ್ವಪ್ನದಲ್ಲಿ ಹೇಳಿದಂತೆ ವೃಷಭನ ಬಾಯಿಂದ ಹೊರಟ ಲಿಂಗವನ್ನು ಬಸವೇಶನು ಧರಿಸಿದನೆಂದು ತನ್ನ ಬಸವರಾಜ ರಗಳೆಯಲ್ಲಿ ಬರೆದಿರುತ್ತಾನೆ. ಅಲ್ಲಮಪ್ರಭುವಿನ ವಿಚಾರದಲ್ಲಿ ಅಲ್ಲಮನು ನಾಯಕ ವಂಶದವನಾಗಿದ್ದು ಯುವ್ವನದಲ್ಲಿ ಬೇರೊಂದೂರಿಗೆ ಬಂದು ದೇವಸ್ಥಾನದಲ್ಲಿರಲು ಅಲ್ಲಿಗೆ ಅರ್ಚನೆಗೆ ಓರ್ವ ಕಾಮಲತೆ ಎಂಬ ರಾಜಪುತ್ರಿಯು ಬರಲು ಅವರಿಬ್ಬರಿಗೆ ಮೋಹವಾಗಿ ಅಲ್ಲಮನು ಅವಳಲ್ಲೇ ಕೆಲಕಾಲವಿದ್ದು ಅವಳು ಜ್ವರದಿಂದ ಸಾಯಲು ಅದರಿಂದ ಅಲ್ಲಮನು ಬಹಳ ಸಂಕಟಪಟ್ಟು ವೈರಾಗ್ಯ ಪುಳ್ಳವನಾಗಿ ಗೋಹೇಶ್ವರಕ್ಕೆ ಹೋಗುತ್ತಿರಲು ದಾರಿಯಲ್ಲಿ ಏನೋ ಎಡವಿದಂತಾಗಲು ಅದನ್ನು ಕೀಳುವದಕ್ಕಾಗದಿರಲು ಗುಹೇಶ್ವರದಿಂದ ರಾಜನನ್ನು ಸೈನ್ಯ ಸಮೇತ ಕರೆದುಕೊಂಡು ಬಂದು ಎಡವಿದ್ದನ್ನು ಕೀಳಿಸಲು ಅದು ಮಂಟಪದ ಒಂದು ಕಳಸವಾಗಿರಲು ಆ ಮಂಟಪದ ಬಾಗಿಲನ್ನು ತೆರೆಯಲು ಅದರೊಳಗೆ ಯೋಗಸಮಾಧಿಯಲ್ಲಿದ್ದ ಅನಿಮಿಷಯ್ಯನು ಬಹಿರ್ಮುಖನಾಗಿ ತನ್ನ ಕರಸ್ಥಲದಲ್ಲಿದ್ದ ಲಿಂಗವನ್ನು ಅಲ್ಲಮ ಪ್ರಭುವಿಗೆ ಕೊಡಲು ಅಲ್ಲಮನು ಧರಿಸಿದನೆಂತಲೂ, ಅನಿಮಿಷಯ್ಯನು ಪ್ರಾಣವನ್ನು ಬಿಟ್ಟನೆಂತಲೂ ಅಲ್ಲಮ

ಪ್ರಭು ರಗಳೆಯಲ್ಲಿ ಹೇಳಿರುತ್ತಾನೆ. ಅನಿಮಿಷಯ್ಯನ ವಿಚಾರದಲ್ಲಿ ಚನ್ನ ಬಸವೇಶನು ಪ್ರಭುವಿನಲ್ಲಿ ಸಂವಾದಮಾಡುವಾಗ್ಯೆ ಬಸವೇಶನು ತನಗೂ, ಅನಿಮಿಷಯ್ಯನಿಗೂ ಲಿಂಗ ಪ್ರದಾನ ಮಾಡಿದನೆಂದು ತನ್ನ ವಚನದಲ್ಲಿ ಹೇಳಿರುತ್ತಾನೆಃ—

" ಅನಿಮಿಷಂಗೆ ಲಿಂಗವ ಕೊಟ್ಟಾತ ಬಸವಣ್ಣ. ಆ
ಲಿಂಗ ನಿನಗೆ ಸೇರಿತ್ತಾಗಿ ಬಸವಣ್ಣನ ಸಾಂಪ್ರದಾಯ
ದ ಕಂದನು ನೋಡಾ ನೀನು. ಭಕ್ತಿ ದಳದುಳದಿಂದೆ ಚನ್ನ
ಸಂಗಮನಾಥನೆಂಬ ಲಿಂಗವನವಗ್ರಹಿಸಿಕೊಂಡೆ
ನಾಗಿ ಬಸವಣ್ಣನ ಸಾಂಪ್ರದಾಯದ ಕಂದನು
ನೋಡಾ ನಾನು. .................."

ಇದರಿಂದ ಬಸವೇಶನು ವೀರಶೈವ ಅಥವಾ ಲಿಂಗಾಯತ ಮತ ವನ್ನು ಸ್ಥಾಪನೆಮಾಡುವಾಗ್ಯೆ ಎಲ್ಲರೂ ಶೈವರಾಗಿದ್ದವರೇ ವಯಸ್ಕರಾದ ಮೇಲೆ ಲಿಂಗಧಾರಣೆ ಹೊಂದಿದರೆಂದು ತಿಳಿನೀರಿನಂತೆ ಸ್ಪಷ್ಟವಾಗಿರು ತ್ತದೆ. ಸೊನ್ನಲಾಪುರದ ಸಿದ್ಧರಾಮೇಶ್ವರನ ವಿಚಾರದಲ್ಲಿ ಅವನು ಬಹಳ ಕಾಲದವರಿಗೂ ಸೊನ್ನಲಾಪುರದಲ್ಲಿ ಶೈವ ಗುರುವಾಗಿದ್ದು ಲಿಂಗಪ್ರತಿಷ್ಠೆ ಗಳನ್ನು ಮಾಡುವದೂ, ಕೆರೆಗಳನ್ನು ಕಟ್ಟಿಸುವದೂ ಮೊದಲಾದುದನ್ನು ಮಾಡುತ್ತಿರಲು ಅಲ್ಲಮಪ್ರಭುದೇವನು ಬಂದು ವಾದ ಮಾಡಿ ಸಿದ್ಧರಾ ಮೇಶನನ್ನು ಕಲ್ಯಾಣಕ್ಕೆ ಕರೆದುಕೊಂಡು ಹೋಗಿ ಚನ್ನಬಸವೇಶ್ವರನಿಂದ ಲಿಂಗಧಾರಣೆ ಮಾಡಿಸಿದುದೇ ಮೊದಲಾದ ವಿಚಾರಗಳನ್ನು ರಾಘವಾಂಕನು ತನ್ನ ಸಿದ್ಧರಾಮಪುರಾಣದಲ್ಲೂ ಸಿದ್ಧರಾಮೇಶನು ತನ್ನ ವಚನದಲ್ಲೂ ವಿರೂಪಾಕ್ಷಪಂಡಿತನು ತನ್ನ ಚನ್ನಬಸವಪುರಾಣದಲ್ಲೂ ಬರೆದಿರುತ್ತಾನೆ. ಇನ್ನು ರೇಣುಕಾಚಾರ್ಯ, ಆದಿಶೆಟ್ಟಿ, ಶಂಕರದಾಸಿಮಯ್ಯ, ಮಹಾದೇ ವಿಯಕ್ಕ ಇವರುಗಳನ್ನು ಹಂಪೆಯ ಹರಿಹರನು ಕಥಿಸಿರುವದರಲ್ಲಿ ರೇಣು ಕಾಚಾರ್ಯನನ್ನು ಮೊದಲಿನಿಂದಲೂ ಕೊನೆಯವರಿಗೂ ಶೈವನನ್ನಾಗಿಯೇ ವರ್ಣಿಸಿರುತ್ತಾನೆ.

" ನಿಷ್ಠೆ ಮಿಗೆ ರೇವಣಸಿದ್ಧನಾಮದಿಂ ನೋಡ
ಅದೆ ಕಂಥೆಯದೆ ವದನವದೆ ವಜ್ರಕುಂಡಲಿಂ
ಅದೆ ವಕ್ತ್ರವದೆ ವಸ್ತ್ರವದೆ ಪಿಡಿದಲಾಕುಳಂ
ಅದೆ ಕೋವಣಂ ನೋಡೆನುತ್ತಮಿರಲುದಿಸಿದಂ
ಸದಮಳವೆನಿಪ್ಪ ಶಿವಲಿಂಗದೊಳ್ಪುಟ್ಟಿದಂ

ಲೋಕಮಂ ಪಾವನಂ ಮಾಡು ಉದ್ಯೋಗದಿಂ
ಆಕಸ್ಮಿಕಂಗಳಂ ತೋರುವನು ರಾಗದಿಂ
ಭಸಿತದಿಂ ನೊಸಲಕಣ್ಣಂ ಮುಸುಂಕಿಟ್ಟಲ್ಲಿ
ಎಸೆವೆರಡು ಕಣ್ಗಳಿಂ ಬೆಳಬೆಳಗುತಂತಲ್ಲಿ"

ಇದರಲ್ಲಿ ಹಣೆಯ ಭಸ್ಮವನ್ನು ಹೇಳಿರುತ್ತಾನೆಯೇ ಹೊರತು ಲಿಂಗ ಧಾರಣವನ್ನು ಹೇಳಿರುವದಿಲ್ಲ. ಇದರೊಳಗೆ "ಪಿಡಿದಲಾಕುಳಂ" ಎಂದು ಹೇಳಿರುವದರಿಂದಲೂ, ಅದೇ ರಗಳೆಯ ಮತ್ತೊಂದು ಕಡೆ.

"ಲಾಕುಳದ ಲಾಕ್ಷಣಿಕನಮ್ಮನ್ಮ ಬರುತಿರ್ದ"

ಎಂದು ಹೇಳಿರುವದರಿಂದಲೂ ರೇಣುಕಾಚಾರ್ಯರು ವೀರಶೈವನಾಗುವದಕ್ಕೆ ಮೊದಲು ಲಕುಲೀಶ ಶೈವನಾಗಿದ್ದನೆಂದು ಸ್ಪಷ್ಟವಾಗಿರುತ್ತದೆ. ಆದಿಶೆಟ್ಟಿಯ ವಿಚಾರದಲ್ಲಿ ಹರಿಹರನು ತನ್ನ ರಗಳೆಯಲ್ಲಿ ಆದಿಶೆಟ್ಟಿಯನ್ನು ಮೊದಲಿಂದಲೂ ಕೊನೆಯುವರಿಗೂ ಶೈವನನ್ನಾಗಿಯೇ ವರ್ಣಿಸಿರುತ್ತಾನೆ. ರಗಳೆಯ ಪ್ರಥಮ ಭಾಗದಲ್ಲಿ ಹೀಗೆ ಬರೆದಿರುತ್ತದೆ.

"ಇರೆ ಯೌವ್ವನವಾದಯ್ಯಂಗಾಗಲು
ಹರಭಕ್ತಿಯು ತನ್ನೊಳು ಪುಟವೇಳಲು
ನೊಸಲೊಳು ಭಸಿತಮನೊಪ್ಪದೊಳಿಡುತಂ
ಎಸೆಯಲು ರುದ್ರಾಕ್ಷಿಗಳಂ ಕೊಡುತುಂ
ಶಿವನಂಘ್ರಿಗಳಂ ಚಲುವಿಂ ಮುಟ್ಟುತೆ
ಶಿವಸುಖಸಂತಸದೊಳಗೋಲಾಡುತೆ"

ಇಲ್ಲಿ ಆದಯ್ಯನಿಗೆ ಭಸ್ಮಧಾರಣೆ, ರುದ್ರಾಕ್ಷಧಾರಣೆ ಹೇಳಿದೆಯೇ ಹೊರತು ಲಿಂಗಧಾರಣೆ ಹೇಳಿಲ್ಲ. ಮುಂದೆ ಆದಿಶೆಟ್ಟಿಯನ್ನು ಸೌರಾಷ್ಟ್ರ ಸೋಮನಾಥನು ಮಾಹೇಶ್ವರ ವೇಷದಿಂದ ಕಾಣಿಸುವದನ್ನು ವರ್ಣಿಸುವಾಗ್ಗೆ ಶೈವನನ್ನಾಗಿಯೇ ವರ್ಣಿಸಿರುತ್ತಾನೆ. ಹೇಗೆಂದರೆ:—

"ಸೌರಾಷ್ಟ್ರದೊಡೆಯಂ ಸೋಮನಾಥನೋರ್ವಂ
ವೃದ್ಧಮಾಹೇಶ್ವರನಾಗಿ ಕೊಡೆ, ಕಮಂಡಲು,
ಯಜ್ಞೋಪವೀತಂ, ನೊಸಲಭಸಿತಂ ವೆರಸಿ
ಆ ದಾರಿಯಿಂ ಬರ್ಪಂತೆ ಬಂದಾದಯ್ಯನ
ಮುಂದಿಳುವಿದಂತೆ ನಿಂದಿರೆ"

ಇಲ್ಲಿ ಮಾಹೇಶ್ವರನಿಗೆ ಹಣೆಯು ಭಸಿತವು, ಜನ್ನಿವಾರವು ಹೇಳಿದೆಯೇ ಹೊರತು ಲಿಂಗಧಾರಣವು ಹೇಳಿರುವದಿಲ್ಲ. ಇದರಿಂದ ಬಸವೇಶನಿಗೆ ಮೊದಲು ಭಸ್ಮಧಾರಣ, ಜನ್ನಿವಾರ, ರುದ್ರಾಕ್ಷಧಾರಣ ಮೊದಲಾದ ಶೈವ ಚಿನ್ಹವುಳ್ಳ ಕಾಳಾಮುಖ ಲಕುಲೀಶ ಮೊದಲಾದ ಶೈವರೆಲ್ಲ ಬಸವೇಶನಿಂದ ಲಿಂಗಧಾರಣವನ್ನು ಹೊಂದಿ ವೀರಶೈವ ಅಥವಾ ಲಿಂಗಾಯತರಾದಂತೆ ಕೈಕನ್ನಡಿಯಂತೆ ಸ್ಪಷ್ಟವಾಗಿರುತ್ತದೆ. ಶಂಕರದಾಸಿಮಯ್ಯನನ್ನು ವರ್ಣಿಸುವಾಗಲೂ ಹರಿಹರನು ತನ್ನ ರಗಳೆಯಲ್ಲಿ ಮೊದಲು ಅವನನ್ನು ಶೈವನನ್ನಾಗಿಯೇ ವರ್ಣಿಸಿರುತ್ತಾನೆ. ಹೇಗೆಂದರೆಃ—

"ಉದಯಾರ್ಕರುಚಿಗೆ ಮೆರೆವ ಕರಕಮಲವಂ
ಸದಮಲ ಶಶಿಪ್ರಭೆಯನೀವಿ ಹಸ್ತಾಗ್ರಮಂ
ಕುಳ್ಳಿರ್ದನಿಜ ಶರಣನುತ್ತಮಾಂಗದೊಳಿಟ್ಟು
ಬಳ್ಳಿವರಿದಡ್ಡೈಸ ನೇಹಮಂ ಮುಂದಿಟ್ಟು
ತನ್ನುವಂ ಭಕ್ತಿಯಿಂ ಪಂಚಾಕ್ಷರಿಯನರುಪಿ
ಉನ್ನತ ಜ್ಞಾನಮಂ ತನ್ನ ಮನದೊಳಗರುಪಿ"

ಇಲ್ಲಿ ಲಿಂಗಧಾರಣವನ್ನು ಹೇಳಿರುವದಿಲ್ಲ. ಆದರೆ ಮುಂದೆ ಮಯೂರಪುರದಲ್ಲಿ ಜನರು ದಾನಕೊಡುವದನ್ನು ವರ್ಣಿಸುವಾಗ ತಲೆಯಮೇಲೆ ಲಿಂಗಧಾರಣವನ್ನು ಹೇಳಿರುತ್ತಾನೆ. ಹೇಗೆಂದರೆಃ—

"ಉತ್ತಮಾಂಗದ ಶಿವಲಿಂಗದ ಸೊಬಗಂ, ಜಡೆಗಳ
ಬೆಡಗಂ, ಭಾಳಾಂಗದ ಭಯಂಕರಂ, ಸತ್ಯರ
ಸಾರ್ವಭೌಮಂ, ಸಾಹಿತ್ಯಭೂಷಣನೆನಿಪ
ಶಂಕರದಾಸಿಮಯ್ಯಂ"

ಇದೂ ಅಲ್ಲದೆ ರೇವಣಸಿದ್ಧರಗಳೆಯಲ್ಲಿ ರೇವಣಸಿದ್ಧನು ಭಂಗಿಸಿದ ಗೋರಕ್ಷನ ಹಿರಿಯ ಹೆಂಡತಿ ಹಿರಿಯ ಲಕ್ಕಾದೇವಿಯನ್ನು ವರ್ಣಿಸುವಾಗ ಅವಳ ತಲೆಯ ಮೇಲೆ ಲಿಂಗಧಾರಣವನ್ನು ಹೇಳುತ್ತಾನೆ. ಹೇಗೆಂದರೆಃ—

"ಹಿರಿಯ ಲಕ್ಕಾದೇವಿ ಗಳಗಳನೆ ನಡೆತಂದು
ಚರಿತದಿಂ ಮಹಲಕ್ಷ್ಮಿಗರುಪೆ ಭರದಿಂ ಬಂದು
ಉತ್ತಮಾಂಗಸ್ಥಲದ ಶಿವಲಿಂಗಸಂಪನ್ನೆ
ಉತ್ತಮ ಶಿವಾಚಾರ ನಿಧಿಲೋಕದೊಳ್ಚೆನ್ನೆ"

ಇದರಿಂದ ಕಾಳಾಮುಖ ಲಕುಲೀಶ ಶೈವರಲ್ಲಿ ಒಬ್ಬೊಬ್ಬರು ವೈಯ್ಯಕ್ತಿಕವಾಗಿ ತಲೆಯಮೇಲೆ ಲಿಂಗವನ್ನು ಧರಿಸುತ್ತಿದ್ದರೆ ಹೇಗೆ ಎಂಬ ಸಂದೇಹ ಬರುತ್ತದೆ. ಕಾಳಾಮುಖ ಲಕುಲೀಶ ಶೈವರ ಶಾಸನಗಳಲ್ಲಿ ಉಪಯೋಗಿಸಲ್ಪಟ್ಟಿರವ "ಲಿಂಗಿ" ಶಬ್ದಕ್ಕೂ ಇದಕ್ಕೂ ಏನಾದರೂ ಸಂಬಂಧವಿದ್ದಿತೇ ಎಂಬ ಶಂಕೆ ಬರುತ್ತದೆ. ಆದರೆ ಇವರೆಲ್ಲರೂ ಬಸವೇಶನ ಕಾಲದವರಾದದರಿಂದ ಬಸವನ ಕಾಲದಲ್ಲಿ ಲಿಂಗಧಾರಣ ಹೊಂದಿ ವೀರಶೈವ ಅಥವಾ ಲಿಂಗಾಯತರಾದವರೋ ಅಥವಾ ಕಾಳಾಮುಖ ಲಕುಲೀಶರಲ್ಲೇ ಮಸ್ತಕದಲ್ಲಿ ಲಿಂಗವನ್ನು ಧರಿಸಿದ್ದವರೋ ಹೇಳುವದಕ್ಕೆ ಬರುವದಿಲ್ಲ. ಕಾಳಾಮುಖ ಲಕುಲೀಶರಲ್ಲಿ ಕ್ವಚಿತ್ತು ಲಿಂಗಧಾರಣೆ ಇತ್ತೆಂದು ನಿರ್ಧರವಾಗಿ ಹೇಳುವದಕ್ಕೆ ಬರುವದಿಲ್ಲ.

ಅದು ಹೇಗೇ ಇರಲಿ, ಕಾಳಾಮುಖ ಲಕುಲೀಶರು ನಿಷ್ಠೆಯುಳ್ಳ ಶೈವರೆಂಬುದರಲ್ಲಿ ಯಾವ ಅಡ್ಡಿಯೂ ಇಲ್ಲ. ಇವರಲ್ಲಿ ಆಗಮಗಳಿಗೆ ಮಾನ್ಯತೆ ಇತ್ತು. ಇವರ ಶಿಲಾಪಿಗಳಲ್ಲಿ ಇವರಿಗೆ "ಶಿವಾಗಮನಿರತ" "ಶಿವಧರ್ಮಪರಿಪಾಲಕ" ಎಂಬ ಹೆಸರುಗಳು ಹೇಳಲ್ಪಟ್ಟಿರುತ್ತವೆ. ಇವರಲ್ಲಿ ಹಿರೇ ಮಠಗಳಿದ್ದವು. ಇವುಗಳ ಅಧಿಪತಿಗಳಿಗೆ "ಹಿರಿಯಮಠದಾಚಾರ್ಯ" ಎಂದು ಹೆಸರಿತ್ತು. ಇವರಲ್ಲಿ "ಮಾಹೇಶ್ವರ" ಎಂಬ ಹೆಸರೂ, "ಅಸಂಖ್ಯಾತಮಹಾಗಣಂಗಳು" ಎಂಬ ಹೆಸರೂ ಇದ್ದವು. ಇವರಲ್ಲಿ "ಶರಣ" ಎಂಬ ಹೆಸರೂ ಇತ್ತು. ಇವರಲ್ಲಿ ಭೂಮಿಗಳಿಗೆ ಲಿಂಗಮುದ್ರೆಯನ್ನು ಹಾಕುವ ಪದ್ಧತಿ ಇತ್ತು. ಇವೇ ಹೆಸರುಗಳೇ ಬಸವೇಶನು ವೀರಶೈವಮತವನ್ನು ಸ್ಥಾಪಿಸಿದ ಮೇಲೂ ನಡೆದು ಬಂದಿರುತ್ತವೆ ಎಂಬುದನ್ನು ತಿಳಿಯಬೇಕು. ಇದನ್ನೆಲ್ಲಾ ನೋಡಿದರೆ ಕಾಳಾಮುಖರಿಗೂ ವೀರಶೈರಿಗೂ ಸಾಮ್ಯತೆ ಬಹಳ ತೋರುತ್ತದೆ. ಈ ಕಾಳಾಮುಖರಿಗೆ ಮೂಲಿಗರಾದ ಕಾಶ್ಮೀರದ ತ್ರಿಕಶಾಸನ ಶೈವರಲ್ಲೂ "ಮಹೇಶ್ವರ" ಎಂಬ ಶಬ್ದವಿರುತ್ತದೆ. ದಕ್ಷಿಣದ ತಮಿಳು ಶಿವಸಿದ್ಧಾಂತ ಶೈವರಲ್ಲೂ "ಭಕ್ತ" "ಮಾಹೇಶ್ವರ" "ಪ್ರಮಥಗಣಂಗಳು" ಎಂಬ ಹೆಸರುಗಳು ಇದ್ದಂತೆ ಅವರ ಗ್ರಂಥಗಳಿಂದ ಗೊತ್ತಾಗುತ್ತದೆ. ಈ ಭಾಗದಲ್ಲಿ ಈ ಶೈವಗಳಿಗೂ ಬಸವೇಶನ ವೀರಶೈವ ಅಥವಾ ಲಿಂಗಾಯತಕ್ಕೂ ಸಾಮ್ಯವಿರುತ್ತದೆ. ಇಷ್ಟು ಸಾಮ್ಯವಿದ್ದರೂ ಕಾಳಾಮುಖರಲ್ಲಿ ಬ್ರಾಹ್ಮಣ ಕರ್ಮಗಳು ಆಚರಣೆಯಲ್ಲಿದ್ದಂತೆ ಶಾಸನಗಳಿಂದ ತಿಳಿದು

ಬರುತ್ತದೆ. ತಮಿಳು ಶಿವಸಿದ್ಧಾಂತ ಶೈವರಲ್ಲೂ ಶಿವಭಕ್ತಿ ಮುಂದಾದಾಗ್ಯೆ ಬ್ರಾಹ್ಮಣ್ಯವು ಹಿಂದಾಗಿಯಾದರೂ ಇತ್ತೆಂದು ಅವರ ಶರಣ ಕಥೆಗಳಿಂದ ತಿಳಿದುಬರುತ್ತದೆ. ಆದರೆ ಅವರಲ್ಲಿ ವರ್ಣಾಶ್ರಮವನ್ನು ತೆಗೆದುಹಾಕಲು ಉದ್ಯಮವಿತ್ತೆಂದು ಅರವತ್ತು ಮೂವರು ಪುರಾತನರ ಒಂದೆರಡು ಕಥೆಗಳಿಂದು ಗೊತ್ತಾಗುತ್ತದೆ. ಅರವತ್ತುಮೂವರು ಪುರಾತನರಲ್ಲಿ ನಮಿನಂದಿಯಡಿಗಳ್ನಾಯನಾರನೆಂಬವನು ತಾನು ಜಾತಿಯಲ್ಲಿ ಬ್ರಾಹ್ಮಣನಾಗಿದ್ದು, ಶಿವಭಕ್ತರಲ್ಲಿ ಜಾತಿಯನ್ನು ಎಣಿಸಿದ್ದರಿಂದ, ಶಿವನು ಸ್ವಪ್ನದಲ್ಲಿ ಬಂದು ತಿರುವಾಲೂರಿನಲ್ಲಿರುವ ಶಿವಭಕ್ತರೆಲ್ಲರೂ ಶಿವಗಣಂಗಳೆಂದು ಹೇಳಲು ಶಿವಭಕ್ತರಲ್ಲಿ ಜಾತಿಭೇದವನ್ನು ಮಾಡಕೂಡದೆಂದು ನಿರ್ಧರಿಸಿದನು. ಆದರೆ ಕರ್ನಾಟಕದ ಕಾಳಾಮುಖರಲ್ಲಿ ತಮಿಳು ಶಿವಸಿದ್ಧಾಂತ ಶೈವರಿಗಿಂತಲೂ ಸ್ವಲ್ಪ ಹೆಚ್ಚಾಗಿ ಬ್ರಾಹ್ಮಣ ಕರ್ಮವು ವ್ಯವಹರಣೆಯಲ್ಲಿತ್ತೆಂದು ಅವರ ಶಾಸನಗಳಿಂದ ತಿಳಿದುಬರುತ್ತದೆ. ಏತಕ್ಕಂದರೆ ಕಾಳಾಮುಖರು ಶಾಸನಗಳಲ್ಲಿ "ಸ್ಮೃತ್ಯಾರ್ಥಾಳಂಕಾರ ಸುವಾಕ್ಯಂ", "ಸ್ನಾನ ಜಪಹೋಮನಿಯಮ ಧ್ಯಾನಾನುಷ್ಠಾನ ಶೀಲತತ್ಪರನಂ'' ಎಂಬ ವೊದಲಾದ ವರ್ಣನೆಗಳಿರುತ್ತವೆ. ಈ ಕಾರಣದಿಂದಲೇ ಕಾಳಾಮುಖರಿಗಿಂತಲೂ ತಮಿಳು ಶಿವಸಿದ್ಧಾಂತಿ ಶರಣರ ಹೆಸರುಗಳನ್ನೇ ಬಸವೇಶ್ವರನೂ, ಬಸವ ನಿಂದೀಚಿನವರೂ ತಮ್ಮ ವಚನ ಮತ್ತು ಗ್ರಂಥಗಳಲ್ಲಿ ಎತ್ತಿರುವಂತೆ ತೋರುತ್ತದೆ.

ಈ ಮೇಲ್ಕಂಡ ಶೈವಗಳಿಗಿಂತಲೂ ಬಸವೇಶನು ಹೆಚ್ಚಿನ ಕೆಲಸ ಮಾಡಿದ್ದೇನೆಂದರೆ:— ಶಿವಲಿಂಗವನ್ನು ದೇಹದಲ್ಲಿ ಧರಿಸುವದು, ಹಾಗೆ ಶಿವಲಿಂಗವನ್ನು ಧರಿಸಿದವರೆಲ್ಲರೂ ಕುಲಭೇದವಿಲ್ಲದೆ ಒಂದೇ ಸಮಾನರೆಂದು ಗಣಿಸುವದು, ಯಾವ ಉದ್ಯೋಗವನ್ನು ಮಾಡಿದರೂ ಅವರಲ್ಲಿ ಉಚ್ಚನೀಚ ಭಾವವನ್ನೆಣಿಸಕೂಡದೆಂಬುದು, ಲಿಂಗ ಧರಿಸಿದವರು ಮದ್ಯಪಾನ ಮಾಂಸಾಹಾರ ಮಾಡಕೂಡದೆಂಬುದು, ಪುರುಷರಂತೆ ಸ್ತ್ರೀಯರಿಗೂ ಲಿಂಗಧಾರಣ ಪೂರ್ವಕ ಸಮಾನ ಧರ್ಮಾಧಿಕಾರವನ್ನು ಕೊಟ್ಟಿರುವದು, ಇವುಗಳ ಆಚರಣೆಗೆ ಅಷ್ಟಾವರಣ ಪಂಚಾಚಾರ ಷಟ್ಸ್ಥಲಗಳೆಂಬ ತತ್ವಗಳನ್ನು ನಿರ್ಮಿಸಿರುವದು, ಲಿಂಗವುಳ್ಳವರು ಭಕ್ತರೆಂತಲೂ ಲಿಂಗವಿಲ್ಲದವರು ಭವಿಗಳೆಂತಲೂ ಭಾವಿಸಬೇಕೆಂದು ಗೊತ್ತುಮಾಡಿರುವದು ಇವುಗಳನ್ನು ಕಲ್ಪಿಸಿ ವೀರಶೈವ ಅಥವಾ ಲಿಂಗಾಯತವೆಂಬ ಹೊಸ ಸಮಾಜವನ್ನು ನಿರ್ಮಾಣ ಮಾಡಿರುತ್ತಾನೆ.

ಮಾಂಸಾಹಾರ ನಿರೋಧವೂ, ಜಾತಿಭೇದ ನಿರಾಕರಣವೂ ಲಕುಲೀಶ ಶೈವರಲ್ಲಿ ಗುರುಸ್ಥಾನಕ್ಕೆ ಬಂದವರಿಗೆ ಮಾತ್ರ ಯೋಜಿಸಲ್ಪಟ್ಟಿದ್ದವೆಂದು ಕೆಲವು ಚಾರಿತ್ರಕಾರರಿಂದ ತಿಳಿದುಬರುತ್ತದೆ. Mr. C. Vaidya M. A , LL. B , ಎಂಬವರು ತಮ್ಮ "History of Medieval Hindu India" ಎಂಬ ಪುಸ್ತಕದಲ್ಲಿ ಹೀಗೆ ಬರೆದಿರುತ್ತಾರೆಃ—

> " We do not know whether these (Saiva) ascetics were Brahmins only or belonged to all castes, or whether the Lakulisa Agama accepted the sanctity of Vedic scriptures with animal slaughter and whether prohibited animal food............ It is very probable that the different Saiva sects allowed all castes to become ascetics of their order and for these at least, they prohibited animal food".

ಇದರಿಂದ ಬಸವೇಶ್ವರನ ತತ್ವಗಳಲ್ಲಿ ಒಂದೆರಡು ಮಾತ್ರ ಲಕುಲೀಶರಲ್ಲಿ ಪ್ರಾರಂಭಿಸಲ್ಪಡಲು ಯತ್ನ ನಡೆದಿತ್ತೆಂದು ಊಹೆಯಾಗುತ್ತದೆ. ಇದು ಹೇಗೇ ಇರಲಿ, ಹಿಂದಿನ ಶೈವದಲ್ಲಿದ್ದ ಶಿವಾರ್ಚನೆ, ಭಕ್ತಮಾಹೇಶ್ವರ ವಿಚಾರ, ಮಠಸ್ಥಾಪನೆ, ಶಿವಾಗಮನಿಷ್ಠೆ ಮೊದಲಾದವುಗಳನ್ನು ಮುಂದುವರಿಸಿಕೊಂಡು ಲಿಂಗಧಾರಣ, ಅಷ್ಟಾವರಣ ಪಂಚಾಚಾರ ಷಟ್ಸ್ಥಲ ತತ್ವ ನಿರ್ಧಾರಣ ಮೊದಲಾದವುಗಳನ್ನು ಮೇಲೆ ಹೇಳಿದ ರೀತಿ ಏರ್ಪಡಿಸಿ ಹೊಸ ಸಮಾಜವನ್ನು ಉಂಟುಮಾಡಿದನಾದ ಕಾರಣ ಬಸವೇಶ್ವರನು ಶೈವಮತೋದ್ಧಾರಕನು, ವೀರಶೈವ ಅಥವಾ ಲಿಂಗಾಯತ ಮತಸ್ಥಾಪಕನು ಆಗಿರುತ್ತಾನೆಂದು ನಾನು ಹೇಳುತ್ತೇನೆ.

ಈ ವಿಚಾರದಲ್ಲಿ Vincent Smith ಸಾಹೇಬರು ತಮ್ಮ "Early History of India" ಎಂಬ ಉದ್ಗ್ರಂಥದಲ್ಲಿ ಬಸವೇಶ್ವರನು ಶೈವವನ್ನು ಪುನರುಜ್ಜೀವನಗೊಳಿಸುವದರಲ್ಲಿ, ಹೊಸ ವೀರಶೈವ ಅಥವಾ ಲಿಂಗಾಯತ ಮತವನ್ನು ಸ್ಥಾಪಿಸಿದನೆಂದು ಬರೆದಿರುತ್ತಾರೆ. ಹೇಗೆಂದರೆಃ

> " The brief reign of Bijjala, the usurping rebel, which terminated by abdication in A. D. 1167, was marked by a religious revolution effected by a re-

-vival of the cult of Siva and the foundation of a new sect, the Virasiava or the Lingayets, which is a Power to this day..................".

# ಲಿಂಗ.

(ಲೇಖಕರು:— ಶ್ರೀ. ಬ್ಯಾಳಿ ಕಲ್ಯಾಣಪ್ಪನವರು ಸಿದ್ಧೇಶ್ವರ ಹೈಸ್ಕೂಲ ವಿಜಾಪುರ.)

ವಾ. ಷ. ಕರಿಯ ವರ್ಣದ ಭೃಂಗ ಕಮಲಾಸನದೊಳಿರ್ದು ।
ಹರಿವೆರಡು ಭೃಂಗಿಗಳ ನೆರವಿನೊಳು ನೆರೆ ಜಗ್ಗಿ
ಪಿರಿದಾದ ತನ್ನೊಡಲೊಳಿರಿಸಿ ಪರಮಾನಂದ ಸಾಗರದೊಳಿಂಗಿಸುವದೈ ।
ಪರಶಿವನ ವರಭಕ್ತರಾಭೃಂಗ ಸಂಗದಿಂ ।
ಪೆರೆತೆಸೆವ ಪರಾಕಾಶವಂ ಕಂಡು ಪರನಾದ-
ಪರವಶೆಯೊಳಿರ್ದರೆಂಬಚ್ಚರಿಯ ತಿಳಿಯದಲೆ ಮೂಢಮತಿ ನಾಂ ಕೆಟ್ಟೆನು ॥

ಅಷ್ಟಾವರಣಗಳಲ್ಲಿ ಲಿಂಗವು ಎರಡನೆಯದು. ಲಿಂಗವೆಂದರೆ ಹರಿದಾಡುವ ಮನಸ್ಸನ್ನು ಒತ್ತಟ್ಟಿಗೆ ಏಕೀಕರಿಸಿ ಚಿದಾನಂದವನ್ನು ಪಡೆಯಲಿಕ್ಕೆ ಅನುಕೂಲವಾದ ಒಂದು ಸಾಧನವು. ಅದು ನೇರಿಲ ಗುಳಿಗೆಯಂತೆಯೂ, ಇಂದ್ರನೀಲ ಮಣಿಯಂತೆಯೂ, ಭೃಂಗದಂತೆಯೂ, ನೇತ್ರದೊಳಗಿನ ಕನೀನಿಕದಂತೆಯೂ, ನೀಲವರ್ಣದ ತಾರೆಯಂತೆಯೂ ಕಾಂತಿಯುಕ್ತವಾಗಿ ಹೊಳೆಯುವದು. ಅದರ ಆಕಾರ ಪ್ರಮಾಣವು ಎರಡೂ ಕಣ್ಣುಗಳಷ್ಟಾಗುವದು. ಇದನ್ನೇ ಸಾಕ್ಷಾತ್ ಪರಮೇಶ್ವರನ ಸ್ವರೂಪವೆಂದು ವೀರಶೈವರು ಭಾವಿಸುವರು. ಅದರ ಪೀಠವು ಸ್ಥಾವರ ಲಿಂಗಾಕೃತಿಯದಿದ್ದು ಅದರ ಮೇಲೆ ಲಕ ಲಕ ಹೊಳೆಯುವ ಕರಿಕಾಂತಿಯನ್ನು ಕೂಡ್ರಿಸಿರುತ್ತಾರೆ. ಅನೇಕರು ಪರಮಾತ್ಮನ ಸ್ವರೂಪವನ್ನು ನಾನಾ ವಿಧವಾಗಿ ವರ್ಣಿಸಿರುವರು. ತ್ರಿಶೂಲಿಯೆಂದೂ ನಾಗಭೂಷಣನೆಂದೂ ರುಂಡಮಾಲಾಧಾರಿಯೆಂದೂ ಭಿನ್ನ ಭಿನ್ನ ಜನರು ಪರಮಾತ್ಮನನ್ನು ರೂಪಗೊಳಿಸಿರುವರು. ಆದರೆ ವೀರಶೈವರು ಮಾತ್ರ ಗೋಲಾಕಾರದ ಸುಮಾರು

ೀ ಘನ ಇಂಚಿನ ನೀಲವರ್ಣದ ಕಾಂತಿಮಯವಾದ ಲಿಂಗವನ್ನು ಪೂಜಿಸು ವವರಾಗಿರುವರು. ವೀರಶೈವರು 'ಶಿವ ಶಿವಾ' ಎಂದು ನುಡಿಯುವದು ಈ ಲಿಂಗಕ್ಕಲ್ಲದೆ ಬೇರಾವ ಶಿವನಿಗೂ ಅಲ್ಲ. ಪಂಚಮುಖನೂ, ಪಾರ್ವತೀ ಧವನೂ, ಗಂಗಾಧರನೂ, ಗುಹಗಜಾಸ್ಯರ ತಂದೆಯೂ, ಕೃತ್ತಿವಾಸನೂ ವೀರಶೈವರು ಭಾವಿಸಿರುವ ಶಿವನಲ್ಲ. ಸ್ಥಾವರಲಿಂಗವನ್ನೂ ವೀರಶೈವರು ಮನ್ನಿಸುವದಿಲ್ಲ ಅವರಿಗೆ ಇಷ್ಟಲಿಂಗವೇ ಶಿವನು.

ವೀರಶೈವರು ಸಾಕಾರ ನಿರಾಕಾರ ಪೂಜೆಗಳೆರಡನ್ನೂ ಮನ್ನಿಸು ವರು. ಇಷ್ಟಲಿಂಗವೇ ಸಾಕಾರಪೂಜೆಯ ಚಿಹ್ನವು. ಭಾವಲಿಂಗವೇ ನಿರಾಕಾರಪೂಜೆಯ ಹೆಗ್ಗುರುತು. ಲಿಂಗವೆಂದರೆ ಮನಸ್ಸನ್ನೇಕೀಕರಿ ಸುವ ಸಾಧನವೆಂದು ಹೇಳಿದೆಯಷ್ಟೇ. ಆ ಮನಸ್ಸನ್ನು ಚಂಚಲಗೊಳಿ ಸಲಿಕ್ಕೆ ಕಣ್ಣುಗಳೇ ಮುಖ್ಯ ಕಾರಣಗಳು. ಆ ನೇತ್ರಗಳು ಅಲ್ಲದ ವಿಷ ಯಗಳ ಕಡೆಗೆ ಹರಿದಾಡಿದರೆ ಮನಸ್ಸು ಶೀಘ್ರವೇ ಕೆಟ್ಟು ಹೋಗು ವದು. ಅಂತೆಯೇ ಆ ನೇತ್ರಗಳನ್ನು ಎಳೆದುಕೊಳ್ಳಲಿಕ್ಕೆ ಅದರ ಸಜಾ ತೀಯ ಅಥವಾ ಅದೇ ವರ್ಣದ ವಿಜಾತೀಯ ವಸ್ತುವು ಬೇಕಾಗುತ್ತದೆ. ಯಾಕಂದರೆ ಒಂದು ವಸ್ತುವು ತನ್ನ ಜಾತಿ ವರ್ಣ ಪ್ರೇಮದ ಬೇರೊಂ ದು ವಸ್ತುವನ್ನು ಆಕರ್ಷಿಸುತ್ತದೆಂದು ಶಾಸ್ತ್ರದ ನಿಯಮವುಂಟು. ನೇತ್ರವೂ ಲಿಂಗವೂ ಒಂದೇ ವರ್ಣದವಾಗಿರುವದರಿಂದ ಲಿಂಗವು ನೇತ್ರಗಳನ್ನು ಅತ್ತಿತ್ತ ಚಲಿಸದಂತೆ ತನ್ನೆಡೆಗೆಳೆದುಕೊಳ್ಳಲು ಒಳ್ಳೆಯ ಸಾಧನವಾಗಿದೆ. ಶ್ರೀ ಸ್ವಾಮಿ ವಿವೇಕಾನಂದರವರು ತಮ್ಮ ವ್ಯಾಖ್ಯಾನದಲ್ಲಿ ಮನೋನಿಗ್ರಹ ವನ್ನು ಹೇಗೆ ಮಾಡಬೇಕೆಂಬ ವಿಷಯದಲ್ಲಿ ಮೊದಲು ಬಿಳಿಗೋ ಡೆಯ ಮೇಲೆ ಕರೆ ಬಣ್ಣದ ಒಂದು ವರ್ತುಲವನ್ನು ಬರೆದು ಅದನ್ನೇ ಏಕಾಗ್ರಚಿತ್ತದಿಂದ ನಿರೀಕ್ಷಿಸಲುಪಕ್ರಮಿಸಿದರೆ ನಮ್ಮ ಮನಸ್ಸು ಸುಸ್ಥಿರ ವಾಗುವದು. ಆ ಮೇಲೆ ನಮ್ಮ ಇಷ್ಟವಾದ ಗುರಿಯು ನಮಗೆ ಸಾಧಿ ಸುವದು ಎಂದು ಹೇಳಿರುವರು. ನಮ್ಮ ಪೂರ್ವಜರು ಶ್ರೀ ವಿವೇಕಾ ನಂದರ ಈ ತತ್ವವನ್ನು ಎಷ್ಟೋ ವರ್ಷಗಳ ಪೂರ್ವದಲ್ಲಿಯೇ ಅರಿತು ಆ ಚರಿಸುತ್ತ ಬಂದಿರುವರು.

ಲಿಂಗವು ಅಳತೆ ಪ್ರಮಾಣಗಳಿಂದ ಮರ್ಯಾದಿಸಲ್ಪಡಬಹುದೇ ಎಂದು ಕೆಲವರು ಶಂಕಿಸಬಹುದು. ಪರಮಾತ್ಮನು ಅಣೋರಣೀಯಾನ್ ಮಹತೋ ಮಹೀಯಾನ್ ಇರುತ್ತಿರಲು ಅತನನ್ನು ಇಷ್ಟೇ ಆಕಾರ

ಪ್ರಮಾಣವುಳ್ಳ ಲಿಂಗವೆಂದು ಭಾವಿಸುವದನುಚಿತವಲ್ಲವೇ ಎಂದು ಅವರು ವಾದಿಸುವರು. ಶಿವನನ್ನು ಮನುಷ್ಯರೂಪದಿಂದ ಭಾವಿಸದೆ ಏನೂ ಅರ್ಥವನ್ನು ಸೂಚಿಸದ ಗೋಲಾಕಾರದ ಶಿಲೆಯೆಂದು ತಿಳಿಯುವದೊಳಿತೇ ಎಂದು ಪ್ರಶ್ನೆ ಮಾಡುವರು. ಆದರೆ ಪರಮಾತ್ಮನು ಅಣೋರಣೀಯಾನ್ ಮಹತೋ ಮಹೀಯಾನ್ ಎಂದು ವರ್ಣಿಸಲ್ಪಟ್ಟಿರುವದು ವೇದದಲ್ಲಿ ಕಂಡುಬರುತ್ತದೆ. ಪ್ರತಿ ಉಪನಿಷತ್ತುಗಳಲ್ಲಿ ಪರಮಾತ್ಮನು ಸಾಸಿವೆಯ ಕಾಳಿನಷ್ಟು, ಕಡಲಿಯಕಾಳಿನಷ್ಟು, ಅಂಗುಷ್ಠದಷ್ಟು ಇರುವನೆಂದು ಪ್ರತಿಪಾದಿಸಿದೆ. ಅದೇ ಮೇರೆಗೆ ನಮ್ಮ ಪೂರ್ವಜರು ತಮ್ಮ ಸಾಧನೆಗೋಸ್ಕರ ಪರಮಾತ್ಮನು ಇಷ್ಟಲಿಂಗದ ಆಕಾರದಷ್ಟಿರುವನೆಂದು ಹೇಳುವದರಿಂದ ಯಾವ ದೋಷವೂ ಬರಲಾರದು. ಪರಮಾತ್ಮನಿಗೆ ಇಂಥ ರೂಪವೇ ಇರುವದೆಂದು ಹೇಳಲು ಯಾರಿಗೂ ಸಾಧ್ಯವಿಲ್ಲ. ಹಾಗೆ ಮಾಡಿದರೆ ನಾವು ಪರಮಾತ್ಮನ ಆಕಾರಕ್ಕೆ ಸೀಮೆಯನ್ನು ಹಾಕಿದಂತಾಗುತ್ತದೆ. ಆದುದರಿಂದ ಋಷಿಗಳು ಪರಮಾತ್ಮನ ಸ್ವರೂಪವನ್ನು ಭಿನ್ನಭಿನ್ನವಾಗಿ ತೋರಿಸಿರುವರು. ಮತ್ಸ್ಯ, ಕೂರ್ಮ, ವರಾಹ, ನೃಸಿಂಹ, ಉಗ್ರ, ಶಾಂತ ಮೊದಲಾದ ರೂಪಗಳನ್ನು ತಮ್ಮ ಭಾವನೆಯ ಮೇರೆಗೆ ಪರಮಾತ್ಮನ ಮೇಲೆ ಆರೋಪಮಾಡಿ ಆರಾಧಿಸಿರುವರು. ಯಾವ ಭಾವನೆಯನ್ನು ತೋರ್ಪಡಿಸದಿದ್ದರೂ ಎಲ್ಲ ತರದ ಭಾವನೆಗಳನ್ನು ಕಲ್ಪಿಸಿಕೊಳ್ಳಲು ಸಾಧನೀಭೂತವಾದ ಇಷ್ಟಲಿಂಗವನ್ನು ಆರಾಧಿಸುವದರಿಂದಾಗುವ ಹಾನಿಯೇನು? ಪರಮಾತ್ಮನ ನೆಲೆಯು ಯಾರಿಗೂ ನಿಲುಕದ್ದರಿಂದ ಅನೇಕರು ಅನೇಕ ವಿಧವಾಗಿ ಆತನ ರೂಪಗಳನ್ನು ಕಲ್ಪಿಸಿರುವರಷ್ಟೇ. ಹೀಗಿರಲು ವೀರಶೈವರು ಇಷ್ಟಲಿಂಗವೇ ದೇವರೆಂದು ತಿಳಿಯುವದರಿಂದ ಯಾವ ಬಾಧಕವೂ ಬಾರದು. ಪರಮಾತ್ಮನು ಸರ್ವಾಂತರ್ಯಾಮಿಯು. ಆತನು ಕಲ್ಲು ಮಣ್ಣುಗಳಲ್ಲಿಯೂ ಉಂಟು; ಸಸ್ಯಾದಿಗಳಲ್ಲಿಯೂ ಉಂಟು; ಪಶುಪಕ್ಷ್ಯಾದಿಗಳಲ್ಲಿಯೂ ಉಂಟು; ಸುರನರೋರಗ ಯಕ್ಷ ಗಂಧರ್ವ ಕಿನ್ನರ ಕಿಂಪುರುಷರಲ್ಲಿಯೂ ಉಂಟು. ಸ್ಥೂಲದಲ್ಲಿಯೂ ಇದ್ದಾನೆ; ಸೂಕ್ಷ್ಮದಲ್ಲಿಯೂ ಇದ್ದಾನೆ; ಕಾಠಿಣ್ಯದಲ್ಲಿಯೂ ಉಂಟು. ಸಚೇತನ ಅಚೇತನ ವಸ್ತುಗಳಲ್ಲಿಯೂ ಇರುವನು. ಸ್ಥೂಲದಿಂದಲೇ ಸೂಕ್ಷ್ಮವು ಜನಿಸುವದರಿಂದ ಸ್ಥೂಲರೂಪವಾದ ಇಷ್ಟಲಿಂಗವೇ ಮೂಲ ಸ್ವರೂಪವಾದ ಪರಮಾತ್ಮನೆನ್ನುವದು ಹೇಗೆ ಅನು

ಚಿತವಾದೀತು? ದೇವರು ಮನುಷ್ಯನ ಆಕಾರದವನಿದ್ದರೆ ಮನುಷ್ಯನಂತೆಯೇ ಅವನು ನಶ್ವರವಾಗಬಹುದಲ್ಲವೇ ಎಂಬ ಬೇರೊಂದು ಕಲ್ಪನೆಗೆ ಅವಕಾಶ ಕೊಟ್ಟಂತಾಗುತ್ತದೆ. ಯಾವ ಆಕಾರವೂ ಇಲ್ಲದಿದ್ದರೆ ಅಂಥ ಅವಕಾಶಕ್ಕೆ ಕಲ್ಪನೆಯೇ ಇಲ್ಲವಲ್ಲ? ಇಂಥ ಕಲ್ಪನಾತೀತವಾದ ಲಿಂಗವು ಸಕಲ ಚರಾಚರ ವಸ್ತುಗಳನ್ನು ತನ್ನ ಹೃದಯದಲ್ಲಿರಿಸಿಕೊಂಡು ರಕ್ಷಿಸುತ್ತಿರುವದೆಂದು ವೀರಶೈವರು ತಿಳಿಯುತ್ತಾರೆ. ಅಲ್ಪಾಕಾರದ ಲಿಂಗವು ಅಪಾರವಾದ ವಿಶ್ವವನ್ನೇ ತನ್ನೊಡಲೊಳಗಿರಿಸಿಕೊಳ್ಳುವದು ಹೇಗೆ ಶಕ್ಯವು? ಸಣ್ಣ ಕನ್ನಡಿಯಲ್ಲಿ ದೊಡ್ಡದೊಂದು ಆನೆಯ ಪ್ರತಿಬಿಂಬವು ಕಾಣುವದಿಲ್ಲವೇ? ಅದೇ ಮೇರೆಗೆ ಲಿಂಗದಲ್ಲಿ ಇಡೀ ವಿಶ್ವವು ಪ್ರತಿಬಿಂಬರೂಪದಲ್ಲಿ ತೋರುವದು. ನಿಜವಾಗಿ ಲಿಂಗವು ಶಿಲೆಯೇ ಆಹುದು. ಆದರೆ ನಮ್ಮಲ್ಲಿರುವಂಥ ಅತಿ ಪೂಜ್ಯಭಾವನೆಯಿಂದ ನಾವು ಅದರಲ್ಲಿ ಅಂಥ ಶಕ್ತಿಯನ್ನು ಕಲ್ಪಿಸಿಕೊಳ್ಳುತ್ತೇವೆ. ಆದುದರಿಂದ ಲಿಂಗವೆಂದರೆ ಸಾಕ್ಷಾತ್ ಪರಮಾತ್ಮನೆಂತಲೇ ಭಾವಿಸಬೇಕು.

ಲಿಂಗವನ್ನು ಎಲ್ಲಿ ಧರಿಸಬೇಕು? ಸ್ಥೂಲ ತನುವಿನ ಮೇಲೆ ಇಷ್ಟಲಿಂಗವನ್ನು ಧರಿಸಬೇಕೆಂದು ಸಾಮಾನ್ಯವಾಗಿ ಹೇಳಬಹುದು. ಈ ದೇಹದ ಮೇಲೆ ಎಲ್ಲಿ ಬೇಕಾದಲ್ಲಿ ಲಿಂಗವನ್ನು ಧರಿಸಿದರೆ ನಡೆಯುವದೇ ಹೇಗೆ? ಈ ನಮ್ಮ ದೇಹದಲ್ಲಿಯೂ ಕೆಲವು ಪವಿತ್ರವಾದ ಸ್ಥಾನಗಳಿರುತ್ತವೆ. ಅವು ಯಾವವೆಂದರೆ ತಲೆ, ಕೊರಳು, ಎದೆ, ತೋಳು. ಆದುದರಿಂದ ಈ ಪವಿತ್ರ ಸ್ಥಾನಗಳಲ್ಲಿಯೇ ಲಿಂಗಧಾರಣಮಾಡಬೇಕು. 'ಉತ್ತಮಾಂಗೇ ಗಲೇ ವಾಽಪಿ ಕುಕ್ಷೌ ವಕ್ಷಸ್ಥಲೇಽಪಿ ವಾ। ತಥಾ ಹಸ್ತತಲೇ ವಾಽಪಿ ಇಷ್ಟಲಿಂಗಂತು ಧಾರಯೇತ್" ಎಂದು ವೀರಶೈವ ಮತಗ್ರಂಥಗಳಲ್ಲಿ ಹೇಳಿದೆ. ಅದೇ ಪ್ರಕಾರ ಕೆಲವರು ಲಿಂಗವನ್ನು ತಮ್ಮ ಮಸ್ತಕದಲ್ಲಿ ಧರಿಸುವರು; ಕೆಲವರು ಕಂಠದಲ್ಲಿ ಧಾರಣಮಾಡುವರು; ಕೆಲವರು ವಕ್ಷಸ್ಥಳದ ಮೇಲೆ ಧರಿಸಿಕೊಳ್ಳುವರು; ಕೆಲವರು ರಟ್ಟೆಗೆ ಕಟ್ಟಿಕೊಳ್ಳುವರು. ಹೀಗೆ ಸ್ಥಳಗಳಲ್ಲಿ ಕಟ್ಟುವ ಸ್ಥಾನಗಳಿವೆ.

ಲಿಂಗದ ಮಹತ್ವವನ್ನು ಯುಕ್ತಾಯುಕ್ತವಾಗಿ ತಿಳುಹಿಸಲು ಸಮರ್ಥರಾದ ಗುರುಗಳ ಅಭಾವವು ನಮ್ಮ ಸಮಾಜದಲ್ಲಿ ಹೆಚ್ಚಿದೆ. ಅಂಥ ಗುರುಗಳು ಪ್ರಶ್ನಮಾಡಿದವರಿಗೆ ಅನಾಚಾರಿಗಳೂ ಧರ್ಮಭ್ರಷ್ಟರೂ ಎಂದು ಜರಿದು ತಮ್ಮ ಅಜ್ಞಾನವನ್ನು ಮುಚ್ಚಿಕೊಂಡು ಗೌರವವನ್ನು

ಕಾಪಾಡಿಕೊಳ್ಳುತ್ತಲಿದ್ದಾರೆ. ವ್ಯಕ್ತಿಸ್ವಾತಂತ್ರ್ಯದ ಮಬ್ಬಿನಿಂದ ಕೆಲವು ಸುಶಿಕ್ಷಿತರೆನಿಸಿಕೊಳ್ಳುವವರೂ ಸಹ ಧರ್ಮದ ಕಟ್ಟಳೆಯನ್ನು ಮೀರಿನಡೆಯಲಿಕ್ಕೆ ಹೇಸದವರಾಗಿದ್ದಾರೆ. ರೂಢಾಚಾರದ ಅಂಧಶ್ರದ್ಧೆಯಿಂದ ಹೇಳಲಸದಳವಾದ ಅನಾಹುತಗಳೂ ನಡೆದಿವೆ. ಇಂಥ ಸಮಯದೊಳಗೆ ಸಮಾಜದಲ್ಲಿ ಒಳ್ಳೆ ಕ್ರಾಂತಿಯಾದ ಹೊರತು ಸುಧಾರಣೆಯು ನೆಲೆಗೊಳ್ಳದು.

ಕೆಲವು ಅಜ್ಞಾನಿಗಳು ಲಿಂಗವು ಕಳೆಯಿತೆಂದು ಕೆರೆ ಬಾವಿ ಬಿದ್ದು ಸತ್ತುಹೋಗುವರು. ಲಿಂಗವು ಬಿದ್ದ ಬಳಿಕ ಅಂಗವು ಉಳಿಯಬಲ್ಲುದೇ? ಲಿಂಗದಲ್ಲಿ ಅಂಥ ನಿಷ್ಠೆಯಿದ್ದವರಿಗೆ ಲಿಂಗವು ಹೋದಾಕ್ಷಣವೇ ಅದರೊಡನೆಯೇ ಅವರ ಜೀವವೂ ಹೋಗಿರುತ್ತದೆ. ಆದರೆ ನಿಷ್ಠೆಯಿಲ್ಲದ ಭ್ರಷ್ಟರು ತಮ್ಮ ಅಮೌಲ್ಯವಾದ ಜೀವವನ್ನು ತಾವು ಕಳೆದುಕೊಂಡು ಆತ್ಮಹತ್ಯದೋಷಕ್ಕೆ ಗುರಿಯಾಗುವರು. ಲಿಂಗ ಹೋದರೆ ಮತ್ತೊಂದು ಲಿಂಗವನ್ನು ಕಟ್ಟಿಕೊಳ್ಳಲಿಕ್ಕೆ ಬರುತ್ತದೆಂಬ ಹೊಸ ಶಾಸ್ತ್ರವನ್ನು ಕಲ್ಪಿಸಿ ಹತ್ತೆಂಟುಸಾರೆ ವ್ಯೈಸೊಕ್ಕಿನಿಂದ ಲಿಂಗವನ್ನು ಕಳೆದುಕೊಂಡು ಹತ್ತೆಂಟುಸಾರೆ ಲಿಂಗಧಾರಣಹೊಂದುವ ಪುಣ್ಯಾತ್ಮರೂ ಉದಯವಾಗಿದ್ದಾರೆ. ಆದರೆ ಸ್ವಲ್ಪ ವಿಚಾರಮಾಡಿ ಹೇಳಬೇಕಾದರೆ ಲಿಂಗವು ಹೋದ ಕೂಡಲೆ ಪ್ರಾಣವು ತಾನಾಗಿಯೇ ಹೋದವರು ಮಹಾ ಮಹಿಮರು. ಪ್ರಾಣ ಕಳೆದುಕೊಂಡವರು ಕಡು ಮೂರ್ಖರು. ಪ್ರಾಣವನ್ನು ಕಳೆದುಕೊಂಡು ಪಶ್ಚಾತ್ತಾಪದಿಂದ ಪುನಃ ಮತ್ತೊಂದು ಲಿಂಗವನ್ನು ಧರಿಸಿ ಪೂಜಿಸುವವರು ಸಾಮಾನ್ಯರು. ಪ್ರಾಣವನ್ನುಳಿಸಿಕೊಂಡು ಯಾವ ತರಹದ ಪ್ರಾಯಶ್ಚಿತ್ತ ಪಶ್ಚಾತ್ತಾಪಗಳಿಲ್ಲದೆ ನಗುತ್ತ ಕಲೆಯುತ್ತ ಹುಡುಗಾಟಿಕೆಯಿಂದ ಪುನಃ ಲಿಂಗಧಾರಣ ಹೊಂದುವವರು ನಾಚಿಕೆಗೇಡಿಗಳು.

ಲಿಂಗವನ್ನು ಯಾರು ಧರಿಸಬೇಕು? ವೀರಶೈವರಾದವರೆಲ್ಲರೂ ಲಿಂಗವನ್ನು ಧರಿಸಬೇಕೆಂದು ಬೇರೆ ಹೇಳಬೇಕಾಗಿಲ್ಲ. ಆದರೆ ಉಳಿದವರಿಗೆ ಲಿಂಗ ಕಟ್ಟಿ ವೀರಶೈವರನ್ನಾಗಿ ಮಾಡಲಿಕ್ಕೆ ಬರುತ್ತದೆಯೋ ಇಲ್ಲವೋ ಇಷ್ಟೇ ಪ್ರಶ್ನೆ. ತಮ್ಮಷ್ಟಕ್ಕೆ ತಾವೇ ಲಿಂಗವನ್ನು ಕಟ್ಟಿಕೊಂಡವರು ವೀರಶೈವರಾಗುವದಿಲ್ಲ. ವೀರಶೈವರಲ್ಲಿ ಬೇಕಾದವರು ಬೇಕಾದ ಹೆಸರನ್ನಿಟ್ಟುಕೊಂಡು ಕಂಡಕಂಡವರಿಗೆ ಲಿಂಗ ಕಟ್ಟಲಿಕ್ಕೆ ಬರುವದಿಲ್ಲ. ಅದರಿಂದ ಸಮಾಜದಲ್ಲಿ ಶಿಥಿಲತೆಯೂ ಧರ್ಮದಲ್ಲಿ ನಿಸ್ಸಾರತೆಯೂ ವ್ಯಕ್ತವಾಗುವವು. ಅನ್ಯ

ಮತೀಯರು ಒಳ್ಳೆ ಪವಿತ್ರರೂ ಯೋಗ್ಯರೂ ಆಗಿದ್ದು ಅಂಥವರು ವೀರ ಶೈವ ಮತವನ್ನು ಸ್ವೀಕರಿಸಲಿಚ್ಛಿಸಿದರೆ ಅಂಥವರಿಗೆ ಪೂರ್ವಾಚಾರಕ್ಕನು ಸರಿಸಿ ದೀಕ್ಷಾದಿ ಸಂಸ್ಕಾರಗಳಿಂದ ಶುದ್ಧಗೊಳಿಸಿ ದೈವದವರು ಬಳಿಕೆ ಮಾಡಲೊಪ್ಪಿದರೆ ಅಂಥವರಿಗೆ ಸಮಾಜದಿಂದ ನಿಯೋಜಿತರಾದ ಗುರು ಗಳು ಲಿಂಗಧಾರಣ ಮಾಡಿ ವೀರಶೈವ ಮತದಲ್ಲಿ ತೆಗೆದುಕೊಳ್ಳಬಹುದು. ಅನ್ಯಮತೀಯರನ್ನು ತಮ್ಮ ಮತದಲ್ಲಿ ಸೇರಿಸಿಕೊಳ್ಳುವ ಪರಿಪಾಟು ಬಹುಶಃ ಎಲ್ಲ ಧರ್ಮಗಳಲ್ಲಿಯೂ ಉಂಟು. ಅದಕ್ಕೆ ಸಂಸ್ಕಾರವೂ ಕ್ರಮಬದ್ಧ ತೆಯೂ ಉಂಟು. ಅದನ್ನು ಮೀರಿ ನಡೆದರೆ ಪ್ರಮಾದವಾಗಿ ಸಮಾಜ ದಲ್ಲಿ ದೊಡ್ಡ ಗೊಂದಲವೇ ಏಳಬಹುದು. ಶ್ರೀ ಚನ್ನಬಸವಣ್ಣನವರು ಲಿಂಗಧಾರಣವನ್ನು ಯಾರಿಗೆ ಮಾಡಬೇಕೆಂಬ ವಿಷಯದಲ್ಲಿ ಸಾಮಾನ್ಯ ವಾಗಿ ಹೇಳಿರುವದೇನಂದರೆಃ— "ಬ್ರಾಹ್ಮಣನನ್ನು ಒಂದು ವರ್ಷ ವೈಶ್ಯ ನನ್ನು ೩ ವರ್ಷ, ಕ್ಷತ್ರಿಯನನ್ನು ೬ ವರ್ಷ, ಶೂದ್ರನನ್ನು ೧೨ ವರ್ಷ, ನೋಡಿ ಪರೀಕ್ಷಿಸಿ ಲಿಂಗಧಾರಣ ಮಾಡಿ ವೀರಶೈವ ಮತದಲ್ಲಿ ತೆಗೆದು ಕೊಳ್ಳಬೇಕು." ವೀರಶೈವ ಧರ್ಮವು ಜಾತಿವಿಶಿಷ್ಟವಾಗಿರದೆ ಗುಣವಿಶಿಷ್ಟ ವಾದುದರಿಂದ ಗುಣಕರ್ಮಗಳಿಂದಲೇ ಅವನ ಯೋಗ್ಯತೆಯನ್ನು ನಿರ್ಣ ಯಿಸುವ ತತ್ವವು ಇದರಲ್ಲಿ ಅಡಕವಾಗಿದೆ.

ಲಿಂಗವು ಎಷ್ಟು ಪ್ರಕಾರವಾಗಿದೆ. ? ಲಿಂಗವು ಇಷ್ಟ, ಪ್ರಾಣ, ಭಾವಲಿಂಗಗಳೆಂದು ತ್ರಿವಿಧವಾಗಿದೆ. ಇಷ್ಟಲಿಂಗವನ್ನು ದೃಶ್ಯವಾದ ಈ ಸ್ಥೂಲತನುವಿನ ಮೇಲೆ ಧರಿಸುತ್ತಾರೆ. ಅದೃಶ್ಯವಾದ ಪ್ರಾಣ ಭಾವ ಲಿಂಗಗಳನ್ನು ಅದೃಶ್ಯವಾದ ಸೂಕ್ಷ್ಮ ಕಾರಣ ಶರೀರಗಳ ಮೇಲೆ ಧರಿಸು ವರು. ಮನುಷ್ಯನಿಗೆ ಸ್ಥೂಲ ಸೂಕ್ಷ್ಮ ಕಾರಣಗಳೆಂದು ಮೂರು ಶರೀರ ಗಳಿರುತ್ತವೆ. ಸ್ಥೂಲ ಶರೀರವೆಂದರೆ ಹೊರಗೆ ಸ್ಪಷ್ಟವಾಗಿ ಕಾಣುವ ಪಂಚಭೂತಾತ್ಮಕವಾದ ದೇಹವು. ಇದನ್ನು ಪವಿತ್ರಗೊಳಿಸಲಿಕ್ಕೆ ಇಷ್ಟ ಲಿಂಗವನ್ನು ಧರಿಸುತ್ತಾರೆ. ಸೂಕ್ಷ್ಮ ಶರೀರವೆಂದರೆ ಮನಸ್ಸು. ಆ ಮನ ಸ್ಸಿನಲ್ಲಿ ಪ್ರಾಣವನ್ನಳವಡಿಸುವದೇ ಪ್ರಾಣಲಿಂಗಧಾರಣೆಯು. ಕಾರಣಶರೀ ರವೆಂದರೆ ಭಾವವು. ಭಾವದಲ್ಲಿ ಭಾವಲಿಂಗವನ್ನು ಧರಿಸುವದೆಂದರೆ ಭಾವದಲ್ಲಿ ಸದಾ ಚಿದಾನಂದವನ್ನನುಭವಿಸುತ್ತಿರುವದು. ಇಷ್ಟ ಪ್ರಾಣ ಭಾವಲಿಂಗಗಳ ಪೂಜೆಯೆಂದರೆ ತನುಮನ ಭಾವಗಳನ್ನು ಪರಿಶುದ್ಧವಾ ಗಿಯೂ, ಪವಿತ್ರವಾಗಿಯೂ ಇಟ್ಟುಕೊಂಡು ಆ ಪರವಸ್ತುವಿನಲ್ಲಿ ಲೀನ

ನಾಗಿ ಬಿಡುವದು. ಇಷ್ಟರಿಂದಲೇ ಪ್ರಾಣ ಭಾವಗಳುದಯಿಸಿರುವದರಿಂದ ಬರೇ ಪ್ರಾಣಭಾವಲಿಂಗ ಪೂಜೆಯಿಂದೇನೂ ಪ್ರಯೋಜನವಿಲ್ಲ. ಇಷ್ಟ ಲಿಂಗಪೂಜೆ ಮಾಡಿದರೇನೇ ಉಳಿದವೆರಡು ಸಿದ್ಧಿಸುವವು. ಮಣ್ಣು, ವೃಕ್ಷ, ಫಲಗಳಂತೆ ಇಷ್ಟಪ್ರಾಣ ಭಾವಲಿಂಗಗಳ ಪೂಜೆ ಇರುವದು. ಮಣ್ಣಿಲ್ಲದ ಮರವುಂಟೇ? ಮರವಿಲ್ಲದ ಫಲವುಂಟೇ? ಆದುದರಿಂದ ಇಷ್ಟಪ್ರಾಣಭಾವಲಿಂಗಗಳು ಪರಸ್ಪರ ಸಂಬಂಧವುಳ್ಳವುಗಳಾಗಿವೆ. ತಮ್ಮ ಇಷ್ಟದೇವತೆಯನ್ನು ತಮ್ಮ ತನುವಿನ ಮೇಲೆ ಧರಿಸಿಕೊಂಡು ಸಂಚರಿಸುವವರೆಂದರೆ ಜಗತ್ತಿನಲ್ಲಿ ವೀರಶೈವರೊಬ್ಬರೇ. ವೀರಶೈವರಲ್ಲಿ ಇದೊಂದು ವೈಚಿತ್ರ್ಯವು ಕಂಗೊಳಿಸುತ್ತದೆ. ವೀರಶೈವರು ತಮ್ಮ ದೇಹವೇ ದೇಗುಲವೆಂದೂ ಅದರಲ್ಲಿರುವ ಜೀವಾತ್ಮನೇ ಪರಮಾತ್ಮನೆಂದೂ ಆ ಪರವಸ್ತುವಿನ ರೂಪವೇ ಬಹಿರಂಗದಲ್ಲಿ ಇಷ್ಟಲಿಂಗಾಕಾರವಾಗಿ ತಮ್ಮ ಕರಸ್ಥಲದಲ್ಲಿ ಪೂಜಿಸಲ್ಪಡುವದೆಂದೂ ತಿಳಿಯುತ್ತಾರೆ. ಸಾಕಾರ ಪೂಜಕರು ಗುಡಿಗುಂಡಾರಗಳಲ್ಲಿಯೂ ದೇವರ ಮನೆಗಳಲ್ಲಿಯೂ ದೇವರನ್ನು ಸ್ಥಾಪನೆ ಮಾಡಿ ಅದನ್ನು ಆರಾಧಿಸುವರು. ಬಹು ಜನ ಸಮುದಾಯಕ್ಕೆ ಅದೊಂದೇ ದೇವರಾಗಿರುವದರಿಂದ ಆರಾಧನೆ ಪೂಜೆಗಳಿಗೆ ಅನಾನುಕೂಲವಾಗುವದು. ಮೂರ್ತಿಭೇದಕರಾದ ಅನ್ಯಮತೀಯರು ಕದಾಚಿತ್ ಅವುಗಳನ್ನು ಒಡೆದರೆ ದೇವರ ಬಗ್ಗೆ ಇದ್ದ ಶ್ರದ್ಧೆಯು ಕಡಿಮೆಯಾಗಬಹುದು. ಇಲ್ಲವೆ ದೇಶದಲ್ಲಿ ಹಾಹಾಕಾರವೇಳಬಹುದು. ಆದರೆ ಪ್ರತಿಯೊಬ್ಬನ ದೇವತೆಯೂ ತನ್ನ ಬಳಿಯಲ್ಲಿಯೇ ಇದ್ದದ್ದಾದರೆ ಈ ಯಾವ ತರದ ಅನಾಹುತಗಳು ಆಗುವ ಸಂಭವವಿಲ್ಲ. ಏನಾದರೂ ಅಪಘಾತ ಸಂಭವಿಸಿದರೆ ಅದು ವ್ಯಕ್ತಿಗತವಾಗಿರುವದೇ ವಿನಾ ಸಮಾಜಕ್ಕೆ ಒಮ್ಮೆಲೇ ಆಘಾತವನ್ನುಂಟು ಮಾಡಲಾರದು. ತಮ್ಮ ದೇವರು ಯಾವಾಗಲೂ ತಮ್ಮ ದೇಹದ ಮೇಲೆಯೇ ಇರುವದರಿಂದ ಉಣ್ಣುವಾಗ ನಿದ್ರಿಸುವಾಗ ಪ್ರವಾಸ ಮಾಡುವಾಗ ಪ್ರತಿನಿತ್ಯದ ವ್ಯವಹಾರ ಮಾಡುವಾಗ ನಮಗೆ ಪರಮಾತ್ಮನ ಸಾನ್ನಿಧ್ಯವು ಯಾವಾಗಲೂ ತೀರ ನಿಕಟವಾಗಿಯೇ ಇರುವದು. ಆದರೆ ಗುಡಿಯಲ್ಲಿ ಪೂಜಿಸುವವರಿಗೆ ಆ ನಿಕಟಸಂಬಂಧವು ತಪ್ಪುತ್ತದೆ. ದೇವರು ದೇಹದ ಮೇಲೆಯೇ ಇರುವದರಿಂದ ವೀರಶೈವರಿಗೆ ಮುಡಿಚಟ್ಟು, ಮೈಲಿಗೆ, ಸೂತಕ ಮೊದಲಾದ ಯಾವ ದೋಷಗಳೂ ತಗಲುವದಿಲ್ಲ. ಆದ್ದರಿಂದ ಅವರು ದೇವರು ವಾಸಿಸುವ ತಮ್ಮ ತನುವನ್ನು ಯಾವಾಗಲೂ ಪರಿಶುದ್ಧವಾಗಿಟ್ಟುಕೊಳ್ಳತಕ್ಕದ್ದು. ಕೆಲವರು ಕೇವಲ ನಿರಾ

ಕಾರ ಪೂಜೆಯನ್ನೇ ಮಾಡುವರು. ಆದರೆ ವೀರಶೈವರಿಗೆ ಸಾಕಾರ ನಿರಾಕಾರ ಪೂಜೆಗಳೆರಡೂ ಉಂಟು. ಅಂತೆಯೇ ಅವರು ಇಷ್ಟ ಪ್ರಾಣ ಭಾವಗಳೆಂಬ ಲಿಂಗತ್ರಯಗಳನ್ನು ಪೂಜಿಸುವರು. ಇಷ್ಟಲಿಂಗ ಪೂಜೆಯು ಸಾಕಾರ ಪೂಜೆಯು. ಭಾವಲಿಂಗ ಪೂಜೆಯು ನಿರಾಕಾರ ಪೂಜೆಯು. ಪ್ರಾಣಲಿಂಗ ಪೂಜೆಯೆಂದರೆ ಸ್ಥೂಲಗುಣವನ್ನಳಿದು ಭಾವದಲ್ಲಿ ಬೆರೆಯಲಿಕ್ಕೆ ಅನುಕೂಲವಾದ ಮಧ್ಯಮಸ್ಥಿತಿಯು. ನಮಗೆ ಮೋಕ್ಷ ದೊರೆಯಬೇಕಾದರೆ ಮೂರು ಲಿಂಗಗಳ ಪೂಜೆಯೂ ಅವಶ್ಯವಾಗಿರಬೇಕು. ಇಷ್ಟಲಿಂಗಪೂಜೆಯಿಂದ ಪ್ರಾಣಲಿಂಗೋಪಾಸನೆಯು ಪ್ರಾಪ್ತವಾಗುತ್ತದೆ. ಪ್ರಾಣಲಿಂಗೋಪಾಸನೆಯಿಂದ ಭಾವದಲ್ಲಿ ಬೆರೆಯಲು ಅನುವಾಗುತ್ತದೆ. ಭಾವದಲ್ಲಿ ಬೆರೆಯುವದೆಂದರೇನೇ ಮೋಕ್ಷವನ್ನು ಹೊಂದುವದು.

ಲಿಂಗಪೂಜೆಯನ್ನು ಹೇಗೆ ಮಾಡಬೇಕು? ಅಂದರೆ ಇಷ್ಟ ಪ್ರಾಣ ಭಾವಲಿಂಗಗಳನ್ನು ಹೇಗೆ ಅರ್ಚಿಸಬೇಕೆಂಬರ್ಥ. ಇಷ್ಟಲಿಂಗಪೂಜೆಯನ್ನು ಹೇಗೆ ಮಾಡಬೇಕೆಂಬದನ್ನು ಹೇಳಿಕೊಡುವದು ಬಹು ಸುಲಭ. ಆದರೆ ಪ್ರಾಣಲಿಂಗ ಭಾವಲಿಂಗಗಳ ಪೂಜಾ ರಹಸ್ಯವನ್ನು ಮಹಾನುಭಾವಿಗಳಿಂದರಿತುಕೊಳ್ಳಬೇಕು. ಇಷ್ಟಲಿಂಗ ಪೂಜೆಮಾಡಬೇಕಾದರೆ ತ್ರಿಕಾಲ ಸ್ನಾನಮಾಡಿ ಶುದ್ಧ ಮಡಿಯಿಂದ ಇರಬೇಕು. ಮಲಿನವಾದ ಇಲ್ಲವೆ ಮೈಲಿಗೆಯ ಬಟ್ಟೆಗಳನ್ನು ಮೈಮೇಲೆ ಸರ್ವಥಾ ಧರಿಸಕೂಡದು.

ಲಿಂಗಪೂಜೆಯ ಫಲವೇನು? ಮೋಕ್ಷವೇ ಲಿಂಗಪೂಜೆಯ ಫಲವು. ಮೋಕ್ಷಕ್ಕೇನೇ ವೀರಶೈವರು ಲಿಂಗಾಂಗೈಕ್ಯವೆಂದೆನ್ನುವರು. ಅಂದರೆ ಜೀವಾತ್ಮ ಪರಮಾತ್ಮರು ಏಕವಾಗಿ ನೀರಿನಲ್ಲಿ ಉಪ್ಪು ಬೆರೆದಂತೆಯೂ ಕ್ಷೀರದಲ್ಲಿ ನೀರು ನೆರೆದಂತೆಯೂ ಕೂಡಿಬಿಡುವರು. ಮೊದಲು ವೀರಶೈವರು ತಾವು ಪರಮಾತ್ಮನಿಂದ ಭಿನ್ನವೆಂದು ತಿಳಿಯುತ್ತಾರೆ. ಆದರೆ ಕ್ರಮೇಣ ಅವರಲ್ಲಿ ಕರ್ಮ ಭಕ್ತಿ ಜ್ಞಾನಯೋಗಾದಿಗಳಲ್ಲಿ ಗತಿಯುಂಟಾಗಲು ತಾವು ಪರಮಾತ್ಮನಿಂದ ಭಿನ್ನವಲ್ಲವೆಂಬದನ್ನು ನಿರ್ಧರಿಸುತ್ತಾರೆ. ಮೊದಲು 'ದಾಸೋಹಂ' ಭಾವದಿಂದ ಲಿಂಗವನ್ನು ಪೂಜಿಸಿದರೆ ಕಡೆಗೆ ಅವರಲ್ಲಿ 'ಸೋಹಂ' ಭಾವವು ತಳವಡುವದು. ದ್ವೈತರು ನಾನೂ ಪರಮಾತ್ಮನೂ ಭಿನ್ನವೆಂದು ತಿಳಿದು ಆತನ ಚರಣಕಿಂಕರರಾಗಿ ಪೂಜಿಸಿ ಕೊನೆಗೆ ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ, ಸಾಯುಜ್ಯ ಮೋಕ್ಷಗಳನ್ನು ಪಡೆಯುವರು. ಅದ್ವೈತರು ನಾನೂ ಪರಮಾತ್ಮನೂ ಒಂದೇ ಎಂಬ

ಭಾವನೆಯಿಂದ ಜ್ಞಾನವಮಾರ್ಗಾವಲಂಬಿಗಳಾಗಿ ತಾವೂ ಕೊನೆಗೆ ಕೇವಲ ಪರಮಾತ್ಮನೇ ಆಗಿಬಿಡುವರು. ಇದಕ್ಕೇ ಕೈವಲ್ಯ ಮೋಕ್ಷವೆಂದೆನ್ನುವರು. ಮೊದಲು ಮನುಷ್ಯರಲ್ಲಿ ದ್ವೈತಭಾವವುಂಟಾಗಿ ಒಂದು ತರಹದ ವಿಶಿಷ್ಟ ಶಕ್ತಿಯುಂಟಾದಾಗ ಅದ್ವೈತಭಾವವು ಅಳವಡುವದು. ಕಡೆತನಕ ದ್ವೈತಿಗಳಾಗಿಯೇ ಉಳಿಯುವದು ಕಡಿಮೆಯ ಸ್ಥಿತಿಯು. ಮೊದಲು ದ್ವೈತಿಯಾಗದೆ ಒಮ್ಮೆಲೇ ಅದ್ವೈತಿಯೆಂದು ಪ್ರತಿಪಾದಿಸುವದು ಶಕ್ಯವಿಲ್ಲ. ಅಂತೆಯೇ ವೀರಶೈವರು ದ್ವೈತಾದ್ವೈತಗಳೆರಡನ್ನೂ ನಂಬಿದವರಾದ್ದರಿಂದ ಇವರಿಗೆ ದ್ವೈತಾದ್ವೈತಿಗಳೆಂತಲೂ ಶಕ್ತಿವಿಶಿಷ್ಟಾದ್ವೈತಿಗಳೆಂತಲೂ ಹೆಸರು. ಈ ಮೇರೆಗೆ ಲಿಂಗಪೂಜೆಯು ಉತ್ಕ್ರಾಂತಿಯ ದ್ಯೋತಕವಾಗಿದೆ. ದ್ವೈತಾದ್ವೈತ ಮತಗಳಲ್ಲಿ ಅದು ಒಳ್ಳೆ ಸುಗಮವಾದ ಐಕ್ಯವನ್ನುಂಟುಮಾಡಿರುತ್ತದೆ. ಲಿಂಗಪೂಜೆಯು ದ್ವೈತಾದ್ವೈತಿಗಳಿಬ್ಬರೂ ಅಭಿಮಾನಪಡುವಂಥ ರಹಸ್ಯವಾಗಿದೆ. ದ್ವೈತಿಗಳು ಕರ್ಮವಿಶಿಷ್ಟವಾದ ಭಕ್ತಿಗೆ ಮಹತ್ವಕೊಟ್ಟು ಪರಮಾತ್ಮನನ್ನಾರಾಧಿಸುವರು. ಅದ್ವೈತಿಗಳು ಕರ್ಮರಹಿತವಾದ ಜ್ಞಾನಕ್ಕೆ ಗಮನಕೊಟ್ಟು ಪರಮನ ನೆಲೆಗಾಣಲು ಹವಣಿಸುವರು. ಆದರೆ ವೀರಶೈವರು ಜ್ಞಾನಕರ್ಮಸಮುಚ್ಚಯದಿಂದ ತಮ್ಮ ಅಭೀಷ್ಟವಾದ ಗುರಿಯನ್ನು ಪಡೆದುಕೊಳ್ಳುವರು. ಇಷ್ಟಲಿಂಗ ಪೂಜೆಗೆ ಕ್ರಿಯೆಯೇ ಪ್ರಾಧಾನ್ಯ; ಪ್ರಾಣಲಿಂಗ ಪೂಜೆಗೆ ಭಕ್ತಿಯೇ ಪ್ರಾಧಾನ್ಯ; ಭಾವಲಿಂಗ ಪೂಜೆಗೆ ಜ್ಞಾನವೇ ಪ್ರಾಧಾನ್ಯ. ಈ ಸುಸಂಸ್ಕೃತವಾದ ತತ್ವಗಳನ್ನೊಳಕೊಂಡ ಪರಾತ್ಪರ ಲಿಂಗವೇ ಧನ್ಯ! ಧನ್ಯ!!

---

# ಸ್ಫುಟ ವಿಷಯುಗಳು.

---

## ವಿರಕ್ತ ಪಂಚಾಚಾರ್ಯವಾದ.

ವಿಜಾಪುರ ಜಿಲ್ಲೆಯು ಪರವಾಗಿ ವಿಜಾಪುರ ಜಿಲ್ಹಾ ಸಭೆಯು ಬಾಗಲಕೋಟೆಯಲ್ಲಿ ಆಗಸ್ಟ ೨೬-೨೭ನೇ ತಾರೀಖುಗಳಲ್ಲಿ ನೆರೆದಿದ್ದು ಆಗ ವೀರಶೈವ ಮಹಾಸಭೆಗೆ ಅಂಗವಾಗಿ ಒಂದು ಕಾರ್ಯಕಾರೀ ಕಮಿಟಿಯು ಸ್ಥಾಪಿತವಾಯಿತು. ಈ ಸಭೆಯಲ್ಲಿ ವಿರಕ್ತ ಪಂಚಾಚಾರ್ಯವಾದ ವಿಷಯವು ವಿಶೇಷ ಚರ್ಚಿಸಲ್ಪಟ್ಟು ಆಗ ಆದ ನಿರ್ಧಾರವು ಏನೆಂದರೆ:—

"ಶ್ರೀ ಪ್ರಭುದೇವಾದಿ ನಿರಂಜನ ಮೂರ್ತಿಗಳೂ ಶ್ರೀ ರೇಣುಕಾದಿ ಆಚಾರ್ಯರೂ ಶ್ರೀ ಬಸವಾದಿ ಪ್ರಮಥರೂ ಬೋಧಿಸಿರುವ ವೀರಶೈವ ಮತತತ್ವಗಳು ಒಂದೇ ಇದ್ದು ಅವು ಇಡೀ ವೀರಶೈವ ಸಮಾಜಕ್ಕೇನೇ ಮಾನ್ಯವಾಗಿರುತ್ತವೆ. ಆದ್ದರಿಂದ ಇವರೆಲ್ಲರೂ ಸಮಸ್ತ ವೀರಶೈವರಿಗೆ ಪೂಜ್ಯರೂ ವಂದ್ಯರೂ ಆಗಿದ್ದಾರೆ.

ಈ ಮಹಾವಿಭೂತಿಗಳನ್ನು ನಿಂದಿಸುವ ನಾನಾ ಬಗೆಯ ಚಟುವಟಿಕೆಗಳು ಸಮಾಜದಲ್ಲಿ ಇತ್ತೀಚೆಗೆ ನಡೆದಿದ್ದು ಇದು ಸಮಾಜಕ್ಕೆ ಘಾತಕವಾದ್ದರಿಂದ ಅಂಥ ಚಟುವಟಿಕೆಗಳನ್ನು ಈ ಸಭೆಯು ತೀಕ್ಷ್ಣವಾಗಿ ನಿಷೇಧಿಸುತ್ತದೆ. ಮತ್ತು ಈ ಚಟುವಟಿಕೆಗಳನ್ನು ನಿವಾರಣೆಮಾಡಲು ಈ ಸಭೆಯು ವಿನಂತಿ ಮಾಡಿಕೊಳ್ಳುತ್ತದೆ."

ಈ ನಿರ್ಣಯದಲ್ಲಿ ಉಲ್ಲೇಖಿಸಿದ ಪ್ರಕಾರ ವೀರಶೈವ ಮತತತ್ವಗಳ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿರುವದಿಲ್ಲೆಂಬದು ಲಕ್ಷಿಸತಕ್ಕ ಸಂಗತಿಯಾಗಿದೆ. ಬೌದ್ಧ ಜೈನ ವೇದಾಂತ ಧರ್ಮಗಳಲ್ಲಿ ಅನೇಕ ಬಗೆಯ ಭಿನ್ನಾಭಿಪ್ರಾಯಗಳು ಉಂಟಾಗಿ ಅನೇಕ ಮತಗಳು ಉದ್ಭವಿಸಿದ್ದು ಕಂಡು ಬರುತ್ತದೆ. ಆದರೆ ಈ ಸ್ಥಿತಿಯು ವೀರಶೈವ ಧರ್ಮದಲ್ಲಿಲ್ಲ. ಅವರಲ್ಲಿ ಮಹತ್ವದ ವಿಸಯಗಳಾದ ಷಟ್‌ಸ್ಥಲ, ಏಕೋತ್ತರ, ಅಷ್ಟಾವರಣ ಮೊದಲಾದ ವಿಷಯಗಳ ಸಂಬಂಧವಾಗಿ ವೀರಶೈವ ಗ್ರಂಥಕಾರರಲ್ಲಿ ಏಕವಾಕ್ಯತೆಯು ಇದೆ. ಅವರು ಇವುಗಳನ್ನು ನಿರೂಪಿಸುವ ಪದ್ಧತಿಯಲ್ಲಿ ಮಾತ್ರ ವಿವಿಧತೆಯು ಇರಬಹುದು. ಆದರೆ ಅವರಲ್ಲಿ ವಿರೋಧಾಭಿಪ್ರಾಯಗಳಿಲ್ಲ. ಹೀಗಿ

ದ್ದರೂ ಈಚೆಗೆ ಕೆಲವರು ಶ್ರೀ. ಬಸವಾದಿ ಪ್ರಮಥರ ಮತ್ತು ರೇಣುಕಾದಿ ಆಚಾರ್ಯರ ತತ್ವಗಳಲ್ಲಿ ಭಿನ್ನತೆಯು ಅವರು ಬೇರೆ ಬೇರೆ ಮಾರ್ಗಾವಲಂಬಿಗಳು ಎಂದು ತೋರಿಸುವ ಪ್ರಯತ್ನಗಳು ನಡೆಯುಹತ್ತಿರುವದು ಶೋಚನೀಯವು. ವೀರಶೈವ ಮತತತ್ವ ಗ್ರಂಥಗಳು ಇನ್ನೂ ಬಹಳ ಹೊರಪಟ್ಟಿಲ್ಲಾದ್ದರಿಂದ ಈ ಬಗೆಯ ಭಿನ್ನಾಭಿಪ್ರಾಯಗಳು ಸಮಾಜದಲ್ಲಿ ಪ್ರಸಾರವಾಗಲು ಅನುವಾಗಿರುತ್ತದೆ. ಈ ಸ್ಥಿತಿಯು ದೂರಾಗಬೇಕಾದರೆ ಧರ್ಮಗ್ರಂಥಗಳನ್ನು ಹೆಚ್ಚಾಗಿ ಪ್ರಕಟಿಸುವದು ಮತ್ತು ಪ್ರಕಟವಾದ ಗ್ರಂಥಗಳ ತತ್ವಗಳನ್ನು ಜನರಲ್ಲಿ ಪ್ರಚಾರಪಡಿಸುವದು ಅತ್ಯಂತ ಅವಶ್ಯವಾಗಿವೆ. ಈ ಕಾರ್ಯ ಮಾಡಲು ಸಮಾಜದಲ್ಲಿ ಅನೇಕ ಸಂಸ್ಥೆಗಳು ಉಂಟಾಗಬೇಕು. ಮತ್ತು ಮುಖ್ಯ ಮುಖ್ಯ ಪಟ್ಟಣಗಳಲ್ಲಿ ಮತ್ತು ಗ್ರಾಮಾಂತರಗಳಲ್ಲಿ ವೀರಶೈವರು ತಮ್ಮ ಮತತತ್ವಗಳನ್ನು ತಿಳಿಸಲು ಮತ್ತೂ ಪ್ರಯತ್ನಿಸಬೇಕು. ಅಂದರೆ ಈ ಬಗೆಯ ಕಲಹಗಳು ತೀವ್ರವೇ ನಷ್ಟವಾಗದೆ ಇರವು.

## ಶಿವಾನುಭವ ಪತ್ರಿಕೆಗೆ ಸಹಾಯ.

ಶಿವಾನುಭವ ಪತ್ರಿಕೆಗೆ ಈ ಕಾಲಕ್ಕೆ ಸಮಾಜದವರ ವಿಶೇಷ ಸಹಾಯವು ಅತ್ಯಾವಶ್ಯಕವಾಗಿದ್ದು ರಾ॥ ರಾ॥ **ಎಚ್. ಆರ್. ಮಹಾಂತಯ್ಯ** ಬಿ. ಎ. ಆನರ್ಸ ಮು- ಹೊನ್ನುಡಿಕೆ ಜಿ. ತುಮಕೂರ ಮತ್ತು ಮೆ॥ **ಜಿ. ಎಸ್. ಗಂಗಾಧರಯ್ಯ** ಮು- ತುಮಕೂರು ಈ ಮಹನೀಯರು ಬಹಳ ಪ್ರಯತ್ನಿಸಿ ಅನೇಕ ಚಂದಾದಾರರನ್ನು ಮಾಡಿಕೊಟ್ಟಿರುವರು. ಇದಕ್ಕೋಸ್ಕರ ಈ ಉಭಯತರಿಗೆ ನಾವು ಬಹಳ ಆಭಾರಿಯಾಗಿದ್ದೇವೆ.

---

ರೆಭಸವೆಲ್ಲಿಯುಡೆನುತ್ತುಂ ತಿರುಗಿ ನೋಡುತುಂ
ಆಭವಭಕ್ತಂ ಸಾಮವೇದಿಯಂ ಕಾಣುತುಂ
ಹರಹರನಮಃಶಿವಾಯೆಂದೆನುತೆ ಕಂಡಲ್ಲಿ
ಕೆರೆಹಿಂದೆ ಮುಚ್ಚಿದಂ ಭವಿ ಕಾಣದಂತಲ್ಲಿ
ಮುಚ್ಚುವದನಲ್ಲಿ ಕಂಡಸರ್ವಸಾಮವೇದಿಗಳ್
ಅಚ್ಚರಿಯೆನುತ್ತೆ ಬೆರಗಾದರಾವಾದಿಗಳ್
ಇದು ಚಿತ್ರವಿದು ಚಿತ್ರವಿನ್ನೊಂದು ಪೊಸತುಂಟೆ
ಇದರಿಂದೆ ಮತ್ತೊಂದು ಕೌತುಕಂ ಇನ್ನುಂಟೆ
ಕುಲವಿಂತಡಿಗೆ ಇಂತು ಮುಚ್ಚುವನು ತಾನಿಂತು
ನೆಲದೊಳಗೆ ಕಂಡರಿಯೆನಿಂತು ಮಾಡುವೆನಿಂತು
ಬೆಸಗೊಳ್ವೆನೀ ಭಕ್ತನಂ ಬಳಿಕ ನೋಡುವೆಂ
ವಶವಲ್ಲದಿರಲಿದಕೆ ತಕ್ಕುದಂ ಮಾಡುವೆಂ
ಹರಭಕ್ತರೆಂತಿರ್ಪುದೆಂದರಿಯಬಾರದಿದು
ಉರವಣಿಸಲಾಗದೆನುತುಂ ಚಿತ್ತದೊಳ್ತಳಿದು
ಮುಂದೆ ಶಿಷ್ಯರನೆಲ್ಲರಂ ಪುರಕೆ ಕಳಿಪುತುಂ

ಹಿಂದೆ ತಾನೋರ್ವನೇ ಗಗನದಿಂದಿಳಿಯುತುಂ
ಬಂದೆಲೆಲೆ ಭಕ್ತಯ್ಯ ಏಕೆ ಮುಚ್ಚಿದೆ ಇದಂ
ಬಂದವರ್ವಿಪ್ರಕುಲವೆಂದರಿಯದಿಂತಿದಂ
ಮಾಳ್ಪುದಕೆ ಕಾರಣನನರಿಪು ಎನಗೆಂದನಲ್
ನೋಳ್ಪೊಡುಬ್ಬಟೆಯ ಕಟ್ಟಾಚಾರವೇನೆನಲ್
ಮರುಮಾತುಗುಡದೆ ತೃಣದನಿತುಮಂ ಲೆಕ್ಕಿಸದೆ
ತೆರಹುಗೊಡದಿರ್ದನೇನೆಂಬುದಂ ಲೆಕ್ಕಿಸದೆ
ನುಡಿಯದಿರಲಲ್ಲಿ ಕಿರಿದುಂ ಪೊಳ್ತು ಬೆರಗಾಗಿ
ಕಡು ಚಿಂತೆಯಿಂ ಸಾಮವೇದಿಗಳ್ಸಿಗ್ಗಾಗಿ
ಹರಭಕ್ತನಿಪ್ಪಿರವು ತನ್ನ ಚಿತ್ತದೊಳಿರಲ್
ಪುರದತ್ತಪೋಗಲುದ್ಯುತನಾಗಿ ನಡೆಗೊಳಲ್

ಆ ದಿನಂ ನುಡಿಯದಿರೆ ಮರುದಿನಂ ನುಡಿಯದಿರೆ
ಪೋದವೆರಡುಂ ದಿನಂ ಪಾಪವರೆಯಾಗುತಿರೆ

ಮೂರನೆಯ ದಿನದಿರುಳ್ ಶಂಕರಂ ನಡೆತಂದು
ತೋರಿದಂ ಸ್ವಪ್ನದೊಳ್ ವಿಪ್ರನಲ್ಲಿಗೆ ಬಂದು

ಎಲೆ ಸಾಮವೇದಿ ನೀನೇಕೆ ಮರುಳಾದಪೈ
ಕುಲದ ಗರ್ವದೊಳಿಂತು ಕೆಟ್ಟು ಹಾಳಾದಪೈ
ಆನೆಂದೊಡಂ ಶ್ವಪಚದೇವರೆನೆ ಬೇರಿಲ್ಲ
ನೀನವರ್ಗಾಳಾಗೆ ನಿನಗೆ ತೀರದುದಿಲ್ಲ
ಎನುತೀಶ್ವರಂ ಶ್ವಪಚದೇವರಲ್ಲಿಗೆ ಬಂದು
ಕನಸಿನೊಳಗಳ್ತಿಯಿಂ ಲೀಲೆಯಿಂದಂ ನಿಂದು
ನಿನ್ನ ದರ್ಶನದಿಂದವನ ಭವಿತನಂ ಪೋಯ್ತು
ನಿನ್ನ ಕಾಣ್ಕೆಯಿಂದವನ ಕುಲವೆಲ್ಲ ಹಸನಾಯ್ತು
ಮಾಡವಂಗುಪದೇಶವಂ ನೀನೆ ಕರುಣದಿಂ
ಮಾಡೆಯ್ಯ ಎಲೆ ಭಕ್ತ ವಿಪ್ರಂಗೆ ಹರುಷದಿಂ
ಸಾಮವೇದಿಗಳನೀ ಧರೆಗೆ ಮೆರೆದಪೆನೆಂದು
ಕಾಮಹರನರಿಪುತುಂ ಲಿಂಗದೊಳ್ಪುಗಲೆಂದು

ಎಚ್ಚತ್ತು ಪುಳಕದಿಂ ಶ್ವಪಚದೇವನೋಡಿ
ನಚ್ಚು ಮಚ್ಚಿನ ಲಿಂಗಮೂರ್ತಿಯೊಳಗೋಲಾಡಿ
ಎಂದಿನಂದದಿ ತೀವಿದಡವಿಯೊಳ್ನಡೆತಂದು
ಇಂದುಧರನಂ ಪೂಜಿಸುತಿರಲ್ಕನದಂದು
ಮತ್ತೆ ಬಂದಸ್ಸಾಮವೇದಿಗಳ್ಬೆಳಗಾಗಿ
ಚಿತ್ತದೊಳ್ ಭಕ್ತನಂ ನುಡಿಸುವತಿ ಭರನಾಗಿ
ತರ್ಕಿಸುವೆನಾಂ ಸೋಲ್ತುಡವರ್ಗಳೇ ಗುರುವೆನುತೆ
ಮರ್ಕಟಚರಿತ್ರಮುಂ ಬಿಡುವೆಂ ಬಳಿಕೆನುತೆ
ಇದಿರುಂಟೆ ನೋಡುವೆನೆನುತ್ತಾಗಳೈತಂದು
ಸದಮಳಂ ಶ್ವಪಚದೇವರ ಮುಂದೆ ಮಿಗೆ ನಿಂದು
ಏಕೆ ನುಡಿಯಿರಿ ದೇವ ಎನ್ನ ಕೂಡೊಂದುವಂ
ಏಕೆ ಬಾಯ್ದೆರೆಯಲೊಲ್ಲಿರಿ ದೇವ ಒಂದುವಂ
ಎನೆ ವಿಭೂತಿಯನಿಟ್ಟುಕೊಳ್ಳುಡಿವೆನಾನೆನಲ್
ಮನವಾರೆ ಇಟ್ಟುಕೊಂಡಂ ದ್ವಿಜಂ ಭೋಂಕೆನಲ್

ಇದೆ ಕಾಣುತುಂ ಶ್ವಪಚದೇವನರಿದಂತಲ್ಲಿ
ನಡುವೊಂದು ತೃಣವನಿರಿಸುತೆ ನುಡಿದರಂತಲ್ಲಿ
ಎಲೆ ವಿಪ್ರ ಲಿಂಗಾರ್ಚನೆಯೊಳಿರುತ್ತೆಂದುವುಂ
ಎಲೆ ಭವಿಗಳೊಡನೆ ನುಡಿ ಇಲ್ಲ ಕೇಳೆಂದುವುಂ
ಮುಟ್ಟಿದೆಂ ಕೆರಹಿನಿಂ ಭವಿ ಕಾಣದಂತಿದಂ
ಮುಟ್ಟದಿರ್ದೊಡೆ ಶಂಭು ಕೆಯ್ಕೊಳ್ಳನಿಂತಿದಂ

ಎಂದೊಡೀ ಗಿಡುವೆಲ್ಲ ಮರವೆಲ್ಲ ಭಕ್ತರೇ
ಸಂದಣಿಸಿ ಬರುತಿರ್ಪ ಮೃಗವೆಲ್ಲ ಭಕ್ತರೇ
ಹಿಂದಟ್ಟಿ ಬರುತಿರ್ಪ ಬೇಡರುಂ ಭಕ್ತರೇ
ಸಂದಿಸ ತ್ತಿರ್ಪ ಚಂಡಾಲರುಂ ಭಕ್ತರೇ
ಇಂತಿದಂ ನೋಡದೆನ್ನಂ ನೋಡಲಾಗದೇ
ಇಂತಿದಾವಾಗಮದೊಳುಂಟುಸುರಲಾಗದೇ

ಎನೆ ಕೇಳುತುಂ ಶ್ವಪಚದೇವರೆಂದರ್ನಗುತೆ
ನಿನಗೆ ಪೇಳ್ದಪ್ಪೆನೆಲೆ ವಿಪ್ರ ಕೇಳೆಂದೆನುತೆ
ಗಿಡುಮರದ ಹೂ ಪತ್ರೆ ಶಂಭುವಿಂಗೇರುವುದು
ನಡೆಪೆಣನೆ ನಿನ್ನ ತನು ಹೆಬ್ಬಡಿಕೆ ನಾರುವುದು
ಕಾಮ ಉಂಟೇ ಮರಕೆ ಕ್ರೋಧ ಉಂಟೇ ಲತೆಗೆ
ಕಾಮಾದಿ ಷಡ್ವರ್ಗವಿಡಿದು ತೀವಿತು ನಿನಗೆ
ಎಳೆ ಪುಲ್ಗಳಂ ಮೇದು ತಿಳಿನೀರ್ಗಳಂ ಕುಡಿದು
ಬೆಳೆವ ಮೃಗವಾರುಮಂ ಬಾಧಿಸವು ತರವಿಡಿದು
ನಿನ್ನೂಟವೆಂಬುದತ್ಯಂತ ಕಾಳ್ಭೋಜನಂ
ಅನ್ನವೆಂಬುದು ಪಾರ್ವಣದ ಪಿಂಡಭೋಜನಂ
ಸತ್ತವರ ಮನೆಯೊಳೇಕಾಹ್ನದ ಕುಭೋಜನಂ
ಮತ್ತೆ ನೀನುಣ್ಬುದೆಲ್ಲಂ ಕಾಕಭೋಜನಂ
ಬೇಡರೊಂದುಂ ವೇದಶಾಸ್ತ್ರವರಿಯರ್ದಿಟಂ
ಬೇಡರ್ಗೆ ನೀನೊಲ್ದು ಪೇಳ್ದುದೆಲ್ಲಟಮಟಂ
ಜಾತಿ ಧರ್ಮಂ ಬೇಂಟೆ ಎಂದಿರ್ಪರಂತವರ್
ಜಾತಿ ಚಾಂಡಾಲರೆಂದೆನಿಸಿರ್ಪರಂತವರ್
ಕರ್ಮಚಾಂಡಾಲನೆಂದೆನಿಸಿಕೊಳ್ವಂ ನೀನೆ

ದುರ್ಮುಖಂ ದುರ್ಗುಣಿ ದುರಾಚಾರಿಯುಂ ನೀನೆ
ಏಕಮೇವಾದ್ವಿತೀಯಂ ಬ್ರಹ್ಮವೆಂದರಿದು
ಲೋಕದೊಳ್ವಿಶ್ವಾಧಿಕೋ ರುದ್ರ ಎಂದರಿದು
ಸರ್ವಮನ್ಯತ್ಪರಿತ್ಯಜ್ಯ ಎಂಬುದನರಿದು
ಸರ್ವಮುಂ ಭರ್ಗನಿಚ್ಛೆಯೊಳಿರ್ಪುದೆಂಬರಿದು
ಸ ಶಿವ ಏಕೋ ದೇವನೆಂಬ ವೇದವನರಿದು
ಸ ಶಿವನೇ ಏಕನೆನಿಸಿರ್ಪ ವಾಕ್ಯವನರಿದು
ಹರಿಗುಂ ಹರಂತಿ ಎಂದೆಂಬ ವಾಕ್ಯವನರಿದು
ಹರನೆಲ್ಲವಂ ತೀರ್ಚಿ ಕಳೆವೆನೆಂಬುದನರಿದು
ವೇದದೊಳ್ನೆಲೆಯಾದ ಶ್ರೀ ವಿಭೂತಿಯನರಿದು
ವೇದಕ್ಕೆ ತಾಯಪ್ಪ ಪಂಚಾಕ್ಷರಿಯನರಿದು
ಶೃತಿಯೊಳಗೆ ಸಲೆ ಸಂದ ರುದ್ರಾಕ್ಷಿಗಳನರಿದು
ಮತಿವಂತರೆನಿಸಿರ್ಪ ಭಕ್ತಚರಿತವನರಿದು
ಅರಿದು ಬರಿದೊರೆಯಾದ ನೀನಲ್ಲದಿನ್ನುಂಟೆ
ಅರಿದರಿದು ಕುರಿಯಾದ ನಿನ್ನಿಂದೆ ಮರುಳುಂಟೆ
ಅರಿದ ವೇದವ್ಯಾಸನೇನಾದನದನರಿಯ
ಅರಿವು ನಿನ್ನಳವೆ ಮುನಿಗಳ ಹವಣ ಕೇಳ್ದರಿಯ
ಗಗನದೊಳ್ಬರುತಿರ್ಪೆನೆಂದೆಂಬ ಗರ್ವವೇ
ಗಗನದೊಳ್ಪಕ್ಕಿ ಪಣ್ಣೆಲೆಗಳೆಲ್ಲಹಾರವೆ
ಪಂಚಮುಖನಂ ಪೂಜಿಸದ ಪಾತಕಂ ನೀನೆ
ಪಂಚವದನನ ಸ್ತುತಿಸದಿರ್ಪ ಪತಿತಂ ನೀನೆ
ಭಸಿತಮುಂ ಭಾವಿಸದ ಭಾಗ್ಯಹೀನಂ ನೀನೆ
ಎಸೆವ ರುದ್ರಾಕ್ಷಿಯರಿಯದ ಪಾಪಿಯುಂ ನೀನೆ
ಕತ್ತೆ ಕರ್ಪುರದ ಹೇರಂ ಹೇರಿ ನಿಂದಂತೆ
ಹೊತ್ತ ವೇದಂಗಳರ್ಥವನರಿಯದಕಟೆಂತೆ
ಮರದಿಂದೆ ಗಿಡುವಿಂದೆ ಮೃಗದಿಂದೆ ಪುಳುವಿಂದೆ
ಬರೆ ಬೇಡರಿಂದೆ ಚಾಂಡಾಲರಿಂ ನಾಯಿಂದೆ
ನೀನೆ ಕಷ್ಟಂ ಸುಡುಸುಡೆಲೆಲೆ ಭವಿ ಭವಿ ನೆನೆನಿ
ನೀನೆ ಪತಿತಂ ಪಂಚಮಹಾಪಾತಕ ನೀನೆ
ನಿನ್ನನೀಕ್ಷಿಸುವರೇ ಶಿವಭಕ್ತರಪ್ಪವರ್

ನಿನ್ನೊಡನೆ ನುಡಿವರೇ ಶರಣರೆನಿಸಿರ್ಪವರ್
ಎಂದುಳ್ಳುದಂ ಶ್ವಪಚದೇವರುಬ್ಬಿಂ ನುಡಿಯೆ
ಮುಂದಿರ್ದ ಸಾಮವೇದಿಗಳನೊಲವಿಂ ಜರಿಯೆ

ನೆರೆ ಸತ್ಯ ಬೋಧೆ ಸಾತ್ವಿಕನ ಮನದೊಳ್ಪೊಕ್ಕು
ಮರಹಳಿದು ತಿಳಿಯುಳಿದು ಭಕ್ತಿಯೊಳ್ಮನ ಮಿಕ್ಕು
ಸಾಮವೇದಿಗಳೆಳ್ದು ಮೆಯ್ಯಿಕ್ಕಿ ಪೊಡಮಟ್ಟು
ಸೋಮಧರಮೂರ್ತಿ ಕರುಣಿಪುದೆಂದು ಮನ ನಟ್ಟು
ಸರ್ವಾಪರಾಧಿಗಜ್ಞಂಗೆ ಕರುಣಿಪುದಯ್ಯ
ಸರ್ವ ಪಾಪಂಗೆ ದುರ್ಮತಿಗೆ ಕರುಣಿಪುದಯ್ಯ
ಸತ್ಯವಂ ಬಿಟ್ಟಿರ್ದಸತ್ಯಂಗೆ ಕರುಣಿಪುದು
ನಿತ್ಯನಂ ಬಿಟ್ಟಿರ್ದನಿತ್ಯಂಗೆ ಕರುಣಿಪುದು
ಎಂದು ಬಿನ್ನವಿಸಿ ಕಿಂಕುರ್ವಾಣಮಂ ಕೇಳ್ದು
ಇಂದುಧರನರುಪಿದಂ ಚಿತ್ತದೊಳ್ನೆರೆ ತಾಳ್ದು
ಕರುಣದಿಂ ಶ್ವಪಚದೇವ ವಿಪ್ರನಂ ನೋಡಿ
ಕರದಲ್ಲಿ ಶಂಕರನ ನಿಜಮೂರ್ತಿಯಂ ಕೂಡಿ

ಕರೆದು ಹತ್ತಿರೆ ನೋಡಿ ಪದ್ಮಾಸನದೊಳಿರಿಸಿ
ಹರನ ಶಶಿಧರನ ರೂಪಂ ಚಿತ್ತದೊಳಗಿರಿಸಿ
ಪಶುಪತಿಯ ಚರಣಮಂ ಮನದ ಕೆಯ್ಯೊಳ್ಕೊಟ್ಟು
ಅಸಿತಗಳಮೂರ್ತಿಯಂ ಜ್ಞಾನದಿಂ ಸ್ಥಿತಿಟ್ಟು
ಸಾಮವೇದಿಗಳ ಮಸ್ತಕದಲ್ಲಿ ಹಸ್ತಮಂ
ಪ್ರೇಮದಿಂ ಶ್ವಪಚದೇವರ್ತಮ್ಮ ಹಸ್ತಮಂ
ತಂದಿಟ್ಟು ಕರ್ಣದೊಳ್ಪಂಚಾಕ್ಷರಿಯನರುಪಿ
ಮುಂದಿರ್ದ ಶಿವಲಿಂಗನಿಜಮೂರ್ತಿಯಂ ತಿಳುಪಿ
ಉಪದೇಶಮಂ ಶ್ವಪಚದೇವರೊಲವಿಂ ಮಾಡೆ
ತಪನನಂತಿರೆ ತೊಳಗಿ ಬೆಳಗುತಿರ್ದಂ ನೋಡೆ
ಕುಲಛಲದ ಮದವಳಿದು ನೆಲಸಿತ್ತು ಶಿವಭಕ್ತಿ
ತೊಲಗಿತ್ತು ಭವಿತನಂ ಕಾಸಿ ಬೆಚ್ಚಿತು ಯುಕ್ತಿ
ಜ್ಯೋತಿಯಿಂ ಜ್ಯೋತಿಯಂ ಪೊತ್ತಿಸಿದ ತೆರನಾಯ್ತು

ಮಾತೇನು ಗುರುಶಿಷ್ಯರೆಂದರಿಯದಂತಾಯ್ತು
ಓರ್ವರೊಳಗೋರ್ವರಂ ತಂದಿಕ್ಕಿದಂತಾಯ್ತು
ಸರ್ವೇಶ್ವರನ ಭಕ್ತಿ ಬೇರ್ವರಿದ ತೆರನಾಯ್ತು
ಗುರುಚರಣಮಂ ನಂಬಿ ಲಘುವಳಿದು ಗುರುವಾಗೆ
ಗುರುನಿರೀಕ್ಷಣೆಯಿಂದೆ ಶಿವತತ್ವಮಯವಾಗೆ
ಹರಭಕ್ತ ಸಾಮವೇದಿಗಳ ಪಿತೃಕುಲವೆಲ್ಲ
ನರಕದಿಂ ರುದ್ರಲೋಕಕ್ಕೆ ನೆಗೆಯಿತ್ತೆಲ್ಲ

ಇಂತು ಕರುಣಂಬಡೆದು ತತ್ಪುರಕೆ ನಡೆತಂದು
ಸಂತಸದಿ ಛತ್ತೀಸಪುರಕೆ ಬರುತಿರಲಂದು
ಕಂಡ ಶಿಷ್ಯರಿದೇನಿದೇನೆನುತ್ತಿರಲಲ್ಲಿ
ತಂಡದಿಂ ಛತ್ತೀಸಪುರಜನಂ ಬರಲಲ್ಲಿ
ಎಲ್ಲರ್ಗೆ ಮೋದದಿಂ ಶಾಸ್ತ್ರದಿಂದರಿಪುತುಂ
ಎಲ್ಲರ್ಗೆ ಶೈವಾಗಮೋಕ್ತಿಯಿಂದರಿಪುತುಂ
ಎಲ್ಲರಂ ತಿಳುಪಿ ಶಿವಭಕ್ತರಂ ಮಾಡಿದಂ
ಎಲ್ಲರಂ ಶಿವನ ಸದ್ಭಕ್ತಿಯೊಳ್ಮಾಡಿದಂ
ನೋಡೆ ಛತ್ತೀಸಪುರದೊಳಗೆಲ್ಲ ಶಿವಮಯಂ
ಕೂಡೆ ಮನೆಮನೆಗಳೊಳು ಲಿಂಗಾರ್ಚನೆಯ ಮಯಂ
ಎಲ್ಲೆಲ್ಲಿ ಕೇಳ್ದೊಡಂ ಘಂಟಾರವಂ ಕೂಡೆ
ಎಲ್ಲೆಲ್ಲಿ ಕಾಣ್ದೊಡಂ ಭಸಿತಭಾಳಂ ಕೂಡೆ
ಹೂವಗ್ಗವಣಿಗಳಂ ತರುತಿರ್ಪ ಸಂಭ್ರಮಂ
ಆವಗಂ ಶಂಕರನನರ್ಚಿಸುವ ವಿಭ್ರಮಂ
ಶಿವಭಕ್ತಿ ಸಂಭ್ರಮಂ ಪುರದೊಳಗೆ ಮಿಗಿಲಾಗೆ
ಶಿವನೇಕ ನಿಷ್ಠೆಯುಂದಂದಿಂಗೆ ಪಿರಿದಾಗೆ

ಇಂತಪ್ಪ ಸಂತೋಷದಿಂ ಸಾಮವೇದಿಗಳ್
ಕಂತುಹರಚರಣಕಮಲ ಮೋದವೇದಿಗಳ್
ಉದಯದೊಳ್ನವಕುಸುಮ ಸಂಕುಳಂಗಳ ತಿರಿದು
ಮದನಹರ ಮಜ್ಜನಕೆ ಗೋಕ್ಷೀರಮಂ ಕರೆದು
ಚಿಂತೆಯುಡಗಿದ ದಂತಧಾವನ ಸ್ನಾನದಿಂ

ಸಂತತಂ ತನುಗುಣವ ತೊಡರದಿಹ ಮೌನದಿಂ
ಭಸಿತಮಂ ಧರಿಸಿ ರುದ್ರಾಕ್ಷಿಯಂದದಿ ತೊಟ್ಟು
ಅಸಮ ಗುರುಪದವ ನೆನೆನೆನೆದು ಮನಮುಂದಿಟ್ಟು
ಚಳೆಯ ಸಾರಣೆ ರಂಗವೋಲೆಯಂ ರಂಜಿಸುತೆ
ಒಳಗೆ ಬೆಳಗುವ ದೀಪಮಾಲೆಯಂ ಪೊತ್ತಿಸುತೆ
ಪಂಚಾಮೃತಂ ಮಾಡಿ ಪಂಚಮುಖನಂ ನೋಡಿ
ಪಂಚಮಹವಾದ್ಯವೆಸೆಯಲು ಸುಖದೊಳೋಲಾಡಿ
ಗಂಗಾಂಬುವಂ ಮಜ್ಜನಕ್ಕೆರೆದು ಕುಣಿಕುಣಿದು
ಗಂಗಾಧರಂಗೆ ಸಜ್ಜನದ ಮಜ್ಜನಕ್ಕೆರೆದು
ಗಂಧಮಂ ಕೈಗೊಳಸಿ ಯಕ್ಷತೆಯನೊಪ್ಪಿತಿರೆ
ನಂದಿವಾಹನನ ಮೂರ್ತಿಯು ಮನಮನಪ್ಪಿತಿರೆ
ಕಮನೀಯವೆನಿಪ ಸಿಂಹಾಸನದೊಳೊಪ್ಪಿರಿಸಿ
ರಮಣಂಗೆ ಇಂಡೆ ದಂಡೆಗಳಿಂದೆ ಸಿಂಗರಿಸಿ
ಸಂಪಿಗೆ ದವನ ಮರುಗ ಮುಡಿವಾಳ ಇರುವಂತಿ
ಕಂಪೆಸವ ಪಚ್ಚೆ ಪಡ್ಡಳಿ ಮೊಲ್ಲೆ ಸೇವಂತಿ
ಮೊದಲಾದ ಪರಿಮಳ ಕದಂಬಮಂ ನೆರೆ ತುರುಗಿ
ಇದಿರುಂಟೆ ನೋಡುವಡೆನಿತ್ತುವುಂ ಸೆರೆ ತುರುಗಿ
ಆಹಹ ಇಂದಾನು ಪುಟ್ಟಿದುದು ಫಲವಾಯಿತ್ತು
ಅಹಹಾ ಮಹದ್ಗುರುವ ಮುಟ್ಟಿದ್ದು ಫಲವಾಯ್ತು
ಗುರುವಿಂದೆ ಬರ್ದುಕಿದೆಂ ಬರ್ದುಕಿದೆಂ ಕುಬುಬುಬುಬು
ಗುರವಿಂದೆ ಶುದ್ಧಾತ್ಮನಾದೆನೆಲೆ ಕುಬುಬುಬುಬು
ಎಂದಿಂತು ಕುಣಿದಾಡಿ ಮಣಿದಾಡಿ ಮೆಯ್ಮರೆದು
ಸಂದಣಿಸಿದಾನಂದ ಉರ್ಕಿ ತನುವಂ ಮರೆದು
ಮಂಗಳ ಮಹಾಮಹಿಮ ಗುರುವಿಂಗೆ ಪರಮಂಗೆ
ತುಂಗಗುಣ ನಿಳಯಂಗೆ ಧೂಪಾರತಿಯ ಬೆಳಗೆ
ದಿವ್ಯಾನ್ನವಮೃತಾನ್ನ ದೇವಾನ್ನಮಂ ಬಡಿಸಿ
ನವ್ಯರುಚಿಶಾಕದಿಂ ಸರ್ವಸಾಧನ ವೆರಿಸಿ
ದೇವಗಣಕುಲಚಕ್ರವರ್ತಿಯೊಲ್ದಾರೈಸು
ದೇವದಾಕ್ಷಾಯಣಿಯ ರಮಣನೊಲಿದಾರೈಸು

ಎಂದು ದೇವಂಗೆ ಕರ್ಪುರದ ವೀಳೆಯವಿತ್ತು
ಇಂದುವೌಳಿಗೆ ಅರ್ಘ್ಯಪಾದ್ಯತರ್ಪಣವಿತ್ತು
ದೇವಭಕ್ತಿಯನೀವುದೆಂದು ಪ್ರಣುತನಾಗಿ
ಆವಗಂ ಶಿವನ ಕಾರುಣ್ಯಸುಖಮುಖನಾಗಿ
ಕರುಣಪ್ರಸಾದಮುಂ ಹರುಷದಿಂ ಕೈಕೊಂಡು
ಗುರುಪದದ ಧ್ಯಾನಮಂ ಹೃದಯದೊಳಗೆಡೆಗೊಂಡು
ಈ ತೆರೆದೊಳೊಂದೆರಡು ಮಾಸಮಾಗುತ್ತಮಿರೆ
ಭೂತೇಶ್ವರನ ಭಕ್ತಿ ಪರ್ಬಿ ಕುಡಿವರಿಯುತಿರೆ
ಸಾಮವೇದಿಗಳ ತಂದೆಯ ದಿನಂ ಬರಲಲ್ಲಿ

ಆ ಮಹಾ ಭಕ್ತರ್ಗೆ ಪೇಳುತ್ತ ಪುರದಲ್ಲಿ
ಅಲ್ಲಿ ವಿಶ್ವೇದೇವರಪ್ಪರೊಬ್ಬರುಮಿಲ್ಲ
ಅಲ್ಲಿ ತನ್ನಯ ಮನಕ್ಕೆರಗುವತರ್ಾವಿಲ್ಲ
ದಿರೆ ವಿಚಾರಿಸಿ ನೋಡಿ ನಿಶ್ಚಯಿಸುತುಂ ಕಂಡು
ಹರುಷದಿಂ ಶ್ವಪಚದೇವರ ಸಾರ್ಗೆ ನಡೆಗೊಂಡು
ಭರದಿಂದೆ ಬಂದರಣ್ಯದೊಳಿರ್ದ ಗುರುವಿಂಗೆ
ಹರನನೊಲ್ದಾರಾಧಿಸುವ ಪರಮ ಗುರುವಿಂಗೆ
ನರಕದೋಳ್ಬೀಳ್ವವನನೆತ್ತಿದ ಮಹಾತ್ಮಂಗೆ
ಪರಮ ಶಿವಲಿಂಗದೊಳ್ಸೆರಪಿದ ಮಹಾತ್ಮಂಗೆ
ಪೂಜಿಸುತೆ ಪೂಜಿಸುತೆ ಶಿವನಾದ ಪರಮಂಗೆ
ರಾಜಿಸುತೆ ರಾಜಿಸುತೆ ಗುರುವಾದ ಪರಮಂಗೆ
ಮೆಯ್ಯಿಕ್ಕಿ ದೇವ ಬಿನ್ನಪವೆಂದು ಕೆಯ್ಮುಗಿದು
ಕೆಯ್ತೆತ್ತಿ ಪೊಡಮಟ್ಟು ಭಕ್ತಿಯಿಂದೊಳಸುಗಿದು

ನಾಳಿನ್ನ ತಂದೆಯ ದಿನಕ್ಕೆ ಬಿಜಯಂಗೆಯ್ವು
ಶೂಲಿ ವಿಶ್ವೇದೇವರಾಗಿ ಬಿಜಯಂಗೆಯ್ವು
ಕರುಣಿಸುವುದೆನೆ ಕರಂ ಶ್ವಪಚದೇವರ್ನಗುತೆ
ಮರುಳೆ ಪಿತೃದಿವಸದೊಳ್ಪಾರೆವಾವೆಂದೆನುತೆ
ನಿನಗೆ ವಿಶ್ವೇದೇವರೇ ಹೋಗು ಬಂದಪಂ
ಮನಸಿಜಹರಂ ತಾನೆ ಕರುಣದಿಂ ಬಂದಪಂ

ಎನೆ ಶಿವಂ ಬರ್ಪ ಪರಿಯಂ ದೇವ ಬಲ್ಲೆನೇ
ಎನಗೆ ಕರುಣಿಪುದು ಕುರುಪಂ ದೇವ ಬಲ್ಲೆನೇ
ಎಂದೊಡೆವ್ಮಯ ವೇಷದಿಂದ ಬಂದಪನಯ್ಯ
ಒಂದು ಕರುವಂ ಹೊತ್ತುಕೊಂಡು ಬಂದಪನಯ್ಯ
ಎಂದು ಕರುಣಿಸೆ ಹಸಾದವೆನುತ್ತೆ ತಾಂ ತಿರುಗಿ
ಬಂದನಾ ಭಕ್ತೇಸಪುರಕೆ ಮನದೊಳ್ಕರಗಿ

ಬಂದು ಮರುದಿವಸದುದಯದೊಳೆ ಪಲ್ಲಂ ಸುಲಿದು
ಮಿಂದು ಭಸಿತಮನಿಟ್ಟು ರುದ್ರಾಕ್ಷಿಯಂ ತಳೆದು
ಮನೆಯ ಧವಳಿಸಿ ತೋರಣಂಗಟ್ಟಲಳವಡಿಸಿ
ತನತನಗೆ ಶಾಕಪಾಕಾದಿಗಳನಳವಡಿಸಿ
ಇರೆ ಬಂದು ನೆರೆಯುತ್ತ ಶಿಷ್ಯವರ್ಗಂ ಕೂಡೆ
ಹರಭಕ್ತರುಂ ಪಿರಿಯರುಂ ಶಾಂತರುಂ ಕೂಡೆ
ನೆರೆದಿರಲು ಸಾಮವೇದಿಗಳ್ಪುಳಕಿಸುತಿರಲು
ಹರುಷದಿಂ ಮಂಡಲಂ ಮಾಡಿ ನೋಡುತ್ತಿರಲು
ಹರನ ಬರವಂ ಸಾರ್ದು ನೋಡುತ್ತಮಿರಲಲ್ಲಿ
ಪರಮ ಕರುಣಮನೊಲ್ದು ಪಾರುತ್ತಮಿರಲಲ್ಲಿ

ಬರುತಿರ್ದನೀಶ್ವರಂ ಪಿರಿಯ ವೇಷಂಗೊಂಡು
ಬರುತಿರ್ದನಾ ಭಕ್ತವತ್ಸಲಂ ನಡೆಗೊಂಡು
ಹೊತ್ತ ಕರುವಿಡಿದ ಸಂಬಳಿಗೋಲನೀಶ್ವರಂ
ಉತ್ತಮೋತ್ತಮ ಕರುಣವಾರುಧಿ ಸುಧಾಕರಂ
ಸಾಮವೇದಿಗಳ ಪಿತೃಕುಲವೆಲ್ಲ ಸಹಿತಾಗಿ
ಸೋಮಧರನೆಲ್ಲರಂ ಕೂಡಿಕೊಂಡೊಂದಾಗಿ
ದೂರದಿಂ ಬರುತಮಿರೆ ಕಂಡು ಪುಳುಕಿತನಾಗಿ
ಆರುತುಂ ಗುಡಿಗಟ್ಟಿ ಕುಣಿದಾಡುತುಂ ಬೇಗಿ
ಎನ್ನೊಡೆಯನಾ ಬಂದನಾಹಾ ಮಹಾದೇವ
ಎನ್ನೊಡೆಯನೈತಂದನಾಹಾ ಮಹಾದೇವ
ಕರುಣಾಬ್ಧಿ ಮೇರೆದಪ್ಪಿತು ಮೀರಿತಮ್ಮಮ್ಮ
ಪರಬೊಮ್ಮವೆನ್ನತ್ತಲೊಗುಡಿಸಿತಮ್ಮಮ್ಮ

ಎಲೆಲೆ ಕುಣಿದಾಡಿರೇ ಹಾಡಿರೇ ಭಕ್ತರಿರ
ಎಲೆಲೆ ಸುಖಮಂ ಸೂರೆಗೊಳ್ಳಿರೇ ಶರಣರಿರ
ಎನಲೆನಲ್ಲುತ್ತೆ ಸಾರ್ದಂ ಹೆಗಲ ಕರು ಸಹಿತ
ತನತನಗೆ ಸಂಪಣಿಸಿ ಬರ್ಪ ಪಿತೃಕುಲ ಸಹಿತ
ಬಂದು ಮಂಡಲವಲ್ಲಿ ಪಾದಮಂ ನೀಡುತಿರೆ
ನಿಂದಿರ್ದ ವಿಪ್ರಕುಲವೆಲ್ಲ ಪರಿದೋಡುತಿರೆ

ಸಾಮವೇದಿಗಳಲ್ಲಿ ಪುಳುಕಿಸುತೆ ಪರಿತಂದು
ಸೋಮಧರ ಕಾಮಹರ ಕರುಣಿಸಿದಿರೆನುತಂದು
ಪಾದಮಂ ತೊಳೆಯಲೆಂದನು ಮಾಡುವನಿತಕ್ಕೆ
ವೇಧಿಸಿದ ಕಡುಃ ನೇಹದಿಂದುಕ್ಕುವನಿತಕ್ಕೆ
ಹೊತ್ತ ಕರುವಲ್ಲಿ ವಿಷ್ವಕ್ಸೇನ ತನುವಾಗೆ
ಬಿತ್ತರಿಸುವೊಂದು ಮುಖದೊಳಗೈಯ್ದು ಮುಖವಾಗೆ
ಉಟ್ಟ ಪೊದೆದುವು ಪುಲಿದೊವಲ್ಗಜಾಜಿನವಾಗೆ
ಕಟ್ಟಿರ್ದ ಕಿವಿಗುಂಜಿ ನಾಗಕುಂಡಲಮಾಗೆ
ಮೆಯ್ಯ ಕಡುಗರ್ಪಳಿದು ಕರೆಗೊರಲ್ಕರ್ಪಾಗೆ
ಕೆಯ್ಯ ಸಂಬಳಿಗೋಲು ಖಟ್ವಾಂಗಮಯವಾಗೆ
ದೆಸೆದೆಸೆಗೆ ಮಿಸುಪ ಮೂರುಂ ಕಣ್ಗಳೀಶ್ವರಂ
ಶಶಿರವಿಗಳಂ ಬೆಳಗುತಿರ್ಪ ಕರುಣಾಕರಂ
ತಾನಾಗಿ ನಿಂದಿರಲ್ಪೂಮಳೆಗಳೆರಗಿದವು
ನಾನಾ ಮೃದಂಗ ದುಂದುಭಿನಾದಮುಣ್ಮಿದವು

ಆಗಳಾ ಸಾಮವೇದಿಗಳ ಭವನಂ ಕಂಡು
ರಾಗವಿರ್ಮಡಿಸಿ ನೂರ್ಮಡಿಸಿ ಹರುಷಂಗೊಂಡು
ಹರನ ಪದಕಮಲಮಂ ಬಿಗಿದಪ್ಪಿಕೊಂಡಿರಲ್
ಪರಮನಂಘ್ರಿಗಳೊಳಗೆ ಪರಮ ಸುಖದಿಂದಿರಲ್
ಪಿಡಿದೆತ್ತಿದಂ ಸಾಮವೇದಿಗಳನೀಶ್ವರಂ
ಕಡು ನೇಹದಿಂದೆ ತೆಗೆದಪ್ಪಿ ಕರುಣಾಕರಂ
ನಡೆ ವಿಮಾನವನೇರಿಕೊಳ್ಳಯ್ಯ ಕೊಳ್ಳೆನಲ್
ನುಡಿದರಾ ಸಾಮವೇದಿಗಳಲ್ಲಿ ಭೋಂಕೆನಲ್

ಎನ್ನ ಗುರು ಸಹಿತವಲ್ಲದೆ ಬಾರೆನೆಲೆ ದೇವ
ಚನ್ನಛತ್ರೀಸಪುರಸಹಿತವಲ್ಲದೆ ದೇವ

ಎನೆ ಶಿವಂ ಶ್ವಪಚದೇವರನಲ್ಲಿ ಕರಿಸಲ್ಕೆ
ತನತನಗೆ ಗಣಕುಲಕೆ ಪುರವನೆತ್ತಿರೆಸಲ್ಕೆ
ಛತ್ರೀಸಪುರ ಸಹಿತ ಗುರು ಸಹಿತ ಗಗನಕ್ಕೆ
ಒತ್ತರಿಸಿ ಸಾಮವೇದಿಗಳೆಯ್ದೆ ನಿಮಿಷಕ್ಕೆ
ಬಂದು ನಂದೀಶ್ವರನ ಬಾಗಿಲೊಳ್ನಡೆತಂದು
ಇಂದುಧರನೋಲಗದೊಳತುಳಸುಖದಿಂ ಸಂದು
ಇರೆ ಶಿವಂ ಶ್ವಪಚದೇವರನಲ್ಲಿ ಕೊಂಡಾಡಿ
ಕರೆದಲ್ಲಿ ಸಾಮವೇದಿಗಳನೊಲವಿಂ ನೋಡಿ
ಗುರುವಿಂಗೆ ಶಿಷ್ಯಂಗೆ ಗಣಪದವಿಯಂ ಕೊಟ್ಟು
ಪರಮಗುರು ಪರಮಾನುರಾಗಮಂ ಮುಂದಿಟ್ಟು
ಛತ್ರೀಸಪುರವನಾ ರುದ್ರಲೋಕದೊಳಿರಿಸಿ
ಮುಂತಿರ್ದ ಗಣಕುಲದ ನಡುವೊಪ್ಪೆ ಸಿಂಗರಿಸಿ
ಸಕಲ ಶರಣರ ಮನೋರಥರೂಪನೊಪ್ಪಿದಂ
ಸಕಳ ಲೋಕೈಕ ಶಾಶ್ವತ ಮೂರ್ತಿಯೊಪ್ಪಿದಂ
ಅಮ್ಮಮ್ಮ ಶರಣಜನಸುರಧೇನು ಒಪ್ಪಿದಂ
ಎಮ್ಮ ಹಂಪೆಯ ವಿರೂಪಾಕ್ಷನಿಂತೊಪ್ಪಿದಂ॥

**ಕಂದ**॥ ಧರೆ ಬಣ್ಣಿಸೆ ಸುಖವಿಡಿದಾ
ದರದಿಂದವೆ ಮೆರೆದ ಸಾಮವೇದಿಗಳವನೆಂ।
ದುರುತರ ಭಕ್ತಿಯ ನೀವುದು
ಕರುಣಾಕರ ದೇವ ಹಂಪೆಯ ವಿರೂಪಾಕ್ಷಾ॥

# ಮಳೆಯರಾಜ ಶರಣರ ಮಹಾತ್ಮೆ

ಕಂದ॥ ಧರೆಯೊಳಗೆ ಮಳೆಯರಾಜಂ
ಮೆರೆದಂ ಕರುಣಾಬ್ಧಿ ಹಂಪೆಯ ವಿರೂಪಾಕ್ಷಂ ।
ಪುರಮಥನಂ ಸ್ಮರಮಥನಂ
ಕರಿಮಥನಂ ದುರಿತಮಥನನಂತಕಮಥನಂ ॥

## ರಗಳೆ.

ಇಳೆಗೆ ತೊಳೆಗಿ ಬೆಳೆಪ ತಿಳಕವೆನಿಪ ಮಳೆಯ ದೇಶದಲ್ಲಿ
ಮಳೆಯವತಿ ಎನಿಪ್ಪ ಪಟ್ಟಣಂ ವಿರಾಜಿಸಿರ್ಪುದಲ್ಲಿ
ದೇವರಾಜನೆನಿಪ ಭೂಪನಾ ಪುರಕ್ಕೆ ಕರ್ತೃವಾಗಿ
ಭೂವಧೂವಿಳಾಸ ಭಾಸಮಾನ ಕಮಳ ರಮಣನಾಗಿ
ಇರ್ಪ ನೃಪತಿಗರಸಿ ಶಚಿ ಎನಿಪ್ಪ ನಾಮದಿಂದಲೆಸೆಯೆ
ಇರ್ಪನಲ್ಲಿ ಸಕಲ ಭೂಪರೆಲ್ಲ ತನಗೆ ಸೆಡೆದು ಕುಸಿಯೆ
ಧರೆಗೆ ದೇವರಾಜನೆಂಬ ಪೆಸರ ಪೇರ್ಮೆ ಜಸವನೀಯೆ
ಧರಣಿಗೆಲ್ಲ ತನ್ನ ಕೊಡೆಯ ನೆಳಲ ತಣ್ಪು ಸೊಂಪನೀಯೆ
ಮತ್ತ ಗಜದ ಹಯದ ರಥದ ಜನಪದಕ್ಕೆ ಲೆಕ್ಕವಿಲ್ಲ
ವಿತ್ತಪಂಗೆ ಮಿಗಿಲೆನಿಪ್ಪ ಸಂಪದಕ್ಕೆ ಸಂಖ್ಯೆ ಇಲ್ಲ
ಇಂತು ಮೆರೆವ ಸಕಲ ಶೌರ್ಯ ಧೈರ್ಯಭರಿತ ಚರಿತನಾಗಿ
ಕಂತುಹರನ ಪೂಜೆಗೋಜೆಯಿಂದೆ ಬಹಳ ಹರುಷನಾಗಿ
ಪರಿಮಳೋದಕಂಗಳಿಂ ಶಿವಂಗೆ ಮಜ್ಜನಕ್ಕೆ ಕೊಟ್ಟು
ನೆರೆವ ನೂತನ ಪ್ರಸೂನದಿಂದೆ ನಲಿದು ಪೂಜೆಗೊಟ್ಟು
ಕಂಪುವೆತ್ತ ಸರಸ ಧೂಪ ಧೂಮ್ರವೆತ್ತಿ ಬೆಳಗನೆತ್ತಿ
ಇಂಪು ಪರ್ಬಿ ಪಲ್ಲವಿಪ್ಪ ಪುಳಕದಿಂದೆ ಸುತ್ತಿ ಮುತ್ತಿ
ದೇವರಾಜನಮೃತ ರಸವನಳ್ಕರಿಂದೆ ಹಿಂಗದೂಡಿ
ದೇವವೃಂದವಂದಿತಂಗೆ ವೀಳೆಯಂಗಳಿತ್ತು ನೋಡಿ
ದೇವದೇವದೇವ ರಾಜಮೌಳಿ ಕರುಣಿಸೆಂದು
ದೇವ ಗತಿಯೆ ದೇವ ಮತಿಯೆ ದೇವ ಪತಿಯೆ ಕರುಣಿಸೆಂದು

ಸುಖಿಯು ಸುಖವೆ ಸುಖದವುುಖವೆ ನಿಖಿಳ ನಿಧಿಯೆ ಕರುಣಿಸೆಂದು
ಅಖಿಳ ವರನೆ ಕಲ್ಪತರುವೆ ಸಕಳ ಗುರುವೆ ಕರುಣಿಸೆಂದು
ಮುತ್ತು ಮಾಣಿಕಂಗಳಿಂದೆ ಮಕರತೋರಣಂಗಳೊಪ್ಪೆ
ಇತ್ತ ನೋಡಿ ಮತ್ತೆ ನೋಡಿ ಮರಳಿ ನೋಡಿ ನೇಹ ಒಪ್ಪೆ
ಶಿವನನರ್ಚಿಸುತ್ತಮಿರ್ಪನಮಮ ದೇವರಾಜನಿಂತು
ಭುವನವಂ ಪ್ರತಾಪದಿಂದೆ ಪಾಲಿಸುತ್ತುಮಿರ್ಪನಿಂತು

ಒರ್ಮೆಯುಂ ವಸಂತವೊರ್ಮೆಯುಂ ಸುವೃಷ್ಟಿ ದೇಶದೊಳಗೆ
ಒರ್ಮೆಯುಂ ವಿವಾಹಮಂಗಳಂಗಳಲ್ಲಿ ದೇಶದೊಳಗೆ
ಕುಜನರಿಲ್ಲ ಸುಜನರುಂಟು ಬಡವರಿಲ್ಲ ಒಡೆಯರುಂಟು
ರುಜೆಗಳಿಲ್ಲ ಭುಜಗಳುಂಟು ದೀನರಿಲ್ಲ ದಾನರುಂಟು
ಖೂಳರಿಲ್ಲ ಜಾಣರುಂಟಗಲ್ವರಿಲ್ಲ ಒಲ್ವರುಂಟು
ಢಾಳರಿಲ್ಲ ಶುಚಿಗಳುಂಟು ಹುಸಿವರಿಲ್ಲ ಸತ್ಯರುಂಟು
ಪಾಪವಿಲ್ಲ ಪುಣ್ಯ ಉಂಟು ಕೋಪವಿಲ್ಲ ಸಮತೆಯುಂಟು
ತಾಪವಿಲ್ಲ ತಣ್ಪು ಉಂಟು ಕೋಪವಿಲ್ಲ ಸಮತೆಯುಂಟು
ಭವಿಗಳಿಲ್ಲ ಭಕ್ತರುಂಟು ತರ್ಕವಿಲ್ಲ ಪೂಜೆಯುಂಟು
ತವಕವಿಲ್ಲ ಹದುಳ ಉಂಟು ಬೇಳ್ವರಿಲ್ಲ ಕೊಡುವರುಂಟು
ಇಂತು ತನ್ನ ದೇಶದೊಳಗೆ ಸಕಲ ಸುಖದ ಸುಕೃತನಾಗಿ
ಕಂತು ಮಾರಲಣ್ಮದಿರ್ಪ ನಿರ್ವಿಕಾರ ಭರಿತನಾಗಿ
ಹರುಷದಿಂದನೇಕ ವತ್ಸರಂಗಳೊಳಗೆ ಸುಖದೊಳಿರ್ಪ

ಇರುತಲೊಂದು ದಿವಸದೊಳ್ಪುರಾಣಗೋಷ್ಠಿಯಿಂದ ಮಿರ್ದು
ಪುತ್ರರಿಲ್ಲದಿರ್ಪವಂಗೆ ಲೋಕವಿಲ್ಲ ತಪ್ಪದೆಂದು
ಪುತ್ರಕಾಮ್ಯವಂ ಕರಂ ಪುರಾಣ ವಿಪ್ರರೆಲ್ಲರಂದು
ಪೇಳಲರಿದು ಸುತನ ಬಯಕೆ ಭಾವದೊಳಗೆ ಸುಳಿದು ಬೆಳೆದು
ಭಾಳನಯನದಿಂದೆ ಪಡೆವೆನೆಂದು ಚಿತ್ತವೆಳೆದು ಸೆಳೆದು
ಶಿವಚತುರ್ದಶಿ ದಿನಂ ಬರಲ್ಕೆ ಶಿವನ ನಿಳಯದೊಳಗೆ
ತವಕಿಸುತ್ತೆ ದೇವರಾಜನೈದೆ ಬಂದು ಭವನದೊಳಗೆ
ತನ್ನ ಶಚಿ ಎನಿಪ್ಪ ಸತಿಯನಲ್ಲಿ ಬರಿಸಿ ಶುಚಿಗಳಾಗಿ
ಉನ್ನತ ಪ್ರಮೋದ ವಿಮಳ ಭಕ್ತಿಯುಕ್ತ ಚಿತ್ತರಾಗಿ

ಶಂಕರಂಗೆ ಸಕಲ ಮಜ್ಜನಾದಿ ಪೂಜೆಯಂ ನಿಮಿರ್ಚಿ
ಬಿಂಕದಿಂದೆ ಕನಕ ರತ್ನರಾಶಿಗಳನೆ ಹತ್ತಿ ಸಾರ್ಚಿ
ಭೂಮಿಯಂ ಸುವಸ್ತುವಂ ಸಮಸ್ತ ಶರಣ ವಿತತಿಗಿತ್ತು
ಹೇಮಮಂ ನವೀನ ರತ್ನ ನಿಕರದಿಂದೆ ತಣಿಯಲಿತ್ತು
ಇರ್ದರೇಕವಿಂಶತಿ ಪ್ರಮಾಸರುಂ ನಿವಾಸರಾಗಿ
ಇರ್ದರಲ್ಲಿ ಚಂದ್ರಧರನ ಮುಂದೆ ಪುತ್ರಕಾಮ್ಯರಾಗಿ

ಇರೆ ಹರಂ ಪ್ರಸನ್ನನಾಗಿ ಲಿಂಗದೊಳಗೆ ತೋರುತಲ್ಲಿ
ಪರಮಮೂರ್ತಿ ಪಂಚವದನ ದಶಭುಜಂಗಳೊಪ್ಪುತಲ್ಲಿ
ದೇವರಾಜ ಬೇಡಿಕೊಳ್ಳದೇನನೆಳಸಿ ಬಂದು ನಿಂದೆ
ಆವ ಕೊರತೆ ನಿನಗೆ ಎನಗೆ ಪೇಳು ಮಗನೆ ಕೊಡುವೆನಿಂದೆ
ಎಂದು ಕರುಣಿಸಲ್ಕೆ ಭೋಂಕನೆಳ್ದು ಬಂದು ದೇವದೇವ
ಕಂದನೋರ್ವನಂ ವಿರಾಜಿಸಲ್ಕೆ ಕರುಣಿಸೆನಗೆ ದೇವ
ಎಂದೊಡರಸ ಕೇಳು ನಿನಗೆ ಪುತ್ರರಪ್ಪ ಭಾಗ್ಯವಿಲ್ಲ
ಕಂದನೆಂತು ಬರ್ಪನಯ್ಯ ಮುನ್ನ ಕೊಟ್ಟ ಪುಣ್ಯವಿಲ್ಲ
ಎಂದು ಬೆಸಸೆ ದೇವರಾಜನಹಹ ಶಿವನೆ ಲೇಸು ಲೇಸು
ಇಂದು ಬೆಸಸಿತಕ್ಕೆ ಮೆಚ್ಚಿದೆಂ ಪುರಾರಿ ಲೇಸು ಲೇಸು
ನಿಮ್ಮ ಕಣ್ಗಳೆವೆಯ ಕೊನೆಯ ಮೊನೆಯ ಚಲನೆಯಿಂದೆ ಕೋಟಿ
ಬೊಮ್ಮ ವಿಷ್ಣು ಇಂದ್ರ ಚಂದ್ರರಾದಿಯಾದ ದೇವಕೋಟಿ
ಪುಟ್ಟಿಗೆಂದೊಡೆನಗೆ ಮಾನಿಸಂಗೆ ಮಗನನಿಲ್ಲೆನಲ್ಕೆ
ದಿಟ್ಟ ಮೂರರೊಡೆಯ ನೀನೆ ಬಂದು ಪುತ್ರ ನಿಲ್ಲೆನಲ್ಕೆ
ಸಕಲ ಮುನಿಜನಂಗಳುಂ ಪುರಾಣಪುರುಷವಿತತಿ. ನಗವೆ
ಸಕಲವೇದ ಶಾಸ್ತ್ರವುಂ ಶಿವಾಗಮಂಗಳೆಲ್ಲ ನಗವೆ
ದೇವದೇವ ತೊಳ್ತಿನೊಡನಿದೇಕೆ ಸರಸವಿಂತು ಬೇಡ
ದೇವ ಸುಧೆಯ ಕರುಣಿ ಕರುಣಿಸೆನಗೆ ಬಾಲಚಂದ್ರಚೂಡ
ಎಂಬ ದಿಟದ ಬಿನ್ನಪಕ್ಕೆ ಶಂಭು ಕರುಣದಿಂದೆನೋಡಿ
ನಂಬಿ ದೇವರಾಜನೊಡನೆ ನುಡಿದ ನಕ್ಕು ರಿಂದೆ ಕೂಡಿ
ಧರಣಿಯೊಳ್ಕತಾಯುವೆನಿಪ ಮೂರ್ಖನಪ್ಪಕಂದನೋರ್ವ
ಅರಸ ಕೇಳು ಷೋಡಶಾಯುವೆನಿಪ ಸರ್ವ ಕುಶಲನೋರ್ವ
ಈರ್ವರೊಳಗದಾರನೀವೆನೊಲ್ದು ಬೇಡು ಬೇಡೆನಲ್ಕೆ

ಸರ್ವ ಗುರುವೆ ಷೋಡಶಾಯುವೆನಿಸ ಮಗನನೀಯೆನಲ್ಕೆ
ಎನೆ ಸದಾಶಿವಂ ಸುಪುತ್ರನಂ ಧರಾಧಿಪಂಗೆ ಕೊಟ್ಟು
ಮನಸಿಜಾರಿ ನಿಜನಿವಾಸಕ್ಕೆ ಪೋಗೆ ಸಂತವಿಟ್ಟು

ಇತ್ತಲೊಸೆದು ದೇವರಾಜನರಸಿವೆರಸು ಪುರಕೆ ಬಂದು
ಚಿತ್ತದೊಳಗೆ ಪುತ್ರನಲ್ಲಿಯೊಲ್ಮೆಯಿಂದೆ ನೆಲಿಸಿ ನಿಂದು
ಚಿಂತೆಗೆಟ್ಟು ಸಂತಸಕ್ಕೆ ಮನವನಿತ್ತು ಮಹಿಮೆವೆತ್ತು
ಸಂತತಂ ವರಪ್ರಸಾದ ಸುಖವನಕ್ಕರಿಂದೆ ಪೊತ್ತು
ಇರಲಿರಲ್ಕೆ ಸಚ್ಚರಿತ್ರ ಶಚಿಗೆ ಗರ್ಭ ಉದಯಿಸಿತ್ತು

ಹರನ ಕರುಣವೆಯ್ದೆ ತರುಣಿಯುದರದೊಳಗೆ ರಂಜಿಸಿತ್ತು
ಹೊರಗೆ ನಳನಳಿಪ್ಪ ದೇಹದವಯವಂಗಳಲ್ಲಿ ಕೂಡಿ
ಮೆರೆವ ತನುಮರೀಚಿಗರ್ಭಸೂಚನೆಗಳನುಂಟು ಮಾಡಿ
ನೀಳ ಕುಂತಳಂ ನಿಮಿರ್ಚಿ ತೀವಿ ತೆಕ್ಕೆಗೊಂಡು ನೆಗಳೆ
ತೋಳ ಮೊದಲ ಕರ್ಪುರ ಕುಸುಮಶರನ ಬಾಳ ಹೊಗರನುಗುಳೆ
ನಡೆಗಳಿಂ ಬಳಲ್ದು ಬೆಮರ ಬಿಂದು ಮುಖದೊಳೊತ್ತುಗೊಂಡು
ನುಡಿಗಳೆಲ್ಲ ಮೆಲ್ಪಿನತ್ತ ಹೊದ್ದಿ ಹೊಳೆದು ತೆಳ್ಪುಗೊಂಡು
ನಯನಕಾಂತಿ ನಸು ಬಳಲ್ದು ಕರುಣರಸವನೊಪ್ಪುಗೊಂಡು
ಬಯಕೆ ಫಲಿಸಿ ಮನವನೊಲಿಸಿ ಚಿತ್ತದೊಳಗೆ ಇಂಬುಗೊಂಡು
ಕನಕಕಳಶಮುಖವು ನೀಲದಚ್ಚು ಮುಚ್ಚುಳೊಪ್ಪುವಂತೆ
ಘನಪಯೋಧರಗ್ರಚೂಡ ಚೂಚಕಂಗಳೊಪ್ಪುವಂತೆ
ಬಾಸೆ ಕಮಳನಾಳದಂತೆ ನಡುವೆ ಸೂಸದಡರೆ
ಲೇಸೆನಿಪ್ಪ ಮಧ್ಯವಳಯವೆಸೆಯುಲೋವಿ ತೀವಿ ಪೊಡರೆ
ಹೊಳೆವ ನಾಭಿ ಗುಣ್ಪನೊಕ್ಕು ಮಿಕ್ಕು ಹಿಂಗದೊಳಗುದೋರೆ
ತೊಳಪ ತ್ರಿವಳಿ ಸೀಮೆಗೆಟ್ಟು ಬಟ್ಟ ನಡುವಿನಿಂದೆ ಹಾರೆ
ಇಟ್ಟ ಮುತ್ತಿನೋಲೆ ಚಂದ್ರಬಿಂಬದಂತೆ ಬಳಸಿ ಹೊಳೆಯೆ
ತೊಟ್ಟ ತೊಡಿಗೆ ತಮ್ಮ ತಮ್ಮ ತಾಣದೊಳಗೆ ಬೆರಸಿ ಬೆಳೆಯೆ
ಕೆಂದಳಂಗಳೊಪ್ಪಿ ಘನನಿತಂಬಕಾಂತಿಯುಡಿಗೆ ಮೆರೆಯೆ
ಚಂದದೂರುದಂಡರೋಚಿ ಕಣ್ಗೆ ಸವಿಯ ಥಾಳವೀಯೆ
ಹಜ್ಜೆಯಿಂದೆ ಹಂಸೆ ಮುಂಚೆ ಮೆಲ್ಲಮೆಲ್ಲನಡಿಯನಿಡುತೆ

ಗುಜ್ಜುಗೊಂಡ ನಡೆಗಳಡಿಗೆ ತೊಡವೆನಲ್ಕೆ ನಡೆದು ನಿಲುತೆ
ಬಪ್ಪ ರೂಪು ದೇವರಾಜನೃಪನ ಕಣ್ಗೆ ನಯಮನುಗುಳೆ
ಒಪ್ಪುವಬಳೆಯುರ್ಕಳಿಂಬುಗೊಂಡು ನಡೆವ ಚಲ್ವು ನೆಗಳೆ

ಇಂತು ಶಚಿಗೆ ಸಾನುರಾಗದಿಂದೆ ಗರ್ಭ ಚಿಹ್ನವಾಗೆ
ಮುಂತೆ ಬರಬರಲ್ಕೆ ಪಕ್ಷ ಮಾಖದ ನವಮ ಮಾಸವಾಗೆ
ಬೀಜದೊಳಗೆ ಕಲ್ಪತರುವಿನಂಕುರಂ ವಿರಾಜಿಸಂತೆ
ಓಜೆಯಿಂದೆ ಮೇಘದೊಳಗೆ ಚಂದ್ರಕಾಂತಿ ಬೆಳಗುವಂತೆ
ಚಂದ್ರಕಾಂತಘಟದ ನಡುವೆ ಬೆಳಗುತಿರ್ಪ ಪರುಸದಂತೆ
ಸಾಂದ್ರ ಭಕ್ತಿಯುದರದೊಳಗೆ ತೊಳಗುವರಿವಿನುಳುಮೆಯಂತೆ
ಕೊಳದ ಕಮಳದುದರದೊಳಗೆ ಬಳೆವ ಬಾಲಹಂಸನಂತೆ
ತಿಳಿದ ಗರ್ಭದೊಳ್ಕುಮಾರಸಾರ ಹೃದಯನೊಪ್ಪುತಿಂತೆ
ಉದಯವಾಗಲೊಂದು ನೆನೆದು ನೋಡಿ ಜನನಿಯುದರದೊಳಗೆ
ಉದಯಿಸುತ್ತುಮಿರ್ದನಖಿಳಸಂಪದಂ ಧರಿತ್ರಿಯೊಳಗೆ
ಸಕಲ ಶರಣ ಹೃದಯದಲ್ಲಿ ಭಕ್ತಿಯಲ್ಲಿಯುದಯವಾಗೆ
ಸಕಲ ಬುಧರ ತಿಳಿದ ಚಿತ್ತದಲ್ಲಿ ಪುಣ್ಯ ಉದಯವಾಗೆ
ಮಳೆಯು ದೇಶದೊಳಗೆ ಹಿಂಗದುತ್ಸವಂಗಳುದಯವಾಗೆ
ಇಳೆಗೆ ತಣ್ಪು ಸೊಂಪು ಹೇಂಪು ನುಣ್ಪು ಬಿಣ್ಪು ಉದಯವಾಗೆ

ಉದಯವಾದನಮುಮ ವರಕುಮಾರಕಂ ಸುಗರ್ಭದಿಂದೆ
ಉದಯವಾದನರುಣ ತರುಣ ತರಣಿಯುದಯಿಪಂದದಿಂದೆ
ಆಗಳಲ್ಲಿ ಗುಡಿಯನೆತ್ತಿ ದಾದಿಯುನ್ನೃಪಂಗೆ ಪೇಳೆ
ರಾಗ ಉಕ್ಕಿ ಮಿಕ್ಕು ತನುವನುಣ್ಮಿ ಪೊಣ್ಮಿ ಪುಳುಕವೇಳೆ
ದೇವರಾಜನಲ್ಲಿ ಹೊದ್ದುದಂ ತೆರಳ್ಚಿ ಗುಡಿಯನೆತ್ತಿ
ಭಾವಕೀ ಜನಂಗಳುರ್ಬಿ ಕೊರ್ಬಿ ಮುಡಿಯ ಗುಡಿಯನೆತ್ತಿ
ಪುರಕೆ ಪರಕೆ ಗತಿಯೆನಿಪ್ಪ ಬಾಲಕಂಗೆ ಗುಡಿಯನೆತ್ತಿ
ದುಂದುಭಿಸ್ವನಂಗಳೊಳ್ಮೃದಂಗ ಶಂಖನಾದದೊಳಗೆ
ಬಂದು ನೆರೆದ ವಂದಿಜನದ ಜಯ ಜಯ ಪ್ರಣಾದದೊಳಗೆ
ಪುರಜನಂಗಳೊಳಗೆ ಪಾಲು ತುಪ್ಪದೋಕುಳಿಗಳನಾಡಿ
ಪರಮಭಕ್ತನೆನಿಪ ಶಿಶುಗೆ ಜಾತಕರ್ಮವೆಸೆಯೆ ಮಾಡಿ

ಪರಿಪೂರ್ಣವು, ಏಕವಾದದ್ದು, ಸೂಕ್ಷ್ಮವು, ಪರಕ್ಕೆ ಪರವಾದದ್ದು, ಅಪಕ್ವ ಸ್ಥಿತಿ ರಹಿತವು, ಉಪಮೆಗೆ ನಿಲುಕದ್ದು, ಭಾವದಿಂದ ಮಾತ್ರ ಕಾಣತಕ್ಕದ್ದು, ಜಡರಹಿತವು, ಹೀಗೆ ಈ ಶಿವತತ್ವವು ಇದೆ. ಇದರ ಸಂಸ್ಫುರಣವೇ ಮಹಾಲಿಂಗವು, ಅಥರ್ವಣ ವೇದದಲ್ಲಿ ಶಿವನು ಪರಕ್ಕೆ ಪರನಾಗಿದ್ದಾನೆ, ಸೂಕ್ಷ್ಮನಾಗಿದ್ದಾನೆ, ಸೂಕ್ಷ್ಮನಲ್ಲದೆ ನಿತ್ಯನು, ಸರ್ವದರಲ್ಲಿಯೂ ಇರತಕ್ಕವನು, ಅವ್ಯಯನು, ನಿಂದೆಗೆ ನಿಲುಕದವನು, ಉಪಮಾರಹಿತನು, ಇಂತಿಷ್ಟು ಪ್ರಮಾಣದವನೆಂದು ಹೇಳಲಿಕ್ಕೆ ಬಾರದವನು, ಪರಿಶುದ್ಧನು ಇದ್ದದರಿಂದ ಶಿವನೆಂಬ ಹೆಸರುಳ್ಳವನು, ಉಧ್ರ್ವನು, ಪರಕ್ಕೆ ಪರನು ಇರುವನು. ಸಾಮವೇದದಲ್ಲಿ ಪರಮಾತ್ಮನಿಗೆ ಅಂತವಿಲ್ಲ, ಅವನು ಧ್ಯಾನಕ್ಕೆ ನಿಲುಕದವನು, ಒಬ್ಬನೇ ಇದ್ದಾನೆ, ಅವನು ಹೊದೆಯುವ ಬಟ್ಟೆಗಳು ಅಷ್ಟ ದಿಕ್ಕುಗಳೇ ಇವೆ, ಲೋಕಕೆಲ್ಲಕ್ಕೆ ಒಡೆಯನು, ಅವನಿಗೆ ಆಭರಣವು ಮಹಾಶೇಷನು ಇದ್ದಾನೆ, ಅವನಿಗೆ ಹುಟ್ಟು ಇಲ್ಲ, ಬಹಳ ಹಿಂದಿನವನು, ಇಂಥವನಿದ್ದು ಇವನಿಗೆ ನಮಸ್ಕಾರವೆಂಬ ವರ್ಣನೆಯು ಇದೆ. ಲಿಂಗವು ಸಣ್ಣದರಲ್ಲಿ ಸಣ್ಣದು, ದೊಡ್ಡದರಲ್ಲಿ ದೊಡ್ಡದು ಎಂದು ಶೃತಿಯಲ್ಲಿ ಹೇಳಿದೆ. ಶಿವಧರ್ಮ ಪುರಾಣದಲ್ಲಿ, ಆಕಾಶವೇ ಅದರ ತುದಿ, ಪೃಥ್ವಿಯೇ ಅದರ ಪೀಠ, ಹೀಗೆ ಲಿಂಗವಿದ್ದು, ಹುಟ್ಟಿದ ಎಲ್ಲ ಪದಾರ್ಥಗಳು ಅದರಲ್ಲಿ ಲಯವಾಗುವದರಿಂದ ಲಿಂಗವೆಂಬ ಹೆಸರು ಅದಕ್ಕೆ ಬಂದಿದೆ ಎಂದು ಹೇಳಿದೆ. ಗಾರುಡ ಪುರಾಣದಲ್ಲಿ ಲಿಂಗದಲ್ಲಿಯೇ ಎಲ್ಲ ಜಗತ್ತು, ತ್ರಿಲೋಕದಲ್ಲೆಲ್ಲಿಯೂ ಲಿಂಗವು ಇದೆ, ಅಲುಗಾಡುವದೂ ಅಲುಗಾಡದೆ ಇರುವದೂ ಇದರಲ್ಲಿಯೇ ಇವೆ, ಲಿಂಗದ ಹೊರಗೆ ಆವುದೂ ಇಲ್ಲ, ಇಂಥ ಶ್ರೇಷ್ಠ ವಸ್ತುವಿಗೆ ನಮಸ್ಕಾರವೆಂದು ಹೇಳಿದೆ. ಯಜುರ್ವೇದದಲ್ಲಿ ವಿಶ್ವವೇ ಲಿಂಗಕ್ಕೆ ಕಣ್ಣಾಗಿದೆ, ಅದೇ ಅದರ ಮುಖ, ಬಾಹು, ಕಾಲು ಆಗಿವೆ. ಇದೇ ಸ್ವರ್ಗ, ಪೃಥ್ವಿ, ಪಾತಾಳ, ಸುಖಸಂಪತ್ತುಗಳು ಆಗಿವೆ. ಗಾಯತ್ರೀ ಮಂತ್ರದಲ್ಲಿಯೂ ಇದೇ ಭಾವವು ಬಂದಿದೆ. ಗಾರುಡ ಪುರಾಣದಲ್ಲಿ ಲಿಂಗ ಮಧ್ಯದಲ್ಲಿ ಜಗತ್ತು ಇದೆ, ತ್ರಿಲೋಕಗಳಿವೆ, ಎಲ್ಲ ಚರಾಚರ ವಸ್ತುಗಳು ಇವೆ, ಲಿಂಗದ ಹೊರಗೆ ಆವುದೂ ಇಲ್ಲ, ಅಂಥ ಲಿಂಗಕ್ಕೆ ನಮಸ್ಕಾರವು ಎಂದು ಹೇಳಿದೆ. ಯಜುರ್ವೇದದಲ್ಲಿ ವಿಶ್ವವೆಲ್ಲವೂ ಕಣ್ಣು ವಿಶ್ವವೆಲ್ಲವೂ ಮುಖ, ವಿಶ್ವವೆಲ್ಲವೂ ಬಾಹು, ವಿಶ್ವವೆಲ್ಲವೂ ಕಾಲು, ಆತನೊಬ್ಬನೇ ಇದ್ದಾನೆ ಎಂದು ಹೇಳಿದೆ. ಸ್ಕಂದ ಪುರಾಣದಲ್ಲಿ ಯಾವ ವಸ್ತುವಿನಲ್ಲಿ ಯಾವತ್ತು ಅಡಗಿರುತ್ತದೋ ಯಾವುದರಿಂದ ಅದು ಹೊರ

ಷಡುತ್ತದೋ, ಯಾವದು ಚರಾಚರ ವಸ್ತುವೋ ಅದೇ ಲಿಂಗವೆನಿಸಿಕೊಳ್ಳಲ್ಪಡುತ್ತದೆಂದು ಲಿಂಗಪಾರಾಯಣರು ಹೇಳುತ್ತಾರೆಂದು ಕಾಣಿಸಿದೆ. ಜ್ಞಾನ ವೈಭವ ಖಂಡದಲ್ಲಿ ಲಿಂಗ ಶಬ್ದದಲ್ಲಿಯ 'ಲ' ಕಾರವು ಲೀನ ಎಂಬರ್ಥವನ್ನು 'ಗ' ಕಾರವು ಸೃಷ್ಟಿ ಎಂಬ ಅರ್ಥವನ್ನೂ ಕೊಡುವದರಿಂದ ಲಿಂಗ ಎಂಬ ಶಬ್ದವಾಗಿದೆ ಎಂದು ಹೇಳಿದೆ. ಮಹಿಮ್ನದಲ್ಲಿ ಲಿಂಗದ ವಿಷಯವನ್ನು ಶೃತಿಗಳು ಬೆರಗಾಗಿ ಹೇಳುತ್ತಿವೆ ಎಂದು ಬರೆದಿದೆ. ಶಿವಧರ್ಮೋತ್ತರದಲ್ಲಿ ಯಾವದರ ನಿಜ ತತ್ವವನ್ನು ಬ್ರಹ್ಮ ಮೊದಲಾದ ದೇವತೆಗಳು ಅರಿಯರೋ ಅಂಥ ಈ ವಸ್ತುವು ಅತ್ಯಂತ ಮೇಲಿನ ಸ್ಥಿತಿಯನ್ನು ಹೊಂದಿದೆ ಎಂತಲೂ ಪುರುಷ ಸೂಕ್ತದಲ್ಲಿ ಜಗತ್ತನ್ನು ಮೀರಿ ಹತ್ತು ಬೆರಳು ಮುಂದೆ ಅದು ಚಾಚಿದೆ ಎಂತಲೂ, ಉಪನಿಷತ್ತಿನಲ್ಲಿ ಯಾವದು ಮಾತಿಗೆ ಹಾಗೂ ಮನಸ್ಸಿಗೆ ಮೀರಿದ್ದಿರುತ್ತದೋ ಅಂಥ ಲಿಂಗವು ಎಂತಲೂ ಕೂರ್ಮಪುರಾಣದಲ್ಲಿ ವಾಕ್ಕು ಮನ ಭಾವ ಇವುಗಳಿಗೆ ಮೀರಿದ್ದೂ, ಶುದ್ಧವೂ, ವರ್ಣ ಮತ್ತು ಅಕ್ಷರವಿಲ್ಲದ್ದೂ, ನಿತ್ಯವೂ, ಆಗಿದ್ದು ಇದನ್ನು ಯೋಗಿಗಳು ಯಾವಾಗಲೂ ಧ್ಯಾನಿಸುತ್ತಾರೆಂದು ಹೇಳಿದೆ. ಋಗ್ವೇದದಲ್ಲಿ ಕೂಡ ಇದರ ವರ್ಣನೆಯು ಬಂದಿದೆ. ಇದು ನನ್ನ ಹಸ್ತವು, ದೈವತವು, ಜಗದ್ವ್ಯಾಪಿಯು, ಶುಭವನ್ನು ಕೊಡುವಂತಹದು. ಇದೇ ನನ್ನ ತಾಯಿಯು ತಂದೆಯು ಜೀವವು ಎಂಬ ಅಭಿಪ್ರಾಯವು ಇದೆ. ಉತ್ತರವಾತುಳದಲ್ಲಿ ಲಿಂಗವು ಒಳಗೂ ಹೊರಗೂ ವ್ಯಾಪಿಸಿದೆ. ಸಾಕ್ಷಾದ್ವಸ್ತುವು, ಜ್ಯೋತಿರೂಪವು, ಎಲ್ಲದಕ್ಕು ಮೀರಿದ್ದು ಎಂದು ಇದೆ. ಅದು ಎಳ್ಳಿನಲ್ಲಿಯ ಎಣ್ಣೆಯಂತೆ ಅರಣ್ಯದಲ್ಲಿಯ ಅಗ್ನಿಯಂತೆ, ಹಾಲಿನಲ್ಲಿಯ ತುಪ್ಪದಂತೆ ವ್ಯಾಪಿಸಿರುತ್ತದೆ. ಪರಮಾತ್ಮನು ಅತ್ಯಂತ ಸ್ಥಿರನು. ಅವನಿಗೆ ಇದಿರೆಂಬುದಿಲ್ಲ, ಅವನೊಬ್ಬನೇ ಪುರುಷನು, ಜಗದ್ವ್ಯಾಪಿಯು, ಅತ್ಯಂತ ತೇಜಸ್ಸುಳ್ಳವನು, ಜ್ಞಾನರೂಪನು, ಎಲ್ಲ ಅಂಗಗಳಲ್ಲಿ ವಾಸಿಸುವಂತಹನು, ಅದ್ವಯನು ಎಂತಲೂ ಇದರಲ್ಲಿ ಇದೆ. ಲೈಂಗ್ಯಪುರಾಣದಲ್ಲಿ ಲಿಂಗದೊಳಗೆ ದೃಷ್ಟಿಸಂಯೋಗವಾಗಲು ಜ್ಞಾನವು ಉದ್ಭವಿಸುತ್ತದೆ, ಪರಮಾತ್ಮನು ಮಂತ್ರರೂಪನಾಗಿರುತ್ತಾನೆ, ಮಂತ್ರಮೂಲಕವೇ ದೀಕ್ಷೆಯು ಎಂಬ ಅಭಿಪ್ರಾಯವಿದೆ. ಸೌರಪುರಾಣದಲ್ಲಿ ಹಸ್ತಮಸ್ತಕ ಸಂಯೋಗದಿಂದ ಕಲೆಯು ಉದ್ಭವಿಸುತ್ತದೆ, ಗುರುವು ಕರ್ಣದಲ್ಲಿ ಉಪದೇಶಿಸುವನು, ಉಪದೇಶದಿಂದ ಮಾಂಸಪಿಂಡವು ಹೋಗಿ ಮಂತ್ರಪಿಂಡವಾಗುವದು, ಶಿಷ್ಯನ ಕಯ್ಯಲ್ಲಿ ದೀಕ್ಷೆಯ ಮೂಲಕ ಪರಮಾತ್ಮನು ತಲೆದೋರುತ್ತಾನೆ. ಎಂದು ಇದೆ. ಕಾಳಿಕಾ

ಖಂಡದಲ್ಲಿ, ಅಂಗದಲ್ಲಿ ಶಕ್ತಿಯಾಗಿಯೂ ಲಿಂಗದಲ್ಲಿ ಆ ಶಕ್ತಿಯೇ ಭಕ್ತಿಯಾಗಿಯೂ ಮುಖದಲ್ಲಿ ಪ್ರಸಾದರೂಪಾಗಿಯೂ, ಪ್ರಸಾದವೇ ಆನಂದರೂಪಾಗಿಯೂ, ಆ ಆನಂದವೇ ತಾನಾಗಿಯೂ ಇರುವದೇ ಲಿಂಗದ ಸ್ವಭಾವವು ಎಂದು ಹೇಳಿದೆ. ಶಂಕರಸಂಹಿತೆಯಲ್ಲಿ ಲಿಂಗವು ಹಸ್ತಾಂಬುಜಪೀಠ ಮಧ್ಯದಲ್ಲಿ ಇದ್ದುಕೊಂಡು ಅಲ್ಲಿ ಪರಮಾತ್ಮ ಚಿನ್ಹವಾಗಿದ್ದುಕೊಂಡಿದೆ. ಈ ಒಂದನ್ನೇ ಅತ್ಯಂತ ಪೂಜ್ಯ ಮನಸ್ಸಿನಿಂದ ಪೂಜೆಮಾಡತಕ್ಕದ್ದು. ಇದರಲ್ಲಿ ಒಳಗೂ ಹೊರಗೂ ಏನೊಂದು ಭೇದವಿಲ್ಲ. ವೀರಾಗಮದಲ್ಲಿ ಭಾವದಲ್ಲಿ ಪ್ರಾಣದಲ್ಲಿ ಅಂಗದಲ್ಲಿ ಲಿಂಗವು ತುಂಬಿಕೊಂಡು ಅದ್ವಯವಾಗಿದೆ, ಅದೇ ಪರಲಿಂಗಸ್ವರೂಪವಾಗಿದೆ, ಇದೇ ಅಂಗದಲ್ಲಿ ಸ್ಥಾಪಿಸಲ್ಪಡುತ್ತದೆ ಎಂದು ಹೇಳಿದೆ. ಶಿವರಹಸ್ಯದಲ್ಲಿ ಕರ್ಣದ್ವಾರದಲ್ಲಿ ಗುರು ಉಪದೇಶವಾಗಲು ಅದು ಲಿಂಗವಾಗಿ ಪರಿಣಮಿಸುವದು. ಇದರಲ್ಲಿ ಇಷ್ಟ, ಪ್ರಾಣ, ಭಾವವೆಂದು ಮೂರು ಭೇದಗಳಿವೆ. ಒಂದೇ ಮೂರ್ತಿಯು ಮೂರು ವಿಧವಾಗಿದೆ. ಗುರುಲಿಂಗಜಂಗಮವೇ ಈ ವಿಧಗಳಾಗಿದೆ. ಹೀಗೆ ಗ್ರಂಥಗಳಲ್ಲಿ ಅನೇಕ ಉಕ್ತಿಗಳು ಇವೆ. ಲಿಂಗವು ಗುರುಲಿಂಗಜಂಗಮರೂಪಾಗಿ ದೇಹದಲ್ಲಿದ್ದರೂ ಕರಸ್ಥಲಕ್ಕೆ ಬಂದು ಕರತಲಾಮಲಕವಾಗಿದೆ. ಇದು ನನ್ನ ಪುಣ್ಯ ಭಾಗ್ಯವು. ಇದರ ನಿಜವನ್ನು ಎಲೋ ಪರಮಾತ್ಮನೇ ನೀನೇ ಬಲ್ಲೆ ಎಂದು ಅತ್ಯಂತ ಹರುಷಿತವಾಗಿ ವಚನಕಾರನು ತನ್ನ ಧನ್ಯವಾದವನ್ನು ಮಾಡಿಕೊಂಡಿರುವನು.

# ದೇವರು ಒಬ್ಬನೇ ಇದ್ದಾನೆ.

**ವಿವರಣೆ**— ಹಿಂದಿನ ವಚನಗಳಲ್ಲಿ ಪರಮಾತ್ಮನ ಸ್ವರೂಪವನ್ನು ವಚನಕಾರನು ವರ್ಣಿಸಿ ಆತನು ಒಬ್ಬನೇ ಇದ್ದಾನೆ ಎಂದು ಮುಂದಿನ ವಚನಗಳಲ್ಲಿ ಹೇಳಿರುವನು. ಆದ್ದರಿಂದ ಭಕ್ತನು ಅನೇಕ ದೇವತೆಗಳನ್ನು ಎಂದೂ ಪೂಜೆ ಮಾಡಕೂಡದು. ಪರಮಾತ್ಮನೊಬ್ಬನೇ ಶ್ರೇಷ್ಠನೆಂದು ಭಾವಿಸಿ ಪೂಜಿಸಬೇಕು. ಅನ್ಯ ದೇವತೆಗಳ ಪೂಜೆ ಮಾಡಕೂಡದು. ಹಾಗೂ ಅವುಗಳಿಗೆ ಸಂಬಂಧಿಸಿದ ಗುರುತುಗಳನ್ನು ಇಟ್ಟುಕೊಳ್ಳಬಾರದು. ಹೀಗೆ ವರ್ತಿಸದೆ ಹೋದರೆ ಭಕ್ತನಿಗೆ ಮೋಕ್ಷವು ಪ್ರಾಪ್ತವಾಗಲಾರದು. ಅವನು ಅನೇಕ ಜನ್ಮಗಳಲ್ಲಿ ಬಂದು ಸಂಸಾರದಲ್ಲಿ ತೊಳಲಾಡುವನು ಎಂದು ಮುಂದಿನ ವಚನಗಳಲ್ಲಿ ಹೇಳಿರುವನು.

**ವಚನ**— ೧೩. ಲಿಂಗವಂತ ಲಿಂಗವಂತ ಎಂಬಿರಿ. ಎಂತು ಲಿಂಗವಂತರಾದಿರೋ, ಅನ್ಯ ದೈವದ ಭಜನೆ ಮಾಣದನ್ನಕ್ಕ? ಭವಿಗಳ ಸಂಗವ ಮಾಣದನ್ನಕ್ಕ, ಎಂತು ಲಿಂಗವಂತರಾದಿರೋ ನೀವು? ಅದೆಂತೆಂದೊಡೆ "ಶಿವಾಚಾರ ಸಂಪನ್ನೋ ಅನ್ಯ ದೈವಂ ತು ಪೂಜನಃ। ಶ್ವಾನ ಯೋನಿ ಶತಂ ಗತ್ವಾ ಚಾಂಡಾಲಗೃಹಮಾಚರೇತ್ ॥೧॥ ಅಶನೇ ಶಯನೇ ಯಾನೆ ಸಂಪರ್ಕೇ ಸಹ ಭೋಜನೆ । ಸಂಚರಂತಿ ಮಹಾ ಘೋರೇ ನರಕೇ ಕಾಲಮಕ್ಷಯಂ ॥೨॥ ಇಂತೆಂದುದಾಗಿ ಅನ್ಯ ದೈವ ಭವಿ ಉಳ್ಳನಕ ನೀವು ಲಿಂಗವಂತರೆಂತಾದಿರೋ ಮರುಳುಗಳಿರಾ? ಇದನರಿತು ಭಕ್ತಿಪಥವ ಸೇರದಿರ್ದಡೆ ನೀವೆಂದೆಂದಿಗೂ ಭವಭವದ ಲೆಂಕರು. ಇದು ಕಾರಣ ನಮ್ಮ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಲಿಂಗ ಮುನ್ನವೇ ದೂರವಯ್ಯ.

**ಭಾವ**— ನಾವು ಲಿಂಗವುಳ್ಳವರು ನಾವು ಲಿಂಗವುಳ್ಳವರು ಎಂದು ನೀವು ಅಹಂಕರಿಸಿ ನುಡಿವಿರಿ. ಆದರೆ ನಿಮಗೆ ಅನ್ಯ ದೈವದ ಭಜನೆ ಬಿಡದು. ಈ ಸ್ಥಿತಿಯು ನಿಮಗೆ ಇರುವ ವರೆಗೆ ನೀವು ಲಿಂಗವಂತರಾಗುವ ಬಗೆ ಹೇಗೆ? ಹಾಗೂ ನೀವು ದುರಾಚಾರಿಗಳಾದಂಥ ಮತ್ತು ಭವದಲ್ಲಿ ಮಗ್ನರಾದಂಥ ಜನರ ಸಹವಾಸವನ್ನು ಮಾಡುವಿರಿ. ಈ ಸಹವಾಸವಿರುವ ವರೆಗೆ ನೀವು

ಲಿಂಗವಂತರೆಂಬುದು ಹೇಗೆ? ಧರ್ಮ ಶಾಸ್ತ್ರದಲ್ಲಿ ಶಿವಾಚಾರವುಳ್ಳವರು ಅನ್ಯ ದೈವ ಪೂಜೆ ಮಾಡಬಾರದು. ಮಾಡಿದ್ದಾದರೆ ನೂರಾರು ಬಾರೆ ನಾಯಿಯ ಜನ್ಮದಲ್ಲಿ ಹುಟ್ಟಿ ಹುಟ್ಟಿ ಕಡೆಗೆ ಚಾಂಡಾಲರಾಗಿ ಜನಿಸುವರು ಎಂದು ಹೇಳಿದೆ. ಆದ್ದರಿಂದ ಎಲೋ ಮರುಳುಗಳಿರಾ ನೀವು ಅನ್ಯ ದೈವ ಮತ್ತು ಭವಿಸಂಗ ಇವುಗಳನ್ನು ಬಿಡದ ವರೆಗೆ ನೀವು ಲಿಂಗವಂತರೆನಿಸಿ ಕೊಳ್ಳುವದು ಹೇಗೆ? ಇದನ್ನು ತಿಳಿದುಕೊಂಡು ನೀವು ಭಕ್ತಿ ಪಥವನ್ನು ಹಿಡಿಯಬೇಕು. ಇಲ್ಲದಿದ್ದರೆ ನೀವು ಯಾವಾಗಲೂ ಭವ ಭವದ ಸೇವ ಕರು. ಮತ್ತು ಪರಬ್ರಹ್ಮನ ಪದವನ್ನು ಎಂದೂ ಕಾಣಲಾರಿರಿ ಎಂದು ವಚನಕಾರನು ಇದರಲ್ಲಿ ಹೇಳಿರುವನು.

**ವಚನ:**— ೧೪. ಅರ್ಹತ, ಚಾರ್ವಾಕ, ಬೌದ್ಧ, ಮೀಮಾಂಸಕ, ನೀಲಪಟರೆಂಬವರು ಕಾಯದ ದರ್ಶನಂಗಳಲ್ಲಿ ದೀಕ್ಷಿತರಾಗಿ, ಸೌರ, ಶಾಕ್ತೇಯ ವೈಷ್ಣವ, ಗಾಣಪತ್ಯ, ಕಾಪಾಲಿಕ ದರ್ಶನಂಗಳಂ ಪೊಕ್ಕು ಒಡಲು ಮುಡುಹಂ ಸುಟ್ಟು ಮುಟ್ಟಿಯನಿಟ್ಟು ಉಭಯಗೆಟ್ಟು, ಶಿವಪೂಜೆ ಶಿವಧ್ಯಾನವಿಲ್ಲದೆ ನರಕಕ್ಕಿಳಿದು ಅಧಮರಾಗಿ ಹೋಗಿ ಎಂದು ಹೇಳಿತ್ತೇ ವೇದ? "ಶಿವಾರ್ಚನ ವಿಹೀನೋಪಿ ಜನ್ಮ ಮೃತ್ಯುರ್ನ ಉಚ್ಯತೆ" ಎಂದು ದಾಗಿ, ಮರಳಿ ಮರಳಿ ಜನ್ಮಕ್ಕೆ ಬಂದು ಮಗ್ನರಾಗ ಹೇಳಿತ್ತೇ ವೇದ? "ಓಂ ಅಪ್ರಶಿಖಾಯಾಂ ತ್ವಮಯಾ ಜೀವಾಗಮಾತ್" ಇಂತೆಂಬ ಶೃತಿ ಯರ್ಥವು, ಹೋತನ ಕೊಂದು ಹೋಮುವ ಬೇಳಿ ಚಾಂಡಾಲರಾಗ ಹೇಳಿತ್ತೇ ವೇದ? ಸಾಕ್ಷಿ ಶ್ಲೋ॥ ಶಿವಾರ್ಚಕ ಪದದ್ವಂದ್ವ ಮರ್ಚನೋದ್ಧಾರ ಣಾದಪಿ॥ ಶಿವನಾಮ ಸದಾಕಾಲಂ ಜಪೇದ್ವಿಪ್ರಸ್ಯ ಲಕ್ಷಣಂ॥ ಎಂಬರ್ಥ ವರಿಯದೆ ನರಕಕ್ಕಿಳಿಯ ಹೇಳಿತ್ತೇ ವೇದ? ಶೃತಿ॥ ಏವಂ ರುದ್ರಾಣಾಂ ವಿಶ್ವ ದೇವತಾನಾಂ ರುದ್ರಪಾದೇ ದತ್ತಮಸ್ತು ಎಂದುದಲ್ಲದೆ ವಿಷ್ಣು ಪಾದೆ ದತ್ತಮಸ್ತು ಎಂದುಳ್ಳೊಡೆ ಹೇಳಿರೆ? ಕಾಶೀ ಖಂಡದಲ್ಲಿ ಹೇಳಿದ ಪುರಾ ಣದರ್ಥದ ಹಾಗೆ ವ್ಯಾಧನ ಕೈಯಿಂದ ವಿಷ್ಣು ಹತನಾದನೆಂದಡೆ ಪರಿ ಣಾಮಿಸುವರು. ವೀರಭದ್ರ ದೇವರ ಕೈಯ್ಯಿಂದ ವಿಷ್ಣು ಅಳಿದನೆಂದರೆ ಅದು ಮಿಥ್ಯವೆಂಬರು. ಮಹಾಭಾರತದಲ್ಲಿ ವಿಷ್ಣು ಈಶ್ವರಂಗೆ ಬಿನ್ನಹವಂ ಮಾಡಿದುದು ಕೇಳಿರೇ. ಶ್ಲೋ॥ ಮನ್ನಾಥಂ ಲೋಕನಾಥಂ ಚ ಆದ್ಯಕ್ಷರ ಸಮಾಯುತಂ। ಏಕಮೇವ ಮಹಾದೇವಂ ಮಹೇಶಾನಾಂ ಪರಂ ಸ್ಥಿತಿಂ। ಈಶ್ವರಸ್ಯ ಸಮೋ ನಾಸ್ತಿ ಬ್ರಹ್ಮ ವಿಷ್ಣುನಸ್ಯ ಕಿಂಕರಃ। ಶಿವವಾಕ್ಯ ಸಮೋ

ನಾಸ್ತಿ ವೇದ ಶಾಸ್ತ್ರಗಮೋಽಪುಚ ॥ ಇಂತೆಂಬ ಮಹಾವಿಷ್ಣುವಿನ ಮಹಾ ಭಾರತವ ಕೇಳಿಯರಿಯಿರೇ? ಓದಿದ ಮಾತು ತಥ್ಯವೇ? ಅಲ್ಲ. ತಮ್ಮ ಅಧಿದೇವತೆಯಾದ ವಿಷ್ಣುವಿನ ಮಾತು ಮಿಥ್ಯವೆಂಬ ಚಾಂಡಾಲರ ಮುಖವ ನೋಡಲಾಗದು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:—** ಅನೇಕರು ಜಿನದೇವತೆಗಳನ್ನು ಭಜಿಸುವರು. ಬೇರೆ ಕೆಲ ವರು ಚಾರ್ವಾಕರಂತೆ ವರ್ತಿಸುವರು. ಬೌದ್ಧ, ಮೀಮಾಂಸಕ ಶಾಸ್ತ್ರಗಳನ್ನು ನಂಬುವವರೂ ಇರುವರು. ನೀಲಪಟರೆಂತಲೂ ಇರುವರು. ಆದರೆಇವರಾರೂ ಪರಮಾತ್ಮನನ್ನು ಕಾಣರು. ಇವರು ಕೇವಲ ಭವಸಂಬಂಧಿಗಳು. ಇವರು ಮೋಕ್ಷವನ್ನು ಹೊಂದರು. ಅದರಂತೆಯೇ ಸೂರ್ಯನನ್ನು ಪೂಜಿಸುವ ಸೌರರೂ, ವಿಷ್ಣುವಿನನ್ನು ಪೂಜಿಸುವ ವೈಷ್ಣವರೂ, ಗಣಪತಿಯನ್ನು ಪೂಜಿ ಸುವ ಗಾಣಪತ್ಯರೂ, ಕಾಪಾಲಿಕರೂ ಉಂಟು. ಇವರು ತಮ್ಮ ತಮ್ಮ ದರ್ಶ ನಗಳನ್ನು ಓದಿ, ಅವುಗಳಲ್ಲಿ ಮನಸ್ಸಿಟ್ಟು, ಹೊಟ್ಟೆ, ಹಣೆ ಇವುಗಳಲ್ಲಿ ತಪ್ತ ಮುದ್ರೆಗಳನ್ನು ಧಾರಣಮಾಡಿಕೊಂಡು ಕಡೆಗೆ ಇಹಪರಕ್ಕೆ ದೂರಾಗಿ ಹೋಗುವರು. ಇವರಿಗೆ ಶಿವಪೂಜೆ ಶಿವಧ್ಯಾನವಿಲ್ಲ. ಇವರು ಕಡೆಗೆ ನರಕಕ್ಕೆಯೇ ಇಳಿದುಹೋಗುವರು. ಈ ಬಗೆಯಾಗಿ ಭಕ್ತರು ವರ್ತಿಸ ಬೇಕೆಂದು ವೇದವು ಹೇಳಿತ್ತೇ? ಅದು ಹಾಗೆ ಹೇಳಿಲ್ಲ. ಭಕ್ತರು ಶಿವಾ ರ್ಚನೆಯನ್ನು ಬಿಟ್ಟುಕೊಟ್ಟದ್ದಾದರೆ ಜನ್ಮ ಮೃತ್ಯುಗಳು ಹೋಗಲಾರವು ಎಂದು ವೇದಗಳು ಹೇಳಿವೆ. ಹೀಗೆ ವರ್ತಿಸಿದರೆ ತಿರುತಿರುಗಿ ಜನ್ಮಕ್ಕೆ ಬಂದು ಕರ್ಮಗಳನ್ನು ಮಾಡುತ್ತಹೋಗುವರು. ಹೀಗೆ ವೇದಗಳು ಎಂದೂ ನುಡಿದಿಲ್ಲವೆಂದು ವಚನಕಾರನು ಹೇಳಿರುತ್ತಾನೆ. ಬೇರೆ ಕೆಲ ವರು ದೇವರಿಗೆ ಶಾಂತಿಮಾಡಬೇಕೆಂದು ಯಜ್ಞಯಾಗಾದಿಗಳನ್ನು ಮಾಡಿ ಹೋತಿನ ಬಲಿ ಕೊಡುವರು. ಹೀಗೆ ಮಾಡಬೇಕೆಂದು ವೇದಗಳು ಎಂದಾದರೂ ಹೇಳಿರುವವೋ? ಅವು ಹಾಗೆ ಎಂದೂ ಹೇಳಿಲ್ಲ. ಆದರೆ ವಿಪ್ರನಾದವನು ಶಿವಾರ್ಚನೆಯಲ್ಲಿ ನಿರತನಾಗಿರಬೇಕು, ಯಾವಾಗಲೂ ಶಿವನಾಮವನ್ನು ಜಪಿಸಬೇಕು ಎಂದು ಇವು ಹೇಳಿವೆ. ಹಾಗೆಯೇ ರುದ್ರ ನೊಬ್ಬನನ್ನೇ ಭಜಿಸಬೇಕೆಂದು ಶೃತಿಗಳು ಹೇಳುತ್ತವೆ. ಈ ಪ್ರಕಾರ ಉಕ್ತಿಗಳು ಕಾಶೀ ಖಂಡದಲ್ಲಿ ಉಂಟು. ಇದರಲ್ಲಿಯೂ ಮಹಾಭಾರತದ ಲ್ಲಿಯೂ ಶಿವನೇ ಶ್ರೇಷ್ಠನೆಂದು ಹೇಳಿದೆ. ಮತ್ತು ಹಾಗೆ ಕಥಾಂತರ ಗಳೂ ಉಂಟು. ಹೀಗೆ ನಂಬದ ಮತ್ತು ಆಚರಿಸದ ಜನರು ಚಾಂಡಾ

ಲರು ಇಂಥವರ ಮುಖವನ್ನು ನೋಡಲಾಗದೆಂದು ವಚನಕಾರನು ಇಲ್ಲಿ ಹೇಳಿರುವನು.

**ವಚನ**:— ೧೫. ಶಿವಶಿವಾ ಮಹದೇವಾ ಉರಿಲಿಂಗದೇವನೆ ಚಲುವನು. ಶಿವಶಿವ ಮಹದೇವ ಉರಿಲಿಂಗದೇವನೆ ಗುರು. ಶಿವಶಿವ ಮಹದೇವ ಉರಿಲಿಂಗ ದೇವನೆ ಹಿರಿಯನು. ಶಿವಶಿವ ಮಹದೇವ ಉರಿಲಿಂಗದೇವನೆ ಪುರುಷನು. ಶಿವಶಿವ ಮಹದೇವ ಉರಿಲಿಂಗದೇವನೆ ದೇವನು.

**ಭಾವ**:— ಹಿಂದಿನ ವಚನಗಳಲ್ಲಿ ವಚನಕಾರನು ಪರಮಾತ್ಮನೊಬ್ಬನನ್ನೇ ಪೂಜಿಸಬೇಕು, ಅವನೊಬ್ಬನನ್ನೇ ನಂಬಬೇಕು ಎಂದು ಹೇಳಿದೆ. ಪರಮಾತ್ಮನಲ್ಲಿ ಅತ್ಯಂತ ಭಕ್ತಿಭಾವವನ್ನು ಹೊಂದಿದವನಾಗಿ ಈ ವಚನದಲ್ಲಿ ಉರಿಲಿಂಗದೇವನೇ ಚಲುವನು, ಅವನೇ ಗುರುವು ಅವನೇ ಮಹಾದೇವನು, ಅವನೇ ಹಿರಿಯನು, ಅವನೇ ಪುರುಷನು, ಅವನೇ ನಿಜವಾದ ದೇವನೆಂದು ಇದರಲ್ಲಿ ಹೇಳಿರುವನು.

# ಲಿಂಗಧಾರಣೆ.

**ವಿವರಣೆ:**— ಹಿಂದಿನ ವಚನಗಳಲ್ಲಿ ವಚನಕಾರನು ದೇವರೊಬ್ಬನೇ ಇದ್ದಾನೆ ಎಂದು ಪ್ರತಿಪಾದಿಸಿ ಆವನು ಜಗತ್ತಿನಲ್ಲಿ ಹ್ಯಾಗೆ ವ್ಯಾಪಿಸಿರುವನು ಎಂಬದನ್ನೂ ನಿರೂಪಿಸಿದ್ದಾನೆ. ಈ ವಿಧವಾಗಿರುವ ಪರಮಾತ್ಮನನ್ನು ಹ್ಯಾಗೆ ಕಾಣಬೇಕೆಂಬುದನ್ನು ಮುಂದಿನ ವಚನಗಳಲ್ಲಿ ಅವನು ಹೇಳುತ್ತಹೋಗಿದ್ದಾನೆ.

ಪರಮಾತ್ಮನನ್ನು ಕಾಣಬೇಕಾದರೆ ಗುಡಿಗುಂಡಾರ, ಅರಣ್ಯಗಳನ್ನು ಪ್ರವೇಶಿಸುವ ಅವಶ್ಯವಿಲ್ಲ. ಆತನು ಜಗದ್ವ್ಯಾಪಿಯಾಗಿದ್ದಾನೆ. ಅವನು ತನ್ನ ಒಳಗೂ ಹೊರಗೂ ವ್ಯಾಪಿಸಿಕೊಂಡಿರುವನು. ಅವನು ತನ್ನಲ್ಲಿಯೇ ಇದ್ದಾನೆ. ಆದ್ದರಿಂದ ಅವನನ್ನು ಕಾಣಬೇಕಾದರೆ ತನ್ನನ್ನು ಬಿಟ್ಟು ಬೇರೊಂದೆಡೆಗೆ ಹೋಗುವ ಕಾರಣವಿಲ್ಲ. ಪರಮಾತ್ಮನು ಎಳ್ಳೊಳಗಣ ಎಣ್ಣೆಯಂತೆ ಕಾಷ್ಠದೊಳಗಿನ ಅಗ್ನಿಯಂತೆ ತನ್ನಲ್ಲಿಯೇ ಅಡಗಿಕೊಂಡಿರುತ್ತಾನೆಂದು ವಚನಕಾರರು ಆಗಿಂದಾಗ್ಗೆ ಹೇಳುವದುಂಟು. ಹೀಗಿದ್ದರೂ ಅವನು ಸುಲಭನಲ್ಲ. ನೆನೆದಾಕ್ಷಣವೇ ಕಣ್ಣಿಗೆ ಕಾಣಲಾರನು. ಆದರೆ ಮನುಷ್ಯನು ತನ್ನ ಸತ್ಕ್ರಿಯೆ ಸದಾಚರಣೆಗಳ ಮೂಲಕ ಭವಸಂಬಂಧದ ವಿಷಯಗಳನ್ನು ತನ್ನಿಂದ ಮೊದಲು ದೂರಮಾಡಿಕೊಳ್ಳಬೇಕು. ಹೀಗೆ ದೂರಮಾಡುತ್ತ ಹೋದಹಾಗೆ ಪರಮಾತ್ಮನು ತನ್ನಲ್ಲಿಯೇ ಕಾಣಿಸಿಕೊಳ್ಳಹತ್ತುವನು. ಇದು ಗುರುಮುಖದಿಂದಲ್ಲದೆ ಆಗದೆಂದು ಎಲ್ಲ ವಚನಕಾರರ ಅಭಿಪ್ರಾಯವಿದೆ. ಗುರುವು ಉಪದೇಶಮಾಡುವಾಗ್ಗೆ ಲಿಂಗಾಂಗಸಾಮರಸ್ಯದ ಈ ಹೊಸ ಹಾದಿಯನ್ನು ತೋರಿಸುವನು. ಈ ಹೊಸ ಹಾದಿಗೆ ಲಿಂಗಧಾರಣವೇ ಮೊದಲು. ಈ ಲಿಂಗಧಾರಣದ ಮೂಲಕ ಪರಮಾತ್ಮನ ಕಳೆಯು ಭಕ್ತನ ಪ್ರಾಣ, ಮನ, ಬುದ್ಧಿ, ಇವುಗಳಲ್ಲಿ ಹರಿದಾಡತೊಡಗುವದು. ಈ ಸ್ಥಿತಿಯು ಉಂಟಾದ ಕೂಡಲೆ ಭಕ್ತನಿಗೆ ಪುನರ್ಜನ್ಮವೆಂದು ತಿಳಿಯಬೇಕು. ಅಂದಿನಿಂದ ಅವನು ತನ್ನ ಆಚರಣೆಗಳ ಮೂಲಕ ಲಿಂಗದ ಶಕ್ತಿಯನ್ನು ತನ್ನಲ್ಲಿ ದೃಢಪಡಿಸಿಕೊಳ್ಳುತ್ತ ಹೋಗಬೇಕು. ಹೀಗೆ ದೃಢಪಡಿಸಿಕೊಳ್ಳುವ ರೀತಿಗಳು ಷಟ್‌ಸ್ಥಲಶಾಸ್ತ್ರದಲ್ಲಿ ಹೇಳಲ್ಪಟ್ಟಿವೆ. ಈ ಷಟ್‌ಸ್ಥಲ ಮಾರ್ಗಕ್ಕೆ ಮೇಲೆ ಹೇಳಿದಂತೆ ಲಿಂಗ

ಧಾರಣೆಯೇ ಮೊದಲನೆಯ ಪಾವಟಿಗೆಯು. ಇದನ್ನು ಮೊದಲು ಹತ್ತಿ ಶಿವಾನುಭವದ ಮಹಾದ್ವಾರದೆದುರಿಗೆ ಬಂದು ನಿಲ್ಲಬೇಕು. ಮುಂದೆ ಈ ದ್ವಾರದ ಒಳಹೊಕ್ಕು ಭಕ್ತನು ತನ್ನ ಅನುಭವ, ಜ್ಞಾನ, ರೀತಿ ನಡತೆಗಳಿಂದ ಲಿಂಗದ ಗುಣಗಳನ್ನು ತನ್ನಲ್ಲಿ ಕ್ರಮೇಣ ಬರಮಾಡಿಕೊಳ್ಳುತ್ತ ಹೋಗಿ ಕಡೆಗೆ ಲಿಂಗಾಂಗ ಸಾಮ್ಯಶ್ಯತ್ವವನ್ನು ಹೊಂದಬೇಕು.

**ವಚನ**:— ೧೬. ಅಂತರಂಗ ಬಹಿರಂಗವೆಂದೆಂಬರು. ಆವುದು ಹಿಂದು ಆವುದು ಮುಂದು ಎಂದರಿಯರು. ಎಳ್ಳೊಳಗಣ ಎಣ್ಣೆಯಂತೆ, ಕಲ್ಲೊಳಗಣ ಹೇಮದಂತೆ, ಹಾಲೊಳಗಣ ತುಪ್ಪದಂತೆ, ಕಾಷ್ಠದೊಳಗಣ ಅಗ್ನಿಯಂತೆ, ಪುಷ್ಪದೊಳಗಣ ಪರಿಮಳದಂತೆ, ಭಾವದೊಳಗೆ ಶಿವನಿಪ್ಪನೆಂದಡೆ ಆ ಶಿವನು ತನಗೆ ಕಾಣಿಸಿಕೊಳ್ಳನು, ಮಥನದಿಂದಲ್ಲದೆ. ಅದೆಂತೆಂದೊಡೆ ಶ್ಲೋ॥ ತಿಲಮಧ್ಯೇ ಯಥಾ ತೈಲಂ ಕ್ಷೀರಮಧ್ಯೇ ಯಥಾ ಘೃತಂ । ಪುಷ್ಪಮಧ್ಯೆ ಯಥಾ ಗಂಧೋ ಭಾವಮಧ್ಯೆ ತಥಾ ಶಿವಃ॥ ಎಂದುದಾಗಿ ಇಂತಪ್ಪ ಚಿನ್ಮೂರ್ತಿಯನು, ಮನ್ಮಸ್ತಕದಲ್ಲಿ ಶ್ರೀಗುರು ತನ್ನಹಸ್ತಾಬ್ಜ ಮಥನದಿಂದ, ಆಕರ್ಷಣಾವ ಮಾಡಿ ತೆಗೆದು, ತಲ್ಲಿಂಗವನಂಗದಲ್ಲಿ ಸ್ಥಾಪ್ಯವ ಮಾಡಿ, ಸುಜ್ಞಾನ ಕ್ರಿಯೋಪದೇಶವಂ ಮಾಡಲು, ಘಟದ ಹೊರಗಿಹ ಅನಲ ಘಟವ ವೇಧಿಸಿ ತಜ್ಜಲವ ಹಿಡಿದು ತೆಗೆದುಕೊಂಬಂತೆ, ಬಾಹ್ಯದಲ್ಲಿ ಮಾಡುವ ಸತ್ಕ್ರಿಯಾ ಮಥನದಿಂದ ಶಿವಜೀವ ಸಂಯೋಗವಹ ಬಟ್ಟೆಯನರಿಯದೆ ಕೆಟ್ಟರಲ್ಲಾ ಅದ್ವೈತಿಗಳು. ಅದೆಂತೆಂದೊಡೆ ॥ಶ್ಲೋ॥ "ಘಟಮಧ್ಯಸ್ಥಿತಂ ತೋಯಂ ಅಗ್ನಿರ್ಜ್ವಲತಿಬಾಹ್ಯತಃ । ಅಗ್ನಿರ್ಜ್ವಲನ ಸಂಯೋಗೆ ಉಷ್ಣಂ ಭವತಿ ವಾರಿಣಾಂ॥ ಎಂದುದಾಗಿ ಈ ವರ್ಮ ಕುಳಸ್ಥಳವನರಿಯದೆ ಶಿವಲಿಂಗ ಪೂಜೆಯ ಬಿಟ್ಟು, ಅನ್ಯಬಟ್ಟೆಯಲ್ಲಿ ಹರಿವರು, ಕರ್ಮನಿರ್ಮೂಲವಾಗದ ಜಡರುಗಳು, ಗುರುವಚನ ಪರಾಂಙ್ಮುಖರು, ಲಿಂಗನಿಷ್ಠಾವಿರಹಿತರು. ಗುರುಕೊಟ್ಟ ಇಷ್ಟಲಿಂಗದಲ್ಲಿ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಿಂ ಕ್ರಿಯೆವಿಡಿದು ಮಾಡಿ, ಪ್ರಾಣವೇಧಿಸಿ ಪ್ರಾಣಲಿಂಗ ಸಂಬಂಧಿಗಳಾಗಲರಿಯದೆ ಕೆಟ್ಟರಲ್ಲಾ ಅದ್ವೈತಿಗಳು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ**:— ವಚನಕಾರನು ಈ ವಚನದಲ್ಲಿ ಲಿಂಗಧಾರಣವೆಂದರೇನು ಎಂಬದನ್ನು ತಿಳಿಸಲು ಯತ್ನಿಸಿರುವನು. ಹಾಗೂ ಮಾಯಾವಾದಿಗ

ಳಾದ ಅದ್ವೈತಿಗಳು ಲಿಂಗಧಾರಣವು ಶಕ್ಯವಲ್ಲವೆಂದು ಪ್ರತಿಪಾದಿಸುವ ದುಂಟು. ಅವರಿಗೂ ಸಹ ಯೋಗ್ಯ ಉತ್ತರವನ್ನು ಇದರಲ್ಲಿ ಕೊಟ್ಟಿರುವನು.

ಜಗತ್ತಿನಲ್ಲಿ ಒಳಗು ಹೊರಗು, ಎಂತಲೂ ಶರೀರ ಶಕ್ತಿ, ಅಂಗ, ಲಿಂಗ, ಜ್ಞಾನ ಕ್ರಿಯೆ ಎಂತಲೂ ಬೇರೆ ಬೇರೆ ಮಾಡಿ ಹೇಳುವದುಂಟು. ಆದರೆ ಈ ವಿಧವಾಗಿ ಅವುಗಳಲ್ಲಿ ಭಿನ್ನತೆ ಇರುವದಿಲ್ಲ. ಇವೆಲ್ಲವೂ ಪರಸ್ಪರಾವಲಂಬಿಗಳು. ಒಂದನ್ನು ಬಿಟ್ಟು ಮತ್ತೊಂದು ವ್ಯವಹರಿಸಲಾರದು. ಒಂದರ ಚೈತನ್ಯವು ಮತ್ತೊಂದರಲ್ಲಿ ಪರಿಣಾಮಮಾಡುತ್ತದೆ. ಹೀಗೆ ಅವುಗಳಲ್ಲಿ ಪರಸ್ಪರ ಸಂಬಂಧವಿದೆ.

ಹ್ಯಾಗೆ ಎಳ್ಳಿನಲ್ಲಿ ಎಣ್ಣೆಯು, ಕಲ್ಲಿನಲ್ಲಿ ಬಂಗಾರವು, ಹಾಲಿನಲ್ಲಿ ತುಪ್ಪವು, ಕಟ್ಟಿಗೆಯಲ್ಲಿ ಅಗ್ನಿಯು, ಹೂವಿನಲ್ಲಿ ಮಕರಂದವು ಇರುತ್ತದೋ ಹಾಗೆ ಭಾವದಲ್ಲಿ ಶಿವನಿರುವನು. ಷಟ್‌ಸ್ಥಲ ಶಾಸ್ತ್ರದಲ್ಲಿ ಈ ಶಿವನಿಗೆ ಲಿಂಗವೆಂತಲೂ ಅಭಿಧಾನವಿದೆ. ಈ ಲಿಂಗವನ್ನು ಕಂಡುಹಿಡಿಯುವದೇ ಭಕ್ತನ ಜೀವಿತದ ಮುಖ್ಯ ಕರ್ತವ್ಯವಾಗಿದೆ. ಆದರೆ ಈ ಲಿಂಗವು ಬರೇ ಧ್ಯಾನದಿಂದ ಅಂದರೆ ಬರೇ ನೆನೆದಾಕ್ಷಣವೆ ಮನುಷ್ಯನಿಗೆ ಸಿಕ್ಕಲಾರದು. ಆದರೆ ಹಾಲಿನಿಂದ ತುಪ್ಪವನ್ನು ಕೆಲವು ಕ್ರಿಯೆಗಳ ಮೂಲಕ ಹ್ಯಾಗೆ ಹೊರಗೆ ತರುವದು ಶಕ್ಯವೋ ಹಾಗೆ ಭಕ್ತನು ತನ್ನ ಆಚರಣೆಗಳ ಮೂಲಕ ಈ ಲಿಂಗವನ್ನು ತನ್ನಲ್ಲಿ ಕಾಣಿಸಿಕೊಳ್ಳುವದು ಶಕ್ಯವಿದೆ. ಈ ರೀತಿಯನ್ನು ಗುರುವು ಹೇಳುವನು. ಅವನು ತನ್ನ ಉಪದೇಶದ ಮೂಲಕ ಇದನ್ನು ಭಕ್ತನಿಗೆ ತಿಳಿಯಪಡಿಸುವನು. ಇದರ ಮಾರ್ಗವನ್ನು ವಚನಕಾರನು ಇಲ್ಲಿ ಹೇಳಿರುವನು.

ಲಿಂಗಧಾರಣೆಯ ಕಾಲದಲ್ಲಿ ಗುರುವು ತನ್ನ ಹಸ್ತವನ್ನು ಶಿಷ್ಯನ ಮಸ್ತಕದಲ್ಲಿ ಇರಿಸುವನು. ಏಕೆಂದರೆ ಮಸ್ತಕದಲ್ಲಿ ಲಿಂಗವು ಚಿನ್ಮೂರ್ತಿಯಾಗಿ ಸ್ಥಾಪಿತವಾಗಿರುತ್ತದೆ. ಇಲ್ಲಿಂದಲೇ ಮನುಷ್ಯನ ಕ್ರಿಯೆಗಳಿಗೆ ಚಾಲನೆಯುಂಟಾಗುತ್ತದೆ. ಗುರುವು ಈ ಪ್ರಕಾರ ತನ್ನ ಹಸ್ತವನ್ನು ಮಸ್ತಕದ ಮೇಲೆ ಇರಿಸಿದ ಕೂಡಲೆ ಭಕ್ತನ ಲಿಂಗ ಕಳೆಯು ಪ್ರಜ್ವಲಿಸಹತ್ತುತ್ತದೆ. ಇದು ಗುರುವಿನ ಲಿಂಗ ಶಕ್ತಿಯ ಪ್ರಭಾವವು. ಆಗ ಭಕ್ತನಲ್ಲಿ ಆ ವರೆಗೆ ಸ್ತಬ್ಧವಾಗಿದ್ದ ಲಿಂಗ ಶಕ್ತಿಯು ಹೊರಹೊಮ್ಮಹತ್ತುವದು. ಹೀಗೆ ಈ ಲಿಂಗಶಕ್ತಿಯನ್ನು ಗುರುವು ಆಕರ್ಷಿಸಿ ತೆಗೆದು ಅದನ್ನು ಅಂಗದಲ್ಲಿ

ಸ್ಥಾಪಿಸುವನು. ಮತ್ತು ಆ ಲಿಂಗಶಕ್ತಿಯು ಅಂಗದಲ್ಲಿ ದೃಢಪಡಬೇಕೆಂದು ಸುಜ್ಞಾನ ಕ್ರಿಯೋಪದೇಶವನ್ನೂ ಮಾಡುವನು. ಈ ರೀತಿಗಳು ಲಿಂಗಧಾರಣವಲ್ಲಿ ಅಡಕವಾಗಿರುವವು

ಈ ಮರ್ಮದ ವಿವರಣೆಯನ್ನು ವಚನಕಾರನು ಒಂದು ಉದಾಹರಣೆಯನ್ನು ಕೊಟ್ಟು ಹೆಚ್ಚಿಗೆ ಸ್ಪಷ್ಟಮಾಡಿ ಇಲ್ಲಿ ತೋರಿಸಿರುವನು. ನೀರು ತುಂಬಿದ ಒಂದು ಪಾತ್ರೆಯನ್ನು ಒಲೆಯ ಮೇಲಿಟ್ಟು ಕಾಸಿದ್ದಾದರೆ ಆ ಕಾವು ಆ ಪಾತ್ರೆಯನ್ನು ಬೆಚ್ಚಗೆ ಮಾಡಿ ಒಳಗಿನ ತಂಪು ನೀರನ್ನು ಕಾಯಿಸುತ್ತಾ ಹೋಗುವದು. ಅದೇ ರೀತಿಯಾಗಿ ಲಿಂಗಧಾರಣೆಯು ಅಂತರಂಗವನ್ನು ಪ್ರವೇಶಿಸಿ ಅಲ್ಲಿಯ ಪ್ರಾಣಲಿಂಗವನ್ನೂ ಪ್ರಜ್ವಲಿಸಹತ್ತುವದು.

ಬಾಹ್ಯದಲ್ಲಿ ಮಾಡುವ ಸತ್ಕ್ರಿಯೆಗಳು ಅಂತರಂಗವನ್ನು ಪ್ರವೇಶಿಸುತ್ತವೆ. ಮತ್ತು ಅವು ಮನುಷ್ಯನ ಗುಣಗಳನ್ನು ಉಚ್ಚಸ್ಥಿತಿಗೆ ತರುತ್ತ ಹೋಗುವವು. ಇದರಿಂದ ಅವನು ಉತ್ತರೋತ್ತರ ಅಭಿವೃದ್ಧಿ ಸ್ಥಿತಿಯನ್ನು ಹೊಂದುತ್ತ ಕಡೆಗೆ ಶಿವಜೀವೈಕ್ಯಸ್ಥಿತಿಯನ್ನು ಹೊಂದುವನು.

ಈ ರೀತಿಯನ್ನು ಅದ್ವೈತಿಗಳು ಅರಿಯರೆಂದು ವಚನಕಾರನು ಅನ್ನುತ್ತಾನೆ. ಅವರು ಇದರ ಮರ್ಮಕುಳ ಸ್ಥಳವನ್ನು ಅರಿಯರು. ಈ ಕಾರಣ ಅವರು ಶಿವಲಿಂಗದಲ್ಲಿ ವಿಶ್ವಾಸವಿಡದೆ ಬೇರೊಂದು ಹಾದಿಯನ್ನು ಹಿಡಿಯುವರು. ಇದರಿಂದ ಅವರ ಕರ್ಮನಾಶವಾಗದು. ಅದ್ವೈತಿಗಳು ಕೇವಲ ಜಡರುಗಳೆಂದು ವಚನಕಾರನು ಇಲ್ಲಿ ಅನ್ನುತ್ತಾನೆ. ಇವರು ಗುರುವಚನ ಪರಾಙ್ಮುಖರು, ಲಿಂಗನಿಷ್ಠಾವಿರಹಿತರು ಎಂದು ಹೇಳಿ ಅದ್ವೈತಿಗಳಾದವರು ಗುರುವಿನಿಂದ ಉಪದೇಶವನ್ನು ಹೊಂದಿ ಇಷ್ಟ ಲಿಂಗದಲ್ಲಿ ವಿಶ್ವಾಸವಿಟ್ಟು, ಅವರ ಕ್ರಿಯೆಗಳನ್ನು ತಿಳಿದುಕೊಂಡು ಆಚರಿಸಬೇಕು. ಅವರು ಹೀಗೆ ಆಚರಿಸಿದ್ದಾದರೆ ಅವರ ಅಂತರಂಗವು ಪರಿಶುದ್ಧತೆಯನ್ನು ಹೊಂದಿ ಪ್ರಾಣಲಿಂಗ ಸಂಬಂಧಿಗಳಾಗುವರು. ಈ ಮಾರ್ಗವನ್ನು ಅದ್ವೈತಿಗಳು ಅರಿಯದೆ ಕೆಟ್ಟರಲ್ಲಾ ಎಂದು ವಚನಕಾರನು ವಿಷಾದಿಸುತ್ತಾನೆ.

**ವಚನಃ—** ೧೭. ಶಿವಲಿಂಗದ ಮಹಾತ್ಮೆಯನು ಶಿವಲಿಂಗದ ಮರ್ಮವನು, ಶಿವಲಿಂಗದ ನಿಶ್ಚಯವನು ಆದಾರಯ್ಯ ಬಲ್ಲವರು, ಆದಾರಯ್ಯ ಅರಿದವರು, ಶ್ರೀಗುರು ತೋರಿಕೊಡದನ್ನಕ್ಕರ? ಸರ್ವೈಶ್ವರ್ಯ

ಸಂಪನ್ನ ಮಾದ್ಯಂತ ತತ್ವಾಧಿಕಂ ಎಂದುದಾಗಿ, ಅಣೋರಣೀಯಾನ್ ಮಹತೋ ಮಹಿಯಾನ್ ಎಂದುದಾಗಿ, ಯತೋವಾಚೋ ನಿವರ್ತಂತೆ ಎಂದುದಾಗಿ, ಅತ್ಯತಿಷ್ಠದ್ದಶಾಂಗುಲಂ ಎಂದುದಾಗಿ, ಈ ಪ್ರಕಾರದಲ್ಲಿ ವೇದಾಗಮಂಗಳು ಸಾರುತ್ತಿರಲು ಲಿಂಗವು ಹರಿಬ್ರಹ್ಮಾದಿ ದೇವದಾನವ ಮಾನವರಿಗೆಯು ಅರಿಯಬಾರದು. ಚಕಿತಮಭಿಧತ್ತೆ ಶೃತಿರಪಿ ಎಂದುದಾಗಿ ವೇದಪುರುಷರಿಗೆಯೂ ಅರಿಯಬಾರದು. ಅರಿಯಬಾರದ ವಸ್ತುವ ರೂಪಿಸಲೆಂತುಬಾರದು. ರೂಪಿಸಬಾರದ ವಸ್ತುವ ಪೂಜಿಸಲೆಂತುಬಾರದು. ಪೂಜೆಗಿಲ್ಲವಾಗಿ ಭಕ್ತಿಗಿಲ್ಲ. ಭಕ್ತಿಗಿಲ್ಲವಾಗಿ ಪ್ರಸಾದಕ್ಕಿಲ್ಲ. ಪ್ರಸಾದಕ್ಕಿಲ್ಲವಾಗಿ ಮುಕ್ತಿಗಿಲ್ಲ. ಮುಕ್ತಿಗಿಲ್ಲದೆ ದೇವದಾನವಮಾನವರೆಲ್ಲರು ಕೆಡುವರು ಕೆಡುವರು. ಕೆಡದಂತೆ ಮಾಡಿ ರಕ್ಷಿಸಿದನು ಸದ್ಗುರು ಮಹಾಗುರು ಶ್ರೀಗುರು. "ನಗುರೋರಧಿಕಂ" ಎಂದುದಾಗಿ ಮಹಾಘನ ಗುರುಶಾಂತಮೂರ್ತಿ ಕೃಪಾಮೂರ್ತಿ ಲಿಂಗಪ್ರತಿಷ್ಠೆಯಂ ಮಾಡಿದನು. ಅದೆಂತೆನಲು ಕೇಳಿರೇ. ಯತೋವಾಚೋ ನಿವರ್ತಂತೆ ಅಪ್ರಾಪ್ಯ ಮನಸಾ ಸಹ, ನಾದಬಿಂದು ಕಳಾತೀತಂ ಗುರೂಣಾಂ ಲಿಂಗಮುದ್ಭವಂ ಎಂದುದಾಗಿ, ಸದ್ಗುರುರ್ಲಿಂಗಭಾವಂಚ। ಸರ್ವಬ್ರಹ್ಮಾಂಡವಾಸಿನಾಂ। ಸರ್ವಲೋಕಸ್ಯವಾಸಸ್ಯ। ಮುಕ್ತಿಕ್ಷೇತ್ರಸುವಾಸಿನಾಂ। ಎಂದುದಾಗಿ, ಸದ್ಗುರುರ್ದೀಯತೆ ಲಿಂಗಂ। ಸದ್ಗುರುರ್ದೀಯತೆ ಕ್ರಿಯಾ। ಸದ್ಗುರುರ್ದೀಯತೆ ಮಂತ್ರಂ। ಸದ್ಗುರುಸ್ಸರ್ವಕಾರಣಂ ಎಂದುದಾಗಿ, ಸರ್ವಲೋಕಕ್ಕೆಯು ಸರ್ವರಿಗೆಯು ಲಿಂಗಪ್ರತಿಷ್ಠೆಯಂ ಮಾಡಿ ಕೊಟ್ಟನು. ಅರೂಪಭಾವನೋ ನಾಸ್ತಿ। ಯದ್ದೃಷ್ಟಂ ತದ್ವಿನಶ್ಯತಿ। ದೃಷ್ಟಾದೃಷ್ಟ ಸ್ವರೂಪತ್ವಂ। ತಥಾಪ್ಯೇವಂ ಸದಾಭ್ಯಸೇತ್। ಎಂದುದಾಗಿ ನಿಃಕಲರೂಪ ನಿರವಯ ಧ್ಯಾನ ಪೂಜೆಗನುವಲ್ಲ. ಸಕಲತತ್ವಸಾಮಾನ್ಯನೆಂದು ಸಕಲನಿಷ್ಕಲವನೊಂದಾಗಿ ಲಿಂಗವ ಮಾಡಿದನು. ಶ್ಲೋ॥ ಲಿಂಗಂ ತಾಪತ್ರಯಹರಂ ಲಿಂಗಂ ದಾರಿದ್ರ್ಯನಾಶನಂ। ಲಿಂಗಂ ಪಾಪವಿನಾಶಂಚ। ಲಿಂಗಂ ಸರ್ವತ್ರಸಾಧನಂ। ಎಂದುದಾಗಿ, ಲಿಂಗವು ಪರಂಜ್ಯೋತಿರ್ಲಿಂಗವು, ಪರಬ್ರಹ್ಮವೆಂದು ಲಿಂಗವನೇ ಪೂಜಿಸಿ ಭಕ್ತಿ ಪ್ರಸಾದ ಮುಕ್ತಿಯ ಪಡೆಯಲೆಂದು ಮಹಾಘನ ಗುರು ಲಿಂಗ ಪ್ರತಿಷ್ಠೆಯ ಮಾಡಿ ತೋರಿಕೊಟ್ಟನು. ಅದೆಂತೆಂದೊಡೆ। ಬ್ರಹ್ಮಾವಿಷ್ಣುಶ್ಚ ರುದ್ರಶ್ಚ ಈಶ್ವರಶ್ಚ ಸದಾಶಿವಃ। ಸರ್ವೇಲಿಂಗಾರ್ಚನೆರತಾ। ಜಾತಾ ಸ್ಥೇಲಿಂಗ ಪೂಜಕಾಃ। ಎಂದುದಾಗಿ ಮತ್ತಂ। ಗೌರೀಪತಿರುಮಾನಾಥೊ। ಅಂಬಿಕಾಪಾರ್ವತೀ

ಪತಿಃ । ಗಂಗಾಪತಿರ್ಮಹಾದೇವೋ । ಸತತಂ ಲಿಂಗಂ ಪೂಜಕಂ । ಎಂದುದಾಗಿ ಈ ಮಹಾಪುರುಷರಪ್ಪ ದೇವಗಣ ರುದ್ರಗಣ ಪ್ರಮಥಗಣಂಗಳು ವಿಷ್ಣ್ವಾದಿ ದೇವ ದಾನವ ಮಾನವಾದಿಗಳು ಮಹಾಲಿಂಗವನೆ ಧ್ಯಾನಿಸಿ ಪೂಜಿಸಿ ಪರಮ ಸುಖ ಪರಿಣಾಮವ ಹಡೆದರೆಂದು ಮಾಡಿದನು ಕೇವಲ ಸದ್ಭಕ್ತ ಜನಂಗಳಿಗೆ. ಅದೆಂತೆಂದೊಡೆ, ಇಷ್ಟ ಪ್ರಾಣಂಸ್ತಥಾ ಭಾವಂ ತ್ರಿಧಾಮೇಕಂ ವರಾನನೆ ಎಂದುದಾಗಿ ಆ ಸದ್ಗುರು ಆ ಪರಶಿವನನು ತತ್ಪ್ರಾಣವನು ಏಕೀಭವಿಸಿ ಸದ್ಭಾವದಿಂ ಲಿಂಗಪ್ರತಿಷ್ಠೆಯುಂ ಮಾಡಿ ಪ್ರಾಣಲಿಂಗವಾಗಿ ಕರಸ್ಥಲದಲ್ಲಿ ಬಿಜಯಂಗೈದು ಅಂತರಂಗ ಬಹಿರಂಗ ಭರಿತನಾಗಿ ಪೂಜೆಗೊಳಲೆಂದು ಕರುಣಿಸಿದನು. ಮತ್ತಂ ಏಕಮೂರ್ತಿ ಸ್ತ್ರಿಧಾ ಭೇದಂ ಎಂದುದಾಗಿ ಗುರುಲಿಂಗಜಂಗಮು ಲಿಂಗ ಪರಶಿವಲಿಂಗ ಒಂದೇ. ದೇಶಿಕಾಚಾರ ಲಿಂಗಂಚ । ತ್ರಿವಿಧಂ ಲಿಂಗ ಮುಚ್ಯತೆ ; ಎಂದುದಾಗಿ ಲಿಂಗದ ಮರ್ಮವನು ಲಿಂಗದ ಸ್ವರೂಪವನು ಲಿಂಗದ ನಿಶ್ಚಯವನು ಆದಿಯಲ್ಲಿ ಧ್ಯಾನಪೂಜೆಯು ಮಾಡಿದವರನು ಭಕ್ತಿಪ್ರಸಾದ ಮುಕ್ತಿಯು ಪಡೆದವರನು ವೇದಶಾಸ್ತ್ರ ಪುರಾಣಾಗಮಂಗಳು ಹೇಳುತ್ತಿವೆ. ಶಿವನ ವಾಕ್ಯಂಗಳಿಗಿದೇ ದಿಟ. ಮನವೇ ನಂಬು ಕೆಡಬೇಡ, ಕೆಡಬೇಡ. ಮಹಾಸದ್ಭಕ್ತರ ನಂಬುವುದು. ಶಿವಲಿಂಗಾರ್ಚನೆಯ ನಿರಂತರ ಮಾಡುವುದು. ಇದು ನಿಶ್ಚಯ. ಶಿವನು ಬಲ್ಲನಯ್ಯ. ಈ ಕ್ರಿಯೆಯಲ್ಲಿ ಲಿಂಗಜಂಗಮುವನರಿದು ವಿಶ್ವಾಸಮಂ ಮಾಡಿ ಕೇವಲ ಸದ್ಭಕ್ತಿ ಕ್ರಿಯೆಯನರಿದು ಮರ್ಮವನರಿದು ಸದ್ಭಾವದಿಂ ಲಿಂಗಾರ್ಚನೆಯುಂ ಮಾಡುವುದಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ**— ಉರಿಲಿಂಗಪೆದ್ದಿಯು ಈ ವಚನದಲ್ಲಿ ಶಿವಲಿಂಗ ಧಾರಣದ ಮಹತ್ವವನ್ನು ಮತ್ತು ಅದರ ಸ್ವರೂಪವನ್ನು ವರ್ಣಿಸುವ ವೇದಾಗಮಗಳಲ್ಲಿಯ ಉಕ್ತಿಗಳನ್ನು ವಿಶೇಷವಾಗಿ ಉದಹರಿಸಿರುವನು. ಅವನು ಅನ್ನುವದೇನೆಂದರೆಃ— ಶಿವಲಿಂಗದ ಮಹಾತ್ಮ್ಯೆಯನ್ನು ಅದರ ಮರ್ಮವನ್ನು ಅದರ ನಿಶ್ಚಯವನ್ನು ಬಲ್ಲವರು ಯಾರು? ಯಾರೂ ಸಿಕ್ಕಲಾರರು. ಅದು ಗುರು ತೋರಿಸಿಕೊಟ್ಟಲ್ಲಿ ಮಾತ್ರ ತಿಳಿಯುವದು. ವೇದಾಗಮಂಗಳು ಈ ಲಿಂಗವು ಸರ್ವೈಶ್ವರ್ಯಸಂಪನ್ನವಾಗಿದೆ, ಅದು ಎಲ್ಲದಕ್ಕೂ ಆದಿಯು, ಎಲ್ಲ ತತ್ವಗಳಿಗೂ ಅಧಿಕವಾಗಿದೆ, ಅದು ಅಣುವಿಗೆ ಅಣುವೂ, ಮಹತ್ತಿಗೆ ಮಹತ್ತೂ ಆಗಿ ಸರ್ವವ್ಯಾಪಿಯಾಗಿದೆ, ಆದು ವಾಚಕ್ಕೆ ಅತೀತವಾಗಿದೆ, ಮತ್ತು ಜಗತ್ತನ್ನು ದಾಟಿ ೧೦ ಅಂಗುಲ ಪ್ರಮಾಣವಾಗಿ

ಮುಂದೆ ಹೋಗಿದೆ ಎಂದು ನಾನಾ ಬಗೆಯಾಗಿ ವರ್ಣಿಸುತ್ತವೆ. ಇಂಥ ಲಿಂಗದ ಮರ್ಮವನ್ನು ಹರಿಬ್ರಹ್ಮಾದಿ ದೇವತೆಗಳೂ ದೇವದಾನವ ಮಾನವರೂ ಸಹ ಅರಿಯರು. ವೇದಗಳು ಅತ್ಯಂತ ಚಕಿತವೃತ್ತಿಯಿಂದ ಪರಮಾತ್ಮನನ್ನು ವಿವರಿಸುತ್ತವೆ ಎಂದು ಹೇಳುತ್ತಿರುವದರಿಂದ ವೇದಗಳೂ ಕೂಡ ಪರಮಾತ್ಮನನ್ನು ಅರಿಯವು ಎಂದು ಪರಮಾತ್ಮನ ಮೂಲಸ್ಥಿತಿಯನ್ನು ವಚನಕಾರನು ಇಲ್ಲಿ ವರ್ಣಿಸಿರುವನು.

ಹೀಗೆ ವರ್ಣಿಸಿ ಇಂಥ ನಿರಾಕಾರವಾದ ವಸ್ತುವನ್ನು ರೂಪಕ್ಕೆ ತರಲಿಕ್ಕೆ ಹೇಗೆ ಬರುವದು? ಹೀಗೆ ರೂಪಕ್ಕೆ ತರದೆ ಹೋದಲ್ಲಿ ಅದನ್ನು ಪೂಜಿಸುವದು ಹೇಗೆ? ಪೂಜಿಸಲಿಕ್ಕೆ ಬಾರದಿದ್ದರೆ, ಅದರ ಮೇಲೆ ಭಕ್ತಿ ಹುಟ್ಟುವ ಬಗೆ ಹೇಗೆ? ಭಕ್ತಿ ಇಲ್ಲದಿದ್ದರೆ ಪ್ರಸಾದವಾಗುವ ಬಗೆ ಹೇಗೆ? ಪ್ರಸಾದವಿಲ್ಲದೆ ಹೋದರೆ ಮುಕ್ತಿಯಾಗುವದು ಹೇಗೆ? ಮುಕ್ತಿ ಇಲ್ಲದೆ ಹೋದರೆ ದೇವದಾನವ ಮಾನವರೆಲ್ಲರು ಕೆಟ್ಟುಹೋಗಬೇಕಲ್ಲವೇ? ಈ ಶಂಕೆಗಳನ್ನು ನಿರಸನ ಮಾಡುವಲ್ಲಿ ವಚನಕಾರನು ಅನ್ನುವದೇನೆಂದರೆ, ಇದರಲ್ಲಿ ಗುರುವು ರಕ್ಷಣೆ ಮಾಡುತ್ತಾನೆ. ಅವನೇ ದಾರೀ ತೋರಿಸುವವನು. ಅದು ಹೇಗೆಂದರೆ ಈ ಗುರುವು ಅತ್ಯಂತ ಶ್ರೇಷ್ಠನಾಗಿದ್ದಾನೆ. ಅವನಿಗಿಂತ ಯಾರೂ ಅಧಿಕರಿಲ್ಲ. ಹೀಗೆ ವೇದಾಗಮುಗಳಲ್ಲಿ ಉಕ್ತಿಗಳಿವೆ. ಗುರುವು ಶಾಂತಮೂರ್ತಿಯು. ಕೃಪಾಮೂರ್ತಿಯು ಅವನು ಭಕ್ತರ ಉದ್ಧಾರವಾಗಲೆಂದು ಲಿಂಗಪ್ರತಿಷ್ಠೆಯನ್ನು ಮಾಡುವನು ಎಂದು ಹೇಳಿವ್ದಾನೆ.

ಅದು ಹೇಗೆಂದರೆ, ಲಿಂಗವು ವಾಚಕ್ಕೂ ಮನಸ್ಸಿಗೂ ಮೀರಿದ್ದಿದ್ದು ನಾದಬಿಂದುಕಳಾತೀತವಾಗಿದೆ. ಇಂಥ ಲಿಂಗವು ಗುರುವಿನಿಂದಲೇ ಉದ್ಭವಿಸುತ್ತದೆ ಲಿಂಗವು ಬರೇ ಅಂಗದಲ್ಲಿಯಷ್ಟೇ ಅಲ್ಲ, ಸರ್ವ ಬ್ರಹ್ಮಾಂಡದಲ್ಲಿಯೂ ತುಂಬಿದೆ. ಅದು ಎಲ್ಲ ಲೋಕಗಳಲ್ಲಿಯೂ ಇದೆ. ಇದು ಸದ್ಗುರುವಿನಿಂದ ಇಷ್ಟಲಿಂಗವಾಗಿ ಭಕ್ತನಿಗೆ ಕೊಡಲ್ಪಡುತ್ತದೆ. ಈ ಗುರುವಿನಿಂದಲೇ ಕ್ರಿಯೆಯು ಉತ್ಪನ್ನವಾಗುತ್ತದೆ, ಮಂತ್ರೋಪದೇಶವಾಗುತ್ತದೆ. ಹೀಗೆ ಈ ಗುರುವೇ ಎಲ್ಲದಕ್ಕೂ ಕಾರಣನಾಗಿದ್ದಾನೆ. ಇಂಥ ಶ್ರೇಷ್ಠ ಗುರುವು ಲಿಂಗಪ್ರತಿಷ್ಠೆಯನ್ನು ಮಾಡುವನು.

ರೂಪಿಲ್ಲದರಮೇಲೆ ಭಾವನೆಯು ಉಂಟಾಗದು. ಮತ್ತು ರೂಪುಳ್ಳದು ನಾಶವಾಗುತ್ತದೆ. ಆದ್ದರಿಂದ ಈ ಉಭಯವನ್ನು ಏಕೀಭವಿಸಿ ಲಿಂಗಸಾಧನೆ ಮಾಡತಕ್ಕದ್ದೆಂದು ವಚನಕಾರನ ಭಾವವಿದೆ.

ಲಿಂಗಧಾರಣದ ಅವಶ್ಯಕತೆಯನ್ನು ಮುಂದೆ ಹೇಳುವಲ್ಲಿ ವಚನಕಾರನು ಅನ್ನುವದೇನೆಂದರೆ, ನಿಃಕಲರೂಪಾಗಿ ಅವಯುವ ವಿರಹಿತವಾದ್ದರಿಂದ ಅದು ಧ್ಯಾನಪೂಜೆಗೆ ಶಕ್ಯವಲ್ಲ. ಆದ್ದರಿಂದ ಸಕಲ ಮತ್ತು ನಿಃಕಲ ಇವೆರಡನ್ನೂ ಇಷ್ಟಲಿಂಗದಲ್ಲಿ ಒಂದಾಗಿ ಗುರುವು ಮಾಡುವದರಿಂದ ಅದನ್ನೇ ಪೂಜಿಸಬೇಕು. ಇಂಥ ಲಿಂಗವು ತಾಪತ್ರಯುವನ್ನು ಹರಿಯು ವದು. ದಾರಿದ್ರ್ಯತೆಯನ್ನು ದೂರಮಾಡುವದು. ಸಾವನ್ನು ವಿನಾಶಮಾಡು ವದು. ಇಂಥ ಲಿಂಗವು ಎಲ್ಲಪಕ್ಕೆ ಸಾಧನವಾಗಿದೆ ಎಂಬದಕ್ಕೆ ವಚ ನಕಾರನು ಅನೇಕ ಆಧಾರಗಳನ್ನು ಕೊಟ್ಟು ಅನ್ನುವದೇನೆಂದರೆ, ಹೀಗೆ ಗುರು ಕೊಟ್ಟ ಲಿಂಗವು ಪರಂಜ್ಯೋತಿ ಸ್ವರೂಪವು ಪರಬ್ರಹ್ಮವು ಎಂದು ಭಾವಿಸಿ ಭಕ್ತರು ಪೂಜಿಸಬೇಕು. ಹೀಗೆ ಪೂಜಿಸಿ ಪ್ರಸಾದವನ್ನು ಪಡೆ ಯಬೇಕು. ಮತ್ತು ಪ್ರಸಾದದಿಂದ ಮುಕ್ತಿಯನ್ನು ಹೊಂದಬೇಕು ಎಂದು ಹೇಳಿರುವನು.

ಇದಕ್ಕೆ ಅನೇಕ ಆಧಾರಗಳಿವೆ ಎಂದು ವಚನಕಾರನು ಹೇಳಿ, ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರೆಲ್ಲರೂ ಇಂಥ ಲಿಂಗಾರ್ಚ ನೆಯಲ್ಲಿಯೇ ರತರಾಗಿರುವರು. ಇಷ್ಟೇ ಅಲ್ಲ, ಗೌರೀಪತಿಯೂ ಉಮಾ ಪತಿಯೂ ಆದ ಮಹಾದೇವನು ಸಹ ಲಿಂಗಪೂಜಕನಾಗಿರುವನು. ಮಹಾ ಪುರುಷರೂ ದೇವಗಣಗಳೂ ರುದ್ರ ಪ್ರಮಥಗಣಗಳೂ ದೇವದಾನವ ಮಾನವರೂ ಮಹಾಲಿಂಗವನ್ನೇ ಧ್ಯಾನಿಸಿ ಪೂಜಿಸಿ ಪರಮ ಪರಿಣಾಮ ವನ್ನು ಹೊಂದಿರುವರೆಂದು ಅನೇಕ ಪುರಾತನ ಆಧಾರಗಳನ್ನು ಇಲ್ಲಿ ಕೊಟ್ಟಿರುವನು.

ಇಷ್ಟ, ಪ್ರಾಣ, ಭಾವಗಳು ಒಂದೇ ಇವೆ. ಆದ್ದರಿಂದ ಸದ್ಗುರುವು ಲಿಂಗವನ್ನೂ ಪ್ರಾಣವನ್ನೂ ಒಂದೇ ಮಾಡಿ ತನ್ನ ಸದ್ಭಾವದಿಂದ ಲಿಂಗ ಪ್ರತಿಷ್ಠೆಯನ್ನು ಮಾಡಿ ಪ್ರಾಣಲಿಂಗವನ್ನು ಇಷ್ಟವಾಗಿ ಕರಸ್ಥಲದಲ್ಲಿ ನಿಲ್ಲಿಸಿ, ಅಂತರಂಗ ಬಹಿರಂಗ ಇವೆರಡರಲ್ಲಿಯೂ ಅದನ್ನು ತುಂಬುವನು.

ಗುರು, ಲಿಂಗ, ಜಂಗಮ ಹಾಗೂ ಲಿಂಗ ಪರಶಿವ ಇವೆಲ್ಲವು ಗಳು ಒಂದೇ ಎಂಬದಾಗಿ ವಚನಕಾರನು ಉದಹರಿಸಿ ಈ ಪ್ರಕಾರ ಯಾವದು ಲಿಂಗದ ಮರ್ಮವು, ಲಿಂಗದ ಸ್ವರೂಪು, ಲಿಂಗದ ನಿಶ್ಚಯುವು ಇದೆ ಎಂಬದನ್ನು ತಿಳಿದು ಧ್ಯಾನ ಪೂಜೆಗಳಲ್ಲಿ ಆಸಕ್ತರಾಗಿರುತ್ತಾರೋ ಅವ ರಿಗೆ ಭಕ್ತಿ, ಪ್ರಸಾದ, ಮತ್ತು ಮುಕ್ತಿಗಳಿವೆ. ಇದಕ್ಕೆ ವೇದಶಾಸ್ತ್ರಾಗ ಮಗಳ ಆಧಾರಗಳಿವೆ. ನಿಶ್ಚಯುವಾಗಿ ಶಿವನ ವಾಕ್ಯಗಳಿವೆ. ಇದು ನಿಶ್ಚ

ಯವು ಎಂದು ವಚನಕಾರನು ಹೇಳಿ, ತನ್ನ ಮನಸ್ಸಿಗೆ ತಾನೇ ಅನ್ನು ವದೇನೆಂದರೆ, ಎಲೋ ಮನವೇ, ಈ ರೀತಿಯನ್ನು ನಂಬು, ನಂಬದೆ ಕೆಟ್ಟು ಹೋಗಬೇಡ, ಹೀಗೆ ಆಚರಿಸುವ ಸದ್ಭಕ್ತರನ್ನು ನಂಬು, ಶಿವಲಿಂಗಾರ್ಚನೆ ಯನ್ನು ಯಾವಾಗಲೂ ಮಾಡು, ಈ ಪ್ರಕಾರ ಆಚರಿಸಿ ಲಿಂಗಜಂಗಮ ವಾವುದೆಂಬನ್ನು ಅರಿ, ಇದರಲ್ಲಿ ವಿಶ್ವಾಸವನ್ನಿಡು, ಕೇವಲ ಸದ್ಭಕ್ತಿ ಕ್ರಿಯೆ ಗಳನ್ನು ಅರಿ, ಸದ್ಭಾವದಿಂದ ಲಿಂಗಾರ್ಚನೆಯನ್ನು ಮಾಡು ಎಂದು ತನಗೆ ತಾನೇ ಹೇಳಿಕೊಳ್ಳುತ್ತಾನೆ.

**ವಚನ:**— ೧೮. ಕಕ್ಷೆ ಕರಸ್ಥಲ ಉತ್ತಮಾಂಗ ಉರಸ್ಥಲಕೆ ಮೊದ ಲಾದ ಸ್ಥಾನಂಗಳಂ ಶುದ್ಧವಂ ಮಾಡಿ, ಯಾತೆ ರುದ್ರ ಶಿವ ತನೂರ ಘೋರ ಪಾಪ ನಾಶಿನೀ ಎಂಬ ಶಿವಲಿಂಗ ಮೂರ್ತಿಯಂ ಸ್ಥಾಪಿಸಿ, ತಚ್ಛಿಷ್ಯನ ಶರೀರವೇ ನಡೆ ಶಿವಾಲಯವೆಂಬಂತೆ ಶ್ರೀಗುರು ಪಾವನವ ಮಾಡಿ ತೋರಿದನಾಗಿ, ಅಂಗದ ಮೇಲೆ ಲಿಂಗ ಉಳ್ಳವರ ಕಂಡು, ಮರಳಿ ಮಾನವ ರೆಂದರೆ ನಾಯಕ ನರಕ ತಪ್ಪದಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:**— ಈ ವಚನದಲ್ಲಿ ವಚನಕಾರನು ಇಷ್ಟಲಿಂಗವನ್ನು ಧಾರಣ ಮಾಡುವ ಸ್ಥಳಗಳನ್ನು ನಿರ್ದೇಶಿಸಿ ಅವುಗಳನ್ನು ಶುದ್ಧಮಾಡಿ ಅಲ್ಲಿ ಶಿವಲಿಂಗಮೂರ್ತಿಯನ್ನು ಸ್ಥಾಪಿಸಬೇಕೆಂದು ಹೇಳಿರುವನು. ಆ ಸ್ಥಳಗಳು ಯಾವವೆಂದರೆ ಬಗಲು, ಕರಸ್ಥಲ, ತಲೆ, ಎದೆ ಇವೇ ಮೊದಲಾದವು ಗಳಿರುತ್ತವೆ. ಹೀಗೆ ಶಿವಲಿಂಗ ಮೂರ್ತಿಯನ್ನು ಸ್ಥಾಪಿಸಿದಲ್ಲಿ ಶರೀರವು ಒಂದು ಬಗೆಯ ನಡೆದೇವಾಲಯವೆಂತಲೇ ಹೇಳಬೇಕು. ಅದು ಸ್ಥಿರ ವಾದ ದೇವಾಲಯವಿರದೆ ಚರ ದೇವಾಲಯವೆಂಬ ಅರ್ಥವು. ಇಂಥ ಶರೀರವು ಪಾವನವಾದದ್ದು. ಹೀಗೆ ಇಷ್ಟಲಿಂಗ ಧಾರಣ ಮಾಡು ವವರು ಮಾನವರೆಂದು ಬಗೆಯಬಾರದು. ಬಗೆದರೆ ನರಕವೆಂದು ವಚ ನಕಾರನು ಅನ್ನುತ್ತಾನೆ.

**ವಚನ:**— ೧೯. ಎಂಬತ್ತುನಾಲ್ಕು ಲಕ್ಷ ಜೀವರಾಶಿಯ ಯೋನಿ ಯಲ್ಲಿ ಜನಿಸಿ ನಾನಾ ಯಾತನೆಯಲ್ಲಿ ತೊಳಲಿ ಬಳಲುತ್ತಿಹನು. ಆ ಪರಿಭ ವಂಗಳಂ ಕಳೆದು, ಅಯೋನಿಜನಂ ಮಾಡಿ ಶ್ರೀಗುರು ತನ್ನ ಕರುಣಾ ಕಟಾಕ್ಷ ನಿರೀಕ್ಷಣೆಯಿಂದ ಕಂಕಮಲದಲ್ಲಿ ಬೆಸಲಾದನಾಗಿ, ಅಂತಹ ಅನಂತ ಯೋನಿ ಮುಖ ಜನ್ಮಂಗಳಂ ಕಳಿದುಳಿದ ಶರಣಂಗೆ ಇನ್ನು ಭವ ಮಾಲೆಯುಂಟೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ?

## ೪೭೯ ನೆಯ ವಚನದ ಕಥೆ. (೭೧—೬)

### ಶಿವನಾಗಮಯ್ಯ.

ಬಸವೇಶ್ವರನು ಶಿವನಾಗಮಯ್ಯಗಳ ಬೆರಳಿನಲ್ಲಿ ಅಮೃತವ ಕರೆದ ಪ್ರಸ್ತಾವದ ವಚನ.

---

## ೫೦೦ ನೆಯ ವಚನದ ಕಥೆ. (೭೪—೧೮)

### ಗಿರಿಜಾ ವಿವಾಹ.

ದಕ್ಷಿಣಾಂ ಮೂರ್ತಿರೂಪಂತು ಚತುರ್ವಿಂಶತ್ಪ್ರಕೀರ್ತಿತಃ. ಸ್ಕಂದ ಪುರಾಣದೊಳು ಕಾಳಿಕಾ ಖಂಡದಲ್ಲಿ ಗುಹನು ಕುಂಭಜಂಗೆ ನಿರೂಪ. ದಾರುವನಕ್ಕೆ ದೇವರು ಭಿಕ್ಷಾಟಣಕ್ಕೆ ಬರಲು ಕೃತಕಯಜ್ಞವ ಮಾಡೆ ಮೊಲೆನಾಗರು ಮುಖ್ಯವಾದ ದೇವರು ಆಯಾಯ ಲಕ್ಷಣವ ಧರಿಸಿದರು. ಔಷಧಿ ಪ್ರಸ್ತಪುರದಲ್ಲಿ ಗಿರಿಜಾವಿವಾಹವಾಗಲು ಗಿರಿರಾಜನ ಹೊರಬಾಗಿಲಲ್ಲಿ ರತ್ನಖಚಿತವಾದ ಚಿನ್ನದ ಹಾವುಗೆಯ ವಿಷ್ಣು ತಂದು ಮಡಗಿದ. ಶಿವನು ಮೆಟ್ಟಿಕೊಂಡು ಅರಮನೆಯೊಳಯಿಂಕೆ ಹೋದರು.

### ಅರ್ಧನಾರೀಶ್ವರ.

ಮದನಾರಿ ಚತುರ್ದಶಂ. ಲೈಂಗ್ಯಪುರಾಣದಲ್ಲಿ ನಂದೀಶ್ವರನು ಸನತ್ಕುಮಾರಂಗೆ ಹರಿಕ್ಷೀರಶಮನನಾಗಿರಲು ಬ್ರಹ್ಮ ಬಂದರೆ ಸುಮ್ಮನಿರಲು ಇಬ್ಬರಿಗೆ ವಿರುದ್ಧವಾಗಿ ಇಬ್ಬರ ಬಾಣದ ಕಿಡಿಗಳಿಂ ಲೋಕ ಉರಿಯೆ ಇಬ್ಬರು ಹೆದರಿ ಶಿವಸ್ತೋತ್ರವ ಮಾಡೆ ಇಬ್ಬರ ನಡುವೆ ಅರ್ಧನಾರೀ ರೂಪ ತೋರಿದರು.

ಶಿವನು ಕಾರಿಕಾಲ ಚೋಳರಾಯನ ಭಕ್ತಿಗೆ ಮೆಚ್ಚಿದೆ ಬೇಡೆನಲಾತನಿಂತೆಂದನು. ನಮ್ಮ ಹೆತ್ತ ವೈಷ್ಣವ ಚೋಳನು ಲಿಂಗದ ಮೇಲಿದ್ದ ಪುಷ್ಪವನು ಮೂಸಿ ನೋಡಲು ತಿರುವರುಷನೆಂಬ ಪೂಜಾರಿ ಭಕ್ತನು ನಿನ್ನ ಮೇಲೆ ಮಣ್ಣಾ ಮಳೆಯು ಕರೆದು ಸಾಯಿ ಎನಲು ಅದರ ಕಾರಣದಿಂದ ಸತ್ತನು. ಆ ನಿಂದೆಯ ಪರಿಹರಿಸಲೋಸುಗ ನಿಮ್ಮ ಕೃಪೆಯಿಂದ ಎನಗೆ ಹೊನ್ನಮಳೆಯ ಕರಿಸೆನಲು ಶಿವನು ಧಾರಾವರ್ಷವಾಗಿ ಕರಿಸಿದನು. ಆ ಚೋಳರಾಯನ ದೇಶದಲ್ಲಿ ಬಡವರೆಲ್ಲ ಧನಸಂಪನ್ನರಾದರು.

## ನಂದಿಕೇಶ್ವರ.

ಶಾಲಂಕಮುನೀಶ್ವರನ ಮಗ ಶಿಲಾದ ಮುನೀಶ್ವರನು ಸದ್ಭಕ್ತ ಪುತ್ರನಾಗಬೇಕೆಂದು ತಪವ ಮಾಡುವಲ್ಲಿ ಯಜ್ಞದ ಭೂಮಿಯ ಶೋಧಿಸುವಲ್ಲಿ ನಂದೀಶ್ವರನು ತ್ರಿನೇತ್ರ ಜಟಾಜೂಟ ಶಿಶುರೂಪಿಂದ ಪ್ರಸನ್ನನಾಗಿ ಶಿವನ ಮನದಲ್ಲಿ ನೆನವುತ್ತಿರೆ ಶಿವನು ತನ್ನ ರೂಪ ತೋರಿದರು.

## ಪೂಸಲನೈನಾರು.

ತೊಂಡೀರ ಮಂಡಲದ ಸುಸ್ಥಿರಪುರದಲ್ಲಿ ವಿಪ್ರಕುಲದಲ್ಲಿ ಪೂಸಲನೈನಾರು ಉದ್ಭವಿಸಿ ಜಂಗಮದಾಸೋಹ ಮಾಡುತ್ತಿರಲು ಒಂದು ದಿನ ಹೃದಯದೊಳಗೆ ಶಾಸ್ತ್ರಜ್ಞಾನವೆಂಬ ಬಡಿಗೆಯ ಮಾಡಿ ಶಿವಸ್ತುತಿ ಎಂಬ ಮಂಟಪವ ಮಾಡಿ ಗರ್ಭಗೃಹ ಪೌಳಿ ಮೊದಲಾದುವ ಅಂತರಂಗದಲ್ಲಿ ರಚಿಸಿ ಅದರೊಳಗೆ ಪ್ರಾಣಲಿಂಗವ ನಿಲಿಸಿ ಪೂಜಿಸುತ್ತಿರಲು ಇತ್ತ ಕಾಂಚೀಪುರದಲ್ಲಿ ಮನುಜೇಂದ್ರ ಚೋಳರಾಯ ಪ್ರತಿಷ್ಠೆಯ ಮಾಡಬೇಕೆಂದು ಬಂಡಿಯ ಮೇಲೆ ತರಿಸಿದ್ದ ಲಿಂಗವು ಮಾಯವಾಗಲು ಅರಸು ಚಿಂತಿಸುತ್ತಿರಲು ಆಗ ಶಿವನು ಪೂಸಲ್ಲಯ್ಯನ ಹೃದಯದಲ್ಲಿ ಎಯಿದೇವೆ ಎಂದು ಒಬ್ಬನ ಸ್ವಪ್ನದಲ್ಲಿ ಹೇಳಲು ಅರಸು ಕೇಳಿ ಬಂದು ಪೂಸಲಯ್ಯಗೆ ನಮಸ್ಕಾರವ ಮಾಡಿ ನಿಮ್ಮಂತರಂಗದಲ್ಲಿದ್ದ ಗುಡಿಯ ನೋಡಬೇಕೆನಲು ಆ ಹೃದಯವ ತೆರೆದು ತೋರಲು ಅದರೊಳಗೆ ಪಂಚಮುಖ ದಶಭುಜವುಳ್ಳ ಶಿವನ ಕಂಡು ಮನುಜೇಂದ್ರ ಚೋಳನು ಆಶ್ಚರ್ಯಪಟ್ಟನು. ಬಳಿಕ ಪೂಸಲ ನೈನಾರನ ಶಿವನು ಕೈಲಾಸಗಿರಿಗೆ ಕರದೊಯ್ದರು

## ಕಣ್ಣಪ್ಪ.

ಉದವೂರಲ್ಲಿ ಕಣ್ಣಪ್ಪದೇವರು ಜಂತೆ ಕಂಬ ಬೋದುಗೆಗಳಿಂದ ಕಟ್ಟಿದ ಮನೆಯಲ್ಲಿ ಮಂಚ ಮಣೆ ಒನಕೆ ಒರಳು ಬಾಗಿಲು ಕದವು ಕೈಯ್ಯ ಬಳೆಗಳು ಮೊದಲಾದುವೆಲ್ಲವನು ಆನೆಯ ಜಂತದಲ್ಲಿ ಮಾಡಿಕೊಂಡು ಸುಖದಲ್ಲಿರುತ್ತ ಬಳಿಕ ಬೇಂಟೆಯಾಡಿ ವೃಗವಾಗಿರ್ಪ ಸೌಂದರ ಮಹಾಕಾಯದ ಮಾಂಸವ ನೀಡಿ ಕಣ್ಣನರ್ಪಿಸಿ ನಿತ್ಯ ಪದವ ಪಡೆದರು.

# ೫೧೬ ನೆಯ ವಚನದ ಕಥೆ. (೭೭---೧೪)

## ಕಾಳಿದಾಸ.

ಧಾರಾಪುರವೆಂಬ ಪಟ್ಟಣದಲ್ಲಿ ಭೋಜರಾಜನಿಹನು. ಅತನಿಗೆ ಪದ್ಮಾವತಿ ಎಂಬ ಮಗಳು ಈಕೆಯ ತಂಗಿ ನೇತ್ರಾವತಿಯು ವಿದ್ಯವ ಕಲಿತು ವರರುಚಿಯ ಸೋಲಿಸಲು ಅವ ಮತ್ಸರವ ತಾಳಿದನು. ಬಳಿಕ ಅರಸುಮಗಳಿಗೆ ವರವಿಲ್ಲೆಂದು ಚಿಂತಿಸುತ್ತಿರಲು ಆಗ ವರರುಚಿ ನಾ ತಂದೆನೆಂದು ಹೋಗಿ ಒಂಟಿಯ ಕಾವ ಹೆಡ್ಡನ ಕರೆತಂದು ಶಾಸ್ತ್ರಜ್ಞ ನೆಂದು ಮರೆಮಾಡಿ ಹೇಳಲು ಮದುವೆಯ ಮಾಡಿ ಏಕಾಂತದ ಮನೆಗೆ ಕಳುಹಲು ಮೊದಲು ಅಳಿಯ ಅಂಜಿ ಮಂಚದ ಕೆಳಗೆ ಕುಳಿತಿರಲು ಈಕೆ ಗಂಡ ಹೆಡ್ಡನೆಂದು ಕಾಳಿಕಾದೇವಿಯ ಬಳಿಗೆ ಹೋಗಿ ಎಲೆ ತಾಯಿ ನನಗೆ ಹೆಡ್ಡ ದೊರಕಿದ. ಆತಂಗೆ ವಿದ್ಯೆಯ ಕೊಟ್ಟು ರಕ್ಷಿಸೆನಲು ಆದೀತು ಎಂದು ಕಳುಹಲು ಗಂಡನ ಕೂಡೆಂದಳು, ಕುಸುಮದಲ್ಲಿ ಕುಸುಮ ಹುಟ್ಟಿತೆಂಬುದ ಕೇಳಿ ಬಲ್ಲೆವಲ್ಲದೆ ಕಂಡರಿಯೆವೆನಲು ಎಲೆ ಸತಿಯೆ ನಿನ್ನ ಮುಖಕಮಲದಲ್ಲಿ ಕಣ್ಣೆಂಬ ನೆಯ್ದಿಲ ಕುಸುಮವ ನೋಡೆನಲು ಅದಕ್ಕೆ ಸಂತೋಷವಾದಳು. ಬಳಿಕ ವರವ ಕೊಡಲು ಕಾಳಿದಾಸನೆಂದು ಹೆಸರಾಯ್ತು. ಒಂದು ದಿನ ಕಾಳಿದಾಸನು ಲಿಂಗವ ಪೂಜಿಸಿ ಕಣ್ಣ ತೆಗೆದು ಹರಿವಾಣದೊಳಿಟ್ಟು ಆರತಿಯ ಬೆಳಗಲು ಶಿವ ಮೆಚ್ಚಿ ಕಣ್ಣುಗಳ ಕೊಟ್ಟು ಮತ್ತೇನು ಬೇಕೆನಲು ಮಗಳ ಕಣ್ಣಾಗಬೇಕೆಂದು ಪಡೆದು ಕಣ್ಣಿಲ್ಲದ ವರಿಗೆ ಕೊಡುತ್ತಿರಲು ಅತ್ತ ಕಾಶಿಯಲ್ಲಿ ಜೇಷ್ಠರಾಜನ ಕಣ್ಣು ಹೋಗಲು ಇನ್ನು ರಾಜ್ಯವನಾಳೆನು ಸತ್ತೆನೆನಲು ಮಂತ್ರಿಯು ಕಾಳಿದಾಸ ಕಣ್ಣು ಕೊಡುತ್ತಾನೆ, ಅಲ್ಲಿಗೆ ಹೊಗೆನಲು ಅದ ಕೇಳಿ ಸಂಹಿತೆ ಕಾಳಿದಾಸನು ಅವ ಕೊಟ್ಟಾನು, ನಾ ಕೊಡೆನು ಎಂದು ಶಿವನ ಕೃಪೆಯ ಕಂಡುಗ ನವಣಿ ಯಷ್ಟು ಕಣ್ಣ ಪಡೆದು ಅರಸಿಗೆ ಕೊಟ್ಟು ಮತ್ತೆ ಕಣ್ಣಿಲ್ಲದವರಿಗೆ ಕೊಡು ತ್ತಿರಲು ಶ್ರೀಶೈಲದಲ್ಲಿ ಕಂಗಳ ದೇವಯ್ಯನು ಮಲ್ಲಿಕಾರ್ಜುನಗೆ ಕಣ್ಣ ನರ್ಪಿಸಿ ಮರಳಿ ಪಡೆವುದೇನರಿದು ಪರರ ಕಣ್ಣು ಪಡೆವುದತಿಶಯವೆಂದು ನಿಂದಕರೆನಲು ಆಗ ಚಕ್ಕನೆ ಕಣ್ಣ ಕಿತ್ತು ಮರಳಿ ಪಡೆದನು. ಮತ್ತೆ ಕಾಚಿಕಾಮನೆಂಬ ಶರಣರು ಆ ಕಂಡುಗ ನವಣಿಯಷ್ಟು ಪಡೆದ ಕಣ್ಣು ತೀರಿ ಹೋದಾವೆ ಸರಿ ಎಂದು ಮನುಜರಿಗೆ ಬಯಸಿದಾಗ ಕಣ್ಣ ಕೊಡು ವರು. ಮತ್ತೆ ನಂಬೆಣ್ಣನೆಂಬ ಶರಣ ಗುಡಿಯ ಹಿಂದೆ ನಯನವ ಕಳಚಿ

ಬೇಡಲು ಆಗ ಶಿವನು ಲಿಂಗದೊಳಗಿಂದ ಸಮೀಪಕ್ಕೆ ಬಾ ಕೊಟ್ಟೆನೆನಲು ನೀನು ಸರ್ವೇಶನೆಂಬುದು ಹುಸಿಯೇ, ಅಲ್ಲಿಗೆ ಬರುವುದೆನಲು ಆಗ ಇದ್ದಲ್ಲಿಗೆ ಬಂದು ಕಣ್ಣ ಕೊಟ್ಟನು. ಹೀಗೆ ಶರಣರು ಮಹಿಮೆಯ ಮೆರೆದರು.

## ಓಹಿಲಯ್ಯ.

ಉತ್ತರದೇಶದಲ್ಲಿಯ ವಿಳಾವತಿ ಎಂಬ ಪುರದಲ್ಲಿ ನಿಃಕುಂಬನೆಂಬ ರಾಯ ರಾಜ್ಯವನಾಳುವಾಗ ಮಕ್ಕಳಿಲ್ಲವೆಂದು ಚಿಂತಿಸುತ್ತ ಶಿವಾಲಯಕ್ಕೆ ಬಂದು ಅಷ್ಟವಿಧಾರ್ಚನೆಯಿಂದ ಲಿಂಗವ ಪೂಜಿಸುತ್ತಿರಲು ಆಗ ಶಿವನು ಪ್ರಸನ್ನವಾಗಿ ಇಂತೆಂದನುಃ— ಜ್ಞಾನಸ್ವರೂಪನಾದ ಮಾಯಾವಿಕಾರವ ಹೊದ್ದದ ಸಚ್ಚರಿತ್ರನಾದ ಪುತ್ರನಾದನೆಂದು ನುಡಿದು ಶಿವನು ಲಿಂಗ ದೊಳಗೆ ಬಯಲಾದನು. ಇತ್ತ ರಾಜಪುತ್ರನ ಪಡೆದು ಓಹಿಲಯ್ಯನೆಂದು ಹೆಸರಿಡಲು ವಿರಕ್ತಿ ಬೆಳೆವಂತೆ ಶಿವಭಕ್ತಿಗೆ ಅವಯವಂಗಳು ಬಂದಂತೆ ಬೆಳೆವುತ್ತ ಹದಿನಾರು ವರುಷದ ಪ್ರಾಯವಾಗಲು ಆ ಮೇಲೆ ತಂದೆಯಾದ ನಿಃಕುಂಬರಾಯ ಮರಣವಾಗಲು ಬಂಧುಗಳು ದುಃಖದಿಂದ ಓಹಿಲಯ್ಯನ ಬಳಿಗೆ ಬಂದು ಮರಣವಾದನೆನಲು ಹೆಣನ ಸಂಚಕರಿಸುವ ಠಾವಿಗೆ ಬಂದು ಇರಲು ಆ ಮಂತ್ರಿಗಳು ಶ್ರೀಗಂಧದ ಕಟ್ಟಿಗೆಗಳನೊಟ್ಟಿ ಅದರ ಮೇಲೆ ಹೆಣನ ಮಲಗಿಸಿ ಅಗಿರು ಕೊರಡುಗಳನೊಟ್ಟಿ ಉರಿಗೊಳಿಸಿ ಸುಡುವಾಗ ಓಹಿಲಯ್ಯನು ಮುಗ್ಧಭಾವದಿಂದ ನನ್ನ ತಂದೆ ಎಂದು ಬಂದಾನೆಂದು ಕೇಳಲು ಇನ್ನು ಬಾರನೆನಲು ನನಗೂ ಇಂತಪ್ಪ ಮರಣವೇ ಸರಿ ಎನಲು ನಿನಗೂ ಹಾಗೇ ಸರಿ ಎನಲು ಆಗ ಓಹಿಲಯ್ಯನು ಮರಣವ ಬಿಡಿಸು ವರುಂಟೆ ಎಂದು ಓರ್ವ ಶಿವಭಕ್ತನ ಕೇಳಲು ಆ ಭಕ್ತನಿಂತೆಂದನು. ಇಲ್ಲಿಗೆ ಇಪ್ಪತ್ತುಗಾವುದದಲ್ಲಿ ಸೌರಾಷ್ಟ್ರಸೋಮೇಶ್ವರನುಂಟು ಆತನು ಬಿಡಿಸುವನೆನಲು ಆಗ ಓಹಿಲಯ್ಯ ರಾಜ್ಯವ ಬಿಟ್ಟು ಪಟ್ಟಾವಳಿಯ ಬಿಟ್ಟು ಕೈಪವನುಟ್ಟು ಸರ್ವಾಂಗುದ್ಧೂಳನವ ಮಾಡಿ ಸೌರಾಷ್ಟ್ರಕ್ಕೆ ಹೋಗುವಾಗ ಮಂತ್ರಿಗಳು ಅವನ ಪಾದದ ಮೇಲೆ ಬೀಳಲು ನಮ್ಮ ಹಾದಿ ನಿಮ ಗೇಕೆ ಎಂದು ಹೋಗುತ್ತಿರಲು ಮುಂದೆ ಸೋಮೇಶ್ವರನ ಶಿಖರವ ಕಂಡು ಅಡ್ಡಬಿದ್ದು ನಮಸ್ಕರಿಸಿ ಆ ಮೇಲೆ ಲಿಂಗವ ಕಂಡು ನುತಿಸಿದನು. ಏನೆಂಬೆನೆನ್ನ ಪುಣ್ಯವ ಎಲೆ ಯತಿಧರನೆ ಸಾವಿಂಗೆ ಭೀತಿಗೊಂಡೈ ತಂದೆಗೆ ಸಾಯಲೀಯದೆ ಸಲಹೆಂದು ಲಿಂಗದ ಮುಂದಿರ್ದ ಓಹಿಲಯ್ಯನ ಪೂಜಾ

ರಿಗಳು ಏಳೆಂದು ಕೈಹಿಡಿದೆತ್ತಲು ಶಿವಲಿಂಗವ ಬಿಗಿದಪ್ಪಿಕೊಂಡು ಎನ್ನೊಡೆಯನ ಬಿಡಲಾರೆನೆಂದು ಅಳುತ್ತಿರಲು, ಬಲ್ಪಿನಿಂದ ಬಿಡಿಸಿ ಗುಡಿಯ ಹೊರಯಿಂಕೆ ಕರೆತಂದು ಬಿಟ್ಟು ಬೀಗವ ಹಾಕಿ ಹೋಗಲು ಇತ್ತ ಸೋಮೇಶ್ವರನು ಗುಡಿಯ ಅಧಿಕಾರಿಯ ಸ್ವಪ್ನದಲ್ಲಿ ಗಂಟಲವ ತ್ರಿಶೂಲದಲ್ಲಿ ತಿವಿದು ಓಹಿಲದೇವನ ಕರತಾರೆನಲು ಆ ಅಧಿಕಾರಿ ಬೀಗವ ತೆಗೆದು ಒಳಯಿಂಕೆ ಹೊಗಿಸಲು ಆಗ ಲಿಂಗವ ಸ್ತುತಿಸಿದರು. ಸಾವಿಂಗೆ ಅಂಜಿ ಮರೆಯಹೊಕ್ಕವನ ಕರುಣದಿಂದ ರಕ್ಷಿಸೆಂಬ ಮಗನ ಬಿನ್ನಪವನು ಸೋಮನಾಥನು ಕೇಳಲು ಎಲೆ ಮಗನೆ ಹನ್ನೆರಡು ವರುಷ ಗುಗ್ಗುಳವ ತಂದು ನಮಗೆ ಸಮರ್ಪಿಸಿದರೆ ಮರಣವ ತೊಲಗಿಸಿ ನಿತ್ಯತ್ವವ ಕೊಟ್ಟೆವೆನಲು ಆದಕ್ಕೆ ಸಂತೋಷಬಟ್ಟು ಓಹಿಲಯ್ಯಗಳು ಸೋಮನಾಥನ ಕಯ್ಯ ಕಳುಹಿಸಿಕೊಂಡು ಗುಗ್ಗಳಕೆಂದು ದ್ವೀಪಾಂತರಕ್ಕೆ ಹೋಗಿ ಭಕ್ತರು ಕೊಟ್ಟ ದ್ರವ್ಯಮಂ ಕೊಟ್ಟು ಸಹಸ್ರ ಕಂಬಿಗಳಂ ತುಂಬಿ ಬಿಳಿಯ ಪಟ್ಟೆ ವಸ್ತ್ರವ ಮುಚ್ಚಿ ಮುದ್ರೆಯ ಹಾಕಿ ಕಂಬಿಗಳ ಹೊರಿಸಿಕೊಂಡು ಸೌರಾಷ್ಟ್ರಕ್ಕೆ ಬಂದು ಗುಡಿಯ ಹೊಕ್ಕು ದೇವರಿಗೆ ಗುಗ್ಗಳದ ಕಂಬಿಗಳ ಮುದ್ರೆ ಸಹವಾಗಿ ಒಪ್ಪಿಸಿ ಆ ಗುಗ್ಗಳದೊಳಗೆ ರಸವತ್ತಾದ ಹಳಕುಗಳ ತಂದು ಸಕ್ಕರೆ ತುಪ್ಪ ಜೇನತುಪ್ಪಗಳೊಳಗೆ ನೆನಿಸಿ ಧೂಪಾರತಿಯಲ್ಲಿ ಕೆಂಡವ ಪಡುಮಾಡಿ ಅದರಲ್ಲಿ ನೀಡಿ ಲಿಂಗಕ್ಕೆ ಅರ್ಪಿಸಲು ಆ ಸೋಮೇಶ್ವರನು ಅದ ಕೈಯ್ಯಲ್ಲಿ ಆಗ ಘ್ರಾಣಿಸಿ ಸಂತುಷ್ಟನಾದನು. ಈ ತೆರದಿಂದ ಓಹಿಲಯ್ಯ ಹನ್ನೆರಡು ವರುಷ ಪರಿಯಂತರ ನೇಮವ ನಡಿಸಿ ತನಗಿನ್ನು ಮುಕ್ತಿಯ ಕರುಣಿಸೆನಲು ಆಗ ಶಿವನು ಇಷ್ಟು ದಿನ ಮಾಡಿದ ಭಕ್ತಿ ಹೊನ್ನಕೊಟ್ಟವರಿಗಾಯಿತ್ತು ನಿನಗೇನು ಇಲ್ಲವೆನಲು ನೊಂದುಕೊಂಡು ದೇವಾ ಎನ್ನೊಡನಿಂತೇಕೆ? ನಾನು ಸ್ವತಂತ್ರನೇ? ಸೂತ್ರಧಾರಿ ನೀನಾಡಿಸಿದಂತಾಡಿದೆನೆನೆ, ಎಲೆ ಮಗನೆ ಇನ್ನೊಮ್ಮೆ ನಿನ್ನ ದೇಹವ ಬಳಲಿಸಿ ಮಲಯಾಚಲಕ್ಕೆ ಹೋಗಿ ಧೂಪವ ತಂದು ಹನ್ನೆರಡು ವರುಷವ ನಡಿಸು ಎನಲು ಆಗ ಕಂಬಿಯ ಹೊತ್ತುಕೊಂಡು ಹೋಗಿ ಎಂದಿನಂತೆ ಧೂಪವ ತಂದು ಲಿಂಗಕ್ಕೆ ಸಮರ್ಪಿಸಿ, ದೇವಾ ನೀವು ಹೇಳಿದಂತೆ ಧೂಪವನರ್ಪಿಸಿದೆನು, ಇನ್ನಾದರೂ ಕೃಪೆ ಮಾಡೆನಲು ಆಗ ಶಿವನು ಕೈಲಾಸಕ್ಕೆ ಕರದೊಯ್ದನು.

## ತೆಲಗು ಜೊಮ್ಮಯ್ಯ.

ತೆಲುಗ ಜೊಮ್ಮಯ್ಯಗಳು ಪೇರ್ಮಾಡಿರಾಯನ ಪ್ರಧಾನಿ ಪಟ್ಟವ ಬಿಟ್ಟು ಬೇಂಟೆಯ ಕಾಯಕದಲ್ಲಿರುತ್ತಿರಲು ಶ್ರೀಶೈಲದಲ್ಲಿ ಶಿವಾನಂದನೆಂಬ

ಯೋಗೀಶ್ವರನು ತಪವ ಮಾಡುವಾಗ ಗಾಂಧರ್ವರು ಅವರು ಕರಡೆ ಎಂದು ನುಡಿಯಲು ಅದ ಕೇಳಿ ಶಿಷ್ಯ ಕೇಳಿ ನೀವು ಮೃಗಗಳಾಗಿ ಎಂದು ಶಪಿಸಿದರು. ಅವರು ಕಲ್ಯಾಣದ ಸಮೀಪದ ಅರಣ್ಯದಲ್ಲಿ ಮೃಗಗಳಾಗಿರಲು ಆಗ ಜೊಮ್ಮಯ್ಯ ಬೇಂಟೆಯ ನೆವದಲ್ಲಿ ಗಾಂಧರ್ವರ ವಧಿಸಿ ಕೈಲಾಸಕ್ಕೆ ಕಳುಹಿದರು.

---

## ೫೨೧ ನೆಯ ವಚನದ ಕಥೆ. (೭೭—೧೮)

ಗ್ರಂಥಃ— ಈಶ್ವರೋವಾಚ ಭಕ್ತದಾಸೋಹ ಭಾವಂಚ ಸೋಹಂ ಭಾವಂಚ ಜಂಗಮಂ ಭಾವಭೇದದ್ವಯಂ ನಾಸ್ತಿ ಪ್ರಕೃತಿ ಪ್ರತಿಬಿಂಬವತ್. ಟೀಕುಃ— ಭಕ್ತನ ದಾಸೋಹಭಾವ, ಜಂಗಮವು ಸೋಹಂಭಾವ ಈ ಎರಡಕ್ಕಂ ಭೇದವಿಲ್ಲ. ಅದು ಹೇಗೆಂದರೆ ಪ್ರತಿಬಿಂಬದೋಪಾದಿ.

---

## ೫೨೨ ನೆಯ ವಚನದ ಕಥೆ. (೭೮—೨೦)

### ಜಮದಗ್ನಿ.

ಜಮದಗ್ನಿ ಮುನಿ ಕಾಮಧೇನುವಿಂ ಕಾರ್ತವೀರ್ಯಾಂಗೆ ಶಾಂತಿಯ ಮಾಡಿ ಬೇತಾಳನಾಯಿತ್ತು.

ಅಂತು ಭಕ್ತಸ್ಥಲ ವಚನದ ಕಥೆ ಸಮಾಪ್ತ.

---

## ಮಹೇಶ್ವರಸ್ಥಲದ ವಚನದ ಕಥೆಗಳು.

## ೪ ನೆಯ ವಚನದ ಕಥೆ. (೭೮—೪)

ವೇದೇನ ಸರ್ವ ಕರ್ಮಾಣಿ ಸಂಭವಂತಿ ವೇದ ಸ್ವಯಂಭೂ ಎಂಬ ಅರ್ಥದಿಂದ ವೇದವೇ ದೈವ ಮತ್ತಂ ವೇದೇನ ಸರ್ವ ಶಾಸ್ತ್ರಾಣಿ ಎಂದೆನಲು, ವೇದವೇ ನಿತ್ಯ ಸತ್ಯ ವೇದವೇ ಮುಕ್ತಿ ಪಥವು ಮತ್ತಂ ವೇದ ನ ತತ್ಪರಂ ನಾಸ್ತಿ ಎಂದುದಾಗಿ ವೇದವು ಹೇಳಿದ ವ್ಯವಹಾರ ಮುಖದಿಂದ ನಡೆಯಲು ಸಮಸ್ತ ಸುಖಭೋಗ ಫಲವ ಕೊಡುವದು. ಅದು ನಿಮಿತ್ತಂ ಸರ್ವಕ್ಕೆ ವೇದವೇ ಕರ್ತೃ ವೇದವೇ ಮೊದಲು ಎಂದೆನಲು, ವೇದವೇ ಮೊದಲೆಂಬ ವಾದಿ ನೀ ಕೇಳಾ. ಶಿವನಿಂದಲಾದ ಮೂವತ್ತಾರು ತತ್ವಂಗಳಲ್ಲಿ ಆಕಾಶ ತತ್ವದಿಂದ ಶಬ್ದವಾಯಿತ್ತು. ಆ ಶಬ್ದಸಂಬಂಧವಾದ ವೇದಕ್ಕೆ ನಿತ್ಯತ್ವ ಉಂಟೇ? ವೇದ ಸ್ವಯಂಭುವಾದಡೆ ಪ್ರಳಯ ಕಾಲದೊಳು ಅಳಿಹು ಗೆಲಹಕ್ಕೊಳಗಾದುದು ಮುಖ್ಯ ಶಾಸ್ತ್ರವು. ಮರುಳೇ ಶಿವಸಿದ್ಧಾಂತವೇ ಮುಖ್ಯ ಶಾಸ್ತ್ರ. ಮತ್ತಂ ಋಗ್ವೇದಕ್ಕೆ ಅರುಣ ವರ್ಣದ ದೇಹ ಅತ್ರಿ ಮುನಿ ಗೋತ್ರ ಗಾಯತ್ರಿಯೆ ಛಂದಸ್ಸು ಬ್ರಹ್ಮನಧಿದೈವ. ಯಜುರ್ವೇದಕ್ಕೆ ತಾಮ್ರವರ್ಣದ ದೇಹ ಭಾರದ್ವಾಜ ಮುನಿಗೋತ್ರ ತಿಷ್ಠುಪುರಂದಸ್ಸು ವಿಷ್ಣು ಅಧಿದೈವ. ಸಾಮವೇದಕ್ಕೆ ಶ್ವೇತ ವರ್ಣದ ದೇಹ ಕಾಶ್ಯಪ ಮುನಿಗೋತ್ರ ಜಗತೀ ಛಂದಸ್ಸು ಈಶ್ವರನಧಿದೈವ ಧವಳ ವರ್ಣದನೆರಡು ಶೃಂಗ. ಅಥರ್ವಣ ವೇದಕ್ಕೆ ಕೃಷ್ಣ ವರ್ಣದ ದೇಹ ಅನುಷ್ಟುಪ ಛಂದಸ್ಸು ಇಂದ್ರನಧಿದೈವ. ಇಂತು ವೇದಗಳಿಗೆ ಅಂಗ ವರ್ಣ ಗೋತ್ರ ಛಂದಸ್ಸು ಅಧಿದೈವತೆಗಳಿರಲು ವೇದ ಸ್ವಯಂಭುವೆಂಬ ಮಾತು ಸಲ್ಲದು. ಮತ್ತಂ ಪರಮೇಶ್ವರನು ಕಿರಾತರೂಪದಲ್ಲಿ ವೇದಂಗಳು ಶ್ವಾನವಾಗಿ ಬಳಿವಿಡಿದೆಯ್ದಿದವು. ತ್ರಿಪುರ ಸಂಹಾರ ಕಾಲದಲ್ಲಿ ರಥಕ್ಕೆ ಕುದುರೆಗಳಾದವು. ಅದು ನಿಮಿತ್ತ ವೇದವೇ ದೈವವೆಂಬ ಮಾತು ಸಲ್ಲದು, ಬಿಡು ಎಂದು ಖಂಡಿಸಿದರು.

---

## ೧೦ ನೆಯ ವಚನದ ಕಥೆ. (೭೯—೧೦)

ಶೃತಿ ಯಜುರ್ವೇದೆ ಯಜುರ್ವೇದದಲ್ಲಿ ಹರಿಗುಂ ಹರಂತ ಮನುಯಾಂದೇವಾವಿಶ್ವೇಶನಂ ವೃಷಭಂ ಮತೀನಾಂ ಟೀಕು:— ಮತೀನಾಂ

ವೃಷಭಂ ನಿಪುಣಾಂ ಶ್ರೇಷ್ಠನಾಗಿ ಹರಿಂ ಹರುತಂ ಹರಿಂ ವಿಷ್ಣುವಂ ಹರಂತಂ ಸಂಹರಿಸಿದ ಕಾರಣದಿಂದ ವಿಶ್ವಸ್ಯೇಶಾನಂ ವಿಶ್ವಜಗತ್ತಿಗೆ ಈಶಾನಂ ಒಡೆಯನಾದನೆಂದು ಅನುಯಾಂತಿ ಸೇವಿಸುತ್ತಿಹರು.

---

## ೧೧ ನೆಯ ವಚನದ ಕಥೆ. (೮೦---೧೧)

### ವಿಷ್ಣು.

ನಾರಾಯಣನು ಚಕ್ರವ ಪಡೆವುದಕ್ಕೆ ಹಿಮಗಿರಿಯಲ್ಲಿ ತಪವ ಮಾಡುತ ಸಹಸ್ರ ಕಮಲವ ಸಹಸ್ರ ನಾಮದಿಂದ ಲಿಂಗವ ನಿಯಮದಿಂದ ಪೂಜಿಸುತ್ತಿರಲು ಇವನ ನಿಷ್ಠೆಯ ನೋಡಬೇಕೆಂದು ಬಂದು ಬಯಲ ಮಾಡಲು ಇದೇ ಕಮಲವೆಂದು ನಯನವ ಪಾದಕರ್ಪಿಸಲು ಶಿವ ಮೆಚ್ಚಿ ಹತ್ತುಸಾವಿರ ಸೂರ್ಯರ ಕಾಂತಿಯುಳ್ಳ ಜಲಂಧರನ ಕೊಲ್ಲುವುದಕ್ಕೆ ನಿರ್ಮಿಸಿದ ಸುದರ್ಶನ ಚಕ್ರವನು ರಾಕ್ಷಸರ ಜಯಿಸೆಂದು ಕೊಟ್ಟು ಇಂದು ಮೊದಲಾಗಿ ಕಮಲಾಕ್ಷನೆನಿಸಿಕೋ ಎಂದು ಶಿವ ನಿರೂಪಿಸಿದನು.

---

## ೧೨ ನೆಯ ವಚನದ ಕಥೆ. (೮೦---೧೨)

### ಬ್ರಹ್ಮ.

ನಿಬ್ಬೆರಗಿನಿಂದ ತಪಸ್ಸು ಮಾಡುತ್ತಿದ್ದ ಶಿವಬೀಜನೆಂಬ ಋಷೀಶ್ವರನ ಸಮೀಪಕ್ಕೆ ಬ್ರಹ್ಮ ಬರಲಾಗಿ ಆತಂಗೆ ಮನ್ನಣೆಯ ಮಾಡದಿರಲು ಕೋಪಿಸಿ ಆ ಋಷೀಶ್ವರನ ಹೊಯಿದು ಕೆಡಹಿದರೆ ಶಿವಧೋ ಎಂದು ಬಿದ್ದನು. ಆ ಕ್ಷಣವೆ ಪರಮೇಶ್ವರನು ಬಂದಾ ಋಷೀಶ್ವರಂಗೆ ಪ್ರಾಣವ ಕೊಟ್ಟು ಸಂತೈಸಿ ಬ್ರಹ್ಮನ ಶಿರವ ಹೊಯ್ದು ರುಂಡಮಾಲೆಗೆ ಕಟ್ಟಿಸಿದನು.

### ಹರಿ.

ಸ್ವರ್ಗದಲ್ಲಿ ಅಂಗೀರಸನ ಮಕ್ಕಳು ಬೃಹಸ್ಪತಿಯು ಸಂವರ್ತಕನು ಈರ್ವರು ದಾಯಾದ್ಯ ಭಾಗಕ್ಕೆ ಯುದ್ಧಂಗೆಯ್ಯೆ ಸುರರು ಸಂವರ್ತಕನ ಹೊರಡಿಸಲು ಚಂದ್ರಹಾಸರಾಜನಿಗೆ ಚಂದ್ರಪನವಿಯನು ಕೊಟ್ಟೆಹೆನೆಂದು ಯಜ್ಞವ ಮಾಡಿಸಿ ಸುರರುಗಳು ಚಂದ್ರಹಾಸ ಮುಖ್ಯರ

ಸಂಹರಿಸಿ ಅಲ್ಲಿಂದ ವನಾಂತರಕ್ಕೆ ಬಂದು ಶಿವನ ಕುರಿತು ಮಾವಿನ ಮರದಡಿಯಲ್ಲಿ ತಪಸ್ಸಿರ್ದು ಒಂದು ಮಾವಿನ ಫಲವು ತಾನೆ ಒಂದು ಫಲವನೂಡಿ ಮರಳಿ ರಸ ತುಂಬಿ ತೊಟ್ಟಿಂ ಹತ್ತುವ ವರನ ಪಡೆದಿರೆ ವಿಷ್ಣು ಆತನ ಶಿರದ ಮೇಲೆ ನಿಂದು ಫಲವ ಕೊಯ್ಯುತಿರೆ ಆತನ ಶಿಷ್ಯರೀರ್ವರು ಮಂತ್ರೋದಕದಿಂ ಶಿರಚ್ಛೇದನವ ಮಾಡಲು ಶಿರವು ಶಿವನೆಡೆಗೆ ಹೋಗೆ ರುಂಡಮಾಲೆಗೆ ಕಟ್ಟಿಸಿದನು.

## ಸುರಪತಿ.

ಪಾರ್ವತೀದೇವಿಯರು ತೈಲಾಭ್ಯಂಗವ ಮಾಡಿಕೊಂಡು ರುದ್ರಕನ್ನಿಕೆಯರು ಸಹವಾಗಿ ಜಲಕ್ರೀಡೆಗೆ ಹೋಗುವ ಸಮಯದಲ್ಲಿ ದೇವೇಂದ್ರ ನೋಡಲು ಬರುತಿರ್ದುದ ಕಂಡು ದೇವಿಯವರು ಕೋಪಿಸಿ ಅವನ ಶಿರಚ್ಛೇದನವ ಮಾಡಿ ದೇವರ ಸಮೀಪಕ್ಕೆ ಕಳುಹಲು ರುಂಡಮಾಲೆಗೆ ಕಟ್ಟಿಸಿದನು.

## ಧರಣೇಂದ್ರ.

ಮಹಾಶೇಷನಿರುವಂತಹ ಏಕಾಂತ ಸ್ಥಲದಲ್ಲಿ ಉತ್ತರ ಪ್ರಕಾಶನೆಂಬ ಋಷೀಶ್ವರನು ತಪಸ್ಸು ಮಾಡುತ್ತಿರ್ದನು. ಆ ಕಾಲದಲ್ಲಿ ಮುಚುಕುಂದನೆಂಬ ದೈತ್ಯನು ಪಾತಾಳ ಲೋಕದಿಂದ ಮಹಾಶೇಷನ ಸಮೀಪಕ್ಕೆ ಹೋಗಿ ಪ್ರಶಂಸಿಸಿ ಆತನ ಅತಿಶಯವಾಗಿ ಕೊಂಡಾಡುತ್ತ ತಿರುಗಿ ಬರುವಾಗ ಅಲ್ಲಿ ಒಬ್ಬ ಬಂಟನು ಆತನ ಅತಿಶಯವೇನೆಂದು ಜರಿದು ಹೋಗಿ ಹಿಡಿದಿಹೆನೆಂದು ಹೋಗಿ ಕೈಯ್ಯ ನೀಡಲಾಗಿ ಮಹಾಶೇಷನು ಹಿಂದಕ್ಕಟ್ಟಿದನು. ಹಿಂದಟ್ಟಿದರೆ ಓಡಿ ಬಂದಾ ಋಷೀಶ್ವರನ ಮರೆಯ ಬಿದ್ದನು. ಬಿಡದೆ ವಿಷವನುಗುಳಿದನು. ಉಗುಳಲಾಗಿ ಆ ವಿಷಜ್ವಾಲೆಯಿಂದ ಋಷೀಶ್ವರನು ಮೃತಿಯನೆಯ್ದುವಾಗ ಶಿವಧೋ ಎಂದು ಬಿದ್ದನು. ಆ ಕ್ಷಣದಲೇ ಪರಮೇಶ್ವರನು ಬಂದಾ ಋಷೀಶ್ವರಂಗೆ ಪ್ರಾಣವ ಕೊಟ್ಟನು. ಮಹಾಶೇಷನ ಮೇಲೆ ಕೋಪಿಸಿ ಶಿರವ ಹೊಯ್ದು ರುಂಡಮಾಲೆಗೆ ಕಟ್ಟಿಸಿ ಉಳಿದ ಶಿರವನೆಲ್ಲ ಕೋಮಳವಾಗಿ ಉಟ್ಟನು.

## ಅಂತಕ

ನಾಗಾರಿ ಎಂಬ ಬ್ರಾಹ್ಮಣನ ಮಗನಾದ ಏಕಾಶಿ ತನ್ನ ಬ್ರಾಹ್ಮಣಿಯ ಬಿಟ್ಟು ಕಳ್ಳ ಬಂಟನಾಗಿ ಕ್ರೂರ ಕರ್ಮದಿಂದಿರಲು ಆತನ ಕೊಂದು

ಹೋಗಬೇಕೆಂದು ಯಮಭಟರು ಬರಲಾಗಿ ಅವರ ಕಂಡು ಶಂಭುಲಿಂಗದ ಮರೆಯ ಹೊಗಲು ಅವರು ಅಂಜಿ ಓಡಿ ಹೋದರು. ಮರಳಿ ಯಮ ತಾನೆ ಬಂದು ಲಿಂಗದ ಮರೆಯಲಿದ್ದವನ ಮೇಲೆ ಪಾಶವ ಹಾಕಿ ಎಳೆಯಲಾಗಿ ಶಿವಧೋ ಎಂದು ಗೋಳಿಟ್ಟನು. ಅಷ್ಟರೊಳಗೆ ಪರಮೇಶ್ವರನು ಪ್ರತ್ಯಕ್ಷನಾಗಿ ಯಮನ ಶಿರಸ್ಸನ್ನು ಹೊಯ್ದು ರುಂಡಮಾಲೆಗೆ ಕಟ್ಟಿಸಿ ಆ ಬ್ರಾಹ್ಮಣಂಗೆ ರುದ್ರಪದವಿಯ ಕೊಟ್ಟನು. ಈ ಕಥೆಯನ್ನು ಜೈಮಿನಿ ಋಷಿಯು ನಾರದನ ಮುಂದೆ ಹೇಳಿದನು.

---

## ೧೩ ನೆಯ ವಚನದ ಕಥೆ. (೮೦—೧೩)

### ಅಂಧಕಾಸುರ

ನರಪರ್ವ ಗಾವಿಲಋಷಿ ವಸುದೇವನ ಮಗಳು ಹಿರಣ್ಯಕಶ್ಯಪನ ತಮ್ಮ ಹಿರಣ್ಯಾಕ್ಷ ಆತನ ಸೂನು ಅಂಧಕಾಸುರ ಆತನ ಭೀತಿಯಿಂದ ದೇವತೆಗಳು ಮೊರೆ ಇಡೆ ಕೇಳ್ದು ಕಾಶಿಯಲ್ಲಿ ನಾಂಟ್ಯವಾಡೆ ನುತಿಸೆ ನುತಿಗೆ ಮೆಚ್ಚಿ ಹರನು ಗಾಣಪತ್ಯತ್ವವಿತ್ತನು.

### ಮಹಿಷಾಸುರ

ಕಾಶೀಖಂಡ ಸ್ಕಂದಪುರಾಣ ಸಾಕ್ಷಿ. ಮಹಿಷಾಸುರನ ಸೂನು ಗಜಾಸುರ ನವಸಾವಿರಯೋಜನದುದ್ದ ಶರೀರ ಉಳ್ಳಾತನಾಗಿ ಆತನ ಉಪಹತಿಯಿಂದ ತರುಗಿರಿ ನುಗ್ಗಾಗುತ್ತಿರಲು ಅನಿತರಲ್ಲಿ ಹರಿಯಜ ಮುಖ್ಯರು ಹರಗೆ ಮೊರೆ ಇಡೆ ಶೂಲದಲ್ಲಿರಿದು ನಾಂಟ್ಯವನಾಡೆ ಅವನ ಸ್ತುತಿಸೆ ಮಚ್ಚಿ ಕಾಶಿಯಲ್ಲಿ ಚರ್ಮವ ಹೊದ್ದು ಕೃತ್ತಿವಾಸನೆಂದು ವಿರಾಜಿಸಿದನು.

---

## ೧೪ ನೆಯ ವಚನದ ಕಥೆ. (೮೦—೧೪)

### ಕಕ್ಕಯ್ಯ

ಬಿಜ್ಜಳನ ಅರಮನೆಯ ಮುಂದೆ ವೈಷ್ಣವನು ಪುರಾಣವ ಹೇಳುವಾಗ ಶಿವನು ದೇವಿಯರ ಕೂಡೆ ವಿಷ್ಣು ಸಹಸ್ರ ನಾಮವ ಹೇಳಿದನೆಂದು ಹುಸಿಯ ಹೇಳಲು ಆಗ ಕಕ್ಕಯ್ಯನೆಂಬ ಶರಣನು ಅವನನಿರಿಯಲು ಹುಳುವಿನ ರಾಶಿಯಾದನು.

### ಭೃಗು

ತ್ರಯೋದಶಂ ಕರಿಧ್ವಂಸೆ ಸ್ಕಂದಪುರಾಣ ಕಾಳಿಕಾ ಖಂಡದಲ್ಲಿ ವಾಯುಮುನಿ ತೃಣಬಿಂದು ಮುನಿಯು ಕೇಳೆ ಪೇಳ್ದ ನಾರದ ರಕ್ಕಸರಿಗೆ ದೇವತೆಗಳಿಗೆ ದಾಯಾದಿ ವಿಷಯುವ ಹುಟ್ಟಿಸಲು ಆ ಕಥನದಿಂದ ಅವರಿಗೆ ಯುದ್ಧವಾಗೆ ಭೃಗುಮುನಿಯು ಹೋಗೆ ಅವನ ಸತಿ ದಿವ್ಯದೇವಿ ಮಂತ್ರದಿ ಸ್ತಂಭಿಸೆ ಹರಿಯು ಚಕ್ರದಲ್ಲಿಡೆ ಆಕೆಯು ಶಿರವರಿಯಲು ಭೃಗುಮುನಿ ಸಂಜೀವನ ಮಂತ್ರದಿಂ ಶಿರವನಿತ್ತು ಹರಿ ಎದೆಯು ನೊದೆದು ನೀಚೋತ್ಪತ್ತಿ ಪಡೆ ಎಂದು ಶಪಿಸೆ ದಶಾವತಾರದಲ್ಲಿ ಹುಟ್ಟಿದನು.

---

## ೧೮ ನೆಯ ವಚನದ ಕಥೆ. (೮೧—೧೮)

### ಅನುಸೂಯೆ

ದಕ್ಷನ ಮಗಳಾದ ಅತ್ರಿಮುನಿಯ ಸತಿ ಅನುಸೂಯಾದೇವಿ ಭಕ್ತಿಯು ಮಾಡುತ್ತಿರಲು ಬ್ರಹ್ಮ ವಿಷ್ಣು ರುದ್ರರು ಈಕೆಯು ನೋಡಬೇಕೆಂದು ಮುನಿಗಳಾಗಿ ಬರಲು ಭಿಕ್ಷಕ್ಕೆ ಬರಲು ಆಗ ಕುಳ್ಳಿರಿಸಿ ನೀಡುವಾಗ ಮಗಳೇ ನಮಗೆ ಹುಟ್ಟಿದ ಮಾರ್ಗದಲ್ಲಿ ನೀಡಿದರೆ ಸಲಿಸಿಕೆನಲು, ಆಗ ಅನುಸೂಯೆ ಆಗದೆಂದರೆ ಭಕ್ತಿಗೆ ಕುಂದು, ಬೆತ್ತಲೆ ನೀಡಿದರೆ ಅಭಿಮಾನಕ್ಕೆ ಕೆಟ್ಟೆತ್ತೆಂದು ಅಣಿಮಾ ಮಂತ್ರದಿಂದ ಹುಟ್ಟಿ ಮುಟ್ಟಿಸಲು ಶಿಶುರೂಪಗಳ ಮಾಡಿ ಬೆತ್ತಲೆ ನೀಡಿ ಅವರುಂಡ ಬಳಿಕ ಸೀರೆಯನುಟ್ಟು ಗರಿಮಾ ಮಂತ್ರದಿಂದ ಹುಟ್ಟಿನಲ್ಲಿ ಮುಟ್ಟಿಸಲು ಮೊದಲಂತಾಗಿ ಮೆಚ್ಚಿದೆವು ಬೇಡು ಎನಲು ನೀವು ಮೂವರು ನನಗೆ ಮಕ್ಕಳಾಗಿ ಎನಲು ಆಗ ಬ್ರಹ್ಮ ಸೋಮನೆಂಬ ನಾಮದಿಂದ ವಿಷ್ಣು ದತ್ತಾತ್ರೇಯನೆಂಬ ನಾಮದಿಂದ ಇಬ್ಬರೂ ಹುಟ್ಟಿದರು. ಬಳಿಕ ಅನುಸೂಯೆ ಗರಿಕೆಯಲ್ಲಿ ಲಿಂಗಪೂಜೆಯು ಮಾಡುವಾಗ ರುದ್ರನು ದೂರ್ವಾಸನೆಂಬ ನಾಮದಿಂದ ಹುಟ್ಟಿದನು. ಈ ರೀತಿಯಲ್ಲಿ ಅನುಸೂಯಾದೇವಿ ಭಕ್ತಿಯು ಮಾಡಿ ಶಿವನ ಕೃಪೆಯು ಪಡೆದಳು.

---

# ೧೯ ನೆಯ ವಚನದ ಕಥೆ. (೮೧—೧೯)

## ದೇವೇಂದ್ರ

ಮಹಾಮೇರುವಿನ ಕೆಳಗೆ ಶಿವಶೇಷನೆಂಬ ಋಷೀಶ್ವರನು ತಪಸ್ಸು ಮಾಡುತ್ತಿರಲಾಗಿ ದೇವೇಂದ್ರನು ಶಿವನ ಓಲಗಕ್ಕೆ ಹೋಗುವಾಗ ಆ ಋಷೀಶ್ವರನ ಬೆವರಿನ ವಾಸನೆಯು ಕಂಡು ಹೇಸಿ ಉಗಿಯಲು ಅದನರಿದು ಆ ಋಷೀಶ್ವರನು ಕೋಪಿಸಿ ಹೀನ ಜಾತಿಯಲ್ಲಿ ಹುಟ್ಟೆಂದು ಶಾಪವ ಕೊಡಲು ಈತ ಮರ್ತ್ಯದಲ್ಲಿ ಸೋಮಶಂಭುವೆಂಬ ಮುನಿಯು ಪೂರ್ವದಲ್ಲಿ ಶ್ವಪಚ ಆತನ ನೋಡಬೇಕೆಂದು ಅಮೃತವತಿ ಎಂಬವಳೊಬ್ಬ ವೇಶಿ ಬರಲಾಗಿ ಆವಳ ಕಂಡು ಭ್ರಮಿಸಿ ಆ ಮುನಿ ಕೂಡಿದ ಅವಳ ಗರ್ಭದಲ್ಲಿ ದೇವೇಂದ್ರ ಹುಟ್ಟಿದನು.

## ಬ್ರಹ್ಮ

ಮಹಾಮೇರುವಿನ ಮೇಲಣ ಕಂಕಣದಲ್ಲಿ ಕಮಲಾಸನೆಂಬ ಋಷೀಶ್ವರನು ಆ ವೇಳೆಯಲ್ಲಿ ಶಿವನ ಓಲಗಕ್ಕೆ ಬ್ರಹ್ಮ ಹೋಗುವಾಗ ಆ ಋಷೀಶ್ವರನ ಕಂಡು ಅಂಜದೆ ಸೋಂಕಿಕೊಂಡು ಹೋಗಲಾಗಿ ಆ ಋಷೀಶ್ವರನು ಕೋಪಿಸಿ ಬ್ರಹ್ಮಂಗೆ ನಿಜಾಶ್ರಯದಲ್ಲಿ ಹುಟ್ಟಿಹೋಗೆಂದು ಶಪಿಸಲು ಇತ್ತ ಮರ್ತ್ಯದಲ್ಲಿ ಸತ್ಯಋಷಿ ಎಂಬ ಮುನಿ ಪೂರ್ವದಲ್ಲಿ ಬೇಡನು ಆತನ ನೋಡಬೇಕೆಂದು ಜೇಷ್ಠಾದೇವಿ ಎಂಬವಳೊಬ್ಬ ಜಾರೆ ಬರಲು ಅವಳ ಕಂಡು ಭ್ರಮಿಸಿ ಕೂಡಿದನು. ಅವಳ ಗರ್ಭದಲ್ಲಿ ಬ್ರಹ್ಮ ಬಂದು ಜನಿಸಿದನು.

## ವಿಷ್ಣು

ಸೂರನ ಮಗ ವಸುದೇವನ ರಾಣಿ ದೇವಿಕೆಯು ಬಸಿರಲ್ಲಿ ಕೃಷ್ಣನಿರುವಾಗ ಭವಿಷ್ಯತ್ಕಾಲ ತಿಳಿದವರು ಈ ಹುಟ್ಟಿದ ಮಗ ನಿನ್ನ ಕೊಂದನೆಂದು ಕಂಸನಿಗೆ ಹೇಳಲು ಅವನು ಹುಟ್ಟಿದಾಗ ದನಿಯು ಮಾಡೆಂದು ಕತ್ತೆಯು ರೂಪದ ಖರನೆಂಬವನ ಮಡಗಲು ಬಳಿಕ ಕೃಷ್ಣ ಹುಟ್ಟಿದಾಗ ಕೂಗ ಬೇಡೆಂದು ವಸುದೇವ ಕತ್ತೆಯ ಕಾಲ ಹಿಡಿಯಲು ಅದು ಸುಮ್ಮನಾಯಿತ್ತು. ಬಳಿಕ ಕೃಷ್ಣನ ಎತ್ತಿಕೊಂಡು ಹೋಗಿ ಶಕ್ತಿಯ ಗುಡಿಯಲ್ಲಿ ನಂದ ಗೋಪಾಲ ಸತಿ ಹೆತ್ತ ಹೆಣ್ಣುಮಗುವು ಅಲ್ಲಿರಲು ಅದ ತೆಗೆದುಕೊಂಡೊಯ್ದು ಇರಿಸಿ ಬರುವಾಗ ನಂದಗೋಪಾಲ ಕಂಡು ಗಂಡು ಮಗುವ ಅಲ್ಲೇಕೆ ಮಡಗಿದೆ ಎನಲು ಅದು ಹೆಣ್ಣೆನಲು ಮತ್ತೆ ನೋಡೆಂದು ಕಳುಹಲು ಅದು

ಗಂಡಾಗಿರಲು ಎತ್ತಿಕೊಂಡು ಬಂದು ಸಾಕುತ್ತಿರಲು ಅದಕೇಳಿ ಕಂಸನು ವಿಷದ ಮೊಲೆಯು ಪೂತಿನಿ ಎಂಬವಳ ಮೊಲೆಯು ಕೊಡೆಂದು ಕಳುಹಲು ಆಗ ಮೊಲೆಯುಸುಣಿಸುವಾಗ ವಿಷವನೆಲ್ಲ ಹೀರಿ ಉಗುಳಿದ. ಅಲ್ಲಿಂದ ಕಂಸನ ಜಯಿಸಿ ಸುಖದಲ್ಲಿರುತಿರ್ದನು.

## ಅರುಹ

ಬುದ್ಧಿಯೇ ದೈವವೆಂಬ ಬೌದ್ಧವಾದಿ ಹಿಂಸೆಯು ಮಾಡಬಾರದೆಂಬ ಜೈನವಾದಿ ನಿನ್ನ ಪೂರ್ವವೃತ್ತಾಂತ ಕೇಳು ಶಾಲಿವಾಹನ ಶಕೆ ವರುಷಕ್ಕೆ ಮೊದಲು ೫೦೬ ವರುಷದಲ್ಲಿ ನಾಭಿರಾಜ ಮರುತಾದೇವಿ ಅರುಹನೆಂಬ ಹೆಸರಿನಿಂದ ಪುಟ್ಟಿ ಬೇಂಟೆಗೆ ಹೋಗಿ ಸರಸೀತೀರದಲ್ಲಿ ತೋಹ ಬಿಟ್ಟಿರೆ ವೃಷಭನು ನೀರ್ಗುಡಿವುದಕ್ಕೆ ಬರೆ ಕೊಂದು ನೋಡೆ ವೃಷಭನಾಗಿರೆ ಶಾಸ್ತ್ರಜ್ಞರ ಕರಿಸಿ ವೃಷಭವಧೆಗೆ ಪ್ರಾಯಶ್ಚಿತ್ತವಾವುದೆನೆ ವಿಶ್ವರಾದಿ ಶಾಸ್ತ್ರ ವನೋದಿ ಪುರುಷ ಪ್ರಮಾಣದ ಅಟ್ಟಣೆಯು ರಚಿಸಿ ಅದರ ಮೇಲೆ ವೃಷ ಭನ ಮಡಗಿ ಅದರ ಕೆಳಗೆ ಪಲಾಶದ ಪರ್ಣವ ಹಾಸಿ ಪದ್ಮಾಸನದಲ್ಲಿ ಕುಳ್ಳಿರ್ದು ಆಜ್ಞಾಚಕ್ರದಿ ಪವನ ನಿಲಿಸಿ ಹೃತ್ಕಮಲ ಕರ್ಣಿಕಾ ಮಧ್ಯ ದಲ್ಲಿ ಆತನ ನೆಲೆಗೊಳಿಸಿ ಭ್ರುಕುಟಿಸ್ಥಾನ ಮಧ್ಯದಲ್ಲಿ ಪರಬ್ರಹ್ಮವನಿರಿಸಿ ಜಾನಿಸಿ ಸತ್ಪ್ರಣಮವನುಚ್ಚರಿಸುತ್ತ ಪಕ್ಷಮಾತ್ರವಿರೆ ದುರ್ಗಂಧಕ್ಕೆ ಸೆಲೆ ಯುದೆ ವೃಷಭ ಚರ್ಮವ ಹೊದೆದು ಅಂಡವ ಪಿಡಿದು ಬಾಲವ ಬಲಗೈ ಯುಲ್ಲಿ ಪಿಡಿದು ಆವಾಗಳು ಚರ್ಯತಪಂಗೆಯ್ವುತ ಜೀವರಾಶಿಗಳ ಕೊಲ್ಲದೆ ಸದ್ಧರ್ಮದಿಂದಿರೆ ದೋಷವು ಹೋಗುವದೆಂದು ಹೇಳಿ ಆಚರಿಸಿ ಅರು ಹನು ಅಪವರ್ಗವ ಸಾರ್ದನು. ಅಂದಿಂದಾಯಿತ್ತು ಜೈನಮತವು ಇಂತು ನಂದ ದೋಷವ ಕೆಡಿಸಲಾರದೆ ದುಃಖಬಟ್ಟನು ಅರುಹನು. ನಿಮಗೆಂತು ಮೋಕ್ಷವಪ್ಪುದು? ಜೈನರಿಗೆ ನರಕ ತಪ್ಪದು.

---

## ೨೦ ನೆಯ ವಚನದ ಕಥೆ (೮೧—೨೦]

ಯುಜುರ್ವೇದೆ ಯುಜುರ್ವೇದದಲ್ಲಿ ರುದ್ರೀಯುಪಶು ರುದ್ರದಲ್ಲಿಯು ನಮಃಶಿವಾಯು ಚ ಶಿವತರಾಯು ಚ ನಮಃಶಿವಾಯು ಚ ಹರಿಕೇಶಾಯು ಚ

ಟೀಕು:— ನಮಃ ಶಿವಾಯ ಚ ಶಿವತರಾಯ ಚ ಪರಶಿವಂಗೋಸುಗ ನಮಃ ಶಿವಾಯ ಚ ಶಿವಂಗೋಸುಗವು ಹರಿಕೇಶಾಯ ಚ ವಿಷ್ಣುಬ್ರಹ್ಮರಿಗೊಡೆಯನಾದಾತಂಗೆಯು ನಮಸ್ಕಾರವು.

## ೨೧ ನೆಯ ವಚನದ ಕಥೆ [೮೧—೨೧].

ಹರನೆ ದುಷ್ಟನಿಗ್ರಹ ಸೃಷ್ಟಿಪ್ರತಿಪಾಲನ ವಿಚಕ್ಷಣನೆಂದೆಂಬರು. ನಿಮಗೆ ಅಹಂಕರಿಸಿದ ಬ್ರಹ್ಮವಿಷ್ಣು ದಕ್ಷಾದಿಗಳ ಶಿರಚ್ಛೇದನವ ಮಾಡಿದಿರಿ. ನಿಮಗೆರಗದೆ ದುರ್ವೃತ್ತಿಯಲ್ಲಿ ನಡೆದ ಗಜಾಸುರ ವ್ಯಾಘ್ರಾಸುರ ಗುಹ್ಯಾಸುರರುಗಳ ಕೊಂದು ಕಳೆದಿರಿ. ಇದನರಿದು ಸ್ತೋತ್ರವ ಮಾಡಿದರೆ ನೀವು ಕರುಣಿಸಿದಿರಯ್ಯ. ಇಂತಹ ಕರ್ತರಿನ್ನುಂಟೆ? ನಿಮ್ಮಂತಹ ಬಲಿಷ್ಠರಿನ್ನುಂಟೆ? ನಿಮ್ಮಂತಹ ಪುರುಷರುಗಳಿನ್ನುಂಟೆ? ಶಿವಶಿವಾ ದುಷ್ಟದುಷ್ಟರುಗಳೆಲ್ಲರ ಶಿಕ್ಷಿಸಿದಿರಿ. ಎನ್ನ ಮನವ ಶಿಕ್ಷಿಸಲಾರಿರೇ? ಶಿವಶಿವಾ ನಿಮ್ಮಿಂದ ಎನ್ನಮನ ಸಾಮರ್ಥ್ಯವುಳ್ಳುದಲ್ಲಾ! ಎನ್ನಿಂದ ನೀವು ಸಾಮರ್ಥ್ಯವಿಲ್ಲದಿರ್ದೊಡೆ ಶಿವಭಕ್ತ ಅಪರಾಧಿಗಳ ಶಿಕ್ಷಿಸುವಂಥ ಇರಿಭಕ್ತರು ಕಾಲಾಗ್ನಿ ರುದ್ರ ಮಡಿವಾಳ ಮಾಚಯ್ಯಂಗೆ ಮೊರೆಯಿಟ್ಟು ಕಳೆವೆನು ಶಿವಧೋ ಶಿವಧೋ. ಎನ್ನ ಮೊರೆಯ ಕೇಳಿರಣ್ಣಾ. ಹರನೇ ನೀನು ದುಷ್ಟನಿಗ್ರಹ ಶಿಷ್ಟ ಪ್ರತಿಪಾಲನೆಂಬ ಬಿರುದ ಬಿಟ್ಟು ಕಳೆ. ಬಳಿಕ ನಿಮ್ಮ ವರದ ಹಸ್ತನೆಂಬೆ, ಶಂಕರನೆಂಬೆ, ಶಶಿಧರನೆಂಬೆ, ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರನೆಂಬೆ.

## ೨೨ ನೆಯ ವಚನದ ಕಥೆ (೮೧—೨೨).

### ವ್ಯಾಸ.

ಕಾಳಿಕಾಖಾಂಡೆ, ವೈಭವಖಾಂಡದಲ್ಲಿ ಹೇಳುತ್ತಿದ್ದಿತ್ತು. ತೃಣಬಿಂದು ಮುನಿ ಅನಿಲಾದ ಮುನಿಯ ಬೆಸಗೊಂಡನು. ಹರಿಯಜರಿಂದಧಿಕರಾರೆನೆ, ಶಿವನೇ ಅಧಿಕನೆಂದು ವೇದವ್ಯಾಸನಿಗೆ ದೃಷ್ಟವನೊರೆದನದೆಂತೆನೆ— ಕಾಳಿಂದಿನೀ ಎಂಬ ನದಿಯಲ್ಲಿ ಹುಟ್ಟಿದ ಸತ್ಯವತಿ ತಾನೆ ಮತ್ಸ್ಯಗಂಧಿ ತಾಯಿ, ಪಾರಾಶರಮುನಿ ತಂದೆ, ವೇದವ್ಯಾಸನೆ ಮಗನು. ನೈಮಿಷಾರಣ

ದಲ್ಲಿ ಮುನಿಗಳಿಗೆ ಸಕಲ ಶಾಸ್ತ್ರವ ಬೋಧಿಸುತ್ತಿರ್ದು ಶಿವಾಧಿಕ್ಯವ ಬಿಟ್ಟು ದುರ್ಬುದ್ಧಿಯಿಂ ವಿಷ್ಣುವೇ ದೈವವೆನೆ ಮುನಿಜನವೆಂದಿತ್ತು. ಕಾಶಿಯಲ್ಲಿ ವಿಶ್ವನಾಥನ ಗೃಹದಲ್ಲಿ ಕರವ ನೀಡಿ ದಿಟವೆಂದು ಎನ್ನು ಎಂದು ಋಷಿಜನವೆನಲು ಅಹುದೆಂದು ಬಂದು ಕರವೆತ್ತಿ ನ ಕೇಶವಾತ್ ದೈವ ಪರಃ ಎನೆ ಭುಜಸ್ತಂಭನವಾಗೆ, ಹರಿಯು ನುತಿಗೆಯ್ಯೆ ಹರಿ ಬಂದು ಮಮ ಕರ್ತು ಮಹೇಶ್ವರನೆಂದು ಬೋಧಿಸಲು ಶಿವನ ಸ್ತುತಿಗೆಯ್ದು ಬಾಹುಗಳ ಪಡೆದನೆಂದು ಅನಿಲಾದ ಋಷಿ ತೃಣಬಿಂದು ಮುನಿಗೊರೆದನು.

---

## ೨೩ ನೆಯ ವಚನದ ಕಥೆ (೮೬—೨೩).

ವಿಶಾಪಹರಣಂ ಚೈವ ಅಷ್ಟಾದಶಮಿತಿ ಸ್ಮೃತಃ. ಶೈವಪೌರಾಣ ಧರ್ಮಸಂಹಿತೆಯಲ್ಲಿ ನಂದೀಶ್ವರನ ಸನತ್ಕುಮಾರ ಬೆಸಗೊಂಡ ದೂರ್ವಾಸನು ಶಿವನಲ್ಲಿ ಮಂದಾರಮಾಲೆಯ ತರುತ್ತ ದಾರಿಯಲ್ಲಿ ದೇವೇಂದ್ರಂಗೆ ಕೊಡಲು ಉದಾಸೀನಂ ಮಾಡೆ ಋಷಿ ಶಪಿಸೆ ಐಶ್ವರ್ಯ ಹೋಗೆ ಶಿವನು ಅಮೃತ ಮಥನದಿಂ ಬಂದ ವಿಷವ ಧರಿಸಿದರು.

### ವೀರಭದ್ರ.

ದಕ್ಷನ ಯಜ್ಞದಲ್ಲಿ ವೀರಭದ್ರದೇವರು ಬಂದು ಶಿವವಿರಹಿತ ಯಾಗಕ್ಕೆ ನೀವೇಕೆ ಬಂದಿರೆಂದು ಭಗಾದಿತ್ಯನ ಕಣ್ಣು ಪೂಷಾದಿತ್ಯನ ಹಲ್ಲ ಕಿತ್ತು ಸಾವಿತ್ರೀ ಗಾಯತ್ರೀ ಸರಸ್ವತೀ ಎಂಬ ಬ್ರಹ್ಮನ ಮೂವರ ಹೆಂಡಿರನು ಮೊಲೆಮೂಗ ಕೊಯ್ದು ಅದಿತಿಯ ಮೂಗ ಕೊಯ್ದು ದಕ್ಷನ ಪಟ್ಟದ ರಾಣಿಯಾದ ತಿವಲ್ಲಿಯ ಕಿವಿಯ ಕೊಯ್ದು ಶಿಕ್ಷೆಯ ಮಾಡಿದನು. ಬಳಿಕ ಇಂದ್ರನು ಕೋಗಿಲೆಯಾಗಿ ಓಡುವಾಗ ಸುರಿಗಿಯಿಂದ ಕಡಿದನು. ವಾಯು ಹೋಗುತ್ತಿರಲು ಪರಶುಗೊಡಲಿಯಿಂದ ಕಡಿದನು.

---

## ೩೩ ನೆಯ ವಚನದ ಕಥೆ (೮೩—೩೩).

### ಮಾರಿ.

ಒಬ್ಬ ಗಂಧರ್ವನು ಸ್ವರ್ಗದಿಂದ ಮರ್ತ್ಯಕ್ಕೆ ಬಂದು ಮಾರಿಯ ಸಂಗವ ಮಾಡಲು ಅವಳು ಗರ್ಭಿಣಿಯಾಗೆ ಆ ಮಾರಿಗೆ ಹುಟ್ಟಿದೇಳು

ದಿನದ ಮಗನ ಹೊಲೆಯರ ಮನೆಯಲ್ಲಿ ಹಾದರದಲ್ಲಿ ಕೊಲ್ಲಲು ಅವನ ಯಮದೂತರು ಅಗಸರ ಕಲ್ಲ ಮರೆಗೊಂಡುದ ಬಿಡದೆ ಯಮನಿಗೊಪ್ಪಿಸಲು ಅದು ಕಾರಣದಿಂದಸಗರು ಏಳು ದಿನಕ್ಕೆ ಮೇಕಲ್ಲ ಮೇಲೆ ತೊಳೆಯಲಿಲ್ಲ. ಮಾರಿ ತನ್ನ ಮಗನ ಹೆತ್ತೊಸಗೆ ಸತ್ತೊಸಗೆಯ ಏಳು ದಿನದೊಳಗೆ ಮಾಡಿ ಊರಕ್ಕಿ ಊರೆಣ್ಣೆ ಉಣ್ಣ ಮಗನೆಂದು ಜೋಕುಮಾರನೆಂಬ ಪೆಸರಿಂ ಜೋಗುಳವಾಡಿ ಶೋಕವ ಮಾಡಿದ ಕಾರಣದಿಂ ಮಾರಿಯ ಮಗನಿಗೆ ಜೋಕುಮಾರನೆಂಬ ಹೆಸರಾಗಿ ಲೋಕದಲ್ಲಿ ನಡೆವುದೆ ಸಾಕ್ಷಿ.

---

## ೭೮ ನೆಯ ವಚನದ ಕಥೆ (?)

### ಸಿಂಹಸೂದ್ರಿಕ.

ಸಿಂಹಸೂದ್ರಿಕರು ಶಿವನ ಪೂಜಿಸುತ್ತ ವೈರವರ್ಗದಿಂದಳಿಯೆ ಶಿವನು ಮೆಚ್ಚಿದೆ ಬೇಡಿರನೆ ನಿಮ್ಮಾಲಯದ ಮೇಲಿರಲೆಂದು ಬೇಡಿಕೊಂಡರು.

### ವಿಷ್ಣು.

ತ್ರಿಪುರದವರ ಬಾಧೆಗೆ ದೇವತೆಗಳು ವಿಶ್ವಕರ್ಮರಿಂ ರಥವ ನಿರ್ಮಾಣ ಮಾಡಿ ಹರನ ಮುಂದಿಡೆ ಮೆಟ್ಟಲು ರಥ ಪಾತಾಳಕಿಳಿಯೆ ವಿಷ್ಣು ನಂದೀಶ್ವರಂಗೆ ನಿಮ್ಮ ರೂಪ ಕೊಡೆಂದುಪಾವಸ್ಥೆಯ ಮಾಡಿಕೊಟ್ಟರು. ಆ ರೂಪಿನಿಂ ವಿಷ್ಣು ಪಾತಾಳದ ರಥವೆತ್ತಿ ತಂದು ಹರನ ಮುಂದಿಡೆ ಮೆಚ್ಚಿದೆವೆನೆ ಎನ್ನ ರೂಪು ಮರ್ತ್ಯದಲ್ಲಿ ನಿಮ್ಮಾಲಯದ ಮೇಲಿರಲೆಂದು ಬೇಡಿಕೊಂಡನು

### ಭೃಂಗೀಶ್ವರ.

ಕೈಲಾಸದಲ್ಲಿ ಪಾರ್ವತೀ ಪರಮೇಶ್ವರರು ಓಲಗವಾಗಿರುವಾಗ ಭೃಂಗೀಶ್ವರನು ಸರ್ಪಕುಂಡಲ ರತ್ನಖಚಿತದ ತೋಳಬಳೆ ವಜ್ರದ ಕಂಕಣ ಮುತ್ತಿನ ಹಾರ ಪಾದದಲ್ಲಿ ಗೆಜ್ಜೆ ಬಿರುದಿನ ಪೆಂಡೆಯ ಇವ ಧರಿಸಿಕೊಂಡು ಚಲ್ಲಣವನುಟ್ಟು ಕಾಸೆಯ ಕಟ್ಟಿ ಭಸಿತೋದ್ಧೂಳನವ ಮಾಡಿ ಲಾಕುಳವ ಪಿಡಿದು ಶಿವನ ನಗಿಸುತ್ತ ಹಾದಿ ಹೋಗುತ್ತ ಶಿವನಿಗೆ ಕೈಯ್ಯ ಮುಗಿದು ದೇವಿಯರಿಗೆ ಮುಗಿಯದಿರಲು ಕೋಪಿಸಿ ನಮ್ಮ ಸೊಮ್ಮದ ದೇಹವ ತಾರೆನಲು ಆ ಕ್ಷಣದಲ್ಲಿ ಅಸ್ತಿಗಳನುಳುಹಿ ಮಾಂಸರಕ್ತಗಳ ಕೊಡಹಲು

*R. N B. 2554.*

# ಶಿವಾನುಭವ



ಸಂಪಾದಕ


ರಾ|| ಸಾ|| ಫ. ಗು. ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ.


ವಿಜಾಪುರ




ಸಂಪುಟ ೯ ಸಂಚಿಕೆ ೪

ನವೆಂಬರ

೧೯೩೪

ವಾ. ವರ್ಗಣಿ ೪-೪-೦ ]     [ ಬಿಡಿಸಂಚಿಕೆ ೦-೧೨-೦

# ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೯]　　　　ನವ್ಹೆಂಬರ ೧೯೩೪　　　　[ಸಂಚಿಕೆ ೪

## ಶೂನ್ಯಸಂಪಾದನೆಯ ರಹಸ್ಯ.

(ಲೇ:— ಮಿ. ಕಲ್ಯಾಣಪ್ಪನವರು ಬ್ಯಾಳಿ ಬಿ. ಎ. ಶ್ರೀ ಸಿದ್ಧೇಶ್ವರ ಹಾಯಸ್ಕೂಲ ವಿಜಾಪುರ.)

### ೭. ಬಸವೇಶ್ವರನ ಸಂಪಾದನೆ.

ಈ ಸಂಪಾದನೆಯಲ್ಲಿ ಶ್ರೀ ಪ್ರಭುದೇವರು ಬಸವರಾಜ ದೇವರಿಗೆ ಜಂಗಮದ ನಿಜತ್ವವನ್ನೂ ಆದಿ ಅನಾದಿಗಳ ಭೇದವನ್ನೂ ನಿರೂಪಿಸಿದ್ದಾರೆ.

ಮರುಳ ಶಂಕರದೇವರು ಶಿವೈಕ್ಯರಾಗಲು ಅಲ್ಲಿ ಅನೇಕ ಶಿವಶರಣರು ನೆರೆದು ಅವರ ಘನ ಮಹಿಮೆಯನ್ನು ಕೊಂಡಾಡುತ್ತಿದ್ದರು. ಆ ಸಮಯದಲ್ಲಿ ಬಸವರಾಜದೇವರು ಆ ಮಹಾ ಗಣಂಗಳನ್ನು ನೋಡಿ ಪರಮಾನಂದ ಭರಿತರಾಗಿ ನುಡಿದುದೇನಂದರೆ ''ಸಸಿಯ ಮೇಲೆ ಸಾಗರವು ಪರಿದಂತಾಯಿತ್ತಯ್ಯಾ ಎನ್ನ ಭಕ್ತಿ. ಆನಂದದಿಂ ಕುಣಿದಾಡುವೆ. ಆನಂದದಿಂ ನಲಿದಾಡುವೆ. ಅಯ್ಯಾ ನಿಮ್ಮ ಶರಣರ ಸಂಗಸುಖವನೇನೆಂದು ಪಮಿಸುವೆನಯ್ಯಾ ? ಆ ಮಹಾ ಮಹಿಮರನಗಲದಂತಿರಿಸಯ್ಯಾ ನಿಮ್ಮ ಧರ್ಮ ಕೂಡಲಸಂಗಮದೇವಾ.''

ಇದನ್ನು ಕೇಳಿ ಪ್ರಭುದೇವರು ಅಪ್ಪಣೆ ಕೊಡಿಸಿದ್ದೇನಂದರೆ "ಸಂಗನಬಸವಣ್ಣಾ, ಕಾಯವನ್ನು ತೊಟ್ಟ ಜೀವಿಗಳಿಗೆ ಕರ್ಮವು ಬೆನ್ನು ಹತ್ತಿರುವದು. ಕರ್ಮಕ್ಕೆ ಗುರಿಯಾದವರಿಗೆ ಮಾಯೆಯು ಕಾಡುವದು. ಮಾಯೆಯುಳ್ಳವರು ಆ ಪರವಸ್ತುವನ್ನು ನೆನೆಯ ಹೋದರೆ ಮರವೆಯೊಂದು

ಅರವಿಗೆ ಆಶ್ಚ ಬರುವದು. ಮರವೆಯ ಸಾಗರದಲ್ಲಿ ಅರಿವೆಂಬ ತರಂಗವು ತೀರ ಕಿರಿದು ನೋಡಾ ಗುಹೇಶ್ವರಾ."

ಅದಕ್ಕೆ ಬಸವಣ್ಣನವರು ಪ್ರತಿಯಾಗಿ ಹೇಳಿದುದೇನಂದರೆ "ಕರಿ ಘನ ಅಂಕುಶ ಕಿರಿದೆನ್ನಬಹುದೇ ಅಯ್ಯ? ಗಿರಿ ಘನ ವಜ್ರ ಕಿರಿದೆನ್ನಬ ಹುದೆ ಅಯ್ಯ? ತಮ್ಮಂಧ ಘನ ಜ್ಯೋತಿ ಕಿರಿದೆನ್ನಬಹುದೇ ಅಯ್ಯ? ಕೂಡಲಸಂಗಮದೇವಾ ನಿಮ್ಮ ಕೃಪೆಯ ಘನವ ನೀವೇ ಬಲ್ಲಿರಿ."

ಬಳಿಕ ಪ್ರಭುದೇವರು ಹೀಗೆ ಮಾತಾಡಿದರು. "ಮನಕ್ಕೆ ಮೀರಿದ ಘನವು ನಿಮ್ಮ ಮನಕ್ಕೆ ವೇದ್ಯವಾದ ಪರಿ ಎಂತಯ್ಯ? ನೆನೆದಿಹೆನೆಂದರೆ ಮನಕ್ಕೆ ನಿಲುಕದು. ಅರಿದಿಹೆನೆಂದರೆ ಕುರುಹ ತೋರದು. ಕಂಡಿಹೆ ನೆಂದರೆ ಮೂರ್ತಿಯಲ್ಲ. ಗುಹೇಶ್ವರ ಲಿಂಗವು ಜಗದ ಕಣ್ಣಿಗೆ ಕತ್ತಲೆಯ ಕವಿಸಿ ನಿನ್ನೊಳಗಡಗಿದ ಪರಿ ಎಂತು ಹೇಳಾ ಸಂಗನಬಸವಣ್ಣಾ."

ಅದಕ್ಕೆ ಬಸಣ್ಣನವರು "ಅಯ್ಯಾ ಪ್ರಭುವೇ, ಕರಿಯು ಕನ್ನಡಿಯೊ ಳಗಡಗಿದಂತೆ ನೀನು ಎನ್ನೊಳಗಡಗಿದೆ ಕೂಡಲಸಂಗಮದೇವಾ. ಜಗಕ್ಕೆ ಸುತ್ತಿಪ್ಪುದು ನಿಮ್ಮ ಮಾಯೆ. ನಿಮ್ಮ ಸುತ್ತಿಪ್ಪುದು ಎನ್ನ ಮಾಯೆ ನೋಡಯ್ಯಾ. ನೀನು ಜಗಕ್ಕೆ ಬಲ್ಲಿದನು. ನಾನು ನಿನಗೆ ಬಲ್ಲಿದನು. ಅಂತೆಯೇ ನಿನ್ನನ್ನು ನನ್ನ ಮನದಲ್ಲಿಂಬುಕೊಂಡಿಪ್ಪೆನು." ಎಂದು ನುಡಿ ದರು.

ಆಗ ಪ್ರಭುದೇವರು "ಬಸವಣ್ಣಾ, ಆ ಪರವಸ್ತುವನ್ನು ಅಂತರಂಗ ದಲ್ಲಿ ಇರಿಸಿಕೊಂಬುವದು ಯಾರಿಗೂ ಸಾಧ್ಯವಲ್ಲ. ಯಾಕಂದರೆ ಅದು ಭಾವಕ್ಕೆ ನಿಲುಕದು. ಬಹಿರಂಗದಲ್ಲಿಂಬಿಟ್ಟುಕೊಳ್ಳುವದಂತೂ ಶಕ್ಯವೇ ಇಲ್ಲ. ಯಾಕಂದರೆ ಅದು ಕ್ರಿಯಾತೀತನಾಗುವದು. ಹೀಗಿರಲು ನಿಭಾ೯ವ ನಿಶ್ಶೂನ್ಯವಾದ ವಸ್ತುವನ್ನು ನಿನ್ನೊಳಗಿಂಬಿಟ್ಟುಕೊಂಬ ಪರಿ ಎಂತು ಹೇಳಾ" ಎಂದು ಕೇಳಿದರು.

ಆಗ ಬಸವಣ್ಣನವರು ಉತ್ತರಕೊಟ್ಟದ್ದೇನಂದರೆ "ಪ್ರಭುವೇ, ಎನ್ನ ತನು ಮನ ನಿಮ್ಮವಯ್ಯ. ಅಂತರಂಗ ಬಹಿರಂಗ ನಿಮ್ಮವಯ್ಯ. ಅರಿವು ನಿಮ್ಮದಯ್ಯ. ನಿಮ್ಮಂತರಂಗದಲ್ಲಿ ನಿಮ್ಮನ್ನೇ ಇರಿಸಿಕೊಂಡು ನಿಮ್ಮ ಅರಿವಿನಿಂದ ಅರಿತುಕೊಳ್ಳುವೆನಯ್ಯ ಕೂಡಲಸಂಗಮದೇವಾ"

ಅದಕ್ಕೆ ಪ್ರಭುದೇವರು ಅಪ್ಪಣೆಕೊಡಿಸಿದ್ದೇನಂದರೆ "ಸಂಗನಬಸ ವಣ್ಣಾ, ಗಂಡು ಹೆಣ್ಣಿನ ಸಂಗದಿಂದ ಈ ತನುವಾಗಿತ್ತು. ಆ ತನುವಿ

ದ್ದಲ್ಲಿ ಮರವೆ ಹುಟ್ಟಿತ್ತು. ಮರವೆಯಿಂದ ನಾನೀನೆಂಬ ಭಾವಗಳುದ್ಭವಿಸಿದವು. ನಾನೆಂಬುದು ಅಂತರಂಗ. ನೀನೆಂಬುದು ಬಹಿರಂಗ. ನನ್ನ ಅರಿವು ನಿನ್ನದು ಹೇಗಾಯಿತು? ನನ್ನ ಅರಿವಿನಿಂದ ಆ ಪರವಸ್ತುವು ನಿನ್ನಲ್ಲಿ ನಿಂತ ಪರಿ ಎಂತು ಹೇಳಾ ಗುಹೇಶ್ವರಾ."

ಅದಕ್ಕೆ ಬಸವಣ್ಣನವರು ಪುನಃ ಅರಿಕೆ ಮಾಡಿಕೊಂಡದ್ದೇನಂದರೆ "ಪ್ರಭುವೇ, ಗಂಡು ಹೆಣ್ಣೆಂಬುದೆಲ್ಲ ನೀನೇ, ಮರುಳು ಮರವೆ ಹುರುಳೆಲ್ಲ ನೀನೇ ದೇವಾ, ಅರಿವು ಮರವುಗಳೆಲ್ಲ ನೀನೆ ಅಯ್ಯಾ. ನೀನಲ್ಲದನ್ಯವಿಲ್ಲ ನೋಡಾ ಕೂಡಲಸಂಗಮದೇವಾ. ಈ ಮಾತಿಗೆ ಪ್ರಭುದೇವರು ಬಸವಣ್ಣನವರನ್ನು ಹೀಗೆ ಪ್ರಶ್ನೆಮಾಡಿದರು "ಅಜ್ಞಾನ ಸುಜ್ಞಾನಗಳೆರಡೂ ಒಂದೇ ಎಂದರೆ ಶಿವಜ್ಞಾನಿಗಳು ಮೆಚ್ಚುವರೇ? ಶಿವಶಕ್ತಿಗಳೆರಡು ನೀನೇ ಎಂದರೆ ಮಹಾನುಭಾವಿಗಳು ನಂಬುವರೇ? ನಿನ್ನ ನೀನರಿಯದೆ ಎಲ್ಲವೂ ಒಂದೆಂಬ ಅದ್ವೈತದ ಮಾತನಾಡಿದರೆ ನೆಚ್ಚುವರಾರು ಹೇಳಾ ಗುಹೇಶ್ವರಾ."

ಅನಂತರ ಬಸವರಾಜದೇವರು ಬಿನ್ನೈಸಿಕೊಂಡದ್ದೇನಂದರೆ "ಪ್ರಭುವೇ ನಿಮ್ಮ ಅರಿವು ಮರವುಗಳೆಂಬ ಭ್ರಾಂತಿಯೆನಗಿಲ್ಲವಯ್ಯಾ. ನಿಮ್ಮ ದೇಹ ಪ್ರಾಣಗಳ ಬಗ್ಗೆ ಎನಗೆ ಭ್ರಾಂತಿಯಿಲ್ಲವಯ್ಯಾ. ನಿಮ್ಮನೊಂದೇ ಭಾವದಿಂದ ನಾನು ಕಾಣುವೆನು ನೋಡಾ ಕೂಡಲಸಂಗಮದೇವಾ.'' ಇದಕ್ಕೆ ಪ್ರಭುವು "ಬಸವಾ, ನೀನು ಭಕ್ತ ನಾನು ದೇವನೆಂಬ ಭಾವ ನಿನ್ನ ಮಾತಿನ ಮೇಲಿಂದ ಒಡೆದು ಕಾಣುತ್ತಿರುವದು. ಹೀಗಿರಲು ನನ್ನನ್ನು ನೀನು ಒಂದೇ ಬಗೆಯಿಂದ ಕಾಣುವದೆಂತು? ಕಾಯುವಿಡಿದು ಲಿಂಗವಿದೆ ಲಿಂಗವಿಡಿದು ಕಾಯುವಿದೆ. ಹೀಗಿರಲು ಲಿಂಗಾಂಗವೆರಡೂ ನಿನ್ನೊಳಗೆ ಐಕ್ಯವಾದವೆಂದು ತಿಳಿಯಬಹುದೇ? ವಚನವಿಡಿದು ಅರಿವಿದೆ ಅರಿವಿಡಿದು ವಚನವಿದೆ. ಹೀಗಿರಲು ಅರಿವು ವಚನಗಳೆರಡೂ ನಿನ್ನಲ್ಲಿ ಪ್ರಕಾಶವಾಗುವ ಪರಿಹೇಗೆ? ಎಂದು ಬೆಸಗೊಂಡರು,

ಇದನ್ನು ಕೇಳಿ ಬಸವರಾಜ ದೇವರು 'ಅಯ್ಯಾಪ್ರಭುವೇ, ಘನಕ್ಕೆ ಘನವಾದ ಪರವಸ್ತುವಿನ ನಿಲವನಂತಿಂತೆನಬಾರದು ನೋಡಾ. ನಾನು ಇಲ್ಲಿಗೆ ಶಬ್ದ ಮುಗ್ಧನಾದೆನು ಕಾಣಾ ಕೂಡಲಸಂಗಮದೇವಾ'.

ಆ ಅನಾದಿ ಪರವಸ್ತುವಿನ ನಿಲವು ವಾಚಾಮಗೋಚರವಾಗಿರುವದೆಂದು ಬಸವಣ್ಣನವರಿಗೆ ಮನವರಿಕೆಯಾಗಲು ಪ್ರಭುದೇವರು ಹಿಗ್ಗಿ ಬಸ

ವರಾಜದೇವರನ್ನು ಈ ಪ್ರಕಾರ ಕೊಂಡಾಡಿದರು. "ಬಸವಣ್ಣಾ ನಿನ್ನ ಕಂಡು ಎನ್ನ ತನು ಬಯಲಾಯಿತ್ತು. ಬಸವಣ್ಣಾ ನಿನ್ನ ಮುಟ್ಟಿ ಎನ್ನ ಕ್ರಿಯೆ ಬಯಲಾಯಿತ್ತು. ಬಸವಣ್ಣಾ ನಿನ್ನ ನೆನೆದು ಎನ್ನ ಮನ ಬಯಲಾಯಿತ್ತು. ಬಸವಣ್ಣಾ, ನಿನ್ನ ಮಹಾನುಭಾವವ ಕೇಳಿ ಎನ್ನ ಭವ ನಾಸ್ತಿಯಾಯಿತ್ತು. ನಿನ್ನ ಸಂಗದಿಂದಲಾನು ಬದುಕಿದೆನು ಕಾಣಾ ಗುಹೇಶ್ವರಾ"

ಬಸವಣ್ಣನವರಾದರೂ ಪ್ರಭುದೇವರನ್ನು ಈ ರೀತಿಯಾಗಿ ಕೊಂಡಾಡಿದರು. "ನಿಮ್ಮ ಚರಣಕಿಂಕರ ನಾನಯ್ಯಾ ಪ್ರಭುವೇ, ಮರುಗದ ಪರಿಮಳವೇ, ಮಿಂಚಿನಗೊಂಚಲವೇ, ಹರಕಾರುಣ್ಯವಾರಿಧಿಯೇ, ಎನ್ನ ನಿಮ್ಮ ಚರಣಕಮಲವಾಗಿರಿಸಯ್ಯಾ ನಿಮ್ಮ ಧರ್ಮ ನಿಮ್ಮ ಧರ್ಮ ಕೂಡಲ ಸಂಗಮ ದೇವಾ"

ಬಳಿಕ ಪ್ರಭುದೇವರು ಬಸವೇಶ್ವರನನ್ನು ಈ ಪರಿಯಾಗಿ ಸ್ತುತಿಸಿದರು. "ಆಯಿತ್ತು ಬಸವಾ ನಿನ್ನಿಂದ ಗುರುಸ್ವಾಯತವೆನಗೆ, ಆಯಿತ್ತು ಬಸವಾ ನಿನ್ನಿಂದೆ ಲಿಂಗಸ್ವಾಯತವೆನಗೆ, ಆಯಿತ್ತು ಬಸವಾ ನಿನ್ನಿಂದೆ ಜಂಗಮಸ್ವಾಯತವೆನಗೆ. ಆಯಿತ್ತು ಬಸವಾ ನಿನ್ನಿಂದೆ ಪ್ರಸಾದ ಸ್ವಾಯತವೆನಗೆ ಗುಹೇಶ್ವರಾ."

ಈ ಪ್ರಕಾರ ಪರಸ್ಪರ ಪ್ರಶಂಸೆಯು ಕೆಲಹೊತ್ತು ನಡೆಯಿತು. ಬಸವೇಶ್ವರನು ಪ್ರಭುವಿಗೆ "ಪ್ರಭುವೇ ನಿನ್ನಿಂದ ನಾನು ಸರ್ವವನ್ನರಿತೆನು. ನಿಮ್ಮ ಕರಕಂಜಾತ ನಾನು" ಎಂಬುದಾಗಿ ಹೇಳಲು ಪ್ರಭುವರ್ಯನು "ಬಸವಾ, ಆದಿಯ ಲಿಂಗ ನಿನ್ನಿಂದ ಎನಗಾಯಿತ್ತು. ಅನಾದಿಯ ಜ್ಞಾನ ನಿನ್ನ ನೆನೆದಡೆನಗಾಯಿತ್ತು. ನಿಮ್ಮ ಕೃಪೆಯಿಂದ ಪ್ರಾಣಲಿಂಗವೆಂದರಿದೆನೆಂಬುದ ನಿಮ್ಮ ಪ್ರಮಥರೇ ಬಲ್ಲರು. ಗುಹೇಶ್ವರ ಸಾಕ್ಷಿಯಾಗಿ, ಸಂಗನ ಬಸವಣ್ಣಾ, ನಿಮ್ಮ ಪ್ರಸಾದದ ಶಿಶು ನಾನು ನೋಡಯ್ಯಾ" ಎಂದು ಹೊಗಳಿದರು.

ಅದಕ್ಕೆ ಬಸವಣ್ಣನವರು 'ಆದಿಭಕ್ತ ಅನಾದಿ ಜಂಗಮವೆಂತಲೂ ಆದಿಶಕ್ತಿ ಅನಾದಿ ಶಿವನೆಂತಲೂ ಹೇಳುವರು. ಪ್ರಭುವೇ, ಎನ್ನ ಆದಿಪಿಂಡಕ್ಕೆ ನೀನು ಆಧಾರವಾದೆ. ಜ್ಞಾನರೂಪಿ ಜಂಗಮವಾದ ನಿಮ್ಮಿಂದ ಗುರು, ಲಿಂಗ ಪ್ರಸಾದಗಳನರಿತೆನು. ಕಾಯಭಕ್ತ ಪ್ರಾಣಜಂಗಮವೆಂಬ ವಚನಾನುಸಾರವಾಗಿ ಎನ್ನ ಪ್ರಾಣ ನೀವಲ್ಲದೆ ಮತ್ತಾರು ಹೇಳಯ್ಯಾ ?

ಹೀಗಿದ್ದು ನಿಮ್ಮ ಘನವ ಕಿರಿದು ಮಾಡಿ ಎನ್ನನೇಕೆ ಹಿರಿದು ಮಾಡು ವಿರಿ ಹೇಳಾ ಕೂಡಲಸಂಗಮದೇವಾ"

ಈ ಮಾತಿಗೆ ಪ್ರಭುದೇವರು ಉತ್ತರಕೊಟ್ಟಿದ್ದೇನಂದರೆ — "ಆದಿಭಕ್ತ ಅನಾದಿ ಜಂಗಮವೆಂದು ನೀನು ಹೇಳಿದರೆ ನಾನು ಅನಾದಿ ಭಕ್ತ ಆದಿ ಜಂಗಮವೆಂದು ಸಿದ್ಧಮಾಡುವೆ ನೋಡಾ ಸಂಗನ ಬಸವಣ್ಣಾ. ನೀನು ಅನಾದಿ ಭಕ್ತ ನಾನು ಆದಿ ಜಂಗಮವೆಂದು ಹೇಳಬಲ್ಲೆನು. ನಿರಾಕಾ ರದ ಘನವು ಶಕ್ತಿಯಿಲ್ಲದುಂಟೇ? ಆ ಮಹಾಘನವು ಸಾಕಾರಗೊಂಡು ಶಿವನೆಂಬ ನಾಮವಾಯಿತ್ತಲ್ಲ ಬಸವಾ. ಲಿಂಗವನು ನೀನು ಹಿಡಿದು ಪೂಜಿಸಲಾಗಿ ಶಿವನೆಂಬ ಹೆಸರು ಪಡೆದಿತ್ತು ನೋಡಾ ಬಸವಣ್ಣಾ. ನೀನು ಮಾಡಲಾಗಿ ನಾನಾದೆನೆಂಬುದ ನಮ್ಮ ಗುಹೇಶ್ವರ ಬಲ್ಲ ಕಾಣಾ ಸಂಗನ ಬಸವಣ್ಣಾ.

ಅದಕ್ಕೆ ಬಸವರಾಜದೇವರು ಬಿನ್ನೈಸಿದ್ದೇನಂದರೆ "ಪ್ರಭುವೇ, ಜಂಗ ಮವೇ ಜ್ಞಾನ, ಭಕ್ತನೇ ಆಚಾರ. ಜ್ಞಾನವಿಲ್ಲದ ಆಚಾರ ರುಂಡವಿಲ್ಲದ ಮುಂಡದಂತೆ ನೋಡಾ. ಜ್ಞಾನದಿಂದ ಆಚಾರ, ಜ್ಞಾನದಿಂದ ಅನುಭಾವ, ಜ್ಞಾನದಿಂದ ಪ್ರಸಾದವಲ್ಲದೆ ಜ್ಞಾನವಿಲ್ಲದೆ ಘನವ ಕಾಣಬಾರದು. ಎನ್ನ ಆಚಾರಕ್ಕೆ ನೀನು ಜ್ಞಾನರೂಪವಾದ ಕಾರಣ ಸಂಗನಬಸವಣ್ಣನೆಂಬ ಹೆಸರನ್ನು ಪಡೆದೆನು. ನಿಮ್ಮ ಮುಂದೆ ನಾನೆಷ್ಟರವನಯ್ಯ ಕೂಡಲಸಂ ಗಮದೇವಾ."

ಆಗ ಪ್ರಭುದೇವರು ಅಪ್ಪಣೆಕೊಡಿಸಿದ್ದೇನಂದರೆ "ಬಸವಣ್ಣಾ, ಎನ್ನಂತರಂಗದಲ್ಲಿ ಅರಿವುಂಟಾದರೇನು? ಎನ್ನ ಕಾಯದಲ್ಲಿ ಭಕ್ತಿಸ್ವಾಯು ತವಿಲ್ಲ. ಆಚಾರಕ್ಕೆಡೆಯಿಲ್ಲ. ಸರ್ವಾಚಾರಸಂಪನ್ನ ನಿನ್ನಳವೆತ್ತ ನಾನು ಬಲ್ಲೆನಯ್ಯಾ? ನಿಮ್ಮ ಮಹಾಮನೆಯ ಬಂಟ ನಾನೆಂಬುದ ನಿಮ್ಮ ಪ್ರಮ ಥರೆಲ್ಲರು ಬಲ್ಲರು ಕಾಣಾ ಸಂಗನಬಸವಣ್ಣಾ." ಇದನ್ನು ಕೇಳಿ ಬಸ ವಣ್ಣನವರು ಕೈಮುಗಿದು "ಪ್ರಭುವೇ, ನಿಮ್ಮ ಕಂಡು ಕೈಮುಗಿದು ಭಕ್ತನಾದೆನಲ್ಲದೆ ನಿಮ್ಮ ಕಾಣದಲೆ ಭಕ್ತಿಯುಂಟೆ? ನಿಮ್ಮ ಮುಟ್ಟಿ ಪೂಜಿಸಿ ಆಚಾರಿಯಾದೆನಲ್ಲದೆ ನಿಮ್ಮ ಮುಟ್ಟದೊಡೆನಗೆ ಆಚಾರವೆಲ್ಲಿಯು ದಯ್ಯಾ, ಜಂಗಮಮುಖದಿಂದ ಸಂಗನಬಸವಣ್ಣ ಬದುಕಿದನೆಂಬುದ ಮೂರು ಲೋಕವೆಲ್ಲವು ಬಲ್ಲವು ಕಾಣಾ ಪ್ರಭುವೇ?"

ಆಗ ಪ್ರಭುದೇವರು "ಅಯ್ಯಾ ಸಂಗನಬಸವಣ್ಣಾ, ಕಾಯೋನ್ಮುಕ್ತ ಮನೋಮುಕ್ತ ಸರ್ವಾಂಗ ಲಿಂಗೈಕ್ಯನು ನೀನಯ್ಯಾ. ನಿಮ್ಮ ಮಹಾ ಮಹಿಮೆಯನ್ನು ೪ ಯುಗಗಳಲ್ಲಿಯೂ ನಾನು ಬಲ್ಲೆನಯ್ಯಾ. ನಿಮ್ಮ ಅನುಗ್ರಹದಿಂದಲೇ ಎನ್ನ ಪೂರ್ವಾಪರ ಸಂಬಂಧವನ್ನು ನಾನು ಅರಿತಿ ದ್ದೆನಯ್ಯಾ ಗುಹೇಶ್ವರಾ" ಎಂದು ಬೆಸಗೊಳ್ಳಲು ಬಸವರಾಜದೇವರು "ಪ್ರಭುವೇ, ನೀನು ಜನ್ಮರಹಿತನು, ನಿರ್ವಿಕಾರಿಯು, ಭವಭಯದೂರನು. ನೀನು ಸೂತ್ರಧಾರಿಯಾಗಿ ಆಡಿಸುವಲ್ಲಿ ನನ್ನ ಶಿವಭಕ್ತಿ ಹೆಚ್ಚಿತ್ತು. ಲಿಂಗ ಜಂಗಮ ಜಂಗಮಲಿಂಗವೆಂಬುದ ತೋರಿದ ಮಹಾಮಹಿಮ ನೀವೆ ಕಾಣಾ ಕೂಡಲಸಂಗಮದೇವಾ.

ಒಟ್ಟಿನಮೇಲೆ ಜಂಗಮವು ಸಾಕ್ಷಾತ್ ಪರವಸ್ತುವು ಅದರ ನಿಜ ತ್ವವನ್ನರಿಯಲು ಮನಕ್ಕೆ ಸಾಧ್ಯವಿಲ್ಲ. ಶಬ್ದಕ್ಕೆ ಶಕ್ಯವಿಲ್ಲ. ಜಂಗಮ ದಿಂದ ಭಕ್ತ, ಭಕ್ತನಿಂದ ಜಂಗಮ ಹೀಗೆ ಪರಸ್ಪರ ಸಂಬಂಧವಿರುವ ದರಿಂದ ಯಾವದು ಆದಿ ಯಾವದು ಅನಾದಿಯೆಂಬದು ತಿಳಿಯಲು ಕಠಿ ಣವಾಗಿರುತ್ತದೆ. ಈ ಜಗತ್ತು ಆದಿಯೂ ಅಹುದು, ಅನಾದಿಯೂ ಅಹುದು. ಆದರಂತೆ ಆ ಪರವಸ್ತುವು ಕೂಡ ಸಾಕಾರ ರೂಪದಿಂದ ಆದಿಯಾಗಿಯೂ ನಿರಾಕಾರರೂಪದಿಂದ ಅನಾದಿಯಾಗಿಯೂ ಶೋಭಿಸು ವದು.

---

# ಶರಣ ಸಾಹಿತ್ಯ.

## ಲಿಂಗಪೂಜಾಸ್ತುತಿ.

೧

ಬಾ, ಬಾ, ಬಾ, ಬಾ, ಬಾರೋ ಲಿಂಗಯ್ಯ.
ಶೋಭಿತ ಧವಳಾಂಗ, ಸುಗುಣಾಂತರಂಗ ॥ಪ॥

ಗಂಗೆಯುತಂದು ಮಜ್ಜನವನಾನೆರೆವೆ
ಅಂಗಜನುರುಹಿದ ಭಸಿತ ತಂದಿಡುವೆ
ಮಂಗಳವೆನೆ ಶ್ರೀಗಂಧ ಲೇಪಿಸುವೆನು
ಜಂಗಮಲಿಂಗ ಎನ್ನಂಗೈಯುಪೀಠಕ್ಕೆ ॥೧॥

ಜಾಜಿಮಲ್ಲಿಗೆ ಬಿಲ್ವ ಸುರಗೆಸಂಪಗೆಯು
ಸೋಜಿಗವಾದ ತುಂಬೆಯ ಪುಷ್ಪದಿಂದ
ಮೂಜಗದೊಡೆಯು ನಿರಾಲಂಬ ಶಿವಲಿಂಗ
ಪೂಜಿಪೆ ಎನ್ನಯುಸರ್ವಾಬ್ಜಕರಕೆ ॥೨॥

ಘಮ ಘಮ ಘಮವೆಂಬ ಧೂಪವಾಸನೆಯು
ಕ್ರಮದಿಂದ ಘೃತಬತ್ತಿ ದೀಪಾರಾಧನೆಯು
ಸಮ ಚಾರ ಮಹದೇವ ನೈವೇದ್ಯ ತಾಂಬೂಲ
ರಮಣನಿರಂಜನ ನಿಮಗರ್ಪಿಸುವೆ ದೇವ ॥೩॥

---

೨

## ಪ್ರಮಥರ ಸ್ತುತಿ.

ಮಾಡುವೆ ಶರಣು ಮಾಡುವೆ ನಮ್ರ
ಕೂಡಲಸಂಗನ ಶರಣರ ಪಾದಕ್ಕೆ ॥ಪಲ್ಲ॥

ಮೋದರಕೇತಯ್ಯ ಮೆರೆವಿಂಡ ದೇವಯ್ಯ
ಆಯ್ದಕ್ಕಿ ಮಾರಯ್ಯ ಅಜಗಣ್ಣಗೆ
ಮೈದುನ ರಾಮಯ್ಯ ಮಡಿವಾಳ ಮಲುಹಣ
ಸಾಧಿಸಿ ಮರುಳುಶಂಕರ ಸಿದ್ಧರಾಮಗೆ ॥೧॥

ನಂಬೆಣ್ಣ ನಾಗಯ್ಯ ಬೆಂಬಿಡದೆ ಚಾರವು
ಕಂಬಳಿ ಮರುಳುಕಕ್ಕಯ್ಯನಿಗೆ
ಉಂಬ ಪ್ರಸಾದದಲಿ ಉದ್ಭವಿಸಿದಾತಗೆ
ಅಂಬಿಗರ ಚೌಡಯ್ಯ ಘನಘಟ್ಟಿವಾಳಗೆ ॥೨॥

ಮೊಲ್ಲೆ ಬೊಮ್ಮಯ್ಯಗಳು ಮಧುವರಸ ಬಾಚರಸ
ಬಿಲ್ವಬಿಂಕದ ಮಾರಯ್ಯನಿಗೆ
ಬಲ್ಲಾಳ ಗೊಲ್ಲಾಳ ಕನ್ನಪ್ಪ ಕಲಿಕಾಮ
ನುಲಿಯ ಚಂದಯ್ಯ ಮೋಳಿಗೆ ಮಾರಯ್ಯನಿಗೆ ॥೩॥

ಸತ್ಯಕ್ಕ ಪಿಟ್ಟವ್ವೆ ಶ್ರೀ ನೀಲಲೋಚನೆ
ಮುಕ್ತಾಯಿ ಚಂಗಳೆ ಗೊಗ್ಗವ್ವೆಗೆ
ಸತ್ತ ಗಂಡನ ಪಡೆದು ಹೆತ್ತ ಮಗನ ಕೊಂದು
ಬೆತ್ತಲೆ ಕದಳಯೊಳ್ ಪೊಕ್ಕ ಮಹದೇವಿಗೆ ॥೪॥

ಕರವೆ ಏಳ್ನೂರು ಎಪ್ಪತ್ತು ಗಣಂಗಳು
ಅರವತ್ತುಮೂರು ಪುರಾತನರು
ಪರಿಪರಿ ಶ್ರೀಗಂಧ ಪುಷ್ಪ ಧೂಪ ದೀಪ
ಪರಿಪರಿಯಿಂದ ಶ್ರೀಪ್ರಭುವಿನ ಪಾದಕ್ಕೆ ॥೫॥

---

೩

## ನಿರಾಳ ಗುರು ಸ್ತೋತ್ರ.

ಶ್ರೀಮದಮಲಾನಂದ ನತಜನ ।
ಪ್ರೇಮಶಾಶ್ವತ ಶಾಂತರವಿಶಶಿ ।
ಧಾಮ ನಿರ್ಜರನಿತ್ಯ ನಿಗಮಸ್ತೋಮನುತಚರಣ ॥
ಕಾಮ ಸಂಹರ ವರಕೃಪಾಕರ ।
ನಾಮ ಸೀಮೆಗಳಿಲ್ಲದಚಲಿತ ।
ಸ್ವಾಮಿ ಘನತರ ಪರಮ ಶ್ರೀಗುರುದೇವ ಶರಣಾರ್ಥಿ ॥೧॥

ಬಡವ ನಡೆನಡೆಯುತ್ತ ಭಾಗ್ಯವ ।
ನೆಡಹಿ ತಾ ಕಂಡಂತೆ, ರೋಗಿಯು ।
ತಡಕುತಿರ್ಪೌಷಧಿಯು ಲತೆ ಕಾಲ್ತೊಡರಿ ಕಾಣ್ಬಂತೆ ॥

ಒಡಲ ಕ್ಷುಧೆಯಿಂದಲೆಯುವನು ಪಾ।
ಲ್ಗಡಲ ನಿದಿರಲಿ ಕಂಡ ತೆರನೆ॥
ನ್ನೊಡೆಯ ಶ್ರೀಗುರುದೇವನಂಘ್ರಿಯು ಕಂಡು ಬದುಕಿದೆನು ॥೨॥

ಗುರುವೆ ಪರತರನಿತ್ಯ ನಿರುಪಮ।
ಗುರುವೆ ಪರಶಿವ ನಿತ್ಯನದ್ವಯ।
ಗುರುವೆ ಪರಬ್ರಹ್ಮಸ್ವರೂಪ ಸ್ವತಂತ್ರ ಘನಮಹಿಮ॥
ಗುರುವೆ ಮುಕ್ತಿಗೆ ಮೂಲ ನಿಶ್ಚಲ
ಗುರುವೆ ಸುರುಚಿರಭೇದ್ಯ ನಿರ್ಮಲ
ಗುರುವಿನಿನ್ನೊಂದಧಿಕವಿಲ್ಲೆನುತಿಹವು ಶೃತಿತತಿಯು ॥೩॥

ಕಂಡೆನಿದಿರಲಿ ಭಾವಭರಿತನ
ಕಂಡೆನಿದಿರಲಿ ಸತ್ಯ ಚರಿತನ
ಕಂಡೆನಿದಿರಲಿ ಶಾಂತಕಾಂತನ ನಿತ್ಯ ನಿರ್ಗುಣನ॥
ಕಂಡೆನಿದಿರಲಿ ಕರ್ಮರಹಿತನ
ಕಂಡೆನಿದಿರಲಿ ಧರ್ಮ ಸಹಿತನ
ಕಂಡೆನಿದಿರಲಿ ಪರಮ ಶ್ರೀಗುರುದೇವನಂಘ್ರಿಯನು ॥೪॥

ಹರಹರನಾನೇಂ ಕೃತಾರ್ಥನೋ
ದುರಿತ ದುರ್ಗುಣ ಮೋಹ ದುಃಖದ
ಪರಿಭವವ ಕಡೆಗಟ್ಟಿ ಮಾಯೆಯು ಸುಟ್ಟು ಮುದದಿಂದ॥
ಪರಮ ಶಿವ ಪದವಿಯನು ಎನ್ನೊಳು
ಕರುಣದಿಂದಲಿ ತೋರಿ ಸಲಹಿದ
ತುರ್ಯತೀತಾನಂದ ಶ್ರೀಗುರುದೇವ ಶರಣಾರ್ಥಿ ॥೫॥

ಒಮ್ಮೆ ಶ್ರೀಗುರು ಲಿಂಗವೆನುತಲಿ
ಒಮ್ಮೆ ಶ್ರೀಗುರು ಬಸವನೆನುತಲಿ
ಒಮ್ಮೆ ಶ್ರೀ ರುದ್ರೇಶನೆನುತಲಿ ಬಂದು ಜಗದೊಳಗೆ॥
ಹಮ್ಮು ಬಿಮ್ಮುಗಳಿಲ್ಲದಚಲಿತ
ಬ್ರಹ್ಮದಾದಿಯು ಕಂಡು ಬೆಳಗನು
ಒಮ್ಮನದಿ ನೋಡೆಂದು ತೋರಿದ ಗುರುವೆ ಶರಣಾರ್ಥಿ ॥೬॥

ಶರಿರ ಮಲಿನವಿದೆಂದು ಖಂಡಿಸಿ
ಪರಮ ನಿರ್ಮಲವೆಂದು ಪೂಜಿಸಿ
ಮರಣಬಾಧೆಯೊಳಿರ್ಪ ಸಿದ್ಧಾಂತಿಗಳ ಮತಹೊಗದ ॥
ದುರುಳ ವೇದಾಂತಿಗಳ ಮಾತಿನ
ಬರಿಯ ಬೊಮ್ಮದ ಬೋಧೆಯಲ್ಲಿನ
ಹರನೊಳಗೆ ಸಮರಸವ ತೋರಿದ ಗುರುವೆ ಶರಣಾರ್ಥಿ ॥೭॥

ಅಂಗದಜ್ಞಾನವನು ದಹಿಸಿ, ಚಿ
ದಂಗ ನಿರ್ಮಲ ಮಾಡಿ ಶಿವಕಳೆ
ತುಂಗ ಭಸಿತವಿದೆಂದು ಫಣೆಯೊಳಗಿಟ್ಟು ಮುದದಿಂದ ॥
ಹಿಂಗದಿರುತಿಹ ಪಕ್ಷಿಮದ ಘನ
ಲಿಂಗವನು ಕರದಲ್ಲಿ ಸ್ಥಾಪಿಸಿ
ಮಂಗಳಾತ್ಮಕನೆನಸಿ ಸಲಹಿದ ಗುರುವೆ ಶರಣಾರ್ಥಿ ॥೮॥

ಪರಮ ಗುರು ಚರಲಿಂಗ ಶೇಷವು
ಚರಣಜಲ ರುದ್ರಾಕ್ಷಿ ಭೂತಿಯು
ವರ ಷಡಕ್ಷರ ಮಂತ್ರ ಘನತರದಷ್ಟಾವರಣಗಳು ॥
ಪರಶಿವನು ತಾನಾದೆನೆನುತಲಿ
ಶರಿರ ಮನ ಭಾವೇಂದ್ರಿಯಾತ್ಮಸು
ಕರಣದೊಳಗಳವಡಿಸಿ ತೋರಿದ ಗುರುವೆ ಶರಣಾರ್ಥಿ ॥೯॥

ಲಿಂಗವೆನೆ ಪರಮಾತ್ಮ ಪಾವನ
ಲಿಂಗವೆನೆ ಪರತತ್ವ ಪರಶಿವ
ಲಿಂಗವೆನೆ ಪರಬ್ರಹ್ಮ ಪರತರ ಘನಕೆ ಘನಮಹಿಮ ”
ಲಿಂಗವೆನೆ ವರಮಂತ್ರ ರೂಪವು
ಲಿಂಗವೆನೆ ನಿರ್ವಯಲೆನುತ್ತದ
ರಿಂಗಿತವನೆನ್ನೊಳಗೆ ತೋರಿದ ಗುರುವೆ ಶರಣಾರ್ಥಿ ॥೧೦॥

ಲಿಂಗಮಧ್ಯದೊಳಖಿಳಮಂತ್ರವು
ಲಿಂಗಮಧ್ಯದೊಳಖಿಳ ತಂತ್ರವು
ಲಿಂಗಮಧ್ಯದೊಳಖಿಳಕೋಟಿ ಬ್ರಹ್ಮಾಂಡವಿರುತಿಹವು ॥

ಲಿಂಗಮಧ್ಯದೊಳಖಿಳ ತತ್ವವು
ಲಿಂಗಮಧ್ಯದೊಳಖಿಳ ತೋರಿಕೆ
ಲಿಂಗದೊಳು ಸಮರಸವ ತೋರಿದ ಗುರುವೆ ಶರಣಾರ್ಥಿ ॥೧೧॥

ಲಿಂಗದೊಳು ನಡೆ ಲಿಂಗದೊಳು ನುಡಿ
ಲಿಂಗದೊಳು ಸಕಲೇಂದ್ರಿಯಾತ್ಮಸು
ಲಿಂಗದೊಳು ತನುಭಾವ ಕರಣಗಳೊಂದು ಉರಿಯಾಗಿ ॥
ಲಿಂಗದೊಳು ಕೀಲಿಸಿದ ಕಣ್ಗಳು
ಹಿಂಗದಿರೆ ನಿಜಮುಕ್ತಿಎನುತಲಿ
ಮಂಗಳಾತ್ಮಕನೆನಿಸಿ ಸಲಹಿದ ಗುರುವೆ ಶರಣಾರ್ಥಿ ॥೧೨॥

ನೇತ್ರಲಿಂಗದ ಜನನಸ್ಥಲ ನಿಜ
ನೇತ್ರಲಿಂಗದ ಸ್ನೇಹ ಸಮರಸ
ನೇತ್ರಲಿಂಗದ ಪುಷ್ಪಮಜ್ಜನ ಕಲಶ ಚಿನ್ಮಯವು ॥
ನೇತ್ರ ಲಿಂಗದ ದೇಹ ಮಂದಿರ
ನೇತ್ರ ಪರಶಿವ ಬ್ರಹ್ಮವೆನುತಲಿ
ನೇತ್ರ ಮಹಿಮೆಯ ತೋರಿ ಸಲಹಿದ ಗುರುವೆ ಶರಣಾರ್ಥಿ ॥೧೩॥

ಆರು ಭೂತಗಳಾರು ಚಕ್ರಗ
ಳಾರು ಲಿಂಗಗಳಾರು ಅಂಗಗ
ಳಾರು ಮುಖಕರ ಶಕ್ತಿ ಭಕ್ತಿಗಳಾರು ದ್ರವ್ಯಗಳು ॥
ಆರು ಶೇಷಗಳಾರು ಮಂತ್ರಗ
ಳಾರು ಕಲೆಗಳ ಬೆಳಗಿನಿರವನು ಆ
ವರಿಸಿ ನಿಜವೆಂದು ತೋರಿದ ಗುರುವೆ ಶರಣಾರ್ಥಿ ॥೧೪॥

ಆರು ಸ್ಥಲದಗ್ರದಲಿ ರಾಜಿಪ
ಮೂರು ಮಂಡಲ ಬೆಳಸಿಕೊಂಡಿಹ
ಧೀರಗಣ ರುದ್ರಾದಿ ವಸ್ತು ಶಕ್ತಿಗಳ ಮಧ್ಯದೊಳು ॥
ಚಾರು ಚೌಕದ ಮಧ್ಯಪೀಠದಿ
ಪೂರವಿಸಿ ಥಳಥಳಿಸಿ ಬೆಳಗುವ
ಸಾರ ನಿಷ್ಕಳ ಘನವ ತೋರಿದ ಗುರುವೆ ಶರಣಾರ್ಥಿ ॥೧೫॥

ಮನದ ಕೋಣೆಯೊಳಿರ್ಪ ಲಿಂಗಕೆ
ಮನವೆ ಮಜ್ಜನ ಮನವೆ ಗಂಧವು
ಮನವೆ ಅಕ್ಷತೆ ಮನವೆ ಪುಷ್ಪವು ಮನವೆ ಘನ ಧೂಪ ॥
ಮನವೆ ದೀಪವು ಮನವೆ ಅರ್ಪಣ
ಮನವೆ ತಾಂಬೂಲವಾಗಿ ಸಂತತ
ಮನವನೆನ್ನೊಳು ತೋರಿ ಸಲಹಿದ ಗುರುವೆ ಶರಣಾರ್ಥಿ ॥೧೬॥

ಒಮ್ಮೆ ಘ್ರಾಣದೊಳೊಮ್ಮೆ ಜಿಹ್ವೆಯೊ
ಳೊಮ್ಮೆ ನೇತ್ರದೊಳೊಮ್ಮೆ ಶ್ರೋತ್ರದೊ
ಳೊಮ್ಮೆ ತ್ವಕ್ಕಿನೊಳೊಮ್ಮೆ ಹೃದಯದಳೊಮ್ಮೆ ಭಾವದೊಳು ॥
ಒಮ್ಮೆ ಕರಣದೊಳೊಮ್ಮೆ ಮನದೊಳ
ಗೊಮ್ಮೆ ಒಳಹೊರಗಿಡಿದು ಬೆಳಗುವ
ಬ್ರಹ್ಮದಾಟವಿದೊಂದು ತೋರಿದ ಗುರುವೆ ಶರಣಾರ್ಥಿ ॥೧೭॥

ಬಯಲ ರೂಪಾಗಿರ್ದ ಲಿಂಗಕೆ
ಬಯಲ ಹಸ್ತದೊಳಿರಿಸಿ ಸಂತತ
ಬಯಲ ಪೂಜೆಯ ಮಾಡಿ ಮನ ಮುಳುಗಾಡಿ ಮುದದಿಂದ ॥
ಬಯಲ ದ್ರವ್ಯಗಳರ್ಪಿಸುತ ಚಿ
ದ್ಬಯಲ ಶೇಷವನುಂಡು ಸುಖಿಸುವ
ಬಯಲೊಳಗೆ ನಿರ್ಬಯಲ ತೋರಿದ ಗುರುವೆ ಶರಣಾರ್ಥಿ ॥೧೮॥

ಮನವೆ ಕ್ಷಣ ಪಾತಾಳಕೈದುದು
ಮನವೆ ಕ್ಷಣದೊಳು ಗಗನಕೈದುದು
ಮನವೆ ಕ್ಷಣದೊಳಗಷ್ಟದೆಸೆಗಳ ಬಳಸಿ ಬಂದಿಹುದು
ಮನಗಳೊಬ್ಬುಳಿಯಾಗಿ ನಿಂದೊಡೆ
ಮನವೆ ಮಹಘನ ಲಿಂಗವೆನುತಲಿ
ಅನುವನೆನ್ನೊಳು ತೋರಿ ಸಲಹಿದ ಗುರುವೆ ಶರಣಾರ್ಥಿ ॥೧೯॥

ಎಲ್ಲಿ ನೋಡಿದಡಲ್ಲಿ ಲಿಂಗವು
ಎಲ್ಲಿ ಮುಟ್ಟಿದೊಡಲ್ಲಿ ಲಿಂಗವು
ಎಲ್ಲಿ ಮನದಾನಂದ ತೋರಿದೊಡಲ್ಲಿ ಘನ ಲಿಂಗ ॥

ಎಲ್ಲಿ ಭಾವಿಸಲಲ್ಲಿ ಲಿಂಗವು
ಎಲ್ಲ ಲಿಂಗದ ರೂಪೆನುತ ತೆರ
ವಿಲ್ಲದೆನ್ನೊಳು ತೋರಿ ಸಲಹಿದ ಗುರುವೆ ಶರಣಾರ್ಥಿ ॥೨೦॥

ತೆರಹಿಡಿದ ನಡೆ ತೆರಹಿಡಿದ ನುಡಿ
ತೆರಹಿಲ್ಲದೊಡನಾಟದನುಭವ
ತೆರಹಿಡಿದ ಸಂಭಾಷಣೆಯು ಸುಖ ತೆರಹಿಡಿದ ನೋಟ ॥
ತೆರಹಿಡಿದ ಧ್ಯಾನಾರ್ಚನಾರ್ಪಣ
ನಿರುಪಮದ ಘನಲಿಂಗ ನಿಜದೊಳು
ತೆರಹಿಡಿದು ಸಮರಸವ ತೋರಿದ ಗುರುವೆ ಶರಣಾರ್ಥಿ ॥೨೧॥

ಶರಿರ ಗುಣಧರ್ಮಗಳು ಬಯಲವು
ಪಿರಿದು ಮರವೆಗಳೆಲ್ಲ ಬಯಲವು
ಹೊರಗೊಳಗೆ ಪರಿಪೂರ್ಣವೆಂಬುದು ನೆರಹು ತಾ ಬಯಲು
ಕರಣ ಮನಭಾವಗಳು ಬಯಲವು
ಕುರುಹು ಪೂಜೆಯು ಧ್ಯಾನ ಬಯಲವು
ಅರಿವು ನಿರ್ವಯಲೆಂದು ತೋರಿದ ಗುರುವೆ ಶರಣಾರ್ಥಿ ॥೨೨॥

ಶರಣು ಕರುಣಾಕಾರ ನಿಶ್ಚಲ
ಶರಣು ಮರಣವಿರಹಿತನಿರ್ಮಲ
ಶರಣು ಶಶಿರವಿಬಿಂಬ ಮಂಡಲ ಮೂರ್ತಿ ಘನಕೀರ್ತಿ ॥
ಶರಣು ನತಜನ ಪಾಲ ಪಾವನ
ಶರಣು ಪರತರ ಜ್ಞಾನವಾಹನ
ಶರಣು ತ್ರೈಜಗದೊಡೆಯ ಶ್ರೀಗುರುದೇವ ಶರಣಾರ್ಥಿ ॥೨೩॥

ಶರಣು ನಿತ್ಯನೆ ಶರಣು ಸತ್ಯನೆ
ಶರಣು ಶಾಶ್ವತ ಶರಣು ಭಾಸ್ವಿತ
ಶರಣು ಕಂಧರ ಶರಣು ಬಂಧುರ ಶರಣು ಭವನಾಶ ॥
ಶರಣು ಶೀಲನೆ ಶರಣು ಲೋಲನೆ
ಶರಣು ಶಾಂತನೆ ಶರಣು ಕಾಂತನೆ
ಶರಣು ತ್ರೈಜಗದೊಡೆಯ ಶ್ರೀಗುರುದೇವ ಶರಣಾರ್ಥಿ ॥೨೪॥

ಈ ತರದ ಗುರುಸ್ತೋತ್ರ ನಾಮವ ।
ನೋತು ಬರೆದಿರ್ದೊಡೆ ಮನದೊಳು ।
ಪೂತಮಯ ಸುಜ್ಞಾನ ಸಂಜನಿಸುವುದು ದಿಟ ಬಳಿಕ ॥
ಜಾತಿ ಸೂತಕ ಭ್ರಾಂತಳಿದು ನಿ ।
ರ್ಜಾತ ನಿರುಪಮ ನಿತ್ಯ ಘನಪರಂ
ಜ್ಯೋತಿ ಶ್ರೀಗುರು ಬಸವಲಿಂಗನೊಳೈಕ್ಯ ಸಿದ್ಧಿಪುದು ॥೨೫

---

# ರಗಳೆಗಳ ವಿಮರ್ಶೆ.

**ಲೇಖಕ:— ಶಿವಶರಣ ಸೇವಕ.**

ವೀರಶೈವರಲ್ಲಿ ಆದಿಕವಿಯೆಂದೆನಿಸಿದ ಹಂಪೆಯ ಹರೀಶ್ವರನು ಒಳ್ಳೆ ರಸವತ್ತಾಗಿಯೂ ಹೃದಯಂಗಮವಾಗಿಯೂ ಎಷ್ಟೋ ಕಥನಪರ ಕಾವ್ಯಗಳನ್ನು ರಗಳೆಯ ರೂಪದಲ್ಲಿ ಬರೆದಿದ್ದಾನೆ. ಈ ರಗಳೆಗಳು ಮನೋರಂಜಕವಾದ ವರ್ಣನಾದೃಷ್ಟಿಯಿಂದ ಇಂಗ್ಲಿಷದಲ್ಲಿ ಪ್ರಸಿದ್ಧಿವಡೆದ ಟೆನಿಸನ್, ಸ್ಕಾಟ ಕವಿಗಳ ಕಥನಪರ ಕಾವ್ಯ (*Narrative Poems*) ಗಳಿಗಿಂತ ಎಂದಿಗೂ ಕಡಿಮೆಯಾಗಿರುವದಿಲ್ಲ. ಕನ್ನಡದ ಸೊಂಪು, ಪೆಂಪು, ಕಂಪು, ಇಂಪು, ನುಣ್ಪು ಮೊದಲಾದವುಗಳು ಹರಿಹರನ ರಗಳೆಗಳಲ್ಲಿ ಒಳ್ಳೆ ಸುಗಮವಾಗಿ ಚಿತ್ರಿಸಲ್ಪಟ್ಟಿವೆ. ಕಥಾ ಪ್ರವಾಹವು ತುದಿಮೊದಲ್ಗೊಂಡು ಕೊನೆಯ ವರೆಗೆ ಅಮೋಘವಾಗಿ ಹರಿದಿರುವದು. ಕನ್ನದವಾಣಿಯು ಸುಲಿದ ಬಾಳೆಯ ಹಣ್ಣಿನಂತೆಯೂ ಕಳೆದ ಸಿಬರಿನ ಕಬ್ಬಿನಂತೆಯೂ ಅಳಿದ ಉಷ್ಣದ ಹಾಲಿನಂತೆಯೂ ಸುಮಧುರವಾಗಿರುವದೆಂಬ ಮಾತು ಹರಿಹರನ ರಗಳೆಗಳನ್ನೋದಿದಾಕ್ಷಣವೇ ನಮಗೆ ತಟ್ಟನೆ ಹೊಳೆಯದಿರದು. ರಸ, ಭಾವ, ಚಿತ್ರಗಳನ್ನು ರಗಳೆಗಳಷ್ಟು ಸುಲಭ, ಸುಲಲಿತ, ಸುಮನೋಹರವಾದ ಶೈಲಿಯಲ್ಲಿ ವ್ಯಕ್ತಗೊಳಿಸುವ ಬೇರಾವ ಕಾವ್ಯಗಳು ಕನ್ನಡ ವಾಙ್ಮಯದಲ್ಲಿ ದೊರೆಯುವದು ಬಹು ಅಪರೂಪ. ರಗಳೆಗಳೆಂದರೆ ಹಾಳು ಹರಟೆ ಅಥವಾ ಏನೋ ಬೇಸರಗೊಳಿಸುವ ಗೊಳ್ಳು ನುಡಿಗಳೆಂದು ಜನರಲ್ಲಿ ವಾಡಿಕೆಯಾಗಿ ಬಿಟ್ಟಿದೆ. ಆದರೆ ಇದಕ್ಕೆ ವಿಪರೀತವಾಗಿ ಹರೀಶ್ವರನ ರಗಳೆಗಳು ಸುಂದರ ಚಿತ್ರದಂತೆಯೂ ಸುಮನೋಹರ ಗಾಯನದಂತೆಯೂ ಬಂದ ಬೇಸರವನ್ನು ಸುಲಭವಾಗಿ ಕಳೆಯುವಂಥವುಗಳಾಗಿವೆ. ಘನಗಂಭೀರವಾದ ವೀರಶೈವ ವಚನಗಳು ಆಧ್ಯಾತ್ಮಿಕಾನಂದವನ್ನು ಮುಮುಕ್ಷುಗಳಿಗುಣಿಸುವಂತೆ ಹರಿಹರನ ರಗಳೆಗಳು ಸಹೃದಯರಿಗೆ ಕಾವ್ಯಾನಂದದ ಒಳ್ಪುಣಿಸನ್ನು ಉಣಿಸುವವು.

ಕುಬೇರನ ರಾಜ್ಯದಲ್ಲಿ ಅಪಾರವಾದ ರನ್ನಚಿನ್ನದ ಕಣಿಗಳು ಹೊರಟಂತೆ ಕನ್ನಡ ಕಾವ್ಯ ಸಾಮ್ರಾಜ್ಯದಲ್ಲಿ ಅಮೌಲ್ಯವಾದ ರಗಳೆಯ ಕಣಿಗಳೆಷ್ಟೋ ಹೊರಟಿವೆ. ಅವುಗಳಲ್ಲಿ ಪ್ರಾಮುಖ್ಯವಾಗಿ (೧) ಶಿವಶರಣರ ರಗಳೆ (೨) ಪುರಾತನರ ರಗಳೆ. (೩) ಶಿವಗಣದ ರಗಳೆಗಳೆಂದು ಮೂರು

ಭಾಗ ಮಾಡಬಹುದು. ಇವುಗಳನ್ನೆಲ್ಲ ಪ್ರಾಯಶ: ಹರಿಹರನೇ ಬರೆದಿರಬಹುದೆಂದು ಬಹು ಜನರು ಒಪ್ಪುತ್ತಾರೆ. ಬೇರೆಯಾವರೂ ರಗಳೆಗಳನ್ನು ಬರೆದಿದ್ದರೆ ಅವರು ಹರಿಹರನ ಶೈಲಿಯನ್ನೇ ಅನುಸರಿದ್ದುದನ್ನು ನೋಡಿದರೆ ಅವೆಲ್ಲವುಗಳು ಪರ್ಯಾಯದಿಂದ ಹರಿಹರನ ಸೋತ್ತುಗಳೆಂದೇ ನಾವು ಹೇಳಬಹುದು.

ಇಷ್ಟು ದಿವಸ ಹೂಳಿಟ್ಟ ಕನ್ನಡ ವಾಙ್ಮಯದ ಈ ಅನರ್ಘ ರತ್ನಗಳನ್ನು 'ಶಿವಾನುಭವ' ಪತ್ರಿಕೆಯ ಸಂಪಾದಕರಾದ ರಾ॥ ಸಾ॥ ಪಿ. ಜಿ. ಹಳಕಟ್ಟಿಯವರು ಪ್ರಕಾಶಕ್ಕೆ ತಂದುದಕ್ಕಾಗಿ ಕನ್ನಡ ಸಾಹಿತಿಗಳು ಅವರನ್ನು ಅಭಿನಂದಿಸದಿರಲಾರರು.

ರಗಳೆಗಳಲ್ಲಿರುವ ಕಥಾವರ್ಣನೆ, ಶೈಲಿ, ಭಾವಚಿತ್ರಗಳನ್ನು ಸಾಮಾನ್ಯರಿಗೆ ಸುಲಭವಾಗಿ ತಿಳಿಸಿಕೊಡುವ ಉದ್ದಿಶ್ಯವಾಗಿ 'ರಗಳೆಗಳ ವಿಮರ್ಶ'ಯೆಂಬೀ ಅಲ್ಪ ಪ್ರಯತ್ನವನ್ನು ಮಾಡಿದ್ದಾಗಿದೆ. ಈ ವಿಮರ್ಶೆಯಲ್ಲಿ ನನಗೆ ಯುಕ್ತ ಕಂಡ ಒಬ್ಬೊಬ್ಬ ಶಿವಶರಣ, ಪುರಾತನ ಇಲ್ಲವೆ ಶಿವಗಣಗಳ ಕಥೆಯನ್ನು ತೆಗೆದುಕೊಂಡು ಅದರ ಬಗ್ಗೆ ನನಗೆ ಹೊಳೆದ ವಿಚಾರಗಳನ್ನು ವಾಚಕರ ಮುಂದಿಡುವದೇ ನನ್ನ ಉದ್ದೇಶವಾಗಿದೆ. ನನ್ನ ಈ ಉದ್ದೇಶವು ಯಶಸ್ವಿಯಾಗಿ ಕೊನೆಗಾಣಲೆಂದು ಪರಮಾತ್ಮನನ್ನು ಕುರಿತು ಅನನ್ಯಭಾವದಿಂದ ಪ್ರಾರ್ಥಿಸುತ್ತೇನೆ.

ಪ್ರಸ್ತುತಿ ಶ್ರೀ ಪ್ರಭುದೇವರ ರಗಳೆಯನ್ನು ಇದರಡಿಯಲ್ಲಿ ವಿಮರ್ಶಿಸಲಾಗಿದೆ.

## ಶ್ರೀ ಪ್ರಭುದೇವರ ರಗಳೆ.

**ಕಥಾಭಾಗ:—** ಆಕಾಶಾತ್ಪತಿತಂ ತೋಯಂ ಸಾಗರಂ ಪ್ರತಿಗಚ್ಛತಿ।
ಸಾಗರಾತ್ಪುನರಾಕಾಶಂ ಮೇಘರೂಪೇಣ ಗಚ್ಛತಿ ॥

ಆಕಾಶದಿಂದ ಭೂಮಿಗೆ ಬಿದ್ದ ಮಳೆಹನಿಗಳು ಸಮುದ್ರಕ್ಕೆ ಕೂಡುತ್ತವೆ. ಮುಂದೆ ಸಾಗರದಿಂದ ಅದೇ ಹನಿಗಳು ಮೇಘರೂಪದಿಂದ ಮೇಲೆ ಗಗನಕ್ಕೆ ಹೋಗುತ್ತವೆ. ಅದರಂತೆಯೇ ಪರಮಾತ್ಮನ ಅಂಶೀಭೂತರಾದ ಮಹಾ ವಿಭೂತಿಗಳು ಏನೋ ಒಂದು ಶಾಪವಶದಿಂದ ಆತನ ಆಜ್ಞಾನುಸಾರವಾಗಿ ಭೂಮಿಗವತರಿಸಿ ತಮ್ಮ ಇಷ್ಟಾರ್ಥ ಸಿದ್ಧಿಯನ್ನು ಪಡೆದು ಪುನಃ ಆ ಪರಶಿವನ ಸಾನ್ನಿಧ್ಯವನ್ನು ಹೊಂದುವರು

ಹರೀಶ್ವರನ ಪ್ರತಿಯೊಂದು ರಗಳೆಯಲ್ಲಿ ಈ ಕಲ್ಪನೆಯು ವ್ಯಕ್ತವಾಗುತ್ತದೆ.

ಕೈಲಾಸದಲ್ಲಿ ಪರಶಿವನು ತನ್ನ ಒಡ್ಡೋಲಗದಲ್ಲಿ ಕುಳಿತಾಗ ನಿರ್ಮಾಯನೆಂಬ ಗಣೇಶ್ವರನು ಒಬ್ಬ ಸುರಸತಿಯನ್ನು ನೋಡಿ ಮೋಹಿತನಾದನು. ಅವಳೂ ಆತನ ಮೇಲೆ ಮೋಹಿತಳಾದಳು. ಇದನ್ನು ನೋಡಿ ಪರಶಿವನು ಅವರೀರ್ವರಿಗೆ ನೀವು ಭೂಲೋಕದಲ್ಲಿ ಹುಟ್ಟಿ ಸಕಲ ಸುಖಗಳನ್ನುಪಭೋಗಿಸಿ ಪುನಃ ಇಲ್ಲಿಗೆ ಬರಬೇಕೆಂದು ಆಜ್ಞಾಪಿಸಿದನು. ಆ ಪ್ರಕಾರ ನಿರ್ಮಾಯು ಗಣೇಶ್ವರನು ಬಳ್ಳಿಗಾವಿಯೆಂಬ ಊರ ನಾಯಕನ ಹೆಂಡತಿಯ ಗರ್ಭದಲ್ಲಿ ಜನಿಸಿದನು. ಆತನಿಗೆ ಅಲ್ಲಯ್ಯನೆಂಬ ನಾಮಕರಣವನ್ನು ಮಾಡಿದರು. ಆ ಸುರಸತಿಯು ಅದೇ ಊರಿನ ದೇವದತ್ತನೆಂಬ ಸದ್ಭಕ್ತನ ಹೆಂಡತಿಯ ಬಸುರಿನಲ್ಲಿ ಕೋಮಲತೆಯೆಂಬ ಹೆಸರಿನಿಂದ ಜನ್ಮತಾಳಿದಳು.

ಅಲ್ಲಯ್ಯನು ಬಿದಿಗಿಯ ಚಂದ್ರನಂತೆ ಬೆಳೆಯುತ್ತ ಮೃದಂಗವಿದ್ಯೆಯಲ್ಲಿ ಮಹಾ ಪ್ರವೀಣನಾದನು. ಆತನು ಆಲೂರ ಗೊಗ್ಗೇಶ್ವರ ದೇವಾಲಯಕ್ಕೆ ಹೋಗಿ ಅಲ್ಲಿ ಶಿವನ ಪ್ರೀತ್ಯರ್ಥವಾಗಿ ಮೃದಂಗವಾದನ ಕಾರ್ಯವನ್ನುಪಕ್ರಮಿಸಿದನು. ಇತ್ತ ಕಾಮಲತೆಯು ವ್ರತ ಹಿಡಿದು ಸಖಿಯರೊಡಗೂಡಿ ಗೊಗ್ಗೇಶ್ವರನ ದರ್ಶನಾರ್ಥವಾಗಿ ಹೊರಟಳು. ಅಲ್ಲಯ್ಯನು ಆವಳ ರೂಪುಲಾವಣ್ಯಕ್ಕೆ ಮೈಮರೆತು ಬಿಟ್ಟನು. ಕಾಮಲತೆಯು ಅಲ್ಲಯ್ಯನ ಚಲ್ವಿಕೆಯನ್ನು ಕಂಡು ಮೋಹಪರವಾಶಳಾದಳು. ಸಖಿಯರು ಅವರ ಇರವನ್ನರಿತು ಇವರೀರ್ವರನ್ನು ಕಾಮಲತೆಯ ಅರಮನೆಗೆ ಕರದೊಯ್ದರು. ಅಲ್ಲಿ ಉಭಯತರು ಸತಿಪತಿಗಳಂತೆಯೇ ಕಾಲಕಳೆಯಹತ್ತಿದರು.

ಈ ಮೇರೆಗೆ ಒಬ್ಬರನ್ನೊಬ್ಬರು ಅಗಲದೆ ಈ ನೂತನ ಪ್ರೇಮಿಗಳಿರುತ್ತಿರಲು ಕೆಲವು ದಿವಸಗಳ ನಂತರ ಕಾಮಲತೆಗೆ ಭಯಂಕರ ಜ್ವರವು ಬಂದು ಅದನ್ನು ತಾಳಲಾರದೆ ಅವಳು ಶಿವನ ಪಾದಕ್ಕೆ ಸಲ್ಲಿದಳು. ಅಲ್ಲಯ್ಯನು ಕಾಮಲತೆಯ ಅಗಲಿಕೆಯಿಂದ ನೊಂದು ಬೆಂದು ಬೆಂಡಾದನು. ಬಳಿಕ ಅಲ್ಲಯ್ಯನನ್ನು ಆತನ ಮಾತಾಪಿತೃಗಳ ಮನೆಗೆ ಕರೆದೊಯ್ದರು. ಮಾತಾಪಿತೃಗಳು ಮಗನ ದುಃಸ್ಥಿತಿಯನ್ನು ಕಂಡು ಮರಮರನೆ ಮರಗಿದರು. ಅಲ್ಲಯ್ಯನಿಗೆ ಕಾಮಲತೆಯ ಚಿಂತೆಯೇ ಚಿಂತೆಯಾಗಿ ಬಿಟ್ಟಿತು.

ಮಾಯಾಕೋಲಾಹಲನಾದನು. ಮಹಾತ್ಮರ ಪವಿತ್ರ ಜೀವನದಲ್ಲಿ ಅವರು ಹಿಂದೆ ಮಾಡಿದ ಕಾರ್ಯಗಳು ಅಡಗಿಹೋಗುತ್ತವೆ.

ಕವಿಯು ವರ್ಣನ ವಿಷಯಗಳನ್ನು ಪ್ರತಿಪಾದಿಸುವಾಗ ಪೂರ್ವ ಪದ್ಧತಿಯನ್ನೇ ಹೆಚ್ಚಾಗಿ ಅನುಸರಿಸಿದ್ದರೂ ಆತನ ಸರಸಮಯವಾದ ವಾಕ್ಪ್ರವಾಹವೂ ಮನೋಹರವಾದ ಶಬ್ದ ರಚನೆಯೂ ಆತನವೇ ಆಗಿರುತ್ತವೆ. ಅಲ್ಲಯ್ಯನ ತಾಯಿಯ ಗರ್ಭದ ಚಿಹ್ನೆಗಳು, ಕಾಮಲತೆಯ ಅವಯವ ಸೌಷ್ಟವ, ಕಾಮಲತೆಯಲ್ಲಮರ ಪರಸ್ಪರ ಪ್ರೇಮ, ಅನಿಮಿಷಯೋಗಿಗಳ ಸಂದರ್ಶನ ಅಲ್ಲಯ್ಯನ ಮಾನಸ ಲಿಂಗಪೂಜೆ, ಆತನ ವನವಾಸ ಮುಂತಾದ ವಿಷಯಗಳ ಸಂಕ್ಷೇಪವಾಗಿದ್ದರೂ ಬಹು ರಸವತ್ತಾಗಿ ವರ್ಣಿಸಲಟ್ಟಿವೆ. ಇಲ್ಲಿ ಮಾದರಿಗಾಗಿ ಪ್ರಭುವಿನ ಮಾನಸಲಿಂಗಪೂಜೆ, ವನವಾಸಗಳ ಬಗ್ಗೆ ಕೆಲವು ಪಂಙ್ತಿಗಳನ್ನು ಉದಾಹರಣೆಗಾಗಿ ಕೊಡಲಾಗಿದೆ.

## ಮಾನಸ ಲಿಂಗಪೂಜೆ.

ಶಿವಲಿಂಗರಾಜ್ಯಸುಖದೊಳಗಿರ್ದನಲ್ಲಮಂ
ಭವನ ಕರುಣಾಲೋಕನದೊಳಿರ್ದನಲ್ಲಮಂ
ಇರುತೆ ಲಿಂಗಕ್ಕೆ ನೋಟದೊಳೆ ಮಜ್ಜನಕೆರೆದು
ಅರಳ್ದ ನೇತ್ರದ ಪೂವಿನಿಂ ಪೂಜೆಯಂ ಮೆರೆದು
ನರು ಸೂಯ್ಕ ಕಂಪಿಂದೆ ನವ ಧೂಪವಂ ಕೊಟ್ಟು
ನೆರೆಮನದ ಬೆಳಗಿನಾರತಿಯೆತ್ತಿ ಪೊಡೆವಟ್ಟು
ನಿಟ್ಟೆಯಿಂ ನೇಹಮುಮನಾರೋಗಿಸಲ್ಕೊಟ್ಟು
ಕಟ್ಟೆಕ್ಕರಚಲನಾನಂದಮುಂ ಮುಂದಿಟ್ಟು
ಸಕಲ ಸುಖಮಂ ಕಣ್ಗಳಿಂದೆ ಕೈಗುಡುತಂ
ಸಕಲ ಭೋಗಂಗಳಂ ನೋಟದಿಂದೀವುತುಂ

## ವನವಾಸ.

ತರು ನಿಕಾಯದ ಕೋಟರಂಗಳೊಳಗಲ್ಲಮಂ
ಗಿರಿಕುಳದ ಗಹ್ವರಂಗಳೊಳೆಲ್ಲವಲ್ಲಮಂ
ಪರಿವ ನಿರ್ಜರ ತರ ತರಂಗಿಣಿಯೊಳಲ್ಲಮಂ
ನೆರೆದನುಣ್ಮಳಲ ಪುಳಿನಂಗಳೊಳಗಲ್ಲಮಂ
ಚಂದ್ರಕಾಂತದ ಶಿಲೆಯ ತಂಪಿನೊಳಗಲ್ಲಮಂ

ಇಂದ್ರನೀಲದ ಮಣಿ ಶಿಲಾತಳದೊಳಲ್ಲಮಂ
ಪರಿಮಳದ ಚಂದನದ ತರುಗಳೊಳಗಲ್ಲಮಂ
ಮರುಗ ಸುರ ಹೊನ್ನೆ ಸೇವಂತಿಯೊಳಗಲ್ಲಮಂ
ಸಂಪಗೆಯೊಳಿಡಿದ ಹೂವಿನ ಹಸೆಯೊಳಲ್ಲಮಂ
ಸೊಂಪೆಸೆವ ಕೆಂದಳಿರ ತಾಣದೊಳಗಲ್ಲಮಂ
ಮಾವರದ ಮಾಧವಿಯ ಮಂಟಪದೊಳಲ್ಲಮಂ
ತಾವರೆಯ ತಣ್ಣೆಳಲ ತಿಳಿಗೊಳದೊಳಲ್ಲಮಂ
ಮಲ್ಲಿಗೆಯ ಮಾಲತಿಯ ಹೊದರಿನೊಳಗಲ್ಲಮಂ
ಮೊಲ್ಲೆ ಇರವಂತಿಗೆಯ ಮೊತ್ತದೊಳಗಲ್ಲಮಂ

---

# ಬಸವನ ಕೃತಿಗಳು

## ಅಥವಾ.

## ಸದಾಚಾರದ ಮಾರ್ಗದರ್ಶನ.

(ಎಸ್. ಎಸ್. ಮಾಳವಾಡ ಬಿ. ಎ. (ಆನರ್ಸ) ಬೆಳಗಾವ.)

ಮಾತಿನಂತೆ ಕೃತಿಯಿಲ್ಲದೆ ಇರುವದು ಜಗತ್ತಿನ ರೀತಿ. ಬೋಧಿಸುವದನ್ನು ಸಾಧಿಸಿ ತೋರಿಸುವದು ಕಷ್ಟದ ಕೆಲಸ. ಅಂತೆಯೇ ವಿಚಾರಕ್ಕೂ ಆಚಾರಕ್ಕೂ ತಳಕುಹಾಕುವವರನ್ನು ನಾವು ಕಂಡರೆ ಮನ್ನಿಸುತ್ತೇವೆ. ಸರ್ವಸಾಧಾರಣವಾದ ಜಗತ್ತಿನ ರೀತಿಯನ್ನು ಬಿಟ್ಟುಗೊಟ್ಟು ಮಾತಿನಂತೆ ಕೃತಿಯಿರುವವರನ್ನು ಮಹಾತ್ಮರೆಂದು ಒಪ್ಪುತ್ತೇವೆ. ಈ ದೃಷ್ಟಿಯಿಂದ ಬಸವನು ಮಹಾತ್ಮನೇ ಸರಿ. ಅವನ ಅಮೋಘವಾದ ತತ್ವಬೋಧೆಯ ಪರಿಚಯವನ್ನು ಹಿಂದಿನ ಬರೆಹದಲ್ಲಿ ಮಾಡಿಕೊಟ್ಟಿದ್ದೇನೆ. ಈಗ ಆತನ ಸಾಧನೆಯನ್ನು ತೋರಿಸಿ ಕೊಡುವದು ನನ್ನ ಉದ್ದೇಶ.

ಬಸವನ ಕಾರ್ಯರಂಗವು ಬಹುಮುಖವಾಗಿದ್ದಿತು. ಇದುವೇ ಬಸವನ ಘನತೆಯು ವೈಶಿಷ್ಟ್ಯವು. ಜಗತ್ತಿನ ಯಾವ ಮಹಾಪುರುಷರನ್ನು

ತೆಗೆದುಕೊಂಡರೂ ಹೀಗೆ ಬಹುಮುಖವಾದ ಕಾರ್ಯರಂಗದಲ್ಲಿ ಪ್ರವೇಶಿಸಿ ಯಶಸ್ವಿತೆಯನ್ನು ಪಡೆದಂತೆ ಕಂಡುಬರುವದಿಲ್ಲ. ಧಾರ್ಮಿಕ ಸುಧಾರಣೆಯೇ ಮುಖ್ಯೋದ್ದೇಶವಾಗಿರುವವರಂತೂ ಬೇರೊಂದು ಕಾರ್ಯರಂಗದಲ್ಲಿ ಪ್ರವೇಶಿಸುವ ಹವ್ಯಾಸವನ್ನಿಟ್ಟುಕೊಂಡಿರಲಿಲ್ಲವೆಂದು ಸರ್ವಸಾಧಾರಣವಾಗಿ ಹೇಳಬಹುದು. ಆದರೆ ಬಸವನ ಕೃತಿಗಳನ್ನು ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಹಿತ್ಯ, ಆಧ್ಯಾತ್ಮಿಕ, ರಂಗಗಳಲ್ಲಿ ಕಾಣಬಹುದು.

ಹಿಂದೂಧರ್ಮವು, ರೂಢಿ ಸಂಪ್ರದಾಯಗಳ ಸಂಕೋಲೆಯಲ್ಲಿ ಬಂಧಿಸಲ್ಪಟ್ಟಿತ್ತು, ಅರ್ಥವಿಲ್ಲದ ವ್ರತ ನಿಯಮಗಳಿಗೆ ಇಲ್ಲದ ಮಹತ್ವ ಬಂದು ನಿಜವಾದ ಧರ್ಮದ ತಿರುಳು ಎಲ್ಲಿಯೋ ಉಳಿದು ಹೋಗಿತ್ತು. ಡಂಭಾಚಾರವು ತಾನೇ ತಾನಾಗಿ ಕುಣಿಯುತ್ತಿತ್ತು, ತತ್ವಗಳ ಗಲಭೆಯೆದ್ದಿತ್ತು ವಿಚಾರಗಳ ತಿಕ್ಕಾಟ, ವ್ಯಕ್ತಿಗಳ ಹಾರಾಟ, ಎಲ್ಲೆಲ್ಲಿಯೂ ಕಂಡು ಬರುತ್ತಿದ್ದವು, ಬಸವನು ಉದಯವಾದ ಕಾಲದ ಧಾರ್ಮಿಕ ಪರಿಸ್ಥಿತಿಯಿದು. ಅಸಂಖ್ಯ ಮತಗಳೂ, ಅಸಂಖ್ಯ ದೇವತೆಗಳೂ ಇದ್ದುದರಿಂದ, ನಿಜವಾದ ಧರ್ಮವು ಯಾವದೆಂಬದನ್ನು ತಿಳಿಯುವದು ಕಠಿಣವಾಗಿತ್ತು. ಧರ್ಮದ ಅರ್ಥವನ್ನು ಸರಿಯಾಗಿ ತಿಳಿಸಿಕೊಡುವ ಮಹತ್ಪುರುಷರ ಅವಶ್ಯಕತೆಯು ಇತ್ತು. ಆಗ ಬಸವನು ಉದಯಿಸಿದನು, ಧರ್ಮವು ಆತ್ಮೋನ್ನತಿಯ ಸಾಧನವೆಂಬುದನ್ನು ಬೋಧಿಸಿದನು. ಧರ್ಮದ ಮೂಲವಾದ ಭಕ್ತಿಯನ್ನು ಸಾಧಿಸಿದನು, ದಿಕ್ಕುಗಾಣದೆ ತೊಳಲಾಡುತ್ತಿದ್ದ ಅಸಂಖ್ಯ ಜನರಿಗೆ ಬೋಧನೆಯ ಬೆಳಕಿನಿಂದ ಸಾಧನೆಯ ಮಾರ್ಗವನ್ನು ತೋರಿಸಿದನು ಬಸವ. ಒಂದು ದೈವದಲ್ಲಿ ನಿಜವಾದ ಆಂತರಿಕ ಶ್ರದ್ಧೆಯನ್ನಿಟ್ಟು ಭಕ್ತಿ ಮಾರ್ಗವನ್ನು ಜನರ ಮನದ ಮೇಲೆ ಬಿಂಬಿಸಿ ಭಕ್ತಿ ಭಾಂಡಾರಿಯಾದನು ಬಸವ. ಯಾವು ಯಾವುವೋ ಕೊಂಬೆಗಳಿಗೆ ಹಾಯುತ್ತಿದ್ದವರನ್ನು ಯೋಗ್ಯದಾರಿಗೆ ಎಳೆದು ತಂದನು. "ದ್ವೈತಾ ದ್ವೈತವನೋದಿ ಏನು ಮಾಡುವಿರಯ್ಯಾ" 'ಬರಿಯ ಮಾತಿನ ಲೇನಿಹುದು" ಎಂದು ಹೇಳಿ ಭಕ್ತಿಧ್ವಜವನ್ನೇರಿಸಿದನು. ಧರ್ಮ ದುಂದುಭಿಯನ್ನು ಹೊಡೆದನು. ಧರ್ಮದ ಕಗ್ಗತ್ತಲೆಯಲ್ಲಿ ಭಕ್ತಿಯ ಬೆಳಕನ್ನು ತಂದುಕೊಟ್ಟು ಜನರನ್ನು ಉದ್ಧರಿಸಿದನು.

ಧರ್ಮದ ನಿಜವಾದ ಜ್ಞಾನವು ಸಮಾಜದ ಏಳಿಗೆಗೂ ಕಾರಣವಾಯಿತು. ಧರ್ಮವನ್ನು ತಪ್ಪಾಗಿ ತಿಳಿದುಕೊಂಡದ್ದರಿಂದ ಸಮಾಜ

ದಲ್ಲಿ ಅಸ್ತವ್ಯಸ್ತವಾದ ಅಂತಸ್ತುಗಳುಂಟಾಗಿದ್ದವು. ಜನ್ಮದ ತಳಹದಿಯ ಮೇಲೆ ಯೋಗ್ಯತೆಯಿಲ್ಲದಿದ್ದರೂ ಮೇಲು ಯೋಗ್ಯತೆಯಿದ್ದರೂ ಕೀಳು ಎಂಬ ಭಾವನೆಯು ಉಂಟಾಗಿದ್ದಿತು. ಆ ಭಾವನೆಯು ಮನುಷ್ಯನ ಆತ್ಮೋನ್ನತಿಗೆ ಅಡ್ಡ ಬಂದಿತ್ತು. ಯಾಕಂದರೆ ಕೀಳು ಕುಲದಲ್ಲಿ ಜನಿಸಿದವನು ಕಡೆಗೂ ಕೀಳನಾಗಿಯೇ ಉಳಿಯಬೇಕೆಂಬ ನಿರಾಶಾ ಮಯ ವಾತಾವರಣವು ಹಬ್ಬಿತ್ತು. ಅಸ್ತವ್ಯಸ್ತವಾಗಿ ರಚಿಸಲ್ಪಟ್ಟ ಈ ಸಾಮಾಜಿಕ ಅಂತಸ್ತುಗಳನ್ನು ಕಿತ್ತೊಗೆಯುವ ಮಹತ್ಕಾರ್ಯವನ್ನು ಬಸ ವನು ಸಾಧಿಸಿದನು. ಸದಾಚಾರ ಸಂಪನ್ನರಾದ ಹೊಲೆಯ, ಮಾದಿಗ, ಡೋಹರ, ಕ್ಷೌರಿಕ, ಅಗಸ, ಕೂಲಿಕಾರ, ನೇಕಾರ, ಇತ್ಯಾದಿ ಜನರೆ ಲ್ಲರನ್ನು ಒಂದೇ ಅಂತಸ್ತಿಗೆ ತಂದನು, ವೃತ್ತಿಯನ್ನು ಅನುಸರಿಸುವದ ರಲ್ಲಿ ಮೇಲು ಕೀಳುಗಳಿಲ್ಲವೆಂಬದನ್ನು ಘಂಟಾಘೋಷವಾಗಿ ಸಾರಿ ನಿರ್ಭಯವಾಗಿ ಆಚರಿಸಿದನು. ಅನುಭವ ಮಂಟಪದಲ್ಲಿ ಶಿವಾಚಾರ ಸಂಪನ್ನರಾದ "ಹೊಲೆ ಹದಿನೆಂಟು" ಜಾತಿಯವರನ್ನು ಸರಿಯಾಗಿ, ಸಮನಾಗಿ ನಡಿಸಿಕೊಂಡನು. ಇಂದಿನ ತೀವ್ರಗಾಮಿ ಸುಧಾರಕರು ವ್ಯಾಖ್ಯಾನಗಳಲ್ಲಿ, ಬರೆಹಗಳಲ್ಲಿ ಹೇಳುತ್ತಿರುವದನ್ನು ೮೦೦ ವರ್ಷಗಳ ಹಿಂದೆ ಮಾಡಿ ತೋರಿಸಿದನು. ಆತ್ಮೋನ್ನತಿಗೆ ಎಲ್ಲರೂ ಸರಿಯಾದ ಅಧಿಕಾರಿಗಳೆಂಬದನ್ನು ತೋರಿಸಿ ಅಜ್ಞಾನದಲ್ಲಿ ಕೊಳೆಯುತ್ತಿದ್ದ ಸಮಾ ಜವನ್ನು ಮೇಲಕ್ಕೆತ್ತಿದನು' ಡೋಹರ ಕಕ್ಕಯ್ಯನನ್ನು ತನ್ನ ಕಕ್ಕನನ್ನು ಮಾಡಿಕೊಂಡನು. ಮಡಿವಾಳ ಮಾಚಿದೇವನನ್ನು ಸತ್ಕರಿಸಿದನು. ಹೊಲೆಯ ಹರಳಯ್ಯನನ್ನು ಸನ್ಮಾನಿಸಿದನು. ಜಾತಿಯ ಹೀನತನವನ್ನು ಹಿಂದೂಡಿ ಸದಾಚಾರದ ಶ್ರೇಷ್ಠತೆಯನ್ನು ಮೆರೆಸಿದನು.

ಯಾವ ಕಾರಣಕ್ಕಾಗಿಯೋ ಏನೋ ಹಿಂದೂ ಸಮಾಜದಲ್ಲಿ ಸ್ತ್ರೀಗೆ ಯೋಗ್ಯ ಸ್ಥಾನವಿಲ್ಲ ಮನುಮಹಾರಾಯನಂತೂ ಘಂಟಾಘೋಷವಾಗಿ ಸಾರಿಬಿಟ್ಟಿದ್ದಾನೆ. ( न स्त्री स्वातंत्र मर्हति ) ಎಂದು ಶಾಸ್ತ್ರದ ಆಧಾರ, ರೂಢಿಯ ಬೆಂಬಲ ಇವು ದೊರೆತ ಮೇಲೆ ಕೇಳಬೇಕೇ. ಸ್ತ್ರೀಯು ಶೂದ್ರಳಾಗಿಯೇ ಉಳಿಯಬೇಕಂತೆ. ಪುರುಷನ ವಿಲಾಸಕ್ಕಾಗಿ ಅವಳು "ಅರ್ಧಾಂಗಿ" ಯಾಗಬಹುದಂತೆ. ಆದರೆ ಪುರುಷನಂತೆ ಧರ್ಮದಲ್ಲಿ ಅವಳಿಗೆ ಅಧಿಕಾರವಿಲ್ಲವಂತೆ. ಮೋಕ್ಷಕ್ಕೂ ಅವಳು ಅನರ್ಹಳೇ. ಅವಳು ಪಾಪಯೋನಿಯಂತೆ. ಶಾಸ್ತ್ರದ ಈ ಅವ್ಯವಸ್ಥೆಯನ್ನು, ರೂಢಿಯ

ಈ ಕ್ರೌರ್ಯವನ್ನು ಕಿತ್ತೊಗೆದನು ಬಸವ. ಸ್ತ್ರೀಯರು ಆತ್ಮೋನ್ನತಿಗೆ ಅನರ್ಹಳಲ್ಲವೆಂಬುದನ್ನು ಜನರ ನಿದರ್ಶನಕ್ಕೆ ತಂದು ಸ್ತ್ರೀಗೆ ಧರ್ಮದಲ್ಲಿ ಪುರುಷನಷ್ಟೇ ಯೋಗ್ಯತೆಯನ್ನು ತಂದುಕೊಟ್ಟು ಮಹಿಳೆಯರನ್ನು ಉದ್ಧರಿಸಿದನು. ಸದಾಚಾರಕ್ಕೆ ಸುವಿಚಾರಕ್ಕೆ ತಲೆಬಾಗುವ ಬಸವನು ಮಹಿಳೆಯರಿಗೂ ಆತ್ಮೋನ್ನತಿಗೆ ಅಧಿಕಾರವಿರುವದೆಂಬದನ್ನು ತೋರಿಸಿ ಅವರನ್ನು ಉದ್ಧರಿಸಿದನು. ಬಸವನ ಕಾಲದಲ್ಲಿ ಅಸಂಖ್ಯ ಶಿವಶರಣೆಯರ ಹೆಸರು ಕೇಳಿಬರುವದೇ ಇದಕ್ಕೆ ಸಾಕ್ಷಿ. ರೂಢಿಯು ಶಾಸ್ತ್ರಗಳು ಹೀಯಾಳಿದ ಸ್ತ್ರೀಯು ಬಸವನ ಕಾಲಕ್ಕೆ ಪುರುಷನಿಗೆ ಸಮಾನವಾದ ಹಕ್ಕನ್ನು ದೊರಕಿಸಿದಳು. ಸ್ತ್ರೀಯಾದ ಮಾತ್ರಕ್ಕೆ ಕುಂದೇನು? ಯೋಗ್ಯತೆ ಇದ್ದರೆ ಸಾಕು. ಯೋಗ್ಯವನ್ನು ಮನ್ನಿಸುವದು ಬಸವನ ಪವಿತ್ರವಾದ ಕರ್ತವ್ಯವೇ ಆಗಿತ್ತು. ಆತ್ಮೋನ್ನತಿಯ ದಾರಿಯಲ್ಲಿ ಅಬಲೆಯರಿಗೂ ಪುರುಷನಷ್ಟೇ ಅಧಿಕಾರ ಕೊಟ್ಟು ವೀರಶೈವ ಮತವು ಒಂದು ವಿಶಿಷ್ಟವಾದ ಶ್ರೇಯಸ್ಸನ್ನು ಪಡೆಯಿತು. ಇದು ವೀರಶೈವರಿಗೆ ಒಂದು ಹೆಮ್ಮೆಯ ವಿಷಯು. ಇದು ಆ ಮಹಾತ್ಮ ಬಸವನ ಮಹತ್ಕಾರ್ಯ. ಹಿಂದೊಮ್ಮೆ ಹೇಳಿದಂತೆ ಆಧುನಿಕ ಯುಗದ ತೀವ್ರಗಾಮಿ ಸುಧಾರಣೆಗಳೆಲ್ಲಕ್ಕೂ ಬಸವನು ಹಾದಿ ತೋರಿಸಿದನು ಅರ್ಥಾತ್ ಇಂದು ನಮ್ಮ ಇಂದಿನ ಅನೇಕ ಕ್ಷೇತ್ರಗಳಲ್ಲಿ *Back to Basava* ಎಂಬ ಕೂಗು ಕೇಳಬರುತ್ತದೆ.

ಇಂದಿಗೂ ವೀರಶೈವರಲ್ಲಿ ಸ್ತ್ರೀಗೆ ಲಿಂಗಧಾರಣ, ದೀಕ್ಷೆ, ಪ್ರಸಾದ ಮುಂತಾದ ಅನೇಕ ಧಾರ್ಮಿಕ ವಿಧಿಗಳಲ್ಲಿ ಪುರುಷನ ಸಮಾನವಾದ ಅಧಿಕಾರವಿದೆ. ಸ್ತ್ರೀಯನ್ನು ಹೀನಸ್ಥಿತಿಯಲ್ಲಿಯೇ ಉಳಿಯಗೊಡುವದು ಬಸವನಿಗೆ ಸೇರಲಿಲ್ಲ. ಗಂಡಹೆಂಡಿರಲ್ಲಿ ಮೇಲು ಕೀಳುಗಳನ್ನು ಬಸವನು ಒಪ್ಪದಾದನು. ಗಂಡ ಶಿವಲಿಂಗದೇವನ ಭಕ್ತನಾಗಿ ಹೆಂಡತಿಯು ಮಾತ್ರ ಮಾರಿಮಸಣಿಯ ಭಕ್ತೆಯಾದರೆ ಏನು ತಾನೇ ಪ್ರಯೋಜನ? ಸತಿಪತಿಗಳೊಂದಾದ ಭಕ್ತಿ ಹಿತವಕ್ಕು ಶಿವಂಗೆ. ಸತಿಪತಿಗಳೊಂದಾಗದವನ ಭಕ್ತಿ ಅಮೃತದೊಳಗೆ ವಿಷ ಬೆರಸಿದಂತೆಯೇ ಸರಿ. ಉಭಯ ದೃಷ್ಟಿಯಲ್ಲಿ ದೃಷ್ಟವ ಕಾಂಬಂತೆ ದಂಪತಿ ಏಕಭಾವವಾಗಿ ನಿಲ್ಲಬೇಕೆಂಬ ಶರಣರ ನುಡಿಯನ್ನು ನಡೆಯಲ್ಲಿ ತರಹಚ್ಚಿದನು ಬಸವ. ಬಸವನು ಶಿವಾನುಭವ ಮಂಟಪದಲ್ಲಿ ಸ್ತ್ರೀಯರು ಮಹತ್ವದ ಭಾಗವನ್ನು ತೆಗೆದುಕೊಂಡದ್ದು ಕಂಡುಬರುತ್ತದೆ. ಆ ಮೂಲಕವಾಗಿಯೇ ಅನೇಕ ಶಿವಶರಣೆ

ಯರ ದಿವ್ಯ ವಚನಗಳ ಹೊನಲು ಹರಿಯಿತು. ಅದಕ್ಕೆ ಮಹಾದೇವಿ ಯಂತಹ ಲೋಕವಂದ್ಯರು ಜೊತೆಗೆ ಬಂದರು. ರೊಟ್ಟಿ ತಿರುಗಿಸುವ ರೆಮ್ಮವ್ವೆ ಮುಂತಾದವರು ಮುಂದಾದರು. ಮುಕ್ತಾಯಕ್ಕ ಅಕ್ಕನಾ ಗಮ್ಮ, ನೀಲಾಂಬಿಕೆ, ಗಂಗಾಂಬಿಕೆ ಮುಂತಾದ ಶಿವಶರಣೆಯರು ಪ್ರಸಿದ್ಧರಾದರು.

ಬಸವನ ಸಮಾಜೋದ್ಧಾರಣೆಯು ಆರ್ಥಿಕ ಸುಧಾರಣೆಗಳಿಗೆ ಕಾರಣವಾಯಿತು. ವೃತ್ತಿಗಳ ಮೇಲು ಕೀಳುಗಳನ್ನು ಕಿತ್ತೊಗೆದುದರಿಂದ ಮನುಷ್ಯನು ಯಾವ ವ್ಯವಸಾಯವನ್ನು ಕೈಕೊಂಡರೂ ಕೀಳಲ್ಲವೆಂಬ ಭಾವನೆಯು ಸ್ವಾಭಾವಿಕವಾಗಿಯೇ ತಲೆದೋರಿತು. ಮನುಷ್ಯನು ಯಾವ ವ್ಯವಸಾಯವನ್ನವಲಂಬಿಸಿದರೂ ಸರಿಯೇ. ಅದು ಐಹಿಕ ಪಾರಮಾರ್ಥಿಕಗಳೆರಡಕ್ಕೂ ಸಾಧನವಾಗಬಹುದೆಂಬ ಹೊಸ ಮಾತನ್ನು ಹೇಳಿ ಕಾಯಕ ತತ್ವವನ್ನು ಪ್ರಸಾರಗೊಳಿಸಿದರು. ಕೃಷಿಕೃತ್ಯಕಾಯಕದಿಂದಾದೊಡೇನು; ತನುಮನ ಬಳಲಿಸಿ ತಂದು ದಾಸೋಹವ ಮಾಡುವ ಪರಮ ಸದ್ಭಕ್ತನ ಪಾದವ ತೋರಯ್ಯ ಎನಗೆ; ಕಾಯಕವು ಸ್ವಾವಲಂಬನ ಮಾರ್ಗದ ಉದರನಿರ್ವಾಹದ ಸಾಧನವಾಗಿಯೂ, ಮುಕ್ತಿಗೆ ಮಾರ್ಗವಾಗಿಯೂ ಪರಿಣಮಿಸಿತು. ಬಸವನ ಕಾಲದಲ್ಲಿ ಈ ಕಾಯಕ ತತ್ತ್ವದ ಆಧ್ಯಾತ್ಮಿಕ ಅರ್ಥವು ಏನೇ ಇರಲಿ, ಲೌಕಿಕ ದೃಷ್ಟಿಯಲ್ಲಾದರೂ ಅತ್ಯಂತ ಉಪಯುಕ್ತವಾಗಿದೆ. ಅದು ವೀರಶೈವ ಸಮಾಜದ *self-sufficiency* ಸ್ವ ಸಮರ್ಥತೆಗೆ ಕಾರಣವಾಯಿತು. ಕಾಯಕ ತತ್ವವು ಅರ್ಥಶಾಸ್ತ್ರದ ಜೀವಾಳವಾದ ಶ್ರಮವಿಭಾಗವನ್ನು (*Division of labour*) ಒಳಕೊಂಡಿದೆ. ಸಮಾಜದಲ್ಲಿ ಬೇರೆ ಬೇರೆ ವ್ಯಕ್ತಿಗಳು ಬೇರೆ ಬೇರೆ ವ್ಯವಸಾಯವನ್ನು ಕೈಕೊಳ್ಳುವದರಿಂದ ಸಮಾಜದ ಸ್ವಾವಲಂಬನೆಯೂ ಸ್ವಾಭ್ಯುದಯವೂ, ಆರ್ಥಿಕ ಉನ್ನತಿಯೂ ತಲೆದೋರುವವು. ಈ ಅತ್ಯುಪಯುಕ್ತವಾದ ಆರ್ಥಿಕ ವ್ಯವಸ್ಥೆಯನ್ನು ಆರಂಭಿಸಿದನು ಬಸವ. ತನ್ನ ಸಮಾಜವು ತನಗೆ ಬೇಕಾಗುವ ಅನುಕೂಲ್ಯಗಳನ್ನೆಲ್ಲ ತಾನೇ ಏರ್ಪಡಿಸಿಕೊಳ್ಳಬೇಕೆಂದೂ ಅನ್ಯರನ್ನು ಆಶ್ರಯಿಸಕೂಡದೆಂದೂ ಬೋಧಿಸಿದನು. ಆ ಬೋಧನೆಯನ್ನು ಸಾಧಿಸುವದಕ್ಕಾಗಿ ತಾನು ಭವಿಯನ್ನು ಕೂಡ ಸೇವಿಸಲುದ್ಯುಕ್ತನಾದನು. ಬಿಜ್ಜಳನ ಪಾದಸನ್ನಿಧಿಯಲ್ಲಿ ನಿಂತುಗೊಂಡು ಸೇವೆ ಮಾಡುವದಕ್ಕೆ ಹಿಂಜರಿಯಲಿಲ್ಲ ಬಸವ. ಆತನಿಗೆ ಧನ ಲೋಲುಪತೆಯಾಗಲಿ ಅಧಿಕಾರ ಲಾಲಸೆಯಾಗಲಿ ಇದ್ದಿರಲಿಲ್ಲ. ಇಂತಹ ಕ್ಷುದ್ರ ವಿಚಾ

ರಗಳ ಆಚೆಗೆ ಇದ್ದನು. "ಊರ ಮುಂದೆ ಹಾಲಹಳ್ಳ ಹರಿಯುತ್ತಿರಲಿ. ವಾಳಿಯಾವಿನ ಬೆನ್ನಲಿ ಹರಿಯಲದೇಕಯ್ಯ, ಲಜ್ಜಗೆಡಲೇಕೆ, ನಾಣಗೆಡ ಲೇಕೆ? ಕೂಡಲಸಂಗಮದೇವಯ್ಯನುಳ್ಳನಕ್ಕರ ಬಿಜ್ಜಳನ ಭಂಡಾರವೆನ ಗೇಕಯ್ಯಾ?" ಭಂಡಾರದ ಹೊಣೆಯನ್ನು ಹೊತ್ತ ಬಸವನು *(clean political life)* ನಿಷ್ಕಲ್ಮಷವಾದ ರಾಜಕೀಯ ಜೀವನವನ್ನು ಪಾಲಿಸಿದನು. ಲಿಂಗಧಾರಿಯಿಲ್ಲದ ಭವಿಯನ್ನು ಮನ್ನಿಸದ ಆತನು ಬಿಜ್ಜಳನ ಸೇವೆ ಮಾಡುವದಕ್ಕೆ ಹಿಂಜರಿಯಲಿಲ್ಲ. ಆದರೆ ಆ ಸೇವೆಯು ಸ್ವಾರ್ಥ ಸಾಧನೆಗಲ್ಲ. ಆದರೆ ಜಂಗಮದಾಸೋಹಕ್ಕೆ ಕಾಯಕ ತತ್ತ್ವವನ್ನು ಪಾಲಿಸುವದಕ್ಕೆ "ನಾನು ಪರಸೇವೆಯ ಮಾಡುವೆನಯ್ಯಾ. ಜಂಗಮ ದಾಸೋಹಕ್ಕೆ." ಎಂದು ಆತನು ಹೇಳಿದ್ದಾನೆ. ಭವಿ ಬಿಜ್ಜಳನ ಗದ್ದು ಗೆಯ ಕೆಳಗೆ ಕುಳ್ಳಿರ್ದು ಓಲೈಸಿಹೆನೆಂದು ಕೆಲವರು ಆಗ ಆಕ್ಷೇಪಿಸಿರ ಬಹುದು. ಅವರಿಗೆ ಬಸವನು ಹೀಗೆ ಉತ್ತರ ಕೊಟ್ಟನು— "ಹೊಲೆ ಹೊಲೆಯರ ಮನೆಯ ಹೊಕ್ಕಾದರೂ, ಸಲೆ ಕೈಕೂಲಿಯ ಮಾಡಿದರೆಯೂ ನಿಮ್ಮ ನಿಲವಿಗೆ ಕುದಿವೆನಲ್ಲದೆ ಎನ್ನೊಡಲ ಅವಸರಕ್ಕೆ ಕುದಿವೆನಾದರೆ ತಲೆದಂಡ ತಲೆದಂಡ ಕೂಡಲಸಂಗಮದೇವಯ್ಯ" ಈ ಕಾಯಕವು ವೀರಶೈವ ಸಮಾಜದಲ್ಲಿ ಸುಪರಿಣಾಮವನ್ನುಂಟುಮಾಡಿತು. ಆರ್ಥಿಕ ದೃಷ್ಟಿಯಿಂದ ಸಮಾಜದ ಸಂಪತ್ತು ಸಮಾಜದಲ್ಲಿಯೇ ಉಳಿದು ಸಮಾ ಜದ ಆರ್ಥಿಕ ಅಭ್ಯುದಯಕ್ಕೆ ಕಾರಣವಾಯಿತು. ಇಂದಿನ ಅರ್ಥಶಾಸ್ತ್ರ ಜ್ಞರು ಹೇಳುವ ಸಮಾಜ ಬಂಧುತ್ವ *(Principle of solidarity)* ಸ್ವಸಮರ್ಥತೆ *(self sufficiency)* ಇವೆಲ್ಲವೂ ಕಾಯಕದಲ್ಲಿ ಅಡಕ ವಾಗಿವೆ.

ಜನ್ಮದಿಂದ ಬರುವ ಶ್ರೇಷ್ಠತೆಯನ್ನು ಅಲ್ಲಗಳೆದ ಬಸವನು ವ್ಯವ ಸಾಯಗಳಿಂದ ಬರುವ ಹೀನತನವನ್ನು ಅಲ್ಲಗಳೆದದ್ದರಿಂದ ಸಮಾಜವು ಆರ್ಥಿಕ ರಂಗದಲ್ಲಿ ಸರ್ವಸ್ವತಂತ್ರವಾಗಲು ಆಸ್ಪದ ದೊರೆಯಿತು. ಬಸ ವನು ಕಾಯಕಗಳಿಗೆ ಉಚ್ಚವಾದ ಸ್ಥಳವನ್ನು ಕೊಟ್ಟನು. ಅದಕ್ಕೆಂದೇ ಅಗಸ, ಕ್ಷೌರಿಕ, ಮಡಿವಾಳ, ಮಾದಿಗ, ಒಕ್ಕಲಿಗ, ಕುಂಬಾರ, ನೇಕಾರ, ಕೂಲಿಕಾರ, ಇತ್ಯಾದಿ ವ್ಯವಸಾಯದವರೆಲ್ಲರೂ ಸಮಾಜದಲ್ಲಿ ಉಂಟಾ ದರು. ಶಿವಾನುಭವ ಮಂಟಪದಲ್ಲಿ ಅವರೆಲ್ಲರಿಗೂ ಸರಿಯಾದ ಸ್ಥಾನ. ಗುರುವರ್ಗದವರಾದ ಜಂಗಮರಾದರೂ ಕಾಯಕವನ್ನು ಬಿಟ್ಟಿರಲು ಸಾಧ್ಯ ವಿಲ್ಲ. ಈಗಿನಂತೆ ಭಿಕ್ಷಾವೃತ್ತಿಯನ್ನವಲಂಬಿಸಿ ಭಕ್ತರ ಪ್ರಸಾದ "ಸತಾ

ಣರ ವಸೂಲಿಯಂತಹ" ಶಿಷ್ಯರ ಕಾಣಿಕೆ ಇವುಗಳ ಮೇಲೆಯೇ ಜಂಗಮರು ಉದರಂಭರಣ ಮಾಡುತ್ತಿರಲಿಲ್ಲ. ಬಸವನು ಅವರಿಗೂ ಕಾಯಕವನ್ನು ಮಾಡ ಹಚ್ಚಿದನು. ಭಕ್ತರ ಮೃಷ್ಟಾನ್ನವನ್ನು ಸವೆದು ದೊಡ್ಡ ಹೊಟ್ಟೆಯನ್ನು ಮೆರೆಯಿಸುವ ಇಂದಿನ ಜಂಗಮರು ಗುರುವಾದರೂ ಕೂಡ ಜೀವನ್ಮುಕ್ತಿಗೆ ಕಾಯಕ ಬೇಕೆಂಬ" ಬಸವನ ಉಕ್ತಿಯನ್ನು ಗಮನಕ್ಕೆ ತಂದುಕೊಳ್ಳಬೇಕು. ಬಸವನು ಪ್ರವೃತ್ತಿ ನಿವೃತ್ತಿ ಮಾರ್ಗಗಳನ್ನು ಎಷ್ಟು ಸುರಸವಾಗಿ ಬೆರಿಸಿದನೆಂಬದನ್ನು ನಾವು ಇಲ್ಲಿ ಕಂಡುಕೊಳ್ಳಬಹುದು. ಕಾಯಕ ತತ್ವವು ಸಮಾಜದ ಸುವ್ಯವಸ್ಥೆಗೆ, ಆರ್ಥಿಕ ಅಭ್ಯುದಯಕ್ಕೆ ಪಾರಮಾರ್ಥಿಕ ಸಾಧನಕ್ಕೆ ಕಾರಣವಾಯಿತು. (ಕಾಯಕದ ವಿಷಯವಾಗಿ ಹೆಚ್ಚಾಗಿ ತಿಳಿದುಕೊಳ್ಳಲಪೇಕ್ಷಿಸುವವರು ಶಿವಾನುಭವದಲ್ಲಿ ರಾ|| ಸಾ|| ಹಳಕಟ್ಟಿಯವರ ಲೇಖವನ್ನೋದಬಹುದು )

ಇನ್ನು ಬಸವನ ಮಹತ್ಕೃತಿಗಳಲ್ಲಿ ಒಂದಾದ ಶಿವಾನುಭವ ಮಂಟಪದ ಕಡೆಗೆ ಹೊರಳುವ. ಸಮತಾವಾದಿ ಬಸವನು ಎಲ್ಲರಿಗೂ ವಿಚಾರ ಸ್ವಾತಂತ್ರ್ಯವನ್ನು ಕೊಟ್ಟಿದ್ದನು. ಅನುಭವ ಮಂಟಪದಲ್ಲಿ ಚರ್ಚೆಯಲ್ಲಿ ವಿವಿಧ ವೃತ್ತಿಯ ವಿವಿಧ ಸ್ಥಾನಮಾನಗಳ ವಿವಿಧ ನಾಡುಗಳ ಜನರೆಲ್ಲರೂ ಸೇರುತ್ತಿದ್ದರು. ಸ್ತ್ರೀಯರೂ ಭಾಗ ವಹಿಸುತ್ತಿದ್ದರು. ಅಲ್ಲಿ ನೆರೆದ ಶಿವಶರಣರು ತಮ್ಮ ವಿಚಾರ ವಿನಿಮಯ ಮಾಡಿ ಸತ್ಯಾರ್ಥವನ್ನು ಬೈಲಿಗೆ ತರುತ್ತಿದ್ದರು. ಉಚ್ಚ ನೀಚ ಭೇದಕ್ಕೆ ಆಸ್ಪದ ಕೊಡದ್ದರಿಂದ ಎಲ್ಲರೂ ತಮ್ಮ ತಮ್ಮ ವಿಚಾರಗಳನ್ನು ಮಂಡಿಸಬಹುದಾಗಿತ್ತು. ತನ್ನನ್ನು ತನ್ನ ಅನುಯಾಯಿಗಳು ಬಂದು ಅನುಪಮವಾದ ಗೌರವದಿಂದ ಕಾಣುತ್ತಿದ್ದರೂ ತಾನು ಹೇಳಿದ್ದೇ ಪ್ರಾಧಾನ್ಯ ಎಂಬ ಸಂಕುಚಿತ ವಿಚಾರಕ್ಕೆ ಎಡೆಗೊಡಲಿಲ್ಲ ಬಸವ. ಶಿವಶರಣರ ವಚನಗಳಿಂದರೆ ಅನುಭವ ಮಂಟಪದಲ್ಲಿ ಅನೇಕ ಶಿವಶರಣರು ನೆರೆದು ಮಥಿಸಿದ ವಿಚಾರಗಳ ನವನೀತವೇ ಸರಿ. ಶಿವಾನುಭವ ಮಂಟಪವು ಸಮಾಜದ ವಿಚಾರ ಆಚಾರಗಳಲ್ಲಿ ಒಂದು ಕ್ರಾಂತಿ ಉಂಟಾಗುವದಕ್ಕೆ ಸಾಧನವಾಯಿತು. ಅಲ್ಲಿ ಮಡಿವಾಳ ಮಾಚಿದೇವನೂ, ಆಯದಕ್ಕಿಯ ಮಾರಯ್ಯನೂ, ನುಲಿಯ ಚಂದಯ್ಯನೂ, ಅಂಬಿಗರ ಚೌಡಯ್ಯನೂ, ಮೋಳಿಗೆಯ ಮಾರಯ್ಯನೂ, ಹಡಪದ ಅಪ್ಪಣ್ಣನೂ, ಬಾಚಿಕಾಯಕದ ಬಸಪ್ಪನೂ, ಮಾದಾರ ದೂಳಯ್ಯ, ತುರಗಾಹಿ ರಾಮಣ್ಣನೂ, ಢಕ್ಕೆಯ ಬೊಮ್ಮಣ್ಣನೂ, ಮಹಾ

ದೇವಿಯಕ್ಕ, ಮುಕ್ತಾಯಕ್ಕ, ನೆಲ್ಲ್ಯಾಳಕ್ಕ, ರೆವ್ಮ್ಮವ್ವೆ, ನಿಂಬವ್ವೆ, ಬಿಜ್ಜಳದೇವಿ, ಕಾಳವ್ವೆ, ಮುಂತಾದವರೂ ಶೂನ್ಯಸಿಂಹಾಸನದ ಅಧಿಪತಿಯಾದ ಪ್ರಭುದೇವರೂ ಮಹಾತ್ಮನಾದ ಬಸವನೂ ಚನ್ನಬಸವನೂ ಇವರೆಲ್ಲರೂ ನೆರೆದು ಧಾರ್ಮಿಕ ಚರ್ಚೆಯನ್ನು ನಡೆಸುತ್ತಿದ್ದರು. ಆ ಚರ್ಚೆಯ ಫಲವಾಗಿ ಸುವಿಚಾರಗಳು ಎಲ್ಲ ಕಡೆಗೂ ಹಬ್ಬಿ ಸದಾಚಾರಕ್ಕೆ ಅನುಕೂಲವಾಯಿತು. ಧಾರ್ಮಿಕ ವಿಷಯದಲ್ಲಿಯೂ ವ್ಯಕ್ತಿನಿಯಂತ್ರಣ (*Dictatorial power*) ವನ್ನಿಡದೆ ಸರ್ವಸಮತೆಯು ನೆಲೆಗೊಂಡದಕ್ಕೆ ಅನುಭವಮಂಟಪವು ಕಾರಣವಾಯಿತು. ಅದೊಂದು ಅನುಕರಣೀಯವಾದ ಸಂಘವಾಗಿ ಪರಿಣಮಿಸಿತು. ವಿಚಾರಸ್ವಾತಂತ್ರ್ಯತೆಗೆ ಆಸ್ಪದಕೊಟ್ಟಿತು. ಧರ್ಮದಲ್ಲಿ ಆಸಕ್ತಿಯನ್ನು ಹೆಚ್ಚಿಸಿತು. ಧರ್ಮದಲ್ಲಿ ಸಮಾಜದಲ್ಲಿ ಸಮತೆಯನ್ನು ಭೋದಿಸಿತು. ಪ್ರಚೋದಕವಾದ ಚರ್ಚಮಂಡಲವಾಗಿ ಪ್ರಬೋಧಕವಾದ ವಚನಸಾಹಿತ್ಯದ ಬೆಳವಣಿಗೆಗೆ ಕಾರಣವಾಯಿತು.

ಕಲ್ಪಿತವಾಗಿಯೋ ಅಕಲ್ಪಿತವಾಗಿಯೋ ಬಸವನಿಂದ ಕನ್ನಡಸಾಹಿತ್ಯದಲ್ಲಿ ಒಂದು ಚಿರಸ್ಮರಣೀಯವಾದ ಕ್ರಾಂತಿಯುಂಟಾಯಿತು. ಆ ಕ್ರಾಂತಿಯು ಸುಪರಿಣಾಮವಾಗಿಯೇ ಕನ್ನಡ ಸಾಹಿತ್ಯವು ಅಳಿಯಬಹುದೆಂಬ ಭೀತಿಯು ತೊಲಗಿ ವಿಶೇಷವಾದ ಪುರಸ್ಕಾರವನ್ನು ಪಡೆಯಿತು. ಇಹಲೋಕದಲ್ಲಿ ವಿರಕ್ತಿಯನ್ನು ಸಾರಿ ಸಂಸಾರದಲ್ಲಿ ಸುಖವಿಲ್ಲೆಂದು ಬೋಧಿಸುವ ಕ್ಲಿಷ್ಟ ಚಂಪೂ ಸಾಹಿತ್ಯದಿಂದ ಜನರು ಬೇಜಾರು ಪಟ್ಟುಕೊಂಡಿದ್ದರು. ಸಾಹಿತ್ಯವು ಜನಜೀವನವನ್ನು ಅನುಸರಿಸಬೇಕೆಂಬ ಸಾಹಿತ್ಯ ತತ್ತ್ವವು ಅಳಿದಿತ್ತು. ಕೇಸರಿಟ್ಟ ಕವಿಸಮಯವು ಶಬ್ದಾಡಂಬರವು ಪಾಂಡಿತ್ಯ ಪ್ರದರ್ಶನಕ್ಕಾಗಿ ಏರ್ಪಟ್ಟ ಭಾಷೆಯ ಅಲಂಕಾರ, ಚಮತ್ಕಾರಗಳು ಜನರ ಮನಸ್ಸನ್ನು ಆಕರ್ಷಿಸುವಂತಿರಲಿಲ್ಲ. ಅಂತು ಸಾಹಿತ್ಯವು ಜನಸಾಮಾನ್ಯರನ್ನು ಅಲಕ್ಷಿಸಿ ರಾಜರಾಣಿಯರನ್ನು ಸಂತೋಷಗೊಳಿಸುವ ಸಾಧನವಾಗಿ ಪರಿಣಮಿಸಿತ್ತು. ಉದ್ದುದ್ದ ಸಮಾಸಗಳೂ, ಉಕ್ತಿವೈಚಿತ್ರ್ಯಗಳೂ ಕಲ್ಪನಾಸೃಷ್ಟಿಯ ಅತ್ಯುಕ್ತಿಗಳೂ, ಜನಸಾಮಾನ್ಯರ ಮನಸ್ಸನ್ನು ಸೆಳೆಯುವಂತಿರಲಿಲ್ಲ. ಇಷ್ಟಲ್ಲದೆ ಅವರ ಹೃದಯವನ್ನು ನೇರವಾಗಿ ಸೇರಿ ಸುಪರಿಣಾಮಗಳನ್ನುಂಟುಮಾಡುವ ಸಾಹಿತ್ಯದ ಅಭಾವವಿದ್ದುದರಿಂದ ಧಾರ್ಮಿಕ ರಂಗದಂತೆ ಸಾಹಿತ್ಯರಂಗದಲ್ಲಿಯಾದರೂ ನಿರಾಶಾಮಯ ವಾತಾವರಣವು ಹಬ್ಬಿತ್ತು. ಇಂತಹ ಕಾಲದಲ್ಲಿ ಬಸವನು ಸಾಹಿತ್ಯದಲ್ಲಿ ಹೊಸದೊಂದು

ಹಾದಿಯನ್ನು ಹಾಕಿಕೊಟ್ಟನು. ತನ್ನದು ಆದ ಒಂದು ಸಾಹಿತ್ಯಮಾರ್ಗದಿಂದ ಜನಸಾಮಾನ್ಯರನ್ನು ಆಕರ್ಷಿಸಿ ಕನ್ನಡ ಸಾಹಿತ್ಯವನ್ನು ಉಳಿಸಿದನು, ಬೆಳೆಸಿದನು. ಸಾಹಿತ್ಯದ ಇತಿಹಾಸದಲ್ಲಿ ಅದು ಅನೋಘವಾದ ಸ್ಥಾನವನ್ನು ಪಡೆದುಕೊಂಡನು. ಬಸವನ ಧಾರ್ಮಿಕ ಕ್ರಾಂತಿಯು ಸಾಹಿತ್ಯಕ್ರಾಂತಿಗೂ ಕಾರಣವಾಯಿತು. ಸರಳವೂ ಸುಲಭವೂ ಆದ ಕನ್ನಡ ರೀತಿ ತಲೆದೋರಿ "ಕನ್ನಡತನ" ಉಳಿಯಿತು. ಅಂಧಾನುಕರಣೆಯು ಅಳಿಯಿತು. ಸಂಸ್ಕೃತದ ದಾಸ್ಯವು ಹೋಯಿತು. ಶುದ್ಧ ಕನ್ನಡ ವೃತ್ತಿಗಳಾದ ಷಟ್ಪದಿ ಸಾಂಗತ್ಯ ವಚನಗಳು ತಲೆದೋರಿದವು. ಜನಸಾಮಾನ್ಯರಲ್ಲೊಂದು ಹೊಸ ಜೀವಕಳೆಯನ್ನು ತಂದುಕೊಟ್ಟ ಶ್ರೇಯಸ್ಸು ಬಸವನಿಗೇ ಸರಿ. ಕನ್ನಡ ಸಾಹಿತ್ಯವನ್ನು ಉಳಿಸಿದರೆಂಬ ಕೀರ್ತಿಯ ಜೊತೆಗೆ ಕನ್ನಡ ಗದ್ಯಕ್ಕೆ ಆದಿಪ್ರವರ್ತಕನೆಂಬ ಹೆಮ್ಮೆಯು ಸೊತ್ತು ವೀರಶೈವರದಾಯಿತು. ಕನ್ನಡಕ್ಕೆ ವೀರಶೈವರು ಮಾಡಿದ "ಶಾಶ್ವತವೂ, ಸ್ತೋತ್ರಾರ್ಹವೂ ಆದ ಈ ಸೇವೆಯನ್ನು ಆಧುನಿಕ ಸಾಹಿತಿಗಳು ಮುಕ್ತಕಂಠದಿಂದ ಹೊಗಳುತ್ತಾರೆ. ಕಳಕಳಿಯ ಹೃದಯದಿಂದ ಹೊರಟ ಬಸವನ ನುಣ್ಪಿನ ನುಡಿಗಳು ಜನಸಾಮಾನ್ಯರ ಹೃದಯವನ್ನು ನೇರವಾಗಿ ಸೇರಿ ಸುಪರಿಣಾಮವನ್ನುಂಟುಮಾಡಿದವು. ಧರ್ಮದ ಗೂಢ ತತ್ತ್ವಗಳನ್ನು ಸುಲಭ ಭಾಷೆಯಲ್ಲಿ ತಿಳಿಯಾದ ಶೈಲಿಯಲ್ಲಿ ಸ್ವಾಭಾವಿಕ ರೀತಿಯಲ್ಲಿ ಜನಸಾಮಾನ್ಯರಿಗೆ ತಿಳಿಯುವಂತೆ ಜನರ ಹೃದಯದ ವರೆಗೆ ಹೋಗುವಂತೆ ಪದ್ಯಮಯವಾದ ಗದ್ಯದಲ್ಲಿ ಬರೆದು ಕನ್ನಡ ಸಾಹಿತ್ಯಕ್ಕೆ ಹೊಸದೊಂದು ಸಾಹಿತ್ಯರೂಪವನ್ನುಂಟುಮಾಡಿದನು. ಅವನನ್ನೇ ಅವನ ಅಸಂಖ್ಯಾತ ಅನುಯಾಯಿಗಳು ಅನುಸರಿಸಿದರು. ಈ ಮೂಲಕ ಕನ್ನಡದಲ್ಲಿ "ವಚನ" ವೆಂಬ ಅಮೂಲ್ಯವಾದ ಅಸದೃಶವಾದ ನವೀನವಾದ ಸಾಹಿತ್ಯವುಂಟಾಯಿತು. ಬಸವನ ಕ್ರಾಂತಿಯ ಫಲವಾಗಿ ಸರಳತೆಯೂ ಸುಲಭತೆಯೂ ಸಾಹಿತ್ಯದಲ್ಲಿ ತಲೆದೋರಿ ಒಂದು ನವಜೀವವನ್ನು ಉಂಟುಮಾಡಿದ್ದರಿಂದಲೂ ಬಸವನ ವ್ಯಕ್ತಿ ವಿಶೇಷವು ಒಂದು ಘನತರವಾದ ಪ್ರಭಾವವನ್ನುಂಟುಮಾಡಿದ್ದರಿಂದಲೂ ಮುಂದಿನ ಕಾಲದ ಸಾಹಿತ್ಯವನ್ನು ವಿಮರ್ಶಕರು "ಬಸವಯುಗ" ಎಂದು ಕರೆದಿದ್ದಾರೆ. ಅದು ಒಳ್ಳೇ ಯಥಾರ್ಥವೂ ಆಗಿದೆ. ಅಂತು ಬಸವನ ಕ್ರಾಂತಿಯಿಂದ ವೀರಶೈವರಿಗೆ ಸಾಹಿತ್ಯದಲ್ಲಿ ಒಂದು ಘನವಾದ ಶಾಶ್ವತವಾದ ಸ್ಥಾನವು ಸಿಕ್ಕಿದೆ. ಅಚ್ಚಗನ್ನಡದ ರೀತಿಯ ಆದ್ಯ ಪ್ರವರ್ತಕರೆಂಬ ಮನ್ನಣೆಯು ಅವರಿಗಿದೆ.

ಈ ಬಸವಯುಗದಲ್ಲಿ ಕನ್ನಡ ಕವಿತೆಯ ಜೀವಾಳವಾದ ಷಟ್ಪದಿಯು ಹುಟ್ಟಿ ತಲೆದೋರಿತು. ಜನಪ್ರಿಯವಾಯಿತು. ಮುಂದೆ ವಿವಿಧ ಸೌಂದರ್ಯವನ್ನು ಪಡೆದು ಬೆಳೆಯಿತು. ರಾಘವಾಂಕ ಹರಿಹರನಂತಹ ಕ್ರಾಂತಿ ಪುರುಷರು ಉದಯಿಸಿದ ಯುಗವದು. ಕನ್ನಡದ ಛಂದಸ್ಸನ್ನು ಉಳಿಸಿ ಬೆಳೆಸಿದ ಶ್ರೇಯಸ್ಸಾದರೂ ಈ ಯುಗಕ್ಕೇ ಸಲ್ಲಬೇಕು. ಆಧುನಿಕ ಸಾಹಿತ್ಯವಿಮರ್ಶಕರಲ್ಲಿ ಅಗ್ರಗಣ್ಯರಾದ ಶ್ರೀ. ಬಿ. ಎಮ್. ಕಂಠಯ್ಯನವರು ಹೀಗೆ ಹೇಳಿದ್ದಾರೆ.

" ದ್ವಿಪದಿ, ತ್ರಿಪದಿ, ಷಟ್ಪದಿ, ಸಾಂಗತ್ಯ, ಅಕ್ಕರ ಮುಂತಾದ ಅಚ್ಚಗನ್ನಡದ ದ್ರಾವಿಡ ಛಂದಸ್ಸಿಗೆ ಸಲ್ಲಬೇಕಾದ ಸ್ಥಾನವನ್ನು ಗೌರವವನ್ನು ಕೊಟ್ಟವರು ವೀರಶೈವ ಕವಿಗಳು. ಕರ್ನಾಟಕ ಸಾಹಿತ್ಯವನ್ನು ಕನ್ನಡವಾಗಿ, ಸುಲಭವಾಗಿ, ಸಾರ್ವಜನಿಕವಾಗಿ, ಮಾಡಿದ ಕೀರ್ತಿಯು ಬಹುಮಟ್ಟಿಗೆ ವೀರಶೈವರಿಗೆ ಸೇರಿದ್ದು."

ಧಾರ್ಮಿಕ ರಂಗದಂತೆ ಬಸವನು ಸಾಹಿತ್ಯರಂಗದಲ್ಲಿಯೂ ಪುರಾಣ ಕಟ್ಟಳೆಗಳನ್ನೂ ಕಿತ್ತೊಗೆದು ಹೊಸದೊಂದು ಹಾದಿಯನ್ನು ಕೊಟ್ಟನು. ಧಾರ್ಮಿಕ ಕ್ರಾಂತಿಯು ಸಾಹಿತ್ಯದಲ್ಲಿಯೂ ಕ್ರಾಂತಿಯನ್ನುಂಟುಮಾಡಿ ವಚನಸಾಹಿತ್ಯವನ್ನು ಕನ್ನಡಕ್ಕೆ ಕೊಟ್ಟಿದೆ. ಆ ವಚನ ಸಾಹಿತ್ಯದ ವಿಮರ್ಶೆಯೇ ಬೇರೊಂದು ದೊಡ್ಡ ಲೇಖವಾಗಬಹುದಾದ್ದರಿಂದ ಅದನ್ನಿಲ್ಲಿ ವಿಶದವಾಗಿ ಚರ್ಚಿಸಲಾಗುವದಿಲ್ಲ. ಅವುಗಳನ್ನು ಪಂಡಿತರು 'ಕನ್ನಡದ ಉಪನಿತಷ್ತು" ಗಳೆಂದು ಕರೆದಿರುವರು. ಇದರಿಂದ ಅವುಗಳಲ್ಲಡಕವಾಗಿರುವ ತತ್ತ್ವಗಳ ಘನತೆಯು ವಿದಿತವಾಗುತ್ತದೆ. ಇನ್ನು ಅವುಗಳ ಶೈಲಿಯ ವಿಷಯವಾಗಿ ಮೇಲೆ ಪ್ರಸ್ತಾಪಿಸಿದೆ. ಅವುಗಳನ್ನು ರಾಗವಾಗಿ ಹಾಡಲೂ ಬಹುದು. ಅಂತೆಯೇ ಅವುಗಳಿಗೆ *Poetic prose* ಕಾವ್ಯಮಯ ಪದ್ಯವೆಂದು ಹೆಸರು. ಓದುಗರನ್ನು ಪರವಶರನ್ನಾಗಿ ಮಾಡುವ ಆತ್ಮೀಯತೆ ಅವುಗಳಲ್ಲಿದೆ. ಜನಸಾಮಾನ್ಯರಿಗೆ ಒಗ್ಗುವ ಉಕ್ತಿ ಉಪಮೆಗಳೇ ಅಲ್ಲಿವೆ. ಈ ಮಾರ್ಗಕ್ಕೆ ಬಸವನೇ ಆದ್ಯಪ್ರವರ್ತಕನೆಂದ ಮೇಲೆ ಆತನ ವಚನಗಳಲ್ಲಿ ಈ ಎಲ್ಲ ಗುಣಗಳನ್ನು ಕಾಣಬಹುದು ವಿಷಯಪ್ರತಿಪಾದನೆ ಮೋಹಕವಾಗುವಂತೆ ತಿಳಿಯಾದ ರೀತಿ, ಮೊನೆಯಂತಹ ಮಾತು, ಸರ್ವಸಾಮಾನ್ಯವಾದ ಉಪಮೆ, ಇವೆಲ್ಲಕ್ಕು ಹೆಚ್ಚಾಗಿ ವಿನಯಭಂಡಾರಿ ಬಸವನ ಇನಿಮಾತು ಅಯ್ಯಾ, ಅಣ್ಣಾ, ಅಪ್ಪಾ, ಎಂದು ಸಂಬೋಧಿ

ಸುವ ಸೌಮ್ಯ ಆತ್ಮೀಯತೆ. "ಕಿರಿದರೊಳ್ ಪಿರಿದರ್ಥಮಂ" ತೋರುವ ಜಾಣ್ಮೆ. ಸೂಕ್ಷ್ಮವಾದ ನಿರೀಕ್ಷೆ. ನಿರ್ದಾಕ್ಷಿಣ್ಯವಾದ ಪ್ರತಿಪಾದನೆ. ಭಕ್ತಿರಸದ ಹೊನಲು. ಸೌಮ್ಯತೆಯ ಮೂರ್ತಿಯಾದರೂ ಡಂಭವನ್ನು ಕೂರತನವನ್ನು ಹಳಿಯುವಾಗ ಬಸವನು ಉಪಯೋಗಿಸುವ ಕಟಿಣೋಕ್ತಿ. ಜೊತೆಗೆ ಲೋಕಕಲ್ಯಾಣಕಾರಕ ಬುದ್ಧಿಯು. ಬಸವನ ಸೌಹಾರ್ದ ಭಾವ. ನುಣ್ಪಿನ ಶೈಲಿ. ಇವೆಲ್ಲವೂ ಬಸವನ ವಚನಗಳ ವೈಶಿಷ್ಟ್ಯಗಳೇ. ಕನ್ನಡ ಸಾಹಿತ್ಯ ವಿಶಾರದರಾದ ಆರ್. ನರಸಿಂಹಾಚಾರ್ಯರ ಅಭಿಪ್ರಾಯವಿದು. ಈ ವಚನಗಳು ಕನ್ನಡ ಸಾಹಿತ್ಯದಲ್ಲಿ ಪೂಜ್ಯಸ್ಥಾನವನ್ನು ಪಡೆಯಲು ಅರ್ಹವಾಗಿವೆ. ಇವು ಗೂಢವಾದ ವೇದಾಂತ ವಿಷಯಗಳನ್ನು ಸುಲಭವಾದ ಮಾತುಗಳಿಂದ ಬಿಗಿಯಾದ ಶೈಲಿಯಲ್ಲಿ ಮನಮುಟ್ಟುವಂತೆ ಬೋಧಿಸುತ್ತವೆ. ಇವನ್ನು ಕನ್ನಡ ಉಪನಿಷತ್ತುಗಳೆಂದು ಕರೆಯಬಹುದು.

ಇನ್ನು ಈ ಬಸವ ಯುಗದ ಪ್ರಭಾವವನ್ನು ವರ್ಣಿಸಿ ಡಾಕ್ಟರ ಫ್ಲೀಟ (*Fleet*) ರವರು "ಉತ್ತರ ದಿಕ್ಕಿನಿಂದ ಅಡಿಗಡಿಗೆ ಆಕ್ರಮಣ ಮಾಡುತ್ತಿದ್ದ ಮಹಾರಾಠರ ಆವಾಂತರದಲ್ಲಿ ಇತ್ತೀಚಿಗೆ ಅಂದವಾದ ಕನ್ನಡ ಭಾಷೆಯನ್ನು ಉಳಿಸಿದ ಕೀರ್ತಿ ಬಹುಮಟ್ಟಿಗೆ ವೀರಶೈವರಿಗೆ ಸಲ್ಲತಕ್ಕುದಾಗಿದೆ." ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆದ *E P. Rice* ರವರು ವಚನ ಸಾಹಿತ್ಯದ ವಿಷಯವಾಗಿ ಹೇಳುವಾಗ ಇವುಗಳನ್ನು ಇಂಗ್ಲಂಡದಲ್ಲಿಯ ೧೪ ನೇ ಶತಮಾನದ ವಾಯ ಕ್ಲಿಫ್ ಮುಂತಾದವರ ಬೋಧೆಗಳಿಗೆ ಹೋಲಿಸಿದ್ದಾರೆ. ಇಂತಹ ಅಮೂಲ್ಯವಾದ ಸಾಹಿತ್ಯ ರಚನೆಗೆ ಬಸವನೇ ಆದ್ಯ ಪ್ರವರ್ತಕನೆಂಬುದನ್ನು ಬೇರೆ ಹೇಳುವ ಕಾರಣವಿಲ್ಲ. ಅಂತೆಯೆ ಬಸವನ ಸಾಹಿತ್ಯ ಕ್ಷೇತ್ರದ ವಿಷಯವಾಗಿ ಕೊಂಚ ವಿಶದವಾಗಿ ಬರೆಯಬೇಕಾಯಿತು.

ಬಸವನ ವಿವಿಧ ಕಾರ್ಯರಂಗಗಳಲ್ಲಿಯ ಮಹತ್ಕೃತಿಗಳನ್ನು ಸಂಕ್ಷಿಪ್ತವಾಗಿಯಾದರೂ ವಿವರಿಸುವದಾಯಿತು. ಪ್ರತಿಯೊಂದು ಕಾರ್ಯಕ್ಷೇತ್ರವನ್ನು ಬೇರೆ ಬೇರೆಯಾಗಿ ತೆಗೆದುಕೊಂಡು ಒಂದೊಂದು ಲೇಖವನ್ನು ಬರೆಯುವದರ ಅವಶ್ಯಕತೆ ಇರುವದಾದರೂ ಅವೆಲ್ಲವುಗಳನ್ನು ಸಂಕ್ಷಿಪ್ತವಾಗಿ ನಿರುಪಿಸವದಾದರೂ ಒಂದು ದೃಷ್ಟಿಯಿಂದ ಯೋಗ್ಯವಾದುದರಿಂದ ಇಲ್ಲಿ ಹಾಗೆ ಮಾಡಲಾಗಿದೆ. ಬಸವನ ತತ್ತ್ವಬೋಧೆಯು

ಪರಿಚಯವನ್ನು ಹಿಂದಿನ ಲೇಖದಲ್ಲಿ ಮಾಡಿದ ಮೇಲೆ ಆತನ ಚರಿತ್ರವನ್ನು ಕಂಡುಕೊಳ್ಳಬೇಕಾಗಿದೆ. ಈ ಎರಡು ಬರಹಗಳಿಂದ ನಾವು ಬಸವನ ಮೂರ್ತಿ ಮಹತ್ವವನ್ನು ಆತನ ಘನತೆಯನ್ನು ಆತನ ಪ್ರಭಾವವನ್ನು ನಾವು ಕಂಡುಕೊಳ್ಳಬಹುದು. ಮಹದ್ವಿಭೂತಿಯಾದರೂ ಕಾರಣಾಂತರಗಳಿಂದ ಬಸವನ ಹೆಸರು ಕರ್ನಾಟಕದಲ್ಲಿಯಷ್ಟೇ ಉಳಿದಿದೆ. ಆತನ ಆಳವಾದ ತತ್ತ್ವಗಳನ್ನು ಹಾಗೂ ಮಹತ್ಕಾರ್ಯಗಳನ್ನು ನೆನೆದುಕೊಂಡರೆ ಆತನು ಅಂತರರಾಷ್ಟ್ರೀಯ (*Inter national*) ವ್ಯಕ್ತಿಯಾಗಬೇಕಾಗಿತ್ತು. ಆಗಿಲ್ಲ. ಆದರೂ ಇಂದು ಅನೇಕ ಕ್ಷೇತ್ರಗಳಲ್ಲಿ ನಾವು ಬಸವನನ್ನು ಅನುಸರಿಸಹತ್ತಿದ್ದೇವೆ. ೮೦೦ ವರ್ಷಗಳ ದಟ್ಟ ವಾತಾವರಣವನ್ನು ಭೇದಿಸಿ ಇಂದಿಗೂ ಸುಪ್ರಕಾಶಿತವಾಗಿ ಬಸವ ಜ್ಯೋತಿಯು ಬೆಳಗುತ್ತಲಿದೆ.



# ವೀರಶೈವ ಕ್ಷೇತ್ರಗಳು.

(ಹಾವಿನಹಾಳು, ಮಂಗಳವಾಡ, ಮಾಸನೂರು, ಸಿದ್ಧನಕೆರೆ, ಸೊನ್ನಲಿಗೆ, ಹಿಪ್ಪರಿಗೆ, ಎಳಮೇಲಿ, ಬಾಗೇವಾಡಿ, ಇಂಗಳೇಶ್ವರ, ಸಂಗಮ ಈ ಕ್ಷೇತ್ರಗಳ ವರ್ಣನೆ.)

ಲೇಖಕ:— ಬಿ. ಶಿವಮೂರ್ತಿಶಾಸ್ತ್ರಿ, ಕೀರ್ತನ ಕೇಸರಿ, ಕವಿರತ್ನ, ಕೀರ್ತನ ವಿಚಕ್ಷಣ, ಶಿವಕೀರ್ತನ ಕವಿರಾಜ, ಕೀರ್ತನ ಶಿರೋಮಣಿ ಹುಲ್ಕುಂಟೆಮಠ, ತುಮಕೂರು.

ವೀರಶೈವ ಮತಗ್ರಂಥಗಳಲ್ಲಿ "ಓತು ತೀರ್ಥ ಕ್ಷೇತ್ರಂಗಳಿಗೆರಗ ಿಪ್ಪುದು" ಎಂದು ಹೇಳಿದೆ. ವೀರಶೈವರಾದವರು ಸ್ಥಾವರಲಿಂಗಗಳಿಗೆರಗಬಾರದೆಂದೂ ಅನ್ಯದೇವತೋಪಾಸನೆಯೂ ಬಹುದೇವತೋಪಾಸನೆಯೂ ನಿಷಿದ್ಧವೆಂದೂ ಇಷ್ಟಲಿಂಗ ಹೊರತು ಇನ್ನಾವ ದೇವರನ್ನೂ ಉಪಾಸಿಸಬಾರದೆಂದೂ ನಮ್ಮ ಶರಣರೂ ಕವಿಗಳೂ ಸಾರಿದ್ದಾರೆ.

ಹಾಗಾದರೆ "ವೀರಶೈವ ಕ್ಷೇತ್ರಗಳು" ಎಂಬ ತಲೆಬರಹದಿಂದ ಈ ಲೇಖನವನ್ನು ಬರೆವುದೇಕೆಂದು ವಾಚಕರು ಸಂಶಯಗೊಳ್ಳಬಹುದು. ವೀರಶೈವ ಸಿದ್ಧಾಂತ ದೃಷ್ಟಿಯಿಂದ ಸ್ಥಾವರಾದ್ಯನ್ಯಲಿಂಗ ವಿರಾಜಮಾನವಾದ ಕ್ಷೇತ್ರಗಳು ಲಿಂಗಾಂಗಿಗಳಿಗೆ ಮಾನ್ಯವಲ್ಲವಾದರೂ, ವೀರಶೈವ ಆಚಾರ್ಯರು, ಶರಣರು, ಕವಿಗಳು, ಯೋಗಿಗಳು, ರಾಜರು, ವಿಭೂತಿಗಳು ಮೊದಲಾದವರ ಚರಿತ್ರೆಗೆ ಸಂಬಂಧಪಟ್ಟ ಸ್ಥಳಗಳೇ ನಿಜವಾಗಿಯೂ "ವೀರಶೈವ ಕ್ಷೇತ್ರಗಳು" ಎಂಬ ಹೆಸರಿಗೆ ಪಾತ್ರವಾಗುತ್ತವೆ.

ಕೊಲ್ಲಿಪಾಕಿ, ಕಲ್ಯಾಣ, ಬಸವನ ಬಾಗೇವಾಡಿ, ಕಪ್ಪಡಿ ಸಂಗಮ, ಬಳ್ಳಿಗಾಮಿ, ಬನವಾಸಿ, ಉಳಿವಿಯ ಮಹಾಮನೆ, ಶ್ರೀಶೈಲ, ಹಂಪೆ, ಕಾಶಿ, ಕೇದಾರ, ಅವಂತೆ, ಎಡೆಯೂರು, ಕಗ್ಗೆರೆ, ಸೊನ್ನಲಿಗೆ, ಹಿಪ್ಪರಿಗೆ, ಉಡುತಡಿ, ಅನಿಮಿಷಾರ್ಯನಕೊಪ್ಪಲು, ಕೆಳದಿ, ಸ್ವಾದಿ, ಬಿಳಗಿ, ಇಕ್ಕೇರಿ, ಮಡಕೇರಿ, ಬಿದರೂರು, ದನುಗೂರು, ಶಂಭುಲಿಂಗನಬೆಟ್ಟ, ಹಾವಿನಹಾಳು, ಮಾಸನೂರು, ಸಿದ್ಧನಕೆರೆ, ಮಂಗಳವಾಡ, ಕಂಚಿ, ಕುಂಭಕೋಣ, ಅಥಣಿ, ಶಿವಯೋಗಮಂದಿರ, ರಂಭಾಪುರಿ, ಮುದನೂರು, ಸೋಸಲೆ, ಸುತ್ತೂರು, ಗೂಳೂರು, ಗುಮ್ಮಳಾಪುರ, ಯಳಮೇಲಿ, (ಆಲಮೇಲ) ಮಲ್ಲನಮೂಲೆ, ಸಿದ್ಧಗಂಗೆ, ಶಿವಗಂಗೆ, ಅಮರಗೊಂಡ, (ಗುಬ್ಬಿ) ಕುಪ್ಪೂರುಗದ್ದಿಗೆ, ಸಿದ್ಧರಬೆಟ್ಟ, ಸಿದ್ಧಗಿರಿ, ರೇವಣ

ಸಿದ್ಧನ ಗುಡ್ಡ, ರೇಣುಕಗಿರಿ ಅಥವಾ ರೇವಣಸಿದ್ಧನ ಬೆಟ್ಟ, ಚಿನ್ಮೂಲಾದ್ರಿ, (ಚಿತ್ರದುರ್ಗ) ಭ್ರೂಲತಾಪುರಿ, (ಹುಬ್ಬಳ್ಳಿ) ಹೂಲಿ, ನಿಡಸೋಸಿ, ಅರಭಾವಿ, ಅಂಕಲಗಿ, ಎಡೂರ, (ಕೃಷ್ಣಾ ನದೀ ತೀರ) ರೇಣಾವಿ, ಹಾಗಲವಾಡಿ ಇವೇ ಮೊದಲಾದ ಸ್ಥಳಗಳು ನಿಜವಾಗಿಯೂ "ವೀರಶೈವ ಕ್ಷೇತ್ರಗಳು" ಎಂಬ ಹೆಸರಿಗೆ ಪಾತ್ರವಾಗುತ್ತವೆ. ಈ ಸ್ಥಳಗಳನ್ನೆಲ್ಲಾ ಸಂಚರಿಸಿ ಅಲ್ಲಿನ ಐತಿಹಾಸವನ್ನು ಇದ್ದಕ್ಕಿದ್ದಂತೆಯೇ ಪ್ರಕಟಿಸುವುದು ಪ್ರತಿಯೊಬ್ಬ ವೀರಶೈವ ಪಂಡಿತನ ಕಾರ್ಯವಾಗಿದೆ.

ವೀರಶೈವ ಮತತತ್ವಗಳ ಬಗ್ಗೆ ಸ್ವ ಮತೀಯರಲ್ಲಿಯೂ ಅನ್ಯ ಮತೀಯರಲ್ಲಿಯೂ ಅಗಾಧವಾದ ಅಜ್ಞಾನವು ಹಬ್ಬಿದೆ. ಇದಕ್ಕೆ ಮುಖ್ಯಕಾರಣವೇನಂದರೆ ವೀರಶೈವ ಮತತತ್ವಗಳು, ವೀರಶೈವ ಸಂಸ್ಕೃತಿ, ವೀರಶೈವ ಇತಿಹಾಸ, ಇವುಗಳ ಬಗ್ಗೆ ನಿಶ್ಚಿತವಾದ ತಿಳವಳಿಕೆಯಿಲ್ಲದಿರುವುದೇ. ನಿಜವಾದ ವೀರಶೈವ ತತ್ವಗಳು ಜನಸಾಮಾನ್ಯರಲ್ಲಿ ಪ್ರಚಾರವಾದರೆ ಅನೇಕರಲ್ಲಿ ಈಗಿರುವ ಪಕ್ಷಾಂಧತೆಯೂ ಅವಿಚಾರಕರ್ಮಗಳೂ ಓಡಿಹೋಗುವದರಲ್ಲಿ ಅನುಮಾನವಿಲ್ಲ.

ವೀರಶೈವ ಮತದ ಹಿತಚಿಂತಕರು ಈಗ ಮುಖ್ಯವಾಗಿ ಕೈಗೊಳ್ಳಬೇಕಾದ ಕಾರ್ಯಗಳೆಂದರೆ:—

(೧) ವೀರಶೈವ ಕವಿಗಳ ಮತ್ತು ಶರಣರ ಗ್ರಂಥಗಳು (ಕನ್ನಡ ಸಂಸ್ಕೃತ, ತಮಿಳು, ತೆಲಗು ಮರಾಠಿ ಮೊದಲಾದ ಯಾವ ಭಾಷೆಯಲ್ಲಾದರೂ ಇರಲಿ) ಅವನ್ನು ಶುದ್ಧವಾಗಿ ಮುದ್ರಿಸಿ ಪ್ರಕಟಿಸುವದು.

(೨) ವೀರಶೈವ ತತ್ವಗಳು ವಿಭೂತಿಗಳ ಚರಿತ್ರೆಗಳು ಮೊದಲಾದವುಗಳನ್ನು ಚಿಕ್ಕ ದೊಡ್ಡ ಪುಸ್ತಕಗಳ ಮೂಲಕ ದೇಶಮಧ್ಯ ಹರಡುವದು.

(೩) ವೀರಶೈವ ಕ್ಷೇತ್ರಗಳ, ಮಠಗಳ, ರಾಜಧಾನಿಗಳ ಪ್ರಾಚೀನ ಚರಿತ್ರೆಯನ್ನು ಶೋಧಿಸಿ ಇದ್ದಕ್ಕಿದ್ದಂತೆಯೇ ಸಾಧ್ಯವಾದರೆ ಸಚಿತ್ರವಾಗಿ ಪ್ರಕಟಿಸುವದು.

(೪) ವೀರಶೈವ ವಿದ್ವಾಂಸರಲ್ಲಿ ವಾದಗ್ರಸ್ತವಾಗಿರುವ ತತ್ವಗಳ ಬಗ್ಗೆ ಉಭಯಪಕ್ಷದವರೂ ಒಂದೆಡೆ ಕೂತು ಪರಸ್ಪರ ವಿಚಾರ ವಿನಿಮಯ ಮಾಡಿ ಭಿನ್ನತತ್ವಗಳನ್ನು ಏಕೀಕರಿಸಿಕೊಂಡು ಒಂದು ತೀರ್ಮಾ

ನಕ್ಕೆ ಬಂದು ಆ ಉಭಯ ಸಮ್ಮತವಾದ ವಿಚಾರವನ್ನೇ ಲೋಕದಲ್ಲಿ ಪ್ರಕಟಿಸುವದು.

ಇಷ್ಟು ಕಾರ್ಯವನ್ನು ವೀರಶೈವ ಸಮಾಜ ಪ್ರಮುಖರಾದವರು ಕೈಗೊಂಡು ನಿರ್ವಹಿಸದ ಹೊರತು ಈ ಸಮಾಜಕ್ಕೆ ಗೌರವವೂ ಶಾಂತಿ ಸಮಾಧಾನಗಳೂ ಕೀರ್ತಿಯೂ ಪ್ರಾಪ್ತವಾಗಲಾರದು.

ನಾನು ಕೈಕೊಂಡ ಮುಖ್ಯ ವಿಚಾರವನ್ನು ಬಿಟ್ಟು ಕೊಂಚ ವಿಷಯಾಂತರ ಮಾಡಿದುದಕ್ಕೆ ವಾಚಕರ ಕ್ಷಮೆಯನ್ನು ಬೇಡಿ ಪ್ರಕೃತ ವಿಚಾರದ ಕಡೆಗೆ ಹೊರಳುವೆನು.

ನಾನು ನನ್ನ ಕೀರ್ತನ ಕಾರ್ಯದ ನಿಮಿತ್ತವಾಗಿ ಈಗ್ಗೆ ಹತ್ತು ವರ್ಷಗಳಿಂದ ಕರ್ನಾಟಕದ ಅನೇಕ ಭಾಗಗಳಲ್ಲಿ ಸಂಚರಿಸುತ್ತಿದ್ದೆನಷ್ಟೆ? ಹೀಗೆ ನನ್ನ ಸಂಚಾರದಲ್ಲಿ ಅನೇಕ ವೀರಶೈವ ಕ್ಷೇತ್ರಗಳನ್ನು ಅನಾಯಾಸವಾಗಿ ನೋಡುವ ಪ್ರಸಂಗ ಬರುತ್ತದೆ. ಈ ಸ್ಥಳಗಳ ವಿಷಯವಾಗಿ, ಅಲ್ಲಿನ ಐತಿಹಾಸಿಕ ವಿದ್ಯಮಾನವನ್ನು ಕುರಿತು ಶಿವಾನುಭವಕ್ಕೆ ಅವಶ್ಯವಾಗಿ ಲೇಖನಗಳನ್ನು ಬರೆಯಬೇಕೆಂದು ಘನವಂತರೂ, ನಿಷ್ಪಕ್ಷಪಾತಿಗಳೂ, ವೀರಶೈವ ಸಮಾಜದ ನಿಜವಾದ ಹಿತಚಿಂತಕರೂ, ಶಿವಶರಣರಂತೆ ಸತ್ಯಪೂರಿತವಾದ ನಡೆನುಡಿಯುಳ್ಳವರೂ, ವಚನಶಾಸ್ತ್ರ ಪ್ರಚಾರಕರೂ, ಕನ್ನಡ ದೇಶಭಾಷಾಭಿಮಾನಿಗಳೂ ಆದ ರಾವಸಾಹೇಬ ಪಿ. ಜಿ. ಹಳಕಟ್ಟಿ ವಕೀಲರು ನನಗೆ ಅನೇಕ ವರ್ಷಗಳಿಂದ ಪತ್ರ ಮುಖದಿಂದಲೂ, ಪ್ರತ್ಯಕ್ಷ ಕಂಡಾಗಲೂ ತಿಳಿಸುತ್ತಿದ್ದಾರೆ. ಆ ಮಹನೀಯರ ಅಪ್ಪಣೆಯಂತೆಯೇ ನಾನು ಈ ಹಿಂದೆ ಬೀಳಗಿ, ಕೆಳದಿ, ಶ್ರೀಶೈಲ, ಕಲ್ಯಾಣ, ಸಿದ್ಧಗಿರಿ, ರೇವಣಸಿದ್ಧನ ಗುಡ್ಡ ಮೊದಲಾದ ವೀರಶೈವ ಕ್ಷೇತ್ರಗಳ ಬಗ್ಗೆ ಶಿವಾನುಭವದಲ್ಲಿ ಲೇಖನಗಳನ್ನು ಬರೆದು ಪ್ರಕಟಿಸಿದ್ದೇನೆ. ಇದೇ ಪ್ರಕಾರ ವೀರಶೈವ ಸಮಾಜಕ್ಕೆ ಅಲಂಕಾರಭೂತರಾದ ಶ್ರೀಮಾನ್ ವಿ. ಬಿ. ಹಾಲಭಾವಿ ಸಬ್‌ಜಡ್ಜರೂ, ವೇ|| ಪಂಡಿತ ಚಂದ್ರಶೇಖರ ಶಾಸ್ತ್ರಿ "ವ್ಯಾಕರಣತೀರ್ಥ" ಇವರೂ, ಸರ್ವ ದರ್ಶನತೀರ್ಥ ಆಸ್ಥಾನ ವಿದ್ವಾನ್ ವೇ|| ವೈ. ನಾಗೇಶ ಶಾಸ್ತ್ರಿಗಳೂ, ಗೆಳೆಯರ ಗುಂಪಿನ ಶ್ರೀ. ಚನಮಲ್ಲಪ್ಪನವರೂ ಹಾರೋಹಳ್ಳಿ ಶ್ರೀ. ಸಿದ್ಧಲಿಂಗಯ್ಯನವರೂ ಅನೇಕ ಸಂಶೋಧಕ ಲೇಖಗಳನ್ನು ಪ್ರಕಟಿಸಿದ್ದಾರೆ. ನಿಷ್ಪಕ್ಷಪಾತಿಗಳಾದ ಡಾ|| ನಂದೀಮಠ *M. A. P. H. D.* ಶ್ರೀಮಾನ್ ಶಿವಸುತ, ವೇದತೀರ್ಥ

ವೇ॥ ಪಂಡಿತ ವೀರಭದ್ರಶರ್ಮರು ಮೊದಲಾದ ವಿದ್ವಾಂಸರ ಲೇಖನಗಳಾದರೂ ಸಂಶೋಧಕರಿಗೆ ಮಾರ್ಗದರ್ಶಕವಾಗಿವೆ. ಅಸದೃಶ ಪಂಡಿತರಾದ ಶ್ರೀಶಂಭುಲಿಂಗ ಶಿವಾಚಾರ್ಯರು ಹಾಗೂ ಶ್ರೀ. ಪಾವಟೆ ಸಿದ್ಧರಾಮಪ್ಪನವರು ಶ್ರೀ. ಬಿಳೀಅಂಗಡಿ ವಕೀಲರು ಶ್ರೀ. ಜೀರಿಗೆ ಬಸವಲಿಂಗಪ್ಪನವರು ಶ್ರೀ. ಯಗಟಿ ವಕೀಲರು ಇತ್ಯಾದಿಯವರ ಲೇಖನಗಳೂ ವಿಚಾರಕ್ರಾಂತಿದಾಯಕಗಳಾಗಿವೆ.

ನಾನು ಉತ್ತರ ಕರ್ನಾಟಕದ ಗಡಿನಾಡಿನಲ್ಲಿ ಸಂಚರಿಸುವಾಗ ಕಂಡ ಕೆಲವು ಮಹತ್ವದ ವೀರಶೈವ ಕ್ಷೇತ್ರಗಳ ವಿಚಾರವನ್ನು ಶಿವಾನುಭವ ವಾಚಕರ ಸಲುವಾಗಿ ಇಲ್ಲಿ ಬರೆದಿದ್ದೇನೆ

## ಹಾವಿನಹಾಳು ಮತ್ತು ಕಲ್ಲಯ್ಯ.

ಬಸವ ಪುರಾಣದ ಪರಿಚಯವಿರುವವರಿಗೆ ಹಾವಿನಹಾಳ ಕಲ್ಲಯ್ಯನ ವಿಚಾರ ಗೊತ್ತಿರುತ್ತದೆ. ಬಸವೇಶ್ವರನ ಕಾಲದಲ್ಲಿ "ಹಾವಿನಹಾಳ ಕಲ್ಲಯ್ಯ"ನು ಒಬ್ಬ ಮಹಾ ವಿಭೂತಿಯಾಗಿ ಹೋಗಿದ್ದಾನೆ. ಕನ್ನಡ ಸಂಸ್ಕೃತ ತೆಲಗು ಬಸವ ಪುರಾಣಗಳಲ್ಲೆಲ್ಲಾ ಈತನ ವಿಚಾರ ಬಂದಿದೆ. ಈತನು ಮಹಾ ಶಿವಭಕ್ತನಿದ್ದನೆಂತಲೂ ಹಾವಿನಹಾಳಿನ ಬ್ರಾಹ್ಮಣರ ಕೂಡ ವಾದ ಮಾಡಿ ತನ್ನ ಮನೆಯ ನಾಯಿಗಳ ಮುಖದಿಂದ ವೇದವನ್ನು ಹೇಳಿಸಿದನೆಂದೂ ಬಸವ ಪುರಾಣಗಳಿಂದ ತಿಳಿದು ಬರುತ್ತದೆ. ರಾಘವಾಂಕನ ಸಿದ್ಧರಾಮ ಪುರಾಣದ ಕಡೆಯ ಭಾಗದಿಂದ ಈತನು ಕಡೆಗೆ ಸಿದ್ಧರಾಮ ಶಿವಯೋಗಿಯಿಂದ ಷಟ್ಸ್ಥಲೋಪದೇಶಹೊಂದಿದನೆಂದೂ ,ಸಿದ್ಧರಾಮನು ಅಂತ್ಯದಲ್ಲಿ ಈತನಿಗೆ ಷಟ್ಸ್ಥಲ ಪಟ್ಟವನ್ನು ಕಟ್ಟಿ ತಾನು ಸಮಾಧಿಸ್ಥನಾದನೆಂದೂ ತಿಳಿದು ಬರುತ್ತದೆ.

ಕವಿಚಕ್ರವರ್ತಿ ಹರಿಹರಾಚಾರ್ಯರ ರಘಟಾಪ್ರಬಂಧದಲ್ಲಿ ನೂತನ ಶಿವಶಿರಣರ ಮಾಲೆಯಲ್ಲಿ ಈ ಹಾವಿನಹಾಳ ಕಲ್ಲಯ್ಯನೊಬ್ಬನಾಗಿ ಪರಿಗಣಿತನಾಗಿದ್ದಾನೆ- ಮಹಾಕವಿ ಹರಿಹರದೇವನು "ಹಾವಿನಹಾಳ ಕಲ್ಲಯ್ಯಗಳ ಮಹಾತ್ಮೆ" ಎಂಬ ಒಂದು ಗ್ರಂಥವನ್ನೇ ಬರೆದಿದ್ದಾನೆ. ಹರಿಹರಕೃತ ರೇವಣಸಿದ್ಧ ರಗಳೆಯಿಂದ ತಿಳಿದುಬರುವದೇನಂದರೆ:—

ಈತನು ಮೊದಲು ಶಿವಭಕ್ತನಾಗಿದ್ದನು. ರೇವಣಸಿದ್ಧನು ತನ್ನ ಮಗನಾದ ರುದ್ರಮುನಿ ಶಿವಾಚಾರ್ಯ ಸಹಿತವಾಗಿ ತನ್ನೂರಿಗೆ (ಹಾವಿನ

ಹಾಳಿಗೆ) ಬಂದಾಗ ಆ ಪಿತಾಪುತ್ರರ ಸಂದರ್ಶನ ಮಾಡಿ ವೀರಶೈವ ಮತದ ಘನತೆಯನ್ನು ತಿಳಿದು ಶ್ರೀಗ.ರು ರೇವಣಸಿದ್ಧನ ಅಪ್ಪಣೆಯಂತೆ ಅವನ ಮಗನಾದ ರುದ್ರಮುನಿಯಿಂದ ಶಿವದೀಕ್ಷೆಯನ್ನು ಹೊಂದಿ ಲಿಂಗ ಧಾರಿಯಾದನು. ಇದರಿಂದಲೇ ಮುಂದೆ ಇವನು ಶಿವಯೋಗಿ ಸಿದ್ಧರಾಮನ ಶಿಷ್ಯನಾಗಲು ಸಮರ್ಥನಾದನು. ಹಾವಿನಹಾಳ ಕಲ್ಲಯ್ಯನು ಈ ಪ್ರಕಾರ ಮೊದಲು ಶೈವನಾಗಿದ್ದವನು ಅನಂತರ ವೀರಶೈವನಾಗಿ ಕಡೆಗೆ ಶಿವಯೋಗಿಯಾದನೆಂದು ತಿಳಿದು ಬರುತ್ತದೆ. ಈತನ ಹೆಸರನ್ನು ಸಿದ್ಧೇಶ್ವರ ಪುರಾಣ, ಭೈರವೇಶ್ವರ ಕಾವ್ಯ, ವೃಷಭೇಂದ್ರ ವಿಜಯ ಮೊದಲಾದ ಇತ್ತೀಚಿನ ಕಾವ್ಯಗಳಲ್ಲಿಯೂ ಕಾಣಬಹುದಾಗಿದೆ.

ಐತಿಹಾಸಿಕ ಸಂಗತಿಃ— ಬಸವೇಶ್ವರನ ಕಾಲದಲ್ಲಿ ಕನ್ನಡನಾಡಿನಲ್ಲಿ ಕಾಳಾಮುಖ ಲಕುಲೀಶ ಶೈವ ಸನ್ಯಾಸಿ ಮೊದಲಾದ ಮತೀಯರು ಬಹಳವಾಗಿ ಪ್ರಬಲಿಸಿದ್ದರು. ಚನ್ನಬಸವೇಶನ ವಚನಗಳಲ್ಲಿಯೂ ಈ ಹೆಸರುಗಳು ಬಂದಿವೆ. ಕಾಳಾಮುಖ ಲಕುಲೀಶರು ಕೇವಲ ತಾಂತ್ರಿಕರಾಗಿದ್ದು ವೇದವಿರೋಧಿಗಳಾಗಿದ್ದರೆಂದು ತಿಳಿದುಬಂದಿದೆ. ಕಲ್ಲಯ್ಯನು ತನ್ನ ಮನೆಯ ನಾಯಿಗಳಿಂದ ವೇದಗಳನ್ನು ಹೇಳಿಸಿದ ಕಥೆಯು ಈ ವಾದವನ್ನು ಸಮರ್ಥಿಸುತ್ತದೆ. ಅಲ್ಲದೆ ಬಸವೇಶನು ಕೈಗೊಂಡ ವೀರಶೈವ ಮತ ಪ್ರಚಾರದ ಪ್ರವಾಹದಲ್ಲಿ ಈ ಕಾಳಾಮುಖ ಲಕುಲೀಶ ಶೈವ ಸನ್ಯಾಸಿಗಳ ಮತೀಯರಾದನೇಕರು ವೀರಶೈವರಾದರೆಂದು ತೋರುತ್ತದ.

ಉತ್ತರ ಕರ್ನಾಟಕದಲ್ಲಿ ಈಗಲೂ ಗೊರವರೆಂಬ ಒಂದು ಜಾತಿಯು ಶಿವಭಕ್ತರಿದ್ದಾರೆ. ± ದಕ್ಷಿಣ ಕರ್ನಾಟಕದ ಜೀರರೂ ಈ ಜಾತಿಯವರೆಂದೇ ತೋರುತ್ತದೆ. ಇವರು ಪರಮ ಶಿವಭಕ್ತರು ಆಗಿದ್ದಾರೆ. ವೀರಶೈವ ಗುರುಪುಂಗವನಾದ ರೇವಣಸಿದ್ಧನ ಸಂಬಂಧವಾದ ಮಾಸನೂರು ದೇವಾಲಯದಲ್ಲಿಯೂ ಮಹಾರಾಷ್ಟ್ರದಲ್ಲಿರುವ ರೇಣಾವಿ ದೇವಾಲಯದಲ್ಲಿಯೂ ಹಾವಿನಹಾಳ ಕಲ್ಲಿನಾಥ ದೇವಾಲಯದಲ್ಲಿಯೂ ಈ ಗೊರವರೇ ಅರ್ಚಕರಾಗಿದ್ದಾರೆ. ಈ ಗೊರವರು ಪ್ರಾಚೀನ ಕಾಳಾಮುಖರ ವಂಶೀಯರಾಗಿರಬಹುದೆಂದು ತೋರುತ್ತದೆ. ಹಾವಿನಹಾಳ ಕಲ್ಲಯ್ಯನು ಮೊದಲು ಕಾಳಾಮು

---

ಟೀಪು:— ± ಈ ಗೊರವರು ೧೨ನೇ ಶತಮಾನದಲ್ಲಿ ಲಿಂಗಧಾರಿಗಳೂ ಆಗಿದ್ದರೆಂದು ಜಯಕರ್ನಾಟಕದ "ಲಿಂಗಿಗಳು" ಎಂಬ ಲೇಖನದಲ್ಲಿ ಶ್ರೀ. ಚನ್ನಮಲ್ಲಪ್ಪನವರು ಹೇಳಿದ್ದಾರೆ.

ಖನಾಗಿದ್ದು ಕಡೆಗೆ ವೀರಶೈವ ಸಿದ್ಧಾಂತಕ್ಕೆ ಮನಸೋತು ವೀರಶೈವ ದೀಕ್ಷೆಯನ್ನು ಪಡಕೊಂಡನೆಂದು ತಿಳಿದುಬರುತ್ತದೆ. ವೀರಶೈವ ಮತ ಪ್ರಚಾರಕಾರ್ಯವನ್ನು ಬಸವೇಶ್ವರನಗಿಂತ ಸುಮಾರು ೫೦ ವರ್ಷ ಹಿರಿಯನಾದ ರೇವಣಸಿದ್ಧನು ಕೈಗೊಂಡಿದ್ದನೆಂಬುದು ಈ ಸಂದರ್ಭದಲ್ಲಿ ನೆನಪಿಡತಕ್ಕ ಸಂಗತಿಯಾಗಿದೆ. ರೇವಣಸಿದ್ಧನಿಗಿಂತಲೂ ೧೦೦ ವರ್ಷ ಹಿಂದಿನವನಾದ ಮುದನೂರು ದೇವರದಾಸಿಮಯ್ಯನೂ ಇವನ ಸಮಕಾಲೀನನಾದ ಶಂಕರದಾಸಿಮಯ್ಯನೂ ವೀರಶೈವ ಮತವನ್ನು ಅನೇಕ ವಿಧದಿಂದ ಪ್ರಚಾರ ಮಾಡಿರುವ ಸಂಗತಿಯನ್ನು ಸಂಶೋಧಕರು ಲಕ್ಷಿಸತಕ್ಕದ್ದಾಗಿದೆ. ರೇವಣಸಿದ್ಧನು ಕಲ್ಯಾಣಕ್ಕೆ ಬಂದಿದ್ದನೆಂಬುನು ತಿಳಿದುಬಂದಿಲ್ಲವಾದರೂ ಬಸವಪುರಾಣದಲ್ಲಿ ಬರುವ ಶಿವಯೋಗಿ ಮಲ್ಲರಸ, ಸಕಲೇಶ ಮಾದರಸ, ಏಕಾಂತದ ರಾಮಯ್ಯ ಇವರು ರೇವಣಸಿದ್ಧನ ಸಮಕಾಲೀನರೆಂದು ತೋರಿಬರುತ್ತದೆ. ಬಸವೇಶ್ವರನಗಿಂತಲೂ ಮೊದಲು ಯಾವನೊಬ್ಬ ವೀರಶೈವನೂ ಇರಲಿಲ್ಲವೆಂದು ವಾದಿಸುವ ವೀರಶೈವ ಲೇಖಕರು ಈ ಸಂಗತಿಗಳನ್ನೆಲ್ಲ ಚನ್ನಾಗಿ ಗಮನಿಸಬೇಕೆಂದು ಕೋರುತ್ತೇನೆ.

ಹಾವಿನಹಾಳ ಕಲ್ಲಯ್ಯನ ಮಹಾತ್ಮ್ಯ ಎಂಬ ಗ್ರಂಥವು ಸ್ವಲ್ಪ ದಿನಗಳೊಳಗಾಗಿ ಶಿವಾನುಭವದಲ್ಲಿ ಪ್ರಕಟವಾಗುವದಿದ್ದು ಅದು ಹೊರಬಿದ್ದ ಮೇಲೆ ಇನ್ನೂ ಈತನ ಬಗ್ಗೆ ಹೆಚ್ಚು ಸಂಗತಿಗಳು ತಿಳಿದುಬಹುದೆಂದು ವಿಶ್ವಾಸವಿದೆ.

ಕ್ಷೇತ್ರಪರಿಚಯಃ— ಹಾವಿನಹಾಳು ಎಂಬ ಗ್ರಾಮವು ಈಗ ಒಂದು ಸಣ್ಣ ಹಳ್ಳಿಯಾಗಿದೆ. ಇದು ಬಿಜಾಪುರಕ್ಕೆ ಉತ್ತರದಿಕ್ಕಿನಲ್ಲಿ ಸುಮಾರು ೪೦ ಮೈಲು ದೂರದಲ್ಲಿದೆ. ಭೀಮಾನದಿಯು ಈ ಗ್ರಾಮಕ್ಕೆ ಮೂರು ಮೈಲಿನಷ್ಟು ದೂರದಲ್ಲಿ ಮಾತ್ರವಿದೆ. ವಿಜಾಪುರದಿಂದ ಚಡಚಣದ ವರೆಗೆ ಮೋಟಾರ ಸರ್ವೀಸ ಇದೆ. ಮುಂದೆ ಎರಡು ಮೈಲು ಅಂತರದಲ್ಲಿಯೇ ಈ ಗ್ರಾಮವಿದೆ. ಈ ಹಳ್ಳಿಯ ಪಕ್ಕದಲ್ಲಿ ಭೀಮಾನದಿಗೆ ಉಪನದಿಯಾದ ಒಂದು ಸಣ್ಣ ಹೊಳೆಯಿದೆ. (ಇದನ್ನು ಬೋರಿ ಹಳ್ಳವೆಂದು ಕರೆವರು.) ಇದರಿಂದ ಊರ ಜನರಿಗೆ ಬಹಳವಾಗಿ ಸ್ನಾನಪಾನಾದಿಗಳಿಗೆ ಅನುಕೂಲವಾಗಿದೆ.

ಕಲ್ಲಿನಾಥ ದೇವಾಲಯಃ— ಇದು ಹೊಳೆಯ ತೀರದಲ್ಲಿದೆ. ದೇವಸ್ಥಾನವು ಚಿಕ್ಕದು. ಗರ್ಭಗುಡಿ ಮತ್ತು ಮುಂಭಾಗದ ಅಂಗಣ

ಸೇರಿ ಒಟ್ಟು ನಾಲ್ಕು ಅಂಗಣದ ದೇವಾಲಯವಾಗಿದೆ. ಈ ದೇವಾಲಯದಲ್ಲಿರುವ ಶಿವಲಿಂಗಕ್ಕೆ ಕಲ್ಲಿನಾಥನೆಂದು ಹೆಸರು. ಈ ದೇವಾಲಯದ ದ್ವಾರವು ಪೂರ್ವಾಭಿಮುಖವಾಗಿದೆ. ಈ ಕಲ್ಲಿನಾಥನ ಸುತ್ತಲೂ ಗರ್ಭಗುಡಿಯಲ್ಲಿ ನಾಲ್ಕು ಮೂಲೆಗೂ ನಾಲ್ಕು ಲಿಂಗಗಳಿವೆ. ಈ ಐದು ಶಿವಲಿಂಗಗಳನ್ನು ಜನರು ಪಂಚಲಿಂಗೇಶ್ವರನೆಂದು ಕರೆಯುತ್ತಾರೆ. ದೇವಾಲಯವು ಜೀರ್ಣವಾಗಿದೆ. ಇದು ಕಲ್ಲಿನಾಥ ಅಂದರೆ ಕಲ್ಲಯ್ಯ ಶರಣನ ಕಾಲದಲ್ಲಿಯೇ ಕಟ್ಟಿದ ಅಥವಾ ಅದಕ್ಕೂ ಮೊದಲಿನ ಕಟ್ಟಡವಾಗಿರಬಹುದೆಂದು ತೋರುತ್ತದೆ. ಈ ದೇವಾಲಯದ ಪೌಳಿಯ ಗೋಡೆಯೂ ಮಹಾದ್ವಾರವೂ ಬೀಳಲಿಕ್ಕೆ ಪ್ರಾರಂಭವಾಗಿದೆ. ಹಾವಿನಹಾಳ ಕಲ್ಲಯ್ಯನು ಈ ದೇವರ ಅರ್ಚಕನಾಗಿದ್ದನೆಂದು ಹೇಳುತ್ತಾರೆ. ಈಗಲೂ ಗೊರವರೇ ಈ ಲಿಂಗದ ಪೂಜಕರಾಗಿದ್ದಾರೆ. ಮಾಸನೂರು ರೇಣಾವಿಗಳಲ್ಲಿರುವ ಅರ್ಚಕರೂ ಈ ಜಾತಿಯವರೇ ಆಗಿದ್ದಾರೆಂದು ಹಿಂದೆಯೇ ಹೇಳಿದೆ.

ಪಟ್ಟದ ಮಠ:— ಕಲ್ಲಿನಾಥ ದೇವಾಲಯದ ಪಕ್ಕದಲ್ಲಿಯೇ ಒಂದು ಪಟ್ಟದ ಸ್ವಾಮಿ ಮಠವಿದೆ. ಅಲ್ಲಿ ಸ್ವಾಮಿಗಳು ಮಾತ್ರ ವಾಸವಾಗಿಲ್ಲ. ಅವರು ಬೇರೆ ಊರಲ್ಲಿದ್ದಾರೆಂದು ತಿಳಿದು ಬಂದಿತು. ಮಠ ಮುಕ್ಕಾಲು ಭಾಗ ಬಿದ್ದು ಹೋಗಿದೆ.

ಚರಮೂರ್ತಿ ಮಠ:— ದೇವಾಲಯದ ಸಮೀಪದಲ್ಲಿಯೇ ಈ ಮಠವಿದೆ. ಮಠದ ಕಟ್ಟಡವು ಹಳ್ಳಿಗೆ ತಕ್ಕಂತಿದೆ. ಇಲ್ಲಿರುವ ಮಠಾಧೀಶ ಚರಮೂರ್ತಿ ಮಹಾಂತ ಸ್ವಾಮಿಗಳು ಮಾತ್ರ ಬಹಳ ಒಳ್ಳೆಯವರಾಗಿದ್ದಾರೆ. ಇಲ್ಲಿಗೆ ಬಂದ ಪರಸ್ಥಳದ ವೀರಶೈವರನ್ನು ಉಪಚರಿಸುತ್ತಾರೆ.

ವಿರಕ್ತಮಠ:— ಇದು ದೇವಾಲಯಕ್ಕೆ ೨೦೦ ಗಜ ದೂರದಲ್ಲಿದೆ. ಮಠ ಶಿಲಾಮಯ ಭವ್ಯವಾಗಿದೆ. ಮುರುಘಾಸಮಯದ ಮಠವೆಂದು ಹೇಳುತ್ತಾರೆ. ಇಲ್ಲಿ ವಿರಕ್ತರ ಗದ್ದಿಗೆಯೊಂದಿದೆ. ಇದನ್ನು ಮಹಿಮಾಸ್ಥಳವೆಂದು ಜನರು ಭಾವಿಸಿದ್ದಾರೆ. ಇಲ್ಲಿ ಈಗ ಕಲ್ಲಪ್ಪ ಮಹಾರಾಜರೆಂಬ ವೀರಶೈವ ಶರಣರೊಬ್ಬರು ಏಕಾಂತವಾಸದಲ್ಲಿದ್ದಾರೆ. ಇವರು ಒಳ್ಳೆ ಶಿವಾನುಭವಿಗಳೆನಿಸಿದ್ದಾರೆ. ಈ ಮಠವಿರುವ ಸ್ಥಳವು ರಮಣೀಯವಾಗಿದೆ. ಪ್ರಶಾಂತವಾಗಿದೆ. ಈ ಮಠವು ಹೊಳೆಯ ಪಕ್ಕದಲ್ಲಿದೆ. ಮಠದ ಮಹಾದ್ವಾರವು ಉತ್ತರಾಭಿಮುಖವಾಗಿದೆ.

ಹಾಳುಬಿದ್ದ ಕೋಟೆ:— ಈ ಹಳ್ಳಿಯಲ್ಲಿ ಹಾಳು ಬಿದ್ದ ಕೋಟೆಯೊಂದಿದೆ. ಇದಾದರೂ ಹೊಳೆಯ ತೀರದಲ್ಲಿದೆ.

ಈ ಊರ ತುಂಬ ವೀರಶೈವ ಸಂಖ್ಯೆಯೇ ಇದೆ. ಜನರು ಬಹಳ ಬಡತನದಲ್ಲಿದ್ದಾರೆ. ಇವರಲ್ಲಿ ಅಂತಃಕಲಹಗಳು ಬಹಳವಾಗಿದ್ದು ದೇವಸ್ಥಾನದ ಮಠಗಳ ಉದ್ಧಾರಕ್ಕೆ ಯಾರೂ ಪ್ರಯತ್ನಿಸುವಂತಿಲ್ಲ. ಈ ಊರಿಗೆ ಕಲ್ಲಿನಾಥನೇ ಮುಖ್ಯ ದೇವರು. ಜನರು ಈ ದೇವರನ್ನು ಕಲ್ಲೇಶ್ವರನೆಂದು ಕರೆಯುತ್ತಾರೆ.

ವಿಶೇಷ ವಿಚಾರ:— ಹಾವಿನಹಾಳ ಕಲ್ಲಯ್ಯನು ಮಹಿಮಾಶಾಲಿಯೇ ಅಲ್ಲದೆ ವಚನಕಾರನಾಗಿದ್ದಾನೆ. ಇವನ ವಚನಗಳ ಮುದ್ರಿಕೆ "ಮಹಾಲಿಂಗಕಲ್ಲೇಶ್ವರಾ" ಎಂದಿದೆ. ರಾವಸಾಹೇಬ ಹಳಕಟ್ಟಿ ವಕೀಲರು ಪ್ರಕಟಿಸಿರುವ ವಚನಶಾಸ್ತ್ರಸಾರದಲ್ಲಿ ಈತನ ವಚನಗಳನ್ನು ವಾಚಕರು ಓದಬಹುದು. ಕನ್ನಡ ಕವಿಚರಿತ್ರೆಯ ಪ್ರಥಮ ಸಂಪುಟದಲ್ಲಿ ಈತನ ವಿಷಯವನ್ನು ಕುರಿತು ಮಹಾ ಮಹೋಪಾಧ್ಯಾಯ, ಪ್ರಾಕ್ತನವಿಮರ್ಶ ವಿಚಕ್ಷಣ, ರಾವಬಹದ್ದೂರ ಆರ್ ನರಸಿಂಹಾಚಾರ್ಯ ಎಂ. ಎ. ಅವರು ಹೀಗೆ ಬರೆದಿದ್ದಾರೆ. "ಹಾವಿನಹಾಳ ಕಲ್ಲಯ್ಯ (ಸು. ೧೧೫೦) ಈತನು ತನ್ನನ್ನು ಕಚ್ಚಿ ಸತ್ತ ಹಾವನ್ನು ಬದುಕಿಸಿದನು. ನಾಯಿಯಿಂದ ವೇದವನ್ನು ಹೇಳಿಸಿದನು. ಇವನ ವಚನಗಳ ಸಂಖ್ಯೆ ೫೮ ಇವುಗಳಲ್ಲಿ ಮಹಾಲಿಂಗ ಕಲ್ಲೇಶ್ವರ ಎಂಬ ಅಂಕಿತವಿದೆ. ಕೆಲವು ವಚನಗಳನ್ನು ಉದಾಹರಿಸುತ್ತೇವೆ" ಎಂದು ಕೆಲವು ವಚನಗಳನ್ನು ಉದಾಹರಿಸಿದ್ದಾರೆ. ರಾವಸಾಹೇಬ ಹಳಕಟ್ಟಿ ವಕೀಲರ ಸಂಗ್ರಹದಲ್ಲಿ ಇವನ ೬೦ ವಚನಗಳು ಸಿಕ್ಕಿವೆ.

ಹಾವಿನಹಾಳ ಕಲ್ಲಯ್ಯನು ಬಸವೇಶನ ಸಮಕಾಲೀನನಾದರೂ ಕಲ್ಯಾಣಕ್ಕೆ ಬಂದು ಅನುಭವಮಂಟಪವನ್ನು ಕೂಡಿಕೊಂಡಂತೆ ಕಾಣುವುದಿಲ್ಲ. ಆದರೂ ಬಸವೇಶನ ಕೀರ್ತಿಯನ್ನು ಕಲ್ಲಯ್ಯನೂ ಕಲ್ಲಯ್ಯನ ಕೀರ್ತಿಯನ್ನು ಬಸವೇಶನೂ ಕೇಳಿದ್ದನೆಂದು ಊಹಿಸಬಹುದು. ಇವನ ವಚನಗಳ ಮೇಲಿಂದಲೂ, ಇವನು ಬ್ರಾಹ್ಮಣರ ಕೂಡೆ ವಾದಮಾಡಿದ ಪ್ರಸಂಗವನ್ನು ಆಲೋಚಿಸುವುದರಿಂದಲೂ ಇವನು ಒಳ್ಳೇ ವಿದ್ವಾಂಸನಾಗಿದ್ದನೆಂದು ತೋರುತ್ತದೆ. ಸತ್ತ ಹಾವನ್ನು ಬದುಕಿಸಿದನಾದ್ದರಿಂದ ಇವನು ಪವಾಡಪುರುಷನಾಗಿಯೂ ಪ್ರಸಿದ್ಧನಾಗಿದ್ದಾನೆ.

## ಮಂಗಳವಾಡ.

ಪಂಡರಾಪುರಕ್ಕೆ ೧೨—೧೪ ಮೈಲಿ ದೂರದಲ್ಲಿ ಮಂಗಳವಾಡ ನಗರವಿದೆ. ಈಗ ಈ ಊರು ಸಾಂಗ್ಲಿ ಸಂಸ್ಥಾನಕ್ಕೆ ಸೇರಿದೆ. ಇದು ತಾಲೂಕು ಜಾಗವಾಗಿದೆ. ಪೂರ್ವದಲ್ಲಿ ಇದು ಶುದ್ಧ ಕನ್ನಡ ದೇಶವಾಗಿತ್ತು. ಈಗ ಮರಾಠಿಯಾಗಿದೆ ಮರಾಠಿ ಜನರು ಇದನ್ನು ಮಂಗಳವೇಡೆ ಎಂದು ಕರೆಯುತ್ತಾರೆ. ಇಲ್ಲಿ ಲಿಂಗಾಯತರೂ, ಜೈನರೂ ಕನ್ನಡ ಮಾತಾಡುತ್ತಾರೆ.

ರೇವಣಸಿದ್ಧನು ಇಲ್ಲಿಗೆ ಬಂದಾಗ ವೀರಬಿಜ್ಜಳನೆಂಬ ಅರಸನಿದ್ದನೆಂದೂ ಸಿದ್ಧನು ಅವನ ಗರ್ವ ಭಂಗಮಾಡಿ ಕಡೆಗೆ ಅವನ ಮಗಳನ್ನು ಮದುವೆಯಾಗಿ ಕೆಲವು ಕಾಲ ಇಲ್ಲಿ ಸುಖಸಂಕಥಾ ವಿನೋದದಿಂದಿದ್ದನೆಂದೂ ತತ್ಸಂಬಂಧ ಗ್ರಂಥಗಳಿಂದ ತಿಳಿದುಬರುತ್ತದೆ.

ರೇವಣನಸಿದ್ಧನ ಗುಡಿ:— ಊರ ಮಧ್ಯ ಕೋಟೆಯ ಮುಂಭಾಗದಲ್ಲಿ ರೇವಣಸಿದ್ಧನ ದೇವಾಲಯವಿದೆ. ದೇವಾಲಯವು ಚಿಕ್ಕದಾಗಿಯೂ ಪ್ರಾಚೀನವಾಗಿಯೂ, ಜೀರ್ಣವಾಗಿಯೂ ಇದೆ. ಪೂಜಾದಿಗಳಿಲ್ಲದೆ ಅವ್ಯವಸ್ಥಿತವಾಗಿದೆ. ಮಳೆ ಬಂದರೆ ದೇವಾಲಯದಲ್ಲೆಲ್ಲ ನೀರು ತುಂಬಿಕೊಳ್ಳುತ್ತವೆ. ದೇವಾಲಯವು ಭೂಮಿಯಕ್ಕಿಂತ ಬಹು ತಗ್ಗಿನಲ್ಲಿದೆ. ಇಲ್ಲಿ ರೇವಣಸಿದ್ಧನೆಂಬ ಲಿಂಗವಿದೆ.

ಈ ಊರಿನಲ್ಲಿ ಕೇದಾರಸ್ವಾಮಿ ಮಠ, ರೇವಣಸಿದ್ಧನ ಮಠ ಮೊದಲಾದ ಅನೇಕ ಲಿಂಗವಂತರ ಮಠಗಳಿವೆ. ಮೊದಲನೆಯದು ಹೊರತು ಮಿಕ್ಕವೆಲ್ಲ ಹಾಳಾಗಿರುತ್ತವೆ. ದಾಮಾಜಿ ಪಂತನೆಂಬ ಮರಾಠಿ ಸಾಧುವು ಇಲ್ಲಿಯೇ ಆಗಿಹೋಗಿದ್ದಾನೆ. ಇಲ್ಲಿ ಆವನ ಸಮಾಧಿಯಿದೆ.

## ಮಾಸನೂರು.

ಶ್ರೀ ರೇವಣಸಿದ್ಧೇಶ್ವರನ ಸಂಬಂಧವಾದ ಕ್ಷೇತ್ರಗಳಲ್ಲಿ ಮಾಸನೂರು ಒಂದಾಗಿದೆ. ಇದು ಸೊಲ್ಲಾಪುರ ಜಿಲ್ಹೆಯಲ್ಲಿ ಪಂಡರಾಪುರ ತಾಲೂಕಿನಲ್ಲಿದೆ. ಮಂಗಳವಾಡ ಪಟ್ಟಣಕ್ಕೆ ಎಂಟು ಮೈಲ ದೂರದಲ್ಲಿದೆ. ಪಕ್ಕದಲ್ಲಿಯೇ ಭೀಮಾನದಿಯು ಹರಿಯುತ್ತದೆ. ಮಾಸನೂರು ಎಂಬ ಹೆಸರು ಶುದ್ಧ ಕನ್ನಡ. ಪೂರ್ವದಲ್ಲಿ ಇದು ಕನ್ನಡನಾಡಿನಲ್ಲಿತ್ತು. ಈಗ ಆ ನಾಡೆಲ್ಲಾ ಮಹಾರಾಷ್ಟ್ರವಾಗಿದೆ. ಮಾಸನೂರು ಒಂದು ಸಣ್ಣ

ಹಳ್ಳಿಯಾಗಿದೆ. ಊರ ತುಂಬ ಬರೀ ಆರೇ ಜನರು ತುಂಬಿದ್ದಾರೆ. ಲಿಂಗವಂತರ ಮನೆ ಒಂದೂ ಇಲ್ಲ. ಇಲ್ಲಿ ಒಬ್ಬರಿಗೂ ಕನ್ನಡ ಭಾಷೆ ಬರುವುದಿಲ್ಲ. ಜನರೆಲ್ಲರೂ ಮರಾಠಿ ಮಾತನ್ನೇ ಆಡುತ್ತಾರೆ.

ದೇವಾಲಯಃ — ಶ್ರೀ ರೇವಣಸಿದ್ಧನ ದೇವಾಲಯವು ಊರಿಗೆ ಮುನ್ನೂರು ಗಜ ದೂರದಲ್ಲಿದೆ. ದೇವಾಲಯವು ಭೀಮಾನದೀತೀರದಲ್ಲಿ ರಮಣೀಯವಾದ ಸ್ಥಳದಲ್ಲಿದೆ. ದೇವಾಲಯವು ಶಿಲಾಮಯವಾಗಿದೆ. ಸುತ್ತಲೂ ಪ್ರಾಕಾರವಿದೆ. ಈ ದೇವಾಲಯದ ಪ್ರಾಕಾರದಲ್ಲಿ

೧ ಮಲ್ಲಿಕಾರ್ಜುನದೇವಾಲಯ.
೨ ರೇವಣಸಿದ್ಧ ದೇವಾಲಯ.
೩ ಕಾಶೀನಾಥ ಬುವಾಸಮಾಧಿ.

ಎಂಬ ಮೂರು ಕಟ್ಟಡಗಳಿವೆ. ರೇವಣಸಿದ್ಧನು ಮೊದಲು ಬಂದು ನಿಂತುದು ಮಲ್ಲಿಕಾರ್ಜುನದೇವಾಲಯದಲ್ಲೆಂದು ತೋರುತ್ತದೆ. ರೇವಣಸಿದ್ಧಪುರಾಣ, ರೇಣುಕಕಾವ್ಯ, ರೇವಣಸಾಂಗತ್ಯ ಮೊದಲಾದ ಗ್ರಂಥಗಳಲ್ಲಿ ಹೇಳಿರುವ ಸಂಗತಿಗೂ ಈ ಕ್ಷೇತ್ರದ ಸ್ಥಿತಿಗತಿಗೂ ಸರಿಹೊಂದುತ್ತದೆ. ದೇವಾಲಯದ ಪ್ರಾಕಾರವು ವಿಶಾಲವಾಗಿದೆ. ನೆಲಕ್ಕೆಲ್ಲಾ ಕಲ್ಲು ಹಾಸಿಗಿದೆ. ಕಟ್ಟಡವು ಭವ್ಯವಾಗಿದೆ. ಪ್ರಾಕಾರದ ಸುತ್ತಲೂ ಇರುವ ಕೋಣೆಗಳಲ್ಲಿ ಪರಸ್ಥಳದ ಜನರು ವಾಸಮಾಡಲಿಕ್ಕೆ ಅನುಕೂಲವುಂಟು

ಮಲ್ಲಿಕಾರ್ಜುನ ದೇವಾಲಯಃ— ಇದೇ ಇಲ್ಲಿ ಪ್ರಾಚೀನವಾದುದೆಂದು ತೋರುತ್ತದೆ. ರೇವಣಸಿದ್ಧನು ಕೆಲವು ಕಾಲ ಇಲ್ಲಿ ವಾಸಮಾಡಿದ್ದಾನೆ. ಈ ದೇವಾಲಯದ ಸಮೀಪದಲ್ಲಿದ್ದ ಅಶ್ವತ್ಥ ವೃಕ್ಷದಲ್ಲಿ ವಾಸಮಾಡುತ್ತಿದ್ದ ರಾಕ್ಷಸ ಮಿಥುನವನ್ನು ಇಲ್ಲಿಯೇ ನಾಶಮಾಡಿದನೆಂದು ಪುರಾಣಗಳು ಹೇಳುತ್ತವೆ. ದೇವಾಲಯವು ಸುಂದರವಾಗಿಯೂ, ಮುಚ್ಚಟವಾಗಿಯೂ ಇದೆ. ಶಿಲ್ಪಿಕಲಾ ದೃಷ್ಟಿಯಿಂದಲೂ ಗಣನೀಯವಾಗಿದೆ.

ರೇವಣಸಿದ್ಧನ ದೇವಾಲಯಃ— ಇದೂ ಮಲ್ಲಿಕಾರ್ಜುನ ಗುಡಿಯ ರೀತಿಯಲ್ಲಿಯೇ ಇದೆ. ಮಲ್ಲಿಕಾರ್ಜುನನ ಗುಡಿಗಿಂತ ಇದರಲ್ಲಿ ಶಿಲ್ಪಕಲೆಯು ಕೊಂಚ ನಯವಾಗಿದೆ. ಈ ದೇವಾಲಯದಲ್ಲಿ ರೇವಣಸಿದ್ಧನೆಂಬ ಒಂದು ಶಿವಲಿಂಗವಿದೆ. ಇದು ರೇವಣಸಿದ್ಧನು ತಪಸ್ಸಿಗೆ ಕೂತಿದ್ದ ಸ್ಥಳವಾಗಿರಬಹುದು.

ಅಶ್ವತ್ಥ ವೃಕ್ಷಃ— ಈಗಲೂ ದೇವಾಲಯದಲ್ಲಿ ಒಂದು ಅರಳಿಯ ಮರವಿದೆ. ಇದು ಬಹಳ ಹಳೆಯ ಮರವೆಂದು ಕಾಣುತ್ತದೆ. ಇದನ್ನು ಭಾವಿಕ ಜನರು ರೇವಣಸಿದ್ಧನ ಕಾಲದಲ್ಲಿದ್ದ ಅಶ್ವತ್ಥವೃಕ್ಷದ ಸಂತಾನ ವೆಂದು ನಂಬಿದ್ದಾರೆ.

ಕಾಶೀನಾಥ ಬುವಾ ಸಮಾಧಿಃ— ಈತನೊಬ್ಬ ವೀರಶೈವ ಸಾಧು. ನೂರಾರು ವರ್ಷಗಳ ಮೊದಲು ಉತ್ತರ ಹಿಂದುಸ್ಥಾನದಿಂದ ಇಲ್ಲಿಗೆ ಬಂದು ಬಹುಕಾಲವಿದ್ದು ಇಲ್ಲಿಯೇ ಸಮಾಧಿಯಾಗಿದ್ದಾನೆ. ಜನರು ಆ ಸಮಾಧಿಯ ಮೇಲೆ ಒಂದು ಶಿವಲಿಂಗವನ್ನು ಸ್ಥಾಪಿಸಿ ಸಣ್ಣ ದೇವಾ ಲಯವನ್ನು ಕಟ್ಟಿದ್ದಾರೆ.

ಮೈಸೂರು ಬುವಾಃ— ಈ ದೇವಾಲಯದಲ್ಲಿ ಮೈಸೂರು ಪ್ರಾಂತದ ಮಾಧವರಾವ ಎಂಬವರೊಬ್ಬರು ಕೆಲವು ವರ್ಷಗಳ ವರೆಗೆ ವಾಸಮಾಡಿ ದರು. ಪಿಟೀಲ ಬಾರಿಸುವದರಲ್ಲಿಯೂ ಸಂಗೀತ ಹಾಡುವದರಲ್ಲಿಯೂ ಹೆಸರಾಗಿದ್ದಾರೆ. ಇವರನ್ನು ಈ ಭಾಗದ ಜನರು "ಮೈಸೂರು ಮಹಾ ರಾಜ" ಎಂದು ಕರೆಯುತ್ತಾರೆ. ಇವರು ಭಿಕ್ಷಾಟನ ಮಾಡಿ ಹಣವನ್ನು ಸಂಗ್ರಹಿಸಿ ಈ ದೇವಾಲಯದಲ್ಲಿ ಕೆಲವು ಸುಧಾರಣೆಗಳನ್ನು ಮಾಡಿ ಪ್ರಯಾಣಿಕರಿಳಿದುಕೊಳ್ಳುವುದಕ್ಕೆ ಅನುಕೂಲ ಕಲ್ಪಿಸಿದ್ದಾರೆ. ಈಗ ಈ ಸಾಧುಗಳು ಪಂಡರಾಪುರದಲ್ಲಿದ್ದಾರೆ. ಇವರು ರೇವಣಸಿದ್ಧನಲ್ಲಿ ಬಹಳ ಭಕ್ತಿಯುಳ್ಳವರಾಗಿ ತೋರುತ್ತದೆ.

ದೇವಾಲಯದ ಪಕ್ಕದಲ್ಲಿಯೇ ಭೀಮಾ ನದಿಯಿದೆ. ನದಿಯು ದೇವಾ ಲಯದಿಂದ ಮಾಸನೂರು ವರೆಗೆ ಬಹಳ ರಭಸವಾಗಿ ಹರಿಯುತ್ತದೆ. ಇಲ್ಲಿ ನದಿಯು ಬಹಳ ಆಳವಾಗಿರುವದರಿಂದ ಇದನ್ನು ಜನರು ಮಾಸ ನೂರು ಮಡುವು ಎಂದು ಕರೆಯುತ್ತಾರೆ. ರೇವಣಸಿದ್ಧನು ಸುರುಗಿಯ ಮಹಿಮೆಯನ್ನು ಮೆರೆದುದು ಈ ಮಡವಿನಲ್ಲಿಯೇ. ಈ ನದಿಯಲ್ಲಿ ಜಡೆ ಶಂಕರನ ಗುಡಿ ಎಂಬ ಶಿವದೇವಾಲಯವೊಂದಿದೆ. ಈ ದೇವಾಲಯಕ್ಕೆ ಹೋಗಿಬರುವುದು ಬಹು ದುಸ್ತರವಾಗಿದೆ. ನದಿ ತುಂಬಿದರೆ ನೀರು ದೇವಾಲಯದ ಪ್ರಾಕಾರದೊಳಗೆ ಮಿಕ್ಕಿ ಬರುವ ಸಂಭವವುಂಟೆಂದು ಹೇಳುತ್ತಾರೆ.

ವಿಶೇಷ ಸಂಗತಿಗಳುಃ— ಶಿವರಾತ್ರಿಯಲ್ಲಿ ಇಲ್ಲಿ ದೊಡ್ಡ ಜಾತ್ರೆಯಾ ಗುತ್ತದೆ. ಆಗ ೨೦ ಸಾವಿರ ಜನರು ಸೇರುತ್ತಾರೆ ಲಿಂಗವಂತರೇ ಅಲ್ಲದೆ

ಇತರ ಎಲ್ಲ ಜಾತಿಯವರೂ ಬರುವರೆಂದು ತಿಳಿದುಬಂದಿದೆ. ಶ್ರಾವಣ ಮಾಸದಲ್ಲಿ ದೇವರಿಗೆ (ರೇವಣಸಿದ್ಧ ಲಿಂಗಕ್ಕೆ) ರುದ್ರಾಭಿಷೇಕವಾಗುತ್ತದೆ. ಆಗ ಪಂಡರಾಪುರದಿಂದ ಸ್ಮಾರ್ತಬ್ರಾಹ್ಮಣರು ಬರುತ್ತಾರೆ ಮಿಕ್ಕ ಕಾಲ ದಲ್ಲಿ ಗೊರವರೇ (ಇವರಿಗೆ ಹೂಗಾರರೆಂಬ ಹೆಸರೂ ಉಂಟು.) ದೇವ ರನ್ನು ಪೂಜೆಮಾಡುತ್ತಾರೆ. ವರ್ಷಕ್ಕೆ ಸರಕಾರದಿಂದ ೭೦೦ ರೂ ಧರ್ಮ ದ್ರವ್ಯ ಲಭಿಸುತ್ತದೆ. ಗೊರವ ಪೂಜಾರಿಗಳು ಸುಮಾರು ೩೦-೪೦ ಮನೆ ಯವರಿದ್ದಾರೆ. ಒಬ್ಬೊಬ್ಬರು ಕೆಲ ಕೆಲವು ದಿನದಂತೆ ಪೂಜೆಯನ್ನು ಹಂಚಿಕೊಂಡಿದ್ದಾರೆ. ರೇವಣಸಿದ್ಧನ ಪುರಾಣದಲ್ಲಿ ವರ್ಣಿಸಲ್ಪಟ್ಟಿರುವ ಎಲ್ಲ ಸಂಗತಿಗಳೂ ಇಲ್ಲಿ ಯಥಾವತ್ ದೃಗ್ಗೋಚರವಾಗುತ್ತವೆ.

## ಸಿದ್ಧನಕೆರೆ.

ಮಂಗಳವಾಡಕ್ಕೆ ೧೨ ಮೈಲ ದೂರದಲ್ಲಿ ರೇವಣಸಿದ್ಧನ ಸಂಬಂಧ ಈ ಕ್ಷೇತ್ರವಿದೆ. ಇದು ಮಂಗಳವೇಡೆ ತಾಲೂಕಿಗೆ ಸೇರಿದೆ (ಸಾಂಗ್ಲಿ ರಾಜ್ಯ) ಇಲ್ಲಿ ಜನರು ಕನ್ನಡವನ್ನು ಮಾತಾಡುತ್ತಾರೆ. ರೇವಣಸಿದ್ಧನೂ ಅವನ ಹೆಂಡತಿಯರೂ ಸೇರಿ ಒಂದು ಕೆರೆಯನ್ನು ಕಟ್ಟಿದರೆಂದು ಪುರಾ ಣಗಳಲ್ಲಿ ಬಂದಿದೆಯಷ್ಟೆ? ಅದುವೆ ಈ ಕೆರೆ. ರೇವಣಸಿದ್ಧನು ಕಟ್ಟಿದ ಕೆರೆಯಾದ್ದರಿಂದ ಇದಕ್ಕೆ ರೇವಣಸಿದ್ಧಕೆರೆ ಎಂಬ ಹೆಸರಾಗಿದೆ. ಈ ಪ್ರಾಂತ ನೀರಿಗೆ ಬಹಳ ಅಭಾವವಾದ್ದರಿಂದ ಈ ಕೆರೆಯು ಜನರಿಗೂ ದನಗಳಿಗೂ ಬಹಳ ಉಪಯುಕ್ತವಾಗಿದೆ. ರೇವಣಸಿದ್ಧನು ಸುಖವಾಗಿ ಇಲ್ಲಿ ಕೆಲವು ಕಾಲ ವಾಸಮಾಡಿದನೆಂದು ಕಾಣುತ್ತದೆ. ಚೋಳರಾಜ ಪುತ್ರಿಯ ಹೊಟ್ಟೆಯಲ್ಲಿ ರುದ್ರಮುನಿ ಹುಟ್ಟಿದ ಸ್ಥಳವೇ ಇದೆಂದು ಕಾಣು ತ್ತದೆ. ಪುರಾಣಗಳಲ್ಲಿ ಇದನ್ನು ಅತ್ಯಂತ ಅಸಹ್ಯಕರವಾಗಿ ವರ್ಣಿಸಿ ದ್ದಾರೆ.

ನಿರಂಜನ ವಂಶರತ್ನಾಕರ ಎಂಬ ಗ್ರಂಥದಲ್ಲಿ ಕಲ್ಯಾಣಪಟ್ಟಣದಲ್ಲಿ ರುವ ತ್ರಿಪುರಾಂತಕನ ಕೆರೆಯನ್ನು ರೇವಣಸಿದ್ಧನು ಕಟ್ಟಿದನೆಂದು ಹೇಳಿದೆ. ಇದು ಶುದ್ಧ ಭ್ರಾಂತಿಯಾಗಿದೆ. ಕಲ್ಯಾಣಪಟ್ಟಣ ಮಂಗಳವಾಡ ನಗರ ಗಳೆರಡೂ ಒಂದೇ ನಗರವೆಂದು ಕೆಲವು ಕವಿಗಳು ಭ್ರಾಂತಿಸಿದ್ದಾರೆ. ಈ ಎರಡು ನಗರಗಳ ಹೆಸರಿನ ಭಾವವೂ ಒಂದೇ ಅರ್ಥವನ್ನು ಕೊಡು ವುದರಿಂದಲೂ ಆ ಕವಿಗಳು ಈ ಭಾಗದಲ್ಲಿ ಸಂಚರಿಸದೆ ಇದ್ದುದರಿಂ ದಲೂ ವಸ್ತುಸ್ಥಿತಿಯನ್ನು ತಿಳಿಯದೆ ಹೀಗೆ ತಪ್ಪು ಮಾಡಿದಂತೆ ಕಾಣು

ತ್ತದೆ. ಅಲ್ಲದೆ ಕಲ್ಯಾಣದ ಬಿಜ್ಜಳ (ಕಲಚುರಿ) ಮಂಗಳವಾಡದ ವೀರ ಬಿಜ್ಜಳ ಈ ನಾಮ ಸಾದೃಶ್ಯವೂ ಕವಿಗಳ ಭ್ರಾಂತಿಗೆ ಕಾರಣವಾಗಿದೆ. ಈ ಸಂದರ್ಭವನ್ನು ಸಂಶೋಧಕರು ಗಮನಿಸಬೇಕಾಗಿ ಕೋರುತ್ತೇನೆ.

ಸ್ಥಳಪರಿಚಯಃ— ಇಲ್ಲಿಯೂ ರೇವಣಸಿದ್ಧನ ಪ್ರಾಚೀನ ದೇವಾಲಯವಿದೆ. ದೇವಾಲಯದ ಮುಖ್ಯ ಲಿಂಗಕ್ಕೆ ಸಿದ್ಧೇಶ್ವರಲಿಂಗವೆಂದು ಹೆಸರು. ಇದಲ್ಲದೆ ಇತರ ನಾಲ್ಕು ಲಿಂಗಗಳಿವೆ. ಅಂತು ಈ ದೇವಾಲಯದಲ್ಲಿ ಪಂಚಲಿಂಗಗಳಿವೆ. ಪ್ರಾಕಾರದ ಗೋಡೆಗಳು ಬಿದ್ದು ಹೋಗುತ್ತಿವೆ. ದೇವಾಲಯದ ಸ್ಥಿತಿಯನ್ನು ನೋಡಿದರೆ ಬಹು ದುಃಖ ಪ್ರಾಪ್ತವಾಗುವಂತಿದೆ.

ಸಿದ್ದನಕೆರೆಃ— ದೇವಾಲಯದ ಮುಂದೆಯೇ ಈ ಕೆರೆಯದೆ. ಕೆರೆ ಸುಮಾರು ೨೫೦ ಗಜ ಎತ್ತರವಾಗಿಯೂ, ೧೨೦ ಗಜ ಅಗಲವಾಗಿಯೂ ಇದೆ. ಈಗಲೂ ಮಳೆಗಾಲದಲ್ಲಿ ನೀರು ನಿಲ್ಲುತ್ತದೆ. ಕೆರೆಯ ಏರಿಗೆ ಕಟ್ಟಿದ ಕಲ್ಲುಗಳು ಇನ್ನೂ ಕೆಲ ಮಟವಾಗಿವೆ. ನೀರಿಲ್ಲದ ಈ ಋಕ್ಷ ಪ್ರದೇಶಕ್ಕೆ ಈ ತಟಾಕವು ಬಹಳ ಉಪಯುಕ್ತವಾಗಿದೆ. ಇದು ರೇವಣಸಿದ್ಧನ ಲೋಕೋಪಚಾರ ಬುದ್ಧಿಗೆ ಸಾಕ್ಷಿಯಾಗಿದೆ.

ಮಾಯಾದೇವಿಃ— ಕೆರೆಯ ಪಕ್ಕದಲ್ಲಿ ಹಾಳು ಬಿದ್ದ ಈ ದೇವಾಲಯವಿದೆ. ಇದು ಮಾಯಾದೇವಿಯೆಂಬ ರೇವಣಸಿದ್ಧನ ಪತ್ನಿಯ ದೇವಾಲಯವೆಂದು ಹೇಳುತ್ತಾರೆ. ದೇವಾಲಯವು ನೆಲಸಮವಾಗಿದೆ. ಒಂದು ಸ್ತ್ರೀ ವಿಗ್ರಹ ಮಾತ್ರವಿದೆ.

ರೇವಣಸಿದ್ಧನು ಕೆರೆಯನ್ನು ಕಟ್ಟುವಾಗ ಅವನ ರಾಜ್ಞಿಯರಲ್ಲಿ ಒಬ್ಬಳು ಮಣ್ಣು ಹೊರಲಾರದೆ ಸೋಮಾರಿಯಾಗಿ ಕುಳಿತುಕೊಂಡಳೆಂದೂ ಆಗ ಸಿದ್ಧನು ಕೊಪಿಸಿ ಅವಳ ಹೊಟ್ಟೆಯೊಳಗಿದ್ದ ತನ್ನ ಪಿಂಡವನ್ನು (ರುದ್ರಮುನಿ) ಕಿತ್ತುಕೊಂಡು ಅದನ್ನು ಕೈಲಾಸಕ್ಕೆ ಕಳಿಸಿದನೆಂದೂ ಪುರಾಣಗಳಲ್ಲಿ ಕಥೆಗಳಿವೆ. ಮೇಲೆ ಕಂಡ ಸ್ತ್ರೀ ದೇವಾಲಯವು ಅವಳದೇನಾದರೂ ಆಗಿರಬಹುದೇ ಎಂಬ ಸಂದೇಹವೂ ಬರುತ್ತದೆ. ದೇವಾಲಯದ ಎಡಭಾಗದಲ್ಲಿ ಗವಿಸಿದ್ಧನೆಂಬ ಮತ್ತೊಂದು ಶಿವದೇವಾಲಯವು ಜೀರ್ಣವಾಗಿದೆ. ಶಿವಲಿಂಗ ಮಾತ್ರ ಕಾಣುತ್ತವೆ. ಶ್ರಾವಣಾಂತ್ಯದಲ್ಲಿ ಇಲ್ಲಿ ಚಿಕ್ಕ ಜಾತ್ರೆಯಾಗುತ್ತದೆ. ಆಗ ನೂರಾರು ಜನರು ಇಲ್ಲಿಗೆ ನೆರೆಯುತ್ತಾರೆಂದು ತಿಳಿದುಬರುತ್ತದೆ.

ಸಾಂಗಲಿ ಸರಕಾರದವರು ದೇವಾಲಯದ ಭೂಮಿಯನ್ನೆಲ್ಲಾ ಸರಕಾರಕ್ಕೆ ಸೇರಿಸಿಕೊಂಡು ಬಿಟ್ಟಿದ್ದಾರೆ. ಭಕ್ತರೂ ಇಲ್ಲಿಗೆ ಹೋಗಿ ಬರುವುದು ಕಡಿಮೆಯಾದ್ದರಿಂದ ಮಾಸನೂರಿನ ವೈಭವವನ್ನು ನೋಡಲಾಗುವದಿಲ್ಲ. ಈ ದೇವಾಲಯದಲ್ಲಿಯೇ ರೇವಣಸಿದ್ಧನ ಮಠವೊಂದಿದೆ. ಅದಕ್ಕೆ ಪಟ್ಟಸ್ವಾಮಿಗಳೊಬ್ಬರಿದ್ದಾರೆ. ದೇವಾಲಯದ ಪೂಜೆ ಲಿಂಗವಂತರ ಹಸ್ತದಲ್ಲಿಯೇ ಇದೆ. ಈ ಭಾಗದ ಲಿಂಗವಂತರಲ್ಲಿ ನೂರಕ್ಕೆ ೯೫ ಜನರು ಲಿಂಗವನ್ನು ಕಿತ್ತುಹಾಕಿದ್ದಾರೆಂಬುದೊಂದು ಈ ಪ್ರಾಂತದ ವೈಲಕ್ಷಣ್ಯವಾಗಿದೆ. ಇಲ್ಲಿನ ಕನ್ನಡ ಭಾಷೆಯಂತೂ ಅತ್ಯಂತ ಹೊಲಸಾಗಿ ಹೋಗಿದೆ. ಈ ಪ್ರಕಾರ ರೇವಣಸಿದ್ಧನ ಪುರಾಣದಲ್ಲಿನ ವರ್ಣನೆಗಳನ್ನು ಈ ಕ್ಷೇತ್ರತ್ರಯಗಳೂ ಯಥಾರ್ಥವೆಂದು ಪ್ರವಾಸಿಕರಿಗೆ ತಿಳಿಸಿಕೊಡುತ್ತಿವೆ.

ಇನ್ನು ರೇವಣಸಿದ್ಧನ ವಿಚಾರವನ್ನು ಕುರಿತು ನಾಲ್ಕು ಮಾತುಗಳನ್ನು ಬರೆಯಬೇಕಾಗಿದೆ. ಈಗ ನಮಗೆ ಸಿಕ್ಕಿರುವ ಪುರಾಣಗಳನ್ನೆಲ್ಲಾ ವಿಚಾರಿಸಿದರೆ ಐತಿಹಾಸಿಕ ದೃಷ್ಟಿಯಿಂದ ನೋಡುವವರಿಗೆ ರೇವಣಸಿದ್ಧನು ಕಲ್ಪನಾ ಪುರುಷನಾಗಿ ಕಾಣುತ್ತಾನೆ. ಹೀಗಾಗಲು ಆದಿ ರೇಣುಕಾಚಾರ್ಯನ ಹಾಗೂ ಇತರ ರೇವಣಸಿದ್ಧರೆಂಬುವರ ಚರಿತ್ರೆಯನ್ನೆಲ್ಲಾ ಒಂದೇ ಗ್ರಂಥದಲ್ಲಿ ಸೇರಿಸಿ ನಮ್ಮ ಕವಿಗಳು ಬರೆದುದೇ ಕಾರಣವಾಗಿದೆ. ಆ ಪುರಾಣಗಳ ಪ್ರಕಾರ ಅಗಸ್ತ್ಯ ವಿಭೀಷಣ ರಾಜೇಂದ್ರ ಜೋಳ ವೀರಬಿಜ್ಜಳ ಸಿದ್ಧರಾಮೇಶ ಇವರೆಲ್ಲಾ ಸಮಕಾಲೀನರಾಗಬೇಕಾಗುತ್ತದೆ. ಕೆಲವ ಕವಿಕಲ್ಪನೆಗಳನ್ನು ಬಿಟ್ಟರೂ ಈ ಕಥೆಗಳು ಪರಸ್ಪರ ಸಂಬಂಧವಾಗುವದಿಲ್ಲ. ಈ ಬಾದರಾಯಣ ಸಂಬಂಧವನ್ನು ಕಲ್ಪಿಸಲಿಕ್ಕೆ ರೇವಣಸಿದ್ಧನು ೧೪೦೦ ವರ್ಷ ಬದುಕಿದನೆಂಬ ಮೂಢ ನಂಬಿಕೆಯನ್ನು ಪುರಾಣಕ್ಕೆ ಗಂಟುಹಾಕಿದ್ದಾರೆ. ಇಂತಹ ದೋಷಗಳು ಬಸವ ಪುರಾಣ, ಪ್ರಭುಲಿಂಗಲೀಲೆಗಳಲ್ಲಿಯೂ ಲಭಿಸುತ್ತವೆ. ಇವನ್ನೆಲ್ಲಾ ವಿಚಾರಮಾಡಿ ಐತಿಹಾಸಿಕ ರೀತಿಯಿಂದ ನಮ್ಮ ಪುರಾಣಗಳಲ್ಲಿರುವ ಸತ್ಯಾಂಶಗಳನ್ನು ಹೊರಗೆಡವುವದು ಸಂಶೋಧಕರ ಕಾರ್ಯವಾಗಿದೆ.

ಶಿರಿವಾಳದ [illegible]ವಣಸಿದ್ಧನ ಸಂಬಂಧವಾದ ಶಾಸನವು ಶಿವಾನು[illegible]ದ ದ್ವಾರಾ [illegible]ಬಿದ್ದಮೇಲೆ ರೇವಣಸಿದ್ಧನ ಚರಿತ್ರೆಯ ಮೇಲೆ [illegible]ಬೀಳಹತ್ತಿದೆ.

ರೇವಣಸಿದ್ಧನ ಸಂಬಂಧವಾದ ಗ್ರಂಥಗಳನ್ನು ಶಿರಿವಾಳದ ಶಾಸನವನ್ನೂ ನೋಡಿದ ಮೇಲೆ ನನ್ನ ವಿಚಾರದಲ್ಲಿ ರೇವಣಸಿದ್ಧರೆಂಬುವರು ಅನೇಕ ಮಂದಿಯಾಗಿದ್ದಾರೆಂದು ಹೊಳೆದಿದೆ.

೧. ಅಗಸ್ತ್ಯನಿಗೆ ಉಪದೇಶ ಮಾಡಿದ ಆದಿರೇಣುಕಾಚಾರ್ಯ.

೨. ಆದಿಶಂಕರಾಚಾರ್ಯನಿಗೆ ಚಂದ್ರಮೌಳೀಶ್ವರ ಲಿಂಗಪ್ರದಾನ ಮಾಡಿದ ರೇವಣಸಿದ್ಧ.

೩. ಸಿದ್ಧರಾಮನ ಆವಿರ್ಭಾವದ ಭವಿಷ್ಯವನ್ನು ಹೇಳಿದ ರೇವಣಸಿದ್ಧ. (ಇವನೇ ಶಾಸನಸ್ಥ ಶಿವಯೋಗಿ ಶಾಂತಮಯ್ಯನ ಮಗನಾಗಿರಬಹುದು.)

೪. ಕನ್ನಡದಲ್ಲಿ ವೈದ್ಯ ಗ್ರಂಥಗಳನ್ನು ಬರೆದ ರೇವಣಸಿದ್ಧ.

ಹೀಗೆ ನಾಲ್ಕುಮಂದಿಗಳಲ್ಲದೆ ಶ್ರೀಮಾನ್ ಕರ್ಲಮಂಗಲಂ ಶ್ರೀ ಕಂಠಯ್ಯನವರು "ವೀರಶೈವ ಮತಾಚಾರ್ಯರ ಕಾಲನಿರ್ಣಯು" ಎಂಬ ಗ್ರಂಥದಲ್ಲಿ ಓರ್ವ ಬ್ರಾಹ್ಮಣ ರೇವಣಸಿದ್ಧನ ಹೆಸರನ್ನು ಜೇರೆ ಹೇಳಿದ್ದಾರೆ. ಹುಡುಕಿದರೆ ಇನ್ನೂ ಬಹುಮಂದಿ ರೇವಣಸಿದ್ಧರು ಲಭಿಸಬಹುದು. ಈ ವಿಚಾರವು ನವೀನವೂ ವಾದಗ್ರಸ್ತವೂ ಆಗಿರುವುದರಿಂದ ನಾನು ಈ ವಿಷಯುದ ಸಮರ್ಥನೆಯು ಬಗ್ಗೆ ಒಂದು ಸ್ವತಂತ್ರ ಲೇಖನವನ್ನು ಬರೆದು ವಿದ್ವಾಂಸರ ಮುಂದಿಡುತ್ತೇನೆ. ಆಗ ಪಂಡಿತರು ಇದರ ಸತ್ಯಾಸತ್ಯತೆಯನ್ನು ಕುರಿತು ಅವಶ್ಯವಾಗಿ ಚರ್ಚಿಸಬಹುದು.

ನನ್ನ ಅಭಿಪ್ರಾಯುದಲ್ಲಿ ಶಿರಿವಾಳದ ಶಾಸನದಲ್ಲಿ ಅಭಿವರ್ಣಿತನಾಗಿರುವ ಶಿವಯೋಗಿ ಶಾಂತಮಯ್ಯಗಳ ಮಗ ರೇವಣಸಿದ್ಧನೇ ಮಂಗಳವಾಡ, ಮಾಸನೂರು, ಸಿದ್ಧನಕೆರೆ, ಸೊನ್ನಲಿಗೆಗಳಲ್ಲಿ ಪ್ರಸಿದ್ಧನಾದವನೆಂದು ತೋರುತ್ತದೆ. ಇವನ ಮಗನೇ ರುದ್ರಮುನಿಸ್ವಾಮಿಯೆಂದೂ ಹಾವಿನಹಾಳ ಕಲ್ಲಯ್ಯನಿಗೆ ಶಿವದೀಕ್ಷೆಯುನ್ನು ಕೊಟ್ಟವನು ಈ ರುದ್ರಮುನಿಯೇ ಎಂದೂ ಈ ಹಿಂದೆಯೇ ಹೇಳಿದ್ದೇನೆ.

## ಭೂಕೈಲಾಸ ಸೊನ್ನಲಿಗೆ.

ಶಿವಯೋಗಿ ಸಿದ್ಧರಾಮನು ಅಖಂಡ ಭರತಖಂಡದ ವೀರಶೈವರಿಗೆಲ್ಲಾ ಪೂಜ್ಯನಾಗಿದ್ದಾನೆ. ಈ ಮಹಾತ್ಮನ ಪದವಿನ್ಯಾಸದಿಂದ ಪವಿ

ತ್ರವಾದುದೇ ಸೊನ್ನಲಿಗೆಯ ಮಹಾಕ್ಷೇತ್ರ. ಈ ನಗರವನ್ನು ಪುರಾಣ ಗಳಲ್ಲಿ ಸೊನ್ನಲಾಪುರವೆಂದೂ ಈಗ ಸೊಲ್ಲಾಪುರವೆಂದೂ ಕರೆಯು ತ್ತಾರೆ. ಸಿದ್ಧರಾಮೇಶ್ವರನ ಕಾಲದಲ್ಲಿ ಶುದ್ಧ ಕನ್ನಡ ನಗರವಾಗಿದ್ದ ಈ ನಗರವು ಈಗ ಶುದ್ಧ ಮಹಾರಾಷ್ಟ್ರಮಯವಾಗಿದೆ. "ಕಾಲಾಯ ತಸ್ಮೈನಮಃ" ಸೊಲ್ಲಾಪುರವು ವೀರಶೈವರಿಗೆ ಒಂದು ದಿವ್ಯ ಕ್ಷೇತ್ರವೆ ನಿಸಿದೆ. ಇಲ್ಲಿರುವ ಪ್ರೇಕ್ಷಣೀಯ ಸ್ಥಾನಗಳನ್ನೆಲ್ಲಾ ಸಂಗ್ರಹವಾಗಿ ಇಲ್ಲಿ ಬರೆಯುತ್ತೇನೆ.

ಸಿದ್ಧರಾಮೇಶ್ವರ ದೇವಾಲಯಃ— ಈ ಊರು ಮಧ್ಯದಲ್ಲಿದೆ. ಸುತ್ತಲೂ ಸಿದ್ಧರಾಮೇಶ್ವರನೇ ಕಟ್ಟಿಸಿದ ಕೆರೆಯ ಮಧ್ಯದಲ್ಲಿ ದೇವಾಲ ಯವಿದೆ. ದೇವಾಲಯವು ವಿಶಾಲವಾಗಿಯೂ ಪ್ರಶಾಂತವಾಗಿಯೂ ಇದೆ. ಈ ದೇವಾಲಯದ ಆವರಣದಲ್ಲಿಯೇ ಸಿದ್ಧರಾಮನಿಂದಲೇ ಸಂಸ್ಥಾಪಿತ ವಾದ ಆದಿಲಿಂಗೇಶ್ವರನೇ ಮೊದಲಾದ ಅನೇಕ ಶಿವಲಿಂಗಗಳಿವೆ. ಸಿದ್ಧ ರಾಮೇಶ್ವರನು ಶ್ರೀಶೈಲದಿಂದ ೬೮ ಲಿಂಗಗಳನ್ನು ತಂದು ಇಲ್ಲಿ ಸ್ಥಾಪಿ ಸಿದನೆಂದು ಪುರಾಣದಿಂದ ತಿಳಿದುಬರುತ್ತದೆ. ದೇವಾಲಯದ ಪ್ರಾಕಾ ರವು ಅಪೂರ್ಣವಾಗಿದೆ.

ಕಲ್ಲಯ್ಯನ ಸಮಾಧಿಃ— ಸಿದ್ಧರಾಮನ ದೇವಾಲಯದ ಮುಂದಿನ ಕೆರೆಯ ಪಕ್ಕದಲ್ಲಿ ಸಿದ್ಧರಾಮನ ಶಿಷ್ಯನಾದ ಹಾವಿನಹಾಳು ಕಲ್ಲಯ್ಯನ ಸಮಾಧಿ ಇದೆ. ದೇವಾಲಯವು ಬಹು ಚಿಕ್ಕದಾಗಿದೆ.

ಪ್ರಭುಲಿಂಗೇಶ್ವರಃ— ಅಲ್ಲಮಪ್ರಭುವು ಸೊನ್ನಲಿಗೆಗೆ ಬಂದು ಸಿದ್ಧ ರಾಮನ ಗರ್ವಭಂಗಮಾಡಿ ಅವನನ್ನು ಕಲ್ಯಾಣಕ್ಕೆ ಕರೆತಂದ ವಿಚಾ ರವು ಪುರಾಣಪ್ರಸಿದ್ಧವಾಗಿದೆ. ಹೀಗೆ ಅಲ್ಲಮಪ್ರಭುವು ಬಂದು ನಿಂತ ಸ್ಥಳದಲ್ಲಿಯೇ ಪ್ರಭುಲಿಂಗೇಶ್ವರವೆಂಬ ದೇವಾಲಯವಾಗಿದೆ.

ರೇವಣಸಿದ್ಧ ದೇವಾಲಯಃ— ಮಾಸನೂರು ಸಿದ್ಧನಕೆರೆ ಮಂಗಳ ವೇಡೆಗಳಲ್ಲಿ ಪ್ರಸಿದ್ಧನಾದ ರೇವಣಸಿದ್ಧನೇ ಸೊನ್ನಲಿಗೆಗೆ ಬಂದು ಮುದ್ದು ಗೌಂಡ ಸುಗ್ಗಲೆಯರ ಹೊಟ್ಟೆಯಲ್ಲಿ ಶಿವಯೋಗಿಯೊಬ್ಬನು ಮಗನಾಗಿ ಹುಟ್ಟುವನೆಂಬ ವಿಚಾರ ಸಿದ್ಧರಾಮಪುರಾಣದಲ್ಲಿ ವಿರಾಜಮಾನವಾಗಿದೆ. ಹೀಗೆ ರೇವಣಸಿದ್ಧನು ಇಲ್ಲಿಗೆ ಬಂದುಹೋದುದರ ಸಾಕ್ಷಿಯಾಗಿ ಇಲ್ಲಿ ಊರ ಹೊರಭಾಗದಲ್ಲಿ ಒಂದು ಭವ್ಯವಾದ ರೇವಣಸಿದ್ಧೇಶ್ವರ ದೇವಾ ಲಯವೊಂದು ಸ್ಥಾಪಿತವಾಗಿದೆ. ಈ ದೇವಾಲಯವಿರುವ ಭಾಗವು

ಪ್ರಶಾಂತವಾಗಿಯೂ ರಮಣೀಯವಾಗಿಯೂ ಇದೆ. ಈ ದೇವಾಲಯದಲ್ಲಿ ರೇವಣಸಿದ್ಧ ಲಿಂಗವು ಭೂಮಿಯ ಕೆಳಗೆ ಐದು ಅಡಿ ತಗ್ಗಿನಲ್ಲಿದೆ. (ಮಂಗಳವೇಡೆಯ ರೇವಣಸಿದ್ಧ ಲಿಂಗವೂ ಹೀಗೆಯೇ ಭೂಮಿಯ ಒಳ ಭಾಗದಲ್ಲಿ ಸೇರಿದೆ.)

ರೇವಣಸಿದ್ಧನ ಪಾದ:— ರೇವಣಸಿದ್ಧನು ಸೊನ್ನಲಿಗೆಗೆ ಬಂದಾಗ ತಾನು ಹತ್ತಿದ್ದ ಪಲ್ಲಕ್ಕಿಯನ್ನಿಳಿದು ಮೆಟ್ಟಿದ ಹಾವಿಗೆಗಳನ್ನಿಳಿದು ಪಾದ ಚಾರಿಯಾಗಿ ಮುದ್ದುಗೊಂಡನ ಮನೆಗೆ ಹೋದನೆಂದು ಪುರಾಣದಲ್ಲಿ ದೆಯಷ್ಟೆ? ಆ ಪಾದುಕೆಗಳನ್ನು ಬಿಟ್ಟ ಸ್ಥಳದಲ್ಲಿಯೇ ಈ ಪುಟ್ಟ ದೇವಾ ಲಯವಾಗಿದೆ.

ಮಲ್ಲಿಕಾರ್ಜುನ ದೇವಾಲಯ:— ಈಗ ಊರ ಮಧ್ಯ ಇರುವ ಭವ್ಯವಾದ ಈ ದೇವಾಲಯವು ಸಿದ್ಧರಾಮನೇ ಕಟ್ಟಿದ್ದಲ್ಲ. ವಿಜಾಪುರದ ಸುಲ್ತಾನರ ಕಾಲದಲ್ಲಿ ಸೊಲ್ಲಾಪುರದಲ್ಲಿ ಒಂದು ಕೋಟೆಯನ್ನು ಕಟ್ಟಿ ದರು. ಈ ಕೋಟೆಯಲ್ಲಿಯೇ ಸಿದ್ಧರಾಮೇಶ್ವರನು ಕೈಯಿಂದ ಕಟ್ಟಿದ ಮಲ್ಲಿನಾಥ ದೇವಾಲಯವು ಸೇರಿಹೋಗಿದೆ. ಅದರ ಅವಶೇಷವನ್ನು ಈಗ ಕೋಟೆಯಲ್ಲಿ ನೋಡಬಹುದು. ಈ ಕೋಟೆಯಲ್ಲಿಯೇ ಸಿದ್ಧರಾಮೇಶ್ವ ರನ ಸಂಬಂಧ ದೇವಾಲಯವೊಂದು ಮಸೀತಿಯಾಗಿ ಮಾಡಿದಾಗಿರುವು ದನ್ನು ನೋಡಬಹುದು. ಈ ಪ್ರಾಚೀನ ದೇವಾಲಯದ ಶಿವಲಿಂಗವನ್ನು ತಂದು ಈಗ ಊರಿನಲ್ಲಿರುವ ಮಲ್ಲಿಕಾರ್ಜುನ ದೇವಾಲಯವನ್ನು ಕಟ್ಟಿ ದ್ದಾರೆಂದು ತಿಳಿದುಬರುತ್ತದೆ.

ಮಲ್ಲಿನಾಥಪುರ:— ಸಿದ್ಧರಾಮೇಶ್ವರನ ಹಸ್ತದಿಂದ ಕಟ್ಟಲ್ಪಟ್ಟಿದ್ದ ಈ ನಗರವು ಮುಸಲ್ಮಾನರ ಕಾಲದಲ್ಲಿ ಹಾಳಾದಂತೆ ತಿಳಿಯುತ್ತದೆ. ಈಗಿರುವ ಮುಸಲ್ಮಾನರ ಕೋಟೆಯು ಸಿದ್ಧರಾಮೇಶ್ವರನ ಕೆರೆಯಲ್ಲಿಯೇ ಕಟ್ಟಲ್ಪಟ್ಟಿದೆ. ಸಿದ್ಧರಾಮೇಶ್ವರನ ದೇವಾಲಯದ ಕೊಂಚ ಭಾಗವನ್ನು ಆಕ್ರಮಿಸಿ ತುರುಕರು ಒಂದು ಮಸೀದಿಯನ್ನು ಕಟ್ಟಿದ್ದಾರೆ. ದೇವಾಲ ಯದ ಮುಂದೆ ಮುಸಲರ ಸ್ಮಶಾನ ಭೂಮಿಯೊಂದಿದೆ. ಇದೆಲ್ಲವು ಔರಂಗಜೇಬನ ಕಾಲದಲ್ಲಾದ ಆಕ್ರಮಣವೆಂದು ಜನರು ಹೇಳುತ್ತಾರೆ.

ಕಿರೀಟಸ್ವಾಮಿ ಗದ್ದುಗೆ:— ಇದು ಓರ್ವ ವಿರಕ್ತಸ್ವಾಮಿಗಳ ಗದ್ದುಗೆ. ಮಲ್ಲಿಕಾರ್ಜುನ ದೇವಾಲಯದ ಹತ್ತಿರವಿದೆ. ಈ ಮಠಾಧೀಶರಾದ ಶ್ರೀ ಮನ್ನಿರಂಜನ ನಿಜಗುಣಸ್ವಾಮಿಗಳು ವಿದ್ವತ್ಪ್ರಿಯರೂ, ಉದಾರಚಿತ್ತರೂ ಆಗಿದ್ದಾರೆ.

ಸಿದ್ಧರಾಮೇಶ್ವರನ ಕಾಲದಲ್ಲಾದ ಗಣಪತಿ ದೇವಾಲಯುವೇ ಮೊವ ಲಾದವೂ ದರ್ಶನಾರ್ಹವಾಗಿವೆ.

ಸೊಲ್ಲಾಪುರವು ಯೋಗ ಭೂಮಿಯೆಂದು ತೋರುತ್ತದೆ. ಆಧುನಿಕ ಕಾಲದಲ್ಲಿಯೂ ಕೂಡ ಅಲ್ಲಿ ವೀರಶೈವ ಮತಪ್ರಕಾಶಕರೂ ಶಿವ ಶರಣರ ಮಾಲೆಯಲ್ಲಿ ಸೇರತಕ್ಕವರೂ ಆದ ಕೈ॥ ರಾವಬಹದ್ದೂರ ವಾರದ ಮಲ್ಲಪ್ಪನವರಂತಹ ಮಹಾಪುರುಷರೂ, ನಾಲತ್ವಾಡ ಶರಣರಂತಹ ಮಹಾತ್ಮರೂ ಅಲ್ಲಿ ಆಗುತ್ತಲೇ ಬಂದಿದ್ದಾರೆ.

## ಸಿದ್ಧರಾಮೇಶ್ವರ.

ವೀರಶೈವ ವಿಭೂತಿಗಳಲ್ಲಿ ಸಿದ್ಧರಾಮನು ಹೆಸರಾದವನು. ಈತನು ಕುಡುಒಕ್ಕಲಿಗ ಜಾತಿಯಲ್ಲಿ ಹುಟ್ಟಿ ಮಹಾಸಿದ್ಧನೆನಿಸಿಕೊಂಡು ಶ್ರೀಶೈಲ ಮಲ್ಲಿಕಾರ್ಜುನನನ್ನು ಮೆಚ್ಚಿಸಿ ಅನುಗ್ರಹವನ್ನು ಸಂಪಾದಿಸಿಕೊಂಡನು. ಇವನು ನೈಷ್ಠಿಕ ಬ್ರಹ್ಮಚಾರಿಯೂ, ಶಿವಯೋಗಿಯೂ, ಹಣೆಗಣ್ಣುಳ್ಳವನೂ ಆಗಿ ವಿಖ್ಯಾತನಾದನು. ಅಲ್ಲಮಪ್ರಭುವಿನ ಉಪದೇಶದಂತೆ ಕಲ್ಯಾಣಕ್ಕೆ ಹೋಗಿ ಬಸವಾದಿಪ್ರಮಥರ ಸನ್ನಿಧಿಯಲ್ಲಿ ಗುರುಚೆನ್ನಬಸವೇಶನಿಂದ ಲಿಂಗಧಾರಣೆಯನ್ನು ಹೊಂದಿ ವೀರಶೈವನಾದನು. ಈ ವಿಚಾರವು ಸಿದ್ಧರಾಮೇಶ್ವರ ವಚನ, ಶೂನ್ಯಸಂಪಾದನೆ, ಚನ್ನಬಸವ ಪುರಾಣಗಳಿಂದ ತಿಳಿದುಬರುತ್ತದೆ. ಆದರೆ ಪ್ರಾಚೀನನಾದ ರಾಘವಾಂಕನ ಸಿದ್ಧರಾಮ ಪುರಾಣದಿಂದ ಸಿದ್ಧರಾಮನು ಕಲ್ಯಾಣಕ್ಕೆ ಹೋಗಿ ಲಿಂಗಾಂಗಿಯಾದ ವಿಚಾರ ತಿಳಿದುಬರದಿರುವುದು ಆಶ್ಚರ್ಯಕರವಾಗಿದೆ. ಸಿದ್ಧರಾಮನ ಸಂಬಂಧ ವಚನ ಗ್ರಂಥಗಳು ಇನ್ನೂ ಬಹಳವಾಗಿ ಪ್ರಕಟವಾಗಬೇಕಾಗಿದೆ.

## ದೇವರಹಿಪ್ಪರಗಿ.

ಬಸವೇಶ್ವರನಿಗೆ ಮತಪ್ರಚಾರ ಕಾರ್ಯದಲ್ಲಿ ನೆರವಾಗಿದ್ದವರಲ್ಲಿ ಶ್ರೀಮಾಚಿದೇವನು ಬಹು ಮುಖ್ಯನು. ಈತನು ಧೈರ್ಯಶಾಲಿಯೂ, ಉಜ್ವಲ ವೀರಶೈವಾಭಿಮಾನಿಯೂ, ಪವಾಡ ಪುರುಷನೂ ಆಗಿದ್ದನೆಂದು ತಿಳಿದುಬರುತ್ತದೆ. ವಚನಕಾರರು ಈತನನ್ನು ಬಹುವಾಗಿ ಕೊಂಡಾಡಿದ್ದಾರೆ. ಶ್ರೀ ಬಸವಾದಿಗಳಿಗೂ ಈ ಮಹಾತ್ಮನ ವಿಚಾರವಾಗಿ ಬಹಳವಾಗಿ ಶ್ರದ್ಧೆ ಭಕ್ತಿಗಳಿದ್ದವೆಂದು ತಿಳಿದು ಬರುತ್ತದೆ. ಈತನು ಕಲ್ಯಾಣದಲ್ಲಿ

ಶಿವಶರಣರ ಬಟ್ಟೆಗಳನ್ನು ತೊಳೆಯುವ ಕಾಯಕವನ್ನು ಸ್ವೀಕರಿಸಿದ್ದನು. ಆದುದರಿಂದಲೇ ಈತನನ್ನು ಮಡಿವಳ ಮಾಚಿದೇವನೆಂದು ಕರೆಯುತ್ತಾರೆ. ಈತನು ಮಹಾ ವೀರನಾಗಿದ್ದು ವೀರಶೈವರ ಮೇಲೆ ಪರರು ಏರಿಬಂದಾಗ ಕೈಯಲ್ಲಿ ಘಂಟೆಯನ್ನು ಹಿಡಿದು ಬಾರಿಸುತ್ತ ಶತ್ರುಗಳ ಎದೆ ನಡಗುವಂತೆ ಸಿಂಹನಾದ ಮಾಡುತ್ತಿದ್ದನಾದ್ದರಿಂದಲೇ ಇವನನ್ನು ವೀರಘಂಟೆ ಮಡಿವಳ ತಂದೆಯೆಂದೂ ಕರೆಯುತ್ತಾರೆ. ಈತನು ವೀರಭದ್ರನ ಔಪಾಸಿಕನಾಗಿದ್ದನೆಂದು ತಿಳಿಯುತ್ತದೆ. ಇವನನ್ನು ವೀರಭದ್ರಾವತಾರನೆಂದು ಲಿಂಗವಂತ ಕವಿಗಳು ಕರೆದಿದ್ದಾರೆ. ಈ ಮಹಿಮಾಶಾಲಿಯು ಹುಟ್ಟಿ ಬೆಳೆದ ಊರೇ ದೇವರಹಿಪ್ಪರಿಗೆಯು.

ವಿಜಾಪುರ ಜಿಲ್ಲೆಯಲ್ಲಿ ದೇವರಹಿಪ್ಪರಿಗೆ ಹೂವಿನಹಿಪ್ಪರಿಗೆ ಎಂಬ ಎರಡು ಊರುಗಳಿವೆ. ಮಾಚಿದೇವನು ಹುಟ್ಟಿಬೆಳೆದ ಊರೇ ಈ ಮುಂದೆ ವರ್ಣಿಸುವ ಹಿಪ್ಪರಿಗೆಯು. ಮಾಚಿದೇವರು ಹುಟ್ಟಿದ ಊರಾದುದರಿಂದ ಜನರು ಇದನ್ನು ದೇವರ ಹಿಪ್ಪರಿಗೆ ಎಂದು ಕರೆಯುತ್ತಾರೆ. ವಿಜಾಪೂರದಿಂದ ಪೂರ್ವಕ್ಕೆ ಸುಮಾರು ೨೨ ಮೈಲು ದೂರದಲ್ಲಿ ಸಿಂದಗಿ ತಾಲೂಕಿನಲ್ಲಿ ಈ ಊರಿದೆ.

ಈ ಊರಿನಲ್ಲಿ ಮಾಚಿದೇವನು ಹುಟ್ಟಿದ ಸ್ಥಳವಾಗಲಿ ಅವನ ಸಮಾಧಿಯಾಗಲಿ ನಿಶ್ಚಿತವಾಗಿ ಸಿಕ್ಕಿಲ್ಲ. ಅದರಂತೆ ಅವನ ವಂಶೀಯರೂ ಇಲ್ಲಿ ಕಾಣಿಸುವುದಿಲ್ಲ. ಆದರೆ ಕೆಲವು ಸ್ಮಾರಕಗಳು ಮಾತ್ರ ಕೆಲವಿವೆ.

ಕಲ್ಲಿನಾಥ ದೇವಾಲಯಃ— ಇದು ಕಲ್ಲಿನಾಥ ಲಿಂಗವೆಂಬ ಶಿವ ದೇವಾಲಯವು. ಮಾಚಿದೇವನ ವಚನಗಳಲ್ಲಿ ಈ ಲಿಂಗದ ಅಂಕಿತವೇ ಇದೆ. ದೇವಾಲಯವು ಪ್ರಾಚೀನವಾದುದು. ೧೨ ನೇ ಶತಮಾನಕ್ಕಿಂತಲೂ ಹಿಂದಿನದೆಂದು ಧಾರಾಳವಾಗಿ ಹೇಳಬಹುದು. ದೇವಾಲಯದಲ್ಲಿ ಅಂಥ ಶಿಲ್ಪಕಲೆಯೇನೂ ಇಲ್ಲ. ಚಿಕ್ಕದಾಗಿಯೂ ಮುಚ್ಚಟವಾಗಿಯೂ ಇದೆ. ದೇವಾಲಯದಲ್ಲಿ ಒಂದು ಕನ್ನಡ ಶಿಲಾಲಿಪಿಯಿದೆ. ದೇವಾಲಯಕ್ಕೆ ಭದ್ರವಾದ ಆವರಣವಿದೆ. ಆ ಆವರಣದಲ್ಲಿಯೇ ಒಂದು ನೀರಿನ ಕೊಳ್ಳವಿದೆ. ಈ ಊರಿಗೆ ಇದೇ ಮುಖ್ಯ ದೇವರು. ಮಾಚಿದೇವನು ಉಳಿವೆಯಿಂದ ಹಿಂತಿರುಗಿದ ಮೇಲೆ ಈ ಲಿಂಗದಲ್ಲಿಯೇ ಅಡಗಿದನೆಂದು ಐತಿಹ್ಯವಿದೆ. ಪ್ರತಿವರ್ಷ ಶ್ರಾವಣಮಾಸದ ಮೂರನೇ ಸೋಮವಾರ ಇಲ್ಲಿ

ಜಾತ್ರೆಯಾಗುತ್ತದೆ. ಈ ಪ್ರಾಂತದಿಂದ ಶ್ರೀಶೈಲಕ್ಕೆ ಕಂಬಿಯನ್ನು ಹೊತ್ತು ಕೊಂಡು ಹೋಗಿಬರುವ ಜಂಗಮರು ಈ ದೇವಾಲಯದಲ್ಲಿ ಒಂದು ದಿನ ತಂಗಿ ಹೋಗುವ ಪದ್ಧತಿಯಿದೆ. ವೀರಶೈವ ಅರ್ಚಕರೇ ಇದ್ದಾರೆ. ಕಲ್ಲಿನಾಥಲಿಂಗವೂ, ಮುಂದಿನ ವೃಷಭವೂ, ಸುಂದರವೂ ಭವ್ಯವೂ ಆಗಿವೆ.

ಕಾಳಿದಾಸನ ಗವಿ:— ವೀರಶೈವ ಪುರಾಣಗಳಲ್ಲಿ ಒಬ್ಬ ಕಾಳಿದಾಸನ ಕಥೆ ಬರುವಂತೆ ತೋರುತ್ತದೆ. ಈತನು ಕವಿ ಕುಲಗುರುವಿಂದ ಕಾಳಿದಾಸನಿಗಿಂತಲೂ ಭಿನ್ನನಾದ ಶಿವಶರಣ ಕಾಳಿದಾಸನೆಂದು ಕಾಣುತ್ತದೆ. ಕಲ್ಲಿನಾಥನ ಗುಡಿಯ ಹಿಂಭಾಗದಲ್ಲಿ ಕಾಳಿದಾಸನ ಗವಿ ಎಂಬುದೊಂದು ಪ್ರಾಚೀನ ಸ್ಥಳವಿದೆ. ಈ ಗವಿಯು ನೆಲಮಾಳಿಗೆಯಂತಿದೆ. ಇಲ್ಲಿ ಕಾಳಿದಾಸನೆಂಬ ಶಿವಶರಣನಿದ್ದನೆಂದು ಹೇಳುತ್ತಾರೆ. ಈ ಗವಿಯಿರುವ ತೋಟವನ್ನು ಕಾಳಿದಾಸನ ತೋಟವೆಂದು ಪಕ್ಕದಲ್ಲಿರುವ ಬಾವಿಯನ್ನು ಕಾಳಿದಾಸನ ಬಾವಿಯೆಂದು ಕರೆಯುತ್ತಾರೆ. ಈ ಭಾವಿಯ ನೀರಿನಿಂದ ದನಗಳಿಗೆ ಬಂದ ರೋಗ ಹೋಗುತ್ತದೆಂದು ಜನರ ನಂಬಿಕೆಯಿದೆ.

ವೀರಭದ್ರದೇವರು:— ಇದೊಂದು ಸಣ್ಣ ದೇವಾಲಯ. ಕಲ್ಲಿನಾಥನ ಗುಡಿಯಂತೆಯೇ ಇದೂ ಊರ ಮಧ್ಯೆ ಇದೆ. ಮಾಚಿದೇವನ ಉಪಾಸ್ಯ ಮೂರ್ತಿಯೆಂದೂ ಹೇಳಿರುವರು.

ಮಡಿವಾಳಸ್ವಾಮಿ ಮಠ:— ಇದೊಂದು ವಿರಕ್ತಮಠ. ಓರ್ವ ಸ್ವಾಮಿಗಳಿದ್ದಾರೆ. ಇಲ್ಲೊಂದು ಮಡಿವಾಳಸ್ವಾಮಿಯ ಗದ್ದಿಗೆಯಿದೆ. ಈ ಮಠವು ಮುರುಘಾ ಸಮಯಕ್ಕೆ ಸೇರಿದುದು. ಇಲ್ಲಿ ಲಿಪಿಗಳಾಗಲಿ, ತಾಡವೋಲೆ ಗ್ರಂಥಗಳಾಗಲಿ ಕಾಣಲಿಲ್ಲ.

ಮಡಿವಾಳಪ್ಪನ ಗದ್ದುಗೆ:— ಈ ವಿರಕ್ತ ಮಠಕ್ಕೆ ಆಧೀನವಾಗಿ ಈ ಗದ್ದಿಗೆಯಿದೆ. ಇದರಲ್ಲಿಯೂ ಲಿಂಗಾಯತ ಅರ್ಚಕರಿದ್ದಾರೆ. ಇದು ಯಾವನಾದರೊಬ್ಬ ಸ್ವಾಮಿಯ ಅಥವಾ ಶರಣನ ಗದ್ದಿಗೆಯಾಗಿ ತೋರುತ್ತದೆ. ಇದನ್ನೇ ಕೆಲವರು ಮಾಚಿದೇವನ ಸಮಾಧಿಯೆಂದು ಹೇಳುತ್ತಾರೆ. ನಂಬುವುದಕ್ಕಾಗುವುದಿಲ್ಲ. ಏತಕ್ಕೆಂದರೆ ಇದು ನಿಜವಾಗಿಯೂ ಮಾಚಿದೇವನ ಸಮಾಧಿಯಾಗಿದ್ದರೆ ಮೇಲೆ ಲಿಂಗಸ್ಥಾಪನೆಯಾಗಬೇಕಾಗಿತ್ತು. ಇದು ಹಾಗಿರದೆ ಕೇವಲ ಮುಸಲ್ಮಾನರ ಸಮಾಧಿಯಂತಿದೆ.

ಮಲ್ಲಯ್ಯನ ಗುಡಿ:— ಇದು ಮಲ್ಲಿಕಾರ್ಜುನ ದೇವಾಲಯು ಜನರು ರೂಢಿಯಲ್ಲಿ ಹೀಗೆ ಕರೆಯುತ್ತಾರೆ. ಈ ದೇವಾಲಯು ಬಹು ದೊಡ್ಡದು. ಇದರಲ್ಲಿ ಶಿವಲಿಂಗವು ನೆಲದಲ್ಲಿ ಹುಗಿದುಹೋಗಿದೆ. ಆ ಲಿಂಗವಿದ್ದ ಸ್ಥಳ ದಲ್ಲಿ ಒಂದು ಗದ್ದಿಗೆ ಕಟ್ಟಿ ಅದರ ಮೇಲೆ ಮೂರು ಕಲ್ಲುಗುಂಡು ಇಟ್ಟು ಪೂಜೆ ಮಾಡುತ್ತಾರೆ. ಮುಸಲ್ಮಾನರ ಪ್ರಾಬಲ್ಯ ಕಾಲದಲ್ಲಿ ವಿಗ್ರಹವನ್ನು ಹೊಡೆದಾರೆಂದು ಅಂಜಿ ನಿಜವಾದ ಲಿಂಗವನ್ನು ನೆಲದಲ್ಲಿ ಮುಚ್ಚಿ ಕಲ್ಲುಗುಂಡುಗಳನ್ನು ಮೇಲಿಟ್ಟು ಪೂಜೆ ಮಾಡುತ್ತಿದ್ದರಂತೆ. ಬ್ರಿಟಿಷರ ಕಾಲದಲ್ಲಿಯೂ ಆ ಪದ್ಧತಿಯೇ ನಡೆದುಬರುವುದೊಂದು ವಿಚಿತ್ರ ವಿಚಾರವಾಗಿದೆ. ಇದರ ಅರ್ಚಕರೂ ವೀರಶೈವರೇ ಆಗಿದ್ದಾರೆ.

ಈ ದೇವರಹಿಪ್ಪರಗೆಗೆ ಸಮೀಪದಲ್ಲಿಯೇ ಕೇಶಿರಾಜನ ಕೊಂಡ ಗುಳಿ, ಭೋಗಯ್ಯನ ಕೆಂಭಾವಿ, ದಾಸಿಮಯ್ಯನ ಮುದೇನೂರು, ಕಕ್ಕ ಯ್ಯನ ಕಕ್ಕಲಮೇಲಿ, ಚಂಡೇಶನ ಗೊಲ್ಲಾಳೇಶ್ವರ ಎಂಬ ಕ್ಷೇತ್ರಗಳು ಇರುತ್ತವೆ. ಕಾಲಾನುಕೂಲವಿಲ್ಲದ್ದರಿಂದ ಈ ಸ್ಥಳಗಳ ವರ್ಣನೆಯನ್ನೆಲ್ಲ ಈ ಲೇಖನದಲ್ಲಿ ಸೇರಿಸಲಾಗಲಿಲ್ಲ.

## ಜಗದೇವ ಮಲ್ಲಿಬೊಮ್ಮರ ಯಳಮೇಲಿ.

ಬಸವಪುರಾಣದಲ್ಲಿ ವಿಶೇಷತಃ ಯಾರಕಣ್ಣಿಗೂ ಬೀಳದ ಮಹಾ ತ್ಮರಿಬ್ಬರಿದ್ದಾರೆ. ಅವರೇ ವೀರಾಗ್ರಗಣ್ಯರಾದ ಜಗದೇವ ಮಲ್ಲಿಬೊಮ್ಮ ಣ್ಣಗಳು. ಬಸವ ಪುರಾಣವನ್ನು ಓದುವವರು ಬಸವಣ್ಣ, ಚನ್ನಬಸವಣ್ಣ, ಪ್ರಭುದೇವರನ್ನು ಹೊಗಳುವಂತೆ ಈ ಅಜ್ಞಾತ ವೀರರನ್ನು ಹೊಗಳುವ ದಿಲ್ಲ. ಇವರ ಬಗ್ಗೆ ದೊಡ್ಡ ಪುರಾಣಗಳಾಗಿಲ್ಲ. ಇವರ ಜಯಂತಿ ಯನ್ನು ಯಾರೂ ಆಚರಿಸುವುದಿಲ್ಲ. ಆದರೂ ವಿಚಾರಪರರ ದೃಷ್ಟಿ ಯಿಂದ ಈ ಶರಣರಿಬ್ಬರೂ ವೀರಶೈವ ಪ್ರಪಂಚದ ಸೂರ್ಯ ಚಂದ್ರರೆಂದು ಕಂಗೊಳಿಸುತ್ತಿದ್ದಾರೆ. ಶಿವಶರಣರ ಮೇಲೆ ಭಯಂಕರ ಪ್ರಸಂಗವನ್ನು ತಂದ ಆ ಬಿಜ್ಜಳರಾಯನ ಸೇಡು ತೀರಿಸಿಕೊಂಡು ನಿಜವಾದ ಗಣಾ ಚಾರವನ್ನು ಮೆರೆದು ತಮ್ಮ ಪ್ರಾಣದ ಹಂಗನ್ನು ತೊರೆದು ಪರಶಿವ ನಲ್ಲಿ ಬೆರದ ಈ ವೀರರಿಬ್ಬರ ಚರಿತ್ರೆಯು ಯಾರಿಗೆ ತಾನೇ ಮಾನ್ಯವಾ ಗಲಿಕ್ಕಿಲ್ಲ?

ವಿಜಾಪುರಕ್ಕೆ ಸುಮಾರು ೫೦ ಮೈಲು ದೂರದಲ್ಲಿ ಯಳಮೇಲಿ ಎಂಬ ಊರಿದೆ. ಅಲ್ಲಿ ಶ್ರೀಮಂತ ರಾವಸಾಹೇಬ ಶಿವಲಿಂಗರಾವ

ಜಗದೇವರಾವ ದೇಶಮುಖರೆಂಬ ವೀರಶೈವ ದೇಸಾಯಿಗಳೊಬ್ಬರಿದ್ದಾರೆ. ಇವರೇ ಯಳವೋಲಿ ದೇಸಾಯಿಗಳು. ಇವರ ಮೂಲಪುರುಷನೇ ಶೂರನಾದ ಜಗದೇವನೆಂಬ ಐತಿಹ್ಯವದೆ ಇವರ ವಂಶದಲ್ಲಿ ಆ ಹೆಸರು ಇಂದಿನ ವರೆಗೂ ನಡೆದು ಬಂದಿದೆ. ಮಲ್ಲಿಬೊಮ್ಮನೂ ಇದೇ ಊರಿನವನೆಂದು ಹೇಳು ತ್ತಾರೆ. ಇಲ್ಲಿ ವಿಶೇಷವಾದ ಸ್ಮಾರಕಗಳೇನೂ ಇಲ್ಲ. ದೇಸಾಯಿಗಳ ಅರಮನೆಯೊಂದಿದೆ. ಒಂದು ಹಳೆಯ ಕೋಟೆಯಿದೆ. ಈ ಊರಲ್ಲಿ ಸಾರಂಗಪಾಣಿ ಮಠ, ವಿರಕ್ತಮಠ ಎಂಬ ಎರಡು ಮಠಗಳಿವೆ.

ಈಶ್ವರ ದೇವಾಲಯ:— ಈ ಊರಿಗೆ ಇದು ಮುಖ್ಯ ದೇವತೆ. ಈ ದೇವಾಲಯದಲ್ಲಿ ಒಂದು ವೀರಗಲ್ಲಿದೆ. ದೇವಾಲಯದ ಹಿಂಭಾಗ ದಲ್ಲೊಂದು ಶಿಲಾಲಿಪಿ (ಶಿವಶಾಸನ) ಇದೆ. ಬಹುಭಾಗ ಭೂಮಿಯಲ್ಲಿ ಹೂಳಿ ಹೋಗಿದೆ. ಸಂಶೋಧಕರು ಇದನ್ನು ಗಮನಿಸಬೇಕಾಗಿದೆ.

ಈ ಊರಿಗೆ ಹಳೆಯ ಹೆಸರು ಎಳವೋಲಿಯೊಂದು. ಸರಕಾರಿ ದಪ್ತರದಲ್ಲಿ ಆಲವೋಲೆಂದಿದೆ. ಇದು ಮರಾಠರ ಕಾಲದಲ್ಲಿ ಬಂದ ಹೆಸರೆಂದು ತೋರುತ್ತದೆ. ಈ ಊರ ಸುತ್ತಲೂ ಇರುವ ಕಡ್ಲೆವಾಡ ಪರಗಣೆ ಆಲವೋಲ ದೇವಣಗಾಂವ ಮೊದಲಾದ ಹಳ್ಳಿಗಳಲ್ಲಿ ಬಹಳ ವಾಗಿ ಶಿಲಾಲಿಪಿಗಳೂ, ವೀರಗಲ್ಲುಗಳೂ ದೊರೆಯುತ್ತವೆಂದು ಹೇಳು ತ್ತಾರೆ. ಸಂಶೋಧಕರಿಗೆ ಇದು ಒಳ್ಳೆ ಹುಲುಸಾದ ಭೂಮಿಯಾಗಿದೆ.

ಹುತಾತ್ಮರಾದ ಜಗದೇವ ಮಲ್ಲಿಬೊಮ್ಮಗಳು ರೇಣುಕಾಚಾರ್ಯ ಪಂಡಿ ತಾರಾಧ್ಯ ಬಸವೇಶ್ವರ, ಚನ್ನ ಬಸವೇಶ್ವರ, ಅಲ್ಲಮಪ್ರಭು, ಮರುಳಸಿದ್ಧ ಕೆರೆಯ ಪದ್ಮರಸ ಪಾಲ್ಕುರಿಗೆ ಸೋಮನಾಥರೇ ಮೊದಲಾದ ವೀರ ಶೈವ ವಿಭೂತಿಗಳಂತೆಯೇ ಅಖಿಲ ವೀರಶೈವ ಸಮಾಜಕ್ಕೂ ವಂದ್ಯರಾ ಗಿದ್ದಾರೆ. ಇವರು ಎಲ್ಲಕ್ಕಿಂತಲೂ ಮಿಗಿಲಾದ ಪ್ರಾಣವನ್ನೇ ಸಮಾಜ ಸೇವೆಗಾಗಿ ಅರ್ಪಿಸಿದ್ದಾರೆ. ಇವರ ಜಯಂತಿಯಾದರೂ ವೀರಶೈವರು ಅವಶ್ಯವಾಗಿ ಆಚರಿಸಬೇಕಾಗಿದೆ.

## ಬಸವನ ಬಾಗೆವಾಡಿ.

ಕನ್ನಡನಾಡಿನಲ್ಲಿ ಬಾಗೆವಾಡಿ ಯೆಂಬ ಊರುಗಳು ಅನೇಕವಿವೆ. ಬಸವೇಶ್ವರನು ಹುಟ್ಟಿನ ಬಾಗೆವಾಡಿಯನ್ನು ಜನರು ಬಸವನಬಾಗೆವಾಡಿ ಎಂದು ಕರೆವರು. ವೀರಶೈವ ಮತೋದ್ಧಾರಕನೂ, ಕನ್ನಡ ಭಾಷಾಭಿ

ವರ್ಧಕನೂ ಸಮಾಜಸುಧಾರಕನೂ ಆದ ಶ್ರೀ ಬಸವೇಶ್ವರನ ನಾಮಸ್ಮರಣೆಯನ್ನು ವೀರಶೈವರು ಪರಮಪವಿತ್ರವೆಂದು ನಂಬಿರುವರು. ಈ ಮಹಾತ್ಮನ ವಿಚಾರವಾಗಿ ಕವಿಚಕ್ರವರ್ತಿ ಹರಿಹರದೇವ ಪಾಲ್ಕುರಿಕೆ ಸೋಮನಾಥ ಕಂಚಿ ಶಂಕರಾರಾಧ್ಯ ಭೀಮಕವಿ ಷಡಕ್ಷರದೇವ ಸಿಂಗಿರಾಜಕವಿ ಮೊದಲಾದವರು ಮಹಾ ಮಹಾ ಕಾವ್ಯಗಳನ್ನು ಬರೆದಿರುವರು. ಬಸವೇಶ್ವರನು ವೀರಶೈವ ವಿಭೂತಿಗಳಲ್ಲಿ ಎಲ್ಲರಿಗಿಂತಲೂ ಮಿಗಿಲಾದ ಕೀರ್ತಿಶಾಲಿಯಾಗಿರುವನು ಇಂತಹ ವಿಭೂತಿಯು ಜನ್ಮಸ್ಥಳವಾದ ಬಾಗೆವಾಡಿಯ ಗುರುಕುಲವಾಸಮಾಡಿದ ಕಪ್ಪಡಿ ಸಂಗಮದ ವಿಚಾರವನ್ನು ತಿಳಿಯುವದು ಪ್ರತಿಯೊಬ್ಬ ಲಿಂಗವಂತರ, ಪ್ರತಿಯೊಬ್ಬ ಕನ್ನಡಿಗರ ಕರ್ತವ್ಯವಾಗಿದೆ.

ವಿಜಾಪುರ ಜಿಲ್ಲೆಯ ಸಾಹಿತ್ಯಸಮ್ಮೇಳನಕ್ಕೆ ಬಂದಿದ್ದ ನಾನು ಈ ಹಿಂದೆ ಆರುವರ್ಷಗಳ ಮೊದಲು ಬಾಗೆವಾಡಿ ಕಪ್ಪಡಿಸಂಗಮಗಳನ್ನು ನೋಡಿದ್ದೆನಾದರೂ ಈ ಸಾರೆ ಕರ್ಣಾಟಕದ ಸುಪ್ರಸಿದ್ಧ ಇತಿಹಾಸ ಸಂಶೋಧಕರಾದ ಶ್ರೀಮಾನ್ ನಾರಾಯಣ ಶ್ರೀನಿವಾಸ ರಾಜಪುರೋಹಿತರ ಜೊತೆಯಲ್ಲಿ ಮತ್ತೆ ಈ ದಿವ್ಯಕ್ಷೇತ್ರಗಳನ್ನು ನೋಡಲು ಹೋಗಿ ಬಂದೆನು. ಮೊದಲುಸಾರೆ ನಾನು ಕೇವಲ ಭಕ್ತಿಭಾವದಿಂದ ಹೋಗಿದ್ದೆ. ಈ ಸಾರೆ ಮಾತ್ರ ಭಕ್ತಿಯಿಂದಲೇ ಅಲ್ಲದೆ ಸಂಶೋಧನಾತ್ಮಕ ದೃಷ್ಟಿಯಿಂದಲೂ ಈ ಮಹಾಕ್ಷೇತ್ರಗಳನ್ನು ನೋಡಲಿಕ್ಕೆ ಹೋಗಿದ್ದೆನು. ಅಲ್ಲಿನ ಅನುಭವವನ್ನು ಶಿವಾನುಭವ ವಾಚಕರ ಸಲುವಾಗಿ ಮುಂದೆ ವಿವರಿಸಿರುವೆನು.

ಬಸವನಬಾಗೆವಾಡಿಯು ವಿಜಾಪುರಕ್ಕೆ ೨೮ ಮೈಲು ದೂರದಲ್ಲಿದೆ. ಈಗ ಇದು ತಾಲೂಕು ಮುಖ್ಯ ಸ್ಥಳವಾಗಿದೆ. ವೀರಶೈವರ ಸಂಖ್ಯೆ ಬಹಳವಾಗಿದೆ. ಇಲ್ಲಿನ ವಿರಕ್ತಮಠದಲ್ಲಿ ಶ್ರೀ ಬಸವೇಶ್ವರ ಸ್ಮಾರಕ ಸಂಸ್ಕೃತ ಪಾಠಶಾಲೆಯಿದೆ.

ಶಿಲಾಲಿಪಿಗಳು:— ಈ ಊರಿನಲ್ಲಿರುವ ಸಾರಂಗಪಾಣಿ ಮಠದಲ್ಲಿ ಎರಡು ಶಿಲಾಲಿಪಿಗಳಿವೆ. ಅಲ್ಲದೆ ಪೋಲೀಸು ಕಚೇರಿಯಲ್ಲಿಯೂ ಒಂದು ಶಿಲಾಲಿಪಿಯಿದೆ. ಇದು ಸಾರಂಗಪಾಣಿ ಮಠದ ಲಿಪಿಗಳಂತೆ ಸ್ಪಷ್ಟವಾಗಿರದೆ ಸವೆದುಹೋಗಿದೆ. ಸಾಧನಗಳಿಲ್ಲದ್ದರಿಂದಲೂ ಲಿಪಿಗಳು ಬಹಳವಾಗಿ ಹೊಲಸಾಗಿದ್ದುದರಿಂದಲೂ ಓದಲಾಗಲಿಲ್ಲ. ಅಂತು ಇವೆಲ್ಲವೂ ಶಿವಶಾ

ಸನಗಳಾಗಿವೆ. ಲಿಪಿಗಳ ಮೇಲೆ ಲಿಂಗ, ಬಸವ, ಆಕಳು, ಸೂರ್ಯ ಚಂದ್ರರಿರುವುದೇ ಶಿವಶಾಸನದ ಗುರುತಾಗಿದೆ.

ಕೊಡೆಕಲ್ಲು ಬಸವನಮಠ:— ಇದು ಒಂದು ಮಠ. ಈ ಮಠದಲ್ಲೊಂದು ಗದ್ದಿಗೆಯಿದೆ. ಇಲ್ಲಿ ಯಾವ ದೇವರೂ ಇಲ್ಲ. ಯಾರ ಸಮಾಧಿಯೂ ಇಲ್ಲ. ಕೆಲವು ಶರಣರ ವಚನಗ್ರಂಥಗಳನ್ನಿಟ್ಟು ಪೂಜಿಸುತ್ತಾರೆ. ಆಗಾಗ್ಗೆ ಇಲ್ಲಿ ವಚನಗ್ರಂಥಗಳ ಪುರಾಣ ಪ್ರವಚನವೂ ನಡೆಯುತ್ತಿರುತ್ತವೆ. ಇಲ್ಲಿನ ಕೆಲವು ಜನರು ಈ ಗ್ರಂಥಗಳನ್ನು ಚನ್ನಾಗಿ ಕಂಠಪಾಠಮಾಡಿರುತ್ತಾರೆ.

ಕಲ್ಯಾಣದಿಂದ ಶರಣರು ಬಿಜ್ಜಳನ ಸೈನ್ಯದ ಕೂಡ ಯುದ್ಧಮಾಡಿ ತಮ್ಮ ತಮ್ಮ ಸ್ಥಳಗಳಿಗೆ ಹಿಂತಿರುಗಿದರಷ್ಟೆ? ಹಾಗೆ ಹಿಂತಿರುಗಿದ ಶಿವಶರಣರ ಗತಿಯೇನಾಯ್ತು? ಯಾರಾರು ಎಲ್ಲೆಲ್ಲಿ ನೆಲಸಿದರು? ಇತ್ಯಾದಿ ವಿಚಾರಗಳು ಇನ್ನೂ ಚನ್ನಾಗಿ ಸಂಶೋಧಿತವಾಗಿಲ್ಲ. ಅಂತು ಕಡೆಗಾಲದಲ್ಲಿ ರಾಜಭಟರು ಶಿವಶರಣರನ್ನು, ಅವರ ವಾಙ್ಮಯವನ್ನು ಬಹುವಾಗಿ ದ್ವೇಷಿಸಿದಂತೆ ಕಾಣುತ್ತದೆ. ಆಗ ಶರಣರು ತಮ್ಮ ಅನುಭವದಿಂದ ಸಿದ್ಧವಾದ ವಚನವಾಙ್ಮಯವನ್ನು ಪರವಾದಿಗಳಿಂದ ಉಳಿಸಲಿಕ್ಕೆ ಬಹಳ ಶ್ರಮಪಟ್ಟಂತೆ ತೋರುತ್ತದೆ. ಹೀಗೆ ಉಳಿಸಿದ ವಚನಶಾಸ್ತ್ರವನ್ನು ಪರರ ಕಣ್ಣಿಗೆ ಬೀಳದಂತೆ ಗೌಪ್ಯವಾಗಿಡುವ ಪದ್ಧತಿಯು ಅಂದಿನಿಂದಲೇ ಬಂದಂತೆ ತೋರುತ್ತದೆ. ಬಾಗೇವಾಡಿಯಲ್ಲಿರುವ ಈ ಮಠವು ನಮ್ಮ ತರ್ಕಕ್ಕೆ ಒಂದು ಸುತ್ತಿಯಾಗಿದೆ. ಅಲ್ಲದೆ ಕೊಡೆಕಲ್ಲು (ಕಡೆಯ ಕಲ್ಯಾಣ) ಎಂಬ ಸ್ಥಳದಲ್ಲಿಯೂ ಈ ಬಗೆಯಾದ ವಚನಗ್ರಂಥಗಳನ್ನು ಇಟ್ಟು ಪೂಜೆ ಮಾಡುವ ಮಠವೊಂದಿರುವುದಾಗಿ ಕಂಡವರು ಹೇಳುತ್ತಾರೆ. ಮುದ್ದೇಬಿಹಾಳು ತಾಲೂಕು ಹೊಕ್ಕರಾಣಿ ನಾಡಗೌಡರ ಮನೆಯಲ್ಲಿ (ಇವರು ಬಸವೇಶ್ವರನ ವಂಶೀಯರೆಂದು ತಿಳಿದು ಬಂದಿದೆ) ಒಂದು ಪೆಟ್ಟಿಗೆ ತುಂಬ ವಚನ ಗ್ರಂಥಗಳೂ, ಬಸವೇಶ್ವರ ಸಂಬಂಧಿ ವಸ್ತ್ರಾದಿಗಳೂ ಇವೆಯೆಂದೂ ಅವನ್ನು ಸದರಿಯವರು ಪೆಟ್ಟಿಗೆಯಲ್ಲಿ ಪೂಜಿಸುತ್ತಿದ್ದಾರೆಂದೂ ತಿಳಿದು ಬಂದಿದೆ. ಮೇಲೆ ಹೇಳಿದ ಕೊಡೆಕಲ್ಲ ಮಠದಲ್ಲಿನ ಗ್ರಂಥಗಳಾವೆಂಬುದನ್ನು ನಾವು ಓದಿನೋಡಲನುಕೂಲವಾಗಲಿಲ್ಲ. ಅದರಲ್ಲಿ ನಿತ್ಯಪಾರಾಯಣ ಮಾಡತಕ್ಕದ್ದು ವೀರಸಂಗಯ್ಯ ಕೃತ ನಂದಿಆಗಮವೆಂಬುದೊಂದು.

ಬಸವೇಶ್ವರ ದೇವಾಲಯ:— ಇಲ್ಲಿಯೇ ಮಾದರಾಜ ಮಾದಲಾಂಬಿಕೆಯವರು ಮೂರು ವರ್ಷ ಕಾಲ ನಂದೀವ್ರತವನ್ನು ಮಾಡಿದರೆಂದು ಪುರಾಣಗಳು ಹೇಳುತ್ತವೆ. ಇದು ನಿಜವಾಗಿಯೂ ಈಶ್ವರ ದೇವಾಲಯ. ಇಲ್ಲಿರುವ ಲಿಂಗಕ್ಕೆ ಈಗ ಸಂಗಮೇಶ್ವರ ಲಿಂಗವೆಂದು ಹೆಸರು. ಈ ಲಿಂಗದ ಮುಂದಿರುವ ವೃಷಭನೇ ಈಗ ಈ ದೇವಾಲಯದ ಮುಖ್ಯ ದೇವರಾಗಿದೆ. ಸಂಸ್ಕಾರದಿಂದ ದೇವಾಲಯಕ್ಕೆ ತಸ್ತಿಕು ಸಹ ಉಂಟೆಂದು ತಿಳಿದುಬರುತ್ತದೆ. ಈ ಶಿವದೇವಾಲಯದ ಸುತ್ತಲೂ ಆವರಣವಿದೆ. ಬಸವೇಶ್ವರನ ಮಾತಾಪಿತೃಗಳು ಇಲ್ಲಿ ನಂದೀವ್ರತವನ್ನು ಮಾಡಿದ್ದರಿಂದಲೂ ನಂದಿಯ ಅವತಾರನೆನಿಸಿದ ಬಸವಣ್ಣನು ಇಲ್ಲಿ ಅವತಾರ ಮಾಡಿದುದರಿಂದಲೂ ಈ ದೇವಾಲಯವು ಶಿವಾಲಯ ಎಂಬ ಹೆಸರನ್ನಳಿದು ಬಸವೇಶ್ವರ ದೇವಾಲಯವೆಂಬುವ ಹೆಸರಿನಿಂದ ಕರೆಸಿಕೊಳ್ಳುವ ಸ್ಥಿತಿಗೆ ಬಂದಿದೆ.

ಈ ದೇವಾಲಯಕ್ಕೆ ಮೊದಲು ಪೂರ್ವದಿಕ್ಕಿನಲ್ಲಿ ಮಹಾದ್ವಾರವೂ ಉತ್ತರ ದಕ್ಷಿಣ ದಿಕ್ಕಿನಲ್ಲಿ ಉಪದ್ವಾರಗಳೂ ಇದ್ದವು. ಈಗ ಪೂರ್ವ ದ್ವಾರವು ಮುಚ್ಚಲ್ಪಟ್ಟಿದೆ. ಉತ್ತರ ದ್ವಾರವೂ ಬಂಧಿಸಲ್ಪಟ್ಟು ಅಲ್ಲಿ ಮಲ್ಲಿಕಾರ್ಜುನ ಎಂಬ ಲಿಂಗಸ್ಥಾಪನೆಯಾಗಿದೆ. ಮೂಲ ಲಿಂಗವು ಪೂರ್ವ ಮುಖವಾಗಿದೆ. ದೇವಾಲಯವು ಈಗಿನ ಸ್ಥಿತಿಯಲ್ಲಿ ಬಹಳವಾಗಿ ವಿರೂಪ ಹೊಂದಿದೆ. ಈಗಿನ ದ್ವಾರವೂ, ಆವರಣದ ಮಹಾದ್ವಾರವೂ ದಕ್ಷಿಣಾಭಿಮುಖವಾಗಿವೆ. ಇದು ೧೨ ನೇ ಶತಮಾನಕ್ಕಿಂತ ಪೂರ್ವದ ಕಟ್ಟಡವಾಗಿ ತೋರುತ್ತದೆ. ಇಲ್ಲಿ ಶಿಲಾಲಿಪಿ ಕಣ್ಣಿಗೆ ಕಾಣಿಸಲಿಲ್ಲ. ದೇವಾಲಯದ ಪಕ್ಕದಲ್ಲಿ ಒಂದು ಪ್ರಾಚೀನವಾದ ಕೊಳವಿದೆ. ಆವರಣದಲ್ಲಿ ಸಹಗಮನದ ಕಟ್ಟೆಯೊಂದಿದೆ. ಇಲ್ಲಿ ಬಸವಣ್ಣನವರ ಮಾತಾಪಿತೃಗಳು ಸಹಗಮನ ಮಾಡಿದ ಸ್ಥಳವೆಂದು ಹೇಳುತ್ತಾರೆ.

ಈ ಊರಿನಲ್ಲಿ ಬಸವೇಶ್ವರನ ವಂಶೀಯರಾರೂ ಇಲ್ಲ. ಅವನ ವಂಶೀಯರು ಈಗಿನ ಕುಲಕರ್ಣಿಗಳಿಗೆ ತಮ್ಮ ಶ್ಯಾನುಭೋಗಿಗೆ ಹಕ್ಕನ್ನು ಮಾರಿ ಬಹಳ ದಿನಗಳ ಹಿಂದೆಯೇ ಎಲ್ಲಿಯೋ ಹೋದರೆಂದು ವಾರ್ತೆಯಿದೆ. ಈ ಕುಲಕರ್ಣಿಗಳ ಮನೆಯಲ್ಲಿ ಒಂದು ಕಂಬಿ ಇದೆ. ಜಂಗಮರು ಪ್ರತಿವರ್ಷವೂ ಇದನ್ನು ಶ್ರೀಶೈಲಕ್ಕೆ ಒಯ್ಯುತ್ತಾರೆ. ಶ್ರೀಶೈಲಕ್ಕೆ ಹೋಗುವ ಕಂಬಿಗಳಲ್ಲೆಲ್ಲಾ ಇದಕ್ಕೆ ಅಗ್ರತಾಂಬೂಲವಿದೆ. ಈ ಕುಲಕರ್ಣಿಗಳ ಮನೆಯಲ್ಲಿರುವ ಹಳೆಯ ಭಾವಿಯೊಂದನ್ನು ಬಸವನ ಭಾವಿ

ಯೆಂದು ಹೇಳುತ್ತಾರೆ. ಶ್ರೀ ಬಸವೇಶ್ವರನ ದೇವಾಲಯದಲ್ಲಿ ಪ್ರತಿ ವರ್ಷ ಶ್ರಾವಣಮಾಸದ ಮೂರನೇ ಸೋಮವಾರ ಜಾತ್ರೆಯಾಗುತ್ತದೆ. ಹಿಪ್ಪರಿಗೆಯ ಕಲ್ಲಿನಾಥನ ಜಾತ್ರೆಯೂ ಈ ಬಾಗೇವಾಡಿಯ ಜಾತ್ರೆಯೂ ಒಂದೇ ದಿವಸವಾಗುತ್ತವೆ. ಬಸವೇಶ್ವರನಿಗೂ ಮಾಚಯ್ಯನಿಗೂ ಸಂಬಂಧವಿದ್ದಂತೆ ಈ ಜಾತ್ರೆಗಳಿಗೂ ಸಂಬಂಧವಿದೆ. ಈ ಊರ ಸುತ್ತುಮುತ್ತಲೂ ಹಳ್ಳಿಗಳಲ್ಲಿ ಶಿಲಾಲಿಪಿಗಳು ಬಹಳವಾಗಿ ಸಿಗುತ್ತವೆಂದು ಹೇಳುತ್ತಾರೆ.

## ಇಂಗಳೇಶ್ವರ.

ಬಸವನು ಹುಟ್ಟುವದಕ್ಕಿಂತ ಮೊದಲು ಬಾಗೇವಾಡಿಯನ್ನು ಇಂಗಳೇಶ್ವರ ಬಾಗೇವಾಡಿಯೆಂದು ಕರೆಯುತ್ತಿದ್ದರು. ಬಸವ ಪುರಾಣಗಳಲ್ಲಿ ಸಹ ಹಾಗೆಯೇ ಇದೆ. ಬಾಗೇವಾಡಿಗೆ ಆರು ಮೈಲಿ ದೂರದಲ್ಲಿ ಇಂಗಳೇಶ್ವರವೆಂಬ ಒಂದು ಪ್ರಾಚೀನ ಪಟ್ಟಣವಿದೆ. ಅದರ ಚರಿತ್ರೆಯೂ ವರ್ಣನೆಯೂ ಬಾಗೇವಾಡಿಗಿಂತಲೂ ಎಷ್ಟೋ ಪಾಲು ಮಿಗಿಲಾಗಿದೆ. ಈ ಇಂಗಳೇಶ್ವರದ ನಿಜವಾದ ರೂಪ "ತಿಂಗಳೇಶ್ವರ" ಎಂಬುದಾಗಿ ಇದ್ದು ಜನರ ಬಾಯಲ್ಲಿ ಹದಗೆಟ್ಟು ಇಂಗಳೇಶ್ವರವಾಗಿದೆ. ೧೨ ನೇ ಶತಮಾನದಲ್ಲಿ ಈ ಊರಿನಲ್ಲಿ ಜೈನ, ವೈಷ್ಣವ, ವೀರಶೈವ ಸಮಾಜಗಳೆಲ್ಲವೂ ಉತ್ತಮ ಸ್ಥಿತಿಯಲ್ಲಿದ್ದವೆಂದು ಅಲ್ಲಿರುವ ಪ್ರಾಚೀನ ಕುರುಹುಗಳಿಂದ ನಿರ್ಧರಿಸಬಹುದಾಗಿದೆ. ಈ ಪ್ರಾಚೀನ ನಗರದ ವರ್ಣನೆಯನ್ನು ವಾಚಕರು ಮುಂದಿನ ಪುಟಗಳಲ್ಲಿ ಓದಬಹುದು.

ರೇವಣಸಿದ್ಧನ ಗವಿ:— ಪೂರ್ವದಲ್ಲಿ ಈ ನಗರವು ನಾಲ್ಕೆಂಟು ಮೈಲಿ ವಿಸ್ತಾರವಾದ ಪಟ್ಟಣವಾಗಿತ್ತೆಂದು ತೋರುತ್ತದೆ. ಈ ಊರಿನಲ್ಲಿರುವ ಸಿದ್ಧೇಶ್ವರನ ಗುಡ್ಡದಲ್ಲಿ ಒಂದು ಮನೋಹರವಾದ ಗವಿಯದೆ. ಈ ಗವಿಯು ಒಬ್ಬ ಮನುಷ್ಯನು ಕುಳಿತುಕೊಂಡು ಪ್ರವೇಶ ಮಾಡುವಷ್ಟು ಮಟ್ಟವಾಗಿದೆ. ಗವಿಯ ಬಾಗಿಲಿನಿಂದ ಸುಮಾರು ೫೦ ಮೊಳ ಒಳಕ್ಕೆ ಹೋದರೆ ಅಲ್ಲಿ ರೇವಣಸಿದ್ಧೇಶ್ವರನ ಭವ್ಯ ಮೂರ್ತಿಯಿದೆ. ಮೂರ್ತಿಯು ಸುಮಾರು ೪ ಅಡಿ ಎತ್ತರ ೨॥ ಅಡಿ ಅಗಲವಾಗಿದೆ. ಪದ್ಮಾಸನ ಹಾಕಿದೆ. ಎರಡು ಕೈಗಳನ್ನೂ ತೊಡೆಯ ಮೇಲಿಟ್ಟು ಕೊರಳಲ್ಲಿ ರುದ್ರಾಕ್ಷಿ ಸರವಿದೆ. ಮತ್ತು ವೀರಶೈವರ ಚಿನ್ಹೆಯಾದ ಕರಡಿಗೆ ಎದೆಯ ಮೇಲಿದೆ. ಕರಡಿಗೆಯು ಹಿರಿಯರು ಹಾಕಿಕೊಳ್ಳುತ್ತಿದ್ದ ಚೌಕಾಕಾರದ ಕರಂಡದಂತಿದೆ. ತಲೆಯಲ್ಲಿ ಜಡೆಯು ಮುಖದಲ್ಲಿ ಗಡ್ಡವೂ

ಬೆಳೆದಿದೆ. ತಲೆಯ ಮೇಲೆ ಐದು ಹೆಡೆ ಸರ್ಪವಿದೆ. ಇಂತಹ ಭವ್ಯ ಮೂರ್ತಿಯನ್ನು ಈ ಲೇಖಕನು ಎಲ್ಲಿಯೂ ಕಂಡಿಲ್ಲ. ಸಿದ್ಧಗಿರಿಯಲ್ಲಿ ಗವಿಯ ಮುಖದಲ್ಲಿರುವ ರೇವಣಸಿದ್ಧನ, ಶ್ರೀಶೈಲದ ಘಂಟಾಸಿದ್ಧನ ಮಠದಲ್ಲಿರುವ ರೇವಣಸಿದ್ಧನ ದೇವನಹಳ್ಳಿಯ ಕೆರೆಯಲ್ಲಿರುವ ಮರುಳಸಿದ್ಧನ, ಸಿದ್ಧಗಂಗೆ ಬೆಟ್ಟದಲ್ಲಿರುವ ಸಿದ್ಧಲಿಂಗನ ಮೂರ್ತಿಗಿಂತಲೂ ಈ ಮೂರ್ತಿಯು ದೊಡ್ಡದಾಗಿಯೂ ಭವ್ಯವಾಗಿಯೂ ಇದೆ. ಮಾಸನೂರು, ಸಿದ್ಧನಕೆರೆ, ಮಂಗಳವೇಡೆ, ಸೊನ್ನಲಿಗೆಯಲ್ಲಿರುವ ರೇವಣಸಿದ್ಧ ದೇವಾಲಯದಲ್ಲಿ ದೇವರು ಲಿಂಗಾಕಾರವಾಗಿದೆ. ಇಲ್ಲಿ ಮನುಷ್ಯಾಕಾರವಾಗಿ ಪದ್ಮಾಸನದಲ್ಲಿ ಕುಳಿತಿದೆ. ಈ ರೇವಣಸಿದ್ಧನು ಶಿವಯೋಗಿ ಶಾಂತಿಮಯ್ಯನ ಮಗನಾದ ರೇವಣಸಿದ್ಧನೇ ತದ್ಭಿನ್ನನೇ ಎಂಬುದನ್ನು ಚರ್ಚಿಸಬೇಕಾಗಿದೆ. ಅಂತು ಇದು ಒಂದು ಪ್ರಾಚೀನ ವೀರಶೈವ ಆಚಾರ್ಯಸ್ಥಾನವೆಂಬುವುದರಲ್ಲಿ ಅನುಮಾನವಿಲ್ಲ. (ಈ ಗವಿಯಲ್ಲಿಯೇ ಪಾರ್ವತೀ ಪರಮೇಶ್ವರ ಮೂರ್ತಿಯೂ, ಚಂದ್ರಪ್ರಭನ ಮೂರ್ತಿಯೂ ಇವೆ)

ಅಕ್ಕನಾಗವ್ವನ ಗವಿ:— ಇದೇ ಗುಡ್ಡದಲ್ಲಿ ಈ ಗವಿಯಿದೆ. ಬಸವೇಶ್ವರನ ಅಕ್ಕನಾದ ಈ ನಾಗಲಾಂಬಿಕೆಯು ಒಳ್ಳೆ ಯೋಗಿನಿಯೆಂದು ತೋರುತ್ತದೆ. ಕಲ್ಯಾಣಪಟ್ಟಣದಲ್ಲಿ ಸಹ ಇವಳ ಅತಿ ಭವ್ಯವಾದ ಒಂದು ಗವಿಯಿದೆ. ಈ ರೇವಣಸಿದ್ಧನ ಗುಡ್ಡದ ಗವಿಯಲ್ಲಿ ಈಕೆಯ ಗವಿಯಿದೆ. ಈ ಗವಿಯಲ್ಲಿ ೪೦-೫೦ ಗಜ ಒಳಗೆ ಹೋದರೆ ಅಲ್ಲಿ ಒಂದು ಶಿವಲಿಂಗದ ಪೀಠವೂ ಒಡೆದುಹೋದ ಅಕ್ಕನಾಗವ್ವನ ಮೂರ್ತಿಯೂ ಕಾಣುತ್ತವೆ. ಇಲ್ಲಿನ ಲಿಂಗವಂತರು ಹೊಸದಾಗಿ ಒಂದು ಕಲ್ಲಿನಿಂದ ಅಕ್ಕನಾಗಮ್ಮನ ಮೂರ್ತಿಯನ್ನು ಮಾಡಿಸಿ ಪೂಜಿಸುತ್ತಾರೆ. ಈ ಗವಿಯ ಪ್ರವೇಶವೂ ರೇವಣಗವಿಯ ಪ್ರವೇಶದಂತೆಯೇ ಶ್ರಮಸಾಧ್ಯವಾಗಿದೆ.

ಸೋಮೇಶ್ವರ ದೇವಾಲಯ:— ಇದೊಂದು ಪ್ರಾಚೀನ ಶಿವದೇವಾಲಯ. ಇದು ಜೀರ್ಣವಾಗಿ ಹೋಗಿದೆ.

ಚಂದ್ರಪ್ರಭನ ಗುಡಿ:— ಅಗ್ಗಳದೇವನು ಚಂದ್ರಪ್ರಭಪುರಾಣವನ್ನು ಬರೆದಿರುವನಷ್ಟೇ? ಆ ಕನ್ನಡ ಕಾವ್ಯದಲ್ಲಿ "ಸುರರಾಜಾರ್ಚಿತ ನಿಂಗಳೇಶ್ವರಪುರ ಶ್ರೀತೀರ್ಥಚಂದ್ರಪ್ರಭ" ಎಂದು ಹೇಳಿರುವನು. ಆ ಪುರಾಣಕ್ಕಧಿಕನಾದ ಚಂದ್ರಪ್ರಭನು ಇಲ್ಲಿಯವನೇ ಎಂದು ತೋರುತ್ತದೆ. ಕವಿಚರಿತ್ರೆಕಾರರೂ ಅಗ್ಗಳನು ಇಂಗಳೇಶ್ವರದವನಾಗಿರಬಹುದೆಂದು

ಹೇಳಿದ್ದಾರೆ ಅಗ್ಗಳ ಮಹಾಕವಿಯ ಇಷ್ಟದೈವವಾದ ಚಂದ್ರಪ್ರಭನ ಗುಡಿಯು ಇಂದು ಕಾಲಗರ್ಭದಲ್ಲಿ ಸೇರಿ ಚೂರ-ಚೂರಾಗಿ ಬಿದ್ದಿದೆ. ಚಂದ್ರಪ್ರಭನ ಮೂರ್ತಿಯನ್ನು ಯಾರೋ ಜಾಣರು ರೇವಣಸಿದ್ಧನ ಗವಿಗೆ ಸಾಗಿಸಿದ್ದಾರೆ. ಅಲ್ಲಿ ಆ ಜಿನಮೂರ್ತಿಯು ನಿಂತಿದೆ. ಸುಮಾರು ೫ ಅಡಿ ಉದ್ದ ೨ ಅಡಿ ಅಗಲದ ಆ ಭವ್ಯ ಮೂರ್ತಿಯು ಈಗಲೂ ನೋಡಿದವರ ಮನಸ್ಸಿನ ಮೇಲೆ ತನ್ನ ವೈರಾಗ್ಯದ ಮುದ್ರೆಯನ್ನೊತ್ತದೆ ಬಿಡುವುದಿಲ್ಲ.

ನಿಷದಿಗಲ್ಲುಗಳು:— ಇಲ್ಲಿ ನಿಷದಿಗಲ್ಲುಗಳೂ ಜಿನಶಾಸನಗಳೂ ಬಹಳವಾಗಿ ಸಿಕ್ಕುತ್ತವೆಯಾದುದರಿಂದ ಒಂದು ಕಾಲದಲ್ಲಿ ಇಲ್ಲಿ ಜಿನಮತವು ಊರ್ಜಿತಾವಸ್ಥೆಯಲ್ಲಿತ್ತೆಂದು ತೋರುತ್ತದೆ.

ವೀರಗಲ್ಲು:— ಇಲ್ಲಿ ವೀರಗಲ್ಲುಗಳೂ ಬಹಳವಾಗಿವೆ. ನನ್ನ ಕಣ್ಣಿಗೆ ನಾಲ್ಕಾರು ವೀರಗಲ್ಲುಗಳು ಕಂಡವು ಕಾರಣ ಪೂರ್ವದಲ್ಲಿ ಇಲ್ಲಿ ಅನೇಕ ಯುದ್ಧಗಳು ನಡೆದಿವೆಯೆಂದು ತೋರುತ್ತದೆ.

ಶಿಲಾಲಿಪಿಗಳು:— ಇಲ್ಲಿ ಅನೇಕ ಶಿಲಾಲಿಪಿಗಳು ಸಿಕ್ಕುತ್ತವೆ. ಇವುಗಳಲ್ಲಿ ದೇವಗಿರಿ ಯಾದವರು ಕಲ್ಯಾಣದ ಚಾಲುಕ್ಯರು ಕಲಚುರಿ ರಾಯಮುರಾರಿ ಸೋವಿದೇವ ಇವರ ಶಾಸನಗಳು ಮುಖ್ಯವಾಗಿವೆ. ಇವನ್ನೆಲ್ಲಾ ನಮ್ಮ ಮಿತ್ರರಾದ ರಾಜ ಪುರೋಹಿತರು ಶೀಘ್ರವಾಗಿಯೇ ಮುದ್ರಿಸಿ ಪ್ರಕಟಿಸುವುದಾಗಿ ಹೇಳಿದ್ದಾರೆ.

ಶಿಲಾಲಿಪಿಗಳಲ್ಲಿ ಈ ಪ್ರಾಂತಕ್ಕೆ "ಸಾಸಿರದ ತರ್ದೆನಾಡು ಎಂದು ಹೇಳಿದೆ.

ಸೋಮನಾಥ ದೇವಾಲಯ:— ಇದು ಬಿಜ್ಜಳನ ಮಗನಾದ ರಾಯಮುರಾರಿ ಸೋವಿದೇವನು ಕಟ್ಟಿಸಿದ್ದ. ಇದಕ್ಕೆ ಅವನು ದಾನ ಶಾಸನ ಕೊಟ್ಟಿದ್ದಾನೆ. ಇದರ ಮೇಲಿಂದ ಇದೇ ಅಲ್ಲಿ ಆಗ ಬಿಜ್ಜಳನ ನಾಡಾಗಿತ್ತೆಂದು ಸಿದ್ಧವಾಗುತ್ತದೆ. ಅವನ ಹೆಸರಿನ ಮೇಲಿಂದಲೂ ಈ ದೇವಾಲಯ ಹಾಗೂ ಶಾಸನದ ಮೇಲಿನಿಂದ ಬಿಜ್ಜಳ ಅವನ ಮಗ ಶೈವರಾಗಿದ್ದರೋ ಏನೋ ಎಂಬ ಸಂದೇಹವೂ ಬರುತ್ತದೆ. ಶಾಸನವು ಸಂಪೂರ್ಣವಾಗಿ ಪ್ರಕಟವಾಗುವ ವರೆಗೂ ಏನನ್ನೂ ನಿಶ್ಚಯ.ವಾಗಿ ಹೇಳಲಾಗುವದಿಲ್ಲ. ಈ ದೇವಾಲಯದಲ್ಲಿ ಮೂರು ಶಿವಲಿಂಗಗಳಿದ್ದು ದೇವಾಲಯವೂ ಲಿಂಗಗಳೂ ಜೀರ್ಣವಾಗಿವೆ.

ನೀಲಕಂಠ ದೇವಾಲಯಃ— ಇದೊಂದು ಶಿವದೇವಾಲಯ. ಪಾಡಿ ಯಾಗಿ ಬೀಳುತ್ತಿದೆ. ಇಲ್ಲಿಯ ಒಂದು ಶಾಸನವು ಊರೊಳಗಿನ ಗೋಪೀನಾಥ ದೇವಾಲಯದ ಗೋಡೆಗೆ ಹೋಗಿ ಸೇರಿದೆ. ಈ ಶಾಸನವು ಕಲ್ಯಾಣದ ಭೂಲೋಕಮಲ್ಲನ ಕಾಲದ್ದೆಂದು ಗೊತ್ತಾಗುತ್ತದೆ. ಇದೂ ಸಹ ಶಿವಶಾಸನ.

ಕಲ್ಲಿನಾಥ ದೇವಾಲಯಃ— ಇದು ಊರೊಳಗಿದೆ. ಕೂಡಿದ ಮಟ್ಟಿಗೂ ಚನ್ನಾಗಿದೆ. ಇದು ಪ್ರಾಚೀನ. ಲಿಂಗಾಯತ ಅರ್ಚಕರಿದ್ದಾರೆ. ಈ ದೇವಾಲಯದಲ್ಲಿರುವ ಸಪ್ತ ಮಾತೃಕೆಯರ ಮೂರ್ತಿ ಶಿಲ್ಪ ಬಹು ಚನ್ನಾಗಿದೆ.

ಗೋಪೀನಾಥ ದೇವಾಲಯಃ— ಇದು ವಿಷ್ಣು ದೇವಾಲಯ. ದೇವಗಿರಿ ಯಾದವರ ಶಾಸನವಿದೆ. ಇದು ಹರಿಶಾಸನ. ಶಾಸನದ ಮೇಲೆ ಶ್ರೀಕೃಷ್ಣನ ಮೂರ್ತಿಯಿದೆ. ಕೆಲವು ಕಾಲ ಇಲ್ಲಿ ದೇವಗಿರಿ ಯಾದವರ ಆಳಿಕೆಯಿತ್ತೆಂದು ಇದರ ಮೇಲಿಂದ ಭಾಸವಾಗುತ್ತದೆ. ಈ ದೇವಾಲಯದಲ್ಲಿರುವ ಗೋಪೀನಾಥ ವಿಗ್ರಹವು ಬಹು ಸುಂದರ ವಾಗಿದೆ. ಹೊಯ್ಸಳ ಶಿಲ್ಪವನ್ನು ಹೋಲುತ್ತದೆ. ಪ್ರಭಾವಳಿಯಲ್ಲಿ ದಶಾವತಾರವನ್ನೂ ಪಾದದ ಹತ್ತಿರ ಶ್ರೀದೇವಿ ಭೂದೇವಿ ಗರುಡರನ್ನೂ ಕೆತ್ತಿದ್ದಾರೆ. ಮೂರ್ತಿ ಅತ್ಯಂತ ಚಿತ್ತಾಕರ್ಷಕವಾಗಿದೆ. ಈ ದೇವಾಲಯ ಪುರಾತನವಾಗಿದೆ. ಬ್ರಾಹ್ಮಣರು ಅರ್ಚಕರಿದ್ದಾರೆ. ವರ್ಷಕ್ಕೆ ೬೦ ರೂಪಾಯಿ ಸರಕಾರದಿಂದ ತಸ್ತಿಕವಿದೆ. ಇದರಿಂದ ಇಂಗಳೇಶ್ವರದಲ್ಲಿ ಒಂದು ಕಾಲದಲ್ಲಿ ವೈಷ್ಣವ ಮತವು ಪ್ರಬಲವಾಗಿತ್ತೆಂದು ಊಹಿಸಬಹುದಾಗಿದೆ.

ಸಾವಳಗೆಪ್ಪನ ಮಠಃ— ಇದೊಂದು ಲಿಂಗವಂತರ ಪ್ರಾಚೀನ ಮಠವೆಂದು ತೋರುತದೆ. ಈಗ ಹಾಳುಬಿದ್ದಿದೆ.

ವಿರಕ್ತಮಠಃ—ಇದು ಇನ್ನೂ ಉತ್ತಮ ಸ್ಥಿತಿಯಲ್ಲಿದೆ. ಈ ಮಠದಲ್ಲಿಯೂ ಕೆಲವು ವೀರಗಲ್ಲು-ನಿಷದಿಗಲ್ಲು-ನಾಗವಾಜಿ ಇವು ಸಿಕ್ಕುತ್ತವೆ. ಇಲ್ಲಿ ಕೆಲವು ಪ್ರಾಚೀನ ಗ್ರಂಥಗಳಿವೆ. ಅವನ್ನು ಗದ್ದಿಗೆಯ ಮೇಲಿಟ್ಟು ಪೂಜೆಮಾಡುತ್ತಾರೆ. ಅಲ್ಲಿರುವ ಮುಖ್ಯ ಗ್ರಂಥಗಳಾವೆಂದರೆ,

೧. ಗುಮ್ಮಳಾಪುರದ ಸಿದ್ಧಲಿಂಗೇಶ್ವರ ವಚನ.

೨. ತೋಂಟದ ಸಿದ್ಧೇಶ್ವರ ವಚನ.

೩. ಬಸವೇಶ್ವರನ ವಚನ.

೪. ಸಿದ್ಧರಾಮ ಪುರಾಣ.

೫. ಬೊಮ್ಮರಸನ ರೇವಣಾಸಿದ್ಧನ ಪುರಾಣ (ಇದನ್ನು ಪ್ರತಿ ವರ್ಷ ಪಾರಾಯಣ ಮಾಡುತ್ತಾರೆ.)

೬. ಕೆಲವು ಪುರಾತನರ ವಚನಗಳು. ಇವುಗಳಲ್ಲಿ ಮೋದಲನೇ ವಚನ ಗ್ರಂಥವು ಇದು ವರೆಗೂ ಅಚ್ಚಾಗಿಲ್ಲ. ಅವಶ್ಯ ಅದನ್ನು ಪ್ರಕಟಿಸಬೇಕಾಗಿದೆ.

ಈ ಊರಲ್ಲಿ ಚಾಮುಂಡಿ ವಿಗ್ರಹ, ಮಾರುತಿ, ಸೂರ್ಯನಾರಾಯಣ ಲಿಂಗ, ಸಪ್ತಮಾತೃಕೆಯರು, ವೀರಗಲ್ಲುಗಳು ನಿಷದಿಗಲ್ಲುಗಳು, ಅನೇಕ ಒಡೆದು ಬಿದ್ದ ಶಿಲಾಲಿಪಿಗಳು ಬೇಕಾದಷ್ಟು ಲಭಿಸುತ್ತವೆ. ಈ ಸ್ಮಾರಕಗಳಿಂದ ವಿಚಾರಮಾಡಿದರೆ ಈ ತಿಂಗಳೇಶ್ವರ ಪಟ್ಟಣವು ಪೂರ್ವದಲ್ಲಿ ಬಹಳ ಪ್ರಖ್ಯಾತವಾಗಿತ್ತೆಂದೂ ವೀರಶೈವ-ಜೈನ-ವೈಷ್ಣವರೆಲ್ಲರೂ ಇಲ್ಲಿ ಊರ್ಜಿತಾವಸ್ಥೆಯಲ್ಲಿದ್ದರೆಂದೂ ತೋರಿಬರುತ್ತದೆ. ಸಾರಾಂಶ ಬಸವನ ಬಾಗೇವಾಡಿಗಿಂತಲೂ ಈ ತಿಂಗಳೇಶ್ವರವು ಅತ್ಯಂತ ಮಹತ್ವದ ಸ್ಥಾನವಾಗಿದೆ.

## ಕಪ್ಪಡಿಸಂಗಮ.

ಬಾಗೇವಾಡಿಗೆ ೩೫ ಮೈಲ ದೂರದಲ್ಲಿ ಈ ಮಹಾಕ್ಷೇತ್ರವಿದೆ. ಕೃಷ್ಣಾ ಮತ್ತು ಮಲಪ್ರಭಾ ನದಿಗಳಲ್ಲಿ ಇಲ್ಲಿ ಸಂಗಮವಾಗುತ್ತದೆ. ಆ ನದೀ ಮಧ್ಯದಲ್ಲಿಯೂ ಒಂದು ಸಂಗಮ ಲಿಂಗವಿದೆ. ಅದರ ಮೇಲೆ ಒಂದು ಮಂಟಪವೂ ಇದೆ. ನದೀ ಮಧ್ಯದಲ್ಲಿ ಒಂದು ಬಂಡೆಯೂ ಅದರಲ್ಲಿ ಒಂದು ಗವಿಯೂ ಇದೆ. ಬಸವೇಶ್ವರನು ಈ ನದೀಯ ಮಧ್ಯದ ಗವಿಯಲ್ಲಿಯೇ ಸಮಾಧಿಸ್ಥನಾಗಿ ಕುಳಿತಿರುತಿದ್ದನೆಂದು ಕೆಲವು ಭಾವಿಕರು ನಂಬಿದ್ದಾರೆ. ಕೊಡೆಕಲ್ಲಿನ ಭಕ್ತರನೇಕರು ವರ್ಷಕ್ಕೊಂದು ಸಾರಿ ಬಂದು ಈ ಗವಿಯನ್ನು ಪೂಜಿಸುತ್ತಾರೆಂದು ತಿಳಿದುಬರುತ್ತದೆ. ಜಾತವೇದ ಮಹರ್ಷಿಯೂ ಈ ಗವಿಯಲ್ಲಿ ತಪಸ್ಸು ಮಾಡುತ್ತಿದ್ದನೆಂದು ಹೇಳಿಕೆಯುಂಟು. ಈ ಗವಿಯು ಇಲ್ಲಿ ಬಹಳ ಮಹತ್ವವಾದ ಹಾಗೂ ಪವಿತ್ರವಾದ ಸ್ಥಳವೆಂದು ತೋರುತ್ತದೆ.

ದೇವಾಲಯ:— ದೇವಾಲಯವು ಬಹು ಲಕ್ಷಣವಾಗಿದೆ. ಪೂರ್ವಾಭಿಮುಖವಾಗಿದೆ. ಚೈತ್ರಮಾಸದಲ್ಲಿ ದೊಡ್ಡ ಜಾತ್ರೆಯಾಗುತ್ತದೆ. ಈ ದೇವಾಲಯದಲಿ ಒಂದು ಹಿತ್ತಾಳೆಯ ಮೂರ್ತಿಯು ಮನುಷ್ಯಾಕಾರದಲ್ಲಿ ನಿಂತಿದೆ. ಇದನ್ನು ಬಸವೇಶ್ವರನೆಂದು ಕೆಲವರು ನಂಬುತ್ತಾರೆ. ಶಿವಲಿಂಗದ ಮಧ್ಯ ಇರುವ ಬಿರುಕಿನಲ್ಲಿ ಬಸವೇಶ್ವರನು ಐಕ್ಯನಾದನೆಂದು ಭಾವಿಕ ಜನರು ನಂಬುತ್ತಿದ್ದಾರೆ. ಈ ಸಾರಂಗಪಾಣಿಯ ಮಠದಲ್ಲಿಯೇ ಅಕ್ಕನಾಗವ್ವನೂ ಬಸವಣ್ಣನೂ ಬಹುಕಾಲ ಗುರುವಾದ ಜಾತವೇದ ಮಹರ್ಷಿಯಲ್ಲಿ (ಹರಿಹರನು ಈಶಾನ್ಯ ಶಿವಗುರು ಎಂದು ಹೇಳಿದ್ದಾನೆ) ವಿದ್ಯಾಭ್ಯಾಸ ಮಾಡಿದನೆಂದು ಬಸವಪುರಾಣಗಳಿಂದ ತಿಳಿದು ಬರುತ್ತದೆ. ಇಲ್ಲಿಯೂ ವೀರಶೈವ ಅರ್ಚಕರೇ ಇದ್ದಾರೆ. ಈ ದೇವಾಲಯವು ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿ ಕಟ್ಟಿದುದೆಂದು ತಿಳಿದು ಬರುತ್ತದೆ.

ಸಾರಾಂಶಃ— ಈ ಕ್ಷೇತ್ರವು ಅತ್ಯಂತ ಸುಂದರವೂ, ಪವಿತ್ರವೂ, ದರ್ಶನೀಯವೂ ಆಗಿದೆ.

ಈ ಕ್ಷೇತ್ರಕ್ಕೆ ಒಂದು ಮೈಲಿ ದೂರದಲ್ಲಿ ಗಂಗಾಂಬಿಕೆ ನೀಲಾಂಬಿಕೆಯರು ಐಕ್ಯವಾದ ಸ್ಥಳಗಳು ಕೃಷ್ಣಾ ತೀರದಲ್ಲಿಯೇ ಇವೆ. ವಿಜಯನಗರದ ಅರಸರಿಗೂ, ಮುಸಲ್ಮಾನ ಸುಲ್ತಾನರಿಗೂ ನಡೆದ ಘೋರ ಸಂಗ್ರಾಮವು ಈ ಕ್ಷೇತ್ರಕ್ಕೆ ಸಮೀಪವಾಗಿಯೇ ಇರುವ ರಾಕ್ಷಸ-ತಂಗಡಿಗಿಯಲ್ಲಿಯೇ ನಡೆಯಿತು. ಇಲ್ಲಿ ಶಿಲಾಲಿಪಿಗಳೂ ಉಂಟು. ಈ ಪ್ರಕಾರ ವೀರಶೈವ ಕ್ಷೇತ್ರಗಳ ಚರಿತ್ರೆಯು ಅತ್ಯಂತ ರಮಣೀಯವಾಗಿದೆ.



# ಪ್ರಾರ್ಥನೆ.

೧

ಬೆಳ್ಮುಗಿಲಿನಿಂದಿಳಿವ ಸೊದೆವನಿಗಳಂತೆ
ಕಡಲಾಳದಿಂದೊಗೆವ ಮಣಿಗಣಗಳಂತೆ
ಕಲ್ಪತರುವಿಂ ಜಗುಳ್ವ ಕಮ್ಮಲರಿನಂತೆ
ಐಸಿರಿಯುಡಿಯ ದಿವ್ಯ ಸರಪಳಿಗಳಂತೆ
ವಿಶ್ವವನು ಬಂಧಿಸಿದ ಮಹಾಶಕ್ತಿಯಂತೆ
ಲೋಕದಿಂ ನಾಕಕಿಹ ನಿಶ್ರೇಣಿಯಂತೆ
ಎಲ್ಲೆಲ್ಲು ಪಸರಿಸಿಹೆ ಪ್ರಾರ್ಥನೆಯು ನಾನು!
ಎಲ್ಲರಿಗು ಸುಲಭವಾಗುತ ನಿಂತಿರುವೆನು!

೨

ನನ್ನಿಂದೆ ಕಾರಿರುಳು ಬೆಳಕ ಕಂಡಿತ್ತು!
ನನ್ನಿಂದೆ ಶೂನ್ಯತೆಯು ಪೂರ್ಣತೆಯದಾಯ್ತು!
ನನ್ನಿಂದೆ ಜಡವೆಲ್ಲ ಚೇತನವದಾಯ್ತು!
ನನ್ನಿಂದೆ ದುರ್ಲಭವು ಬಹು ಸುಲಭವಾಯ್ತು!
ಅಸುರ ನರ ಸುರರೆಲ್ಲ ನನ್ನಿಂದೆ ತಾವು
ಹೊಂದಿದರನಾಯುಸದಿ ಬಗೆವಯಕೆಡಾವ!
ನನ್ನಿಂದೆ ಬಾಲಕರು ಶಾಶ್ವತದ ಪದವ
ಪಡೆದು ಕುಡಿಯುತಲಿಹರು ನಿತ್ಯ ಸಮ್ಮುದವ!

೩

ಆ ಕೂಟ ನೋಟಮಾಟಗಳಾಂತು ನಾನು
ತಲೆವಾಗಿ ಕೈಜೋಡಿಸುತ ನಿಂತಿರುವೆನು!
"ಬೇಕಾದುದೆಲ್ಲವನು ನಾ ನಿಮಗೆ ತರುವೆ!"
ಎಂದೆನುತ ಜಗವನ್ನು ದೈನ್ಯದಲಿ ಕರೆವೆ!
ಎನ್ನ ದೀನತೆಯು ಮೇಲ್ದನಿಗೆ ಕಿವಿಗುಡದೆ,
ಎನ್ನಯದ್ಭುತ ಲೀಲೆಗೂ ಬಗೆಯು ಕುಡದೆ,
ಲೋಗವಿದು ಹಾಗೆಯೇ ಸಾಗಿರುವದೇನೋ?
ದೈನ್ಯಕೇ ಧಾರಿಣಿಯೊಳಿಂಬಿಲ್ಲವೇನೋ!

**ಈಶ್ವರ ಸಣಕಲ್ಲ ರಬಕವಿ.**

# ಪಾಶ್ಚಾತ್ಯರ ತತ್ವಜ್ಞಾನ.

ಲೇಖಕ:— ಮಿ॥ ವೀರಪ್ಪ ಯುಗಟಿ ಬಿ. ಎ. ಎಲ್. ಎಲ್. ಬಿ. ಹಾವೇರಿ.

---

ತತ್ವಜ್ಞಾನವು ಜೀವ, ಜಗತ್ತು, ಈಶ್ವರ ಈ ಮೂರು ವಸ್ತುಗಳ ಸಂಬಂಧವನ್ನು ಬೋಧಿಸುವ ಶಾಸ್ತ್ರವಾಗಿದೆ. ಸೃಷ್ಟಿಯಲ್ಲಿಯ ಪ್ರತಿಯೊಂದು ವಸ್ತುವಿನ ಮೂಲ ಕಾರಣವನ್ನು ಕಂಡುಹಿಡಿಯುವದೇ ತತ್ವಜ್ಞಾನದ ಅದ್ಯಂತ ಕರ್ತವ್ಯವು. ಆದ್ದರಿಂದಲೇ ತತ್ವಶಾಸ್ತ್ರವು ಎಲ್ಲ ಶಾಸ್ತ್ರಗಳ ತಳಹದಿಯೆಂದು ಕರೆಯಲ್ಪಡುತ್ತದೆ. ಆಧಿಭೌತಿಕ ವಿಚಾರದಿಂದ ಅಧ್ಯಾತ್ಮಿಕ ವಿಚಾರಕ್ಕೆ ತಿರುಗುವದೇ ತತ್ವಜ್ಞಾನದ ಬೆಳವಣಿಗೆಯ ಚಿನ್ಹವಾಗಿದೆ.

ಪಾಶ್ಚಾತ್ಯ ತತ್ವಜ್ಞಾನವನ್ನು ಮೂರು ವಿಧವಾಗಿ ಅಂದರೆ (೧) ಸನಾತನ, (೨) ಮಧ್ಯವರ್ತಿ ಮತ್ತು (೩) ಆಧುನಿಕ ವಿಚಾರಗಳೆಂದು ವಿಭಾಗಿಸಬಹುದು. ಸನಾತನಿಗಳು (ಗ್ರೀಕರು) ಸೃಷ್ಟಿ ಜಗತ್ತು ನಿಜವಾದದ್ದೆಂತಲೂ ಮನುಷ್ಯರು ದೇವತೆಗಳು ಮತ್ತು ಪ್ರಕೃತಿಯು ಈ ಜಗತ್ತಿನ ಅಂಗಗಳೆಂತಲೂ ಸೃಷ್ಟಿಯು ಜೀವಮಯವಾದದ್ದೆಂತಲೂ ತಿಳಿದರು. ಇದಕ್ಕೆ ಬಾಹ್ಯದೃಷ್ಟಿಯ ವಿಚಾರವೆಂದು ಹೇಳಬಹುದು. ಮಧ್ಯವರ್ತಿ ಕಾಲದ ವಿಚಾರಕ್ಕೆ ಆಪ್ತವಾಕ್ಯ ಅಥವಾ ಪೂರ್ವದ ನಿಯಮಗಳಿಗನುಸಾರವಾಗಿ ವಿಚಾರಮಾಡುವದೆಂದು ಹೇಳಬಹುದು. ಆಧುನಿಕ ವಿಚಾರವು ಅಂತರಂಗಿಕ ಅಥವಾ ಅಧ್ಯಾತ್ಮಿಕ ವಿಚಾರವೆಂದು ಹೇಳಲ್ಪಡುವದು. ನಿಜವಸ್ತು ತನ್ನಲ್ಲಿಯೇ ಇದ್ದು ಬಾಹ್ಯದಲ್ಲಿಲ್ಲವೆಂಬುದು.

ಯುರೋಪಖಂಡದಲ್ಲಿ ತತ್ವವಿಚಾರವು ಮೊದಲು ಪ್ರಾರಂಭವಾದದ್ದೆಂದರೆ ಕ್ರಿ. ಪೂ. ೭೦೦ ನೇ ಶತಮಾನದಲ್ಲಿ ಗ್ರೀಸದೇಶದಲ್ಲಿ. ಆಗ ಗ್ರೀಕರು ಜಗತ್ತಿನ ವ್ಯಾಪಾರದಲ್ಲಿ ಮುಂದುವರಿದಿದ್ದು ತಮ್ಮ ವಸಾಹತಗಳನ್ನು ಮೆಡಿಟರೇನಿಯನ್ ಸಾಗರದ ದಂಡೆಗುಂಟ ಮಾಡಿಕೊಂಡಿದ್ದರು. ಅವರಲ್ಲಿ ಸಂಪತ್ತು ತುಳುಕುತ್ತಿದ್ದದರಿಂದ ವಿಚಾರವಿನಿಮಯಕ್ಕೆ ಅವಕಾಶ ದೊರೆತಿತು. ಗ್ರೀಸದ ಮೊದಲನೆಯ ತತ್ವಜ್ಞಾನಿಯು ಥೇಲೀಸ ಎಂಬವನು. ಇವನು ಕ್ರಿ. ಪೂ. ೬೪೦ ರಲ್ಲಿ ಇದ್ದವನು. ಇವನು ಮಿಲೆಟಸ್ ಪಟ್ಟಣದ ಶ್ರೀಮಂತ ವ್ಯಾಪಾರಿಯು. ಇವನು ಗ್ರೀಸದ ಸಪ್ತಋಷಿಗ

ಳಲ್ಲಿ ಒಬ್ಬನಾಗಿ ಗಣಿಸಲ್ಪಟ್ಟಿದ್ದನು. ಇವನು ಜ್ಯೋತಿಷ ಗಣಿತ ಮತ್ತು ಭೌತಿಕ ಶಾಸ್ತ್ರಗಳಲ್ಲಿ ಪ್ರವೀಣನಿದ್ದನು. ಇವನು ಜಗತ್ತಿಗೆ ಕಾರಣ ವಾದ ಒಂದೇ ಮೂಲವಸ್ತುವಿರುವದೆಂತಲೂ ಅದು ಚಲನಾತ್ಮಕವಾಗಿ ರುವದೆಂತಲೂ, ಸಜೀವನಾದದ್ದೆಂತಲೂ ಆ ಮೂಲ ವಸ್ತುವು ಜಲ ವೆಂತಲೂ ಪ್ರತಿಪಾದಿಸಿದನು. ಜಲವು ಅನೇಕ ವಿಧವಾಗಿ ರೂಪಾಂತ ರಹೊಂದತಕ್ಕದ್ದಾಗಿರುವದರಿಂದ ಅದರಿಂದ ಅನೇಕ ವಸ್ತುಗಳು ಸೃಷ್ಟಿ ಸಲ್ಪಡುತ್ತವೆಂದು ಅವನ ಭಾವನೆಯಾಗಿತ್ತು. ನೀರು ಜಲಜನಕ ಮತ್ತು ಆಮ್ಲಜನಕಗಳ ಸಂಯೋಗದಿಂದಾಗಿರುವದೆಂದು ರಸಾಯನ ಶಾಸ್ತ್ರದಿಂದ ಸಿದ್ಧವಾಗಿದೆ. ಈ ಸಂಗತಿಯು ಥೇಲೀಸನಿಗೆ ಅರಿಕೆಯಾಗಿರಲಿಲ್ಲ. ಅವನ ಪ್ರತಿಪಾದನೆಯು ತಪ್ಪಾದಾಗ್ಯೂ ವಿಚಾರಕ್ರಾಂತಿಗೆ ಅವಕಾಶವನ್ನು ಕಲ್ಪಿ ಸಿದನು. ಜಲವು ಮೂಲವಸ್ತುವೆಂದು ಹೇಳುವದಕ್ಕೆ ಕಾರಣವೇನಂದರೆ ಜಲವು ಜೀವಧಾರಣ ಮತ್ತು ಪೋಷಣ ಮಾಡತಕ್ಕದ್ದಾಗಿರುವದರಿಂದ ಮತ್ತು ಜಲವು ಆವೆಯ ಮತ್ತು ಬರ್ಫದ ರೂಪಾಂತರವನ್ನು ಹೊಂದು ವದರಿಂದ ಮತ್ತು ಜಲವು ಆತ್ಮಚಲನೆಯುಳ್ಳದ್ದರಿಂದ ಥೇಲೀಸನು ಜಲ ದಿಂದ ಸರ್ವಸೃಷ್ಟಿಯುತ್ಪನ್ನವಾಗುವದೆಂದು ತಿಳಿದನು. ಥೇಲೀಸನು ಬ್ಯಾಬಿ ಲೋನಿಯಾ ಜನರಿಂದ ಜ್ಯೋತಿಷ ಶಾಸ್ತ್ರವನ್ನೂ ಈಜಿಪ್ತದೇಶದಿಂದ ರೇಖಾ ಗಣಿತವನ್ನೂ ಸಂಪಾಧಿಸಿ ಗ್ರೀಸದಲ್ಲಿ ಪ್ರಚಾರಮಾಡಿದನು. ಥೇಲೀಸನ ವಿಚಾರವು ವೇದದ ಪ್ರಾರಂಭಕಾಲದ ಜನರು ಅಗ್ನಿ, ವಾಯು, ಮೊದ ಲಾದ ಭೌತಿಕ ವಸ್ತುಗಳನ್ನು ದೇವತೆಗಳೆಂದು ತಿಳಿದ ವಿಚಾರವನ್ನು ಹೋಲುತ್ತದೆ.

ಅನ್ಯಾಗ್ಜಿಮ್ಯಾಂಡರ ಕ್ರಿ. ಪೂ. ೬೧೧. ಇವನು ಪ್ರತಿಪಾದಿಸಿದ್ದೇನಂ ದರೆ ಇಂದ್ರಿಯಗೋಚರವಾದ ಯಾವ ವಸ್ತುವೂ ಸೃಷ್ಟಿಯಲ್ಲಿಯ ಬದ ಲಾವಣೆಯನ್ನು ವಿವರಿಸಲಾರದ್ದರಿಂದ ಮೂಲ ವಸ್ತುವು ಅನಂತವಾ ದದ್ದೆಂದು ಹೇಳಿದನು. ಪಾಶ್ಚಾತ್ಯ ತತ್ವಜ್ಞಾನಿಗಳಲ್ಲಿ ಇವನದೇ ಮೊದ ಲನೆಯ ದೈವಿಕ ಕಲ್ಪನೆಯೆಂದು ಹೇಳಬಹುದು. ಇವನು ಥೇಲೀಸನ ಸ್ನೇಹಿತನಿದ್ದು ಅವನ ತತ್ವಕ್ಕೆ ಇವನು ಒಪ್ಪಲಿಲ್ಲ. ಜಗ ತ್ತಿನಲ್ಲಿ ಶೀತೋಷ್ಣ ಮುಂತಾದವುಗಳ ನಡುವೆ ದ್ವಂದ್ವಯುದ್ಧವು ನಡೆ ದಿದ್ದು ಇವುಗಳಲ್ಲಿ ಯಾವದಾದರೊಂದನ್ನು ಮೂಲ ವಸ್ತುವಾಗಿ ತಿಳಿ ದರೆ ಉಳಿದವು ಅದೃಶ್ಯವಾಗುವವಲ್ಲದೆ ಜಗತ್ತು ಸ್ಥಿರವಾಗಿ ಉಳಿಯು

ಲಾರದೆಂದು ಅನಾಗ್ಜಿವ್ಯಾಂಡರನು ಪ್ರತಿಪಾದಿಸಿದನು. ಅನಂತ ವಸ್ತುವಿಗೆ ನಿಶ್ಚಿತರೂಪವಿಲ್ಲವೆಂದು ಇವನು ಹೇಳಿದನು. ಅನಂತವು ಭೌತಿಕ ವಸ್ತುವಾಗಿದ್ದು ಅವನ ದೈವಿಕ ಕಲ್ಪನೆಯು ಪಾರಮಾರ್ಥಿಕವಾಗಿರಲಿಲ್ಲ (*Spiritual*). ಅನಂತ ವಸ್ತುವಿನಿಂದ ಶೀತೋಷ್ಣಗಳ ಉತ್ಪತ್ತಿಯಾಗುವದು. ಇವುಗಳ ಸಂಯೋಗದಿಂದ ಅನೇಕ ವಿಧವಾದ ಸೃಷ್ಟಿಯುತ್ಪನ್ನವಾಗುವದು. ಇವುಗಳ ಅಗಲುವಿಕೆಯಿಂದ ಲಯವುಂಟಾಗುವದು. ಮನುಷ್ಯನು ಉಳಿದ ಪ್ರಾಣಿಗಳಿಂದ ಉತ್ಪನ್ನವಾಗಿರುವನೆಂದು ಇವನು ಹೇಳುತ್ತಾನೆ. ಇದರಲ್ಲಿ ಉತ್ಕ್ರಾಂತಿವಾದದ ಬೀಜವಿದ್ದದ್ದು ಕಂಡು ಬರುತ್ತದೆ (*Evolution*). ವಾಯು ಮತ್ತು ಶೀತಗಳಿಂದ ಭೂಮಿಯುತ್ಪನ್ನವಾಗಿರುವದೆಂಬ ಈತನ ಹೇಳಿಕೆಯು ಶಾಸ್ತ್ರಸಮ್ಮತವಾಗಿರುವದಿಲ್ಲ.

ಅನ್ಯಾಗ್ಜಿಮಿನಿಸ್ ಕ್ರಿ. ಪೂ. ೫೬೦. ಇವನು ಜಗತ್ತಿನಲ್ಲಿ ಮೂಲ ವಸ್ತುವು ವಾಯುವೆಂದು ಹೇಳಿದನು. ಯಾವ ವಸ್ತುವಿನಿಂದ ಸೃಷ್ಟಿಯುತ್ಪನ್ನವಾಗುವದೋ ಅದರಲ್ಲಿಯೇ ಲಯವಾಗುವದು. ವಾಯುವು ದೈವಿಕವಿದ್ದು ಅದರಿಂದ ದೇವತೆಗಳು ಮತ್ತು ಜಗತ್ತು ಉಂಟಾದವು. ಜೀವಿಗಳಲ್ಲಿ ಪ್ರಾಣವಾಯುವು ಮೂಲಾಧಾರ ಮತ್ತು ದೇಹಕ್ಕೆ ಜೀವವು ಮೂಲಾಧಾರ. ಗಾಳಿಯು ಸೂಕ್ಷ್ಮ ಸ್ಥಿತಿಯನ್ನು ಹೊಂದುವದರಿಂದ ಮತ್ತು ಘನರೂಪವಾಗುವದರಿಂದ ಅನೇಕ ವಸ್ತುಗಳಾಗಿ ಪರಿಣಮಿಸುವದು. ಭೂಮಿಯು ಸಪಾಟಾದ ಗೋಲಾಕಾರವಿದ್ದು ಗಾಳಿಯಲ್ಲಿ ತೇಲುತ್ತಿರುವದು. ಭೂಮಿಯಿಂದ ಹೊರಟ ತಂಪು ಮೇಲಕ್ಕೆ ಹೋಗಿ ಸೂಕ್ಷ್ಮ ಸ್ಥಿತಿಯನ್ನು ಹೊಂದಿದಾಗ ಅಗ್ನಿಯಾಗುವದು. ನಕ್ಷತ್ರಗಳೂ, ಚಂದ್ರ ಸೂರ್ಯರೂ ಇದೇ ಅಗ್ನಿಯಿಂದ ಆದವು. ಸೂರ್ಯ ಚಂದ್ರ ಮೊದಲಾದ ಗ್ರಹಗಳು ಭೂಮಿಯ ಸುತ್ತಲೂ ತಿರುಗುವವು. ಇದರಿಂದ ಹಗಲುರಾತ್ರಿಗಳುಂಟಾದವು. ಈ ವಿಚಾರವು ಹಿಂದೂ ಜನರ ವಿಚಾರದಂತೆಯೇ ಇದೆ. ಆದರೆ ಆಧುನಿಕ ಜ್ಯೋತಿಷ ಶಾಸ್ತ್ರವು ಸೂರ್ಯನ ಸುತ್ತಲೂ ಭೂಮಿಯು ಸುತ್ತುತ್ತದೆಂದು ಸಿದ್ಧಮಾಡಿರುವದು. ಅನ್ಯಾಗ್ಜಿಮಿನಿಸನು ಎಲ್ಲ ವಸ್ತುಗಳು ಗುಣಸ್ವಭಾವದಿಂದ ಒಂದೇ ಸ್ವರೂಪವಾಗಿರುವವೆಂತಲೂ ಗುಣವಿಭೇದದಿಂದ ಪರಿಣಾಮಭೇದವಾಗಿ ಕಂಡುಬರುತ್ತವೆಂತಲೂ ಹೇಳಿದನು.

ಗ್ಜೆನೋಫೆನಿಸ್— ಕ್ರಿ. ಪೂ. ೫೭೦ ಮೇಲೆ ಹೇಳಿದ ತತ್ವಜ್ಞಾನಿಗಳಂತೆಯೇ ಇವನು ಅದ್ವೈತಿಯು (*Monism*). ಸೃಷ್ಟಿಯ ಮೂಲ ಭೂತವಸ್ತುವು ದೇವರೆಂದು ಇವನು ಸ್ಪಷ್ಟವಾಗಿ ಹೇಳಿದನು. ದೇವರು ಗೋಳಾಕಾರವಾಗಿದ್ದಾನೆಂದು ಹೇಳುತ್ತಾನೆ. ಹೀಗೆ ದೇವರು ಭೌತಿಕ ರೂಪವುಳ್ಳವನಾದಾಗ್ಯೂ ಅವನು ಸರ್ವಜ್ಞನೂ ಪೂಜ್ಯನೂ ಇದ್ದಾನೆಂದು ಹೇಳುತ್ತಾನೆ. ದೇವರು ಒಬ್ಬನಾದಾಗ್ಯೂ ಸರ್ವವೂ ಅವನೇ ಆಗಿದ್ದಾನೆ. (*God is one and all*) ಈ ವಿಚಾರವೂ ಉಪನಿಷತ್ತುಗಳಲ್ಲಿ ಹೇಳಿದ 'ಏಕಂ ಸತ್ ವಿಪ್ರಾ ಬಹುಧಾ ವದಂತಿ' ಎಂಬ ವಿಚಾರವೂ ಒಂದೇ ಆಗಿದೆ. ದೇವರು ಸರ್ವಶ್ರೇಷ್ಠನೂ, ಅನುಪಮೇಯನೂ ಆಗಿದ್ದಾನೆ. ಮೂಲ ವಸ್ತುವು ಬದಲಾವಣೆಹೊಂದುತ್ತದೆಂಬ ಮೇಲೆ ಹೇಳಿದ ಮಿಲೆಸಿಯನ್ ಪಂಥದ ಗ್ರೀಕ ತತ್ವಜ್ಞಾನಿಗಳ ಮತಕ್ಕೆ ಇವನು ಸಮ್ಮತಿಸಲಿಲ್ಲ. ಮೂಲ ವಸ್ತುವು ಬದಲಾವಣೆಹೊಂದತಕ್ಕದ್ದಲ್ಲವೆಂದು (*Unchange-able*) ಇವನು ಹೇಳಿದನು. ಮಿಲೆಸಿಯನ್ ಪಂಥವರಿಗೆ ಯಾವ ವಸ್ತುವು ಹೆಚ್ಚು ಚಲನೆಯುಳ್ಳದ್ದೋ ಅದು ಹೆಚ್ಚು ಸಜೀವವಾದದ್ದು ಅಂದರೆ ಜೀವ ಮತ್ತು ಕ್ರಿಯಾಶಕ್ತಿ (*Activity*) ಗಳು ಒಂದೇ ಆಗಿದ್ದವು. ಆದರೆ ಗ್ಜೆನೋಫೆನಿಸನ ಮತವು ಇದರ ವ್ಯತಿರಿಕ್ತವಾಗಿತ್ತು. ದೇವರು ಅಚಲನಾಗಿದ್ದು ಎಲ್ಲ ಜನರನ್ನು ಅನಾಯಾಸದಿಂದ ಆಳುತ್ತಾನೆ. ಎಂದು ಇವನು ಹೇಳುತ್ತಾನೆ. ಇವನನ್ನು ಪ್ರಕೃತಿಯು ಜೀವಮಯವಾದದ್ದು (*Hylozoist*) ಎಂದು ಹೇಳುವ ಪಂಥಕ್ಕೆ ಸೇರಿಸಬಹುದು.

ಹೆರಾಕ್ಲೈಟಸ್ ಕ್ರಿ. ಪೂ. ೫೩೬. ಇವನು ಎಫಿಸಸ್ ಪಟ್ಟಣದ ಶ್ರೀಮಂತ ನಿವಾಸಿಯು. ಇವನು ಜಗತ್ತನ್ನು ತಿರಸ್ಕಾರ ದೃಷ್ಟಿಯಿಂದ ನೋಡಿದನು. ಅವನ ಏಕಾಂತವಾಸದಿಂದಲೂ, ಉಲ್ಲಾಸವಿರತಿಯಿಂದಲೂ ಅವನಿಗೆ 'ಅಳುವ ತತ್ವಜ್ಞಾನಿ' ಯೆಂದು ಹೆಸರುಂಟಾಯಿತು. ಮೂಲ ವಸ್ತುವು ಅಗ್ನಿಯೆಂದು ಇವನು ಹೇಳುತ್ತಾನೆ. ಅಗ್ನಿಯು ಯಾವಾಗಲೂ ರೂಪಾಂತರ ಹೊಂದತಕ್ಕದ್ದು. ಅಗ್ನಿಯಂತೆಯೇ ದೇವರು ಸಹ ಅನೇಕ ರೂಪ ಧರಿಸುತ್ತಾನೆ. ಯಾವ ವಸ್ತುವೂ ಶಾಶ್ವತವಾಗಿಲ್ಲ. ನಾವು ಒಂದೇ ಪ್ರವಾಹದಲ್ಲಿ ಎರಡುಸಾರೆ ಕಾಲಿಡಲು ಶಕ್ಯವಿಲ್ಲ. ಯಾಕೆಂದರೆ ಕ್ಷಣಕ್ಷಣಕ್ಕೂ ಹೊಸ ನೀರು ಹರಿಯುವದು. ಅಗ್ನಿಗೆ ಊರ್ಧ್ವ ಮತ್ತು ಅಧೋಮುಖವುಳ್ಳ ಎರಡು ಗತಿಗಳುಂಟು. ಅಗ್ನಿಯು ಅಧೋಮಾರ್ಗ

ವಾಗಿ ವಾಯುವಾಗಿ, ವಾಯುವಿನಿಂದ ನೀರಾಗಿ, ನೀರಿನಿಂದ ಭೂಮಿ ಯಾಗಿ ಪರಿಣಮಿಸುವದು. ಊರ್ಧ್ವಮುಖವಾಗಿ ಭೂಮಿಯು ನೀರಾಗುವದು, ನೀರು ವಾಯುವಾಗುವದು, ವಾಯು ಅಗ್ನಿಯಾಗುವದು. ಪ್ರತಿಯೊಂದು ವಸ್ತುವು ವಿರೋಧಾತ್ಮಕ ವಸ್ತುಗಳ ಸಂಯೋಗದಿಂದಾಗಿದೆ. ಇದರಿಂದ ಸಮತ್ವ ಉಂಟಾಗುವದು. ಈ ಸಮತ್ವದಿಂದಲೇ ವಸ್ತುವು ಶಾಶ್ವತವಾದದ್ದೆಂಬ ಭಾಸವು ನಮಗುಂಟಾಗುವದು. ಮನುಷ್ಯನು ಮೂಲ ವಸ್ತುವಾದ (*cosmic substance*) ಅಗ್ನಿಯ ಅಂಶವಾಗಿದ್ದು ಪೃಥ್ವಿ ಅಪ್ಪು, ವಾಯುವಿನಿಂದುಂಟಾದ ಶರೀರದಲ್ಲಿ ಬದ್ಧನಾಗಿರುವನೆಂದು ಹೆರಾಕ್ಲೈಟಸನ ಮತವು. ಮರಣವುಂಟಾದಾಗ ಈ ಅಗ್ನಿಯ ಅಂಶವಾದ ಆತ್ಮವು ಮುಕ್ತವಾಗಿ ಮೂಲಾಗ್ನಿಯಲ್ಲಿ ಬೆರೆಯುವದು.

ಇವನು ಮನುಷ್ಯನ ಸ್ಥಿತಿಯನ್ನು ಎರಡು ವಿಧವಾಗಿ ಚಿತ್ರಿಸಿದನು. ಬುದ್ಧಿಗನುಸಾರವಾದ ಸ್ಥಿತಿ ಮತ್ತು ಇಂದ್ರಿಯಗಳಿಗನುಸಾರವಾದ ಸ್ಥಿತಿ. ಬುದ್ಧಿಯು ನಿಜವಾದ ಜ್ಞಾನವನ್ನು ಕೊಡುವದು. ಇಂದ್ರಿಯಗಳು ಮಾಯಾ ಪ್ರಪಂಚವನ್ನು ತೋರಿಸುವವು. ಬುದ್ಧಿವಂತನು ಸಂಭವಿಸಿದ್ದನ್ನು ಸೈರಿಸಿಕೊಳ್ಳುವನು. ಯಾಕೆಂದರೆ ಅದು ಅನಿವಾರ್ಯವಾದದ್ದೂ, ನ್ಯಾಯವಾದದ್ದೂ ಎಂದು ಅವನಿಗೆ ಗೊತ್ತುಂಟು. ಬುದ್ಧಿವಂತನ ಮತವೇ ಸಮಾಜಕ್ಕೆ ಮಾನ್ಯವಾದದ್ದು. ಹೆರಾಕ್ಲೈಟಸನು ಗಹನ ವಿಚಾರಿಯಾಗಿದ್ದು ಅವನ ಭೌತಿಕ ಸಿದ್ಧಾಂತವು ಆಧುನಿಕ ಸೃಷ್ಟಿಯ ನಿಯಮ (*Natural law*) ಮತ್ತು ಸಂಬಂಧಾತ್ಮಕ ನಿಯಮ (*law of relativity*) ಗಳ ಆಧಾರವಾಗಿರುವದು ಕಂಡುಬರುತ್ತದೆ. ಎಲ್ಲ ವಸ್ತುಗಳಲ್ಲಿ ಆತ್ಮವು ನಿಜವಾದದ್ದು. ಜ್ಞಾನವೇ ಅದರ ಗುಣವು ಆತ್ಮವು ಮೂಲಾಗ್ನಿಯ ಅಂಶವಾಗಿರುವದರಿಂದ ಅದು ಅಮರವಾಗಿದೆ. ಗ್ನಿಯು ಊರ್ಧ್ವಮುಖವಾಗಿರುವಾಗ ಮನುಷ್ಯನು ಜಾಗ್ರದವಸ್ಥೆಯುಳ್ಳವನೂ ಜೀವಂತನಾಗಿಯೂ ಇರುವನು. ಅಧೋಮುಖವಾಗಿರುವಾಗ ನಿದ್ರೆ ಮತ್ತು ಮರಣವನ್ನು ಹೊಂದುವನು.

ಪಾರ್ಮೆನಿಡೀಸ್:—ಕ್ರಿ. ಪೂ ೫೧೫. ಈತನು ಈಲಿಯಾ ಪಟ್ಟಣದ ನಿವಾಸಿಯೂ ರಾಜಕಾರಣಪಟುವೂ ಆಗಿದ್ದನು. ಮೂಲವಸ್ತುವು ಸತ್ (*Being*) ಅಥವಾ ಜ್ಞಾನವೆಂದು ಇವನು ಹೇಳಿದನು. ಆದರೆ ಸತ್ ಇದು ಪ್ರಕೃತಿ ಇರುವದೆಂದೂ ಸ್ಥಳವನ್ನು ಆಕ್ರಮಿಸುವದೆಂದೂ ಅಸತ್ತು

ಬರಿದಾದ ಸ್ಥಳವೆಂದೂ ಹೇಳಿದನು (*empty space*) ಸದ್ವಸ್ತುವು ಒಂದೇ ಇದ್ದು, ಶಾಶ್ವತವಾದದ್ದೂ, ಅವ್ಯಯ, ಅವಿಕಾರಿ ಮತ್ತು ಪ್ರಾಕೃತಿಕ ವಾದದ್ದು. ಇದು ಗೋಳಾಕಾರವಾಗಿದೆ. ಇದೊಂದೇ ನಿತ್ಯವಾದದ್ದು. ಅಸತ್ತು ಅಥವಾ ಬರಿದಾದ ಸ್ಥಳ, ವಸ್ತುಗಳ ಅನೇಕತ್ವ ಚಲನೆ ಮತ್ತು ವಸ್ತುಗಳ ರೂಪಾಂತರ ಇವುಗಳ ಅಸ್ತಿತ್ವವೇ ಇಲ್ಲ. ಇವುಗಳ ತೋರಿಕೆಯು ಮಾಯಾ ಮಯವಾದದ್ದು. ಹೈರಾಕ್ಲೈಟಸನಂತೆ ಇವನೂ ಬುದ್ಧಿಯಿಂದ ಸತ್ಯಜ್ಞಾನವುಂಟಾಗುವದೆಂತಲೂ ಇಂದ್ರಿಯಗಳಿಂದ ನಿತ್ಯಜ್ಞಾನವಾಗುವದಿಲ್ಲವೆಂತಲೂ ಹೇಳಿದನು. ಆದರೆ ಈತನ ಸಾರ್ವತ್ರಿಕವಾದ ಸ್ಥಿರತೆಯ ಸಿದ್ಧಾಂತವು (*universal permanence*) ಹೆರಾಕ್ಲೈಟಸನ ಸಾರ್ವತ್ರಿಕವಾದ ಬದಲಾವಣೆಯ ಸಿದ್ಧಾಂತವೂ (*universal change*) ಪರಸ್ಪರವಿರೋಧವಿದ್ದು ಈರ್ವರೂ ಏಕತ್ವವಾದಿಗಳೇ ಇದ್ದಾರೆ (*Monists*). ಈ ವಿರೋಧಾತ್ಮಕ ಸಿದ್ಧಾಂತಗಳನ್ನು ಮೇಳಗೂಡಿಸುವದಕ್ಕೆ ಪರಿಪಕ್ವವಾದ ಅನುಭವಜ್ಞಾನವು ಬೇಕಾಗಿತ್ತು. ಆದ್ದರಿಂದ ಈ ಸಮಸ್ಯೆಯನ್ನು ಬಿಡಿಸಲು ಗ್ರೀಕ ತತ್ವಜ್ಞಾನಿಯು ಸ್ವಾಭಾವಿಕವಾಗಿ ಬಹುತ್ವವಾದದ ಕಡೆಗೆ ಲಕ್ಷವನ್ನು ತಿರುಗಿಸಬೇಕಾಯಿತು (*pluralism*). ಪಾರ್ಮೆನಿಡಿಸನು ಅನೇಕವಾಗಿ ತೋರುವ ವಸ್ತುಗಳೂ ಚಲನೆಯೂ (*motion*) ಬದಲಾವಣೆಯೂ (*change*) ಅಸತ್ಯವೆಂದು ಹೇಳಿದನು. ಅವನು ವಿಚಾರದೃಷ್ಟಿಯನ್ನೂ (*world of thought*) ದೃಶ್ಯಸೃಷ್ಟಿಯನ್ನೂ (*world of phenomena*) ಸಮನ್ವಯಮಾಡಿ ತೋರಿಸಲಿಲ್ಲವಾದ್ದರಿಂದ ಅವನ ಸಿದ್ಧಾಂತವು ದ್ವೈತಕ್ಕೆ ಮುಖವಾಯಿತು. ಹೀಗೆ ಪ್ರಾಕೃತಿಕ ಏಕತ್ವವಾದದ (*material monisom*) ಬೆಳವಣಿಗೆಗೆ ತಡೆಯುಂಟಾಯಿತು. ಮಿಲೆಸಿಯನ್ ಸಿದ್ಧಾಂತದಲ್ಲಿಯ ಮೂಲವಸ್ತುವು ಗುಣರಹಿತವಾಗಿದ್ದದ್ದೇ ಇದರ ಕುಂದುಕೊರತೆಯಾಗಿತ್ತು. ಮೂಲ ವಸ್ತುವು ಒಂದೇ ಇದ್ದು ಅದು ರೂಪಾಂತರ ಹೊಂದದಿದ್ದರೆ ಸೃಷ್ಟಿಯಲ್ಲಿಯ ಅನೇಕ ವಸ್ತುಗಳ ಅಸ್ತಿತ್ವವನ್ನು ವಿವರಿಸುವದು ಹೇಗೆ? ಸ್ವಯಂ ಸಿದ್ಧವಾದ ಒಂದು ಮೂಲ ವಸ್ತುವಿನಿಂದ ಅನೇಕ ಸೃಷ್ಟಿ ವಸ್ತುಗಳ ಅಸ್ತಿತ್ವವನ್ನು ಯಾವ ತತ್ವಜ್ಞಾನವು ಬೋಧಿಸುವದೋ ಅದಕ್ಕೆ ಮಾನ್ಯವುಂಟು. ಹೆಗೆಲ್ ಎಂಬ ಆಧುನಿಕನು ಸಂಖ್ಯೆಯಲ್ಲಿ ಏಕತ್ವ ಮತ್ತು ಅನೇಕತ್ವದ ಸಮನ್ವಯವಿರುವದೆಂದು ಸಿದ್ಧ ಮಾಡಿದ್ದಾನೆ. ಹೇಗೆಂದರೆ ಗೋದಿಯು ರಾಸಿಯಾಗಿ ಹಾಕಲ್ಪಟ್ಟಾಗ ಒಂದು ಎಂದು ಹೇಳಿಸಿಕೊಳ್ಳಲ್ಪಡುತ್ತದೆ. ಕಾಳುಗಳನ್ನು ಬೇರೆ

ಬೇರೆಯಾಗಿ ತೆಗೆದಾಗ ಅನೇಕವೆಂದು ಹೇಳಿಸಿಕೊಳ್ಳಲ್ಪಡುತ್ತದೆ. ಆದ್ದರಿಂದ ಪರಿಣಾಮವು *(quantity)* ಯಾವಾಗಲೂ ಏಕತ್ವ ಅನೇಕತ್ವಗಳೆಂಬ ಎರಡು ಅಂಶಗಳಿಂದ ಕೂಡಿರುವದೆಂದು ಇವನು ಹೇಳುತ್ತಾನೆ. ಅನೇಕ ದೃಶ್ಯವಸ್ತುಗಳು ಮಾಯಾರೂಪವಾದವುಗಳೆಂದು ಪಾರ್ಮೆನಿಡಿಸನ ಅಥವಾ ನಮ್ಮಲ್ಲಿಯ ಮಾಯಾವಾದಿಗಳ ಹೇಳಿಕೆಯಿಂದ ನಿಜವಾದ ವಿವರಣೆಯನ್ನು ಮಾಡಿದಂತಾಗುವದಿಲ್ಲ. ವೈದಿಕ ತ್ರೈಮೂರ್ತಿಗಳ ಮತ್ತು ಕ್ರಿಶ್ಚಿಯನ್ ತ್ರೈಮೂರ್ತಿಗಳ ಭಾವನೆಯು ಬಹುರೂಪವಾದಾಗ್ಯೂ ಒಟ್ಟಿನಲ್ಲಿ ಒಂದೇ ಎಂದು ಹೇಳುವ ಸಿದ್ಧಾಂತವು ಸಮಂಜಸವಾಗುವದು.

(ಮುಂದುವರಿಯುವದು.)

---

## ಪ್ರಾರ್ಥನೆಯ ಮಹತ್ವ.

(ಬರೆದವ:— ಬಸವನ ಬಳಗದ ಶರಣಸೇವಕ ಕೊಲ್ಲಾಪೂರ.)



ನುಡಿ ದೇವನೊಡನಾದಿ ನಿನ್ನ ನುಡಿ ಕೇಳುವನು
ಗಡನೆ ನಿನ್ನಾತ್ಮ ಪರಮಾತ್ಮನೊಳು ಕೂಡುವದು ।
ನಿನ್ನುಸಿರಿನೋಳ್ಜೀವ ತಾನಡಗಿ ಬೆಳಗುವನು
ನಿನ್ನಂಗ ಸೋಂಕಿ ನಿನ್ನೊಡನೆ ತಾನಾಡುವನು ॥

ಈಗ ನಾವು ವೈಚಾರಿಕ ಹಾಗೂ ಶಾಸ್ತ್ರೀಯ ಯುಗದಲ್ಲಿ ಜೀವಿಸುತ್ತಿದ್ದೇವೆ. ಪ್ರಕೃತಿಯ ವ್ಯವಹಾರಗಳೆಲ್ಲ ಕೆಲವು ನಿಯಮಗಳಿಗೊಳಪಟ್ಟು ನಡೆಯುತ್ತಿರುವವೆಂದು ನಮ್ಮ ತಿಳುವಳಿಕೆ. ಇಂಥಕಾಲದಲ್ಲಿ ಪ್ರಾರ್ಥನೆಗೆಂದಾದರೂ ಇಂಬುದೊರೆಯುವದು ಶಕ್ಯವೇ ? ಬುದ್ಧಿ ಪ್ರಾಧಾನ್ಯರು ಪ್ರಾರ್ಥನೆಯು ಏನೋ ಒಂದು ಭಾವಿಕತನದ ಹುಚ್ಚೆಂದು, ಅದು ಕೇವಲ ಅಜ್ಞಾನಿಗಳ ಹಾಗೂ ಮೂರ್ಖರ ಸೊತ್ತೆಂದು ತಿಳಿಯುವರು. ಇಂಥ ಪರಿಸ್ಥಿತಿಯಲ್ಲಿ ನಾವು ಪ್ರಾರ್ಥನೆಯು ಮಹತ್ವವಾದದ್ದೆಂದೂ ಅದರಲ್ಲಿ ಅಪಾರವಾದ ಶಕ್ತಿ ಇರುವದೆಂದೂ ಪ್ರತಿಪಾದಿಸಿದರೆ ಶಾಸ್ತ್ರೀಯ ಬುದ್ಧಿಯುಳ್ಳವರಿಗೆ ಇದೊಂದು ವಿಕಟವಿನೋದವಾಗಿ ತೋರಲಿಕ್ಕಿಲ್ಲವೇ ? ಪ್ರಾರ್ಥನೆ ಮಾಡುವದು ಸಂಸ್ಕೃತಿ ಹೀನರಾಗಿದ್ದ ಹಿಂದಿನ ಕಾಲದ ಕಾಡುಜನರ ಸಾಂಪ್ರದಾಯವಿದ್ದು ಅದನ್ನು ಈಗಿನ ಸುಧಾರಣಾ ಶತಮಾನದ

ಜನರು ಅನುಸರಿಸುವದು ಹುಚ್ಚುತನವೆಂದು ಶಾಸ್ತ್ರೀಯ ಮತೀಯರು ಪ್ರತಿಪಾದಿಸುವರು.

ಆದರೆ ನಾವು ಸ್ವಲ್ಪ ಆಳವಾಗಿ ವಿಚಾರಿಸಿದರೆ ಪ್ರಾರ್ಥನೆಯು ಮಾನವಜೀವನೋದ್ಧಾರಕ್ಕೆ ಅತ್ಯವಶ್ಯಕವಾದ ಉಪಾಯವೆಂದೂ ಪ್ರಾರ್ಥನೆಯನ್ನು ಬಿಟ್ಟರೆ ಮಾನವ ಜೀವನ ಕಳೆಯೇ ಶಾಂತಿಹೀನವಾಗುವದೆಂದೂ ನಾವು ನಿರ್ವಿವಾದವಾಗಿ ಹೇಳಬಹುದು. ನಮ್ಮನ್ನು ಹುಟ್ಟಿಸಿ ಸಾಕಿ ಸಲುಹುವ ಪರಮಾತ್ಮನನ್ನು ನಾವು ಆನಂದಾಶ್ರುಪೂರಿತರಾಗಿ ಕೈಯೆತ್ತಿ ಪ್ರಾರ್ಥಿಸದಿದ್ದರೆ ನಮ್ಮ ಜೀವಿತವು ಪಶುಪಕ್ಷಿಗಳಿಗಿಂತ ಅತ್ತತ್ತಲಾಗುವದು. ಈ ವಿಷಯದಲ್ಲಿ ಟೆನಿಸನ್‌ನೆಂಬ ಕವಿಯು ಹೇಳಿರುವದೇನೆಂದರೆ—

More things are wrought by prayer
Than this world dreams of
Wherefore let thy voice rise like a
Fountain for night and day

For what are men better than sheep or goats
If knowing god, they lift not hands of prayer
Both for themselves and those who call them friends.

ಅಂದರೆ ನಾವು ಕನಸು ಮನಸಿನಲ್ಲಿ ಸಹ ಮಾಡಲಶಕ್ಯವಾದ ಕಾರ್ಯಗಳು ಪ್ರಾರ್ಥನೆಯಿಂದ ಘಟಿಸುತ್ತವೆ. ಆದ್ದರಿಂದ ಹಗಲಿರಳು ಪರಮಾತ್ಮನ ದಿವ್ಯ ನಾಮೋಚ್ಚರಣೆಯನ್ನು ಮಾಡುವದಕ್ಕಾಗಿ ನಿನ್ನ ನಾಲಿಗೆಯು ಕಾರಂಜಿಯಂತೆ ಪುಟಿಯುತ್ತಿರಲಿ. ನಾವು ದೇವರನ್ನು ಅರಿತು ಆತನನ್ನು ಕೈಯೆತ್ತಿ ಪ್ರಾರ್ಥಿಸದಿದ್ದರೆ ನಮ್ಮ ಜೀವತವು ಕುರಿ ಆಡು ಮೊದಲಾದ ಕೀಳಪಶುಗಳಿಗಿಂತಲೂ ಕಡೆಯಾಗುವದು. ಮನುಷ್ಯನು ಹೆಚ್ಚಿನವನೆನಿಸಿಕೊಳ್ಳಬೇಕಾದರೆ ಆತ್ಮೋದ್ಧಾರಕ್ಕಾಗಿಯೂ ತನ್ನ ಬಂಧು ಬಾಂಧವರ ಏಳ್ಗೆಗಾಗಿಯೂ ಪ್ರಾರ್ಥನೆಯನ್ನು ಮಾಡಲೇಬೇಕು.

ಮಹಾತ್ಮಾಗಾಂಧಿಯವರು ಹೇಳುವದೇನಂದರೆ— ದೇಹಕ್ಕೆ ಆಹಾರವು ಅತ್ಯಾವಶ್ಯಕವಾಗಿರುವಂತೆ ಆತ್ಮಕ್ಕೆ ಪ್ರಾರ್ಥನೆಯು ಅತ್ಯಾವಶ್ಯಕವಾಗಿರುತ್ತದೆ. ಮನುಷ್ಯನು ಆಹಾರವಿಲ್ಲದೆ ಅನೇಕ ದಿವಸಗಳ ವರೆಗೆ ಜೀವದಿಂದಿರಬಹುದು. ಮಾಕ್ಸ್ವಿನಿಯೆಂಬ ಆಯರ್ಲಂಡದ ಸ್ವದೇಶಾಭಿಮಾನಿಯು ಆಹಾರವಿಲ್ಲದೆ ೭೦ ದಿವಸಗಳ ವರೆಗೆ ಜೀವಿಸಿದ್ದನು. ಆದರೆ

ದೇವರಲ್ಲಿ ನಿಜವಾದ ನಂಬಿಗೆ ಇದ್ದವನು ಪ್ರಾರ್ಥನೆಯನ್ನು ಬಿಟ್ಟು ಅರೆ ನಿಮಿಷವಾದರೂ ಜೀವಿಸಿರುವದು ಶಕ್ಯವಿಲ್ಲ. ಎಷ್ಟೋ ಜನರು ಪ್ರಾರ್ಥನೆಯ ಮೋರೆಯೇ ಗೊತ್ತಿಲ್ಲದೆ ಎಷ್ಟೋ ವರ್ಷಗಳ ವರೆಗೆ ಜೀವಿಸುವರಲ್ಲ! ಅಂದಮೇಲೆ ಪ್ರಾರ್ಥನೆ ಇಲ್ಲದೆ ಮನುಷ್ಯನು ಜೀವಿಸುವದೇ ಇಲ್ಲವೆಂಬ ಮಾತು ಅಸಮಂಜಸವಲ್ಲವೇ? ಎಂದು ನೀವು ಪ್ರಶ್ನೆ ಕೇಳಬಹುದು. ಅದಕ್ಕೆ ನನ್ನ ಉತ್ತರವಿಷ್ಟೇ. ಮನುಷ್ಯನು ಪ್ರಾರ್ಥನೆಯಿಲ್ಲದೆ ಜೀವಿಸುವನೇನೋ ನಿಜ. ಆದರೆ ಅಂಥ ಜೀವಿತವು ಪಶು ಜೀವನವಲ್ಲದೆ ಬೇರೆಯಲ್ಲ. ಮನುಷ್ಯನಾಗಿ ಪ್ರಾರ್ಥನೆಮಾಡದಿರುವದೆಂದರೆ ಅದೊಂದು ಮರಣಕ್ಕಿಂತ ಅಧಿಕವಾದ ಕಷ್ಟವೆಂದೇ ಹೇಳಬಹುದು. ನಾವು ಈ ಜಗತ್ತಿನಲ್ಲಿ ಪ್ರಾರ್ಥನೆಯ ಕಡೆಗೆ ಗಮನಿಸದಿದ್ದುದರಿಂದಲೇ ಮೇಲಿಂದ ಮೇಲೆ ಕದನ ಕಾಳಗ ಹೋರಾಟಗಳಿಗೆ ಬಲಿಬೀಳುವೆವು. ಅನೇಕ ಜನ ಹಿಂದೂ ಮುಸಲ್ಮಾನ ಕ್ರಿಸ್ತಿ ಜನರು ತಮ್ಮ ತಮ್ಮ ಪವಿತ್ರ ಸ್ಥಾನಗಳಲ್ಲಿ ಪ್ರಾರ್ಥನೆಯನ್ನು ಮಾಡುತ್ತಿದ್ದಾಗ್ಯೂ ಕೂಡ ತಮ್ಮತಮ್ಮೊಳಗೆ ಜಗಳಾಡುತ್ತಿರುವರಲ್ಲ! ಇದಕ್ಕೆ ಉತ್ತರವೇನಂದರೆ— ಅವರು ತಮ್ಮ ಪ್ರಾರ್ಥನೆಗಳನ್ನು ಕೇವಲ ತುಟಿಯಿಂದ ಮಾಡುವರಲ್ಲದೆ ಹೃದಯದಿಂದ ಮಾಡುತ್ತಿರುವದಿಲ್ಲ. ಹೃದಯವು ಹೊರಸೂಸ ಮಾಡದ ಪ್ರಾರ್ಥನೆಯು ಕೇವಲ ಡಂಭಾಚಾರವು. ನಾವು ಬಾಯಿಯಿಂದ ದೇವರನಾಮ ಪಠಣ ಮಾಡಿದರೆ ಅದು ನಿಜವಾದ ಪ್ರಾರ್ಥನೆಯಾದಂತಾಗಲಿಲ್ಲ. ನಮ್ಮ ಹೃದಯವು ಪ್ರಾರ್ಥನೆಯಿಂದ ಉಕ್ಕಿ ಉಕ್ಕಿ ಹೊರಸೂಸಿದರೆ ಅಂಥ ಪ್ರಾರ್ಥನೆಯಿಂದ ಪರ್ವತಗಳು ಸಹ ಕರಗಿ ನೀರಾಗುವವು.

ಕೋಲರಿಜ್‌ನೆಂಬ ಆಂಗ್ಲಕವಿಯು ಹೀಗೆ ಹೇಳಿದ್ದಾನೆ.

"He prayeth best who love the best
All men and bird and beast."

ಅಂದರೆ ಯಾವಾತನು ಮನುಷ್ಯ ಪಶು ಪಕ್ಷ್ಯಾದಿಗಳನ್ನು ಅಂತಃಕರಣಪೂರ್ವಕವಾಗಿ ಪ್ರೀತಿಸುವನೋ ಆತನೇ ನಿಜವಾಗಿ ಪ್ರಾರ್ಥಿಸುವನು. ಅರ್ಥಾತ್ ನಿಜವಾದ ಪ್ರಾರ್ಥನೆಯು ವಿಶ್ವಪ್ರೇಮವೆಂಬುದೇ ಅದರ ತಾತ್ಪರ್ಯವು. ಈ ಮೇರೆಗೆ ಮಹನೀಯರು ಪ್ರಾರ್ಥನೆಯ ಮಹತ್ವವನ್ನು ಜಗತ್ತಿಗೆ ತೋರಿಸಿಕೊಡುತ್ತಿರುವಾಗ ಪ್ರಾರ್ಥನೆಮಾಡುವದರಲ್ಲಿ ಏನೂ ಹುರಳಿಲ್ಲವೆಂದು ಹೇಳುವದು ಮೂರ್ಖತನವೇ ಸರಿ.

ಪ್ರಾರ್ಥನೆಯ ಮಹತ್ವವನ್ನು ನಾವು ಅರಿಯಬೇಕಾದರೆ ಮೊದಲು ನಾವು ಯಾವುಕ್ಕೆ ನಿಜವಾದ ಪ್ರಾರ್ಥನೆ ಎನ್ನಬೇಕು, ಯಾವುದಕ್ಕೆ ನಿಜವಾದ ಪ್ರಾರ್ಥನೆ ಎನ್ನಬಾರದು, ಈ ಪ್ರಶ್ನೆಗಳನ್ನು ಕುರಿತು ಆಲೋಚಿಸುವದು ಯುಕ್ತಕಾಣುತ್ತದೆ. ಸದ್ಯಕ್ಕೆ ಯಾವುದು ನಿಜವಾದ ಪ್ರಾರ್ಥನೆಯಲ್ಲ ಎಂಬೀವಿಷಯುವನ್ನು ಕುರಿತು ಸ್ವಲ್ಪ ಆಲೋಚಿಸುವಾ:—

(೧) ದೇವರಿಗೆ ಬುದ್ಧಿಗಲಿಸಲಿಕ್ಕೆ ಹೋಗುವದು ಪ್ರಾರ್ಥನೆಯೆನಿಸಲಾರದು. ಉದಾಹರಣಾರ್ಥ ದೇವಾ, ನಿನಗೆ ಅಪಾರವಾದ ಜ್ಞಾನವನ್ನು ಯಾರು ದಯಪಾಲಿಸಿದರು? ನಿನ್ನ ಆಪ್ತಾಲೋಚನಗಾರರು ಯಾರು? ನಿನಗೆ ಅಮೌಲ್ಯವಾದ ವಿದ್ಯೆಯನ್ನು ಕಲಿಸಿಕೊಟ್ಟ ಗುರುವಾರು? ಈ ವಿಶ್ವವನ್ನಾಳುವ ಜಾಣ್ಮೆಯು ನಿನಗೆ ಹೇಗೆ ಯುಂಟಾಯಿತು? ಈರೀತಿಯಾಗಿ ಯಾರೂ ದೇವರ ಪ್ರಾರ್ಥನೆಯನ್ನು ಮಾಡಕೂಡದು. ಒಂದುವೇಳೆ ನಾವು ದೇವರಗಿಂತಲೂ ಹೆಚ್ಚು ಬುದ್ಧಿಶಾಲಿಗಳಾಗಿದ್ದರೆ ಇಂಥ ಪ್ರಶ್ನಗಳನ್ನು ಮಾಡಬಹುದಾಗಿತ್ತು.

(೨) ನಾವು ಮಾಡುವ ಕೆಲಸವನ್ನು ದೇವರಿಗೆ ಮಾಡಿಕೊಡೆಂದು ಬೇಡಿಕೊಳ್ಳುವದು ನಿಜವಾದ ಪ್ರಾರ್ಥನೆಯಲ್ಲ. ಉದಾಹರಣಾರ್ಥ, ದೇವಾ, ನಾನು ಆಕಳಗಳನ್ನು ಕಾಯ್ದು ಕಾಯ್ದು ಬೇಸತ್ತೆನು. ನೀನು ದಯಮಾಡಿ ನನ್ನ ಸಹಾಯಕ್ಕೆ ಬಂದು ನನ್ನ ಆಕಳಗಳನ್ನು ಕಾಯ್ದು ನನ್ನ ಶ್ರಮವನ್ನುಳಿಸಬಾರದೇ ? ಈ ಪ್ರಕಾರ ಪ್ರಾರ್ಥಿಸುವದು ಶುದ್ಧ ತಪ್ಪು. ಹೇಳಿದಂತೆ ಕೇಳಲಿಕ್ಕೆ ದೇವರು ನಮ್ಮ ಇಚ್ಛೆಯ ಆಳಲ್ಲ. ಪ್ರಾರ್ಥನೆಯೆಂದರೆ ಅಂತೂ ಇಂತೂ ದೇವರಿಗೆ ಹೇಳಿಕೊಂಡು ತಮ್ಮ ಮೈಯನ್ನು ಉಳಿಸಿಕೊಳ್ಳಬೇಕೆಂಬ ಉಪಾಯವಲ್ಲ. ನಾವು ಮಾಡಬಹುದಾದ ಕೆಲಸವನ್ನು ದೇವರಿಗೆ ಮಾಡೆಂದು ಬೇಡಿಕೊಳ್ಳುವದು ಆತನಿಗೆ ಗೌರವವಲ್ಲ, ಅಪಮಾನವು.

(೩) ನಾವು ದೇವರೊಡನೆ ಕೊಡಕೊಂಬುವ ವ್ಯವಹಾರ ನಡೆಯಿಸುವದು ನಿಜವಾದ ಪ್ರಾರ್ಥನೆಯೆಂದು ಎಣಿಸಲ್ಪಡುವದಿಲ್ಲ. ಉದಾಹರಣಾರ್ಥ, ದೇವಾ, ನಿನಗೆ ಕಾಯಿಯೊಡೆಯುತ್ತೇನೆ. ನಿನ್ನ ಗುಡಿಗೆ ಕಳಸವಿಡುತ್ತೇನೆ. ನಿನಗಾಗಿ ಮುಡುಪನ್ನು ತೆಗೆದಿಡುವೆನು. ದಿನಾಲು ನಿನ್ನ ಸಹಸ್ರನಾಮವನ್ನು ಪಾರಾಯಣ ಮಾಡುವೆನು. ದಯಮಾಡಿ ನನಗೂ ನನ್ನ ಹೆಂಡರುಮಕ್ಕಳಿಗೂ ಬಂದ ಕಂಟಕವನ್ನು ಪರಿಹಾರ

ಮಾಡು. ನಮಗೆ ಸುಖಸಂಪತ್ತುಗಳನ್ನು ದಯಪಾಲಿಸು. ನಿನಗೆ ರುದ್ರಾಭಿಷೇಕ ಮಾಡಿಸುವೆನು. ಇತ್ಯಾದಿಯಾಗಿ ನಾವು ಪ್ರಾರ್ಥನೆಮಾಡಕೂಡದು. ಇಂಥ ವ್ಯಾಪಾರೀ ಪ್ರಾರ್ಥನೆಗೆ ದೇವರು ಮೆಚ್ಚಲಾರನು. ದೇವರು ರೊಕ್ಕ ತೆಗೆದು ಸಾಮಾನುಗಳನ್ನು ಕ್ರಯಕ್ಕೆ ಕೊಡುವ ಶೆಟ್ಟಿಯಲ್ಲ. ದೇವರಿಂದ ಏನಾದರೊಂದನ್ನು ಎತ್ತಿಹಾಕಬೇಕೆಂಬ ಉದ್ದೇಶದಿಂದ ಆತನ ಸಂಬಂಧದ ನಾಮ, ರೂಪ, ಕ್ರಿಯೆ, ಮಂತ್ರ, ತಂತ್ರ, ತಪಸ್ಸುಗಳನ್ನಾಚರಿಸಿದರೆ ಪರಮಾತ್ಮನು ಎಂದಿಗೂ ಅದರಿಂದ ಆನಂದಬಡಲಾರನು.

(೪) ಸೃಷ್ಟಿಯ ನಿಯಮ ವ್ಯವಹಾರಾದಿಗಳನ್ನು ಸ್ವಾರ್ಥಸುಖಕ್ಕಾಗಿ ವ್ಯತ್ಯಾಸಗೊಳಿಸೆಂದು ದೇವರಿಗೆ ಬೇಡಿಕೊಳ್ಳುವದು ನಿಜವಾದ ಪ್ರಾರ್ಥನೆಯಲ್ಲ. ಉದಾಹರಣಾರ್ಥ ದೇವಾ, ನನಗೆ ಬೇಸಿಗೆಯಲ್ಲಿ ಬಿಸಿಲಿನ ತಾಪವು ಬಹಳವಾಗುತ್ತದೆ. ದಯಮಾಡಿ ತಂಪನ್ನುಂಟು ಮಾಡು ಚಳಿಗಾಲದಲ್ಲಿ ಚಂದ್ರನನ್ನು ಬಿಸಿಯಾಗಿ ಮಾಡು, ಸಮುದ್ರದ ನೀರು ಉಪ್ಪಾಗಿರುತ್ತವೆ, ದಯವಿಟ್ಟು ಅದನ್ನು ಸೀಯಾಗಿ ಮಾಡು, ನನಗೆ ಅನುಕೂಲವಾಗುವಂತೆ ತಂಗಾಳಿಯನ್ನು ಬೀಸುತ್ತಿರು, ನಿನಗೆ ಸೆರಗೊಡ್ಡಿ ಬೇಡುವೆ. ಈ ಪ್ರಕಾರವಾಗಿ ಪ್ರಾರ್ಥನೆ ಮಾಡಕೂಡದು. ಪರಮಾತ್ಮನು ಸೃಷ್ಟಿಯ ವ್ಯವಹಾರಗಳನ್ನು ನಿಯಮಬದ್ಧವಾದ ರೀತಿಯಲ್ಲಿ ಸಾಗಿಸಿಕೊಂಡು ಹೋಗುತ್ತಿರುವನು. ಅವು ಪರಮಾತ್ಮನ ಇಚ್ಛಾನುಸಾರವಾಗಿ ಕಾಲಕ್ರಮದಿಂದ ವ್ಯತ್ಯಾಸ ಹೊಂದುವವು. ನಾವು ಇಂಥ ಮಾತುಗಳನ್ನು ದೇವರಿಗೆ ಬೇಡಿಕೊಳ್ಳುವದು ಕೇವಲ ಮೂರ್ಖತನವು. ಇಂಥ ಪ್ರಾರ್ಥನೆಗೆಂದಿಗೂ ಪರಮಾತ್ಮನು ಕಿವಿಗೊಡಲಾರನು. ದೇವರು ನಮ್ಮಂಥ ಕ್ಷುದ್ರಜೀವಿಗಳ ಪ್ರಾರ್ಥನೆಯಿಂದ ತಾನಾಳುವ ಜಗತ್ತಿನ ನಿಯಮಗಳನ್ನು ವ್ಯತ್ಯಾಸಗೊಳಿಸುವಷ್ಟು ಮೂರ್ಖನಿರುವದಿಲ್ಲ.

ಈ ವರೆಗೆ ಯಾವುದು ನಿಜವಾದ ಪ್ರಾರ್ಥನೆಯಲ್ಲವೆಂಬೀ ವಿಷಯವನ್ನು ಕುರಿತು ಪ್ರತಿಪಾದಿಸಿದ್ದಾಯಿತು. ಇನ್ನು ಮೇಲೆ ನಿಜವಾದ ಪ್ರಾರ್ಥನೆ ಯಾವುದು ಎಂಬದರ ಬಗ್ಗೆ ಆಲೋಚಿಸುವಾ. ನಮ್ಮ ಇಷ್ಟಾರ್ಥಗಳನ್ನು ದಯಪಾಲಿಸೆಂದು ದೇವರಿಗೆ ಬೇಡಿಕೊಳ್ಳುವದಿಷ್ಟೇ ಪ್ರಾರ್ಥನೆಯೆಂದು ಕೆಲವರು ತಿಳಿದಿದ್ದಾರೆ. ಇದು ಸಂಕುಚಿತಾರ್ಥವು. ಹಾಗಾದರೆ ವಿಸ್ತೃತಾರ್ಥವುಳ್ಳ ಪ್ರಾರ್ಥನೆ ಯಾವದೆಂಬದರ ಬಗ್ಗೆ ಆಲೋಚಿಸುವದು ನಮ್ಮ ಪ್ರಸ್ತುತವಿಷಯವಾಗಿದೆ:—

(೧) ನಮ್ಮ ಮೇಲೆ ಅನಂತ ಉಪಕಾರಗಳನ್ನು ಮಾಡಿದ ಪರಮಾತ್ಮನಿಗೆ ನಾವು ಅಂತಃಕರಣ ಪೂರ್ವಕವಾಗಿ ನಮ್ಮ ಕೃತಜ್ಞತಾಭಾವವನ್ನು ವ್ಯಕ್ತಗೊಳಿಸುವದು ನಿಜವಾದ ಪ್ರಾರ್ಥನೆ ಎಂದೆನಿಸಿಕೊಳ್ಳುತ್ತದೆ. ಉದಾಹರಣಾರ್ಥ, "ದೇವಾ ನಿನ್ನ ಉಪಕಾರಗಳನ್ನೆಷ್ಟೆಂದು ಬಣ್ಣಿಸಲಿ ? ಮಾನವ ಪ್ರಾಣಿಯ ಸುಖಕ್ಕಾಗಿ ಅನೇಕ ಪ್ರಕಾರದ ಧಾನ್ಯ, ಹಣ್ಣು ಹಂಪಲಗಳನ್ನು ಹುಟ್ಟಿಸಿದೆ. ಆತನ ಉಪಯೋಗಕ್ಕಾಗಿ ಅನೇಕ ಪ್ರಾಣಿಗಳನ್ನು ನಿರ್ಮಿಸಿದೆ. ತಂದೆಯಂತೆ ನನ್ನ ಜನ್ಮದಾರಭ್ಯ ಮರಣಾಂತ್ಯದ ವರೆಗೂ ಕೃಪಾದೃಷ್ಟಿಯಿಂದ ನನ್ನನ್ನು ಕಾಪಾಡುವೆ" ಈ ರೀತಿಯಾಗಿ ದೇವರನ್ನು ಕೃತಾಜ್ಞತಾಪೂರ್ವಕವಾಗಿ ಬೇಡಿಕೊಳ್ಳುವದು ವಿಹಿತವು.

(೨) ಈ ಜಗತ್ತಿನಲ್ಲಿ ತೋರುವ ಪರಮಾತ್ಮನ ಬುದ್ಧಿ ಶಕ್ತಿಗಳಿಗಾಗಿಯೂ ಆತನು ನಿಸರ್ಗದೇವಿಗುಂಟು ಮಾಡಿರುವ ಸೊಬಗು ಸೌಂದರ್ಯಗಳಿಗಾಗಿಯೂ ಆತನನ್ನು ಭಯಭಕ್ತಿಯಿಂದ ಆರಾಧಿಸುವದು ನಿಜವಾದ ಪ್ರಾರ್ಥನೆಯೆನಿಸುತ್ತದೆ. ಉದಾ, ದೇವಾ ನಿನ್ನ ಜಾಣ್ಮೆಯೆಷ್ಟು ? ಭೂದೇವಿಯೆಂಬ ತೊಟ್ಟಿಲಿಗೆ ಆಕಾಶವೆಂಬ ಮೇಲ್ಕಟ್ಟು ಕಟ್ಟಿ ನಕ್ಷತ್ರಗಳೆಂಬ ಸುಂದರವಾದ ಕಸೂತಿಗಳನ್ನು ಹೆಣೆದು ಬಿಟ್ಟಿರುವೆಯಲ್ಲ! ನೀನು ನಿರ್ಮಿಸಿದ ಗಿರಿಗಂಹರ, ವನ ನಿರ್ಝರ, ನದೀ ತಟಾಕಗಳ ಸೊಬಗವನ್ನೆಷ್ಟೆಂದು ವರ್ಣಿಸಲಿ! ಆಹಾ! ನಿಸರ್ಗದೇವಿಯು ನಿನ್ನ ಕೃಪೆಯಿಂದ ತನ್ನ ಎಲ್ಲ ಚಲ್ವಿಕೆಯನ್ನು ಚಲ್ಲರಿದು ಹಬ್ಬಿಸಿ ಕುಲುಕುಲುನೆ ನಗುತ್ತಾ ವನವನಾಂತರಗಳಲ್ಲಿ ಸೊಗಸಾಗಿ ನಲಿಯುತ್ತಿರುವಳಲ್ಲ! ಈ ಪ್ರಕಾರ ಪರಮಾತ್ಮನ ಅಗಾಧಲೀಲೆಗಳನ್ನು ಸುಂದರವಾದ ಕಾವ್ಯಗಳನ್ನು ರಚಿಸಿ ಹೊಗಳುವದು ನಿಜವಾದ ಪ್ರಾರ್ಥನೆಯೆನಿಸಿಕೊಳ್ಳುತ್ತದೆ. ಇಂಥ ಭಾವನೆಗಳು ನಮ್ಮ ಮನಸ್ಸಿನಲ್ಲಿ ಉದ್ಭವಿಸಿದಾಗ ನಾವು ಸ್ವಾಭಾವಿಕವಾಗಿ ನಮಗಾದ ಆನಂದವನ್ನು ಈ ರೀತಿಯಾಗಿ ವ್ಯಕ್ತಗೊಳಿಸುವೆವು.

(೩) ನಮ್ಮ ಅಂತರಾತ್ಮವನ್ನು ಪರಮಾತ್ಮನ ಸೌಂದರ್ಯಮಯವಾದ ಸೃಷ್ಟಿಯಲ್ಲಿ ಒಂದುಗೂಡಿಸಿಬಿಡುವದು ನಿಜವಾದ ಪ್ರಾರ್ಥನೆಯು. ಅಕ್ಕಮಹಾದೇವಿಯು ಕದಳೀ ವನದಲ್ಲಿ ವಾಸಮಾಡಿದಾಗ ತರುಮರಗಳನ್ನೂ ಪಶುಪಕ್ಷಿಗಳನ್ನೂ ಕುರಿತು ತನ್ನ ನಲ್ಲನಾದ ಚೆನ್ನಮಲ್ಲಿಕಾರ್ಜುನನನ್ನು ಕಂಡಿರೇನೇ ಎಂದು ಕೇಳುತ್ತ ತಿರುಗುವಳು ಉದಾ, ಚಂದಿ

ರನೆ, ಚಾದಗೆಯೆ, ನಂದಿಸುವ ತಾರೆಗಳೇ, ಅಳಿಕುಲವೇ, ಮಾಮರವೇ, ಇಂದುಧರನ ನೀವು ಕಂಡಿರೇನೆ? ಇತ್ಯಾದಿ. ಈ ಪ್ರಕಾರ ಅಕ್ಕಮಹಾದೇವಿಯು ತನ್ನ ಆತ್ಮವನ್ನು ನಿಸರ್ಗದ ಆತ್ಮಗಳಲ್ಲಿ ತಲ್ಲೀನಗೊಳಿಸಿ ಪರಮಾತ್ಮನ ಕೃಪೆಗೆ ಹಂಬಲಿಸಿದಳು. ಇದೇ ನಿಜವಾದ ಪ್ರಾರ್ಥನೆಯು. ನಮ್ಮ ದೃಷ್ಟಿಗೆ ತೋರುವ ಪ್ರಕೃತಿಯು ಮೃತಪ್ರಾಯವಾದುದೆಂದೂ, ಕುರುಡಾಗಿರುವದೆಂದೂ ನಾವು ತಿಳಿಯದೆ ಅದು ಸಜೀವವಮಯವಾಗಿಯೂ, ಸೌಂದರ್ಯಯುಕ್ತವಾಗಿಯೂ ಇರುವದೆಂತಲೂ ಅದರಲ್ಲಿ ಪರಮಾತ್ಮನ ಕಳೆಯುತುಂಬಿ ತುಳುಕುವದೆಂತಲೂ ತಿಳಿದು ಆ ಪರವಸ್ತುವನ್ನು ಹೊಗಳುವದು ನಿಜವಾದ ಪ್ರಾರ್ಥನೆಯ ಲಕ್ಷಣವು.

ಬರೇ ಬಾಹ್ಯದೃಷ್ಟಿಯಲ್ಲಿಯೇ ಪರಮಾತ್ಮನ ಸಾನ್ನಿಧ್ಯವಿರುವದೆಂತಲ್ಲ. ನಾವು ನಮ್ಮ ದೃಷ್ಟಿಕೋನವನ್ನು ಅಂತರ್ಮುಖಗೊಳಿಸಿದರೆ ನಮ್ಮಲ್ಲಿಯೇ ಆ ಪರವಸ್ತುವಿನ ಪರಂಧಾಮವು ನೆಲೆಸಿದ್ದು ನಮಗೆ ಗೋಚರವಾಗುವದು. ನಮ್ಮ ಜೀವಾತ್ಮನನ್ನು ನಮ್ಮಂತರಂಗದಲ್ಲಿ ನೆಲಿಸಿದ ಪರಮಾತ್ಮನೊಡನೆ ಬೆರೆಯಿಸಿ ಲೋಲಾಡುವದೇ ನಿಜವಾದ ಪ್ರಾರ್ಥನೆಯ ರಹಸ್ಯವು.

(೪) ನಾವುಮಾಡುವ ಕೆಲಸವನ್ನು ಶಿವಾರ್ಪಣಬುದ್ಧಿಯಿಂದ ಮಾಡಿ ಅದನ್ನು ತಮ್ಮ ಆರಾಧ್ಯ ದೇವತೆಗೆ ವಿಶದ ಪಡಿಸುವದು ನಿಜವಾದ ಪ್ರಾರ್ಥನೆಯೆಂದು ಕರೆಯಲ್ಪಡುತ್ತದೆ. 'ಯದ್ಯತ್ಕರ್ಮಕರೋಮಿ ತತ್ತದಖಿಲಂ ಶಂಭೋ ತವಾರಾಧನಂ' ಎಂದು ಶಂಕರಾಚಾರ್ಯರು ಹೇಳುವ ಶ್ಲೋಕವೂ. 'ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ" ॥ ಎಂದು ಹೇಳಿದ ಭಗವದ್ಗೀತೆಯ ಶ್ಲೋಕವೂ ಶಿವಾರ್ಪಣ ಬುದ್ಧಿಯ ಪ್ರಾರ್ಥನೆಯನ್ನೇ ಸಮರ್ಥಿಸುತ್ತವೆ. ನಮ್ಮ ಧರ್ಮದಲ್ಲಿ ಜನ್ಮತಾಳಿದ ಶಿವಶರಣರು ಸ್ವಾಮಿಗಳು ನಿಜವಾಗಿ ಶಿವಾರ್ಪಣ ಬುದ್ಧಿಯಿಂದ ಕೆಲಸಮಾಡುವಂಥವರಾಗಿದ್ದರು.

ಪ್ರಾರ್ಥನೆಯು ಎರಡುವಿಧವಾಗಿದೆ. ೧ ಪ್ರಾಪಂಚಿಕ ವಸ್ತುಗಳನ್ನು ದಯಪಾಲಿಸೆಂದು ದೇವರನ್ನು ಬೇಡಿಕೊಳ್ಳುವದು ೨ ಆಧ್ಯಾತ್ಮಿಕ ಸಂಪತ್ತನ್ನು ಅರ್ಥಾತ್ ಮೋಕ್ಷಸುಖವನ್ನು ಕರುಣಿಸೆಂದು ಬೇಡಿಕೊಳ್ಳುವದು. ನಾವು ಯಾವ ಪ್ರಯತ್ನವನ್ನೂ ಮಾಡದೆ ನಮಗೆ ಬೇಕಾಗುವ ಪ್ರಾಪಂಚಿಕ ವಸ್ತುಗಳನ್ನು ಒದಗಿಸಿಕೊಡೆಂದು ದೇವರನ್ನು ಪ್ರಾರ್ಥಿಸುವದು ವಿಹಿತವಲ್ಲ.

ಆದರೆ ಪಾರಮಾರ್ಥಿಕ ವಸ್ತುಗಳಾದ ಮೋಕ್ಷ, ಆನಂದ, ವೈರಾಗ್ಯ ಮುಂತಾದವುಗಳನ್ನು ದಯಪಾಲಿಸೆಂದು ಬೇಡುವದು ಯೋಗ್ಯವಾದದ್ದು. ಅದರಿಂದ ಮನುಷ್ಯನ ಚಿತ್ತವೃತ್ತಿಯು ಉದಾತ್ತ ಸ್ಥಿತಿಗೇರುವದು. ಆಧ್ಯಾತ್ಮಿಕ ಸುಖವು ನಮಗೆ ಪ್ರಾಪ್ತಿಸಬೇಕಾದರೆ ಅದರಬಗ್ಗೆ ನಮ್ಮಲ್ಲಿ ವಿಶೇಷವಾದ ಹಂಬಲವಿರಬೇಕು. ಅದು ನಮ್ಮಂತರಂಗದಲ್ಲಿ ಪ್ರವೇಶಿಸಲೆಂದು ನಮ್ಮ ಎದೆಯ ಬಾಗಿಲವನ್ನು ನಾವು ತೆರದಿಡಬೇಕು. ಹೃದಯಾಂತಃಕರಣದಿಂದ ಮಾಡುವ ಪ್ರಾರ್ಥನೆಯಿಂದ ನಮ್ಮ ಮನಸ್ಸೂ ಇಂದ್ರಿಯಗಳೂ ಬಲಪಡುವವು.

ನಾವು ದೇವರಿಗೆ ಸೃಷ್ಟಿಯ ನೇಮ ವ್ಯವಹಾರಗಳನ್ನು ನಮಗೆ ಅನುಕೂಲವಾಗುವಂತೆ ವ್ಯತ್ಯಾಸಗೊಳಿಸಬೇಕೆಂದು ಪ್ರಾರ್ಥಿಸಿದರೆ ಇಲ್ಲವೆ ನಾವೇನು ಪರಿಶ್ರಮ ಮಾಡದೆ ನಾವು ಬೇಡಿದ್ದನ್ನೆಲ್ಲ ಒದಗಿಸಿಕೊಡೆಂದು ದೇವರಿಗೆ ಬೇಡಿಕೊಂಡರೆ ನಾವು ದೇವರ ಶಾಸನವನ್ನು ಉಲ್ಲಂಘನ ಮಾಡಿದಂತಾಗುವದು. ಹಾಗೆ ಮಾಡುವದು ಮಹಾಪಾಪವು. ಆದರೆ ನಾವು ಶ್ರದ್ಧೆಯಿಂದ ನಮ್ಮ ಕೆಲಸವನ್ನು ಮಾಡುತ್ತಿರುವಾಗ ಪರಮಾತ್ಮನ ಮೇಲೆಯೇ ಎಲ್ಲ ಭಾರವನ್ನು ಹಾಕಿ ಆತನನ್ನೇ ಧ್ಯಾನಿಸುತ್ತ ಆ ಕಾರ್ಯವನ್ನು ನಿರ್ವಹಿಸಿದರೆ ಅದೇನೂ ತಪ್ಪಲ್ಲ. ಹುಚ್ಚತನವೂ ಅಲ್ಲ.

ಇನ್ನು ಕೆಲಕೆಲವು ಪ್ರಸಂಗಗಳಲ್ಲಿ ದೇವರನ್ನು ಪ್ರಾರ್ಥಿಸುವದು ವಿಹಿತವೋ, ಅಲ್ಲವೋ, ಎಂಬದನ್ನಿಷ್ಟು ವಿವೇಚಿಸೋಣ. ೧ ರೋಗಿಯು ತನ್ನ ರೋಗವು ಗುಣವಾಗಿ ಆರೋಗ್ಯವು ಪ್ರಾಪ್ತಿಸಲೆಂದು ದೇವರನ್ನು ಪ್ರಾರ್ಥಿಸಬಹುದೇ? ಓಹೋ, ಬೇಕಾದ ಹಾಗೆ ಪ್ರಾರ್ಥಿಸಬಹುದು. ಇಂಥ ಪ್ರಾರ್ಥನೆಯಿಂದ ಶರೀರದ ಮೇಲೆ ಒಳ್ಳೇ ಪರಿಣಾಮವಾಗುವದು. ಎಷ್ಟೋ ಔಷಧಿಗಳಿಗಿಂತಲೂ ಮಾನಸಿಕ ನಂಬುಗೆಯಿಂದ ಅನೇಕ ರೋಗಗಳು ಗುಣವಾಗಿದ್ದನ್ನು ನಾವು ಕೇಳುವದಿಲ್ಲವೇ ? ಪ್ರಾರ್ಥನೆಯಲ್ಲಿ ಮನಸ್ಸಿಗೆ ದಿವ್ಯ ಸ್ಫೂರ್ತಿಯನ್ನುಂಟುಮಾಡಿಕೊಡುವ ಸಾಮರ್ಥ್ಯವಿರುತ್ತದೆ. ಶಾರೀರಿಕ ಹಾಗೂ ಮಾನಸಿಕ ವ್ಯಥೆಗಳನ್ನು ನೀಗಿಸಿಕೊಳ್ಳಲು ಪ್ರಾರ್ಥನೆಯು ಉತ್ತಮೋಪಾಯವಾಗಿದೆ. ಶರೀರಕ್ಕೂ ಮನಸ್ಸಿಗೂ ವಿಶೇಷ ಸಂಬಂಧವಿರುವದರಿಂದ ಮಾನಸಿಕ ಪ್ರಾರ್ಥನೆಯು ಶರೀರದ ಮೇಲೆ ಪರಿಣಾಮವನ್ನುಂಟುಮಾಡದಿರದು. ನಾವು ಶಾರೀರಿಕ ವಿಷಯಗಳ ಸಂಬಂಧವಾಗಿ ದೇವರನ್ನು ಬೇಡಿಕೊಳ್ಳುವಾಗ ಶಾರೀರಿಕ ನಿಯಮಗಳನ್ನು ಮೀರಿ ಏನನ್ನೂ ಕೇಳಲಾಗದು. ಮೀರಿದರೆ ನಮಗೆ ಪಾಪವು ಘಟಿಸುವದು.

೨ ನಾವು ಗಂಡಾಂತರದಲ್ಲಿ ಸಿಲ್ಕಿದಾಗ ನಮಗೆ ಸುರಕ್ಷಿತೆಯುಂಟಾಗಲೆಂದು ನಾವು ದೇವರನ್ನು ಪ್ರಾರ್ಥಿಸಬಹುದೇ ? ಈ ಪ್ರಸಂಗದಲ್ಲಿ ನಾವು ದೇವರನ್ನು ಪ್ರಾರ್ಥಿಸುವಾಗ ನಮ್ಮ ಕೈಯಿಂದಾದಷ್ಟು ಗಂಡಾಂತರದಿಂದ ಪಾರಾಗಲಿಕ್ಕೆ ಪ್ರಯತ್ನಿಸುತ್ತೇವೆ. ಇದಲ್ಲದೆ ನಮ್ಮನ್ನು ಪಾರಮಾಡಲಿಕ್ಕೆ ಪರಮಾತ್ಮನನ್ನು ಮರೆಹೋಗುತ್ತೇವೆ. ಸ್ವತಂತ್ರ ಪ್ರಯತ್ನ ಹಾಗೂ ಪರಮಾತ್ಮನ ಮೇಲೆ ಭಾರ ಈ ಉಭಯ ದೃಷ್ಟಿಯಿಂದ ಪರಮಾತ್ಮನನ್ನು ಪ್ರಾರ್ಥಿಸುವದು ಯುಕ್ತವಾದುದಾಗಿದೆ. ಯೇಸು ಕ್ರೈಸ್ತನಿಗೆ ಯಾರೋ ಒಮ್ಮೆ ವಿಷದ ಬಟ್ಟಲವನ್ನು ಕೊಟ್ಟಾಗ ಆತನು " ದೇವಾ, ಈ ಬಟ್ಟಲವು ನನ್ನ ಕೈ ಬಿಟ್ಟುಹೋದರೆ ಬಹಳೇ ಒಳಿತಾದೀತು. ಆದಾಗ್ಯೂ ನಿನ್ನಿಚ್ಛೆಯಂತೆ ಆಗಲಿ" ಎಂದುಪ್ರಾರ್ಥಿಸಿದನು. ಇದು ನಿಜವಾದ ಪ್ರಾರ್ಥನೆಯು. ಇಂಥ ಪ್ರಾರ್ಥನೆಗಳನ್ನು ಪರಮಾತ್ಮನು ಸ್ವಾಗತ ಪೂರ್ವಕನಾಗಿ ಸ್ವೀಕರಿಸುತ್ತಾನೆ. ನಮ್ಮ ದುಃಖ, ಉದ್ವಿಗ್ನತೆ, ವಿರಹಪರಿತಾಪ ಮುಂತಾದ ಸಮಯಗಳಲ್ಲಿ ಪರಮಾತ್ಮನ ಪ್ರಾರ್ಥನೆಯಿಂದ ದೊರಕುವಷ್ಟು ಶಾಂತಿ ಸಮಾಧಾನಗಳು ನಮಗೆ ಮತ್ತ್ಯಾತರಿಂದಲೂ ದೊರೆಯಲಾರವು.

ತನ್ನ ಪಾಲನೆ ಪೋಷಣೆಮಾಡಿದ ತಾಯಿತಂದೆಗಳಿಗೆ ಶಿಶುವು ತನ್ನ ಕೃತಜ್ಞತಾ ಭಾವವನ್ನೂ ಪ್ರೇಮವನ್ನೂ ವ್ಯಕ್ತಗೊಳಿಸುವದು ಯುಕ್ತವಲ್ಲವೇ? ಆದರಂತೆಯೇ ಜಗಜ್ಜನಕನಾದ ಪರಮಾತ್ಮನ ಮಕ್ಕಳಾದ ನಾವುಗಳು ಆತನನ್ನು ಕೃತಜ್ಞತಾ ಪ್ರೇಮ ಭಾವನೆಗಳಿಂದ ನಿರೀಕ್ಷಿಸುವದು ನಮ್ಮ ಆದ್ಯಕರ್ತವ್ಯವಾಗಿದೆ. ನಾವು ದುರ್ಬಲರಾದಾಗ ಅಪಾರವಾದ ಶಕ್ತಿಯನ್ನು ನಮಗೆ ದಯಪಾಲಿಸೆಂದು ಆತನನ್ನು ಬೇಡಿಕೊಳ್ಳುವೆವಲ್ಲವೇ? ಇದೇ ನಿಜವಾದ ಪ್ರಾರ್ಥನೆಯ ರಹಸ್ಯವು.

ಈ ಪ್ರಪಂಚದಲ್ಲಿ ನಮ್ಮ ಮಾನಸಿಕ ಜೀವನಪ್ರವಾಹವು ಯಾವಾಗಲೂ ಅಧೋಗತಿಗಿಳಿಸುತ್ತಿರುತ್ತದೆ. ಪರಮಾತ್ಮನು ಒಳ್ಳೆ ಉದಾತ್ತ ಜೀವನರಸದ ತವನಿಧಿಯಾಗಿರುವನು. ಆತನಿಂದಲೇ ನಾವು ಕಾಲಕಾಲಕ್ಕೆ ಶ್ರದ್ಧಾ ಪ್ರಾರ್ಥನೆಗಳ ಮುಖಾಂತರವಾಗಿ ಸ್ಫೂರ್ತಿಯನ್ನು ಹೀರಿಕೊಳ್ಳುತ್ತ ನಮ್ಮ ಜೀವನಕ್ಕೆ ಹುರುಪುಗೊಟ್ಟು ಅದನ್ನು ಉದಾತ್ತಗೊಳಿಸುತ್ತ ಸಾಗುವೆವು. ನಾವು ದೈನ್ಯದಿಂದ ಪರಮಾತ್ಮನನ್ನು ಪ್ರಾರ್ಥಿಸಿದ್ದಾದರೆ ಆತನು ನಮ್ಮ ಕೈಹಿಡಿದು ನಮ್ಮನ್ನು ಸನ್ಮಾರ್ಗಕ್ಕೆ ತಂದು ಹಚ್ಚುವನೆಂಬದರಲ್ಲಿ ಎಳ್ಳಷ್ಟು ಸುಳ್ಳಿಲ್ಲ. "ಉತ್ತಿಷ್ಠತ ಜಾಗ್ರತ ಪ್ರಾಪ್ಯ

ವರಾನ್ನಿಬೋಧತ" ಎಂಬುದಾಗಿ ನಮ್ಮ ಅಂತರಂಗಧ್ವನಿಯು ಯಾವಾಗಲೂ ನಮಗೆ ಎಚ್ಚರಿಕೆಯನ್ನು ಕೊಡುತ್ತಿರುತ್ತದೆ. ನಮ್ಮ ಪ್ರಾರ್ಥನೆಯು ಈ ಧ್ವನಿಗೆ ಕಿವಿಗೊಡುವಂತೆ ನಮ್ಮ ಹೃದಯದ ದ್ವಾರಗಳನ್ನು ತೆರೆದುಬಿಡುತ್ತದೆ.

ಬಸವಾದಿ ಶಿವಶರಣರು ಸಂಸಾರ ಸುಖವನ್ನನುಭವಿಸಬೇಕೆಂದು ಸಕಾಮ ಬುದ್ಧಿಯಿಂದ ದೇವರನ್ನು ಪ್ರಾರ್ಥಿಸಲಿಲ್ಲ. ಅವರು ಐಹಿಕ ಸುಖಗಳನ್ನು ಅದೇಕೆ, ಪಾರಮಾರ್ಥಿಕ ಸುಖಗಳನ್ನು ಸಹ ಬದಿಗೊತ್ತಿ ಕೇವಲ ಪರವಸ್ತುವಿನ ಕರುಣೆಯೊಂದು ತಮಗಿದ್ದರೆ ಸಾಕೆಂದು ಪ್ರಾರ್ಥಿಸುವರು. ಎಷ್ಟೋ ಜನ ಪುರಾತನರು ಪರಮಾತ್ಮನು ಪ್ರತ್ಯಕ್ಷವಾಗಿ ಏನು ಬೇಡುತ್ತೀ, ಬೇಡೆಂದು ಕೇಳಿದಾಗ ನಿನ್ನ ಕರುಣವೊಂದಲ್ಲದೆ ಇನ್ನಾವುದೂ ನಮಗೆ ಬೇಡವೆಂದು ಖಂಡತುಂಡವಾಗಿ ಹೇಳಿದ್ದಾರೆ. 'ಧರೆಯ ಸುಖದ ಭೋಗವೆನಗೆ। ಹರಿದು ಹೋಗಲಯ್ಯ ನಿಮ್ಮ। ಚರಣಕಮಲದಲ್ಲಿ ಮನವು ಮಗ್ನವಾಗಲೈ" ಎಂಬೀ ಮುಪ್ಪಿನ ಷಡಕ್ಷರಿದೇವರ ಪ್ರಾರ್ಥನೆಯು ನಿಷ್ಕಾಮ ಭಕ್ತಿಯ ಸಾರವನ್ನು ಮುಟ್ಟಿರುತ್ತದೆ. ಪರಮಾತ್ಮನ ಕರುಣೆಗೆ ಹಂಬಲಿಸುವ ವಿಷಯದಲ್ಲಿ ಕೆಳಗೆ ಕೊಟ್ಟ ಬಸವೇಶ್ವರನ ವಚನಗಳು ಒಳ್ಳೆ ಹೃದಯಂಗಮವಾಗಿವೆ.

"ಬಡ ಪಶು ಪಂಕದಲ್ಲಿ ಬಿದ್ದರೆ, ಕಾಲಬಡಿವುದಲ್ಲದೆ ಬೇರೆ ಗತಿಯುಂಟೆ? ಶಿವ ಶಿವಾ, ಹೋದಿಹೆ, ಹೋದಿಹೆನಯ್ಯ. ನಿಮ್ಮ ಮನದತ್ತಲೆನ್ನ ತೆಗೆಯಯ್ಯ. ಪಶುವಾನು, ಪಶುಪತಿ ನೀನು. ತುಡುಗುಣಿ ಎಂದೆನ್ನ ಹಿಡಿದು ಬಡಿಯದ ಮುನ್ನ, ಒಡೆಯ, ನಿಮ್ಮ ಬಯ್ಯದಂತೆ ಮಾಡು ಕೂಡಲಸಂಗಮದೇವಾ."

"ಅಯ್ಯಾ, ಅಯ್ಯಾ, ಎಂದು ಕರೆಯುತ್ತಲಿದ್ದೇನೆ. ಅಯ್ಯಾ, ಅಯ್ಯಾ, ಎಂದು ಒರಲುತ್ತಿದ್ದೇನೆ. 'ಓ' ಎನ್ನಲಾಗದೇ ಅಯ್ಯಾ? ಆವಾಗಳು ನಿಮ್ಮ ಕರೆವುತ್ತಲಿದ್ದುದು ಎನ್ನ ಮನವು ಕೂಡಲಸಂಗಮದೇವಾ."

ಮಳೆಯ ದೇಶದರಸು ಮಳೆಯ ರಾಜನೆಂಬ ಪೆಸರನಿಟ್ಟು
ಇಳೆಯ ಸಕಲ ಭಕ್ತಜನಕೆ ರಾಗದಿಂದ ಪೂಜೆಗೊಟ್ಟು
ತನ್ನ ದೇಶವೆಲ್ಲಮಂ ಮನೋರಥಂಗಳಿಂದೆ ತಣಿಪಿ
ತನ್ನ ಪುರದ ಪರಿಜನಂಗಳಂ ವಿಳಾಸದೊಳಗೆ ನೆರಪಿ
ಮಗನ ಹೆಸರ ಕೆರೆಯನಾರವೆಗಳನೊಪ್ಪದಿಂದಮರ್ಚಿ
ಮಿಗಿಲೆನಿಪ್ಪ ಛತ್ರ ಶಿವಪುರಂಗಳಿಂದೆ ಹತ್ತೆ ಸಾರ್ಚಿ
ಊಟ ಮೋಹ ಓಲಗಂಗಳೊಳಗೆ ಮಿಗುವ ಮಗನ ಮಾತು
ನೋಟ ಕೂಟ ಮಾಟದೊಳಗೆ ಸೊಗಯಿಸಿರ್ಪ ಮಗನ ಮಾತು
ಎಸೆವ ಜಲಧಿ ಪರಿವೃತಾವನೀಶ ಮಕುಟ ಚರಣನಾಗಿ
ವಸುಮತೀ ತಳಕ್ಕೆ ತಾನೆ ರಕ್ಷೆ ಶಿಕ್ಷೆಗೊಡೆಯನಾಗಿ
ಪುತ್ರನಾದನೆಂಬ ಸಂತಸಕ್ಕೆ ಮೇರೆ ಇಲ್ಲದಿರ್ದು
ಮಿತ್ರನುದಯದಬ್ಜದಂತೆ ಚಿತ್ತವಲರ್ದು ಸುಖದೊಳಿರ್ದು
ತಿಳಿದು ಮನದೊಳುಳಿದು ಮೀರಿ ಕಳೆದು ಸುಖದೊಳೊಪ್ಪಿ ಸಂದು
ಮಳೆಯ ದೇಶದೊಳಗೆ ದೇವರಾಜನಿಂತು ಒಪ್ಪಿ ನಿಂದು

**ಪ್ರಥಮಸ್ಥಲ ಸಂಪೂರ್ಣ.**

---

## ದ್ವಿತೀಯಸ್ಥಲ.



ವೃತ್ತ॥ ಪಡೆದೆಂ ಶಂಕರನಿಂ ಸುಪುತ್ರನೆನುತ್ತುಂ ಚಿತ್ತದೊಂದಳ್ತಿನೂ
ರ್ಮಡಿಸಲ್ಪಾಡಿಸ ತಾಡಿಸುತ್ತೆ ಪುಳಕಂ ಪೊಣ್ಮುತ್ತೆ ಸಂತೋಷದಿಂ
ಗುಡಿಗಟ್ಟುತ್ತವೆ ದೇವರಾಜ ಕುಲದೊಳ್ ಪುತ್ರೋತ್ಸವಪ್ರೀತಿಯಿಂ
ನುಡಿಯುತ್ತುಂ ಸಲೆ ದೇವರಾಜನೊಲವಿಂದೊಪ್ಪಿರ್ದನಾಸ್ಥಾನದೊಳ್

**ಗದ್ಯ**॥— ಇಂತು ಸಕಲ ರಾಜರಾಜೇಂದ್ರ ಮಕುಟಮಣಿ ನಿಕರ ವಿರಾಜಮಾನ ಘನ ಪಾದಪಯೋಜನಪ್ಪ ದೇವರಾಜಂ ಸಕಲಸಾಮಂತ ರಾಜಪುತ್ರ ದಂಡನಾಥ ಮಂಡಳಿಕ ಮಂತ್ರಿ ಮುಖ್ಯರ್ಗೆ ಬೀಳ್ಕೊಟ್ಟೋಲಗಮಂ ಪರಿಯಲ್ಕೇಳ್ದು ಸಭಾಭವನದಿಂ ಪೊರಮಟ್ಟಂತಃಪುರಕ್ಕೆ ನಡೆತಂದು ಸಾಧ್ವಿಯಪ್ಪ ಶಚಿದೇವಿಯ ನಗೆಮೊಗಮಂ ದರಹಸಿತವದನದಿಂ ನೋಡುತ್ತೆ ಸಿಂಹಾಸನಾಸೀನನಾಗುತ್ತೆ ಮಳೆಯರಾಜ ದೇವರ ಸಮಯಮೇನೆಂದು ಬೆಸಗೊಳ್ವುದುಂ ಕೇಳಿ ಕೆಳದಿಯರ್ಕೈಮುಗಿದು ದೇವದೇವ ಶಿವಪ್ರಸಾದ ನವನೀತಮಂ ಮೊಲೆವಾಲೊಡನಾರೋಗಿಸಿ ಶಿವಧ್ಯಾನ ನಿದ್ರಾಮುದ್ರೆಯಿಂ ತಾಯ ಮಗುಲೋಳ್ತಣ್ಣನಿರ್ದಪನೆಂದು ಬಿನ್ನವಿಸಿದ ಸವಿನುಡಿಗಳಂ ಕೇಳ್ದು ಕರ್ಣಕ್ಕಮೃತಮಂ ಚಲ್ಲಿದಂತಾಗೆ ತನುಗೆ ತಣ್ಪಂ ನೀಡಿದಂತೆ ಕಣ್ಗೆ ಚೆಲ್ವಂ ಸೂಸಿದಂತೆ ಉತ್ತರೋತ್ತರಸುಖತರಮನೀಯೆ ತಾನುಂ ಶಚಿದೇವಿಯುಂ ಪುತ್ರನಂ ಸ್ನೇಹರಸಂ ತೋರೆ ದೋರೆಗಣ್ಗಳಿಂ ನೋಡಿ ನೋಡಿ ಮುಂಡಾಡಿ ಮುದ್ದುಗೆಯ್ದು ಉರದೊಳೊತ್ತಿ ದಯಾರಸವನೆರೆದು ಸಲಹುವಂತೆ ಸತ್ಯಕ್ಕೆ ಶಾಂತಿಯನೂಡಿ ಸಾಗಿಸುವಂತೆ ಸಾಮರ್ಥ್ಯಕ್ಕೆ ತೇಜಮನಿತ್ತೋವುವಂತೆ ಸ ಖಕ್ಕೆ ಸವಿಯಂ ಸಲಿಸಿ ಬೆಳೆಯಿಸಂತೆ ಭಕ್ತಿಗೆ ಶಿವಜ್ಞಾನಮನಿತ್ತು ರಕ್ಷಿಸುವಂತೆ ಸುಕುಮಾರ ಕುಮಾರನಂ ಸಲಹುತ್ತಿರೆ

ಸುರತರುವಿನಂಕುರದಂತೆ ಪುಣ್ಯದ ಕೊನರಿನಂತೆ ಭಕ್ತಿಯ ಕುಸುಮದಂತೆ ಮುಕ್ತಿಯ ಫಲದಂತೆ ಬಾಲಚಂದ್ರನಂತೆ ಕಳಹಂಸನಂತೆ ಕಾಮಧೇನುವಿನ ವತ್ಸನಂತೆ ಪರುಷದ ಮರಿಯಂತೆ ನಳನಳಿಸಿ ಬೆಳೆಯುತಿರ್ಪ ಮಳೆಯರಾಜ ದೇವಂ ಶೈಶವಲೀಲೆಯೊಳ್ ಮುಂದೆ ತನಗೆ ಪ್ರತ್ಯಕ್ಷನಪ್ಪ ಶಿವನೇರಿ ಬರ್ಪ ನಂದಿಯ ನಿಲವಂ ತೋರುವಂತಂ

ಬಳಿಕ್ಕೆ ಪ್ರದಕ್ಷಿಣಕ್ಕೆ ಪಡಿಸಣವುಂ ನೋಡುವಂತೆ ದಟ್ಟಡಿ ಇಟ್ಟು ಶಿವ ಸ್ತುತಿಯುಂ ಶ್ರವಣವುಂ ಮಾಡುವಂತೆ ತೊದಳ್ನುಡಿಗಳಂ ನುಡಿದು ದೇಶಂಬೆರಸು ಕೈಲಾಸಕ್ಕೀ ತೆರದೊಳೆತ್ತಿಕೊಂಡೊಯ್ವೆನೆಂಬುದಂ ತೋರುವಂತೆ ಮುಂದಿರ್ದ ಹಾಲಹೊನ್ನ ಬಟ್ಟಲನೊಯ್ಯನೆತ್ತಿ ಸುರಿದಿರುತ್ತುಂ ಜನನ ಮರಣ ಮಾಯೆಯುಮೀ ತೆರದೊಳೊದೆವೆನೆಂಬಂತೆ ಮುಂದಿರ್ದ ಜಲ ಪಾತ್ರೆಯ ನೊದೆವುತುಂ ತನಗೆ ಹದಿನಾರುಂ ವರುಷಮೆಂದುಮ್ಮಳಿಸುವ ತಾಯ್ತಂದೆಗಳ ಮೊಗಮುಂ ನೋಡಿ ನಗುವಂತೆ ಮುಗುಳ್ನಗೆಯುಂ ನಗುತ್ತುಂ ಶಿವಾರ್ಚನೆಯುಂ ಮಾಡಲ್ವೇಳ್ಪುದೆನ್ನಂ ಬೇಗಂ ಬಳೆಯಿಸೆಂದು ಶಿವಂಗೆ ಮುನಿದು ಮೊರೆಯಿಡುವಂತೆ ಅಳುತ್ತುಂ ಮುಂದೆ ಚಂದ್ರಧರನ ಬಲವಪ್ಪ ಚರಣಂಗಳಂ ಮುದ್ದಾಡಿಸಂತುಂಗುಟಮುಂ ಸವಿವುತ್ತುಂ ಮೆಲ್ಲಡಿಗಳ ವಲ್ಲಭಂ ಕಿರುದೊಡೆಗಳ ಕೌತುಕಂ ನುಣ್ದೊಡೆಗಳ ನವೀನಂ ಸುಳಿನಾಭಿಯೆಳೆಯುಂ ನಳಿತೋಳ್ಗಳ ನಲಿವುಂ ತೆಳ್ಗಲ್ಲದ ಕವರುಂ ಮುದ್ದು ಮೊಗದ ಮಾಣಿಕಂ ಮೊಲೆವಾಲ ಬಾಯಿಗಂ ಬೆಣ್ಣೆಯ ಬೆಳೆ ಸಿರಿವಂತಂ ನುಣ್ಗುರುಳ ನೀರಂ ಅರಳೆಲೆಯ ಪರಮ ಹಂಸಂ ಮಾಗಾಯ್ಗಳ ಮಹಿಮಂ ಭಸಿತದ ರಕ್ಷೆಯುಕ್ಷಯಂ ನೀಲ ಬೊಟ್ಟಿನ ನಿರ್ಭಯಂ ಅಂಜನದ ನಿರಂಜನಂ ಪುಲಿಯುಗುರ ಸುಲಲಿತಂ ನೇವಳದ ಭಾವಕಂ ಕರವಳಯದ ಪರಬೊಮ್ಮಂ ಮುದ್ರಿಕೆಯ ಭದ್ರಗುಣಂ ಉಡೆವಣಿಯ ಚಿಂತಾಮಣಿಯುಂ ಪೊಂಗೆಜ್ಜೆಗಳ ಪರುಷಂ ಅಂದುಗೆಯಾನಂದ ನಿಧಿ ಎನಿಪ ಮಳೆಯ ರಾಜಂ ಬಾಲ್ಯವನನುಕ್ರಮದಿಂದುಳಿದು ಪಲವು ದಿನಂಗಳಂ ಕಳೆದು ಪ್ರಾಯೋಚಿತ ದಿವ್ಯ ವಸ್ತ್ರಾಭರಣ ಯಕ್ಷಕರ್ದಮಾದಿ ಲೇಪನಂ ಮಾಡಿ ಸಕಳ ಭೋಗಂಗಳಂ ತಳೆದು ಶಸ್ತ್ರಶಾಸ್ತ್ರ ಸಂಗೀತ ಸಾಹಿತ್ಯ ಕಾವ್ಯ ನಾಟಕ ತುರಂಗಮಾತಂಗಾರೋಹಣಾದಿ ಸಕಲ ವಿದ್ಯಾಪರಿಣತನಾಗುತ್ತೈದಾರೇಳೆಂಟು ಪತ್ತು ಪದಿನೈದು ವತ್ಸರಂಬರಂ ನೆರೆದು ನಳನಳಿಪ ಸೌಕುಮಾರ್ಯದಿಂ ತೊಳ ತೊಳಿಪ ರೂಪಿಂ ಥಳಥಳಿಪ ತೇಜದಿಂದೊಪ್ಪುತ್ತಿರಲೊಂದು ದಿವಸಂ

ವಸಂತಮಾಸದೊಳ್ ಸಕಲರಾಜೇಂದ್ರನಪ್ಪ ದೇವರಾಜಂ ವೈಹಾಳಿ ವಿನೋದಕ್ಕೆ ಪೊರಮಡಲೆಂದು ಮಂತ್ರಿಗಳೆಲ್ಲರ್ಗಂ ಬೆಸಸುವಲ್ಲಿ ಕುಮಾರ ಕಂಠೀರವಂ ಸುಕುಮಾರ ಸಾರ್ವಭೌಮಂ ಶಿವಭಕ್ತಿಭೂಷಣಂ ಎನಿಪ್ಪ ಮಳೆಯರಾಜದೇವಂ ತಾನುಂ ಬಂದಪೆನೆಂಬ ಬಿನ್ನಪಮುಂ ಮಂತ್ರಿಗಳಿಂದ

ರುಷೆ ದೇವರಾಜಂ ತನಯನಂ ತಳ್ಕೈಸಿ ಹರುಷ ಪುಳಕದಿಂ ಪೂರೈಸಿ ತನಿ
ನೇಹದಿಂ ಹಾರೈಸಿ ನೀನಿಲ್ಲದ ವಿನೋದಂ ತಾನೇವುದಯ್ಯ ನಡೆಯಯ್ಯ
ನಡೆ ಮಗನೆ ಮಳೆಯರಾಜದೇವ ಬಿಜಯಂ ಗೆಯ್ವುದೆಂದು ಗಲ್ಲಮಂ
ಪಿಡಿದು ತಂಬುಲಮನಿಕ್ಕಿ ಮೂರ್ಧ್ನಿ ಘ್ರಾಣಮಂ ಮಾಡಿ ಬರಲ್ವೇಳ್ದು
ಬೆಸಸೆ ನಲಿನಲಿದು ಕುಮಾರಕಂ ಕಠಾರಿಯ ಕೋಲಂ ತಿರುಹುತ್ತೊಂದೆ
ರಡು ಜಂಪಯ ಗತಿಯಂ ಸರಳಿಸಿ ನೋಡುತ್ತಂ ಸಿಂಗರದ ಮನೆಗೆ
ನಡೆತಂದಿಕ್ಕಿದ ಪಟ್ಟಗದ್ದುಗೆಯೊಳ್ ಬಿಜಯಂಗೆಯ್ದು ಕಮನೀಯ
ಕುಮಾರಂಗೆ ಸಚಿವರಾಜಪುತ್ರ ಕಸ್ತೂರಿ ತಿಲಕಮಂ ಲಲಾಟದೊಳ್ಕೈಗೊ
ಳಿಸಿ ಪರಿಮಳವನುಗುಳ್ವ ಇರುವಂತೆ ಸಂಪಿಗೆಯರಲ್ಗಳಂ ಸಿರಿ ಮುಡಿ
ಯೊಳ್ತುರುಂಬಿ ರತ್ನಾವತಂಸಮಂ ಕರ್ಣಯುಗಳಕ್ಕಳವಡಿಸಿ ದಿವ್ಯ ಚಂದ
ನಮನುದ್ವರ್ತನಮಂ ಮಾಡಿ ತೋರಹಾರಮಂ ಕೊರಳೊಳಿಕ್ಕಿ ಪದಕಮಂ
ಪೇರುರದೊಳಿರಿಸಿ ಬಾಹುಪೂರಯುಮನಿಕ್ಕಿ ಸಪುರನುಂ ಬಿಳಿಯಂಬರಂ
ಬಿಗಿದುಡಿಸಿ ಸುವರ್ಣ ಪಳಯಂ ಹೊದೆಯಿಸಿ ಕುಮಾರ ಕುಸುಮಾಯು
ಧನೆಂಬ ಬಿರುದಿನ ತೊಡರನೆಡಗಾಲೊಳಿಟ್ಟು ಶಚಿವ ರಾಜಪುತ್ರರ್ಕೈ
ಗೊಟ್ಟು ಬರೆ ಪಡಿಯರರ್ನೆಲನುಘ್ಘಡಿಸೆ ವಿಳಾಸದಿಂ ನಡೆತಂದು ಮುಂದೆ
ರಾಜಾಂಗಣದೊಳ್ ಹೊನ್ನ ಹಲ್ಲಣದಿಂ ರನ್ನದ ಸಕ್ಕರಿಕೆಯಿಂ ನೆಲನಂ
ಚುಂಬಿಸುವ ಚಮರದಿಂ ಮಾಣಿಕ್ಯದ ಮೊಗವಾಡದಿಂ ಮುತ್ತಿನ ತೋರ
ದಂಡೆಯಿಂ ಹೊಕ್ಕುಳ ಹೊನ್ನ ಗಂಟೆಯಿಂ ನಟ್ಟ ಕಿವಿಗಳಿಂ ಹಳಿಹಳಿಪ
ಕಣ್ಗಳಿಂ ಉಚ್ಚೈಶ್ರವಮನಿಳಿಕೈವ ತುರಂಗದೊಳ್ ಕುಳಿತು ಕಂಧರವ
ಬೋಳೈಸುತ್ತಿರಲಲ್ಲಿಗೆ ಬಿಜಯಂಗೆಯ್ದು ಹಂಕಣಿಯ ಹಂಗಿಲ್ಲದೆ ಭೋಂಕನೇ
ರಿಬರೆ ಪುರಜನಂ ಕೈಮುಗಿಯೆ ಕವಿಗಳ್ಕೈವಾರಿಸೆ ವಂದಿಗಳ್ಸಂದಣಿಸಿ ಪೊಗಳೆ
ಹರಭಕ್ತರ್ಪರಸೆ ಪಲ್ಲವ ಸತ್ತಿಗೆ ಮೇಲ್ಮಸಗೆ ನಿಸ್ಸಾಳಧ್ವನಿ ಪೊಣ್ಮೆ ಕಹ
ಳಾರವಮುಣ್ಮೆ ಉದಯಗಿರಿಯನೇರಿದ ಸದಮಳ ಸೂರ್ಯನಂತೆ ಬೆಳ
ಬೆಳಗುತುಂ ಗಳಗಳನೆ ನಡೆತಂದು ದೇವರಾಜನೇರಿದ ಚೌದಂತನ
ಮಗ್ಗುಲೊಳೊಗ್ಗಿ ನಿಂದಿರೆ ಕುಮಾರನಂ ನೋಡಿ ಹರುಷಂ ಮಿಕ್ಕು ಮುಗು
ಳ್ನಗೆ ನಗುತ್ತುಂ ನಡೆಯ ವೇಳೆಸೆ ಸಿಂಧುರದ ಸಂದಣಿಯಿಂ ತುರಂಗ
ದೊತ್ತರದಿಂ ವರೂಥದ ವೀಥಿಯಿಂ ಪದಾತಿಬಲದೊತ್ತೊತ್ತಿಯಿಂ ಕ್ಷೀರ
ವಾರಾಶಿ ಮೇರೆದಪ್ಪಿದಂತೆ ಪುರಮಂ ಪೊರಮಟ್ಟು ವೈಹಾಳಿಯ ಬಯಲ್ಗೆ
ನಡೆತಂದು ದೇವರಾಜಂ ಮಗನೇರಾಟಮಂ ನೋಡುವಕ್ಕರಿಂ ಕರಿಘಟೆ
ಗಳಂ ಸುತ್ತಂ ನಿಲಿಸಿ ಮುಂದೆ ನಿಂದ ರಾಜಪುತ್ರರ್ಗೆ ಕೈವೀಸಲೊಡಂ

ಸಿಂಹದ ಜಂಗುಳಿ ಶರಭನಂ ಕೆಣಕುವಂತೆ ತನತನಗೆ ಕುಮಾರನಂ ಮೂದಲಿಸಿ ಕಾಳಗಂದೆಗೆಯೆ ಮುಳಿದು ನೋಡಿ ಮಳೆಯರಾಜಂ ಘುಡು ಘುಡಿಸಿ ಪಿಡಿದ ವಾಘೆಯಂ ಬಲಗಯ್ಯ ಸಬಳದ ಪೊಟ್ಟೆಯಿಂ ಚಿಲ್ವ ದಿಟ್ಟೆಯಿಂ ಮಾಯೆಯ ಕುದುರೆಯಂ ರೂಹುಗೋಳಿಸಿದ ವಿದ್ಯಾಧರನಂತೆ ತುಡುಂಕದ ಮುನ್ನಂ ಮನದೊಡನೆ ಮಣಿವ ತಿರುಪದ ಮುನ್ನಂ ಕೆಯ್ಯೊಡನೆ ಬರ್ಪ ಪುರ್ಬಿನ ಜರ್ಬಂ ಪರ್ವತಮನಡರ್ವ ಜಾತಿಹಯಮಿರಸೆ ಡಬೆಲಕ್ಕೆ ತಿರುಪಿ ನೂಂಕಿ ಸರಿಸಬೀದಿಯೊಳ್ಪೆನ್ನಟ್ಟಿ ಮುಟ್ಟಿ ಮಿಂಚನೇರಿದ ಮೇಘವಾಹನನಂತೆ ರಾಯ ರಾಹುತರನಟ್ಟಿ ತಿವಿದು ರಾಜಪುತ್ರರಂ ಬೆಂಕೊಂಡು ಸುಳಿದ ಕುದುರೆಯಂ ಸೆಳೆಪೇಡಾಡಿ ಮೂದಲಿಸಿ ಬಂದ ಮನ್ನೆಯ ರಾವುತರಂ ಬಲ್ಲೆಯದ ಪಟ್ಟಸದೊಳುಂಡಿಗೆಯೊತ್ತಿ ಬಿಟ್ಟು ನಿಚ್ಚಟದ ರಾವುತರಂ ಲಚ್ಚಣಂದೆಗೆದು ಮುಂಗುಡಿಯ ರಾವುತರಂ ಭಂಗಿಸಿ ತಿವಿದು ತನಗಿದಿರಂ ಕಾಣದೆ ನಿಂದಿರ್ದು ತನ್ನೇರಾಟಕ್ಕೆ ದಿಟ್ಟೆಯಾದಪುದೆಂದು ಭೂವನಿತೆ ತೂಪಿರಿದಂತೆ ಖುರಪುಟದಿಂ ನೆಗೆದ ಧೂಳೀಜಳಂ ಮುಖದೋಳ್ಮಿರೆಯೆ ಮಾಸಿದ ಚಂದ್ರನಂತೆ ಬಳಲ್ದ ಬಾಲಾರ್ಕನಂತೆ ತಿರುಗಿ ಬಂದು ಮಳೆಯರಾಜಂ ದೇವರಾಜಂಗೆರಗಿ ಮಗನಂ ನೋಡಿ ಮನದೊಳ್ತೂಪಿರಿದು ಕಣ್ಣೊಳಪ್ಪಿ ಹೊದೆದ ಪಟ್ಟಾವಳಿಯಂ ನಿವಾಳಿಸಿ ಬಿಸುಟು ವೈಹಾಳಿ ವಿನೋದ ಸುಖಸಮಾಪ್ತಿ ಚಿತ್ತಂ ತಿರುಗಿ ಸರ್ವಸಂಭ್ರಮದಿಂ ಮಳಯಾವತಿಪುರಮಂ ಪೊಕ್ಕರಮನೆಗೆ ಬಂದು ಸಕಲ ಸಚಿವ ಸಾಮಂತ ರಾಜಪುತ್ರ ದಂಡನಾಥಯೂಥಮಂಡಳಿಕಮಂತ್ರಿಮುಖ್ಯರ್ಗೆ ಬೀಳ್ಕೊಟ್ಟು ಪಟ್ಟದಾನೆಯಿಂದಿಳಿದು ತಾನುಂ ಕುಮಾರನುಂ ಸಂತಸದೊಳಂತಃಪುರಕ್ಕೆ ನಡೆತಂದಿಕ್ಕಿದ ಪಟ್ಟಗದ್ದುಗೆಯ ಮೇಲೆ ಕುಮಾರನಂ ಬಿಜಯಂಗೈಸಿ ಕೋಮಳಾಂಗನೆಯರಿಂ ಮಂಗಳಾರತಿಯನೆತ್ತಿಸಿ ದೇವರಾಜನುಂ ಶಚಿದೇವಿಯುಂ ಮಗನ ಯವ್ವನೋದಯಮಂ ಶೃಂಗಾರದೇಳ್ತರಮಂ ಸೌಕುಮಾರ್ಯದ ಸಂದಣಿಯಂ ಕಂಡು ಹೊರೆಯೇರಿ

ಶಿವಂ ಕೊಟ್ಟಾಯುಮಂ ನೆನೆದು ಹೊರೆ ಇಳಿದು ಮನವಳಿದು ಬೆಂಕಿಯೊಳ್ಪಿಸುಟ ಮಲ್ಲಿಕಾಮಾಲೆಯಂತೆ ಕಾಳ್ಗಿಚ್ಚಿನಿಂದರೆ ಬೆಂದ ಹಂಸ ಮಿಥುನದಂತೆ ಕರ್ರನೆ ಸುಯಿದು ಅಂತಸ್ಥ ಸಂತಾಪ ಶಿಖಿಯಿಂ ಕುಕ್ಕಳಂ ಕುದಿದು ಶೋಕರಸ ಉರ್ಕೆ ಪರಿದೀರ್ವರುಂ ಕಣ್ಣನೀರಿಂ ಮುಂಗಾಣದೆ ಬರೆದಂತೆ ಶೋಕದಿಂ ಕರುವಿಟ್ಟಂತೆ ನಿಂದಿರೆ ಮಳೆಯರಾಜಂ ಕಂಡು

ಮನದೊಳ್ಳೊಂದು ಕೌತುಕಂ ಬಟ್ಟಿದೇಸದೇನಮೃತ ರಸದ ನಡುವೆ ವಿಷಂ ಬೆಳಗಿನ ನಡುವೆ ಕಳ್ತಲೆ ಬೆಳ್ದಿಂಗಳೊಳ್ಗಳ್ಬಿರಿ ಶಿವಭಕ್ತರ ನುಡಿಯೊಳ್ಪುಸಿ ಪಟ್ಟುವಂತೆ ಸಮಸ್ತರಾಜ್ಯಸಂಪದದೊಳಿನ್ನಂ ಮುಂದಿಟ್ಟುಕೊಂಡಿರ್ದಸುಖಸಮಯದೊಳ್ ಶೋಕಂ ಪುಟ್ಟುವುದಿದೇನು ಕಾರಣಂ ಅದಂ ಪೇಳ್ದಡಲ್ಲದೆ ಆರೋಗಣೆಯಂ ಮಾಡೆನೆಂದು ನುಡಿದ ಮಳೆಯದೇವಂಗೆ ತಂದೆ ತಾಯ್ಗಳ್ಮತ್ತೆ ಮತ್ತಳುತ್ತುಂ ಕಣ್ಣೀರನುಗುಳುತ್ತುಂ ಕೇಳೆಲೆ ಕುಮಾರ ನೀಂ ವರಪುತ್ರಂ ನಿನಗೆ ಶಿವಂ ಕೊಟ್ಟಾಯು ಪದಿನಾರುಂ ವರುಷಂದಿಂಗೆ ಪದಿನೈದು ವತ್ಸರಂ ಕೀವಿದುದಿನ್ನೊಂದು ವರುಷಕ್ಕೆ ನಿರ್ವಾಣಪದಂ ನಿನಗೆಂದೊಟ್ಟಿಯೊರಲುವ ಪಿತಮಾತೆಯರಂ ಅನುನಯದಿಂ ಸಂತೈಸಿ ಪಿರಿದಪ್ಪ ಕಾರ್ಯವೆಂದಿರ್ದೆ ನೋಡ ಇದಕ್ಕಿನಿತೇಕೆ ಕೊಟ್ಟ ಶಿವನಿರ್ದಪಂ ಪಡೆದವರ್ನೀವಿರ್ದಪಿರಿ ಪುಟ್ಟಿದವಂ ನಾನಿರ್ದಪೆಂ ಇನ್ನೊಂದು ವರುಷಮಿರ್ದಪುದು ಶಿವಂ ಕರುಣಿ ಎನಗೆ ಸಾವಿಲ್ಲವೆಂದು ಸಂತೈಸಿ

ಧೈರ್ಯನಿಧಿ ಶಿವಜ್ಞಾನ ಸಂಪನ್ನಂ ಸಾಹಸಾಭರಣಂ ಸುಖಮಜ್ಜನಂ ಮಾಡಿ ತಾಯ್ತಂದೆಗಳೊಡನಮೃತಾನ್ನವನಾರೋಗಿಸಿ ಪಚ್ಚಕಪ್ಪುರದ ವೀಳೆಯಮಂ ಕೊಂಡು ಮಲ್ಲಮೇಷಮಹಿಷ ಕುಕ್ಕುಟಾದಿ ಸಕಲ ಯುದ್ಧಂಗಳಂ ನೋಡುತುಂ ಗೀತವಾದ್ಯನೃತ್ಯಂಗಳಂ ಕೇಳುತುಂ ದೇವರಾಜನಿಂ ಶೈವೋಪದೇಶಸಂಪನ್ನನಾಗಿ ಕೆಲವು ದಿನಂಗಳಂ ಕಳೆಯೆ ಪಿತಮಾತೆಯರಿಲೆ ಮಗನೆ ನಿನಗಿನ್ನರುದಿಂಗಳೆಂದಡರಿಯದಂತಿರ್ಪಂ ಮೂರು ತಿಂಗಳಿನೆ ಮೌನದಿಂದಿರ್ಪಂ ತಿಂಗಳಿನೆ ಪಿಂಗದೆ ಸುಮ್ಮನಿರ್ಪಂ ಏಳು ದಿನಮೇನೆ ಕೇಳದಂತಿರ್ಪ ನಾಳೆ ಮಗನೇ ತಪ್ಪದು ನೀಂ ಮಾಳ್ಪ ಮನೋರಥಂಗಳಂ ಮಾಡೆಂದು ದುಃಖಜಲಭರಿತನಯನ ಪುಟರಾಗುತುಂ ಪೇಳೆ

ಕೇಳ್ದಂದಿನಿರುಳ್ ಸಕಲ ಶಿವಭಕ್ತರಂ ಬಿಜಯಂಗೈಸಿ ತಂದು ಶಿವರಾತ್ರಿಯಂ ಮಾಡಿ ಮರುದಿನ ಉದಯ ಸಮಯದೊಳೇಳ್ದು ಶುದ್ಧಾಂಗನಾಗಿ ಭಸಿತೋದ್ಧೂಳನಂ ಮಾಡಿ ರುದ್ರಾಕ್ಷಿಗಳಂ ಧರಿಸಿ ಪರಿಚಾರಕರ ನಳವಡಿಸಿ ಪುರದ ಕೆಲದ ಕೇಳೀವನದ ಸ್ವಯಂಭುಲಿಂಗದ ಸಮೀಪಕ್ಕೆ ಬಂದು ತನ್ನ ಮನದನ್ನರಿರ್ಬರಂ ನಿರ್ಮಲ ಕಮಲ ಮುಕುಳದಳಂಗಳಂ ತರಲ್ಕೆ ನಿಯಾಮಿಸಿ ನದಿಯುಗ್ಗವಣೆಯಂ ತಾನೆ ತಂದು ಸಹಸ್ರಾಭಿಷೇಕವ

ನೇಕ ಚಿತ್ರದೊಳ್ಮಾಡಿ ಮಜ್ಜನಕ್ಕೆರೆದು ಕುಂಕುಮ ಚಂದನಾನುಲೇಪನಂಗಳಂ ಸುಖದೊಳಿತ್ತು ಮಘಮಘಿಪ ಧೂಪಮನಿಕ್ಕಿ ಥಳಥಳಿಸುವಾರತಿ ಎತ್ತಿ ಭಕ್ತಿ ಸಹಿತಮೃತಾನ್ನಮನಾರೋಗಿಸಲಿತ್ತು ಪಚ್ಚೆಕರ್ಪೂರ ತಾಂಬೂಲಮನಿತ್ತು ಪ್ರದಕ್ಷಿಣ ಸಹಿತಂ ಪ್ರಣುತನಾಗಿ ಪದ್ಮಾಸನನಾಗುತ್ತಂ ಕೆಲಬಲದೊಳೊಟ್ಟಿರ್ದ ಕಮಳಮುಕುಳಂಗಳೊಂದೊಂದ ಕೊಂಡು ಶಿವನಂ ನೆನೆದು ತನ್ನಂ ತಿಳಿದು ಮನಮಂ ಸ್ಥಿತಿಟ್ಟು ಬುದ್ಧಿಯಂ ಶುದ್ಧಯಿಸಿ ಚಿತ್ತಮಂ ತಿಳಿವಿಟ್ಟು ಅಹಂಕಾರಮನಗಲ್ಚಿಸಿ ಕಾಮಮಂ ಕಡೆಗೊತ್ತಿ ಕೋಪಮಂ ಕೆಲಕ್ಕೆ ಸಾರ್ಚಿ ಲೋಭಮಂ ಲಾಲಿಸದೆ ಮೋಹಮಂ ಮನ್ನಿಸದೆ ಮದಮಂ ಮುರಿದು ಮತ್ಸರಮಂ ನುಚ್ಚುಗುಟ್ಟಿ ತಾಪತ್ರಯಕ್ಕೆ ತೆರಹುಗೊಡದೆ ಹೃದಯ ಕಮಳಮನೆಡೆ ಮಾಡಿ ಜ್ಞಾನ ಕನ್ನಿಕೆಯ ಗದ್ದುಗೆ ಇಕ್ಕಿ ಮನದ ಬೆಳಗಂ ಪಚ್ಚಡಿಸಿ ಪರಂಜ್ಯೋತಿಯೊಳ್ನಿತ್ಯನಂ ನಿರ್ಮಳನಂ ಕಾರುಣ್ಯನಿಧಿಯಂ ಶಿವನಂ ಶಂಕರನಂ ಕಣ್ತೀವಿನೋಡಿ ಮನಂ ತೀವಿ ನೆನೆದು ಭಾವಂ ತೀವಿ ಬರಿಸಿ ಮೈತೀವಿ ಪುಳಕವನಾಂತು ನಾಲಿಗೆ ತೀವಿ ಬಣ್ಣಿಸಲೆಂದು ಮಳೆಯರಾಜಂ ವಿರೂಪಾಕ್ಷವರಪುತ್ರಂ ಸ್ತೋತ್ರಾವೃತದಿಂ ಬಣ್ಣಿಸುತ್ತಿರೆಯಿರೆ

## ದ್ವಿತೀಯ ಸ್ಥಳ ಸಮಾಪ್ತಂ.



## ತೃತೀಯ ಸ್ಥಳ

ವೃತ್ತ॥ ದೇವ ಸಮಸ್ತ ಮಸ್ತಕದ ಭೂಷಣದೇವ ಕಿರೀಟಕೋಟಿಸಂ
ಸೇವಿತ ಪಾದದೇವ ಕುಲದೇಹ ವಿಮಂಡಿತಕಾಯದೇವವಿ :
ದ್ರಾವಣ ದೇವ ಚಂದ್ರಧರ ದೇವಕೃಪಾಕರ ರಕ್ಷಿಸೆಂದು ತಾಂ
ದೇವರ ದೇವನಂ ಮಳೆಯರಾಜ ನೃಪಂ ಸ್ತುತಿಗೈದನಕ್ಕರಿಂ॥

### ರಗಳೆ.

ಇಂತು ಮಳೆಯರಾಜ ದೇವನಭವನಂ ಜಗಿಲ್ತು ನೋಡಿ
ಕಂತುಹರನ ಚಂದ್ರಧರನ ಮಹಿಮೆಯೊಳಗೆ ತಿಳಿದು ಕೂಡಿ
ತ್ರಿಣಯನಪ್ರಸಾದದರಿಕೆವಟ್ಟು ಭಕ್ತಿಯೊಳ್ಮನದಂದು
ತಣಿದು ತಣಿಯಲಾರದಲ್ಲಿ ಮತ್ತೆ ಮತ್ತೆ ಪೊಗಳಲೆಂದು
ದೇವ ತರಣಕೋಟಿಗುನ್ನತ ಪ್ರಭಾವತೇಜ
ದೇವ ಹರಿವಿರಿಂಚಿಸುರಪಮುನಿಗಳರಿಯದಾದಿ ಬೀಜ
ದೇವ ದುರಿತಮಥನಕಾಲ ಮಥನಪುಷ್ಪ ಬಾಣಮಥನ
ದೇವ ನಾಗಮಥನ ಪುಂಡರೀಕ ಮಥನ ಪುಣ್ಯ ಕಥನ
ದೇವ ಸಲಿಲಶಯನ ನಯನಮಂಡಿತ ಪ್ರಸಿದ್ಧ ಚರಣ
ದೇವ ಕಮಳಪುತ್ರ ಮಸ್ತಕಪ್ರಯುಕ್ತ ಹಸ್ತಕಿರಣ
ದೇವದೇವ ನಿಕರದೂರ ಪರಮ ಭಕ್ತಜನ ಸಮೀಪ
ದೇವ ನಿರ್ಮಳ ಪ್ರದೀಪ ಸಕಳ ನಿಃಕಳಸ್ವರೂಪ
ದೇವ ಭರ್ಗ ಭೀಮ ಸರ್ವಭುವನ ಭವನ ತಿಮಿರಹರಣ
ದೇವ ಘನ ಪುರಾತ ಗೀತ ನೂತನ ಪ್ರಸಂಗಕರಣ
ಕರುಣಿಸೆನಗೆ ಪುಣ್ಯಯೂಥ ಇಳೆಯ ಜನದ ನಾಥ ನಾಥ
ಕರುಣಿಸೆನಗೆ ಭಾಳನಯನ ಶೈಲಜಾಮನೋವರೂಥ

ಎಂದು ಪೊಗಳ್ವ ನುತಿಗಳೊಳಗೆ ಚಂದ್ರಮೌಳಿ ಸಿಲ್ಕಿ ನಿಂದು
ಮುಂದೆ ಲಿಂಗದಿಂದೆ ನಿಜದಿರೂಪವೆತ್ತು ತೋರಿ ಬಂದು
ಜಡೆಯ ನಡುವೆ ಮೆರೆವ ನದಿಯ ತಡೆಯೊಳೊಪ್ಪುತಿರ್ಪ ಶಶಿಯ
ಕಡು ಪೊಡರ್ಪಿನೊಳಗೆ ಸುಳಿದು ಘುಳುಘುಳಿಪ್ಪ ಭಾಳಶಿಖಿಯ
ಉರಗ ಕುಂಡಲಂಗಳೊಳಗೆ ಸೆಣಸಿ ಹೊಳೆವ ಗಳದ ವಿಷದ

ಸುರುಚಿರಪ್ರಕಾಶದಿಂದೆ ಶೋಭಿಪ ಭುಜದ ಪಂಚಮುಖದ
ಕರಿಯನುಗಿದ ಹೊದಿಕೆಯೊಪ್ಪೆ ಪುಲಿಯ ಚರ್ಮದುಡಿಗೆ ಮೆರೆಯೆ
ಹರಿಯ ನಯನ ನವ ಮರೀಚಿಪದ ತಳಾಗ್ರದಿಂದೆ ಮೆರೆಯೆ
ದೇವ ಗಿರಿಜೆಯರಸನಲ್ಲಿ ತನ್ನ ನಿಜವನೊಲಿದು ತೋರಿ

ಭಾವಿಸುತ್ತೆ ಭಕ್ತನಲ್ಲಿಗೆಯ್ದೆ ನಡೆದು ಬಂದು ಮೀರಿ
ಬೇಡು ಮಳೆಯರಾಜ ಬೇಡಿಕೊಳ್ಳು ನೆನೆದುದೀವೆ
ನೆನುತೆ ನೋಡಿ ಮೋಹದಿಂದೆ ಮಗನೆ ಬೇಡು ಬೇಡು ಈವೆನೆನುತೆ
ಮುಂದೆ ನಿಂದ ಚಂದ್ರಧರನನಂದು ಮಳೆಯರಾಜನರಿದು
ಮುಂದುಗೆಟ್ಟು ನುಡಿ ಸಡಿಲ್ದು ಸುಖದ ಮೂರ್ಛೆಯೊಳಗೆ ತಿಳಿದು
ಮೆಲ್ಲಮೆಲ್ಲನೆಚ್ಚರೊಳಗೆ ಸಂದು ತಿಳಿದು ನೋಡಿ ಕಂಡು
ಅಲ್ಲಿ ಬೇಡಿಕೊಂಡನಮಮ ಮಳೆಯರಾಜನಿಂಬುಗೊಂಡು
ದೇವ ಮಾತೃಪಿತರ ಮನದ ಮಾಯೆಯಂ ಸಡಿಲ್ಚಿ ಕಳೆದು
ದೇವ ಎನಗೆ ಕರುಣಿಪುದು ಶತಾಯುವಂ ದಯಾಳು ತಿಳಿದು
ಎಂದೊಡಾಯುವಿತ್ತೆ ಮತ್ತೆ ಬೇಡು ಮತ್ತೆ ಬೇಡೆನುತ್ತೆ
ಇಂದುಶೇಖರಂ ಪ್ರಮೋದದಿಂದೆ ಬೇಡಿಕೊಳ್ಳೆನುತ್ತೆ
ಇರೆ ಕುಮಾರನಲ್ಲಿ ಬೇಡುತಿರ್ದನಭವನಿಚ್ಛೆಯರಿದು
ಹರನ ಕರುಣವೆಯ್ದೆ ತನ್ನ ಮೇಲುವರಿವ ಭರವನರಿದು
ದೇವ ಮಾತೃಪಿತರನಾಥ ಬಂಧು ವರ್ಗವೆಲ್ಲ ಸಹಿತ
ದೇವ ಬಾಲವೃದ್ಧರೆನ್ನದೆನ್ನ ದೇಶವೆಲ್ಲ ಸಹಿತ
ಈಶ ಕರುಣಿಸೆನ್ನ ರಥಪದಾತಿ ಸರ್ವ ರಾಜ್ಯ ಸಹಿತ
ದೇಶದೊಳಗೆ ಬಾಳುತಿರ್ಪ ಮೃಗಕುಲಂಗಳೆಲ್ಲ ಸಹಿತ
ಆನೆ ಮೊದಲಿರುಂಪೆ ಕಡೆ ಯೆನಿಪ್ಪ ಜೀವರಾಶಿ ಸಹಿತ
ದಾನನಿಧಿಯೆ ಕರುಣಿ ಕರುಣಿಸೆನ್ನ ಚನ್ನ ಭಕ್ತಿ ಸಹಿತ
ಮುಂದೆ ನೂರು ವತ್ಸರಂ ಬರ್ದುಂಕಿ ಪೂಜೆಗೈದ ಬಳಿಕ
ಇಂದುಮೌಳಿ ನಿಮ್ಮ ನಿಜದ ಭಕ್ತಿ ಕೊರ್ವಿ ಬೆಳೆದ ಬಳಿಕ
ಕೊಂಡು ಪೋಪುದಯ್ಯ ರಜತಗಿರಿಗೆ ವರವಿದೆಂದು ಬೇಡೆ
ದಂಡಧರ ತಮಾರ್ಕ ಕರುಣಿಸೆಂದು ನಿಷ್ಠೆಯಿಂದ ಬೇಡೆ
ಕೊಟ್ಟೆನಯ್ಯ ಕೊಟ್ಟೆನರಸ ಕೊಟ್ಟೆನೆನ್ನ ಭಕ್ತನಿಧಿಯೆ
ಕೊಟ್ಟೆನೆಲೆಲೆ ಮಳೆಯ ರಾಜ ಸುಖದೊಳಿರ್ಪುದೆನ್ನ ಸುಧೆಯೆ

ಎಂದು ವರವನಿತ್ತು ಶಂಭು ಮತ್ತೆ ಲಿಂಗದೊಳ್ಪುಗಲ್ಕೆ
ಇಂದುವದನೆ ಶೈಲಸುತೆಯೊಳೊಂದು ಗೂಡಿ ಸುಖಮಿರಲ್ಕೆ

ಇತ್ತಲೆಳ್ದು ಮಳೆಯರಾಜನುತ್ಸವಕ್ಕೆ ಹೆಚ್ಚುಗೊಟ್ಟು
ಚಿತ್ರದೊಳ್ಸಮಸ್ತ ಸಂತಸಂಗಳಂ ತೆರಳ್ಚಿ ಇಟ್ಟು
ರಂಗಮಂಟಪಕ್ಕೆ ಬಂದು ಕುಣಿದು ತಣಿದು ತೇಗಿ ಕೂಗಿ
ಲಿಂಗವಿತ್ತ ವರಕೆ ಹರುಷವೇರಿ ಮೀರಿ ನಿತ್ಯನಾಗಿ
ದೇವರಾಜನಂಘ್ರಿಯೊಳ್ಪ್ಪರಳ್ದು ಹೊಮ್ಮಿ ಭರದೊಳಪ್ಪಿ
ದೇವ ಶಟಯನಪ್ಪಿ ಮತ್ತೆ ಮತ್ತೆ ತಾಯನಗಲದಪ್ಪಿ
ಭಕ್ತರಂ ಪ್ರಧಾನಿ ಮಂತ್ರಿ ಮುಖ್ಯರಂ ನಿರಂತರಪ್ಪಿ
ಭಕ್ತಿ ಮಿಕ್ಕು ಕಂಡರೆಲ್ಲರಂ ಸರಾಗದಿಂದಲಪ್ಪಿ
ಚಿಪ್ಪುಗಳೆದ ಮುತ್ತಿನಂತೆ ರಂಗವಿಟ್ಟ ರನ್ನದಂತೆ
ಒಪ್ಪವಿಟ್ಟ ನಿಷ್ಠೆಯಂತೆ ಬಣ್ಣವಿಟ್ಟ ಭಕ್ತಿಯಂತೆ
ಎಸೆದ ಪುಣ್ಯದಂತೆ ಭೂಮಿ ತಳೆದ ಕಲ್ಪತರುವಿನಂತೆ
ಮಿಸುಪ ಸೂರ್ಯನಂತೆ ಹೊಗರ ನೆತ್ತಿದ ತ್ರಿಶೂಲದಂತೆ
ತೊಳಗಿ ಬೆಳಗಿ ದೇವರಾಜನೊಡನೆ ಮತ್ತ ಗಜವನೇರಿ
ತಳೆಯ ನೆಳಲ ತಣ್ಪಿನೊಳಗೆ ಮೆಲ್ಲನಡಿಯನಿಟ್ಟು ಮೀರಿ
ಎಡಬಲಂಗಳೊಳಗೆ ಸಚಿವರಾಜಪುತ್ರರಿಡಿದು ನಡೆಯೆ
ಒಡನೆ ಗಜತುರಂಗ ರಥ ಪದಾತಿ ವೃಂದವೆಯ್ದೆ ನಡೆಯೆ
ಮಳೆಯ ದೇಶದೊಳಗೆ ಸಂತಸಂಗಳಿಂದೆ ಗುಡಿಯನೆತ್ತಿ
ಮಳೆಯುವತಿಯ ಸತಿಯರೆಲ್ಲ ನೆರೆದು ಮುಡಿಯ ಗುಡಿಯನೆತ್ತಿ
ಬಂದು ಮಳೆಯುವತಿಯನತಿ ವಿಳಾಸದಿಂದ ನಲಿದು ಪೊಕ್ಕು
ನಿಂದು ಮೆರೆವ ನಿಜ ನಿವಾಸವಳಯದೊಳಗೆ ಭಕ್ತಿ ಮಿಕ್ಕು
ಆನೆಯಿಂದ ಮೆಲ್ಲನಿಳಿದು ಸಿಂಹಪೀಠಕಾಯನಾಗಿ
ಮಾನಿ ಮಳೆಯರಾಜನಲ್ಲಿ ಸಭೆಯ ನಡುವೆ ಹರುಷನಾಗಿ

ಪುರಜನಕ್ಕೆ ಪರಿಜನಕ್ಕೆ ಭಕ್ತಿಯುಕ್ತರಾಗವೇಳ್ದು
ಪುರಪುರಕ್ಕೆ ದೇಶದೇಶದತ್ತಲರ್ಚಿಸಲ್ಕೆ ಪೇಳ್ದು
ಶಿವನ ಪೂಜೆಗೆಯ್ವುದೆಂದು ತನ್ನ ದೇಶದೊಳಗೆ ಬೀರಿ
ಭವನನರ್ಚಿಸಲ್ಕೆ ತನ್ನ ಸಕಳ ದೇಶದೊಳಗೆ ಸಾರಿ

ನಿತ್ಯ ಪೂಜೆಗೆಂದು ಮಾಳಿಯಾರಾಜದೇವನುರ್ಬಿ ಕೊರ್ಬಿ
ಸತ್ಯಶರಣಸೈದಿ ಶಿವನ ನಿಳಯದೊಳಗೆ ಹೀವಿ ಪರ್ಬಿ
ಪಲ್ಲವಿಪ್ಪ ಪುಳಕದೊಳಗೆ ಬೆವರ ಬಿಂದು ಬೀಡಬಿಟ್ಟು
ಲಲ್ಲೆಯೊಳಗೆ ಗದ್ಗದಂಗಳಡಸಿ ಮುಂದಣಡಿಯನಿಟ್ಟು
ಸುಖಜಲಂ ವಿಲೋಚನಂಗಳಿರ್ಪಡಿಗಳನ್ನೊತ್ತಿ ಪರಿಯೆ
ಮುಖದ ಮುಸಿಸು ನೇಹ ಜಗಳದೊಳಗೆ ಶಿವನನಪ್ಪಿ ನೆರೆಯೆ
ಮಜ್ಜನಕ್ಕೆ ಮೆಲ್ಲಮೆಲ್ಲನೆರೆದು ಮತ್ತೆ ಪುಳಕಿಸುತ್ತೆ
ಪಜ್ಜಳಿಪ್ಪ ಶಿವನನೊಲಿದು ಮುಟ್ಟಿ ಮುಟ್ಟಿ ಕಂಪಿಸುತ್ತೆ
ಇಂದುಮೌಳಿಗಿತ್ತು ನೋಡಿ ಮತ್ತೆ ಮತ್ತೆ ಲಾಲಿಸುತ್ತೆ
ಚಂದನಕ್ಕೆ ಮೃಗಮದಕ್ಕೆ ಹದನನಿತ್ತು ಬಣ್ಣಿಸುತ್ತೆ
ಸೊಂಪು ಮಿಗುವ ಸಂಪಗೆಗಳ ಕಂಪಿನೆಸಳನೆತ್ತಿಕೊಂಡು
ಇಂಪನಾಳ್ವ ಜಡೆಯ ಮುಡಿಗೆ ಮುರುಬಿ ಸುಖವನೊಪ್ಪುಗೊಂಡು
ನವ್ಯ ಕುಸುಮ ಸಂಕುಳಂಗಳಿಂದೆ ಒರ್ಮೆ ಪೂಜೆಗೆಯ್ದು
ದಿವ್ಯ ವಸ್ತ್ರದಿಂದೆ ಒರ್ಮೆ ಪೂಜೆಗೆಯ್ದು ಪೂಜೆಗೆಯ್ದು
ವಿಮಳ ಧೂಪವಿಕ್ಕಿ ಬೆಳಗನೆತ್ತಿ ಎತ್ತಿ ನೋಡಿ ನಲಿದು
ಅಮೃತರಸವನೂಡಿಯೂಡಿ ವೀಳೆಯಂಗಳಿತ್ತು ಮಣಿದು
ಶೃಂಗರಕ್ಕೆ ತನುವನಿತ್ತು ಮನವನಿತ್ತು ತನ್ನನಿತ್ತು
ಹಿಂಗದಪ್ಪಿ ಹಿಗ್ಗಿ ಹೆಚ್ಚಿ ಲಿಂಗದತ್ತ ಚಿತ್ತವಿತ್ತು
ಪೂಜೆ ಎಲ್ಲವಂ ಸಡಿಲ್ಚಿ ಮತ್ತೆ ಪೂಜೆಗೆಯ್ದು ನೋಡಿ
ಪೂಜೆಗೆಟ್ಟು ಸೀಮೆಗೆಟ್ಟು ಮಿಕ್ಕು ನುಡಿದು ಮೀರಿ ನೋಡಿ
ಎನಿತ್ತು ಪೂಜೆ ಮಾಡಿ ಮಾಡಿ ಮೆಚ್ಚದಚ್ಚುಗಂಗೊಳುತ್ತೆ
ನೆನೆದ ಪೂಜೆಯುಳವಡಲ್ಕೆ ಮೆಚ್ಚಿ ಹೆಚ್ಚಿ ರಾಗಿಸುತ್ತೆ
ಅರಿದು ಮುಟ್ಟಿ ಮರೆದು ಮುಟ್ಟಿ ಮತ್ತೆ ಮುಟ್ಟಿ ಮುಟ್ಟಿ ಬಿಡದೆ
ತೊರೆಯಲಾರದೊರಹುಗೆಟ್ಟು ಚಿತ್ತವಿಟ್ಟು ತೆರಹುಗುಡದೆ
ಲಲ್ಲೆಗರೆದು ನಿಲ್ಲದಗಲದಪ್ಪಿಕೊಂಡು ಲಜ್ಜೆಗೆಟ್ಟು
ಗೆಲ್ಲವಳಿದು ಸಯ್ದು ಸೋತು ಮಾತು ಬೀತು ಧಾತುಗೆಟ್ಟು
ಚಿಂತೆಯೊಳಗೆ ಶಿವನನಿರಿಸಿ ನಯನಯುಗವನರೆ ಮುಗುಳ್ಚಿ
ಅಂತರಂಗದೊಳಗೆ ಕಂತುಹರನ ಪೂಜೆಯಂ ತೆರಳ್ಚಿ
ಭಾವಪೂಜೆ ಬಲಿದು ದೇಹದೊಳಗೆ ಹೊರಗೆ ನೆಮ್ಮಿ ಹೊಮ್ಮಿ

ಭಾವವಿಡಿದು ಶಿವ ದೇವನಂತಿರಿಪ್ಪನೊವ್ವೆಯೊವ್ವೆ
ಅರ್ಚಿಸುತ್ತೆ ತಿರುಗಿ ನೋಡಿ ಲಿಂಗದೊಳಗೆ ಪುಟ್ಟುವಂತೆ
ಬೆಚ್ಚು ಬೆರಸಿ ಪತ್ರಿ ಕೀಲಿಸುತ್ತೆ ಭೇದವಿಲ್ಲದಂತೆ
ಪಗಲನರಿಯದಿರುಳನರಿಯದಕ್ಕರಿಂದಲರ್ಚಿಸುತ್ತೆ
ಬಗೆಗೆ ಬಂದ ಪೂಜೆ ಕೈಗಳೊಳಗೆ ಹೆಚ್ಚಲರ್ಚಿಸುತ್ತೆ
ಪೂಜಿಸುತ್ತೆ ಪುಳಕಿಸುತ್ತೆ ಪೊರಮುತಲ್ಕೆ ನೆನೆದು ನೋಡಿ
ಸೋಜಿಗಕ್ಕೆ ಸೊಗಸು ತೀವಿಯುಗಲಲಾರದಲ್ಲಿ ಕೂಡಿ
ದೇವ ದೇಶದೊಳಗಣರ್ಚನೆಗಳನರಿದು ಬರ್ಪೆನಯ್ಯ
ದೇವಲೋಕವಾದ ಪರಿಯನೊಪ್ಪಿ ನೋಡಿ ಬರ್ಪೆನಯ್ಯ

ಎಂಬ ಬಿನ್ನಪಕ್ಕೆ ಶಂಭು ಕರುಣಿಸಲ್ಕೆ ನಡೆದು ಬಂದು
ನಂಬಿ ಭಕ್ತಿ ಇಂಬುಗೊಂಡು ಬೆಂಬಲಕ್ಕೆ ನೆಲಸಿ ನಿಂದು
ನಿಂದ ತುರಗ ಭಾಳದೊಳಗೆ ಭಸಿತವಿಟ್ಟು ಭೋಂಕನೇರಿ
ಬಂದ ನಮುವು ಮಳೆಯರಾಜದೇವನಕ್ಕರಿಂದೆ ಮೀರಿ
ಬರಬರಲ್ಕೆ ಕಂಡುದೆಲ್ಲ ನಿಂದುದೆಲ್ಲ ಶಿವನ ಪೂಜೆ
ನೆರೆವುದೆಲ್ಲ ನುಡಿವುದೆಲ್ಲ ನಡೆವುದೆಲ್ಲ ಶಿವನ ಪೂಜೆ
ಮನೆಗಳೊಳಗೆ ಶಿವನ ಪೂಜೆ ಕೇರಿಯೊಳಗೆ ಶಿವನ ಪೂಜೆ
ಘನ ಪುರಂಗಳೊಳಗೆ ಕೂಡೆ ನೋಡೆ ಚಂದ್ರಚೂಡ ಪೂಜೆ
ಪಟ್ಟಣಂಗಳೊಳಗೆ ನೋಡೆ ದಿಟ್ಟ ಮೂರರವನ ಪೂಜೆ
ಒಟ್ಟಿಯೂರೊಳೆಲ್ಲ ಶಿವನ ನಿಷ್ಠೆ ಬಲಿದ ಭಾವ ಪೂಜೆ
ನಗರಿ ನಗರಿಯಲ್ಲಿ ನಾಗಕುಂಡಲಪ್ರಸಿದ್ಧಪೂಜೆ
ಸೊಗಯಿಪಗ್ರಹಾರದಲ್ಲಿ ಕುಸುಮಶರ ವಿರುದ್ಧ ಪೂಜೆ
ನಾಡು ನಾಡೊಳೆಲ್ಲ ಚಂದ್ರಚೂಡ ಶಂಭುಲಿಂಗಪೂಜೆ
ಬೀಡುಬೀಡೊಳೆಲ್ಲ ಕೂಡಿ ಶಿವನ ಪೂಜೆ ಭವನ ಪೂಜೆ
ದೇಶದೇಶದಲ್ಲಿ ಪಂಚಮುಖನ ಪೂಜೆ ಸುಖದ ಪೂಜೆ
ಭಾಸುರ ಸ್ಥಳಂಗಳಲ್ಲಿ ಭೀಮಪೂಜೆ ಸೋಮಪೂಜೆ
ತರುಗಳಲ್ಲಿ ಶಂಕರಪ್ರಭಾವಪೂಜೆ ದೇವಪೂಜೆ
ಗಿರಿವನಂಗಳಲ್ಲಿ ಕೂಡೆ ಹರುಷಪೂಜೆ ಗಿರೀಶಪೂಜೆ
ನದಿಗಳೊಳ್ತಟಾಕದೊಳ್ಕೊಳಂಗಳೊಳಗೆ ಲಿಂಗಪೂಜೆ
ಪುದಿದಶೋಕೆ ಮಾವುಮಲ್ಲಿಗರಳಿನೊಳಗೆ ಲಿಂಗಪೂಜೆ

ಆನೆಗೆಲ್ಲ ಜ್ಞಾನಪೂಜೆ ಕುದುರೆಗೆಲ್ಲ ಧ್ಯಾನಪೂಜೆ
ಸೇನೆಗೆಲ್ಲ ಶಿವನ ಪೂಜೆ ಕಾಣ್ಬುದೆಲ್ಲ ಹರನ ಪೂಜೆ
ಕೇಳ್ಪುದೆಲ್ಲ ಶಿವನ ಪೂಜೆ ಮಾಳ್ಪುದೆಲ್ಲ ಶಿವನ ಪೂಜೆ
ಬಾಳ್ಪುದೆಲ್ಲ ಶಿವನ ಪೂಜೆ ಬಯಸಿಕೆಲ್ಲ ಶಿವನ ಪೂಜೆ
ಸಕಲ ಜೀವರಾಶಿಗೆಲ್ಲಗಣ್ಯ ಪೂಜೆ ಪುಣ್ಯ ಪೂಜೆ
ಸಕಲ ದೇಶದಲ್ಲಿ ಸೊಗಯಿಸಗ್ರಪೂಜೆ ಯುಗ್ರಪೂಜೆ
ಜಾವವಿಲ್ಲ ಘಳಿಗೆ ಇಲ್ಲ ದಿವಸವಿಲ್ಲ ನಿತ್ಯಪೂಜೆ
ಆವ ನೇಮವಿಲ್ಲ ಸಂಶಯಂಗಳಿಲ್ಲ ನಿಜದಪೂಜೆ
ತರ್ಕವಿಲ್ಲ ಜರಿಕೆಯಿಲ್ಲ ಬಚ್ಚ ಬರಿಯ ಶಿವನ ಪೂಜೆ
ಕರ್ಕಶಂಗಳಿಲ್ಲ ಬಾಧೆಯಿಲ್ಲದಭವನಚ್ಚ ಪೂಜೆ
ದೇಶದೊಳಗೆ ಗಂಟೆಗಳ ರವಂಗಳಲ್ಲದಿಲ್ಲ ಮತ್ತೆ
ದೇಶದೊಳಗೆ ಧೂಪ ಪರಿಮಳಂಗಳಿಲ್ಲದಿಲ್ಲ ಮತ್ತೆ
ಮರ್ತ್ಯಲೋಕದೊಳಗೆ ರುದ್ರಲೋಕವಿರ್ಪ ತೆರದೊಳಿರ್ದು
ಮರ್ತ್ಯದೊಳಗೆ ದೇವಗಣ ಸಮೂಹವಿರ್ಪ ತೆರದೊಳಿರ್ದು

ಇಂತು ತನ್ನ ನವಮಲಕ್ಕ ದೇಶದೊಳಗೆ ಪೂಜೆ ಮಸಗೆ
ಕಂತುಹರನ ಶಿವನ ಭವನ ಮಹಿಮೆ ದೇಶದೊಳಗೆ ಮಸಗೆ
ಅಲ್ಲಿಯಲ್ಲಿ ಹೊಕ್ಕು ಹೊಕ್ಕು ನೋಡಿ ನೋಡಿ ನಲಿದು ನಲಿದು
ನಿಲ್ಲದುರ್ಕಿಯಾಡಿಪಾಡಿ ಮಿಕ್ಕು ಮೀರಿ ಕುಣಿದು ತಣಿದು
ಮೆಚ್ಚನಿತ್ತು ಭಕ್ತಜನಕೆಯುಗಲದಪ್ಪಿಯಪ್ಪಿಕೊಂಡು
ನಚ್ಚಿ ನಲಿದು ಮುಚ್ಚಿ ಮಣಿದು ಹೆಚ್ಚಿ ಹಿಗ್ಗಿ ಸುಗ್ಗಿಕೊಂಡು

ಮಲಯವತಿಗೆ ಮರಳಿ ಬಂದ. ಶಿವನ ನಿಳಯದೊಳಗೆ ಪೊಕ್ಕು
ಕುಲವೆ ಛಲವೆ ಬಲವೆಯೊಲವೆ ನಿಲವೆ ಎಂದು ಸಲುಗೆ ಮಿಕ್ಕು
ಮಳೆಯ ರಾಜನಲ್ಲಿ ಪುಷ್ಪರಾಶಿ ತಣಿಯೆ ಪೂಜೆ ಮಾಡಿ
ತಿಳಿದ ಸಲಿಲವೆಯ್ದೆ ತಣಿದು ತಣಿದು ಪೂಜೆ ಮಾಡಿ ನೋಡಿ
ದೆಸೆಗಳೆಲ್ಲ ತಣಿಯೆ ಲೋಕವೆಲ್ಲ ತಣಿಯೆ ಪೂಜೆ ಮಾಡಿ
ಎಸೆಯಲಷ್ಟಲೋಕಪಾಲರೆಲ್ಲ ತಣಿಯೆ ಪೂಜೆ ಮಾಡಿ
ರಸೆ ಜಲಾಗ್ನಿ ವಾಯು ಗಗನವೆಯ್ದೆ ತಣಿಯೆ ಪೂಜೆ ಮಾಡಿ
ಶಶಿಸಹಸ್ರ ಕಿರಣನಾತ್ಮನೊಲ್ದು ತಣಿಯೆ ಪೂಜೆ ಮಾಡಿ

ನೂರು ಬರಿಸವೆಂಬುದೆಲ್ಲ ನಿಮಿಷವಾಗಿ ಪೂಜೆಗೆಯ್ದು
ತೋರಲಿಲ್ಲ ಬೇರಲಿಲ್ಲದಚ್ಚ ಸುಖದ ಪೂಜೆಗೆಯ್ದು
ಅಂತರಂಗವಂ ಶಿವಂಗೆ ಮಾರುಗೊಟ್ಟು ಪೂಜೆಗೆಯ್ದು
ಸಂತತಂ ಹರಂಗೆ ತನ್ನನೊಪ್ಪುಗೊಟ್ಟು ಪೂಜೆಗೆಯ್ದು
ಇಂತು ನೂರು ವತ್ಸರಂ ವಿಳಾಸದಿಂದ ಪೂಜೆಗೆಯ್ದು
ಕಂತುಮರ್ದನಂಗೆ ಚಿತ್ತನಕ್ಕಿ ತಣಿಯೆ ಪೂಜೆಗೆಯ್ದು

ದೇವ ಮರ್ತ್ಯದೊಳಗೆ ಸುಖದೊಳಿರ್ಪುದಿನ್ನು ಸಾಲ್ವುದಯ್ಯಾ
ದೇವ ರಜತಗಿರಿಗೆ ಹರುಷದಿಂದೆ ಕೊಂಡು ಪೋಪುದಯ್ಯ
ಎಂದ ಬಿನ್ನಪಕ್ಕೆ ಶಂಭುಲಿಂಗದಿಂದಲೊಗೆದು ಬಂದು
ಸಂದ ಪಂಚವದನ ದಶಭುಜಂ ತ್ರಿಣೇತ್ರದಿಂದೆ ಬಂದು
ತನ್ನ ದೇವಗಣ ಸಮೂಹಮಂ ವಿಳಾಸದಿಂದ ನೆನೆಯೆ
ತನ್ನ ಬಂಧುಬಳಗವಪ್ಪ ಸಕಳ ಗಣವನೊಲಿದು ನೆನೆಯೆ
ನೆನೆವುದಕ್ಕೆ ಮುನ್ನಮೆಯ್ದಿ ಬಂದುದಲ್ಲಿ ದೇವಕೋಟಿ
ಘನ ಪೊಡರ್ಪನಪ್ಪುಗೈದು ಹಾದಿಗೊಂಡು ಮಕುಟಕೋಟಿ
ಬೇರೆ ಬೇರೆ ನೊಸಲಕಣ್ಣ ನಂದಿವಾಹರಲ್ಲಿ ಕೋಟಿ
ಬೇರೆ ಬೇರೆ ಡಮರುಗ ತ್ರಿಶೂಲ ಹಸ್ತರಲ್ಲಿ ಕೋಟಿ
ದೆಸೆಯನೊತ್ತಿ ಬಸೆಯನೆತ್ತಿ ಜಗವನುಡುಗಿ ಮುಗಿಲು ಕೊಳ್ವ
ಎಸೆವ ದಿಗ್ಗಜಂಗಳಲ್ಲಿ ಮಿಸುಪ ಕೋಡನುಡಿಗಿಕೊಳ್ವ
ಉಡುಗಣಂಗಳಂ ಸಮಂತುದುರ್ಚಿ ನೆಲದೊಳಾಯ್ದುಕೊಳ್ವ
ನಡೆವ ಚಂದ್ರ ರವಿಗಳಂ ತೆರಳ್ಚಿ ಬೊಟ್ಟನಿಟ್ಟುಕೊಳ್ವ
ಗಣಸಮೂಹಮಂ ಪುರಾರಿ ಕಂಡು ಹರುಷ ಚಿತ್ತನಾಗಿ
ತ್ರಿಣಯನುಂ ಪ್ರಮೋದ ಉಕ್ಕಿ ಭಕ್ತಿಯೊಳ್ಪ್ರಸನ್ನನಾಗಿ
ಮಳೆಯರಾಜದೇವನಂ ಪ್ರಸಿದ್ಧ ಗಣ ಕುಲಕ್ಕೆ ತೋರಿ
ಇಳೆಗೆ ಪೊಸತೆನಲ್ಕೆ ದೇಶಸಹಿತಲೊಯ್ವೆನೆಂದು ಸಾರಿ
ನೆಗೆಯವೇಳೆನಲ್ಕೆ ನೆಗೆದವಲ್ಲಿ ನವಮಲಕ್ಷದೇಶ

ಒಗೆದವಲ್ಲಿ ಪುಷ್ಪವೃಷ್ಟಿ ದುಂದುಭಿ ಪ್ರಣಾದ ಘೋಷ
ಎಸೆಯೆ ಮೃದು ಮೃದಂಗ ಪಟಹ ದಿವ್ಯ ಶಂಖನಾದವಲ್ಲಿ
ಎಸೆವ ಬಿರುದನೆತ್ತಿ ಕರೆವ ಕಹಳೆಗಳ ಸುನಾದವಲ್ಲಿ

ಗಿರಿಗಳೆದ್ದು ದೇವಲೋಕದತ್ತ ಬಾಳಿ ಇಡುವ ತೆರದಿ
ಧರಣಿ ದೇವಲೋಕಮಂ ಪರೀಕ್ಷಿಸಲ್ಕೆ ನೆಗೆವ ತೆರದಿ
ನೆಗೆದವಲ್ಲಿ ಪಟ್ಟಣಂ ಪುರಂ ತಟಾಕ ನದಿಗಳೆಯ್ದು
ನೆಗೆದವಲ್ಲಿರುಂಪೆಯಾನೆಯಾದಿ ಜೀವರಾಶಿಯೆಯ್ತು
ನೆಗೆದುದೊಂದುಗೂಡಿ ಮೆರೆವ ಮಳೆಯದೇಶವಳಯವೆಯ್ದೆ
ನೆಗೆದುದಲ್ಲಿ ಗಗನವಿಂಬುಗೆಟ್ಟು ಕೂಡೆ ತೀವಲ್ಕೆಯೆಯ್ದು
ಗುಳಿದುದಿತ್ತ ಗಣಸಮೂಹವೆಯ್ದೆ ಕೊಳಸನೆತ್ತಿದಂತೆ
ಗುಳಿದುದಲ್ಲಿ ಮಳೆಯದೇಶವಳಯವಿಳೆಯ ಹೊಕ್ಕಳಂತೆ
ಮೇಲೆ ಮೀರಿ ಮೇಗೆ ಯುಡದರ್ಗ ನೆಗೆದಮೇರಿ ನೆಗೆದವತ್ತ
ಮೇಲೆ ಮೇಲೆ ಕಾಣಬಾರದಂತೆ ನೆಗೆದವತ್ತಲತ್ತ
ಅಮರರೆಲ್ಲ ಕಂಡು ಕೌತುಕಂ ಮುಸುಂಕೆ ಕವಿದು ನೋಡೆ
ಅಮರಪತಿಗೆ ಕೌತುಕಕ್ಕೆ ಕೌತುಕಂಗಳಡಸಿ ಮೂಡೆ
ದೇವಲೋಕವೆಯ್ದು ಧೂಪಧೂಮ್ನದಿಂದೆ ಮುಸುಕಿ ಪೋಗೆ
ದೇವಲೋಕ ಮರ್ತ್ಯಲೋಕ ವರಿಯಬಾರದಂದವಾಗೆ
ನೆಗೆದು ರಜತಗಿರಿಯ ನಂದಿನಾಥನಿರ್ಪ ಬಾಗಿಲಲ್ಲಿ
ಬಗೆಗೆ ಚಿತ್ರವಾಗಿ ನವಮಲಕ್ಕದೇಶ ಒಪ್ಪಲಲ್ಲಿ·
ಆಗಜೆಯರಸನೆಯ್ದೆ ತನ್ನ ನಿಜ ನಿವಾಸನಾಗುತಲ್ಲಿ
ರಜತ ಗಿರಿಯ ಸಿಂಹ ವಿಷ್ಟರ ಪ್ರತಿಷ್ಠನಾಗುತಲ್ಲಿ
ಅರರೆ ನಂದಿನಾಥ ನೋಡು ತಂದೆ ಮಕ್ಕಳಿಬ್ಬರಿರವ
ಅರರೆ ದೇಶವೆರಸಿಯೆಯ್ದು ಭಕ್ತಿಯುಕ್ತರಾದರಿರವ
ಎನ್ನ ಭಕ್ತನಿಧಿಯೆ ಮಳೆಯರಾಜ ಬಾರ ಬಾರೆನುತ್ತೆ
ತನ್ನ ಕೆಯ್ಯೊಳೆತ್ತಿ ತೆಗೆವುತಪ್ಪಿ ಸಭೆಗೆ ರಂಜಿಸುತ್ತೆ
ತಂದೆಗಂ ಮಗಂಗೆ ಗಣಪದಂಗಳಿತ್ತು ನೋಡಿ ನಲಿದು
ಬಂದ ಮಳೆಯದೇಶಮಂ ಸುವರ್ಣಗಿರಿಯೊಳಿರಿಸಿ ಮೆರೆದು
ಭಕ್ತಜನಮನೋರಥಪ್ರದುನ್ನತ ಪ್ರಿಯಂ ಕಪಾಲಿ
ಭಕ್ತನಿಕರ ವಾರ್ಧಿ ವರ್ಧನೇಂದು ಸನ್ನಿಭಂ ತ್ರಿಶೂಲಿ
ಕಾಮವೈರಿ ಪುಣ್ಯಕಾರಿ ಯರ್ಧನಾರಿ ಚಂದ್ರಧಾರಿ
ಭೀಮನಮಳಧಾಮನತುಳಸೀಮನಭವನಂತಕಾರಿ
ದೇವನೊಲಿದಡೀವನೆನಿಪನಾವನರಿಯೆ ಕಾವನಮಮ
ಆವಗಂ ಪುರಾರಿಯಲ್ಲದಾವನುಂಟು ನೋಡಲಮಮ

ಶೂಲಿಯುಸ್ತಿವಮಾಲಿಯುಜ ಕಪಾಲಿ ಚಂದ್ರಮೌಳಿಯುರರೆ
ಕಾಳಿಯುಂಕಪಾಲನುಗ್ರ ಭಾಳನಚಲ ಶೀಲನರರೆ
ನಾದ ನಿಳಯುನುರಗವಳಯುನಿಂದು ಕಳೆಯು ನೆಸೆದನಲ್ಲಿ
ವೇದವರಿಯುದಾದಿಯುಂತ್ಯ ಭೇದರಹಿತ ನೆಸೆದನಲ್ಲಿ
ಇಂದ್ರಮುಕುಟಮುಣಿವಿರಾಜಮಾನ ಚರಣನೊಪ್ಪುತಿರ್ದ
ಚಂದ್ರಮೌಳಿ ಶೂಲಿ ಹಂಪೆಯುರಸ ವಿರುಪ ನೊಪ್ಪುತಿರ್ದ

**ಕಂದ॥** ಒಂದೂರೋ ಎರಡೂರೋ
ಸಂದಿಸಿ ನವಲಕ್ಷ ದೇಶಮುಂ ಕೈಲಾಸ ।
ಕ್ಕಂದೊಯ್ದ ಮುಲೆಯುರಾಜನ
ಕಂದನೆಯಾಂ ಕರುಣಿಸೆನಗೆ ಹಂಪೆಯುರಾಯಾ

**ಮುಳೆಯುರಾಜ ಮುಹಾತ್ಮೆ ಸಂಪೂರ್ಣ.**

---

# ಓಹಿಲಯ್ಯ ಮಹಾತ್ಮೆ

ಕಂದ|| ಎಲೆಲೆ ಪರಶಿವನು ಮೆರೆದಂ
ನಲಿನಲಿದು ಧರಾತಳಾಗ್ರದೊಳ್ಘನತೇಜೋ
ಜ್ವಲದಿಂ ಕರುಣಾಕರನೋ
ಹಿಲದೇವನನೆಮ್ಮ ಹಂಪೆಯ ವಿರೂಪಾಕ್ಷಂ||

## ರಗಳೆ.

ಶ್ರೀಗೆ ನೆಲೆಯೆನಿಸುವುತ್ತರ ದಿಶಾಭಾಗದೊಳು
ಭೂಗೆ ಮಂಗಳವೆನಿಪ ಪುರವಿರ್ಪುದೊಪ್ಪದೊಳು
ಧರಣಿಗೆ ವಿಳಾಸವೆಂದೆನಿಪ ಪೆರ್ಮೆಯ ಪುರಂ
ನರಲೋಕದೊಳಗದರ ಮಹಿಮೆಯತಿ ವಿಸ್ತರಂ
ಆ ಪಟ್ಟಣಕ್ಕಧಿಕನೆನಿಸಿಕೊಂಡೊಪ್ಪುವಂ
ಭೂಪರೊಳ್ಕುಂಭರಾಜನೆನಲೊಪ್ಪುವಂ
ಕರಿ ತುರಗರಥಪದಾತಿ ಪ್ರಬಲ ಸಂಪದಂ
ನರಪ ಕುಲಮಣಿಮಕುಟ ನಿಕರ ಸೇವಿತಪದಂ
ಪಲಕೆಲವು ವತ್ಸರಂ ರಾಜ್ಯಸುಖದಿಂದಿರ್ದು
ನೆಲದೊಳಗೆ ಮಾರ್ಮಲೆವರಿಲ್ಲದರಸಾಗಿರ್ದು
ಮಕ್ಕಳಿಲ್ಲದೆ ಮನದೊಳುಮ್ಮಳಂ ಪಿರಿದಾಗಿ
ತಕ್ಕರಂ ಪಿರಿಯರಂ ಕೂಡಿಕೊಂಡೊಂದಾಗಿ
ದೇವತೋಪಾಸ್ತಿಯುಂ ಮಾಡಲ್ಕನಂದಂದು
ದೇವಾಲಯಕ್ಕೆ ಶುಚಿಭೂತನಾಗುತೆ ಬಂದು
ಶಿವಲಿಂಗಮಂ ಸಕಲ ಮುಖದೊಳರ್ಚಿಸುತಮಿರೆ
ಸವೆಯದಭಿಷೇಕಂಗಳಿಂದಲರ್ಚಿಸುತಮಿರೆ

ಕರುಣದಿಂದೀಶ್ವರಂ ಪ್ರತ್ಯಕ್ಷನಾಗುತುಂ
ಹರುಷಂ ಮನಂ ಮಿಕ್ಕು ಸಂತುಷ್ಟನಾಗುತುಂ
ಜ್ಞಾನತನುಮಯನಪ್ಪ ನಿರುಪಮಾನಂದನಂ

ಸ್ವಾನುಭವ ಒಡಲಾದ ಪರಮಸುಖವೃಂದನಂ
ಮಾಯಾ ವಿಕಾರಮಂ ಸಾರದ ಸಮರ್ಥನಂ
ಕಾಯಗುಣವಳಿದು ಸುಖ ಉಳಿದ ಪರಮಾರ್ಥನಂ
ತಾಪತ್ರಯಂಗಳಿಲ್ಲದ ಸಚ್ಚರಿತ್ರನಂ
ಭೂಪತಿಗೆ ಕೊಟ್ಟನಚ್ಚರಿ ಮಿಗಲ್ಪುತ್ರನಂ
ಕೊಟ್ಟು ಶಿವಲಿಂಗದೊಳ್ಪುಗೆ ಸದಾಶಿವನಂದು

ಮುಟ್ಟದೊಲವಿಂದರಸನರಮನೆಗೆ ನಡೆತಂದು
ಕೃತಕೃತ್ಯ ಮನನಾಗಿ ಪರಿಣಾಮವೆಡೆಗೊಂಡು
ಅತಿಶಯ ಸುಖಂಗಳಂ ಚಿತ್ತದೊಳ್ಕೈಕೊಂಡು
ಸುಲಲಿತ ರಸಾನಂದ ಗೇಯಮಂ ಕೇಳುತಂ
ಕೆಲವುಂ ದಿನಂಗಳಂ ಸುಖದಿಂದೆ ಕಳೆಯುತಂ
ಇರೆ ಪಟ್ಟದರಸಿ ಗರ್ಭಿಣಿಯಾದಳೊಪ್ಪದಿಂ
ಬರೆವರಲ್ನವಮಾಸವಾಗಲಾನಂದದಿಂ
ಸುಮುಹೂರ್ತದೊಳ್ಪಡೆದಳಾನಂದ ಕಂದನಂ
ಅವ್ಯುತರಸಚ್ಚರಿತ ವಿಮಳ ಗುಣವೃಂದನಂ
ಪಡೆಯೆ ನಿಃಕುಂಭರಾಜಂ ಮನದೆ ಗುಡಿಗಟ್ಟಿ
ಕಡು ಸಂತಸಂಬಟ್ಟು ಸುಖರಸಂ ಮಡುಗಟ್ಟಿ
ಪ್ರೇಮದಿಂ ಜಾತಕರ್ಮಂ ಮಾಡಿ ಮುದ್ದಿಟ್ಟು
ನಾಮವಾತಂಗೋಹಿಲಯ್ಯನೆಂಬುದನಿಟ್ಟು

ಇರೆ ಬೆಳೆಯುತಿರ್ದಂ ವಿರಕ್ತಿ ಬೆಳೆವಂದದಿಂ
ಹರಭಕ್ತಿಯವಯವಂಬೆತ್ತು ಬಳೆವಂದದಿಂ
ಬಳೆದನೊಂದುವನರಿಯದೀ ಮಾಯೆಯಂದಮಂ
ಘುಳುಘುಳಿಪ ಸಂಸಾರದಲಿರ್ಪೊಂದು ಚಂದಮಂ
ನುಡಿವುದೊಂದರಿಯನುಣ್ಬುದವೆಂದು ತಾನರಿಯ
ಎಡಬಲಂ ಹಿಂದುಮುಂದಾವುದೇನೆಂದರಿಯ
ಇಂತಿವತಾರ್ಯ್ಯಂದೆ ಬಂಧುಕುಲವೆಂದರಿಯ
ಇಂತಿರ್ದ ಸುಖದುಃಖವೆಂದು ಮೊದಲಿಂಗರಿಯ
ಈಶ್ವರಂ ಕರುಣಿಸಿದ ವೈರಾಗ್ಯವೆಡೆಗೊಂಡು

ಶಾಶ್ವತಂ ಶಂಕರನ ಭಾವಮುಂ ಕೆಳೆಗೊಂಡು
ಮುನ್ನೆಂದುವರಿಯದೀ ಸಂಸಾರಮುಂ ಕಂಡು
ತನ್ನ ಮನದೊಳ್ಸೇರದಿರುತಿರೆ ಭಯಂಗೊಂಡು
ಮೃಗ ಶಿಶುವನೂರೊಳಗೆ ಬಿಟ್ಟಂತೆ ಬೆಚ್ಚುತುಂ
ಪಗಲಿರುಳ್ಪೋಗುದಿಯನೆಂದರಿಯದೊಪ್ಪುತುಂ
ದೇವ ಬಿಜಯಂಗೆಯ್ವುದೆನೆ ಸುಮ್ಮನಿರುತಿರ್ಪ
ನಾವುದಂ ಸಂಜ್ಞೆಯರಿಯದೆ ಮೌನದಿಂದಿರ್ಪ
ಅರಿಯದಂತರಿಯದಂತಿರ್ಪನೊಮ್ಮೆಯುಂ
ಮರೆದಂತೆ ತೋರದಂತಿರುತಿರ್ಪನೊಮ್ಮೆಯುಂ
ತಾನಾಗಿ ಹಸಿದೆನೆಂಬಾ ಮಾತು ತನಗಿಲ್ಲ
ತಾನಾಗಿ ಬೇಕು ಬೇಡೆಂಬುದಂ ಮುನ್ನಿಲ್ಲ
ಜನನಿಯೂಡಿದೊಡುಂಡು ದಾದಿಯೂಡಿದೊಡುಂಡು
ಮನದೊಳಗೆ ಪುಸಿಯು ಪಸರಕ್ಕೆ ಬೆಬ್ಬುಳಿಗೊಂಡು
ಇಂತಿರಲ್ಪರಿಜನಂ ಮುಗುದನೆಂದೇ ಬಗೆದು
ಸಂತತಂ ಕೊಂಡಾಡುತಿರ್ಪರುತ್ಸವ ಒಗೆದು
ಜ್ಞಾನತನುಮಯನೆಂದು ತಾನರಿಯರಂತಲ್ಲಿ
ಭೂನಾಥನಂ ಮುಗುದನೆಂದಿರ್ಪರಂತಲ್ಲಿ

ಇರೆ ಕುಮಾರಂಗೆ ಪದಿನಾರು ವತ್ಸರಮಾಗೆ
ಪುರಜನದ ಚಿತ್ತಕ್ಕೆ ಸಿರಿದು ಸಂತಸಮಾಗೆ
ಅರಸು ನಿಃಕುಂಭರಾಜಂ ರುಜೆಯ ನೆವದಿಂದೆ
ಪರಲೋಕಮುಂ ನೋಡಲೆಯ್ದಿದಂ ನೆವದಿಂದೆ
ಎಯ್ದೆ ಜನವೆಯ್ದೆ ಚೇತನಗೆಟ್ಟು ಬಾಯ್ವಿಟ್ಟು
ಮೆಯ್ದೆಗೆದು ಶೋಕದೆ ಪಲುಂಬಿ ಹರಣಂ ಗೆಟ್ಟು
ಘೋಳೆಂದು ಪುರಜನಂ ಮೊದೆಗೆಡೆದು ಹಳಯಿಸುತೆ
ಅಳಿಯಿಟ್ಟಳಲಿಂದೆ ಮೊರೆ ಇಡುತೆ ಕೂಗಿಡುತೆ
ಹಡಪಕ್ಕೆ ಚಾಮರಕೆ ಸೀಗುರಿಗೆ ಪೇಳುತುಂ
ಕಡು ನೀರೆಯುರ್ಮಲಗು ಗದ್ದುಗೆಗೆ ಪೇಳುತುಂ
ಒಲಿದರಗಿಳಿ ಹಂಸೆ ಕೋಗಿಲೆಗೆ ಪೇಳುತುಂ
ಅಲ್ಲಿ ಬೆಳಸಿದ ಮಲ್ಲಿಕಾಲತೆಗೆ ಪೇಳುತುಂ

ಘೂಗೊಳವೆ ಹದುಳವಿರು ಹೋಗಿ ಬಂದಪೆವೆಂದು
ನಾಗಲತೆ ಕೊರಗದಿರು ಪೋಗಿ ಬಂದಪೆವೆಂದು
ಕಡು ಶೋಕದಿಂದೊಟ್ಟೆ ಯೊರಲಿ ಬೀಳ್ವುದು ಜನಂ
ಎಡೆಗೊಂಡ ದುಃಖದಿಂ ಕೆಡೆದು ಬೀಳ್ವುದು ಜನಂ
ಭೂಮಿ ಕಣ್ಣೀರಿಂದೆ ಕೆಸರಪ್ಪ ಮಾಳ್ಕೆ ಇರೆ
ಪ್ರೇಮದ ಜನಂ ನೆರೆದು ನಿಂದಳುತ ಪಲಬುತಿರೆ
ಪುರಜನಂ ಶೋಕದಿಂ ವ್ಯಾಗರೆವುತಿರುತವಿರೆ
ಪರಿಜನಂ ಬಾಯ್ಬಿಟ್ಟು ಕೆಟ್ಟೆವೆಂದೆನುತವಿರೆ
ಮಂತ್ರಿಗಳ್ಸಾಮಂತರೆದೆಯೊಡೆದು ಬೀಳುತಿರೆ
ತಂತ್ರಿಗಳ್ರಾಜಪುತ್ರರ್ಮರುಗಿ ಮಗ್ನುತಿರೆ
ಇಷ್ಟರುಂ ಬಂಧುಗಳ್ಮೂರ್ಚೆಯೊಳ್ ಸಂದಿರಲ್
ಶಿಷ್ಟರುಂ ಸೇವ್ಯರುಂ ಕಣ್ಗೆಟ್ಟು ನಿಂದಿರಲ್

ನಡೆಮಾಡನೆತ್ತಿತ್ತು ಗೋಳಿಡುತ್ತಿರಲಂದು
ನುಡಿದರ್ಕೆತಂದೋಹಿಲಯ್ಯನಲ್ಲಿಗೆ ಬಂದು
ನಿನ್ನ ಜನಕಂ ದೇವಲೋಕಕ್ಕೆ ಪೋದನನೆ
ನಿನ್ನಯ ಪಿತಂ ಸತ್ತನೇಳಲೆ ಕುಮಾರ ಎನೆ
ಸತ್ತೆನೆಂತೆಂಬ ಪರಿ ಏನೆಂದು ಬೆಸಗೊಳಲ್
ಉತ್ತಮನ ಮುಗ್ಧತೆಗೆ ಮಂತ್ರಿಗಳ್ಮತ್ತಳಲ್
ತಡೆವುತ್ತ ಓಹಿಲಯ್ಯನ ನೋಡುತಳುತಲ್ಲಿ
ಒಡನಳುತ ಬರೆ ಸಕಲ ಪರಿವಾರವಂತಲ್ಲಿ
ಬಾಳೆಯ ಬನಂ ನಡೆದು ಬರ್ಪಂತೆ ನಡೆದು ಬರೆ
ಬಾಲೆಯರ್ಕೈಯೆತ್ತಿ ಬಡಿದುಕೊಳುತ್ತೈಯ್ದೆ ಬರೆ
ಲೆಂಕರೊಂದೆಸೆಗೆ ಭಾಷೆಯ ಸತಿಯರೊಂದೆಸೆಗೆ
ಬಿಂಕದಿಂದಾಳ್ಕುದುರೆ ಗಜಘಟೆಗಳೊಂದೆಸೆಗೆ
ಎಣ್ಣೆ ತುಪ್ಪದ ಕೊಡಂಗಳ ಸಾಲ್ಗಳೊಂದೆಸೆಗೆ
ತಿಣ್ಣವೆನಿಸುವ ಪಳಿಯ ದಿಂಡುಗಳು ಒಂದೆಸೆಗೆ
ಮರುಗಿ ಬರುತಿರೆ ಬಂದು ರುದ್ರಭೂಮಿಯ ಕಂಡು
ತೆರ ಹರಿದು ಶೋಧಿಸಿದ ದುಃಖದಿ ಮನಂಗೊಂಡು
ಚಂದನದ ತರುಗಳಂ ಇತ್ತರದಿ ಪರಿಕಲಿಸಿ
ಕಂದಗಿಲ ದಿಂಡುಗಳನೆಡೆಗೆಡೆಗೆ ಕೈಗೊಳಿಸಿ

ಮಾಡಿರ್ದ ಚಿತೆಯ ಮೇಲೆಯರಸನಂ ಪಟ್ಟಿರಿಸಿ
ಕೂಡೆ ಚಂದನ ಜವಾಜಿಯನಲ್ಲಿ ನೋಳ್ಪೈಸಿ
ವರ ಕುಮಾರಕನಿಂದೆ ತಲೆಕೊಳ್ಳಿಯಂ ಕೊಡಿಸಿ
ಭರದಿಂದ ತಂದೊಂದು ನೆಳಲೊಳಗೆ ಕುಳ್ಳಿರಿಸಿ
ಕೂಡೆ ನೆರೆದೋಹಿಲಯ್ಯನ ಸಮೀಪದೊಳಿರಲ್
ನೋಡೆ ಶಬವಂ ಪೆರ್ಚಿ ಕಿಚ್ಚು ಹತ್ತುತ್ತಿರಲ್
ಭರದಿಂ ಕಪಾಲ ಮೋಕ್ಷವನಾಲಿಸುತ್ತಿರಲ್
ನೆರೆನೆರೆದು ತನತನಗೆ ನಿಂದು ಶೋಕಿಸುತಿರಲ್
ಆಗಳಾ ಪರಮ ವೈರಾಗ್ಯನಿಧಿ ಎಂದೆನಿಪ
ನಾಗಭೂಷಣನ ಪರಮಜ್ಞಾನಿ ಎಂದೆನಿಪ
ಓಹಿಲಯ್ಯಂ ನುಡಿದನೊಂದು ಮಾತಂ ನೋಡ
ಆಹಾ ಶಿವಜ್ಞಾನಿ ತಿಳಿದು ನುಡಿದಂ ನೋಡ

ಎಂದು ಬರ್ಪಂ ತನ್ನ ತಂದೆ ಎಂದೆನುತಮಿರೆ
ಮುಂದುಗೆಟ್ಟೆಲ್ಲರುಂ ಮುಗ್ಧತೆಗೆ ನೋವುತಿರೆ
ಅಲ್ಲಲ್ಲ ಪೇಳಿರೇ ಕೆಳ್ದಪೆನಿದೊಂದುವಂ
ತಲ್ಲಣಿಸಬೇಡ ತಿಳಿಪಿರಿ ಮಾತಿದೊಂದುವಂ
ಎನುತುಮಿನ್ನೇನಪ್ಪನೆಂದು ಬರ್ಪಂ ಪಿತಂ
ಎನಗೆ ಸೀವರಿಪಿರೇ ಕಂಡರಿಯೆ ವಿಶ್ರುತಂ
ಎನಲಲ್ಲಿ ಪಿರಿಯರಿರ್ದೆಲೆ ಕುಮಾರಕ ಕೇಳ
ಮನದೊಳೆರಡಿಲ್ಲದತ್ಯಂತ ಮುಗ್ಧನೆ ಕೇಳ
ನಿಮ್ಮಯ್ಯನೆಂದುಮ್ರುಂ ಬಾರನೈ ಎಲೆ ಕಂಡ
ನಿಮ್ಮರಸನುರಿದುಪೋದಂ ಬಾರನೆಲೆ ಕಂದ
ಸತ್ತನುರಿದಂ ಭಸ್ಮವಾದನಿನ್ನುಂ ಬಾರ
ಉತ್ತಮ ಗುಣಾಭರಣನೆಂದುಮಿನ್ನುಂ ಬಾರ
ಎನೆ ಕುಮಾರಕನಲ್ಲಿ ನೆರೆ ಕೌತುಕಂಗೊಂಡು
ಮನದೊಳ್ಮಹಾ ವಿರಕ್ತಿಯನೊಚ್ಚತಂಗೊಂಡು
ಮುಂದಿರ್ದ ಪಡಿಯರಂಗೆಂತೆನಲಪಂಗಿಂತೆ
ಹಿಂದಿರ್ದ ಹಡಪಿಗಂಗೆಂತೆನಲವಂಗಿಂತೆ
ಕೆಲದವರ್ಗೆಂತೆಂದಡವರ್ಗೆ ಇಂತೀ ತೆರ೧
ಬಲದವರ್ಗೆಂತೆನಲವರ್ಗೆ ಇಂತೀ ತೆರಂ

ಎಲ್ಲರಂ ಕೇಳಲೆಲ್ಲರ್ಗೆ ಇಂತೀ ಪರಿಯೆ
ಬಲ್ಲರಂ ಕೇಳಲೆಲ್ಲರ್ಗೆ ಇಂತೀ ಪರಿಯೆ

ಎಂದು ಕೇಳ್ವಾಗಳೋರ್ವಂ ಭಕ್ತನರಿದಲ್ಲಿ
ಎಂದು ಕಂಡರಿಯನಂತೀ ಭವಣೆ ತಾನಿಲ್ಲಿ
ಅತಿ ವಿರಕ್ತಂ ಶಿವಸ್ನೇಹಿ ನಿಷ್ಠಾಪರಂ
ಅತಿಶಯ ಶಿವೈಕ್ಯ ಸಮ್ಯಜ್ಞಾನಿ ತತ್ಪರಂ
ಧರೆಗೆ ಪೊಸತೀ ಕುಮಾರಂ ಕೇಳ್ವ ಪರಿ ಎನಗೆ
ಅರಸು ಮಕ್ಕಳ ನುಡಿ ಇದಲ್ಲ ಕೌತುಕವೆನಗೆ
ಇಲ್ಲಿ ಸತ್ಯವನೆ ನುಡಿದಪೆನಾದುದಕ್ಕೆಂದು
ಇಲ್ಲಿ ಮನದೊಳಗೆ ಭಕ್ತಂ ನೆನೆಯುತಿರಲಂದು
ತನಗೆಂತೆನುತ್ತಾ ಕುಮಾರಕಂ ಕೇಳ್ವುತಿರೆ
ನಿನಗೆ ಈ ವಿಧಿ ಎಂದು ಭಕ್ತನುಳ್ಳುದನುಸುರೆ
ಈ ಸಾವುದಂ ಮಾಣಿಸಲ್ಕೆ ಬಲ್ಲವರುಂಟೆ
ಈ ಸಮರ್ಥಿಕೆಯುಳ್ಳ ನಿತ್ಯ ಸಂಪದರುಂಟೆ
ಎನೆ ಭಕ್ತನುಂಟೆಂಬ ಮಾತು ಸತ್ಯಂ ಮಾತು
ನಿನಗೆ ಪೇಳ್ವೆಂ ನಂಬು ಎನ್ನ ಮಾತೇ ಮಾತು
ಸಕಲ ವೇದಂ ಪೊಗಳ್ವ ಶಂಭುಶಂಕರನುಂಟು
ಸಕಲ ಸುರ ನಿಕರವರಿಯದ ಚಂದ್ರಧರನುಂಟು
ತ್ರಿಪುರವಂ ನೊಸಲಕಣ್ಣಿಂ ಸುಟ್ಟ ಹರನುಂಟು
ಕುಪಿತದಿಂ ಕಾಮನಂ ಭರದಿಯುರುಪಿದರುಂಟು
ಕಾಲನಂ ಸುಟ್ಟು ಬೊಟ್ಟಿಟ್ಟ ವಿಷಧರನುಂಟು
ಮೇಲೆನಿಪ ಪುಲಿದೊವಲ ಸುಟ್ಟ ಪಶುಪತಿಯುಂಟು
ಭಕ್ತಸಂಕುಳವನಗಲದ ಕೃಪಾಕರನುಂಟು
ಭಕ್ತರೊಡನೊಡನೆ ತಿರುಗುವ ದಯಾಪರನುಂಟು
ಸತ್ಯನುಂಟಭವನುಂಟಾನಂದಮಯನುಂಟು
ನಿತ್ಯನುಂಟುಗ್ರನುಂಟಪ್ರತಿಮ ಶಿವನುಂಟು
ಗೌರೀವರಂ ಗುಣಾತೀತನಹಿಧರನುಂಟು
ಸೌರಾಷ್ಟ್ರಪತಿ ಸೋಮನಾಥನುಂಟೈಯುಂಟು
ಇಲ್ಲಿಗಿಪ್ಪತ್ತು ಯೋಜನದೊಳಿರ್ದಪನೆಂದು
ಸಲ್ಲೀಲೆಯಿಂದೆ ಭಕ್ತಂ ಪೇಳುತಿರಲಂದು

ಪೇಳ್ದವರ ಹಸ್ತಮಂ ತನ್ನ ಶಿರದೊಳಗಿಟ್ಟು
ತಾಳ್ದವರ ವಚನಮಂ ಚಿತ್ತದೊಳಗಿಂಬಿಟ್ಟು
ಆವರೆ ಗುರುವಾಗಿ ಕೈಕೊಂಡನೋಹಿಲದೇವ
ಆವರ ನುಡಿಯಿಂ ಧನ್ಯನಾದನೋಹಿಲದೇವ

ಉಟ್ಟ ಸಪುರಮನಲ್ಲಿ ಸೀಳ್ದನೆಲ್ಲಂ ನೋಡ
ಬಿಟ್ಟನಾ ರಾಜ್ಯಮಂ ಹಾರಲೊದೆದಂ ನೋಡ
ನಿಂದು ಕೌಪೀನನಾದಂ ಪುರಜನಂ ನೋಡೆ
ಬಂದ ಪರಿಜನವೆಲ್ಲವಳಲುತ್ತಮಿರೆ ಕೂಡೆ
ಭಸಿತಮಂ ಕಾಯದೊಳಗುದ್ಧೂಳನಂ ಮಾಡಿ
ಶಶಿಧರನ ಸೋಮನಾಥನ ರೂಪನೊಡಗೂಡಿ
ಮನದೊಳಚ್ಚೊತ್ತಿ ಬೂದಿಯೊಳಗಲತಂತಿರಿಸಿ
ನೆನಹಿಂದ ನೆಮ್ಮಿ ಚಿತ್ತದೊಳಪ್ಪಿ ನೆರೆ ಬೆರಸಿ
ಪೊರಮಟ್ಟನಮ್ಮಮ್ಮ ಮಾಯಾ ವಿಮರ್ದನಂ
ತೆರಹಳಿದು ನಿಜವುಳಿದ ವೈರಾಗ್ಯವರ್ಧನಂ
ಕಾಲೊಳ್ಪೊರಳ್ವ ಮಂತ್ರಿಗಳನುಲ್ಲಂಘಿಸುತೆ
ಲೀಲೆಗೊಟ್ಟೊರಲುವಬಲೆಯರನೀಕ್ಷಿಸಿ ನಗುತೆ
ಹಳಿವಳಿಸಿ ಪಲುಂಬುವ ದಾದಿಯುಂ ಮನ್ನಿಸದೆ
ತಿಳಿವಳಿದು ಕಳವಳಿಪ ಸಚಿವರಂ ಸಾಗಿಸದೆ
ನಡೆತಂದನುತ್ತಮ ವಿರಕ್ತನತಿ ನಿಷ್ಠೆಯಿಂ
ನಡೆತಂದನಲ್ಲಿ ಸುಖಮುಖ ಶೈವ ನಿಷ್ಠೆಯಿಂ
ಕಾಲ್ಗಳೊಳ್ಪರಳೊತ್ತಿ ಬೊಕ್ಕೆಗಳ್ಮಿಗೆ ನೆಗೆಯೆ
ಸಾಲ್ಗೊಂಡು ಕಾಲಬೆರಳಿಂ ನೆತ್ತರಂ ಒಗೆಯೆ
ಬಿಸಿಲೊಳಂ ನೆಳಲೊಳಂ ಮಳೆಗಳೊಳ್ಚಳಿಗಳೊಳ್
ಪಸಿವಿನೊಳ್ತೃಷೆಯೊಳ್ಗಾಳಿಯೊಳ್ಧೂಳಿಯೊಳ್
ಶಿವನ ರೂಪಂ ಮನದೊಳಿಟ್ಟು ನೋವಂ ಮರೆದು
ಭವನ ಮೂರ್ತಿಯ ಮನದೊಳಿರಿಸಿ ತನ್ನಂ ಮರೆದು
ಬರುತಿರ್ದನೋಹಿಲಯ್ಯಂ ಶಿವಮಹೋತ್ಸಾಹಿ
ಬರುತಿರ್ದನೇಕ ನಿಷ್ಠಂ ಶಂಕರಸ್ನೇಹಿ

ಬರುತಲ್ಲಿ ಸೋಮನಾಥನ ಕಳಶಮಂ ಕಂಡು
ಧರೆಯೊಳಗನಾಥ ನಾಥನ ಕಳಶಮಂ ಕಂಡು

ಮೆಯ್ಯಿಕ್ಕಿ ಮೆಯ್ಯಿಕ್ಕಿ ಪುಳಕಮಂ ಹೇರುತುಂ
ಕೆಯ್ಯೆತ್ತಿ ಕೆಯ್ಯೆತ್ತಿ ಕರುಣಮಂ ತೋರುತುಂ
ಕೃತಕೃತ್ಯನಾಗುತುಂ ಬಂದು ಪುರಮಂ ಪೊಕ್ಕು
ಅತಿ ಚೆಲ್ವ ವೀಥಿಯಂ ನೋಡುತೆ ಮನಂ ಮಿಕ್ಕು
ಬಂದು ಶಿವನಿಳಯಮಂ ಪುಗುತಂದು ನಲವಿಂದೆ
ಸಂದಣಿಪ ನೇಹದಿಂ ಪರಿತಂದು ಭರದಿಂದೆ
ದೇವಪತಿಯಂ ದೇವಕುಲಚಕ್ರವರ್ತಿಯಂ
ದೇವಗುರುವಂ ಭಕ್ತಜನಮನೋಮೂರ್ತಿಯಂ
ಏಕನಂ ಸಾಕಾರನಂ ಲೋಕನಾಥನಂ
ಶ್ರೀಕಂಠನುನ್ನತಾನೇಕ ಪರರೂಪನಂ
ಶೂಲಿಯಂ ಕಾಪಾಲಿಯಂ ಶಿರೋಮಾಲಿಯಂ
ಭಾಲಾಕ್ಷನಂ ತ್ರ್ಯಕ್ಷನಂ ಚಂದ್ರಮೌಳಿಯಂ
ಕಾಮಹರನಂ ವ್ಯೋಮಕೇಶನಂ ಭೀಮನಂ
ಪ್ರೇಮಜನಕಾಮಿತಸ್ತೋಮನಂ ಸೋಮನಂ
ಮನ್ಮಥನಂ ಖ್ಯಾತನಂ ಶರಣಯೂಥನಂ
ಅಮ್ಮಮ್ಮ ಸೌರಾಷ್ಟ್ರಪತಿ ಸೋಮನಾಥನಂ
ಕಂಡು ನಡೆಗೊಂಡು ನೆಲೆಗೊಂಡ ನೇಹದೊಳಪ್ಪಿ
ತಂಡತಂಡದ ಪುಳಕ ದಿಂಡೆಗೊಳುತಿರಲಪ್ಪಿ
ಬಿಗಿದಪ್ಪಿ ಬಿಡದಪ್ಪಿ ಕೊಂಡಪ್ಪಿ ಮತ್ತಪ್ಪಿ
ತೆಗೆದಪ್ಪಿ ಕೊಂಡಾಡಿ ಮುಂಡಾಡಿಸುತ್ತಪ್ಪಿ
ನೀನೊಡೆಯನೆನಗೆ ನಿನಗಾಳು ನಾಂ ಶಂಕರಾ
ಏನೆಂಬೆ ಎನ್ನ ಪುಣ್ಯದ ನೆಲೆಯ ಶಶಿಧರಾ
ಸಾವಿಂಗೆ ಭೀತಿಗೊಂಡೈತಂದೆನೆಲೆ ತಂದೆ
ಸಾವರಂ ಕಂಡಂಜಿ ಬಂದೆ ನಾನೆಲೆ ತಂದೆ
ನಂಬಿ ನಿನ್ನಂಘ್ರಿಯಂ ಮರೆಯೊಕ್ಕೆನೆಲೆ ತಂದೆ
ನಂಬಿದೆಂ ನಂಬಿವೆಂ ತೊಳ್ತಾದೆನೆಲೆ ತಂದೆ
ಸಾಯಲೀಯದೆ ಸಲಹು ಸತ್ಯನೇ ನಿತ್ಯನೇ
ಸಾಯಲಾರೆಂ ಕರುಣಿ ಸತ್ಯಾಧಿಸತ್ಯನೇ
ಎಂದು ಕಡು ಭೀತಿಯಿಂ ನೊಂದು ಬಿನ್ನೈಸುತಿರೆ
ಮುಂದೆ ಕುಳ್ಳಿರ್ದೋಹಿಲಯ್ಯನೊಪ್ಪುತ್ತುಮಿರೆ

**ಪ್ರಥಮಸ್ಥಲ ಸಂಪೂರ್ಣಂ**

ಆಗ ದೇವಿ ಚಂಡಮಾರುತನ ಕರೆದು ಈ ಭೃಂಗಿಯು ಹಾರಿಸಿಕೊಂಡು ಹೋಗೆನಲು ಆಗ ಗಟ್ಟಿ ಬೆಟ್ಟಗಳ ಕಿತ್ತು ಹಾರಿಸುತ್ತ ಬರುವಾಗ ಸ್ತೋತ್ರವ ಮಾಡಲು ಆ ಭೃಂಗೀಶ್ವರಗೆ ಶಿವನು ಮೂರನೆಯ ಪಾದವ ಕೊಡಲು ಅದ ಕಂಡು ವಾಯುವು ಅಂಜಿ ಅತ್ತಲೇ ಹೋದುದು. ಬಳಿಕ ಶಿವನು ಭೃಂಗೀಶ್ವರನ ತನ್ನ ಬಳಿಯಲ್ಲಿರುವಂತೆ ಮಾಡಿದನು.

---

## ೪೧ನೆಯ ವಚನದ ಕಥೆ. (?)

### ಶಂಕರದಾಸಿಮಯ್ಯ.

ಭೂತಳದಲ್ಲಿ ಸ್ಕಂದಶಿಲೆ ಎಂಬ ಪುರವಿರ್ಪುದು. ಗೋವಿಂದ ಭಟ್ಟನೆಂಬ ಶಿವಬ್ರಾಹ್ಮಣನಿರ್ಪನು. ಆತನ ಸತಿಯು ಹೆಸರು ದುರ್ಮತಿ. ಇಬ್ಬರು ಸುಖದಲ್ಲಿರುವಾಗ ಆ ಬ್ರಾಹ್ಮಣನು ಕಾಶಿಗೆ ಹೋಗುವಾಗ ಒಂದು ಗಾವುದದಲ್ಲಿ ನವಿಲೆ ಎಂಬ ಊರಲ್ಲಿ ಜಡೆಯಶಂಕರನೆಂಬ ಲಿಂಗವಿರ್ಪುದು. ಆ ದೇವಾಲಯಕ್ಕೆ ಹೋಗಿ ಕುಳಿತಿರಲು ಅಲ್ಲಿರ್ದ ಶೈವಭಕ್ತರು ಪೂಜಿಸುವದ ಕಂಡು ಈ ಲಿಂಗವ ಬಿಟ್ಟು ಇನ್ನು ವಾರಣಾಸಿಗೆ ಹೋಗುವುದೇಕೆಂದು ದಿನಂಪ್ರತಿ ತವ್ಮು ಆ ಊರಿಂದ ಬಂದು ಪೂಜಿಸುತ್ತ ಎನಗೆ ಕಾಶಿಯು ನೀನೆ ಗಂಗೆಯು ನೀನೆ ಇನ್ನಾ ಕಾಶಿಗೆ ಹೋಗೆನು ಎಂದು ಇರುತ್ತಿರಲು ಆ ಒಂದು ದಿನ ಲಿಂಗವು ಕನಸಿನಲ್ಲಿ ನಿಜ ರೂಪ ತೋರಿ ಎಲೆ ಮಗನೆ ಚಳಿಮಳೆಯೊಳಗೆ ಎಡೆಯಾಡಿ ಕಷ್ಟ ಪಡಬೇಡ, ನಮ್ಮೂರಿಗೆ ಬಾ ಎನಲು, ಆ ನುಡಿಯ ಕೇಳಿ ಎಚ್ಚತ್ತು ಎನ್ನೊಡೆಯ ಕರುಣಿಸಿದನೆಂದು ತನ್ನ ಸತಿ ಸಹವಾಗಿ ಮಯೂರಪುರಕೆ ಬಂದು ಗುಡಿಯ ಹೊಕ್ಕು ಲಿಂಗವ ಪೂಜಿಸುವಾಗ ಶಿವನು ನಿನಗೆ ನಾಳೆ ದೀಕ್ಷೆಯ ಕೊಟ್ಟೆವು, ಶುದ್ಧಾಂಗನಾಗಿರ್ಪುದೆನಲು, ದೇವಾ ಎನ್ನ ಉತ್ತ ಮಾಂಗದಲ್ಲಿ ಹಸ್ತಮಸ್ತಕ ಸಂಯೋಗವ ಮಾಡಿ ಕರುಣಿಸೆನಲು ಲಿಂಗದೊಳಗಿಂದ ಜಂಗಮ ರೂಪಿನಿಂದ ಜೆಡೆಯಶಂಕರ ಬಂದು ದೀಕ್ಷೆಯ ಕೊಟ್ಟು ಲಿಂಗವನಿತ್ತು ಕರ್ಣದಲ್ಲಿ ಪಂಚಾಕ್ಷರಿಯ ಜಪಿಸಲು ದೀಪವ ಸೋಂಕಿ ದೀಪವಾದಂತೆ ಗುರು ಮುಟ್ಟಿ ಗುರುವಾಗಿಂತೆಂದನು. ಎನಗೂ ಎನ್ನ ಸತಿಗೂ ಒಂದೇ ಹೆಸರಿಟ್ಟು ಗೋವಿಂದನೆಂಬ ಹೆಸರ ಬಿಡಿಸೆನಲು ಆಗ ಶಿವನು ಶಂಕರದಾಸಯ್ಯನೆಂಬ ಹೆಸರಿಸಿಂದಿರು. ನಿನ್ನ ಸತಿ ಶಿವ

ದಾಸಿ ಎಂಬ ಹೆಸರಿಂದಿರಲು ಆ ಮೇಲೆ ಶಂಕರದಾಸಯ್ಯಗೆ ನೊಸಲ ಕಣ್ಣು ಕೊಟ್ಟರು. ಅದೆಂತೆಂದೊಡೆ ಸಿಡಿಲ ಸಂಗಡಕ್ಕೆ ಬರಸಿಡಿಲು ಬಂದಂತೆ ವಡಬಾಗ್ನಿ ದಾವಾಗ್ನಿ ಸಂಗಡವಿದ್ದಂತೆ ಕಾಲಾಗ್ನಿ ಹಣೆಯಲ್ಲಿ ನಿಂದಂತೆ ಶಿವನಿಕ್ಕಿದ ನಂದಿ ಮೊಗವಾಡದ ಮರೆಯಲ್ಲಿ ನೊಸಲಕಣ್ಣಿ ನಿಂದೊಪ್ಪುತ್ತ ಮನೆಮನೆಗೆ ಹೋಗಿ ಧಾನ್ಯವ ತಿರಿತಂದು ಬೋನವ ಮಾಡಿ ಲಿಂಗಕ್ಕೆ ಕೊಟ್ಟು ಪ್ರಸಾದವ ಸಲಿಸುತ್ತಿರಲು ಮತ್ತೊಂದು ದಿನ ಧಾನ್ಯವ ತೀರುವುದಕ್ಕೆ ಹೋಗಲು ಒಂದು ಮನೆಯಲ್ಲಿ ಶಂಕರ ಗಂಡ ಘನವಯ್ಯ ಎನಲು ಈ ಜೋಳದ ಹೆಸರು ಶಂಕರನ ಪೆಸರಿಂಬುದ ನಾನರಿಯೆ. ಇನ್ನು.. ಜೋಳವನುಣ್ಣೆ ಎಂದು ಲೋಳಿಸರದ ಹುಳುಕು ಒಂದು ಗುಲಗುಂಜಿಯನು ಸುಣ್ಣವನು ಕೂಡಿಸಿ ಅರಿದು ಲಿಂಗಕ್ಕೆ ಕೊಟ್ಟು ಆ ಪ್ರಸಾದವ ಸೇವಿಸುತ್ತಿರಲು ಆ ಲಿಂಗವು ವಕ್ತ್ರಪಾದನೆಂಬ ಶಿಷ್ಯನ ಕೊಡಲು ಆತನ ಕೆಯ್ಯ ಕೊಡೆಯು ಹಿಡಿಸಿಕೊಂಡು ಒಂದು ದಿನ ಕಲ್ಯಾಣಕ್ಕೆ ಬರುವಾಗ ದಾರಿಯಲ್ಲಿ ಪೆಂಬರೆ ಎಂಬೂರ ಹೊರಗೆ ಮೈಲಾರನ ಗುಡಿ ಇರಲು ಬಂದು ಆ ಮೈಲಾರನ ಎಡಹುತ್ತ ಬಂದು ಕುಳ್ಳಿರಲು ಅದು ಇಂತೆಂದು ನುಡಿಯಿತ್ತು. ಎನ್ನನುರುಹದೆ ಹೋದನು. ಕಣ್ಣು ಮೂರುಳ್ಳನ ಪಾದ ಸೋಂಕಿ ಬದುಕಿದೆನೆನುತ್ತ ಮೈಲಾರ ನುಡಿವುತ್ತಿರಲು ಆಗ ಅದ ಪೂಜಿಸುವೆನೆಂದು ಮೇಳಾದೇವಿ ಎಂಬ ವೇಶಿ ಸಂದಣಿಯು ಕಂಡು ಹೊರಗೆ ನಿಂತು ಆ ಶಂಕರದಾಸಯ್ಯಗಳ ಕಂಡು ಆಕೆಯಲ್ಲಿಗೆ ಸಂಪಗೆಯು ಹೂವಗಳನು ಕರ್ಪೂರ ವೀಳೆಯವನು ಮೈಲಾರನೊಳಗೆ ಕೊಡಿ ಎನಲು ಅವ ತಕ್ಕೊಂಡು ತಮ್ಮ ಲಿಂಗಕ್ಕರ್ಪಿಸಿ ಆ ಮಾಲೆಯು ಧರಿಸಿ ವೀಳೆಯುವ ನೀಡಿಕೊಳಲು ಆಗ ಅದಕೆ ಕೋಪಿಸಿ ಮೈಲಾರಗೆ ಕೊಡದೆ ಅವ ನೀವೆ ಭೋಗಿಸುವರೇ ಎಂದು ಆ ಮೈಲಾರನೆ ಹೆದರಿ ಆಕೆ ಶಂಕರದಾಸಯ್ಯಗೆ ನುಡಿಯಲು ನಗುತ ಎಲೋ ಮೈಲಾರ ತಾಂಬೂಲವ ಪಿಡಿ ಎನಲು ಭಯದಿಂದ ಕೈಯ್ಯ ಒಡ್ಡಿ ತಕ್ಕೊಂಡು ಒಂದಿಷ್ಟು ಮೆದ್ದು ಉಳಿದುದ ಮೈಗೆ ತೊಡಕೊಂಡು ನಿಂದಿರಲು ಆಗ ಮೇಳಾದೇವಿಯು ಅಚ್ಚರಿಬಟ್ಟು ನಮ್ಮ ಮೈಲಾರ ದೇವರಿಗೆ ಒಬ್ಬ ಜಂಗಮ ಬಂದು ಗರ್ವದಿಂದ ತನ್ನ ಬಾಯ ತಂಬುಲವನಿಕ್ಕಿದನು. ತಮ್ಮ ಮೈಲಾರ ಸಾಮರ್ಥ್ಯ ಹೋಯಿತ್ತು. ಎಲ್ಲರ ಎಂಜಲ ತಿಂಬುವ ಪ್ರಾಪ್ತಿ ಬಂದಿತು. ಇನ್ನು ಮೊಳುಗೆಯು ಪೂಜಿಸುವದೇಕೆಂದು ಅಲ್ಲಿಯ ಜನರೆಲ್ಲ ಎನುತ್ತಿರಲು ಆಗ ಶಂಕರದಾಸಯ್ಯ ಅಲ್ಲಿಂದ ಹೋಗುವಾಗ

ತಮ್ಮ ಶಿಷ್ಯನಾದ ವಕ್ತ್ರಪಾದನ ಕೈಯ ಕೊಡೆಯ ಹಿಡಿ ಎನಲು ಆ ವೈಲಾರ ತಾನು ಬಂದು ಕೊಡೆಯ ಹಿಡಿದುಕೊಂಡು ಸಂಗಡ ಹೋಗುತ್ತಿರಲು ಅಕಟಕಟ ವೈಲಾರ ಕೊಡೆಯ ಹಿಡಿದುಕೊಂಡು ಹೋದನೆಂದು ಜನರು ಚಿಂತಿಸುತ್ತ ಎಲೆ ಶಿವಶರಣ ನಮ್ಮ ವೈಲಾರನ ಬಿಡಿರಯ್ಯ ಎನಲು ಆಗ ಶಂಗರದಾಸಯ್ಯ ಕೊಡೆಯ ಹಿಡಿದುಕೊಂಡು ನಿಂದಿರು ಎನಲು ಆಗ ಕೊಡೆಯ ವೈಲಾರನೆಂದು ಹೆಸರಾಯಿತ್ತು ಆ ಮೇಲೆ ವಕ್ತ್ರಪಾದ ತಿರಿ ತಂದ ಧಾನ್ಯವ ಕೊಟ್ಟಣಕ್ಕೆ ಹಾಕುವಾಗ ಒಬ್ಬ ಒಕ್ಕಲಗಿತ್ತಿಯು ಬತ್ತವ ಮಾರ ಕುಟ್ಟಿ ಎನಲು ಈ ನುಡಿಯ ಶಂಕರದಾಸಯ್ಯಗೆ ಹೇಳಲು ಹಾಗೆ ಆಗಲಿ ಎಂದು ಮಾರಿ ಮಸಣಿಗಳ ಮನೆಗೆ ಧಾನ್ಯವ ಕಳುಹಲು ಮಾರಿ ಮಸಣಿಗಳು ಕಂಡು ಈ ಭತ್ತವ ಕುಟ್ಟದಿದ್ದರೆ ನೊಸಲ ಕಣ್ಣಿನಿಂದ ಸುಟ್ಟಹನೆಂದು ಮರುಳು ತಾಂಡಿಗಳ ಕರೆದು ಊರೊಳಗಿಣ ಒನಕೆ ಮೊರಗಳನೆಲ್ಲ ತರಿಸಿ ಶಂಕರದಾಸಯ್ಯನ ಹಾಡುತ್ತ ರಾತ್ರಿಯಲ್ಲಿ ಭೂಮಿ ನಡಗುವಂತೆ ಕುಟ್ಟಿ ಅಕ್ಕಿಯ ಮಾಡಿ ಒಪ್ಪಿಸಲು ಆ ಅಕ್ಕಿಯಿಂದ ಗಣ ಪರ್ವವ ಮಾಡಿ ಇರುವಾಗ ಅವರ ಸತಿ ಶಿವದಾಸಿಯಮ್ಮ ಗರ್ಭಿಣಿಯಾಗಿ ಶಿವಜ್ಞಾನವೇ ರೂಪಾದಂತೆ ಮಗನ ಹೆರಲು ಅದಕೆ ಲಿಂಗವ ಧರಿಸಿ ಜಂಗಮ ಪಾದೋದಕವ ನರ್ಪಿಸಿ ಸದ್ಯೋಜಾತ ದೇವರೆಂದು ಹೆಸರಿಟ್ಟು ಆ ಮೇಲೆ ಸತಿಸುತರು ಬಸವೇಶ್ವರನ ದರ್ಶನಕ್ಕೆ ಬಂದರು. ಅಲ್ಲಿ ಕೌದಿಯ ಹೊಲಿವ ಕಾಯಕದಿಂದ ಜಂಗಮಾರ್ಚನೆಯ ಮಾಡುತ್ತಿದ್ದರು.

---

## ೪೪೪ ನೆಯ ವಚನದ ಕಥೆ. (?)

### ಗೌತಮ.

ಬ್ರಹ್ಮೇಶ್ವರ ತ್ರಿಯಂಬಕೇಶ್ವರ ಲಿಂಗಗಳಿರ್ಪ ತ್ರಿಯಂಬಕ ಪರ್ವತ ದಲ್ಲಿ ಗೌತಮ ಮುನಿ ಇಹನು. ಅವನ ಹಿಂದೆ ಹನ್ನೆರಡು ವರುಷ ಬರ ಬರುತ್ತಿದೆ ಎಂದು ತಿಳಿದು ತಪವ ಮಾಡುತ್ತಿರಲು ಶಿವನು ಮೆಚ್ಚಿ ಏನು ಬೇಕೆನಲು ನನಗೆ ಉದಯದಲ್ಲಿ ಬಿತ್ತಿ ಬಯಕೆ ಫಲವಾಗುವ ಸಿದ್ಧಿಯ ಕೊಡಿ ಎನಲು ಹಾಗೆಯೆ ಕೊಡಲು ಬಳಿಕ ದಂಡಕಾರಣ್ಯ ನೈಮಿಷಾರಣ್ಯ ಮೊದಲಾದ ಅರಣ್ಯವಾಸಿಗಳಾದ ಮುನಿಗಳು ಗೌತಮ ನಾಶ್ರಮಕ್ಕೆ ಬಂದು ಬರ ತಿಳಿವನಕ ಉಂಡು ಕೊಂಡಿರಲು ಬಳಿಕ ದಾರು ಕನೆಂಬ ಮುನಿ ಇನ್ನು ನನ್ನಾಶ್ರಮಕ್ಕೆ ಹೋದೆನು ಎನಲು ಗೌತಮ ಪ್ರೀತಿ

ಯಿಂದ ಇಲ್ಲಿ ಇರಬೇಕೆಂದೆನಲು ಆ ದಾರುಕನು ಈತನು ಸುಮ್ಮನೆ ಹೋಗಲೀಸ. ಒಂದು ದ್ರೋಹವ ಹಾಕಿ ಹೋಗಬೇಕೆಂದು ಅಗ್ನಿಪುರುಷನ ಗೋವ ಮಾಡಿ ಗದ್ದೆಯಲ್ಲಿ ನಿಲಿಸಲು ಗೌತುಮು ಕಂಡು ಹುಲ್ಲಿನ್ನಲ್ಲಿಗೆ ಹೋಗೆಂದು ನೂಕಲು ಅದು ಪ್ರಾಣವ ಬಿಡಲು ಗೋಹತ್ಯವ ಮಾಡಿದನೆಂದು ಎಲ್ಲರು ಬಿಟ್ಟು ಹೋಗಲು ಗೌತುಮು ತಪವ ಮಾಡುತ್ತಿರಲು ಶಿವ ಮೆಚ್ಚಿ ಬೇಡು ಎನಲು ಗೋಹತ್ಯವ ಪರಿಹರಿಸಿ ಎನಲು ಅದು ಕೃತಕ ನಿನಗಿಲ್ಲವೆನಲು ಈ ವಾಕ್ಯದೋಷಕ್ಕೆ ಜಡೆಯ ಗಂಗೆಯ ಬೇಡಿಕೊಂಡು ಗೋವಿನ ಮೇಲೆ ಹರಿಸಲು ಅದು ಎದ್ದಿತ್ತು. ಆಗ ದಾರುಕನ ಶಪಿಸಿ ಸುಖದಲ್ಲಿದ್ದನು.

## ದಕ್ಷ.

ಕೈಲಾಸದಲ್ಲಿ ಶಿವನು ದೇವಿಯು ಅಂತಪುರದಲ್ಲಿರುವಾಗ ಎಲೆ ದೇವಿ ನೀ ಸೋತರೆ ಜಗವ ಪುಟ್ಟಿಸೆ ನಾ ಸೋತರೆ ಲೋಕವ ಸಂಹರಿಸಿಹೆನು ಎಂದು ಪಗಡೆಯನಾಡುವಾಗ ನಾರದನೆಂದನು. ದಕ್ಷನು ನಿಮ್ಮ ಬಿಟ್ಟು ಯಜ್ಞವ ಮಾಡುತ್ತಾನೆ ಎನಲು ಆದ ದೇವಿ ಕೇಳಿ ಮನಪವನಂಗಳೇಗಾಲಿ ಪರ್ವತವೇ ಅಚ್ಚು ಇಂತಹ ರಥಕ್ಕೆ ಸಾವಿರ ಸಿಂಹವ ಕಟ್ಟಿ ಎಳೆಕೊಂಡು ರುದ್ರಕನ್ನಿಕೆಯರು ಸಹವಾಗೆ ಯಜ್ಞದ ಬಳಿಗೆ ಬರಲು ಆಗ ದಕ್ಷನು ಮುದಿ ಎತ್ತನೇರಿ ತಿರಿದುಂಬ ಅಮಂಗಲನ ಸತಿ ಇಲ್ಲಿಗೇಕೆ ಬಂದೆ ಎನಲು ಆಗ ನಿಂದೆಯ ಕೇಳಿದೆನೆಂದು ಕಿವಿಯ ಮುಚ್ಚಿಕೊಂಡು ಹೋಮದೊಳಗೆ ಧುಮುಕಿ ಬಯಲಾದಳು. ಆಗ ಶಿವನು ಕೇಳಿ ಮುನಿದು ಜಡೆಯನಪ್ಪಳಿಸಲು ಸಿಂಹದೋಪಾದಿಯಲ್ಲಿ ಸಾವಿರ ಮುಖದಿಂದ ಎರಡು ಸಾವಿರ ತೋಳುಗಳಿಂದ ವೀರಭದ್ರ ದೇವರು ಹುಟ್ಟಿ ಯಜ್ಞಕ್ಕೆ ಬಂದು ದಕ್ಷನ ತಲೆಯ ಹೊಯ್ಯಲು ಅದು ಹರಿಯದಿರಲು ಭುಜದ ಮೇಲೆ ನಿಂತು ಕಯ್ಯಲ್ಲಿ ಕಿತ್ತು ಅಗ್ನಿ ಕುಂಡಕೆ ಹಾಕಿ ಶಿವನ ಬಳಿಗೆ ಹೋದನು. ಅಲ್ಲಿಗೆ ಬಂದು ನೆರವಾದವರ ದಧೀಚಿಯು ಶಾಪವ ಕೊಟ್ಟನು.

## ಪರಶುರಾಮ.

ಪರಶು ವಿಪ್ರರಿಗೆ ದೇಶವ ಕೂಡೆ ಅವರು ಹೊರಡಿಸಲು ಹೋಗಿ ವರುಣನ ಬೇಡೆ ಅಂಬಿಚ್ಚಷ್ಟು ತೆಗೆದುಕೋ ಎನೆ ಎಸೆವ ಸಮಯದಿ ದೇವೇಂದ್ರನು ಒರತಿಯಾಗಿ ನಾರಿಯ ಕಡಿಯೆ ೧೨ ಗಾವುದದಿ ಬಳಿ ವಿಪ್ರರು ಅದನು ಬೇಡೆ ಕೊಟ್ಟನು.

### ನಾಗಾರ್ಜುನ.

ಮತ್ಸ್ಯೇಂದ್ರನ ಶಿಷ್ಯ ನಾಗಾರ್ಜುನನು ಶ್ರೀಗಿರಿಯ ಮೇರುವಿನಂತೆ ಚಿನ್ನವ ಮಾಡಬೇಕೆಂದು ಮೂಲಿಕೆಯ ಗುಳಿಗೆಯ ಬಾಯೊಳಗಿಟ್ಟು ಕೊಂಡು ಊದುವಾಗ ಶಿವನು ವಿಷ್ಣುವಿಂಗೆಂದನು. ಅದು ಚಿನ್ನವಾದರೆ ಎಲ್ಲ ಕಡಿದಾಡಿತು. ಅವನ ವಧಿಸೆಂದು ಕಳುಹಲು ವಿಪ್ರನಾಗಿ ನಾಗಾ ರ್ಜುನನ ಬಳಿಗೆ ಬಂದು ಇದೇನೆನಲು ನಿನಗಿದರ ಮಾತೇಕೆನಲು ಇವನ ತಲೆಯ ಹೊಯಿದರೆ ಹರಿಯದೆಂದು ವಿಷ್ಣು ನಿನ್ನ ಬಾಯೊಳಗಣ ಗುಳಿ ಗೆಯ ತೋರು ಹೋದೆನೆನಲು ಅವ ಕೆಯ್ಯೊಳಗಿಟ್ಟುಕೊಂಡು ತೋರಲು ಆಗ ಚಕ್ರದಿಂದಿಡಲು ನಾಗಾರ್ಜುನನ ತಲೆ ಕತ್ತರಿಸಿ ರಸಗಂಡವೆಂದು ಕೂಗುತ ಗಾಳಿ ಪೂಜೆಯ ಪರ್ವತದಲ್ಲಿ ಬೀಳಲು, ಅವ ಸತ್ತುಹೋ ದನು. ॥ಗ್ರಂಥ॥ ಏಕಂ ದೃಷ್ಟ್ವ ಶತಂ ದೃಷ್ಟ್ವ ದೃಷ್ಟ್ವ ಪಂಚಶತೈರಪಿ ಅತಿ ದೃಷ್ಟ್ವ ನ ಕರ್ತವ್ಯಂ ಚಕ್ರಂ ಭ್ರಮತಿ ಮಸ್ತಕೆ. ನಾಗಾರ್ಜುನನಿ ದ್ದನು. ಒಂದು ತೂಕ ವೇದಿಯಂ ಕಂಡು ನೂರು ತೂಕ ವೇದಿಯಂ ಕಂಡು ಸಹಸ್ರ ವೇದಿಯಂ ಕಂಡು ದಣಿಯದೆ ಅತಿ ತೃಷ್ಣೆಯ ಮಾಡ ಲಾಗಿ ಚಕ್ರ ಬಂದು ತಲೆಯ ಕೊಂಡು ಹೋಯಿತ್ತು.

---

## ೪೫ ನೆಯ ವಚನದ ಕಥೆ. (?)

### ಮಾಯಭಟ್ಟಾಚಾರ್ಯ.

ಮಂಗಲಾಂಬಿಕೆ ಎಂಬ ಸ್ತ್ರೀ ಸಹವಾಗಿ ಮಾಯಭಟ್ಟಾಚಾ ರ್ಯರು ಅಂಬೆ ಎಂಬ ಪುರದಲ್ಲಿರುತ್ತ ಷಡ್ದರ್ಶನದವರ ಗೆದ್ದು ಕಾಶಿ ಖಾಂಡವ ಪುರುಷಾಕೃತಿಯ ಮಾಡೆ ಶಿವನೇ ದೈವ ಹರಿವಿರಿಂಚಿ ಮೊದ ಲಾದ ದೇವತೆಗಳು ಶಿವನ ಸೇವಕರೆಂದು ನುಡಿಸಿದರು.

---

## ೫೦ ನೆಯ ವಚನದ ಕಥೆ. (?)

### ಜಮದಗ್ನಿ.

ಮಾತಂಗಿಯ ಮಗ ವಿಪ್ರ ರೇಣುಕಾದೇವಿಯ ಮಗ ಹೊಲೆಯ ಇವ ರಿಬ್ಬರು ಜಮದಗ್ನಿಗೆ ಹುಟ್ಟಿದರು. ಕ್ಷೇತ್ರದಲ್ಲಿ ಹುಟ್ಟಿದ ವಿಪ್ರ ತಾಸಿದ್ದ ಮನೆಯಲ್ಲಿ ಹುಟ್ಟಿದ ಹೊಲೆಯ ಇವರಿಬ್ಬರಿಗೆ ಸಾಕ್ಷಿಗಳು ಭಾರದ್ವಾಜ

ವಿಶ್ವಾಮಿತ್ರ ಅಗಸ್ತ್ಯ ನಾರದ ಕೌಂಡಿಲ್ಯ ಇಷ್ಟರು ಸಾಕ್ಷಿಗಳಾಗಿ ನಿಮ್ಮೊಳಗೆ ನೀವು ಸಂವಾದ ಬೇಡ ಎಂದು ವಿಭಾಗವ ಮಾಡಿ ಹಂಚಿಕೊಟ್ಟ ವಿವರವೆಂತೆಂದೊಡೆ ಊರ ಹೊರಗಣ ಗೃಹವ ಹೊಲೆಯರಿಗೆ ಕೊಟ್ಟರು. ಊರೊಳಗಣ ಗೃಹ ವಿಪ್ರರಿಗೆ ಕೊಟ್ಟರು. ಸತ್ತುದ ಹೊತ್ತುಕೊಂಡು ಹೋಗುವರ ಹೊಲೆಯರಿಗೆ ಮಾಡಿದರು. ಬದುಕಿರ್ದ ಜೀವ ದನವ ದಾನ ಮುಖದಿಂ ತಕ್ಕೊಂಬುದಕ್ಕೆ ವಿಪ್ರರಿಗೆ ಮಾಡಿದರು. ಇನ್ನು ಕಂಡಲ್ಲಿ ತೊಲಗಿ ಸಂಭೋಳಿ ಎಂದು ಹೊಲೆಯರಿಗೆ ನಾಮತೀರ್ಥವ ಮಾಡುವ ಸಮಯದಲ್ಲಿ ಹೊಳೆಯೊಳು ಮುಳುಗಿ ದೂರದೊಳೊಯ್ದು ಭಾವ ವಿಪ್ರರಿಗೆ ಇಂತೆಂದು ವಿಭಾಗ ಪ್ರತಂಗಳಂ ಬರೆದು ಕೊಟ್ಟರು.

---

## ೫೬ ನೆಯ ವಚನದ ಕಥೆ. (?)

### ನಳ.

ಉತ್ತರದೇಶದಲ್ಲಿ ನಿಷಧಪುರದಲ್ಲಿ ನಿಷಧನ ಮಗ ನಳಚಕ್ರವರ್ತಿ. ಇವನು ರೂಪಿನಲ್ಲಿ ಕಾಮ, ಬಲ್ಲವಿಕೆಯಲ್ಲಿ ಬ್ರಹ್ಮ, ಪ್ರತಾಪದಲ್ಲಿ ವಿಷ್ಣುವಿಗೆ ಸಮಾನವಾಗಿ ಒಂದು ದಿನ ಸಿಂಗರದೂಟಕ್ಕೆ ಹೋಗಿ ಹಂಸೆಗಳ ಕಂಡು ಸಲಹಬೇಕೆಂದೊಂದ ಹಿಡಿಯಲು ಅದು ಎಲೆ ಅರಸಿ ಮಾನಸ ಸರೋವರದಿಂದ ನಿನ್ನ ನೋಡಬಂದೆ, ಬಿಟ್ಟರೆ ಉಪಕಾರವ ಮಾಡಿಹೆನೆನಲು ಅದೇನೆಂದು ಕೇಳಲು ನೀನು ಕುಂಡಿನಿ ದೇಶದ ಕೌಂಡಿಲ್ಯಪುರವನಾಳುವ ಭೀಮರಾಜನ ಸತಿ ಭುಜಬಲದೇವಿಯ ಮಗಳು ವೀರಾದೇವಿ ಆಕೆಯ ತಂಗಿ ದಮಯಂತಿ ಈಕೆ ರೂಪಿನಲ್ಲಿ ಅತಿ ಬಲ್ಲವಿಕೆಯಲ್ಲಿ ಸರಸ್ವತಿಯ ಸಮಾನವಾದ ಈಕೆಯನೆ ಮದುವೆಯಾಗೆಂದು ಹೇಳಿ ಬಳಿಕ ಅವು ದಮಯಂತಿಯ ಸಿಂಗರದೂಟಕ್ಕೆ ಬರಲು ಆಕೆ ತಾನೆ ಒಂದ ಹಿಡಿಯಲು ಆ ನಿನಗುಪಕಾರವ ಹೇಳಿಹೆನು ಬಿಡು ಎನಲು ಅದೇನೆಂದಳು, ನೀನು ನಳನನೆ ಮದುವೆಯಾಗೆನಲು ಆಗ ಬಿಟ್ಟಳು. ಬಳಿಕ ದಮಯಂತಿಯ ಸ್ವಯಂವರವ ಮಾಡುವಾಗ ಎಲ್ಲ ಅರಸುಗಳು ಕೂಡೆ ನಳನು ಬರಲು ಆ ವೇಳೆಯಲಿ ಐವರು ದೇವತೆಗಳು ನಳನ ರೂಪಾಗಿ ಆತನ ಬಳಿಯ ಕುಳಿತಿರಲು ಆಗ ದಮಯಂತಿ ಬಂದು ಅದು ಮಂದಿ ಒಂದೇ ರೂಪಾಗಿರಲು ಅವರು ಅನುಮಿಷರು ಈತ ಎವೆ ಇಕ್ಕುತಾನೆ ಎಂದು ತಿಳಿದು ರತ್ನಮಾಲೆಯ ನಳಗೆ ಹಾಕಿ ಮದುವೆಯಾಗಿ

ಸಂಗಡ ಮನೆಗೆ ಹೋಗುವಾಗ ನಳನ ರೂಪ ತಾಳಿದ ದೇವತೆಗಳೊಳಗೆ ಇಂದ್ರನೆಂದನು. ಎಲೆ ನಳನೇ ನೀನು ಯಜ್ಞವ ಮಾಡಿದರೆ ವಿಷ್ಣುವು ಮಾಡುವುದಿಲ್ಲವೆಂದನು. ಅಗ್ನಿ ಬೆಂಕಿ ಇಲ್ಲದಡಿಗೆಯು ಕಲಿಸಿದನು. ಯಮ ವ್ಯಾಧಿ ಬಾರದಂತೆ ಮಾಡಿದನು. ವರುಣ ಮಳೆ ತಪ್ಪದಂತೆ ಮಾಡಿದನು. ಕುಬೇರ ಖೇಚರದಲ್ಲಿ ರಥವ ನಡಿಸುವುದ ಕಲಿಸಿದನು. ಬಳಿಕ ನಳ ತನ್ನೂರಿಗೆ ಬಂದಿರುವಾಗ ಕಲಿ ದ್ವಾಪಾರಗಳು ಬಂದು ದಮಯಂತಿ ಈತಗೇಕೆಂದು ನೊಡಲು ಅಣ್ಣತಮ್ಮಂದಿರ ಜೂಜಾಡಿಸಿ ನಳನ ಸೋಲಿಸಿ ರಾಜ್ಯವನೆಲ್ಲ ತಮ್ಮಗೆ ಕೊಡಿಸಲು ಅಂತಹ ನಳನ ಹೊರಡಿಸಲು ದಂಪತಿಗಳು ಹೋಗಿ ಅರಣ್ಯದಲ್ಲಿ ಹೆಂಡತಿಯು ಬಿಟ್ಟುಹೋದನು. ದಮಯಂತಿ ಪುರದಲ್ಲಿದ್ದ ಭೀಮರಾಜನ ಗುರಿ ಕಾಣದ ಋತುಪರ್ಣ ಬೇಂಟೆಗೆ ಬಂದು ದಮಯಂತಿಯು ಕಂಡು ಆಕೆಯು ತಂದೆಯು ಹತ್ತಿರಕ್ಕೆ ಕಳುಹಿದ ಬಳಿಕ ನಳ ಚಿತ್ರಕೂಟಗಿರಿಯಲ್ಲಿ ಹೋಗುವಾಗ ಒಂದು ಸರ್ಪ ನಳರಾಜ ಕಾಡಗಿಚ್ಚು ಬಂತು. ನನ್ನ ಹೊಳೆಯು ದಾಂಟಿಸೆನಲು ಆಚೆಗೆ ಕೊಂಡು ಹೋಗಲು ಆ ಸರ್ಪ ನನ್ನ ದಂತದ ಮೇಲೆ ಬೆರಳ ಮಡಗು, ನಿನ್ನ ಕಾಂತಿ ಕುಂದಿತ್ತು ನಿರುಗಬಹುದೆನಲು ಹಾಗೆ ಮಾಡೆ ಅವಂತಿರುಗಿ ಹೋಗಿ ಅಲ್ಲಿ ಒಬ್ಬನ ಕೂಡೆ ರಥವ ನಡಿಸಬಲ್ಲೆನೆನಲು ಆಗ ಋತುಪರ್ಣ ಸಂಬಳವ ಮಾಡಿ ನಳನ ಇಟ್ಟುಕೊಂಡಿರಲು ಆಗ ಮರಳಿ ದಮಯಂತಿಯು ಸ್ವಯಂವರಕೆಂದು ಋತುಪರ್ಣಗೆ ಹೇಳಿ ಕಳುಹಲು ರಥವನೇರಿ ಹೋ ಎಂದರೆ ನೂರು ಗಾವುದವ ಹೋಯಿತ್ತು. ಆಗ ಋತುಪರ್ಣನ ರಥವು ಬೇಗ ನಡೆಯಿತ್ತು. ನೀನಾರು ಎನಲು ಅವ ಸುಮ್ಮನಿರಲು ಕತ್ತಿಯು ಕಿತ್ತು ಹೊಯ್ವಾಗ ಮೆಯ್ಯೊಳಗಿದ್ದ ಕಲಿ ದ್ವಾಪಾರಗಳು ಹೊಗಳಲು ಮೊದಲ ಕಾಂತಿಯಾಯಿತ್ತು. ಆಗ ರಥವ ನಡಿಸುವುದ ನನಗೆ ಕಲಿಸಿದರೆ ನಾ ನಿನಗೆ ಪಗಡೆ ಕಲಿಸಿಹೆನೆನಲು ಅದಕ್ಕೆ ಒಡಂಬಟ್ಟು ಕಲಿಸಲು ಆಗ ನಳನ ರಥದೊಳಗೆ ಕುಳ್ಳಿರಿಸಿ ಋತಪರ್ಣ ಸಾರಥಿಯಾಗಿ ಕೌಂಡಿಲ್ಯಗೆ ಹೋಗಿಳಿಯಲು ಬಳಿಕ ಭೀಮರಾಜ ಬಂದರಸುಗಳಿಗೆ ಸೋಪಸತ್ಕಾರಗಳ ಕೊಡಿಸಿ ನಮ್ಮ ಕೇಳಿದಲ್ಲದೆ ಬೆಂಕಿಯು ಹೊತ್ತಿಸಬೇಡನೆನಲು ಆಗ ನಳನು ಬೆಂಕಿ ಇಲ್ಲದೆ ಅಡಿಗೆಯು ಮಾಡಿ ಒಬ್ಬ ಬಡಿವೆಗೆ ಇಕ್ಕಲು ಆಕೆ ಹೊಗೆಯಲ್ಲಿಯೂ ಬೋನವಿಲ್ಲದೊಂದು ಠಾವಿನಲ್ಲಿ ದೊರಕಿತೆನಲು ಅವ ನಳನೆಂದು ತಿಳಿದು ಭೀಮರಾಜ ದಮಯಂತಿಯು ಕೊಡಿಸಿ ಇಬ್ಬರನು ಅವರೂರಿಗೆ ಕಳುಹಿಸಿದನು. ಆಗ ತನ್ನೂರ ಬೀದಿ

ಯಲ್ಲಿ ಹೋಗುವಾಗ ಬಡಗಿಮಾಚಲದೇವಿಯು ಕಂಡು ಈಕೆಯು ಮದುವೆ ಯಾಗಬೇಕು, ಕ್ಷತ್ರಿಯ ಕುಲವ ಮಾಡಬಹುದೆ ಎಂದು ಹಾರುವರ ಕೇಳಲು ಚಿನ್ನದ ಗೋವು ಮಾಡಿ ಬಾಯಲ್ಲಿ ಹೊಗಿಸಿ ಪೃಷ್ಠದಲ್ಲಿ ಹೊರ ಡಿಸಿ ಆ ಗೋವ ಬ್ರಾಹ್ಮಣರಿಗೆ ಕೊಡಲು ಕ್ಷತ್ರಿಯಳಾದಾಳೆನಲು ಹಾಗೆ ಮಾಡಿಸಿ ಕೊಡಲು ಅದ ಕಡಿದು ಹಂಚಿಕೊಂಬಾತ ಹೊಲೆಯರು ಸತ್ತ ಗೊವು ನಮ್ಮದು, ನಿಮಗೆ ಸಲ್ಲದೆನಲು ಚಿನ್ನದ ಗೋವು, ನಿಮಗೆ ಸಲ್ಲ ದೆಂದು ಹೊಲಯರ ಕೂಡೆ ಹೋರಿಯಾಡುವ ಹಾರುವರ ಮಾತ ಕೇಳ ಬಹುದೆ ಎಂದು ಬಸವೇಶ್ವರನು ಬಿಜ್ಜಳನ ಕೂಡೆ ಹೇಳಿದರು.

---

## ೬೨ ನೆಯ ವಚನದ ಕಥೆ. (೮೮--೬೨)

ಕಾಳಿಂದಿ ಎಂಬ ನದಿಯಲ್ಲಿ ಹುಟ್ಟಿದ ಸತ್ಯವತಿ ತಾನೆ ಮತ್ಸ್ಯ ಗಂಧಿ ಎಂಬಾಕೆಯು ತಾಯಿ ಪರಾಶಮುನಿ ತಂದೆ, ವೇದವ್ಯಾಸನೆ ಮಗನು. ಪಾರಾಶು ಕೈವಾಲ್ಯ ಭಾರ್ಯೆ ತಸ್ಯಪುತ್ರ ವೇಷ ಋಷಿಃ ತಪಸಾ ಜ್ಯಾಯತೆ ವಿಪ್ರ ತಸ್ಯಜಾತಿಭೇದಂ ನ ಕಾರಯೆತ್ ॥ಶ॥ ಮಾರ್ಕಂ ಡೇಯನೆಂಬ ಮುನಿ ಮಾತಂಗಿ ಗರ್ಭ ಸಂಭೂತ್ವಾ ತಪಸಂ ಜಾಯತೆ ವಿಪ್ರ ತಸ್ಯ ಜಾತಿ ಭೇದಂ ನ ಕಾರಯೆತ" ರಜತಾದ್ರಿಯ ಪೂರ್ವದಿಕ್ಕಿನ ನದಿಯ ಸಮೀಪದಲ್ಲಿ ಶಿವಾನಂದ ಋಷಿಯು ತಪವ ಮಾಡುತ್ತಿರಲು ಅಲ್ಲಿಗೆ ಸ್ವರ್ಗಲೋಕದ ವೇಶ್ಯಾಂಗನೆ ಜಲಕ್ರೀಡೆಗೆ ಬರಲು ಅವಳ ಲಾವ ಣ್ಯವಂ ಕಂಡು ಕಾಮಾತುರದಿಂ ಪಿಡಿಯಲು ಅವಳು ಒಡಂಬಡದಿರೆ ಆ ಋಷಿಯ ರೇತಸ್ಸು ಸ್ಖಲಿತವಾಗಿ ನದಿಯಲ್ಲಿ ಬೀಳಲು ಮಂಡುಕ ನುಂಗಲು ಆ ಮಂಡುಕನ ಗರ್ಭದಲ್ಲಿ ಮಂಡೋದರಿ ಜನಿಸಿದಳು. ಆ ಋಷಿಯು ಶಿವನ ಬಳಿಗೆ ಬಂದು ದೀರ್ಘದಂಡ ನಮಸ್ಕಾರವಂ ಮಾಡಿ ಈ ಮಂಡೋದರಿಯಿಂದ ಸೇವೋಪಚಾರವ ಕೈಕೊಂಬುದೆಂದು ಬಿನ್ನೈಸಿ ಹೋದನು. ಇತ್ತ ಕೆಲವು ಕಲ್ಪಾಂತರ ಪರಿಚಾರಿಕೆಯಾಗಿ ಸೇವೋಪ ಚಾರಂಗಳಂ ಮಾಡುತ್ತಿರಲು ಇತ್ತ ರಾವಣ ಗಾನವಿದ್ಯೆ ತಪವಂ ಮಾಡಿ ಶಿವನ ಮೆಚ್ಚಿಸಿಕೊಂಡು ಮಂಡೋದರಿಯ ಬೇಡಿಕೊಳ್ಳಲು ರಾಮನಿಂದ ಎನ್ನ ಕುಲ ನಾಶವಾಗುತ್ತದೆ ಎಂದು ಮಂಡೋದರಿ ದೇವರ ಸ್ತೋತ್ರ ವಂ ಮಾಡಿ ಎನ್ನ ಕುಲವರ್ಧನವಪ್ಪಂತೆ ವರವೀವುದೆನಲು ನಿನ್ನ ಗರ್ಭ ದಲ್ಲಿ ಜನಿಸಿದ ಪುತ್ರನು ಹನ್ನೆರಡು ಸಾವಿರ ವರುಷ ತಪವಂ ಮಾಡೆ

ನಿನ್ನ ಕುಲ ವರ್ಧನವಾದೀತು. ಎನ್ನ ಮರೆದು ಮದೋನ್ಮತ್ತನಾದ ಕಾಲಕ್ಕೆ ಕುಲ ನಾಶವಾದೀತೆಂದು ಶಿವನು ವರವಿತ್ತನು. ಬಾಹ್ಯದಲ್ಲಿ ತಪವಂ ಮಾಡೆ ರಾಮನಿಂದ ಕಂಟಕ ಬಂದಿತ್ತೆಂದು ಮಂಡೋದರಿಯು ಗರ್ಭ ದಲ್ಲಿ ಏಳುನೂರು ವರುಷ ತಪವ ಮಾಡಿ ಇಂದ್ರಜಿತು ವರವಂ ಪಡೆದು ಆತನ ಮೇಲೆ ಎನ್ನ ಪರಾಕ್ರಮ ನಡೆಯದೆಂದು ರಾಮಬಾಣ ರಾಮನ ಕೂಡೆ ಹೇಳಿತ್ತು. ಮಿತ್ರಾವರುಣ ರಂಭೆಯು ಕೂಡಲು ಅಗಸ್ತ್ಯ ಜನಿಸಿದನು. ಅತ್ರಿಮುನಿ ಅನುಸೂಯಾದೇವಿಯರಿಗೆ ದೂರ್ವಾಸ ಪುಟ್ಟಿ ದನು. ಗ್ರಂಥ॥ ಶ್ವಪಚೋಽಪಿ ಮುನಿಶ್ರೇಷ್ಠೋ ಶಿವಭಕ್ತದ್ವಿಜಾಧಿಕಃ। ಶಿವಭ ಕ್ತಿವಿಹೀನಶ್ಚ ದ್ವಿಜೋಽಪಿ ಶ್ವಪಚಾಧಮಃ ॥೬॥

---

## ೬೭ ನೆಯ ವಚನದ ಕಥೆ. (೮೯--೬೭)

### ಜಗದೇವ.

ಜಗದೇವನು ಬಸವೇಶ್ವರನಿಗೆ ಭಿಕ್ಷವ ಮಾಡಿಹೆನೆಂದು ವಿಭೂತಿ ವೀಳೆಯವ ಕೊಟ್ಟು ವಿಪ್ರರ ಕಾಲ್ದೊಳೆದುದುಕವ ಮಂಡೆಯ ಮೇಲೆ ತಳೆದು ಬಂದು ಬಸವೇಶ್ವರನ ಚಿತ್ತೈಸನೆ, ಬಾರದೆ ಎಲೆ ಜಗದೇವ ಕೇಳು, ಏಲೇಶ್ವರದ ಕೇತಯ್ಯಗಳು ಹುರಿದ ಬೀಜವ ಬಿತ್ತಿ ಬೆಳೆದರು. ಇಳಿಹಾಳ ಬ್ರಹ್ಮಯ್ಯನು ಬೀಜವಿಲ್ಲದೆ ಬೆಳೆದರು. ಮತ್ತಂ, ಏಲೇಶ್ವರದ ಕೇತಯ್ಯನು ಪಶುಗಳು ಸೀವನೋಲ್ಲಂಘನೆಯಾದವೆಂದು ಬಿಡೆ ಆಹಾರವ ಕೊಳ್ಳದಿರಲು ಮರಳಿ ಕೂಡಿಕೊಳ್ಳಿ ಲಿಂಗ ದರ್ಶನ ಸ್ಪರ್ಶನವ ಮಾಡಿ ಆಹಾರಂಗೊಂಡವು. ಸೌಂದರನಾಚಯ್ಯನ ಸ್ತ್ರೀ ಗರ್ಭಿಣಿಯಾಗಿರೆ ಲಿಂಗವ ಮಡಗಿರೆ ಶಿಶು ಹುಟ್ಟಿ ಮುನ್ನ ಉದಯಿಸಿದುದಕ್ಕೆ ಲಿಂಗವ ಧರಿಸಿ ಕಡೆಯಲುದಿಸಿದುದ ಬಿಟ್ಟುದನರಿಯೇ ಎಂದು ಬಸವೇಶ್ವರನು ನಿರೂಪಿಸಿ ಜಗದೇವನು ಅಪರಾಧವೆಂದು ಸ್ತುತಿಸಿ ಶಿವದ್ರೋಹಿಯ ಕೊಲ್ಲಲು ಪುರಾ ತನರು ಕೃಪೆಯಾದಹರೆಂದು ಭಾಷೆಯ ಕೊಟ್ಟಿರುತ್ತಿರಲು, ಹರಳಯ್ಯ ಮಧುವಯ್ಯಗಳ ಮೇಲೆ ತಪ್ಪಿಲ್ಲದೆ ಬಿಜ್ಜಳನು ಕಣ್ಣ ಕಳೆಯಿಸಲು, ಬಸ ವೇಶ್ವರ ದೇವರು ಅವರಿಗೆ ಕಣ್ಣ ಕೊಟ್ಟು, ಎಲೆ ಜಗದೇವ ನಿನಗೆ ಕೊಟ್ಟ

ಭಾಷೆ ಇದೀಗವೆಂದು ಶಿವದ್ರೋಹಿಯು ಕೊಲ್ಲಲು ಎಂದು ಜಗದೇವ ಮೊಲ್ಲೆ ಬೊಮ್ಮಯ್ಯನು ಊಟ ಮಾಡುವಲ್ಲಿ ಜನನಿ ಮೂದಲಿಸೆ ಬಿಜ್ಜಳನ ಕೊಂದು ಶಿವಲೋಕಕ್ಕೆ ಎಯ್ದಿದರು.

---

## ೬೯ ನೇ ವಚನದ ಕಥೆ. (೯೦—೬೯)

ಸಿದ್ಧರಾಮಯ್ಯನು ಮಳೆಯಲ್ಲಿ ಕ್ಷೇತ್ರವ ಪ್ರದಕ್ಷಿಣವ ಮಾಡುತ್ತಿರೆ ಸಿಡಿಲು ಬಂದು ವಂದಿಪೆನೆಂದು ಬಂದೆರಗೆ ಆಲಗಿನಿಂದಿರಿಸಿ ಸಿಡಿಲು ಶಿವನ ಸ್ತುತಿಸೆ ಶಿವನು ಶಿದ್ಧರಾಮಯ್ಯಗೆ ಬೇಡವೆಂದು ಹೇಳೆ ಕೃಪೆಯಿಂದ ಸಿಡಿಲ ಬಿಟ್ಟರು. ಎಂದಿನಂದದಿ ಪ್ರದಕ್ಷಿಣ ಬರೆ, ಕೃಷ್ಣಶ್ವಾನ ಪಾದದ ಮೇಲೆ ಬೀಳೆ, ಗುಡ್ಡರು ಇದೇನೆಂದು ಕೇಳೆ ಶಿವನೋಲಗಕ್ಕೆ ಭಾಗವಾನೆಂಬ ಗಾಂಧರ್ವನು ಬಂದು ಶಿವನಿಗೆ ಸಾಷ್ಟಾಂಗ ದಂಡಪ್ರಣತನಾಗುವಲ್ಲಿ ಅಘೋರ ಮುಖದಿಂದುದಿಸಿದ ಉಗ್ರಮುಖ ಗಣೇಶ್ವರನ ಭಾಗವಾನನ ಕಾಲು ಸೋಂಕಲು ಕೃಷ್ಣ ಶ್ವಾನನಾಗೆಂದು ಶಾಪವ ಕೊಟ್ಟ. ವಿಶಾಪವೆಂದಿಗೆನೆ ಸೊನ್ನಲಿಗೆಯಲ್ಲಿ ಮಲ್ಲಿಕಾರ್ಜುನನ ಪ್ರಸಾದವ ಕೊಳ್ಳೆ ವಿಶಾಪವೆನೆ ಬಂದೆನೆಂದು ಹೇಳಿ ಮಲ್ಲಿಕಾರ್ಜುನನ ಧೂಪವ ಆರೋಗಣೆಯ ಮಾಡಿಸುವ ಸಮಯ ಉಘೇ ಎನೆ ನಿಜ ತನುವಿಂದೆ ಉಘೇಕಾಳನೆಂಬ ಪೆಸರಾಗಿ ಕೈಲಾಸಕ್ಕೆ ಹೋದನು. ಶುನಕನ ಶ್ರವವನಿಕ್ಷೇಪಿಸಿ ಸಿದ್ಧರಾಮಯ್ಯನು ಸುಖದಿಂದಿರೆ.

---

## ೭೮ ನೆಯ ವಚನದ ಕಥೆ. (೯೧—೭೮)

ಶ್ವಪಚಯ್ಯನು ಏಕಾಂತಾಶ್ರಮದಲ್ಲಿ ಪಾಕವ ಮಾಡುತ್ತಿದ್ದ ಸಾಮವೇದಿಗಳ ಕಂಡು ಪಾದರಕ್ಷೆಯ ಮುಚ್ಚೆ ಆತನು ನಿಂದಿಸಿ ಖೇಚರತ್ವ ವಳಿಯಲು ಶ್ವಪಚಯ್ಯನಿಂದ ಉಪದೇಶವ ಪಡೆದು ಛತ್ತೀಸಪುರವ ಕೈಲಾಸಕೆಯ್ದಿಸಿದರು. ಈಶ್ವರೋವಾಚ ॥ಗ್ರಂಥ॥ ಭವಿಪಾಕ ನ ಕರ್ತವ್ಯಂ ಲಿಂಗನೈವೆದ್ಯಂ ಕಿಲ್ಬಿಷಂ ಭಕ್ತ ಪಾಕ ವಿಪತ್ರಾನ್ನಂ ಲಿಂಗ ನೈವೇದ್ಯ ಮುತ್ತಮಂ.

---

## ೭೭ ನೆಯ ವಚನದ ಕಥೆ. (೯೧—೭೭)

ಶಿವಚಿತ್ತ್ರರು ತರ್ಕೈಸಿದ ಒಂದು ಲಕ್ಷ ವಿಪ್ರರನು ಶಿವಭಕ್ತರ ಪಾದ ರಕ್ಷೆಯನು ತೂಗಲು ಪಾದರಕ್ಷೆಗೆ ಸಮಾನವಾಗದಾದರು. ಪಾಶದಿವರು ಓಷಧೀ ಪ್ರಸ್ತಪುರದಲ್ಲಿ ಗಿರಿಜಾವಿವಾಹದ ಸಂಭ್ರಮಕ್ಕೆ ಅಗಸ್ತ್ಯ ಋಷೀಶ್ವರನು ಬರುವುದಕ್ಕೆ ದಕ್ಷಿಣದ ಪೃಥ್ವಿ ಏಳಲು ತಮ್ಮ ಚಮ್ಮಾವುಗೆಯ ಮಡಗಲು ಪೃಥ್ವಿ ನಿಂದಿತ್ತು.

---

## ೯೪ ನೆಯ ವಚನದ ಕಥೆ. (೯೪—೯೪)

### ಸುಕುಮಾರ.

ಕುಠಾರದೇಶದಲ್ಲಿ ವೀರಾವತಿ ಎಂಬ ನದೀತೀರದಲ್ಲಿ ಕೌಂಡಿಲ್ಯಪುರವಿಹುದು. ಅಲ್ಲಿ ಪರಪುರಂಜಯನೆಂಬ ರಾಜನ ಮಂತ್ರಿಯ ಮಗ ಸುಕುಮಾರನು ಪರಸ್ತ್ರೀಯರ ಬಲುಮೆಯಿಂದ ಸಂಗವ ಮಾಡುತ್ತಿರಲು ಅರಸು ಕೇಳಿ ನಿನ್ನ ಮಗನಿಗೆ ಶಿಕ್ಷೆಯ ಮಾಡಲೋ ಬುದ್ಧಿಯ ಹೇಳಿಯೋ ಎನಲು ಅವನು ಹೆದರಿ ಕಿರಾತದೇಶಕ್ಕೆ ಹೋಗಿ ನೀರಡಿಸಿ ಕೊಳನ ಬಳಿಗೆ ಹೋಗಲು ಅಲ್ಲಿ ಒಬ್ಬ ಹೊಲತಿ ಸೂತಕವಾಗಿ ನಾಲ್ಕನೆಯ ದಿನದಲ್ಲಿ ಸ್ನಾನವ ಮಾಡಿ ನಿಂತಿರಲು ಕಂಡು ಸುಕುಮಾರನು ಸಂಭೋಗಕ್ಕೆ ಕರೆಯಲು ಒಲ್ಲೆನೆನಲು ಬಲುಮೆಯಿಂದ ಕ್ರೀಡಿಸಿಟ್ಟುಕೊಂಡಿರಲು, ಬಳಿಕ ಪಂಚಮಹಾಪಾತಕ ಪುಟ್ಟಿದಂತೆ ಐವರು ಮಕ್ಕಳ ಪುಟ್ಟಿಸಿ ಅವಳು ಸತ್ತುಹೋಗಲು ಮತ್ತೆ ಐವರು ಹೆಣ್ಣುಮಕ್ಕಳನೆ ಹೆಂಡಿರುಮಾಡಿ ಆಳಲು ಶ್ವಪಚರು ನೀ ಪಾಪಿ ನಮ್ಮ ಕೇರಿಯಲ್ಲಿರಬೇಡವೆಂದು ಹೊರಡಿಸಲು ಮಾದಿಗರ ನೆರೆಯಲ್ಲಿರುತ್ತ ಒಂದು ದಿನ ಮಾದಿಗರ ಕೂಡಿಕೊಂಡು ಕಳವಿಗೆ ಹೋಗಲು ಅವರೊಳಗೆ ಒಬ್ಬ ಸಿಕ್ಕು ಎಲ್ಲರ ಮೇಲೆ ಹೇಳಿಹನೆಂದು ಕಿರಾತದೇಶದ ವಾಣಿಜ್ಯಪುರಕೆ ಹೆಂಡರು ಸಹವಾಗಿ ಹೋಗಿ ಸುಕುಮಾರ ಗವಿಯೊಳಗಿರಲು ಅಲ್ಲಿ ಲಿಂಗಪೂಜೆಗೆ ಎಲ್ಲರು ಬರುತ್ತಿರಲು ಅವರು ಮಾಡುವ ಲಿಂಗಪೂಜೆಯ ಕಂಡು ಕಳವ ಮರೆತು ತನ್ನ ಹೆಂಡಿರು ತಳುವಾಯಿತೆಂದಾರೆಂದು ಲಿಂಗವ ನೋಡುತ್ತ ಹಿಮ್ಮರಿಗೆಯಲ್ಲಿ ಬರುತ್ತ ಹಳ್ಳವ ಬಿದ್ದು ಸಾಯಲು ಯಮದೂತರು ಕೊಂಡುಹೋಗುತ್ತಿರಲು

ಶಿವದೂತರು ಬಂದು ಲಿಂಗದ ದರ್ಶನವಾದನು. ನಿನಗೇನು ಕಾರಣವೆಂದು ತಾವು ಕೈಲಾಸಕ್ಕೆ ಒಯ್ಯಲು ಶಿವನು ಆ ಸುಕುಮಾರನಿಗೆ ಗಣಪದವಿಯ ಕೊಟ್ಟರು.

---

## ೯೬ ನೆಯ ವಚನದ ಕಥೆ. (೯೪—೯೬)

### ರಾಮ

ರಾವಣನ ಬಾಧೆಗೆ ದೇವತೆಗಳು ಬಂದು ನಾರಾಯಣಂಗೆ ಮೊರೆ ಇಡಲು ಆ ನಾರಾಯಣನು ರಾಮಾವತಾರದಿಂದ ದಶರಥನುದರದಲ್ಲಿ ಜನಿಸಿ ಮಲತಾಯಿಯು ಕೃತಕದಿಂದ ವನಪ್ರವೇಶವಾದಲ್ಲಿ ಆ ರಾಮಲಕ್ಷ್ಮಣರಿದ್ದ ಅರಣ್ಯಕ್ಕೆ ರಾವಣನ ತಂಗಿಯಾದ ಶೂರ್ಪಣಖಿಯು ಬಂದು ಮೋಹಿಸಿ ರಾಮ ಲಕ್ಷ್ಮಣರನು ಕೂಡೆನಲಾಗಿ ಒಲ್ಲದೆ ಹೋದರು. ಅವಳು ನೊಂದು ರಾಕ್ಷಸ ಕೃತ್ಯವ ತೋರಲಾಗಿ ನಾಶಿಕಚ್ಛೇದನವಂ ಮಾಡಿದರು. ಆಕೆ ಖರ ದೂಷಣ ತ್ರಿಶಿರಗೆ ಮೊರೆ ಇಡಲು ಅವರೀ ರಾಮನ ಮೇಲೆ ದಂಡೆತ್ತಲವರನಾ ರಾಮ ಸಂಹರಿಸಲಲ್ಲಿಂದ ತಮ್ಮಣ್ಣಾಗೆ ನಿನಗೆಂದು ಒಂದು ಹೆಣ್ಣಾದ ಸೀತೆಯುರುವನಿಕ್ಕಿ ತನಗೆ ವಿಧಿಯಾಯಿತ್ತೆಂದು ಹೇಳಲಾಗಿ ಆ ರಾವಣನು ತಮ್ಮ ಮಾವನಾದ ಮರೀಚನಿಗೆ ಬಂದು ಮರೀಚ ಮೃಗವಾಗಲು ಸೀತೆಗೆ ಪ್ರೀತಿದೋರಿ ರಾಮನಾ ಮೃಗನ ತಂದುಕೊಡೆನಲಾಕೆಗೆ ಲಕ್ಷ್ಮಣ ಕಾವಲಿಟ್ಟು ತಾನಾಮೃಗದ ಬೆಂಬತ್ತಲದರ ಕೃತಕವ ಕಂಡೆಸೆಯಲದು ಲಕ್ಷ್ಮಣನ ನೆನೆದು ಪ್ರಾಣವ ಬಿಡಲು, ರಾಮನಳಿದನೆಂಬ ಚಿಂತೆದೋರಿ, ಸೀತೆಯ ಬಿಟ್ಟು ಲಕ್ಷ್ಮಣನು ಅಣ್ಣನೆಡೆಗೆಯ್ದಲ್ಲಿ ಇತ್ತಲೀ ರಾವಣ ಕಪಟಭಿಕ್ಷಾರ್ಥಿಯಾಗಿ ಸೀತೆಯನೊಯ್ವಾಗ ಜಟಾಯುವನು ಜಯಿಸಿ ಲಂಕೆಯ ಹೊಕ್ಕನು. ಇತ್ತ ರಾಮ ಸೀತಾ ವಿಯೋಗದಲ್ಲಿ ಜಟಾಯುವ ಕಂಡು ಹನುಮಂತನಿಂದ ಸುಗ್ರೀವರಿಗೆ ಅಭಯವನು ಕೊಟ್ಟು ವಾಲಿಯ ನೆಚ್ಚು ಕೊಂದು ಸುಗ್ರೀವನ ಹೆಂಡತಿಯ ಬಿಡಿಸಿ ಪಟ್ಟವ ಕಟ್ಟಿ ಅಲ್ಲಿಂದ ಹನುಮನ ಲಂಕೆಗೆ ಕಳುಹಿ ಅವನು ಆ ಲಂಕೆಯನು ಸುಟ್ಟು ಮುದ್ರಿಕೆಯನು ಸೀತೆಗೊಪ್ಪಿಸಿದ ಮೇಲೆ ವಿಭೀಷಣ ಬರಲಿಟ್ಟುಕೊಂಡು ಅಲ್ಲಿಂದ ಹನುಮ ನೀಲ ಸುಗ್ರೀವ ಅಜ ನಳ ಜಾಂಬುವ ಮುಖ್ಯವಾದ ಎಪ್ಪತ್ತೇಳು ಕೋಟಿ ಕಪಿಯ ನಾಯಕ

ಬಲಗೂಡಿ ನಾಲ್ಕು ದಿನಕ್ಕೆ ಸಮುದ್ರವನು ಸೇತುವೆಗಟ್ಟಿ ಆರು ದಿನಕ್ಕೆ ದಾಂಟಿ ಲಂಕಾಪುರವ ಮುತ್ತಿ ಆ ರಾವಣನ ಛತ್ರಭಂಗವ ಮಾಡಿ ಅಂಗ ಜನ ಸಂಧಾನಕ್ಕೆ ಕಳುಹಲು ಆ ಸಂಧಾನ ಮುರಿದು ಸಮರವಾದಲ್ಲಿ ಮಿತ್ರಘ್ನ ಧೂಮ್ರಾಕ್ಷ ವಜ್ರದೌಂಷ್ಟ್ರ ಅಕಂಪನ ದೇವತೆಗಳು ಅಗಣಿತ ಬಲವಾರುದಿನ ಕಳಿದರಾ ಮೇಲೆ ರಾವಣನು ಯುದ್ಧದಲ್ಲಿ ಮಾನಭಂಗ ವಾಗಿ ಹೋಗೆ ಆ ಮೇಲೆ ಕುಂಭಕರ್ಣನ ನೆಬ್ಬಿಸಲು ಅವನು ರಾಮನ ಬಾಣದಿಂದಳಿದ. ಅನಂತರದಲ್ಲಿ ನರಾಂತಕ ದೇವಾಂತಕ ತ್ರಿಶೀಕರ ಮದೋನ್ಮತ್ತರೆಂಬ ನಾಲ್ವರು ಕುಮಾರರು ಮಹೋದರನೆಂಬ ಪ್ರಧಾನಿ ಸಹಿತ ಅಪರಮಿತ ಬಲವಳಿಯಿತ್ತು. ಅಲ್ಲಿಂದ ಅತಿಕಾಯನೆಂಬ ಮಗನಗಣಿತ ಸೇನೆ ಮಡಿಯಿತ್ತು. ಇಂದ್ರಜಿತುವೆಂಬ ಕುಮಾರ ಮಾರಣ ಯಜ್ಞವ ಮಾಡಿ ಬ್ರಹ್ಮಾಸ್ತ್ರದಿಂದ ರಾಮ ಲಕ್ಷ್ಮಣ ಮುಖ್ಯ ವಾದ ಎಪ್ಪತ್ತೇಳು ಕೋಟಿ ಕಪಿ ನಾಯಕರನು ಕೊಂದನು. ಹನು ಮಂತ ಜಾಂಬವ ವಿಭೀಷಣರುಳಿದರು. ಹನುಮಂತನಿಂದ ಸಂಜೀವ ನವ ತರಿಸಿ ರಾಮ ಲಕ್ಷ್ಮಣ ಮೊದಲಾದ ಬಲವನೆಬ್ಬಿಸಿದರು. ಆ ಮೇಲೆ ಕುಂಭ ನಿಕುಂಭ ಶ್ರೋಣಿತಾಕ್ಷ ಇಂದ್ರಜಿತು ಸುಪರ್ಶನೆಂಬ ಪ್ರಧಾನ ರಾಮ ಲಕ್ಷ್ಮಣ ಕಡೆ ಹುಟ್ಟಿ ನಮಗೆ ವಿರೂಪಾಕ್ಷ ಮೊದಲಾದ ಚತು ರಂಗ ಮಾರ್ಬಲವಳಿದ ಮೇಲೆ ರಾವಣನು ಅತಿ ಕೋಪೋದ್ರೇಕದಿಂದ ಕಾದುತ್ತಿರಲಾ ಸಮಯದಲ್ಲಿ ವಿಭೀಷಣನಿಂದಾತನ ಆಯುವಿನ ಮರ್ಮವ ಕೇಳಿ ಬ್ರಹ್ಮ ವಿಷ್ಣು ರುದ್ರ ಮಂತ್ರಸಮೇತ ಬಾಣದಿಯುವನ ಎದೆಯು ನೆಸೆಯಲು ಆ ವಿಭೀಷಣನಿಗೆ ಶೋಕ ಪುಟ್ಟಲು ಅದ ಪ್ರಹರಿಸಿ ವಿಭೀ ಷಣಗೆ ಲಂಕಾಪುರದಲ್ಲಿ ಸ್ಥಿರಪಟ್ಟವ ಕಟ್ಟಿದರು.

---

## ೯೭ ನೆಯ ವಚನದ ಕಥೆ. (೯೪—೯೭)

### ಖಚರ

ಸಿಂಹಕಂದರವೆಂಬ ನಗರ ಖಚರನೆಂಬ ರಾಜ ಆತನು ತನ್ನ ಸುತೆ ಅವೃತಮತಿಗೆ ಭ್ರಮಿಸಿ ಕೂಡಬಹುದೆ ಎಂದು ವಿಪ್ರರ ಕೇಳಿ ತಾ ಬಿತ್ತಿ ಬೆಳೆದ ಫಲವನುಣ್ಣಬಹುದು ಎನೆ ಖಚರನು ಸುತೆಯ ತುಡುಕಿ ಹಿಡಿಯಲು ಓಡಿ ಬಂದು ಲಿಂಗದ ಗರ್ಭವ ಹೊಗಲು ಬೆಂಬತ್ತಿ ಬಂದು ಖಡ್ಗದಿಂದ ಹೊಯ್ಯಲು ಅಸ್ಥಿಲಾಪುರ ಮಜ್ಜಲಾಪುರ ಶಿಖೇಶಲಾಪುರ ರೋಹಿತಾಪು ರವೆಂಬ ನಾಲ್ಕು ಆದವು.

## ದಾಸಯ್ಯ.

ಹೊಟ್ಟಲಕೆರೆ ಎಂಬ ಪುರದಲ್ಲಿ ಸುಗ್ಗಲದೇವಿಯರು ದೇಸಿಂಗ ರಾಯನ ಮದುವೆಯಾಗಲು ಅಂಗ ಲಿಂಗವ ಧರಿಸದೆ ಇರಲು ಈಕೆ ಬೇರೊಂದು ಮನೆಯಲ್ಲಿ ಜಂಗಮಾರ್ಚನೆಯ ಮಾಡುತ್ತಿರಲು ಒಂದು ದಿನ ಅರಸು ನಮ್ಮ ಗುರುಗಳನೇಕೆ ಪೂಜಿಸೆ ಎನಲು ಅದಕ್ಕೆ ಸುಗ್ಗಲೆ ನಮ್ಮ ಗುರುವ ವಾದದಿಂದ ಸೋಲಿಸಿದರೆ ಮನ್ನಿಸಿಹೆನೆಂದು ದಾಸ ಯ್ಯನ ಕರಸಿ ಅರಸನ ಸಭೆಯಲ್ಲಿ ಉನ್ನತಾಸನದಲ್ಲಿ ಮೂರ್ತವ ಮಾಡಿಸಿ ರಲು ಜೈನರು ಬಂದು ದಾಸಯ್ಯಗಳೆ ನಿಮ್ಮ ರಾಮನಾಥ ಸರ್ವಗತ ನಹುದೇ ಎನಲು ಅಲ್ಲದಿದ್ದರೆ ಈ ಚರಾಚರಕೆ ಚೈತನ್ಯವೆಲ್ಲಿಯದೆನಲು ಹಾಗಾದರೆ ಮಲಮೂತ್ರಗಳನ್ನೆಲ್ಲಿ ಬಿಡುವಿರೆನಲು ಅದಕ್ಕೆ ಇಂಬ ತೋರಿಹೆ ವೆಂದು ಒಬ್ಬ ಜೈನನ ಕರೆದು ನಿನ್ನ ಜಿಹ್ವೆಯಲ್ಲಿ ಶಿವನುಂಟೇ ಎನಲು ಅವ ಇಲ್ಲವೆನಲು ಹಾಗಾಗಲೆನಲು ಅಲ್ಲಿ ಮಲಮೂತ್ರಗಳ ಬಿಡುವೆವು ಎಂದು ದಾಸಯ್ಯ ನುಡಿಯಲು ಮತ್ತೆ ಜೈನರು ನಮ್ಮ ಜಿನೇಶ್ವರನೂ ಸರ್ವಗತನೆಂದು ಈ ಮರದೊಳಗೆ ನುಡಿಸಿಹೆವೆನಲು ಹಾಗಗಲೆನಲು ಒಬ್ಬ ಹುಡುಗನ ಮರದ ಹೊಟ್ಟೆಯಲ್ಲಿಟ್ಟು ಎಲೇ ಜಿನೇಶ್ವರನೇ ನೀನು ಸರ್ವ ಗತನಾದರೆ ನುಡಿ ಎನಲು ಆ ಹುಡುಗ ಸತ್ತು ಸುಮ್ಮನಿರಲು ಅವನ ತಾಯಿ ಬಂದು ದಾಸಯ್ಯಗೆ ನಮಸ್ಕರಿಸಿ ಅವರ ವಾದ ಹಾಳಾಗಲಿ ನನ್ನ ಮಗನ ಪ್ರಾಣವ ಕೊಡಿ, ಎಂದು ಪಡೆದುಕೊಂಡು ಹೋಗಲು ಮತ್ತೆ ಜೈನರು ಈತನ ಕೊಲ್ಲಬೇಕೆಂದು ಕೊಡದೊಳಗೆ ಸರ್ಪನ ಹಾಕಿ ಇಲ್ಲಿ ನಿಮ್ಮ ಶಿವನಿದ್ದಾನೇ ಎನಲು ಇಲ್ಲಿ ಶಿವನ ತೋರಿ ನಿಮ್ಮ ಸಂಹಾ ರವ ಮಾಡದೆ ಬಿಡೆವೆಂದು ಹಸ್ತವ ಮಡಗಿ ಆ ಸರ್ಪನ ಸ್ಫಟಿಕದ ಲಿಂಗವ ಮಾಡೆ ಅದಕೆ ಉತ್ತರನಾಥನೆಂದು ಹೆಸರಿಟ್ಟು ಏಳುನೂರು ಬಸದಿಗಳನೊಡೆದು ಲಿಂಗಗಳ ನಿಲಿಸಿ ದೇಸಿಂಗರಾಯಗೆ ಲಿಂಗವ ಧರಿಸಿ ತಮ್ಮ ಊರಿಗೆ ಹೋಗಲು ಇವರು ಸುಖದಲ್ಲಿದ್ದು ಶಿವನ ಕೃಪೆಯ ಪಡೆದರು.

## ಅಣುಪುರ ಸಿದ್ಧಯೋಗಿ.

ಅಣುಪುರಸಿದ್ಧಯೋಗಿ ಲಿಂಗದಿಂ ಪರುಷವ ಪಡೆದಿರೆ ಅವರ ಗೃಹಕ್ಕೆ ವಿನಾಶಕ್ತಿರಾಯ ಬಂದು ಪರುಷವ ಬೇಡಲು ಲಿಂಗದ ಪೀಠದಲ್ಲಿ ಮಡಗಿ ಹುಲ್ಲೆಯ ಶರೀರದಲ್ಲಿ ಪ್ರವೇಶವಾಗೆ ಲಿಂಗವು ಪರುಷವ ನುಂಗಲು

ಘಾಸಿಮಾಡಿದ ಪಾಪಕ್ಕೆ ಭೋಜನ ಹುಳುಗುಪ್ಪಿಯಾಗುತ್ತಿರೆ ಕೆಲವು ದಿನವಿರೆ ಓರ್ವ ಬಂಟನು ಬೇಂಟೆಯಲ್ಲಿ ಪರಕಾಯವೇಷದ ಹುಲ್ಲೆಯ ನೆಸೆವುತ್ತಿರೆ ಶಿಶುವಿಗೆ ಮೊಲೆಗೊಟ್ಟು ಬಂದಿಹೆನೆನೆ ಬಾರದಿದ್ದರೆ ಏನು ಎನೆ ವಿನಾಶಕ್ತರಾಯನು ಮಾಡಿದ ಪಾಪಕ್ಕೆ ಹೋಗುವೆನೆನೆ, ಬಿಟ್ಟು ರಾಜನ ಕೂಡೆ ಹೇಳಿ, ಹುಲ್ಲೆಯುಪದೇಶದಿಂದ ವಿನಾಶಕ್ತರಾಯನು ಮಕರಭೋಜನವಾಗಿ ಅಸ್ತಿಮಾತ್ರದಿಂ ಶಿವಧ್ಯಾನದಲ್ಲಿರೆ ಶಿವಕೃಪೆಯಾಯಿತ್ತು.

---

## ೯೮ ನೆಯ ವಚನದ ಕಥೆ. (೯೫—೯೮)

### ಚಲದಂಕ ಬಲ್ಲಯ್ಯ.

ಚಾಳೋಕ್ಯರಾಯನು ಒಬ್ಬ ಚರಮೂರ್ತಿಯ ಸತಿಯ ಅಪಹರಿಸಿ ಕೊಂಬ ಸಮಯದಲ್ಲಿ ಆ ಜಂಗಮವು ರಾಜಬೀದಿಗೆಯ್ದಿ ಶೋಕದಿಂದ ಹರಗಣಂಗಳ ಸ್ಮರಿಸೆ ಅನಿತರೊಳು ಚಲದಂಕ ಬಲ್ಲಯ್ಯಗಳೆಂಬ ದಣ್ಣಾಯಕರು ಕೇಳಿ ಚಾಳೋಕ್ಯನ ಸಂಹರಿಸಿದರು.

---

## ೧೨೧ ನೆಯ ವಚನದ ಕಥೆ. (೯೮—೧೨೧)

### ಸೋಮುಖ.

ಕುಂಡಿನಿ ಎಂಬ ಪುರದಲ್ಲಿ ಧನಪಾಲನೆಂಬ ವೈಶ್ಯನ ಮಗ ಸೋಮುಖನು ಮಾಡಬಾರದ ಪಾಪವ ಮಾಡೆ ಚೋರರು ಸಹ ಅರಣ್ಯದಲ್ಲಿ ಹಾಳು ದೇಗುಲದಲ್ಲಿ ಧನವ ತೆಗೆದಿಹೆನೆಂದು ಅಗಿವುತ್ತಿರೆ ಬ್ರಹ್ಮರಾಕ್ಷಸ ಎರಗೆ ಮೂರ್ಛೆಯಾಗಿ ಬಿದ್ದು ಲಿಂಗದ ಬೆಂಬಳಿಗೆ ಬಂದು ಮಜ್ಜನದ ಬಿಂದುವ ಜಿಹ್ವೆಯಲ್ಲಿ ಆಸ್ವಾದಿಸೆ ಬ್ರಹ್ಮರಾಕ್ಷಸ ಬಿಟ್ಟುಹೋಯಿತ್ತು, ಮುಕ್ತಿಯಾಯಿತ್ತು.

---

## ೧೩೮ ನೆಯ ವಚನದ ಕಥೆ. (೯೮—೧೨೮)

### ಪೌಲಸ್ತ್ಯ.

ಪೌಲಸ್ತ್ಯ ಬ್ರಹ್ಮನ ಸ್ತ್ರೀ ಕೈಕಸೆ ಪತಿವ್ರತಾಂಗನೆಯಾಗಿರೆ ಅವನು ಒಂದು ದಿನ ಶೌಚಕ್ಕೆ ಹೋಗಿ ನೀರ ತಾರೆನೆ, ತರುತಿದ್ದೆನೆಂದು ಆಲ

ಸ್ಯವ ಮಾಡಿ ಆಗ ಅವನು ಅರಣ್ಯಕ್ಕೈಯ್ದಿ ತಪಸ್ಸಿರೆ ಅವನ ಗಡ್ಡದಲ್ಲಿ ದಂಪತಿಗೀಜಗಗಳು ಗೂಡನಿಕ್ಕಿರೆ ಒಂದು ಹೆಣ್ಣು ಹಕ್ಕಿ ಗರ್ಭಿಣಿಯಾಗಿ ತಾವರೆಯ ತಂಡುಲವ ಬಯಸಿ ತನ್ನ ಪುರುಷನಿಗೆ ತಾರೆನಲು ಅದು ಆಕಾಶಕ್ಕೈದಿ ಬೆಳಗು ಪರಿಯಂತರ ಕಮಲದಲ್ಲಿರ್ದು ತಂಡುಲವ ತಂದುಕೊಡಲು ಅದು ಒಲ್ಲೆಂದು ಕೋಪಿಸಲು ನನ್ನಲ್ಲಿ ಜಾರಭಾವ ಉಂಟಾದರೆ ಪೌಲಸ್ತ್ಯಬ್ರಹ್ಮ ಮಾಡಿದ ಪಾಪಕ್ಕೆ ಹೋಗುವೆನೆನಲು ನಾ ಮಾಡಿದ ಪಾಪವೇನೆಂದು ಕೇಳಲು ನೀನು ೧೦ ವರುಷ ಸ್ತ್ರೀಯಗಲಿರ್ದೆ ಇನ್ನು ಆಕೆಯ ಕೂಡು ಹೋಗು ಎನಲು, ಅವನು ಹಾಗೆ ಬಂದು ಕೂಡಲು ದಶಶಿರ ಪುಟ್ಟಿದನು.

## ವಿಶ್ವೇಶ್ವರ.

ಉತ್ತರದೇಶದಲ್ಲಿಯ ಅಂಗಜಪುರದಲ್ಲಿ ವಿಜಯ ಭೂಪಾಲನೆಂಬರಸು ಆತನ ಸತಿ ಸಾವಿತ್ರಾದೇವಿಯ ಮಗ ವಿಶ್ವೇಶ್ವರನು ದುರಾಚಾರದಲ್ಲಿರಲು ಒಂದು ದಿನ ಸೇವಂತಿಗೆಯ ಪುಷ್ಪ ಸೂಳೆಗೆ ಒಯ್ವಾಗ ಒಂದು ಹೂವು ಅಶುಚಿಯಾದ ಭೂಮಿಯಲ್ಲಿ ಬೀಳಲು ಅದು ಶಿವನಿಗೆ ಸಲ್ಲಲಿ ಎಂದು ಮರಣವಾಗಲು ಅವನ ಯಮದೂತರು ಕರೆದೊಯ್ದು ಪುಣ್ಯಪಾಪವ ವಿಚಾರಿಸಿ ಇವನು ಬಿದ್ದ ಹೂವ ಶಿವನಿಗೆ ಸಲ್ಲಲಿ ಎಂದುದರಿಂದ ಒಂದು ರಾತ್ರೆ ರಂಭೆಯ ಭೋಗ ಉಂಟೆಂದು ಇವನ ಆಕೆಯ ಬಳಿಗೆ ಕಳುಹಲು ಲಿಂಗಪೂಜೆಯ ಮಾಡಿಸಿ ಗಣಪದವಿಯ ನೆಯ್ದಿಸಿದಳು.

---

# ೧೪೧ ನೆಯ ವಚನದ ಕಥೆ. (೧೦೧—೧೪೧)

## ಭದ್ರದತ್ತ

ಪಾಲಂಕಿ ಎಂಬ ಕ್ಷೇತ್ರದಲ್ಲಿ ಭದ್ರದತ್ತನೆಂಬರಸಿನ ಬಳಿಗೆ ಸೀತಾಂಗನೆಂಬ ಮುನಿ ಬಂದು ಭಿಕ್ಷಾ ಎನಲು ಅರಸೆಂದನು, ನೀನು ಮೊದಲ ಜನ್ಮದಲ್ಲಿ ಆರಿಗೆ ಇಕ್ಕಲಿಲ್ಲವು ಅದರಿಂದ ಮನೆಮನೆಗೆ ತಿರುಗುತಿದ್ದೆ ಎನಲು ಅದಕ್ಕೆ ಮುನಿ ನಾವು ಗ್ರಹಸ್ಥರ ಪಾವನವ ಮಾಡುವುದಕ್ಕೆ ಬರುತ್ತವಲ್ಲದೆ ಅನ್ನವ ಕಾಣೆವೆ, ನೀನು ಪಾಪಿಯ ಕೂಸಾಗೆಂದು ಶಪಿ

ಸಲು ಆ ಭದ್ರದತ್ತ ಶ್ರೀಶೈಲದಲ್ಲಿ ಬಾಲದೊಡಿಗೆಯ ತೊಟ್ಟುಕೊಂಡು ಕುಳಿತಿರಲು ಶಿಶುವೆಂದೆತ್ತಿಕೊಳ್ಳಲು ಅವರನೆ ನುಂಗುತ್ತಿಹುದು.

---

## ೧೬೦ ನೆಯ ವಚನದ ಕಥೆ. (೧೦೪-೧೬೦)

ಅಯ್ಯನವರು ಅಮ್ಮನವರು ನಮ್ಮ ನಿಮ್ಮ ಭಕ್ತರ ಭಕ್ತಿ ವಿಶ್ವಾಸವ ನೋಡುವೆನೆಂದು ಜಂಗಮಾಕೃತಿಯ ಧರಿಸಿ ಅಮ್ಮನವರ ಭಕ್ತಗೃಹಕ್ಕೈಯ್ದಿ ಅವರು ಅಷ್ಟೈಶ್ವರ್ಯದ ಮರವೆಯಿಂದ ಲೆಕ್ಕಿಸದಿರಲು ಅಲ್ಲಿ ಓರ್ವ ಶಿವನ ಭಕ್ತನು ತನ್ನ ಸತಿ ಸುತರು ಗೋವು ಅಳಿದಿರಲು ಅತ್ಯಂತ ವಿಶ್ವಾಸ ಭಕ್ತಿಯ ಮಾಡಲು ಅವರ ಭಕ್ತಿನಿಷ್ಠೆಗೆ ಶಿವನೊಲಿದನು. ॥ಸಾಕ್ಷಿ॥ ಅಪವಾದಾರ್ಥ ನಾಶಂ ಚ ವಿಯೋಗೇನ ಚ ಬಾಂಧವಾ ರಾಜತೆಮುಹಾವೇದೀಮದ್ಭಕ್ತಸ್ಯ ಲಕ್ಷಣಂ ॥೧॥

---

## ೧೬೧ ನೆಯ ವಚನದ ಕಥೆ. (೧೦೫--೧೬೧)

### ಪರೋಕ್ಷರಾಯ

ಅರ್ಜುನನ ಮಗ ಅಭಿಮನ್ಯುವಿನ ಮಗ ಪರೋಕ್ಷರಾಯ ರಾಜ್ಯವಾಳುವಾಗ ಬವಿಷ್ಯತ್ಕಾಲವ ಬಲ್ಲವರು ಈತ ಸರ್ಪ ಕಚ್ಚಿ ಸತ್ತಾನೆನಲು ಆಗ ಮುಂದಾಸನದೊಳಗಿಟ್ಟು ನಡುಗೆರೆಯೊಳಗೆ ತಿಟ್ಟು ಮೇಲೆ ಇರಿಸಲು ಒಬ್ಬ ಮಾಲಿಗಾರರೋಣಿಯೊಳಗೆ ಹೋಗಿ ಪುಷ್ಪದ ಮಾಲೆಯ ಕೊಡುತ್ತ ಒಂದು ಹಾವು ಮೆಕ್ಕೆಯ ಕಾಯ ಅರಸು ಕಯ್ಯಲ್ಲಿ ಹಿಡಿದಿರಲೆ ಎಂದು ಕೊಡಲು, ಇದೇನೆಂದು ಕೇಳಲು ಹಾವು ಮೆಕ್ಕೆಯ ಕಾಯಿ ಎನಲು ಅದ ಕೇಳಿ ಪರೋಕ್ಷರಾಯ ಸತ್ತನು.

---

## ೧೬೨ ನೆಯ ವಚನದ ಕಥೆ. (೧೦೫—೧೬೨)

### ಭೋಜರಾಜ.

ಭಲ್ಲುಕಿ ಎಂಬ ಪಟ್ಟಣದಲ್ಲಿ ಮಲ್ಲಿರಾಜನೆಂಬ ಭಕ್ತನಿಹನು. ಆತನ ಸತಿ ಹೆರುವಾಗ ಮುನ್ನೂರು ಜೋಯಿಸರು ಗಳಿಗೆವಟ್ಟಲವನಿಕ್ಕಿರುವಾಗ ಶಿಶುವು ಜನಿಸಿತ್ತು. ಇದು ತಂದೆಗೆ ಒಳಿತಲ್ಲ ಬಿಸುಡಬೇಕೆನಲು

ತೊಟ್ಟಿಲೊಳಗೆ ಮಡಗಿ ಬಿದಿರ ಮೆಳೆಗೆ ಕಟ್ಟಿ ಬರಲು ಮೂರು ತಿಂಗಳ ಮೇಲೆ ಅರಸು ಗೂಡೆಯು ನೋಡಲು ಅಲ್ಲಿ ಈ ಪುಟ್ಟಿದ ಶಿಶು ಕೀರ್ತಿವಂತನಾದಾನೆಂದು ಬರೆದಿರಲು ಆಗ ಕಂಡು ಬಾಗಿಲವರ ಕರೆದು ಶಿಶು ಜನಿಸುವಾಗ ಬಂದಿದ್ದರಾರೆನಲು ಈ ಸಣ್ಣಾವ ಬಂದಿದ್ವನೆಂದು ತೋರಲು ಎಲೆ ಬಾಲಕಾ ಶಿಶು ಸತ್ತಿತ್ತು ಎಂತೇಕೆ ಬರೆದೆ ಎನಲು ಅದು ಸಾಯು ಲಿಲ್ಲ ಕೊಂಡು ಬನ್ನಿ ಎನಲು ಆಗ ಪರಿಚಾರಕರು ಹೋಗಿ ತಂದು ಮುಂದಿರಿಸಿ ಇದು ಮೇಲಿದ್ದ ಜೇನು ಗಾಳಿಗೆ ಬಾಯೊಳಗೆ ಬೀಳಲು ಬದುಕಿತೆನಲು ಆಗರಸು ಈ ಪುಣ್ಯವಂತನ ತಂದೆಗೆ ಹೊಲ್ಲಹೆಂದು ಬಿಸಾಡಿಸಿದ ಮುನ್ನೂರ ಹಾರುವರ ಕಲ್ಲಗಾಣಕ್ಕೆ ಹಾಕಿಸುವಾಗ ಬಾಲಕನಾದ ವರರುಚಿ ಎಂದನು. ಅರಸೇ ಗಳಿಗೆ ಬರೆವಾಗ ಚಮತ್ಕಾರ ಇವರಿಗೆ ತಿಳಿಯದು. ನಾ ತೋರುವೆನೆಂದು ಮೂರು ಬಾಳೆಯು ಕಂಭವ ನಿಲ್ಲಿಸಿ ಕತ್ತಿಯಲ್ಲಿ ಹೊಯ್ವಾಗ ಒಂದರಲ್ಲಿ ಹಾಲು ಒಂದರಲ್ಲಿ ನೀರು ಒಂದರಲ್ಲಿ ರಕ್ತ ಸುರಿದವು. ಮೂರರಲ್ಲಿಯೂ ಹಾಲು ಬೀಳಬೇಕು. ವಿಷಘಳಿಗೆ ಬಂದುದರಿಂದ ಹೀಗಾಯಿತ್ತೆಂದು ಅವರ ಬಿಡಿಸಿದನು. ಬಳಿಕ ಆ ಶಿಶುವ ಭೋಜರಾಜನೆಂದು ಹೆಸರ ಕರೆದು ರಾಜ್ಯವನಾಳುವಾಗ ಒಂದು ವಟವೃಕ್ಷದಲ್ಲಿ ಏಳುನೂರು ಭೂತಗಳಿರುವವು. ಅವರೊಳಗೆ ಒಂದು ಭೂತ ಮಾರಿಯು ಹಬ್ಬಕ್ಕೆ ಆಹಾರವ ಕೊಳ್ಳಬೇಕೆಂದು ಹೋಯಿತ್ತು. ಇತ್ತ ರಾಯನ ಗುರು ಉದ್ಭಟಯ್ಯ ಐಕ್ಯವಾಗಲು ಈತನ ಶಿಷ್ಯಳಾದ ಹಿರಿಯ ಕುಲದ ಜೊಮ್ಮನ್ವೆ ದಹನವ ಮಾಡುವಾಗ ಹೋಗೆ ಆಲದ ಮರಕೆ ತಾಗಲು ಭೂತಗಳು ಕೈಲಾಸಕ್ಕೆ ಹೋದವು. ಇದು ಬಂದು ಅಳುವಾಗ ನೀನಾರೆಂದು ಅರಸು ಕೇಳಲು ನಾವು ಏಳೂರ ಗಾಂಧರ್ವರು ಒಬ್ಬನ ಹೆಸರು ಚಾಮಿದೇವ ದೂರ್ವಾಸನ ಕೊಳನಲ್ಲಿ ಸ್ನಾನವ ಮಾಡುವಾಗ ಆತ ಶಪಿಸಲು ಭೂತಗಳಾದೆವು. ಹನ್ನೆರಡು ಸಾವಿರ ವರುಷ ಈ ಆಲದ ಮರದಲ್ಲಿದ್ದೆವು. ಈಗ ಚಂದನದ ಕಟ್ಟಿಗೆಯು ನೊಟ್ಟಿ ಉದ್ಭಟಯ್ಯನ ಸುಟ್ಟ ಬೂದಿಯು ಮೇಲೆ ಸುಡಲು ಹೊಗೆತಾಗಿದರೆ ಹೋದೆನೆನಲು ಆಗ ಭೋಜರಾಜ ಕಟ್ಟಿಗೆಗಳನೊಟ್ಟಿ ಆ ಮರದ ಮೇಲೆ ತಾ ಸಹಿತನಾಗಿ ಬಂಧುಗಳನೆಲ್ಲ ಕುಳ್ಳಿರಿಸಿಕೊಂಡು ಆ ಹೊಗೆ ತಾಗಲು ಮರ ಸಹಿತ ಕೈಲಾಸಕ್ಕೆಯ್ದಿದರು.

## ವಿಹಲ್ಯಕರಣಿ.

ಭವನಪುರದಲ್ಲಿ ಭವನ ರಾಜ ಆ ಪುರದ ಊರ್ಧ್ವಗೌತನ ಮಗ ಗೌತುಮನು ಕೋಮಟಿಗನ ಮಗ ಮಣಿಕುಂಡಲನು ಭಾಗ್ಯಶಾಲಿಯಾಗಿರಲು ಅವರೀರ್ವರು ದೇಶಾಂತರವ ಹೋಗುತ್ತ ಆ ಮಣಿಕುಂಡಲನು ಧರ್ಮವಿಜಯನೆಂಬವನು ಒಂದು ಕೈ ಒಂದು ಕಾಲು ಎರಡು ಕಣ್ಣು ಹೋಗಾಡಿಸಲು ಗೌತಮೀತೀರದಲ್ಲಿ ಯೋಗೀಶ್ವರ ಲಿಂಗದ ಪೂಜೆಗೆ ವಿಭೀಷಣ ಬಂದ ಅವನ ಮಗ ವಿಹಲ್ಯಕರಣಿಯನು ಮಣಿಕುಂಡಲನ ಅವಯವಕ್ಕೆ ಮುಟ್ಟಿಸಲು ಕಣ್ಣು ಕೈ ಕಾಲು ಬಂದವು. ಅವನ ಮಹಾಪುರಕ್ಕೆ ಹೋಗಿ ಮಹಾರಾಜನ ಮಗಳ ಕಣ್ಣು ಹೋಗಿರೆ ವಿಹಲ್ಯಕರಣಿಯ ಮುಟ್ಟಿಸಲು ಕಣ್ಣು ಬಂದವು. ಅವಳ ಮದುವೆಯಾಗಿ ಸುಖದಲ್ಲಿರ್ದನು.

---

## ೧೬೫ ನೆಯ ವಚನದ ಕಥೆ. (೧೦೫—೧)

### ಸತ್ಯೇಂದ್ರಚೋಳ

ಚೋಳ ಮಂಡಲದಲ್ಲಿ ಧರ್ಮವತಿ ಎಂಬ ಪಟ್ಟಣದಲ್ಲಿ ಸತ್ಯೇಂದ್ರ ಚೋಳರಾಜನೆಂಬ ಶರಣನಿರ್ಪ. ಆತನ ಸತಿ ಅಮೃತವತಿಯು ತನಗೆ ಮಕ್ಕಳಿಲ್ಲವೆಂದು ಪತಿವ್ರೋಹಿ ಎಂಬ ಮಂತ್ರಿಯ ಮಗ ಮಿತವಚನನ ತಕ್ಕೊಂಡು ಸಾಕುತ್ತಿರಲು ಬಳಿಕ ಒಂದು ದಿನ ತಮ್ಮ ಗುರುವಾದ ಚಿದ್ಘನ ಶಿವಾಚಾರ್ಯರು ಬಂದು ಭಕ್ತಿಯ ಕೈಕೊಂಡು ಹೋಗುವಾಗ ಅಮೃತವತಿಯು ನನಗೆ ಮಕ್ಕಳಿಲ್ಲವೆನಲು ಆಗ ತಮ್ಮ ತಾಂಬೂಲ ಪ್ರಸಾದವ ಕೊಡಲು ಗರ್ಭಿಣಿಯಾಗಿ ಕುಮಾರನ ಹೆತ್ತು ಮಂತ್ರಲಕ್ಷನೆಂದು ಹೆಸರಿಟ್ಟು ಸುಖದಲ್ಲಿರುವಾಗ ಹದಿನಾರು ವರುಷವಾಗಲು ಬಳಿಕ ಪತಿವ್ರೋಹಿ ಸಿಂಧುರಾಜನ ಮೇಲೆ ದಂಡ ಹೋಗಿ ಆನೆ ಕುದುರೆ ಹಣ ಆತನ ಇಬ್ಬರು ಪುತ್ರಿಯರು ಸಹವಾಗಿ ಕಪ್ಪವ ಕಮಲೆಯ ಮಿತವಚನನಿಗೆ ಕುಮುದಿನಿಯ ಮಂತ್ರಲಕ್ಷಗೆ ಧಾರೆಯನೆರದು ಸುಖದಲ್ಲಿರಲು ಸಿಂಧುರಾಜ ಕಳುಹಿದ ಎರಡು ತೇಜಿಗಳನೇರಿಕೊಂಡು ಸಾರೆಯ ಹೋಗಿ ಬರುವಾಗ ಮಾರ್ತಾಂಡಸೆಟ್ಟಿಯ ಸತಿ ತಿರುಕೊಳನಾಚಿಯ ಮಗ ಶಂಕರ ಬೀದಿಯಲ್ಲಿರಲು ಆಗ ಮಿತವಚನನ ಕುದುರೆ ತುಳಿದು

ಆ ಶಿಶುವಿನ ತಲೆ ಕತ್ತರಿಸಲು ತಿರುಕೊಳನಾಚಿಯರು ಬಂದು ಆ ತಲೆಯ ತಕ್ಕೊಂಡು ಅರಸಿನ ಮುಂದೆ ಮಡಗಲು ಈ ಶಿಶುವ ಕೊಂದ ವರಾರೆನೆ ಮಿತವಚನನ ಕುದುರೆ ತುಳಿಯಿತ್ತೆನಲು ಆಗ ಅರಸು ಅವನ ಕರೆ ಎನಲು ಆಗ ಮಂತ್ರಲಕ್ಷ ಆ ತಪ್ಪು ನನ್ನದು ಅಣ್ಣನ ಕರೆವುದೇ ಕೆನಲು ಆ ಮಾತಿಗೆ ಇವನ ಶಿರಚ್ಛೇದನವ ಮಾಡೆಂದು ಪತಿಮೋ ಹಿಗೆ ಹೇಳಲು ಆತನ ಕೊಲ್ಲಲಾರದೆ ತಾನೆಯುಳಿಯಲು ಆಗ ಸಂದಾ ಯಿಗೆ ಹೇಳಲು ಕರದೊಯ್ದು ಶಿರವ ಕತ್ತರಿಸಿ ಅರಸಿನ ಮುಂದೆ ಮಡ ಗಲು ಹೇಗೆ ಹೊಯಿದೆ ಎಂದು ಕೇಳಲು ಆಗ ಸಂದಾಯಿ ಹೀಗೆ ಹೊಯಿದೆನೆಂದು ತನ್ನ ಶಿರವ ಕತ್ತರಿಸಿಕೊಳ್ಳಲು ಅದ ತಿರುಕೊಳನಾ ಚಿಯರು ಕೇಳಿ ತನ್ನ ಶಿರವ ಕತ್ತರಿಸಿಕೊಳ್ಳಲು ಆ ಐದು ತಲೆಯ ಅರಸು ಕಂಡು ಇವಕ್ಕೆ ಕಳಸಗಾಣಿಕೆ ಎಂದು ತನ್ನ ಶಿರವ ಕತ್ತರಿಸಿ ಕೊಳ್ಳಲು ತಪ್ಪುಮಾಡಿದವ ನಾನೆಂದು ಮಿತವಚನ ತನ್ನ ಶಿರವ ಕತ್ತ ರಿಸಲು ಆಗ ಅಮೃತವತಿ ಶಿವಂಗೆ ಎಂಟು ತನುವು ಒಂದು ಕಡಿಮೆ ಯಾಯಿತ್ತೆಂದು ತನ್ನ ಶಿರವನರಿದುಕೊಂಬಾಗ ಶಿವ ಕೈಹಿಡಿದು ಮಚ್ಚಿದೆ ಬೇಡು ಎನಲು ಶಂಕರನ ಪ್ರಾಣವ ಕೊಡು ಎನಲು ಎಲ್ಲರ ಪ್ರಾಣ ವನು ಕೊಟ್ಟು ಕೈಲಾಸಕ್ಕೆ ಕರೆದೊಯ್ದರು.

---

## ೧೬೩ ನೆಯ ವಚನದ ಕಥೆ. (೧೦೬—೯)

### ಬಸವ

ಬಸವೇಶ್ವರನ ಕೂಡೆ ಬಿಜ್ಜಳಾಂಕನು ತರ್ಕವ ಮಾಡಿದಲ್ಲಿ ಗೆದ್ದ ಪವಾಡ ೬೪, ಭಕ್ತಿವಾದದಿಂದ ಗೆದ್ದ ಪವಾಡ ೨೪, ಇಂತು ಉಭಯ ಕೂಡಲಾಗಿ ೮೮ ಪವಾಡವ ಗೆಲವಾಗಿ ಬಿಜ್ಜಳ ಚಿಂತೆಯಿಂದ ಹಸ್ತವ ಮುಗಿದು ಚೆನ್ನಬಸವೇಶ್ವರಂಗೆ ಪ್ರಧಾನಪಟ್ಟವ ಕಟ್ಟಿದ ಪ್ರಸ್ತಾವದ ವಚನ

---

## ೧೮೦ ನೆಯ ವಚನದ ಕಥೆ. (೧೦೭--೩)

### ಗುಂಡಬ್ರಹ್ಮಯ್ಯ.

ಗೋಚರಪುರದಲ್ಲಿ ಗುಂಡಬ್ರಹ್ಮಯ್ಯಗಳು ಮರೆಹೊಕ್ಕವರ ಕೊಡೆ ನೆಂದು ಬಿರುದಿನ ಶಾಳೆಯ ಹಿಡಿಸಲು ಇದ ನಾರದನು ಶಿವನಿಗೆ ಹೇಳಲು

ಓರುಗಲ್ಲ ಗಣಪತಿರಾಯನ ಮನೆಯ ಕನ್ನವನಿಕ್ಕಿ ಮುತ್ತು ಮಾಣಿಕವ ಚಲ್ಲುತ ಗುಂಡಬ್ರಹ್ಮಯ್ಯನ ಮನೆಗೆ ಬರಲು ಬಂದ ಕಳ್ಳನ ಕೊಡು ಎನಲು ಕೊಂದರೂ ಕೊಲ್ಲಲಿ ಕೊಡುವುದಿಲ್ಲವೆನಲು ಆ ನುಡಿಗೇಳಿ ಗಣ ಪತಿರಾಯ ಶೂಲಕ್ಕೆ ಹಾಕಬೇಕೆಂದು ಕರಿಸಲು ಆ ಬ್ರಹ್ಮಯ್ಯನ ಸತಿ ಶಿರವನಿಳುಹಿ ಮುಂಡದಲ್ಲಿ ಆರತಿವಿಡಿದು ಬರಲು ಅರಸು ಕಂಡು ಅವರ ಬಿಡಿ ಎನಲು ಶೂಲವ ಲಿಂಗಕ್ಕರ್ಪಿಸಿದೆ ಇನ್ನು ಹೋದೆವೇ ಎಂದು ಶೂಲಕ್ಕೆ ಬೀಳಲು ಶಿವ ಮೆಚ್ಚಿ ಶೂಲದ ಮರ ಸಹವಾಗಿ ಕೈಲಾಸಕ್ಕೆ ಕರೆದುಕೊಂಡು ಹೋದನು.

---

## ೧೮೧ ನೆಯ ವಚನದ ಕಥೆ. (೧೦೮--೪)

**ಬಸವ**

ಬಸವೇಶ್ವರನು ಚರಲಿಂಗಕ್ಕೆ ನೊಸಲಕಣ್ಣವ ಕೊಟ್ಟರು.

---

## ೧೮೯ ನೆಯ ವಚನದ ಕಥೆ. (೧೦೮—೪)

ಪೂರ್ವದಲ್ಲಿ ಒಬ್ಬ ಪಾರುವನು ತನ್ನ ಕುಟುಂಬ ಸಹಿತ ಕಾಶಿಗೆ ಹೋಗುತ್ತ ಒಂದು ಅಗ್ರಹಾರದಲ್ಲಿರಲು ಅಲ್ಲಿ ಒಬ್ಬ ಹೆಬ್ಬಾರುವನ ಮನೆ ಯಲ್ಲಿ ಬ್ರಾಹ್ಮಣ ಭೋಜನ ಕಾಲದೊಳು ತನ್ನ ಕರೆಯಲು ಬಂದು ಕುಳ್ಳಿರ್ದು ಉಣ್ಣದಿರಲು ಏನು ಕಾರಣವೆಂದು ಕೇಳಲು ಭೂಪ ಕ್ಷೇತ್ರ ವೃತ್ತಿಗಳನೇನುವನೂ ಬೇಡುವುದಿಲ್ಲವೆನೆ ಮತ್ತೇನು ಬೇಕೆನೆ, ಎಲೆ ಯಜ ಮಾನನೆ ನಿನ್ನ ಮನೆಯ ಗೋಡೆಯಲ್ಲಿ ಸುಣ್ಣದ ಬೆರಳೊಳು ಬರೆದ ನಿತು ಭೂಮಿಯಂ ಕೊಡೆಂದು ಪಡೆದಲ್ಲಿ ದಸಿಯಂ ಬಲಿದು ಅದಕ್ಕೆ ಒಂದು ಸತ್ತ ನಾಯ ತಂದು ಸಿಕ್ಕಿಸಲದರ ನಾತಕ್ಕೆಲ್ಲರು ಮನೆಯ ಬಿಟ್ಟು ಹೋಗಲಲ್ಲಿ ತನ್ನ ಕುಟುಂಬ ಸಹಿತ ಪೊಕ್ಕು ಸುಖಮಿರ್ಪನಾ ಧೂರ್ತ ಬ್ರಾಹ್ಮಣನು.

---

# ೧೯೨ ನೆಯ ವಚನದ ಕಥೆ (೧೦೯-೧೫)

## ಸಿದ್ದಣ್ಣ ಮಂತ್ರಿ

ಕಲ್ಯಾಣದಲ್ಲಿ ಬಲದೇವ ಮಂತ್ರಿಯ ತಮ್ಮ ಸಿದ್ದಣ್ಣ ಮಂತ್ರಿ ಆತನ ಸತಿ ಪದ್ಮಗಂಧಿಯಲ್ಲಿ ನೀಲಮ್ಮ ಹುಟ್ಟಿದಳು. ಆಕೆಗೆ ಸಂಗಮೇಶ್ವರನ ಕಯ್ಯಲ್ಲಿ ದೀಕ್ಷೆಯ ಕೊಡಿಸಿ ಬಸವೇಶ್ವರನು ವಿವಾಹವಾಗಿ ಈರ್ವರು ಜಂಗಮಾರ್ಚನೆಯ ಮಾಡುತ್ತಿರಲು ಒಂದು ದಿನ ಕಳ್ಳನು ಜಂಗಮವೇಷವ ಧರಿಸಿ ಬಸವೇಶ್ವರನ ಮನೆಗೆ ಬಂದು ನೀಲಲೋಚನೆಯ ರತ್ನಖಚಿತದೋಲೆಯಂ ಕಂಡು ತೆಗವುತ್ತಿರಲು ನಿಮ್ಮ ಹಸ್ತನೊಂದಾವೆಂದು ತಮ್ಮ ಹಸ್ತದಲ್ಲಿ ನೀಲಮ್ಮ ಕಿವಿಯೋಲೆಯಂ ತೆಗೆದು ಕೊಟ್ಟಳು.

## ಬಂದಿಕಾರರು.

ಆ ಲಿಂಗದ ಪರಮ ಪುರುಷೋತ್ತಮ ಸುಖಮಿರಲೊಂದು ದಿನ ಶಿವಾಜ್ಞೆಯಿಂದ ಏಳುಮಂದಿ ಬಂದಿಕಾರರು ತದ್ಬಸವನ ಸತಿಗೆ ಹತಿಸಿ ಹಸ್ತ ಪಾದ ನೇತ್ರ ಜಿಹ್ವೆ ಕಲೇವರಂಗಳಲ್ಲಿ ಪಂಚಪರುಷಂಗಳಂ ತೆಗೆದೊಯ್ದಪೆವೆಂದು ಕಪಟಜಂಗಮವಾಗಿ ಶರಣರೊಡನೊಳಪೊಕ್ಕು ಇರಲಾತತ್ಕಪಟ ಜಂಗಮ ಬಸವರಾಜನ ದರ್ಶನದಿ ನಿಜಜಂಗಮವಾಗೆ ಭೋಂಕನೆ ಬಸವನೆರಗಿ ನಿಜಲಿಂಗ ದೇವ ನಿಜಲಿಂಗ ಚಿಕ್ಕಯ್ಯ ನಿಜಲಿಂಗ ಬೊಲ್ಲಯ್ಯ ನಿಜಲಿಂಗ ಚೋಳಯ್ಯ ನಿಜಲಿಂಗ ಕಲ್ಲಯ್ಯ ನಿಜಲಿಂಗ ಚಾಮಯ್ಯ ನಿಜಲಿಂಗ ಶಾಂತಯ್ಯಗಳೆಂದು ಗುಣನಾಮಗಳ ಕೊಟ್ಟು ತತ್ಶರಣರು ಬೇಡಿದಿಷ್ಟಾರ್ಥಮಂ ಕೊಟ್ಟರು.

## ಪರವಾದಿಗಳು.

ಬಸವೇಶ್ವರನ ಶಿವಭಕ್ತಿಪ್ರಭಾವವ ಕಂಡು ಪರವಾದಿ ಸಂಕುಲ ತರಹರಿಸಲಾರದ ತಮ್ಮೊಳು ಕೋಳಟ್ಟು ಬಸವೇಶ್ವರನ ಕೊಲ್ಲಲುದ್ಯೋಗಿಸಿ ಹಾವಡಿಗರಂ ಕರೆದು ಲಂಚವಿತ್ತು ವಿಷಭೂತಸರ್ಪನಂ ಬಿಟ್ಟು ಕೊಲ್ಲೆಂದು ಬೋಧಿಸಿ ಕುಟಿಲವೇಷ ಕೊಟ್ಟು ಕಳುಹಲು ಆ ಕುಟಿಲ ಶರಣರೊಳಪೊಕ್ಕು ವಿಷಭೂತ ಸರ್ಪನಂ ಬಿಡಲು ವಜ್ರಕ್ಕೆ ಗೊರಲೆಕೊಂಬುದೇ, ವಿಷಭೂತಸರ್ಪನ ಸ್ತಂಭನವಾಗೆ, ಆ ಕುಟಿಲನು ತಡಬಡಂಗೊಳ್ಳೆ, ಕೆಲಬಲದ ಮಾಹೇಶ್ವರರು ವೇಷದ ಚೋರರು ಬಂದಿದಾರೆ

ಬಸವಾ ಎಂದು ಹೇಳಿ ಶಿವ ಶಿವಾ, ನಿಮ್ಮ ರೂಪಿಂಗೆ ವೇಷ ಉಂಟೇ ಎಂದು ಬಸವೇಶ್ವರನ ನುಡಿಪರುಷ ಕರ್ಣಲೋಹವ ಸೋಂಕಲೊಡನೆ ಶಿವಜ್ಞಾನ ಉದಯಿಸಿ ಶಿವಜಂಗಮವಾದರು.

## ಮಿಂಡಮಲ್ಲಯ್ಯ.

ಒಂದು ದಿನ ಮಿಂಡಮಲ್ಲಯ್ಯನೆಂಬ ಜಂಗಮದೇವರು ಬಸವಣ್ಣಾ ನಾವು ಬಿಜ್ಜಳನ ಮನೆಯ ನೋಡಬೇಕೆಂದು ಕೇಳಲು ಒಬ್ಬನ ಕೂಡಿಸಿ ಕಳು ಹಲು ಅಂತಃಪುರಕ್ಕೆ ಹೋಗಿ ಜಾಳಂಧರ ದೇಶದ ಜಾಳಂಧರ ರಾಯನ ಮಗಳಾದ ಮೋಹಿತಾಂಬರೆಯ ಸಂಗದಲ್ಲಿ ಮಿಂಡಮಲ್ಲಯ್ಯನಿರಲು ಬಿಜ್ಜಳ ಕಂಡು ಇದೆಂತೆಂದನು, ಸೈಂಧವ ನಿಃಕುಂಭ ಲುಬ್ಧಕ ಧನ್ಯಕಪಾಳಾ ಪತಿ ಹರಿ ಸಂಹರ ಶಂಕ ಕುಕರ ಮಾಳಾವ ಕಳಾ ಚೋರ ಮೋದಕ ಅಕುಂ ತನ ರಾಷ್ಟ್ರಕೂಟ ಬಂದಿಲಾಳ ಸಿಂಧುಕ ಹರಿತ ಹೂಣಕ ಗೋಹಿಲ ಇವನ ಮಗ ವೀರಬಿಜ್ಜಳನ ಮಗ ಹಿಮ್ಮಡಿರಾಯನ ಮಗ ಪೇರ್ಮಡಿ ರಾಯನ ಮಗ ಚಾಳುಕ್ಯರಾಯನ ವಂಶಕ್ಕೆ ಕುಂದ ತಂದನಲ್ಲಾ ಬಸ ವಣ್ಣನು ಎನಲು, ಆಗ ಬಸವಣ್ಣ ಬಿಜ್ಜಳನ ಕೂಡೆಂದನು, ದಶರಥನು ಚಾಂಡಿಲ್ಯನ ಕೊಂದ ಪಾಪದಿಂದ ತಲೆ ಹತ್ತು ಸಾವಿರ ಹಾಳಾಯಿತ್ತು ರಾಮನು ರಾವಣನ ಕೊಂದ ಬ್ರಹ್ಮೇತಿಯಿಂದ ಮೂರು ಕೋಟಿ ಲಿಂಗ ಗಳ ನಿಲ್ಲಿಸಿದ, ಜಂಗಮವ ಕೊಂದ ಪಾಪ ನಿನ್ನ ಬಿಡದೆಂದು ಮಿಂಡ ಮಲ್ಲಯ್ಯನ ಬಿಜ್ಜಳನ ಸತಿಯ ಪ್ರಾಣವ ಸಡೆದು ಬಸವೇಶ್ವರ ಹೋಗಲು ಇತ್ತ ಬಿಜ್ಜಳನು ಶಸ್ತ್ರರಕ್ತವಾದ ಪಾಪಕ್ಕೆ ಮೂವತ್ತಾರು ಸಾವಿರ ಜಂಗ ಮಕ್ಕೆ ಪಟ್ಟೆಯ ಹಚ್ಚಡಗಳನು ನಮಸ್ಕಾರವ ಮಾಡಿದನು. ಬಳಿಕ ಲೋಹಿತಾಂಬರಿಯ ಜಂಗಮದೇವರರು ಮುಟ್ಟಿದರೆಂದು ತಾಯಿ ಎಂದು ಭಾವಿಸಿದನು.

ಬಸವೇಶ್ವರನ ಶಿವಭಕ್ತಿಯುನ್ನತಿಕೆಯ ಮಹತ್ವಂಗಳಂ ಕಂಡು ಬಿಜ್ಜಳ ಕಟಕಿಯಿಂದ ಹೊಗಳೆ ಕುಟಿಲದಿಂ ಮಂಚಣ್ಣನು ಕಪಟದ ಮಹಾತ್ಮೆಗಳನೇನ ಪೊಗಳ್ದಿಪಿರೆಂದು ನಾನೊಂದ ನೆಗಳ್ದಪೆ ನಾಳೆ ಬೇಂಟೆಯ ಪೋಪಲ್ಲಿ ಒಬ್ಬ ಓಲೆಯಕಾರನ ಜಂಗಮವೇಷವ ಮಾಡೆ ಹುಲಿಯ ಹಾಲ ಬೇಡಿಸಿ ತಿಳಿಯಬೇಕೆಂದು ಬಿಜ್ಜಳನಹುದೆಂದು ಬೇಂಟೆಯ ಪೋಗಿ ಪೆರ್ಬುಲಿಯ ಕಂಡು ಆ ಕಪಟ ಜಂಗಮನ ಕಳುಹಲ್ಬಂದು ಬಸವಾ ಜಂಗಮಕ್ಕೆ ಬೇಡಿದಿಷ್ಟಾರ್ಥವ ಕೊಡುತಿರ್ದಪನೆಂದು ಬಂದೆವು

ಈ ಪೆರ್ಬುಲಿಯ ಹಾಲು ನಮ್ಮ ನೇಮಕ್ಕೆ ಬೇಕೆನೆ ಮಹಾ ಪ್ರಸಾದ ವೆಂದು ಹಡಪದಪ್ಪಣ್ಣಗಳ ಕಯ್ಯ ಪೊಂಬಟ್ಟಲಿಂ ತೆಗೆದುಕೊಂಡು ವ್ಯಾಘ್ರಾಸುರ ಧರ್ಮತರ್ಧನನ ಭಕ್ತ ಬಸವಣ್ಣನಾಕ್ಷಣವೆ ಕರೆದಿತ್ತು ಆ ಕಪಟ ಲಾಂಛನನ ನಿಜ ಜಂಗಮವ ಮಾಡಿದರು.

---

## ೧೯೪ ನೆಯ ವಚನದ ಕಥೆ. (೧೧೦—೧೭)

### ರಾಜತಕ್ಕರ

ರಾಜತಕ್ಕರನೆಂಬ ಭಟ್ಟನು ಮಾಳುವ ದೇಶದಿಂದ ಬಿಜ್ಜಳನ ಸಭೆಗೆ ಬರೆ, ನೇತ್ರ ನಾಶಿಕ ಕರ್ಣ ಕರ ಚರಣಂಗಳೇನು ಕಾರಣ ಇಲ್ಲವೆಂದು ಕೇಳೆ ಭಟ್ಟನು ತನ್ನ ಪೂರ್ವ ವೃತ್ತಾಂತವ ಹೇಳುತ್ತಿದ್ದಾನು. ಎಲೆ ಬಿಜ್ಜಳ ನನಗೆ ಮಾಳವರಾಜನು ಸಪ್ತಾಂಗ ರಾಜ್ಯವ ನಿತ್ತು ಪಂಕ್ತಿಯುಲುಣ್ಣೆನೆ ಒಲ್ಲೆನೆನೆ ಸರ್ವರ ನುತಿಪ ಭಟ್ಟನು ನೀನೆಂತಧಿಕನೆನೆ ಶಿವನು ತ್ರಿಪುರವ ಸಂಹರಿಪಲ್ಲಿ ಚಂಡಕೀರ್ತಿಯ ಮಾಡಿ ಹರಿಯಜರ ನುತಿಸೆ ಶಿವನು ಶಪಿಸೆ ಮೇದಿನಿಗೆ ಕಳುಹಿದ ನಾವು ಅಗ್ರಾಂಶರೆನೆ ಅವರಾವ ರಾಜನು ಕತ್ತರಿಸಿದನೆನೆ ಬಿಜ್ಜಳನು ಚಿಂತಿಸಿ ಕೊಂಡೆಯ ಮಂಚಣ್ಣನು ಭಟ್ಟನಿಗೆ ಜಂಗಮವೇಷವ ಧರಿಸಿ ಬಸವೇಶ್ವರಗೆ ತೋರೆ ವಂದಿಸಿ ಹಾಸ್ಯವ ಮಾಡಲು ಅವಯವಗಳ ಕೊಡಲು ಕೀರ್ತಿಸಿದನು.

---

## ೧೯೯ ನೆಯ ವಚನದ ಕಥೆ. (೧೧೦—೨೨]

### ಕೋಡಗದಮಾರಣ್ಣ

ಕೋಡಗದ ಮಾರಣ್ಣನು ಕೋಡಗವ ಕುಣಿಸಿ ಕೇಶಿರಾಜ ದಣ್ಣಾಯಕರು ಲಿಂಗವ ಕುಣಿಸೆನೆ ಕುಣಿಸಿ ಜಂಗಮದಲ್ಲಿ ಗುಣವ ನೋಡದೆ ನಿಷ್ಠೆಯಲ್ಲಿ ಅರ್ಚನೆಯ ಮಾಡಿದರು.

---

## ೨೦೬ ನೆಯ ವಚನದ ಕಥೆ. [೧೧೨—೫]

### ಭೋಗಣ್ಣ

ಕೆಂಭಾವಿ ಎಂಬ ಪುರದಲ್ಲಿ ಭೋಗಣ್ಣಗಳೆಂಬ ಶರಣರಿರ್ಪರು. ಅವರು ಶಿವಭಕ್ತರಲ್ಲಿ ಕುಲವನ್ನರಸರು. ಜಂಗಮ ಘನದಲ್ಲಿ ಗುಣಾವ

R. N. B. 2554.

# ಶಿವಾನುಭವ



ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ.

ವಿಜಾಪುರ



ಸಂಪುಟ ೯ ಸಂಚಿಕೆ ೫

ಜಾನೇವರಿ

೧೯೩೫

ವಾ. ವರ್ಗಣಿ ೪-೪-೦ ]     [ ಬಿಡಿಸಂಚಿಕೆ ೦-೧೨-೦

# ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೯ ] ಜನೆವರಿ ೧೯೩೫ [ ಸಂಚಿಕೆ ೫


## ಬಸವನೂ ಜಗತ್ತಿನ ಮಹದ್ವಿಭೂತಿಗಳೂ


(ವಿ॥ ಎಸ್. ಎಸ್. ಮಾಳವಾಡ ಬಿ. ಎ. ಸರದಾರ್ಸ ಹಾಯಸ್ಕೂಲ್ ಬೆಳಗಾವ)


[ಮೊದಲಮಾತು— ಸುವಿಚಾರದ ಬೆಳಕು, ಸದಾಚಾರದ ಮಾರ್ಗದರ್ಶನ, ಸ್ಫೂರ್ತಿದಾಯಕ ಜೀವನ ಎಂಬ ಬರಹಮಾಲೆಯಿಂದ ಬಸವನ ತತ್ವ ಬೋಧೆಯನ್ನು, ಕಾರ್ಯಸಾಧನೆಯನ್ನು, ಜೀವನಾಂಶವನ್ನು ವಿವೇಚಿಸುವ ಯೋಜನೆಯೊಂದನ್ನು ಮಾಡಿಕೊಂಡಿದ್ದೆ. ಅದಕ್ಕನುಗುಣವಾಗಿ ಶಿವಾನುಭವ ಪತ್ರಿಕೆಯಲ್ಲಿ ಈ ಮೊದಲೇ ಎರಡು ಬರಹಗಳನ್ನು ಪ್ರಸಿದ್ಧಿಸಿದುದಾಯಿತು. ಮೂರನೆಯದಾದ ಬಸವನ ಜೀವನಾಂಶವನ್ನು ವಿವೇಚಿಸುವದು ಸ್ವಲ್ಪ ಕಷ್ಟಸಾಧ್ಯವಾದ ಕೆಲಸ. ಯಾಕೆಂದರೆ ಬಸವನ ಜೀವನ ಚರಿತ್ರೆಯು ಬಹುಗೂಢವಾಗಿದೆ. ಸಾಧನಗಳ ಅಭಾವವಿದೆ. ಇದ್ದ ಸಾಧನಗಳಲ್ಲಿ ವಿರೋಧ ಕಂಡುಬರುತ್ತಿದೆ. ಬಸವನ ಜೀವನಾಂಶಗಳು ಸಂಶಯಾಸ್ಪದವಾಗಿಯೂ, ಚರ್ಚಾತ್ಮಕವಾಗಿಯೂ ಇರುವ ಈ ಪರಿಸ್ಥಿತಿಯಲ್ಲಿ ಏನಾದರೂ ನಿಷ್ಕರ್ಷವಾಗಿ ಹೇಳಹೋಗುವದು ಅನುಚಿತವಾದ ಸಾಹಸವಾಗಬಹುದೆಂದೆಣಿಸಿ ಮೂರನೆಯ ಬರಹ ಬರೆಯುವದನ್ನು ಸದ್ಯಕ್ಕೆ ಬಿಡಬೇಕಾಯಿತು. ಆದರೆ ಬಸವನ ಜೀವನಾಂಶಗಳನ್ನೇ ವಿವರಿಸುವ ಉದ್ದೇಶದಿಂದ ಜಗತ್ತಿನ ಇನ್ನಿತರ ಮಹದ್ವಿಭೂತಿಗಳ ಜೀವನಾಂಶಗಳನ್ನು ಸ್ಥೂಲವಾಗಿ ತುಲನೆ ಮಾಡಿ ಈ ಬರೆಹವನ್ನು ಬರೆದುದಾಗಿದೆ. ಇಲ್ಲಿ ನಿರ್ದೇಶಿಸಿದ ಬಸವನ ಜೀವನಾಂಶಗಳು ಹಾಗೆಯೇ ಎಂದು ನಾನು ನಿಷ್ಕರ್ಷವಾಗಿ ಹೇಳಲಾರೆ. ಆದರೂ ಸ್ಥೂಲಅಂಶಗಳೆಲ್ಲ ಸರಿಯಾಗಿರುವವು. ಭಿನ್ನಾಭಿಪ್ರಾಯಕ್ಕೆ ಎಡೆ ಇಲ್ಲದೆ ಇಲ್ಲ. ಪೌರಾಣಿಕರ ದೃಷ್ಟಿಯಿಂದಂತೂ ಎಷ್ಟೋ ವ್ಯತ್ಯಾಸಗಳು ಕಂಡು ಬರಬಹುದು. ಬುದ್ಧಿಪ್ರಧಾನ ಹಾಗೂ ಐತಿಹಾಸಿಕ ದೃಷ್ಟಿಯಿಂದ ನೋಡಿದರೆ ಸರಿಯೆಂದು ಅನಿಸಬಹುದು. ಹೇಗಿದ್ದರೂ ನಾನು ಬಸವನ ಜೀವನಾಂಶಗಳ ವಿಷಯದಲ್ಲಿ ಸೂಕ್ಷ್ಮವಾದ ನಿಷ್ಕರ್ಷೆಗೆ ಇಳಿದೇ ಇಲ್ಲ. ಹಾಗೆ ಮಾಡುವ ಅವಶ್ಯಕತೆ ಮಾತ್ರ ಇದೆ. ಆದುದರಿಂದಲೇ

ಇನ್ನು ಮುಂದಿನ ಬರಹಗಳಲ್ಲಿ ಆ ದೃಷ್ಟಿಯಿಂದ ಬಸವನ ಚರಿತ್ರೆಯನ್ನು ನಿರೀಕ್ಷಿಸುವ ಅಪೇಕ್ಷೆಯನ್ನಿಟ್ಟುಕೊಂಡಿದ್ದೇನೆ.

ಈ ಬರೆಹವನ್ನು ಓದುವಾಗ ಹಿಂದಿನ ಎರಡು ಬರಹಗಳನ್ನು ಅವಲೋಕಿಸುವದು ಉಪಯುಕ್ತವೆಂದು ತೋರಬಹುದು.]

ಬಸವನು ಮಹದ್ವಿಭೂತಿಯಾಗಿದ್ದನೆಂದು ಕರ್ನಾಟಕದವರಿಗೆ ಕೂಡ ಹೇಳಿಕೊಡುವ ದುರ್ದೈವದ ಪ್ರಸಂಗ ಬಂದಿದೆ. ಕ್ರೈಸ್ತ, ಮಹಮ್ಮದ, ಬುದ್ಧ, ಝೋರೋಸ್ತರ ಮುಂತಾದವರು ಮಹಾತ್ಮರಾಗಿದ್ದರೆಂಬುದು ನಮಗೆ ಮನವರಿಕೆಯಾಗಿದ್ದರೂ ಬಸವನು ಮಹಾತ್ಮನಾಗಿದ್ದನೆಂಬುದಕ್ಕೆ ಪ್ರಮಾಣಗಳನ್ನು ಬೇಡಹತ್ತಿದ್ದೇವೆ. ಇದು ಒಂದು ವಿಚಿತ್ರ ಗತಿಯೇ ಎಂದು ಹೇಳಬಹುದು. ಇದು ಬಸವನ ದುರ್ದೈವವೋ ಕನ್ನಡಿಗರ ದುರ್ದೈವವೋ ತಿಳಿಯದಾಗಿದೆ. ಏನೇ ಇರಲಿ. ಪರಿಸ್ಥಿತಿಯೇನೋ ಹೀಗಿರುವದು ನಿಜ. ಅದಕ್ಕೆ ಕಾರಣಗಳು ಇಲ್ಲದೇ ಇಲ್ಲ. ಹಿಂದೊಮ್ಮೆ ನಾನು ಹೇಳಿದಂತೆ ಬಸವನ ಧವಳ ಮೂರ್ತಿಯು ಸ್ವಕೀಯರ ಅತಿಶಯೋಕ್ತ ಹೊಗಳಿಕೆಯಿಂದ, ಪರಕೀಯರ ತೆಗಳಿಕೆಯಿಂದ ಮಸಕಾಗಿದೆ. ಆ ಮುಸಕು ಆವರಣ ಹಿಂದಿರುವ ಬಸವನ ಧವಳ ಮೂರ್ತಿಯ ಪರಿಚಯ ಮಾಡಿಕೊಡುವದಕ್ಕೆ ಕೆಲವರು ಪ್ರಯತ್ನ ಮಾಡಿದ್ದಾರೆ. ಇಷ್ಟಲ್ಲದೆ ಇಂದಿನ ಯುಗದಲ್ಲಿ ಬಸವ ಯುಗವನ್ನೇ ಅನುಸರಿಸುವ ಕಾಲವು ಬಂದಿದೆ. ಜೀವನದ ಎಲ್ಲ ರಂಗಗಳಲ್ಲಿಯೂ 'ಬಸವಿಜಮ್' (*Basavisam*) ತಲೆ ಹಾಕಿರುವದರಿಂದ ಬಸವನು ಮಹಾತ್ಮನಾಗಿದ್ದನೆಂಬುದಕ್ಕೆ ಹೆಚ್ಚು ಸಾಕ್ಷಿಯ ಅವಶ್ಯಕತೆ ಇಲ್ಲವೆಂದು ಅನಿಸುತ್ತದೆ. ಜಗತ್ತಿನ ಮಹಾಪುರುಷರ ಹೆಗ್ಗುರುತುಗಳನ್ನು ಬಸವನ ಜೀವನಕ್ಕೆ ಸರಿಹಚ್ಚಿ ನೋಡಿದರೆ ಬಸವನ ಮಹದ್ವಿಭೂತಿತ್ವವು ತಾನೇ ಸಿದ್ಧವಾಗುತ್ತದೆ.

ಜಗತ್ತಿನ ಮಹತ್ಪುರುಷರೆಲ್ಲರೂ ದೇಶವು ಅವ್ಯವಸ್ಥೆಯ ಸ್ಥಿತಿಯಲ್ಲಿದ್ದಾಗಲೇ ಉದಯಿಸಿದರು. ಶ್ರೀಕೃಷ್ಣನ ದೇವತ್ವವನ್ನು ನಂಬುವವರು ನಂಬಲಿ ಬೇಡಾದವರು ಬಿಡಲಿ. ಆದರೆ ಆತನ ಉಕ್ತಿಯನ್ನು ನಾವು ಒಪ್ಪಲೇಬೇಕಾಗಿದೆ. ಯಾಕಂದರೆ ಅದಕ್ಕೆ ಸಾಕಷ್ಟು ಪರಿಣಾಮಗಳಿವೆ. "ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ತದಾ ತದಾ ಸಂಭವಸಿ ಯುಗೇ ಯುಗೇ" ಎಂಬ ಮಾತು ಸತ್ಯವಾಗಿದೆ. ಮತ ಮತಾಂತರಗಳ ಗಲಭೆಯೆದ್ದು ಜನತೆಯು ಅನೀತಿಯ ಮಾರ್ಗವನ್ನು ಹಿಡಿದು ಸಮಾಜದ ಹಡಗು ಭೀಕರವಾದ ಬಿರುಗಾಳಿಯ

ಹೊಡಕಕ್ಕೆ ಅಪ್ಪಳಿಸುತ್ತಿರುವಾಗಲೆ ಜಗತ್ತಿನ ಮಹತ್ಪುರುಷರು ಉದಯಿಸಿದ್ದಾರೆ. ಜನತೆಯನ್ನು ಉದ್ಧರಿಸಿದ್ದಾರೆ. ಬಸವನ ಉದಯವಾದ ಕಾಲವಾದರೂ ಇದಕ್ಕೆ ಸಾಕಷ್ಟು ಪುಷ್ಟಿಯನ್ನು ಕೊಡುತ್ತಿದೆ. ಈ ಜಗತ್ತಿನ ಮಹದ್ವಿಭೂತಿಗಳೆಲ್ಲ 'ಲೋಕ ಕಲ್ಯಾಣಕ್ಕಾಗಿ ತರತರದ ದುಃಖಗಳಿಗೀಡಾಗಿದ್ದಾರೆ. ತಮ್ಮವರೇ ಆದ ಜನರಿಂದ ಅವಮಾನಿಸಲ್ಪಟ್ಟಿದ್ದಾರೆ. ಹಿಂಸಿಸಲ್ಪಟ್ಟಿದ್ದಾರೆ. ಎಷ್ಟೋ ಮಹನೀಯರು ದುರ್ದಮನೀಯವಾದ ಯಾತನೆಗಳನ್ನು ಸಹಿಸಿ ದುರ್ಧರವಾದ ಮರಣಕ್ಕೆ ಗುರಿಯಾಗಿದ್ದಾರೆ. ಯಾವ ಜನಾಂಗವನ್ನು ಅವರು ಉದ್ಧರಿಸಿದರೋ ಆ ಜನಾಂಗವೇ ಅವರಿಗೆ ಚಿತ್ರವಿಚಿತ್ರವಾದ ಹಿಂಸೆಯನ್ನು ಕೊಟ್ಟಿದ್ದು ಕಂಡುಬರುತ್ತಿದೆ. ಬಹುಶಃ ಮಹದ್ವಿಭೂತಿಗಳ ವಿಭೂತಿತ್ವವು ಅವರ ಜೀವನ ಕಾಲದಲ್ಲಿ ಜನಗಳಿಗೆ ಮನವರಿಕೆಯಾಗಿರುವದಿಲ್ಲ. ಅವರು ಧರ್ಮಲಂಡರೆಂದು ಸಮಾಜಲಂಡರೆಂದು ವಿಚಾರ ಷಂಡರೆಂದು ತಿರಸ್ಕರಿಸಲ್ಪಟ್ಟು, ಮರಣವಾದ ಮೇಲೆ ಮಾತ್ರ ವಿಭೂತಿತ್ವವನ್ನು ಪಡೆದಿದ್ದಾರೆ. ಜಗತ್ತಿನ ಇತಿಹಾಸವನ್ನು ಅವಲೋಕಿಸುವದಾದರೆ ಈ ಸರ್ವ ಸಾಮಾನ್ಯ ಸತ್ಯವು ಎಲ್ಲಕಡೆಗೂ ಕಂಡು ಬರುತ್ತಿದೆ. ಈ ದೃಷ್ಟಿಯಿಂದ ಮಹಾತ್ಮಾ ಗಾಂಧಿಯವರು ಹೆಚ್ಚು ಸುದೈವಿಗಳೆಂದೇ ಹೇಳಬೇಕು. ಯಾಕಂದರೆ ಅವರು ತಮ್ಮ ಜೀವನಕಾಲದಲ್ಲಿಯೇ ಅಸದೃಶವಾದ ಗೌರವವನ್ನು ಪಡೆದಿದ್ದಾರೆ. ಮಹಾತ್ಮಾ ಕ್ರೈಸ್ತನು ಗಲ್ಲಿಗೇರಿಸಲ್ಪಟ್ಟನು. ಮುಹಮ್ಮದನು ಕಲ್ಲುಗಳಿಂದ ಹೊಡೆಯಲ್ಪಟ್ಟನು. ಕೃಷ್ಣನಿಗೆ ದುರ್ಧರವಾದ ಅಂತ್ಯವೊದಗಿತು. ಬುದ್ಧನ ಗತಿಯೇನಾಯಿತು ಗೊತ್ತಿಲ್ಲ. ಸಾಕ್ರೆಟಿಸನು ವಿಷಪ್ರಾಶನ ಮಾಡಬೇಕಾಯಿತು. ಫ್ರಾನ್ಸಿನ್ ಸೇಂಟ್ ಜೋನಳು ಯಾವ ಜನಾಂಗವನ್ನು ಮೇಲಕ್ಕೆತ್ತಿದ್ದಳೋ ಅವರಿಂದಲೇ ಕ್ರೂರವಾಗಿ ಹಿಂಸಿಸಲ್ಪಟ್ಟು ಸುಡಲ್ಪಟ್ಟಳು. ಹೀಗೆ ಸಾಧುಗಳು ತಮ್ಮ ಜೀವನಕಾಲದಲ್ಲಿ ಹಿಂಸಿಸಲ್ಪಟ್ಟಿದ್ದು ಕೊನೆಗೆ ದುರ್ಧರವಾದ ಅಂತ್ಯವನ್ನು ಹೊಂದಿದ್ದು ಕಂಡುಬರುತ್ತದೆ. ಜಗತ್ತಿನ ರೀತಿಯು ಹೀಗಿರುವಾಗ ಬಸವನಿಗೆ ತನ್ನ ಕಾಲಕ್ಕೆ ಕೆಲವರಿಂದ ಉಪೇಕ್ಷಿಸಲ್ಪಟ್ಟ ಕೆಲವರು ಹೇಳುತ್ತಿರುವಂತೆ (?) ನದಿಯಲ್ಲಿ ಬಿದ್ದು ಪ್ರಾಣಬಿಡುವ ಪ್ರಸಂಗ ಬಂದಿದ್ದರೆ ನಾವು ಆಶ್ಚರ್ಯ ಪಡುವ ಕಾರಣವಿಲ್ಲ.

ಮಹಾತ್ಮರೆಲ್ಲರೂ ತಮ್ಮ ಪರಿಸ್ಥಿತಿಯ ಸಲುವಾಗಿ ಬೇಜಾರು ಪಟ್ಟುಕೊಂಡು ಅಸ್ತಿತ್ವದಲ್ಲಿದ್ದ ಅಸಹ್ಯತೆಯನ್ನು ಹೊಡೆದೋಡಿಸುವ ಉದ್ದೇಶದಿಂದ ಮನೆಮಾರುಗಳನ್ನು ತೊರೆದು ವಿವಿಧ ತೊಂದರೆಗಳನ್ನು

ಸಹಿಸಿ ಒಂದು ಕ್ರಾಂತಿಯನ್ನೆಬ್ಬಿಸಿದ್ದಾರೆ. ಬಸವನಾದರೂ ಕೂಡ ಕರ್ಮ ಮಾರ್ಗದಲ್ಲಿ ಕೊಳೆಯುತ್ತಿದ್ದ ಹಿಂದು ಧರ್ಮದ ವಿಷಯವಾಗಿ ಅಸಹ್ಯ ಪಟ್ಟುಕೊಂಡು ಒಂದು ಕ್ರಾಂತಿಯನ್ನೆಬ್ಬಿಸಿದನು. ಬುದ್ಧನೂ ಹಾಗೆಯೇ ಇನ್ನುಳಿದ ಮಹಾತ್ಮರ ಚರಿತ್ರಗಳಾದರೂ ಇವೇ ಮಾತನ್ನು ಘಂಟಾ ಘೋಷವಾಗಿ ಹೇಳುತ್ತವೆ. ಅಸ್ತಿತ್ವದಲ್ಲಿದ್ದ ಪರಿಸ್ಥಿತಿಯು ಅಸಹ್ಯವೆಂದು ಹೇಳುವ ಸಾಹಸ ಮಾಡಿದಕ್ಕಾಗಿಯೇ ಜಗತ್ತಿನ ಮಹದ್ವಿಭೂತಿಗಳೆಲ್ಲ ಹಿಂಸಿಸಲ್ಪಟ್ಟಿದ್ದಾರೆ. ಅತ್ಯದ್ಭುತ ಶಕ್ತಿಯುಳ್ಳ ಈ ಮಹಾತ್ಮರು ಸರ್ವ ಸಾಧಾರಣ ಜನರಿಗೆ ಹೊಳೆಯದ ಸಂಗತಿಗಳನ್ನು ತಮ್ಮ ಬಾಲ್ಯದ ಲ್ಲಿಯೇ ಅರಿತುಕೊಂಡು ಮುಂದೆ ತಮ್ಮ ಜೀವನದಲ್ಲಿ ಸರ್ವಸಾಮಾನ್ಯ ಜನರ ದೃಷ್ಟಿಯಿಂದ ಅಲೌಕಿಕವೆಂದು ತೋರಿಬರುವ ಕೃತ್ಯಗಳ(ಪವಾಡ ಗಳ)ನ್ನೆಸಗಿ ಮಾಟಗಾರರೆಂದು ಹೀಯಾಳಿಸಲ್ಪಟ್ಟರು. ಇಲ್ಲಿಯೂ ಬಸ ವನು ಅಪವಾದವಾಗಿಲ್ಲ. ಅವನ ಅನೇಕ ಪವಾಡಗಳೇ ಇದಕ್ಕೆ ಸಾಕ್ಷಿ. ಆತನು ತನ್ನ ಚಿಕ್ಕವಯಸ್ಸಿನಲ್ಲಿ ಅದ್ಭುತ ಬುದ್ಧಿ ಶಕ್ತಿಯನ್ನು ತೋರಿ ಸಿದ್ದೇ ಇದಕ್ಕೆ ಸಾಕ್ಷಿ. ಶಂಕರಾಚಾರ್ಯನು ತನ್ನ ವಯಸ್ಸಿನ ೧೦ ವರ್ಷದಲ್ಲಿಯೇ ಸಕಲ ಶಾಸ್ತ್ರಗಳನ್ನರಿತು ಸಪ್ರಮಾಣ ಭೂತವಾದ ಚರ್ಚೆಗಳನ್ನು ನಡೆಯಿಸಬಲ್ಲವನಾದನು. ಈ ಮಾತು ಅನೇಕ ಮಹ ತ್ಪುರುಷರಿಗೆ ಅನ್ವಯಿಸಬಹುದು. ಫ್ರಾನ್ಸಿಸ್ ಜೋನಳು ತಾನಿನ್ನೂ ಚಿಕ್ಕ ಹುಡಿಗೆಯಿದ್ದಾಗಲೇ ಫ್ರಾನ್ಸ ದೇಶವನ್ನುದ್ಧಾರ ಮಾಡುವದನ್ನರಿ ತಳು. ಪರ್ಶಿಯಾದ ಝೋರೋಸ್ತರನಾದರೂ ತನ್ನ ಚಿಕ್ಕ ವಯಸ್ಸಿನ ಲ್ಲಿಯೇ ಬೆಳಕನ್ನು ಕಂಡನು. ಮೋಜಿಸ್‌ನ ಜೀವನಕ್ಕೂ ಈ ಮಾತು ಅನ್ವಯಿಸುವದು. ಅಂದ ಮೇಲೆ ತನ್ನ ಎಂಟನೇ ವರುಷಕ್ಕೆ ಬಸವ ನಿಗೆ ದಿವ್ಯ ಜ್ಞಾನದ ಕಿರಣವು ಹೊಳೆದಿದ್ದರೆ ತಪ್ಪಲ್ಲ. ಅದು ಪುರಾ ಣಿಕರ ಕಲ್ಪನೆಯೂ ಅಲ್ಲ. ಭಕ್ತರ ಬುಟಾಟಿಕೆಯೂ ಅಲ್ಲ. ಅನುಯಾ ಯಿಗಳ ಅತ್ಯುಕ್ತಿಯೂ ಅಲ್ಲ. ವಿಚಾರ, ವಿಚಕ್ಷಣೆ ಪ್ರಯೋಗಗಳ ಯುಗವಾದ ಇಂದೂ ಕೂಡ ನಮ್ಮ ಬುದ್ಧಿಗೆ ನಿಲುಕದ, ಕಲ್ಪನೆಗೆ ಹೊಳೆಯದ, ಅನುಭವಕ್ಕೆ ಪರಿಚಯವಿಲ್ಲದ ಅಸಾಮಾನ್ಯ ಬುದ್ಧಿಯು ಅಲ್ಲಲ್ಲಿ ತೋರಿ ಬರುವದಿಲ್ಲವೇ? ಅಂದ ಬಳಿಕ ಬಸವನು ತನ್ನ ಕಿರಿಯ ವಯಸ್ಸಿನಲ್ಲಿ "ಕರ್ಮಲತೆಯಂತಿದ್ದ ಜನ್ನಿವಾರ" ವು ನಿರುಪಯೋ ಗವೆಂಬುದನ್ನು ತಿಳಿದುಕೊಂಡ ಮಾತನ್ನು ನಾವು ಕಲ್ಪನೆಯ ಕುಣಿ ದಾಟವೆಂದು ಹೇಗೆ ತಿಳಿಯಬೇಕು? ಅದಕ್ಕೆ ವಿರುದ್ಧವಾಗಿ ಅಂತಹ

ಅಸಾಮಾನ್ಯ ಘಟನೆಯೇ ಬಸವನ ವಿಭೂತಿತ್ವದ ಕುರುಹೆಂದು ತಿಳಿಯಲೇಬೇಕು. ಅಂಥ ಶ್ರದ್ಧೆಯಿಂದ ಪ್ರೇರಿತರಾಗಿ ವಿಚಾರ ಸ್ವಾತಂತ್ರ್ಯವನ್ನು ಮಾರಿಕೊಂಡು ಹಿಂದಿನವರು ಹೇಳುವದೆಲ್ಲವೂ ಸರಿಯೇ ಎಂಬ ಅಭಿಪ್ರಾಯವು ನನ್ನದು ಅಲ್ಲವೇ ಅಲ್ಲ. ತದ್ವಿರುದ್ಧವಾಗಿ ಬುದ್ಧಿಯ ಉಪಯೋಗ ಮಾಡಿಕೊಂಡು ಕಲ್ಪನೆಯ ಹಾರಾಟವನ್ನು ತಡೆದು ಅತ್ಯುಕ್ತಿಯ ಅಲಂಕಾರವನ್ನು ಬದಿಗೆ ಸರಿಸಿ ಭಾವನಾ ಪ್ರಧಾನ ಮನಸ್ಸಿನ ಆವೇಶವನ್ನು ಬಿಟ್ಟುಕೊಟ್ಟು ಸತ್ಯಾಂಶವನ್ನು ಶೋಧಿಸಬೇಕೆಂಬ ಕುತೂಹಲ ದೃಷ್ಟಿಯಿಂದಲೇ ನಾನು ಬಸವನ ಪರಿಚಯ ಮಾಡಿಕೊಳ್ಳುತ್ತಿರುವೆ. ಈ ದೃಷ್ಟಿಯಿಂದಲೂ ಬಸವನು ಮಹತ್ಪುರುಷನಾಗಿದ್ದನೆಂಬುದು ಹೊಳೆಯುತ್ತಿದೆ.

ವಿಭೂತಿಗಳು ಉದಯವಾಗುವ ಕಾಲದ ಪರಿಸ್ಥಿತಿಯು ಅಸ್ತವ್ಯಸ್ತವಾಗಿರುವದೆಂದು ಹೇಳಿದೆನಷ್ಟೇ. ಈ ಸಂಗತಿಯನ್ನು ನಾವು ಜಗತ್ತಿನ ಪುರುಷರ ಜೀವನಗಳಿಗೆ ಅನ್ವಯಿಸಿ ನೋಡಬಹುದು. ಯಾಕೆಂದರೆ ಮಹದ್ವಿಭೂತಿಗಳ ಉದಯದ ಆವಶ್ಯಕತೆಯು ಇರುವದು ಆಗಲೇ. ಅರಬಸ್ತಾನದ ಜನರು ತಾವು ಕಾಡುಜನರಾಗಿದ್ದುಕೊಂಡು ಪಶುಗಳಂತೆ ವರ್ತಿಸುತ್ತಿರುವಾಗಲೇ ಮಹಾತ್ಮಾ ಮಹಮ್ಮದನು ಜನಿಸಿದನು. ಅಂತಃಕಲಹಗಳಿಂದ ಬೆಂದು ಅರ್ಥವಿಹೀನ ಮೂರ್ತಿ ಪೂಜೆಯ ದಾಸ್ಯದಲ್ಲಿ ಬಿಗಿಯಲ್ಪಟ್ಟು, ಸ್ವಾರ್ಥಾಂಧ ಪಶುಗಳಾಗಿ ತಾವು ಮಾನವರೆಂಬುದನ್ನು ಮರೆತು ಜನಾಂಗಕ್ಕೆ ದಾರಿದೋರುವದಕ್ಕಾಗಿಯೇ ಮಹಮ್ಮದನು ಜನಿಸಿದನು. ಮಕ್ಕಾದ ನೆರೆಯಲ್ಲಿ ಹಾರಾ ಪರ್ವತದಲ್ಲಿ ಧ್ಯಾನಮಗ್ನನಾಗಿ ಉಳಿದ ವಿಭೂತಿಗಳಂತೆ ಆತನೂ ಆಂತರಿಕ ಸ್ಫೂರ್ತಿಯಿಂದ ಜ್ಞಾನಜ್ಯೋತಿಯನ್ನು ಪಡೆದನು. ಕ್ಷುದ್ರ, ಕಾಡುಜನಾಂಗವನ್ನು ಮೇಲಕ್ಕೆತ್ತಿದನು. ಆದರೆ ಅದೇ ಆ ಜನಾಂಗದವರು ಅವನನ್ನು ಚಿತ್ರ ವಿಚಿತ್ರವಾಗಿ ಹಿಂಸಿಸಿದರು. ಅಸ್ತಿತ್ವದಲ್ಲಿಯ ಆಚಾರ್ಯ ವರ್ಗವು ಮಹಾತ್ಮಾ ಮಹಮ್ಮದನನ್ನು ಪರಿಪರಿಯಾಗಿ ಪಿಡಿಸಿತು. ಅದು ಸರಿಯೇ. ಜಗತ್ತಿನ ಯಾವ ಮಹಾತ್ಮನಾದರೂ ಇದಕ್ಕೆ ಅಪವಾದವಾಗಿಲ್ಲ. ಇರಾಣದ ಝೋರೋಸ್ತರನು ಹುಟ್ಟಿದ ಕಾಲದ ಪರಿಸ್ಥಿತಿಯನ್ನು ಅಭ್ಯಾಸಿಸಿದರೆ ನಮಗೆ ಕಂಡುಬರುವದು ಇದೇ. ಅಧರ್ಮವೇ ತಾಂಡವವಾಡುತ್ತಿತ್ತು. ಧಾರ್ಮಿಕರೆಂಬುವ ತಿಳಿಗೇಡಿಗಳ ಅನಿಯಂತ್ರಿತ ಕಾರಭಾರವು ನಡೆದಿದ್ದಿತು. ಆಗಿನ ಅರಸ

ನಾದ ವಿಸ್ಟಪ್ *(Vistop)*ನಾದರೂ ಕೂಡ ಆಚಾರ್ಯ ವರ್ಗದವರ ಗೊಂಬೆಯಾಗಿದ್ದನು. ಯೆಹೂದಿ ಜನರು ಅಧೋಗತಿಗೆ ಇಳಿದಾಗಲೇ ಏಸುಕ್ರಿಸ್ತನು ಜನಿಸಿದ್ದ. ಯೆಹೂದಿ ಜನಾಂಗವು ಪ್ರಗತಿಗೆ ವಿಮುಖವಾಗಿತ್ತು. ಅನೇಕ ಅನಾಚಾರಗಳಿಗೆ ಆಗರವಾಗಿತ್ತು. ತತ್ವವು ಎತ್ತಲೋ ಉಳಿದು ಬಾಹ್ಯ ಆಚಾರಕ್ಕೆ ಮಾತ್ರ ಮನ್ನಣೆಯಿತ್ತು. ಕರ್ತವ್ಯವನ್ನು ಮರೆತು ಯೆಹೂದಿ ಜನಾಂಗವು ನಿಂತ ನೀರಿನಂತೆ ಕೊಳಚೆಯಾಗಿದ್ದಿತು. ಆಗ ಮಹಾತ್ಮ ಕ್ರೈಸ್ತನು ಉದಯಿಸಿದನು. ಯೆಹೂದಿ ಜನಾಂಗವನ್ನುದ್ಧರಿಸಿದನು. ಇಡೀಜಗತ್ತಿಗೇ ಮಾರ್ಗದರ್ಶಕನಾದನು. ನಮ್ಮ ಭರತಖಂಡದಲ್ಲಿ ಕರ್ಮಕಾಂಡವು ತಲೆಯೆತ್ತಿ ಅರ್ಥವಿಹೀನ ವ್ರತನಿಯಮಗಳಿಗೆ ಅನುಚಿತವಾದ ಮಹತ್ವವನ್ನು ಕೊಟ್ಟು ಭಾರತೀಯರು ಧರ್ಮದ ಹೆಸರಿನಿಂದ ಎಂತಹ ಅಧರ್ಮವನ್ನಾದರೂ ಎಸಗಿ ಅಧೋಗತಿಗಿಳಿಯುತ್ತಿರುವಾಗಲೇ ಮಹಾತ್ಮಾಬುದ್ಧನು ಜನಿಸಿದನು. ಹೋಮದ ನೆವದಿಂದ ಹೋತನ್ನು ತಿನ್ನುವ ಅನಾಚಾರವನ್ನು ಕಂಡು ಮರುಗಿದನು. ಈ ಹೇಯವಾದ ಹಿಂಸಾವೃತ್ತಿಯನ್ನು ಕಂಡು ಬುದ್ಧನ ಕರುಣೆಯು ತೆರಳಿತು. ಸೌಹಾರ್ದ್ರ ಭಾವವು ಬೆಳೆಯಿತು. ಹೀನವಾದ ರೀತಿ ನೀತಿಗಳನ್ನು ಕಂಡು ಕೊರಗಿದನು ಬುದ್ಧ. ಮಾನವರ ಪಶುವರ್ತನೆಯನ್ನು ಕಂಡ ಮರುಗಿದನು ಸಿದ್ಧಾರ್ಥ. ಅನೇಕಾನೇಕತತ್ವಗಳು, ಪ್ರತನೇಮಗಳು ಅಸಂಖ್ಯದೇವತೆಗಳು ಅಪರಿಮಿತ (ಹೀನ) ಆಚರಣೆಗಳನ್ನು ನೋಡಿ ಧಿಙ್ಮೂಢನಾಗಿ ಸರಿಯಾದ ದಾರಿಯನ್ನು, ಬೆಳಕನ್ನು ಕಾಣಬೇಕೆಂದು ಹಾತೊರೆದು ಹಂಬಲಿಸಿದನು ಆ ವಿಶ್ವಪ್ರೇಮಿ. ಅದರ ಫಲವೇ ಬೌದ್ಧಮತವು. ಬುದ್ಧನ ಕಾಲದ ಪರಿಸ್ಥಿತಿಗೂ ಬಸವನ ಕಾಲದ ಪರಸ್ಥಿತಿಗೂ, ವಿಶೇಷವಾದ ಸಾಮ್ಯವಿದೆ. ಬುದ್ಧನ ಜೀವನಾಂಶಕ್ಕೂ ಬಸವನ ಜೀವನಾಂಶಕ್ಕೂ ವಿಶೇಷ ಸಾಮ್ಯವಿದೆ. ಯಾಕಂದರೆ ಬಸವನಾದರೂ ಕರ್ಮ ಕಾಂಡದ ಅತಿರೇಕವನ್ನು ಕಂಡು ಮನ ನೊಂದನು. ಅಷ್ಟಲ್ಲದೆ ಆತನ ಕಾಲದಲ್ಲಿಯಾದರೋ ಮತ ಮತಾಂತರ ಗಲಭೆ ಎದ್ದಿತ್ತು. ವ್ಯಕ್ತಿಗಳ ಹಾರಾಟ, ತತ್ತ್ವಗಳ ಏರಾಟ, ಧರ್ಮಗಳ ಹೋರಾಟ ಇವೆಲ್ಲವೂ ಇದ್ದವು. ಯಜ್ಞದ ಹೆಸರಿನಲ್ಲಿ ಹಿಂಸೆ ನಡೆದಿತ್ತು. ದ್ವೈತ, ಅದ್ವೈತ, ಶಕ್ತಿ ವಿಶಿಷ್ಟಾದ್ವೈತಗಳ ಗದ್ದಲದಲ್ಲಿ ಯೋಗ್ಯವಾದ ಧರ್ಮದ ಅರಿವು ಆಗುವಂತಿರಲಿಲ್ಲ. ಹಾಳು ಮೊರಡಿಗಳಲ್ಲಿ, ಊರ ದಾರಿಗಳಲ್ಲಿ, ಗ್ರಾಮದ ಮಧ್ಯದಲ್ಲಿ, ಮಾರಯ್ಯ, ಬೀರಯ್ಯ ಖೇಚರಗಾವಿಲ, ಅಂತರ ಬೆಂತರ, ಕಾಳಯ್ಯ, ಮಾಳಯ್ಯ, ಕೇತಯ್ಯಗಳೆಂಬ

ನೂರು ಮಡಿಕೆಗಳು, ಅನೇಕ ದೇವತೆಗಳು ಇದ್ದರೆ ನಿಜವಾದ ದೇವರ ಕಲ್ಪನೆಯಾಗುವದು ಶಕ್ಯವಿರಲಿಲ್ಲ. ಅನುಚಿತವಾದ ಅಧಿಕಾರವನ್ನು ಪಡೆದು ಅಟ್ಟಹಾಸ ಮಾಡುತ್ತಿರುವ ಆಚಾರ್ಯ ವರ್ಗದ ಪ್ರತಿಷ್ಠೆಯು ಹೆಚ್ಚಾಗಿತ್ತು. ಮಾತಿನಂತೆ ಮನವಿಲ್ಲದ ಜ್ಞಾತಿಡೊಂಬರು ಹೆಚ್ಚಾಗಿದ್ದರು. ಅನ್ಯಾಯವಾದ ಉಚ್ಚ ನೀಚ ಭೇದವು ತಲೆದೋರಿ ಜನಾಂಗದ ಪ್ರಗತಿಯ ಮಾರ್ಗವು ಕಟ್ಟಾಗಿತ್ತು. ನಿರಾಶಾಮಯ ವಾತಾವರಣದ ಕರಾಳ ಕಗ್ಗತ್ತಲೆ. ಆಗಲೇ ಬಸವಭಾಸ್ಕರನು ಉದಯಿಸಿದನು. ಈ ಮೇಲಿನ ವಿವೇಚನೆಯಿಂದ ಕಂಡು ಬರುವದೇನಂದರೆ ಬಸವನಾದರೂ ಉಳಿದ ಮಹಾತ್ಮರಂತೆ ಅಸ್ತವ್ಯಸ್ತ ಪರಿಸ್ಥಿತಿಯಲ್ಲಿ ಜನಿಸಿದನು. ಅಧೋಗತಿಯ ಮಾರ್ಗವನ್ನು ಹಿಡಿದ ಜನಾಂಗದಲ್ಲಿ ತಲೆದೋರಿ ಅದನ್ನು ಉದ್ಧರಿಸಿದನು. "ಅಸಮಾನ್ಯ ಶಕ್ತಿಯು ಹಾಗೂ ಪವಿತ್ರತೆಯು ಮಹಾತ್ಮನು ಜನಾಂಗದ ಉದ್ಧಾರಕ್ಕೆ ಹೆಣಗಾಡುತ್ತಿರುವದಾದರೆ ಆತನು ದೇವಾಂಶನೆಂದು ತಿಳಿ" ಎಂದು ಕೃಷ್ಣನು ಹೇಳಿದ್ದಾನೆ. ಈ ದೃಷ್ಟಿಯಿಂದ ನಾವು ಬಸವನಲ್ಲಿ ದೇವಾಂಶವನ್ನು ಕಲ್ಪಿಸಬಹುದು. ಧರ್ಮದ ಗ್ಲಾನಿಯಾದಾಗ ಉದಯಿಸಿ ಧರ್ಮವನ್ನುದ್ಧರಿಸಿದ ಮಹಾತ್ಮಾ ಬಸವನನ್ನು ದೇವರ ಅವತಾರವೆಂದು ಬಲ್ಲವರು ನಂಬುತ್ತಿದ್ದರೆ ನಾವು ಹಾಸ್ಯಮಾಡಿ ನಗುವ ಕಾರಣವಿಲ್ಲ. ಈ ಸಂದರ್ಭದಲ್ಲಿ ಸ್ವಾಮಿ ವಿವೇಕಾನಂದರ ಉಕ್ತಿಯನ್ನಿಲ್ಲಿ ಉದಹರಿಸಬಹುದು. "*They (Prophets) are all manifestations of the infinite God. They are all pure and unselfish. They struggled and gave up their lives for us poor human beings.*" ಮಹಾತ್ಮರೆಲ್ಲರೂ ಆ ಅನಾದ್ಯನಂತ ದೇವನ ಮೂರ್ತಿಮಂತರೂಪಗಳು. ಅವರೆಲ್ಲರೂ ಪಾವನರೂ ಸ್ವಾರ್ಥತ್ಯಾಗಿಗಳೂ ಆಗಿದ್ದಾರೆ. ಅವರು ನಮಗಾಗಿ, ದೀನರಾದ ಮಾನವರಿಗಾಗಿ ಹೆಣಗಾಡಿದರು. ತಮ್ಮ ಪ್ರಾಣಗಳನ್ನು ಅರ್ಪಿಸಿದರು. *The great prophets were giants.... They bore a gigantic world on thire shoulders.* ಶ್ರೇಷ್ಠ ಮಹಾತ್ಮರೆಲ್ಲರೂ ಅಪರಿಮಿತ ಶಕ್ತಿಯುಳ್ಳವರು. ಅವರು ಬಹುದೊಡ್ಡದಾದ ಜಗತ್ತಿನ ಭಾರವನ್ನು ಹೊತ್ತರು. ಈ ಉಕ್ತಿಗಳಲ್ಲಿ ಕಂಡುಬರುವ ಮಹಾತ್ಮರ ಗುರುತುಗಳನ್ನು ನಾವು ಬಸವನಲ್ಲಿ ತಪ್ಪದೆ ಕಾಣಬಹುದು. ಬಸವನು ಪಾವನನೂ, ಸ್ವಾರ್ಥತ್ಯಾಗಿಯೂ ಆಗಿದ್ದನೆಂದು ಕಂಡುಕೊಳ್ಳುವದಕ್ಕೆ ಆತನ ಜೀವವನ್ನು ನಿರೀಕ್ಷಿಸಬೇಕು. ಆತನ ಅಮೋಘ

ತತ್ವಗಳನ್ನು ಪರಿಶೀಲಿಸಬೇಕು. "ಹರಿವ ಹಾವಿಂಗಂಜೆ, ಉರಿಯನಾಲಿ
ಗೆಗಂಜೆ, ಸುರಿಗೆಯ ಮೊನೆಗಂಜೆ, ಒಂದಕ್ಕಂಜುವೆ, ಒಂದಕ್ಕಳಕುವೆ,
ಪರಸ್ತ್ರೀ ಪರಧನವೆಂಬ ಜೂಜಿಗಂಜುವೆ." "ಎಲ್ಲಿ ನೋಡಿದಡಲ್ಲಿ ಮನವ
ನೆಳಸಿದಡೆ, ಆಣೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ,"- "ಶರಣರ ಮನೆಯ
ಲೆಂಕನ ಡಿಂಗರಿಗ ನಾನು." "ಕೊಲ್ಲೆನಯ್ಯ ಪ್ರಾಣಿಗಳ, ಮೆಲ್ಲೆನಯ್ಯ ಬಾ
ಯಿಚ್ಛೆಗೆ" "ಊರಮುಂದೆ ಹಾಲ ಹಳ್ಳ ಹರಿವುತ್ತಿರಲಿ, ನಾಳೆ ಆವಿನ ಬೆನ್ನಲಿ
ಹರಿಯಲಿ ಅದೇಕಯ್ಯ? ಲಜ್ಜಗೆಡಲೇಕೆ? ನಾಣುಗೆಡಲೇಕೆ? ಬಿಜ್ಜಳನ ಭಂ
ಡಾರ ನನಗೇಕಯ್ಯ?" "ಹೊನ್ನಿನೊಳಗೊಂದೆರೆಯ, ಸೀರೆಯೊಳಗೊಂದೆಳೆಯ,
ಅನ್ನದೊಳಗೊಂದಗುಳ ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ ನಿಮ್ಮಾಣೆ
ನಿಮ್ಮ ಪುರಾತರಾಣೆ" ಎಂದು ಮುಂತಾಗಿ ಹೇಳಿದ ಬಸವನ ಪಾವನ
ತೆಯನ್ನೂ, ಸ್ವಾರ್ಥತ್ಯಾಗವನ್ನೂ ಇನ್ನು ಬೇರೆ ವರ್ಣಿಸಬೇಕೇ?
ಬಸವನು ಹೋರಾಡಿದ್ದು ತನ್ನ ಜೀವವನ್ನು ಅರ್ಪಿಸಿದ್ದು, ತನ್ನದೆಂಬುವ
ಯಾವದಕ್ಕಾಗಿಯೂ ಅಲ್ಲ. ರಾಜ್ಯ, ಲೋಭ, ಧನಲೋಭ, ಪ್ರತಿಷ್ಠಾ
ಪ್ರಿಯತೆ, ಇವುಗಳು ಬಸವನ ಧ್ಯೇಯವಾಗಿತ್ತೆಂದು ಹೇಳುವದು ಅನ್ಯಾ
ಯದ, ಅಜ್ಞಾನದ ಪರಮಾವಧಿ. (ಕೆಲವರು ಕಲುಷಿತ ಗಾಜಿನವರು
ಹಾಗೆ ಹೇಳಿದ್ದುಂಟು. ಆದರೆ ನಿಂದಕರ ನಿಂದೆಯು ಮಹಾತ್ಮರನ್ನು
ಯಾವ ರೀತಿಯಿಂದಲೂ ನೋಂಕಲಾರದು. ತದ್ವಿರುದ್ಧವಾಗಿ ತಿಳಿಗೇಡಿ
ಗಳಿಂದ ಮಹಾತ್ಮರು ನಿಂದಿಸಲ್ಪಡುವದು ಸರ್ವ ಸಾಮಾನ್ಯವಾದ ಸಂಗ
ತಿಯೇ ಸರಿ) ಬಸವನು ಹೆಣಗಿದ್ದು, ಹೋರಾಡಿದ್ದು, ಆತ್ಮಾರ್ಪಣೆ
ಯನ್ನು ಮಾಡಿದ್ದು ಮಾನವರ ಕಲ್ಯಾಣಕ್ಕಾಗಿ. ಜಗತ್ತಿನ ಮಹಾತ್ಮ
ರೆಲ್ಲರೂ ಹೀಗೆಯೇ ಮಾಡಿದ್ದಾರೆ. ಮಹಮ್ಮದ, ಬುದ್ಧ, ಕ್ರೈಸ್ತ,
ಝೊರೋಸ್ತರ ಇವರೆಲ್ಲರೂ ತಮ್ಮ ಜೀವನವನ್ನು ಮಾನವರ ಉದ್ಧಾರ
ಕ್ಕಾಗಿ ಧಾರೆಯೆರೆದರು. ಕಡೆಗೆ ಆತ್ಮಾರ್ಪಣೆಯನ್ನೂ ಮಾಡಿದರು.
ಮಹಾತ್ಮರ ಈ ಸರ್ವ ಸಾಮಾನ್ಯ ಕುರುಹನ್ನು ಬಸವನ ಜೀವನದಲ್ಲಿಯೂ
ಕಂಡುಕೊಳ್ಳಬಹುದು. ಬಸವನಲ್ಲಿ ಅಸಾಮಾನ್ಯ ಶಕ್ತಿಯೂ ಇದ್ದಿತು.
ಅಂತೆಯೇ ಚಿಕ್ಕ ವಯಸಿನಲ್ಲಿ ತಂದೆತಾಯಿಗಳನ್ನು ಪ್ರತಿಭಟಿಸಿ ಮುಂದೆ
ಸರ್ವಾಧಿಕಾರಿ ಬಿಜ್ಜಳನನ್ನು ಬೊಗ್ಗಿಸಿ, ಅಂಧ ಜನಾಂಗವು ಕೊಟ್ಟ
ತೊಂದರೆಯನ್ನು ಸಹಿಸಿ ಅಲೌಕಿಕ ಕಾರ್ಯಗಳನ್ನು ಎಸಗಿದನು. ಅಧೋ
ಗತಿಗಿಳಿದ ಜನಾಂಗವನ್ನು ಮೇಲಕ್ಕೆತ್ತುವದು ಅಸಾಮಾನ್ಯ ಶಕ್ತಿಯು
ಳ್ಳವರಿಗೇ ಸಾಧ್ಯ. ಈ ದೃಷ್ಟಿಯಿಂದ. ಕ್ರೈಸ್ತ, ಬೌದ್ಧ, ಮಹ

ವ್ಹೃದ, ಝೊರೋಸ್ಟರ, ಬಸವ ಇವರು ಅಸಾಮಾನ್ಯ ಶಕ್ತಿವಂತರೆಂದೇ ಹೇಳಬೇಕು.

ಪ್ರಚಲಿತ ಪರಿಸ್ಥಿತಿಯ ವಿಷಯವಾಗಿ ಬೇಸರಗೊಂಡು ಹೊಸ ಬೆಳಕನ್ನು ಕಾಣುವದಕ್ಕಾಗಿಯೇ ಬುದ್ಧನು ಅರಮನೆಯನ್ನು ತೊರೆದು ತಿರುಗಿದನು. ಡಂಭದ ಮರೆಯಲ್ಲಿ ಅಡಗಿದ ವ್ರತನಿಯಮಗಳ ಜೇಡ ಬಲೆಯಲ್ಲಿ ಸಿಲುಕಿದ, ಅಸತ್ಯತೆಯಿಂದ ಅಡಗಿಸಲ್ಪಟ್ಟ ನಿಜವಾದ ಧರ್ಮ ವನ್ನು ಹುಡುಕುವ ಕುತೂಹಲ ಪ್ರವೃತ್ತಿಯು ಮಹಾತ್ಮರಲ್ಲಿ ಕಂಡು ಬರುತ್ತಿದೆ. ಸಿದ್ಧಾರ್ಥನು ಅರಮನೆ ತೊರೆದು ಕಾನನ ಸೇರಿ ತೊಳಲಿ, ಬಳಲಿ, ಬೋಧಿವೃಕ್ಷದ ಬಳಿ ಸೇರಿ ಆ ಜ್ಞಾನವನ್ನು ಆ ಬೆಳಕನ್ನು ಕಂಡನು. "*Goutum was disgusted at the eternal metaphysical discussious of his day and the cumbrous rituals and more especially the caste system.*" ಆ ಕಾಲದ ಅನಂತವಾದ ತಾಂತ್ರಿಕ ತತ್ವಗಳಿಂದ ದೀರ್ಘವಾದ ವ್ರತನಿಯ ಮಗಳಿಂದ ಹೆಚ್ಚಾಗಿಯೆಂದರೆ ಜಾತಿಭೇದದಿಂದ ಗೌತಮನು ತಿರಸ್ಕಾರ ಪಟ್ಟುಕೊಂಡನು.

ಪರ್ಶಿಯಾದ ಝೋರೋಸ್ಟರನಾದರೂ ತನ್ನ ಇಪ್ಪತ್ತನೇ ವಯಸ್ಸಿ ನಲ್ಲಿ ಮನೆ ಮಾರು ತೊರೆದು ಜ್ಞಾನವನ್ನು ಪಡೆಯುವದಕ್ಕಾಗಿ ತಿರುಗಿ ದನು. ಅನೇಕ ವರ್ಷಗಳ ವರೆಗೆ ಧ್ಯಾನದಲ್ಲಿ ಮಗ್ನನಾಗಿದ್ದನು ಕಡೆ ಗೊಮ್ಮೆ ಬೆಳಕನ್ನು ಕಂಡನು. ಈ ಬೆಳಕನ್ನು ಕಾಣುವದಕ್ಕಾಗಿಯೇ ಆತನು ಎಷ್ಟೋ ವರ್ಷಗಳನ್ನು ಗುಡ್ಡದಲ್ಲಿ ಕಳೆದನು. *They (years) were undoubtedly the years of meditation, reflection and religious preparation that correspond to similar periods of divine communings and philosophical introspection in other religious teachers.*

ಎಂದು ಸ್ವಾಮಿ ಪರಮಾನಂದರು ಹೇಳಿದ್ದಾರೆ. ಈ ದೈವಿಕ ಸಂಸರ್ಗವು, ಈ ತಾತ್ವಿಕ ಅಂತರ್ನಿರೀಕ್ಷಣೆಯು ಎಲ್ಲ ಧರ್ಮಗಳ ಸ್ಥಾಪ ಕರಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ ಎಂದು ಅವರು ಹೇಳುತ್ತಾರೆ. ಮೋಜಿಸನ ವಿಷಯವಾಗಿಯೂ ಇದೇ ತರದ ಕತೆಯನ್ನು ಹೇಳುತ್ತಾರೆ. ಆತನೂ ಕೂಡ ಒಂದು ಗುಡ್ಡದ ಮೇಲೆ ಏಕಾಂತದಲ್ಲಿ ಸಮಾಧಿಯ

ಲ್ಲಿದ್ದಾಗ ಜ್ಞಾನಜ್ಯೋತಿಯನ್ನು ಕಂಡನು. ಬುದ್ಧನೂ ಕೂಡ ಬೋಧಿ ವೃಕ್ಷದ ಬಳಿಯಲ್ಲಿ ಬೆಳಕನ್ನು ಕಂಡನು. ಹಿರಿಯಾದ ಸಂತೆಗಳಲ್ಲಿ ಕಂಡುಬರುವ ಕಲ್ಲುಗಳು ಹೇಗೆ ದೇವರಾಗಬಹುದೆಂಬ ಕುತೂಹಲದಿಂದ ಕೂಡಿದ ಮುಹಮ್ಮದನು ಒಂದು ವಿಚಾರಕ್ರಾಂತಿಯನ್ನು ಮಾಡಿದನು. ಈ ಮಹತ್ಪುರುಷರ ಈ ಸರ್ವಸಾಮಾನ್ಯ ಜೀವನ ಕ್ರಮವನ್ನು ನಾವು ಬಸವನಲ್ಲಿಯೂ ಕಾಣಬಹುದು. ಎಂಟನೇ ವರುಷಕ್ಕೆ ಮನೆಯನ್ನು ತೊರೆದ ಮೇಲೆ ಪುನಃ ಪ್ರಾಪ್ತವಯಸ್ಕನಾಗಿ ಬಿಜ್ಜಳನ ಆಸ್ಥಾನಕ್ಕೆ ಬರುವ ವರೆಗೆ ಈ ಜ್ಞಾನಜ್ಯೋತಿಯನ್ನು ಕಾಣುವದಕ್ಕೆ ಪ್ರಯತ್ನ ಪಟ್ಟಿರಬೇಕು. ಅದಕ್ಕೆ ಅವಶ್ಯವಾಗಿರುವ ಏಕಾಂತಸಮಾಧಿಯಲ್ಲಿಯೇ ಆತನು ತೊಡ ಗಿರಬೇಕು. ಬಹುಶಃ ಆಂತರಿಕ ಸ್ಫೂರ್ತಿ *(Intuition)* ಯಿಂದಲೇ. ಆತನು ಜ್ಞಾನವನ್ನು ಪಡೆದಿರಬೇಕು. (ಬಸವನು ಗುರುವಿನ ಮುಖಾಂ ತರ ಜ್ಞಾನೋಪದೇಶವನ್ನು ಪಡೆದನೆಂದು ಪುರಾಣಗಳು ಹೇಳುತ್ತಿವೆ. ಶಿಲಾದ ಮುನಿಯು ಅಥವಾ ಸಂಗಮೇಶ್ವರನೇ ಗುರುವಾಗಿರಬೇಕೆಂದು ಗ್ರಹಿಕೆ. ಹೇಗಿದ್ದರೂ ಸತ್ಯಾಂಶವನ್ನು ಐತಿಹಾಸಿಕ ದೃಷ್ಟಿಯಿಂದ ತಿಳಿ ಯುವದು ಕಠಿಣವಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಬಸವನು ಉಳಿದ ವಿಭೂತಿಗಳಂತೆ ಆಂತರಿಕ ಸ್ಫೂರ್ತಿಯಿಂದ ಜ್ಞಾನಜ್ಯೋತಿಯನ್ನು ಪಡೆ ದನೆಂದು ಹೇಳುವದು ತಪ್ಪಾಗಲಾರದು.)

ಜನರು ಮಹಾತ್ಮರನ್ನು ಹಿಂಸಿಸುತ್ತಾರೆಂದು ಹೇಳಿದೆನಷ್ಟೇ. ಅದೇ ರೀತಿ ಸಾಕ್ರೆಟೀಸನು ಮರಣದಂಡಕ್ಕೆ ಗುರಿಯಾದನು. ಆಗ ಆತನು ಹೇಳಿದ ಉಕ್ತಿಗಳು ಮಹಾತ್ಮರ ಹೆಗ್ಗುರುತುಗಳನ್ನು ಚನ್ನಾಗಿ ಹೇಳಿ ಕೊಡುತ್ತವೆ. "ಲೋಕದಲ್ಲಿ ಇದು (ಮಹಾತ್ಮರನ್ನು ಹಿಂಸಿಸುವದು) ಹೊಸ ಆಚರಣೆಯಲ್ಲ. ಇದಕ್ಕೆ ಮೊದಲು ಎಷ್ಟೋ ಸತ್ಪುರುಷರನ್ನು ಪಾಮರರು ಕೋಪದಿಂದಲೂ, ಅಜ್ಞಾನದಿಂದಲೂ, ಕೊಂದಿರುವರು. ನಾನು ಜನಗಳ ಅಜ್ಞಾನಕ್ಕೆ ಆಹುತಿಯಾಗುವೆನು. ಇನ್ನು ಮುಂದೆಯೂ ಎಷ್ಟೋ ಜನರು ಧರ್ಮಕ್ಕಾಗಿ ಪ್ರಾಣತ್ಯಾಗ ಮಾಡುವರು. ಇದು ದಿಟ" ಸಾಕ್ರೇಟಿಸನ ಈ ಮಾತಿನ ಸತ್ಯತೆಯ ವಿಷಯವಾಗಿ ನಿದರ್ಶನದ ಅವ ಶ್ಯಕತೆಯೇ ಇಲ್ಲ. ಯಾಕಂದರೆ "ಮೌಢ್ಯದಲ್ಲಿಯೂ, ಅಜ್ಞಾನದಲ್ಲಿಯೂ, ಮುಳುಗಿರುವವರನ್ನು ಪರೀಕ್ಷಿಸಿ ಅವರ ಅಜ್ಞಾನವನ್ನು ತೋರಿಸಿಕೊಡು ವದೇ ತಮ್ಮ ಕೆಲಸವೆಂದು ಅವರು ತಿಳಿಯುವರು. ಆದುದರಿಂದ ಅವರು

ಪ್ರಾಣಭಯದಿಂದಾಗಲಿ ಬೇರಾವ ವಿಘ್ನಭಯದಿಂದಾಗಲಿ ಉದ್ದಿಷ್ಟ ಕಾರ್ಯ ದಿಂದ ಹಿಂದೆಗೆಯುವದಿಲ್ಲ. "ಅಜ್ಞಾನವನ್ನು ಪೂರ್ಣ ಜ್ಞಾನವೆಂದು ಎಣಿಸುವದೇ ದೊಡ್ಡ ತಪ್ಪು." ಈ ತಪ್ಪಿನ ಮೂಲಕವಾಗಿಯೇ ಜನ ತೆಯು ಮಹಾತ್ಮರನ್ನು ಹಿಂಸಿಸುವರು. ಆದರೆ ಮಹಾತ್ಮರಾದವರು ಹೇಳುವ ದೇನು? ಮರಣ ಕಂಡು ಭಯಪಡುವದು ಅಜ್ಞಾನವೆಂದೂ, ಜನರು ಪ್ರೀತಿಯನ್ನು ಗಳಿಸುವದಕ್ಕಿಂತ ಈಶ್ವರನ ಆಜ್ಞೆಯನ್ನು ಪಾಲಿಸುವದೇ ಯೋಗ್ಯವೆಂದೂ ತಿಳಿಯುತ್ತಾರೆ. ನಿದ್ದೆಹೋಗುತ್ತಿರುವವರನ್ನು ಎಬ್ಬಿಸಿ ದರೆ ಕೋಪ ಬರುವದು ಸಹಜವಿದ್ದಂತೆ ಅಜ್ಞಾನಿಗಳ ಅಜ್ಞಾನವನ್ನು ತೋರಿಸಿದರೆ ಕೋಪಬರುವದು. ಅದಕ್ಕಾಗಿಯೇ ಮಹಾತ್ಮರು ಹಿಂಸಿಸ ಲ್ಪಡುವರು. ಬಸವನು ತೊಂದರೆಗೀಡಾಗಿದ್ದಾನೆ. ಅಪವಾದಕ್ಕೆ ಗುರಿಯಾ ಗಿದ್ದಾನೆ. ಇದಕ್ಕಾಗಿಯೇ, ಬಿಜ್ಜಳನ ಭಂಡಾರ ಅಪಹಾರದ, ವರ್ಣಸಂಕ ರದ, ಹೀನರನ್ನು ಮನ್ನಿಸಿದ ಅಪವಾದಗಳನ್ನು ಆವನು ಅಂದು ಎದು ರಿಸಬೇಕಾಯಿತು. ಆದರೆ ಅಜ್ಞಾನದ ಪರೆಯನ್ನು ತೆಗೆದು ಇಂದಿಗೆ ೮೦೦ ವರುಷಗಳಾದ ಮೇಲೆಯೇ ಅದೇ ರೀತಿಯ ಅಜ್ಞಾನವನ್ನು ಕೆಲ ವರು ಇಂದು ಪ್ರದರ್ಶಿಸುತ್ತಿದ್ದರೆ ಅದು ಸ್ವಾರ್ಥಮೂಲ ಇಲ್ಲವೆ ದ್ವೇಷ ಮೂಲಕವಾಗಿರಲೇಬೇಕು. ಅಥವಾ ಬಸವನನ್ನು ತಪ್ಪಾಗಿಯೇ ತಿಳಿದು ಕೊಳ್ಳಬೇಕೆಂದು ನಿರ್ಧರಿಸಬೇಕು. ಇಲ್ಲವೆ ಬಸವನನ್ನು ಅರಿಯಲಿಕ್ಕೆ ಉಪಯೋಗಿಸಿದ ದೃಷ್ಟಿಯೇ ತಪ್ಪಾಗಿರಬೇಕು. ಜಗತ್ತಿನ ಮಹದ್ವಿಭೂ ತಿಗಳೊಡನೆ ಬಸವನನ್ನು ಹೋಲಿಸಿ ನೋಡಲಾಗಿ ಬಸವನ ಜೀವನಾಂ ಶವನ್ನಾಗಲಿ, ತತ್ತ್ವಬೋಧೆಯನ್ನಾಗಲಿ, ಕಲುಷಿತವಲ್ಲದ ದೃಷ್ಟಿಯಿಂದ ನೋಡಿದರೆ ಬಸವನ ಘನತೆಯ ಅರಿವು ಆಗುವದು.

ಮಹಾತ್ಮರಲ್ಲಿ ಕಂಡುಬರುವ ಇನ್ನೂ ಒಂದು ವೈಶಿಷ್ಟ್ಯವೆಂದರೆ ಒಂದು ವಿಶೇಷವಾದ ಆತ್ಮಶ್ರದ್ಧೆ. ಅಸ್ತವ್ಯಸ್ತ ಸ್ಥಿತಿಯಲ್ಲಿ ಸುವ್ಯವಸ್ಥೆ ಯನ್ನುಂಟು ಮಾಡಬಲ್ಲೆವೆಂಬ ಆತ್ಮ ಶ್ರದ್ಧೆಯು ಪ್ರಸಿದ್ಧ ವಿಭೂತಿಗಳಲ್ಲಿ ಕಂಡುಬರುತ್ತಿದೆ. ಮಹಮ್ಮದನು ತಾನೇ ದೇವದೂತನೆಂದು, ಪತಿತ ಜನಾಂಗವನ್ನು ಪಾವನ ಮಾಡಬಲ್ಲೆನೆಂದು, ಪದೇ ಪದೇ ಹೇಳುತ್ತಿ ದ್ದನು. ಕ್ರೈಸ್ತನಾದರೂ ಕೂಡ ತಾನು ದೇವನ ಮಗನೆಂದು ಹೇಳಿ ಜನತೆಯನ್ನು ತಾನು ಶ್ರೇಷ್ಠ ಸ್ಥಿತಿಗೆ ಒಯ್ಯಬಲ್ಲೆನೆಂದು ಹೇಳುತ್ತಿದ್ದನು. ಸಾಕ್ರೆಟಿಸನು ಕೂಡ ಗ್ರೀಕರನ್ನು ತಾನು ಮೇಲ್ತರಗತಿಗೆ ಒಯ್ಯಬಲ್ಲೆ ನೆಂದು ಘಂಟಾಘೋಷವಾಗಿ ಹೇಳುತ್ತಿದ್ದನು. ಫ್ರಾನ್ಸಿಸ ಸೆಂಟ

ಜೇನ್ಸಳೂ ಕೂಡ ಫ್ರಾನ್ಸಿನ ಉದ್ಧಾರವನ್ನು ನಾನಲ್ಲದೆ ಅನ್ಯರು ಮಾಡ ಲಾರರೆಂದು ಹೇಳುತ್ತಿದ್ದಳು. ಆದರೆ ಈ ಆತ್ಮ ಶ್ರದ್ಧೆಯು ಆತ್ಮಪ್ರತಿಷ್ಠೆ ಯಾಗಬಹುದೆಂದೇ ಏಸೋ, ಬುದ್ಧ, ಬಸವರು ಹಾಗೆ ಘಂಟಾಘೋಷ ವಾಗಿ ಹೇಳಿಲ್ಲ. ಬಸವನಾದರೋ ವಿನಯ ಭಾಂಡಾರಿ. ಇಡೀ ಜಗ ತ್ತಿನ ಮಹಾಪುರುಷರಲ್ಲಿ ಬಸವನು ಈ ದೃಷ್ಟಿಯಿಂದ ಮಾದರಿ ಪುರು ಷನೆಂದು ಹೇಳಬಹುದು. ಯಾಕಂದರೆ ತಾನು ತೀರ ಕನಿಷ್ಠನೆಂದೂ ತನ್ನ ಭಕ್ತಿಯು ತೀರ ಕಡಿಮೆಯೆಂದೂ ಆತನು ಯಾವಾಗಲೂ ಹೇಳು ತ್ತಿದ್ದನು. ದೇವದೂತನೆಂದೋ, ದೇವರ ಮಗನೆಂದೋ ಹೇಳಿ ಜನರ ಮನವನ್ನು ಒಲಿಸಲಿಲ್ಲ. ದೀನನಾಗಿ, ನಮ್ರನಾಗಿ, ತಾನು ತೊತ್ತಿನ ತೊತ್ತಿನ ಪಡಿದೊತ್ತಿನ ಮಗನೆಂದು ಹೇಳಿರುವನು. ಇದೊಂದು ಬಸ ವನ ವೈಶಿಷ್ಟ್ಯವು. ಯಾಕಂದರೆ "ದೊಡ್ಡತನವೆನಗಿಲ್ಲ" ವೆಂದೇ ಆತನು ಹೇಳಿದ್ದಾನೆ. ನಾನೇನು ಮಾಡುವೆನಯ್ಯ, ಬಡವನಯ್ಯ ಎಂಬುದೇ ಆತನ ಸೊಲ್ಲು. ತಾನೊಬ್ಬ ಶ್ರೇಷ್ಠ ಭಕ್ತನೆಂದೂ, ತಾನು ಜನರಿಗೆ ಮಾರ್ಗದರ್ಶಕನೆಂದೂ ಹೇಳುವ ಹೆಮ್ಮೆಯು ಆತನಲ್ಲಿ ರವೆಯಷ್ಟಾದರೂ ಇದ್ದಿಲ್ಲ. ತದ್ವಿರುದ್ಧವಾಗಿ ತಾನು ಹೀನ ದೀನನೆಂದೂ ತನಗಿಂತ ಕಿರಿ ಯರಾರೂ ಇಲ್ಲವೆಂದೂ ಹೇಳುತ್ತಾನೆ. ಈ ತರದ ಆತ್ಮ ಪ್ರತಿ ಷ್ಠೆಯಿದ್ದಿಲ್ಲವೆಂದರೆ ಬಸವನಲ್ಲಿ ಆತ್ಮ ಶ್ರದ್ಧೆಯಿದ್ದಿಲ್ಲವೆಂದು ಅರ್ಥ ವಲ್ಲ. ಆತ್ಮ ಶ್ರದ್ಧೆಯಿಲ್ಲದವನಾಗಿದ್ದರೆ ಇಂತಹ ದೊಡ್ಡ ಕ್ರಾಂತಿ ಯನ್ನೆಸಗುವದು ಸಾಧ್ಯವಿರಲಿಲ್ಲ. ಪುರಾಣ ಕಟ್ಟಳೆಗಳನ್ನು ಕಿತ್ತೊ ಗೆಯುವ ಬಸವನ ಸಾಹಸವು ಅಗಾಧವಾದುದು. ಆತನ ವಿಚಾರ ಸ್ವಾತಂತ್ರ್ಯವು ಅನುಪಮವಾದುದು. ಬಸವನ ಆತ್ಮಶ್ರದ್ಧೆಯು ಯಾವ ಶ್ರೇಷ್ಠ ಪುರುಷನಗಿಂತಲೂ ಕಡಿಮೆಯಾಗಿರಲಿಲ್ಲ. ತಾನು ಉಚಿತದಾರಿ ಯಲ್ಲಿಯೇ ನಡೆದಿರುವದರಿಂದ ತನಗಾವ ಭಯವು ಇಲ್ಲವೆಂದು ಹೇಳು ತ್ತಾನೆ. "ಆರು ಮುನಿದು ನಮ್ಮನ್ನೇನು ಮಾಡುವರಯ್ಯ? ಊರ ಮುನಿದು ಎಮ್ಮನೆಂತು ಮಾಡುವರು? ಆನೆಯ ಮೇಲೆ ಹೋಹನ ಶ್ವಾನ ಮುಟ್ಟಬ ಹುದೇ ಎಂದು ನಿರ್ಭೀತನಾಗಿ ಹೇಳುವ ಎದೆಗಾರಿಕೆ ಆತನಲ್ಲಿದೆ. ಈ ಆತ್ಮ ಶ್ರದ್ಧೆಯ ಫಲವಾಗಿಯೇ ಆತನು "ವೇದಕ್ಕೊರೆಯ ಕಟ್ಟುವೆ. ಶಾಸ್ತ್ರಕ್ಕೆ ನಿಗಳವನಿಕ್ಕುವೆ. ಆಗಮದ ಮೂಗ ಕೊಯ್ಯುವೆ." ಎಂದು ಹೇಳಬ ಲ್ಲನು. ಆತ್ಮಶ್ರದ್ಧೆಯ ಬಲದಿಂದಲೇ ರಾಜ್ಯಾಧಿಪತಿ ಬಿಜ್ಜಳನನ್ನು ನಿರ್ಭೀ ತನಾಗಿ ಎದುರಿಸಿದನು. ತನ್ನಲ್ಲಿ ಯೋಗ್ಯತೆ ಇಲ್ಲವೆಂದು ತಾನು ಶ್ರೇಷ್ಠ

ನಲ್ಲವೆಂದು ತಾನು ಏನನ್ನೂ ಮಾಡಲಾರನೆಂದು ಬಸವನು ಪುನಃ ಪುನಃ ಹೇಳುತ್ತಿದ್ದರೆ, ಅದು ಆತನ ಸದುವಿನಯದ ನಮ್ರಭಾವದ ದ್ಯೋತಕ. ಬಸವನ ಘನತೆಯನ್ನು ಆತನ ವಿನಯವು ಇನ್ನೂ ಹೆಚ್ಚಿಸುತ್ತಿದೆ. ಬಂಗಾರಕ್ಕೆ ಕುಂದಣ ವಿಟ್ಟಂತೆ ಬಸವನ ಮೂರ್ತಿ ಸ್ವರೂಪವು ಇನ್ನೂ ಹೆಚ್ಚಾಗಿ ಆಕರ್ಷಕವಾಗುತ್ತದೆ. ಪೂಜ್ಯವಾಗುತ್ತದೆ. ಮಹಾತ್ಮ ಕ್ರೈಸ್ತನ ವಿಷಯವಾಗಿ "*But mark this giant. Centuries and ages pass. Yet the energy that he left upon the world is not yet stretched out; not expended to its full. It goes on gaining new Vigour as the ages roll on.*" ಎಂದು ಸ್ವಾಮಿ ವಿವೇಕಾನಂದರೇ ಹೇಳಿದ್ದಾರೆ. (ಈ ಅಪರಿಮಿತಬಲದ ವ್ಯಕ್ತಿಯನ್ನು ನೋಡಿರಿ· ಶತಮಾನಗಳೂ. ಯುಗಗಳೂ ಕಳೆದಿವೆ. ಆದರೂ ಆತನು ಈ ಜನತ್ತಿನಲ್ಲಿ ಬಿಟ್ಟ ಶಕ್ತಿಯು ಕುಂದಿಲ್ಲ. ಪೂರ್ಣ ಉಪಯೋಗಿಸಲ್ಪಟ್ಟಿಲ್ಲ. ಯುಗಯುಗಗಳು ಕಳೆದಂತೆ ಆ ಶಕ್ತಿಯು ಹೊಸದಾದ ಚೇತನೆಯನ್ನು ಪಡೆಯುತ್ತಿದೆ.) ಇದೇ ಮಾತನ್ನು ನಾವು ಬಸವನ ವಿಷಯವಾಗಿ ಹೇಳಬಹುದು. ವಿವೇಕಾನಂದರು ಇಂತಹ ಮಹತ್ಪುರುಷರು ಕಾಲಚಕ್ರದ ಬೀದಿಯಲ್ಲಿಯ ಮಾರ್ಗದರ್ಶಕ ಕಂಬಗಳೆಂದು ಯಥಾರ್ಥವಾಗಿ ಹೇಳಿದ್ದಾರೆ. ಬಸವನ ಆ ಮಾರ್ಗದರ್ಶನದ ನೆರವಿನಿಂದಲೇ ನಾವಿಂದು ಮುಂದುವರಿಯಬೇಕಾಗಿದೆ.

ಮಹತ್ಪುರುಷರ ಜೀವನದ ಸ್ಥೂಲಾಂಶಗಳನ್ನು ಬಸವನ ಜೀವನಾಂಶದೊಡನೆ ಹೋಲಿಸಿ ನೋಡಿದರೆ ವಿಶೇಷ ಹೋಲಿಕೆ ಕಂಡುಬರುವದು. ಬಸವನಾದರೂ ಮಹತ್ಪುರುಷನೇ ಅಹುದು ಎಂಬ ನಂಬಿಗೆ ಧೃಡವಾಗುವದು. ಆದರೆ ಇಷ್ಟರಿಂದಲೇ ಯಾವದೊಂದು ವ್ಯಕ್ತಿಯ ವಿಭೂತಿತ್ವವನ್ನು ಸಿದ್ಧಪಡಿಸಲಾಗದು. ಚಿಕ್ಕಂದಿನಲ್ಲಿ ಮನೆ ಬಿಟ್ಟು ಓಡಿ ಹೋಗಿ ಪರಕೀಯರಿಂದ ನಿಂದಿಸಲ್ಪಟ್ಟು ಅನೇಕ ದಿವಸಗಳನ್ನು ಏಕಾಂತದಲ್ಲಿ ಕಳೆದು ಕಡೆಗೆ ಕಷ್ಟದಾಯಕವಾದ ಮರಣವನ್ನು ಪಡೆದವರೆಲ್ಲ ವಿಭೂತಿಗಳೆಂದು ಹೇಳಹೋಗುವದು ಹಾಸ್ಯಾಸ್ಪದವಾಗುವದು. ಆದರೆ ನಿಜವಾದ ತಿರುಳು ಇರುವದು ವಿಭೂತಿಗಳು ಕಂಡ ಹೊಸ ಬೆಳಕಿನಲ್ಲಿ ಅವರ ಅಮೋಘ ತತ್ವಬೋಧೆಯಲ್ಲಿ ಅವರ ವಿಚಾರ ಕ್ರಾಂತಿಯಲ್ಲಿ ಅವರ ಅಲೌಕಿಕ ಕಾರ್ಯಸಾಧನೆಯಲ್ಲಿ. ಈ ಎಲ್ಲ ಅಂಶಗಳಲ್ಲಿಯೂ

ಬಸವನನ್ನು ನಿರೀಕ್ಷಿಸಬಹುದು. ಎಲ್ಲದರಲ್ಲಿಯೂ ಬಸವನ ಮಹಾತ್ಮೆಯು ತೋರಿಬರುವದು. (ಈ ಮೊದಲೇ ಬರೆದ ಎರಡು ಬರೆಹಗಳಲ್ಲಿ ನಾನು ಆ ದೃಷ್ಟಿಯಿಂದ ಬಸವನ ಪರಿಚಯ ಮಾಡಿಕೊಡುವ ಪ್ರಯತ್ನ ಮಾಡಿದ್ದೇನೆ. ಈ ಸಂದರ್ಭಗಳಲ್ಲಿ ಓದುಗರು ಅವುಗಳನ್ನು ಅವಲೋಕಿಸುವದಾಗಬೇಕು.) ತುಲನಾತ್ಮಕ ದೃಷ್ಟಿಯಿಂದ ಬಸವನ ಜೀವನಾಂಶವನ್ನು ನಾವು ಕಂಡುಕೊಂಡ ಮೇಲೆ ತುಲನಾತ್ಮಕ ದೃಷ್ಟಿಯಿಂದ ಆತನ ಬೋಧೆ (*Teaching*) ಯನ್ನು ಅರಿತುಕೊಳ್ಳುವದು ಅವಶ್ಯವಾಗಿದೆ.

ಕೆಲವು ಮತಸ್ಥಾಪಕರಂತೆ ಬಸವನು ತಲೆತುರಿಸಿಕೊಳ್ಳುವ ಗೂಢ ತತ್ವಗಳನ್ನು ಬೋಧಿಸಲಿಲ್ಲ. ಆದರೆ ಬಸವನ ಬೋಧೆಯು ಸುಲಭಸಾಧ್ಯವಾದುದೂ ತರ್ಕಶುದ್ಧವಾದುದೂ ಇದೆ. ಆತನ ಬೋಧೆಯನ್ನು ಒಂದೇ ಮಾತಿನಲ್ಲಿ ಹೇಳಬೇಕಾದರೆ ಆದಕ್ಕೆ ಭಕ್ತಿ (*Bhakti School*) ಎಂದು ಹೇಳಬಹುದು. ಬೇರೆ ಬೇರೆ ಧರ್ಮದವರು ಒಂದೊಂದು ಸಾಧನಕ್ಕೆ ಮಹತ್ವಕೊಟ್ಟಿದ್ದಾರೆ. ಆದರೆ ಬಸವನು ಮಾತ್ರ ಆತ್ಮೋನ್ನತಿಯ ಸಾಧನೆಗಳಲ್ಲಿ ಭಕ್ತಿಗೆ ಪ್ರಾಧಾನ್ಯ ಕೊಟ್ಟಿದ್ದಾನೆ. ಆತನು ಸಮತೆಯನ್ನು ಬೋಧಿಸಿದನು, ಸಾಧಿಸಿದನು. ಲಿಂಗಧಾರಿಗಳಲ್ಲಿ ಉಚ್ಚನೀಚ ಭೇದವಿಲ್ಲದೆ ಎಲ್ಲರೂ ಸರಿಯೆಂದು ತಿಳಿದನು. ಲಿಂಗವಂತರ ಧರ್ಮದ ಗುರುತು ಲಿಂಗ. ಆ ಲಿಂಗವು ಸಮತೆಯ ಚಿನ್ಹವೆಂದು ಹೇಳಬಹುದು. ಕಿರಿಸ್ತಾನರ ಕ್ರಾಸು (*Cross*) ದುಃಖಸಹನದ ಗುರುತು. ಮುಸಲ್ಮಾನರ ಅರ್ಧಚಂದ್ರಾಕೃತಿಯು ಶಾಂತತೆಯ ಗುರುತು. ಪಾರ್ಶಿ ಜನರಿಗೆ ಅಗ್ನಿಯು ಪಾವನತೆಯ ಗುರುತು. ಹೀಗೆ ಪ್ರತಿಯೊಂದು ಧರ್ಮದವರ ಗುರುತಿಗೆ ಒಂದು ವಿಶೇಷವಿರುವದಾದರೆ ಲಿಂಗವಂತರ ಲಿಂಗವು ಸಮತೆಯ ಗುರುತೆಂದು ಹೇಳಬಹುದು.

ಆಚಾರಿಗಳ ಕೃತ್ರಿಮತೆಯನ್ನು ಕಂಡು ಬೇಜಾರುಪಟ್ಟುಕೊಂಡೇ ಬಸವನು ಹೊಸ ದಾರಿಯನ್ನು ತೋರಿದನು. ಮಹಾತ್ಮರ ವಾಣಿಯಲ್ಲಿ ಒಂದು ಬೆಡಗಿದೆ, ಒಂದು ನಯವಿದೆ. ಆದುದರಿಂದಲೇ ಧರ್ಮಗ್ರಂಥಗಳಲ್ಲಿಯ ಭಾಷೆಯು ಶ್ರೇಷ್ಠತರದ್ದೆಂದು ತಿಳಿಯಲ್ಪಡುತ್ತದೆ. ಬಾಯಬಲ್, ಕುರಾನ, ಬಸವೇಶ್ವರನ ವಚನ ಇವುಗಳಲ್ಲಿ ಸರ್ವಸಾಮಾನ್ಯವಾದ ಒಂದು ವಿಧದ ಸೊಬಗಿದೆ. ನಿಜವಾಗಿ ನೋಡಿದರೆ ಇಂಗ್ಲೀಷ ಭಾಷೆಯ ಸುಧಾರಣೆಗೆ ಬಾಯಬಲ್ಲಿನ ಭಾಷೆಯು ತಳಹದಿಯೆಂದು ಪಂಡಿ

ತರು ಒಪ್ಪುತ್ತಾರೆ. ಬಸವನ ವಚನಗಳಿಂದಲೇ ಕನ್ನಡ ಸಾಹಿತ್ಯದಲ್ಲಿ ಒಂದು ಪ್ರೇಕ್ಷಣೀಯವಾದ ಕ್ರಾಂತಿಯುಂಟಾಗಿತು. ಮಹಮ್ಮದನ ಉಕ್ತಿಗಳಾದರೂ ಹಾಗೆಯೇ. *His words were so impressive, so chaste and well chosen.* ಆತನ ವಚನಗಳು ಪರಿಣಾಮ ಕಾರಕವಾಗಿಯೂ ಶುದ್ಧವಾಗಿಯೂ ಉಚಿತವಾಗಿಯೂ ಆರಿಸಲ್ಪಟ್ಟವು. ಆಗಿದ್ದವೆಂದು ಮಹಮ್ಮದನ ವಾಣಿಯ ವಿಷಯವಾಗಿ ಹೇಳಿದ ಮಾತುಗಳು ಅಕ್ಷರಶಃ ಬಸವನ ವಚನಗಳಿಗೆ ಅನ್ವಯಿಸುತ್ತವೆ. ಬಸವನ ತತ್ವಬೋಧೆಯ ತಿರುಳನ್ನು ಇನ್ನುಳಿದ ಮಹದ್ವಿಭೂತಿಗಳ ತತ್ವಬೋಧೆಗೆ ತುಲನೆಮಾಡಿ ನೋಡುವಾ.

ಪರ್ಶಿಯದ ಝೋರೋಸ್ತ್ರನು ತನ್ನ ತತ್ವಬೋಧೆಯನ್ನು ತೀರ ಸಂಕ್ಷಿಪ್ತವಾಗಿ ಮೂರೇ ಮಾತುಗಳಲ್ಲಿ ಮುಗಿಸಿದ್ದಾನೆ. (೧) ಸದ್ವಿಚಾರ. (೨) ಸತ್ಕೃತ್ಯ. (೩) ಸದ್ವಚನ. ಬಸವನಾದರೂ ಬಾಹ್ಯ ನಾಟಕವನ್ನೆಲ್ಲ ಖಂಡಿಸಿ ತನ್ನ ಬೋಧೆಯನ್ನೆಲ್ಲ ಸ್ವಲ್ಪೇ ಮಾತುಗಳಲ್ಲಿ ಸಂಗ್ರಹಿಸಿದ್ದಾನೆ. ಆತ್ಮದ ಅಂತರಂಗದ ಶುದ್ಧಿಯನ್ನೇ ಪುನಃ ಪುನಃ ಬೋಧಿಸಿದ್ದಾನೆ. ತಾಂಡವವಾಡುತ್ತಿದ್ದ ಅನಾಚಾರವನ್ನು ಖಂಡಿಸಿ ಸದ್ವಿಚಾರಕ್ಕೆ ಸತ್ಕೃತ್ಯಕ್ಕೆ ಮಾನ ಕೊಟ್ಟಿದ್ದಾನೆ. ಬಂಡಿ ತುಂಬ ಪತ್ರಿಯ ತಂದು ಕಂಡ ಕಂಡಲ್ಲಿ ಮಜ್ಜನಕ್ಕೆರೆವ ತನ್ನವರನ್ನೂ, ಹೋಮದ ನೆವದಿಂದ ಹೋತನ್ನು ತಿನ್ನುವ ಅನಾಮಿಕರನ್ನೂ ಅಲ್ಲಗಳೆದು ಸದ್ಬೋಧೆಯನ್ನು ಜನರಿಗೆ ಕೊಟ್ಟನು. ಗೀತವ ಹಾಡಿ, ಶಾಸ್ತ್ರ ಪುರಾಣಗಳ ಕೇಳಿ, ವೇದ ವೇದಾಂತವನ್ನು ನೋಡಿದವರು ಮನವಿಲ್ಲದೆ ಮಾಡಿದ್ದಕ್ಕೆ ಕೆಟ್ಟರು ಎಂದು ಹೇಳುತ್ತಾನೆ. ಆತನ ಶುದ್ಧಾಂತಃಕರಣಕ್ಕೆ ಆತನ ಶುದ್ಧವಾದ ನುಡಿಗಳೇ ಸಾಕ್ಷಿ. ಆತ್ಮದ ಅಂತರಂಗದ ಶುದ್ಧಿಯನ್ನೆ ಬೋಧಿಸಿ, ಸಾಧಿಸಿ ತೋರಿಸಿದನು. ಮೂಢ ನಂಬಿಗೆಯನ್ನು ಹೊಡೆದೋಡಿಸಿ ಧರ್ಮದ ವಿಷಯವಾಗಿ ಸದ್ವಿಚಾರವನ್ನು ಪ್ರಚಾರಗೊಳಿಸಿದನು. ಸತ್ಕೃತ್ಯವನ್ನು ಮಾಡಿ, ಮಾಡಹೇಳಿ ವಿಚಾರಕ್ಕೂ, ಆಚಾರಕ್ಕೂ ತಳಕು ಹಾಕಿದನು. ಸದ್ವಚನಗಳಂತೂ ಬಸವನ ವೈಶಿಷ್ಟ್ಯ. ಆತನು ಸದ್ವಚನಗಳ ಮೂರ್ತಿಯೇ ಎಂದು ಹೇಳಬಹುದು. ಆತನು ಜನರನ್ನು ಸಂಬೋಧಿಸುವ ರೀತಿಯಲ್ಲಿಯೂ ಎಂತಹ ಮಾರ್ದವವಿದೆ! "ಅಯ್ಯಾ, ಅಣ್ಣಾ" ಎಂದೇ ಆತನು ಹೇಳುತ್ತಾನೆ. ಓದಿದರೇನು, ಕೇಳಿದರೇನು, ಶಿವಪಥ (*Good deed*) ವನ್ನರಿಯದಕ್ಕರ

ಶಿವಜ್ಞಾನ, (*Good thought*) ವನ್ನರಿಯುದಕ್ಕರ ಎಂದು ಆತನು ಕೇಳು ತ್ತಾನೆ. ಶಿವಾಚಾರವೇ ಶಿವಲೋಕ. ಗೀತವ ಬಲ್ಲಾತ ಮಾತ ಬಲ್ಲಾತ ಜಾಣನಲ್ಲ. ಸತ್ಕೃತ್ಯಗಳನ್ನೆಸಗುವವ, ಸದ್ವಿಚಾರ ಮಾಡುವವ ಮಾತ್ರ ಜಾಣ. ಪೂಜ್ಯ ಎಂಬ ಮಾತು ಅವನ ವಚನಗಳ ತಿರುಳೇ ಆಗಿದೆ, ಎಂದು ಹೇಳಬಹುದು. ತನು, ಮನ ಧನಗಳೆಲ್ಲವನ್ನು ಭಕ್ತಿ ಗಾಗಿ ಮೀಸಲಿಟ್ಟ ಆತನು ಸತ್ಕೃತ್ಯ ಸದ್ವಿಚಾರಗಳನ್ನೇ ಸಮರ್ಥಿಸಿ ಸದ್ವಿನಿಯೋಗವನ್ನು ಹೇಳಿದ್ದಾನೆ. ಸದುವಿನಯವು ಸದಾಶಿವನ ಒಲು ಮೆಯೆಂದು ಹೇಳಿದ ಬಸವನು ಸದ್ವಚನಗಳನ್ನೇ ಬೋಧಿಸಿದ್ದಾನೆ. ದಯವೇ ಧರ್ಮದ ಮೂಲ, ಆತನಿಗೆ ರಾಗದ್ವೇಷಗಳಿಗೆ ಎಡೆಗೊಡದೆ ಹೇಯವಾದ ಇಂದ್ರಿಯ ಸುಖದಲ್ಲಿಯೇ ಕೊಳೆಯುದೆ ಬೆಳೆಯಬೇಕೆಂ ಬುದೇ ಬಸವನ ಬೋಧೆಯ ಮಥಿತಾರ್ಥ.

ಝೊರೋಸ್ತರನೂ ಇನ್ನಿತರ ಮಹದ್ವಿಭೂತಿಗಳೂ ಅಂತರಂಗ ಶುದ್ಧಿಯನ್ನೇ ಬೋಧಿಸಿದ್ದಾರೆ. ಬುದ್ಧನೂ ಅದನ್ನೇ ಹೇಳಿದ್ದಾನೆ. ಕ್ರೈಸ್ತ ನಾದರೂ "*Cleanse the spirit*" ಎಂದು ಬೋಧಿಸಿದ್ದಾನೆ. ಆತ್ಮ ಶುದ್ಧಿಯು ಬಾಯಬಲ್ಲಿನಲ್ಲಿ ದೇವರ ಉಸಿರೆಂದು ಹೇಳಲ್ಪಟ್ಟಿದೆ. ಕುರಾ ನಿನಲ್ಲಿ ಅದು ದೇವರ ಆತ್ಮವೆಂದು ಹೇಳಿದೆ. ಬರೀ ಉಪದೇಶ ಮಾಡುವ ಬಂಟರು ಎಲ್ಲೆಲ್ಲಿಯೂ ಸಿಗುವರು. ಅವರಿಗಾಗಿ ಬಸವನು ಹೇಳುವ ದೇನು? "ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ" ಹೃದಯ ಶುದ್ಧಿ ಇಲ್ಲದೆ ಇನ್ನುಳಿದ ವ್ರತ ನಿಯಮಗಳು ಕೇವಲ ನಾಟಕವೆಂಬ ದನ್ನು ಆತನು ಪುನಃ ಪುನಃ ಸಾರಿದ್ದಾನೆ. ಮನದಲ್ಲಿ ಲೇಸಿಲ್ಲದನ್ನಕ್ಕರ ಎಲ್ಲವೂ ನಿರರ್ಥಕ. ಅಂತರಂಗದ ಆತ್ಮಶುದ್ಧಿ ಇಲ್ಲದವರನ್ನು ಕೂಡಲ ಸಂಗಮ ನಂಬುವದೇ ಇಲ್ಲ. ಹುತ್ತು ಬಡಿದರೆ ಹಾವು ಸಾಯದು. ಹಾಗೆಯೇ ಬಾಹ್ಯ ನಿಯಮಗಳಿಂದ ಆತ್ಮದ ಕಲ್ಮಷ ದೂರಾಗದು. "ಅಂತರಂಗದ ಆತ್ಮಶುದ್ಧವಿಲ್ಲದವರ ಸಂಗವು ಸಿಂಗಿಕಾಳಕೂಟ ವಿಷವು." ಸಾಕ್ರೆಟಿಸನು ಹೇಳಿದ್ದಾದರೂ ಇಷ್ಟೇ. "ಮೊದಲು ಆತ್ಮದ ಕಡೆ ಲಕ್ಷವಿಡಿ.. ಅದನ್ನು ಶುದ್ಧಮಾಡಿಕೊಳ್ಳಿ." ಮಹಾತ್ಮರಾದವರೆಲ್ಲ ಬೋಧಿ ಸುತ್ತಿರುವದು ಅಂತರಂಗದ ಶುದ್ಧಿಯನ್ನೇ. ಅದನ್ನೇ ಬಸವನು ಸಾರಿ ದ್ದಾನೆ. ಮಹಾತ್ಮಾ ಝೊರೋಸ್ತರನ ಇನ್ನುಳಿದ ಬೋಧೆಯನ್ನು ಹೀಗೆ ಸಂಗ್ರಹಿಸಬಹುದು.

*Form no covetous desire* (ದುರಾಶೆಯನ್ನು ಮಾಡಬೇಡ) *Indulge in no wrathfulness* (ಕೋಪಿಸಬೇಡ) *Commit no lustfulness* (ಇಂದ್ರಿಯಾಶೆ ಮಾಡಬೇಡ) *Should not be Presumptous on account of wealth happiness, race* ಸಂಪತ್ತು ಸುಖ, ವಂಶ ಇವುಗಳಿಂದ ಮದವನ್ನು ಹಿಡಿಯಬೇಡ.) *For they are all transitory* (ಯಾಕಂದರೆ ಅವೆಲ್ಲ ಕ್ಷಣಿಕವಾದವುಗಳು.) ಬಸವೇಶ್ವರ ವಚನಗಳನ್ನು ಪರಿಶೀಲಿಸಿದವರೆಲ್ಲರೂ ಈ ಬೋಧೆಯನ್ನು ಅಲ್ಲಿ ಕಂಡುಕೊಳ್ಳಬಹುದು. "ಮುನಿಯ ಬೇಡ. ತನ್ನ ಬಣ್ಣಿಸಬೇಡ." ಸಂಸಾರದ ಕ್ಷಣಿಕ ಕಥೆಯನ್ನಂತೂ ಬಹು ಸ್ಪಷ್ಟವಾಗಿ ಬೋಧಿಸಿದ್ದಾನೆ. ಕಾಯ ವಿಕಾರ, ಮನದ ವಿಕಾರ, ಇಂದ್ರಿಯ ವಿಕಾರಗಳನ್ನು ತ್ಯಜಿಸಬೇಕೆಂದು ಆತನು ಹೇಳಿಯೇ ಇದ್ದಾನೆ. ಅಂಗದಿಚ್ಛೆಗೆ ಮದ್ಯಮಾಂಸವನ್ನು ತಿಂದು ಪರವಧುವ ನೆರೆವವರನ್ನು ತಿರಸ್ಕರಿಸಿದ್ದಾನೆ. ಸಿರಿಯ ಹೊದ್ದವರ ಮದವನ್ನೂ, ಕ್ರೋಧದ ಹೇಸಿತನವನ್ನೂ ಹೀಯಾಳಿಸಿದ್ದಾನೆ. "ಅರ್ಥವಡಗದು, ಕ್ರೋಧ ತೊಲಗದು, ಕ್ರೂರ ಕುಹಕ ಕುಭಾಷೆ ಬಿಡದನ್ನಕ್ಕರ ನೀನೆತ್ತಲು ಶಿವನೆತ್ತಲು ಹೋಗತ್ತ ಮರುಳೆ" "ಸಂಸಾರವೆಂಬುದೊಂದು ಗಾಳಿಯ ಸೊಡರು, ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯ. ಇದನು ನೆಚ್ಚಿ ಕೆಡಬೇಡ." "ಎಲೆ ಎಲೆ ಮಾನವ ಅಳಿಯಾಸೆ ಬೇಡೆಲೋ. ಕಾಡಬೆಳದಿಂಗಳ ಸಿರಿಯು ಸ್ಥಿರವಲ್ಲ" ಕುಲ ಮದವು ಅಳಿಯಲೇ ಬೇಕು. ಅಂಕಕಳನೇರಿ ಕೈ ಮರೆದಿರ್ದಡೆ ಮೂರಾಂತಕ ಬಂದು ಇರಿಯದೆ ಮಾಣ್ದನೇ? ಉಂಡುದು ಬಂದಿತ್ತೆಂಬ ಸಂದೇಹಿ ಮಾನವನ ಬಾಳುವೆ ಹಂದಿಯ ಬಾಳುವಿನಂತೆ. ಅರ್ಥ ಪ್ರಾಣಾಭಿಮಾನದಲ್ಲಿ ವಂಚನೆಯಿಲ್ಲದ ಭಕ್ತಿಯು ಬೇಕು. ಕೀರ್ತಿವಾರ್ತೆಗಾಗಿ ಮಾಡಿದವನ ಧನವು ವೃಥಾ ಹೋಗುತ್ತದೆ. ಕುಲಮದಕ್ಕೆ ಹೋರುವದು ಹ್ಯೇಯರೀತಿ. ಕಾಂಚನವೆಂಬ ನಾಯಿ ನೆಚ್ಚುವದು ಅನುಚಿತ. ಉತ್ತಮ ಕುಲದಲ್ಲಿ ಹುಟ್ಟಿದೆನೆಂದು ಜಂಭ ಮಾಡುವದು ಅಯೋಗ್ಯ. ಯಾಕಂದರೆ ಕುಲದಲ್ಲೇನಿದೆ? ಗುಣದಿಂದ ಯೋಗ್ಯತೆಯಿಂದ ಹೀನ ಕುಲಜನೂ ಶ್ರೇಷ್ಠನಾಗಬಹುದು. ಶ್ರೇಷ್ಠಕುಲದಲ್ಲಿ ಹುಟ್ಟಿದವನು ಅವುಗಳಿಲ್ಲದೆ ಅಧೋಗತಿಗಿಳಿಯಬಹುದು. ಬಸವನಲ್ಲಿ ಕುಲಮದ ಲವಲೇಶನಾದರೂ ಇದ್ದಿರಲಿಲ್ಲ. ಚನ್ನಯ್ಯನ ಮನೆಯ ದಾಸನ ಕಕ್ಕಯ್ಯನ ಮನೆಯ ದಾಸಿಯ ಮಗನು ಇವರ ಸಂಗದಲ್ಲಿ ಹುಟ್ಟಿದೆನೆಂದು ಅಲಂ

ಕಾರಿಕವಾಗಿ ಹೇಳುವ ಉಕ್ತಿಯನ್ನು ನಾವು ಇಲ್ಲಿ ನೆನೆದುಕೊಳ್ಳಬಹುದು. ಮೇಲೆ ಉದಹರಿಸಿದ ಬಸವನ ಬೋಧೆಯು ಝೊರೋಸ್ತನ ಬೋಧೆಗೆ ಸರಿಯಾಗಿಯೇ ಇರುವದಷ್ಟೆ? ಇದೇ ರೀತಿ ಇನ್ನೂ ಅನೇಕ ಮಹದ್ವಿಭೂತಿಗಳ ಬೋಧೆಯನ್ನಾದರೂ ಬಸವನ ಬೋಧೆಯೊಡನೆ ತೂಗಿ ನೋಡಬಹುದು. ಉದಾಹರಣಾರ್ಥವಾಗಿ ಕ್ರೈಸ್ತನ ಬೋಧೆಯನ್ನು ಕಂಡುಕೊಳ್ಳಬಹುದು. ಕ್ರೈಸ್ತನ ವಿಷಯವಾಗಿ ಸ್ವಾಮಿ ವಿವೇಕಾನಂದರೇ ಹೀಗೆ ಹೇಳುತ್ತಾರೆ. *The message came to show the path:—that the spirit is not in forms, that it is not through all the vexations and knotty problems of philosophy that you are to know him.* (ಪರಮಾತ್ಮನು ವ್ರತನಿಯಮಗಳಲ್ಲಿಲ್ಲ. ಗಲಭೆಯುಳ್ಳ ಹಾಗೂ ತಲೆತುರಿಸಿಕೊಳ್ಳಲಿಕ್ಕೆ ಹಚ್ಚುವ ತಾತ್ವಿಕ ಸಮಸ್ಯೆಗಳಿಂದ ಆತನನ್ನು ಅರಿಯಲಾಗುವದಿಲ್ಲ ಎಂಬ ಮಾರ್ಗವನ್ನು ತೋರಿಸುವದಕ್ಕಾಗಿಯೇ ಆತನ ಸಂದೇಶವು ಬಂದಿತು.) ಈ ಮಾತನ್ನು ಅಕ್ಷರಶಃ ಬಸವನಿಗೆ ಅನ್ವಯಿಸಬಹುದೆಂಬುದನ್ನು ಬಸವ ಬೋಧೆಯನ್ನು ಅರಿಯುವದರಿಂದ ಕಂಡುಕೊಳ್ಳಬಹುದು. ಯಾಕಂದರೆ ಬಸವನು ಘಂಟಾಘೋಷವಾಗಿ ಸಾರಿಹೇಳಿದ್ದಾನೆ. ಮಾತಿನ ಮಾಲೆಯೂ, ಮಂತ್ರಗಳ ತಂತ್ರವೂ, ಶುಷ್ಕ ಆಚಾರವೂ ತತ್ತ್ವಗಳ ಮೋಸವೂ, ಆತ್ಮೋನ್ನತಿಗೆ ಕಾರಣವಾಗಲಾರವು ಎಂದು ಅದಕ್ಕೆ ಬೇಕಾದುದೆಂದರೆ ಭಕ್ತಿ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಉಚ್ಚ ಸ್ವರದಿಂದ ಉದ್ಘೋಷಿಸಿದ್ದು ಇದೇ "ವೇದಗಳ ಅಭ್ಯಾಸ, ತಪ, ದಾನ, ವ್ರತಗಳಿಂದ ನಾನು ದೊರಕಲಾರೆ. ನನ್ನನ್ನು ಸಂಪೂರ್ಣವಾಗಿ ಕಾಣಬೇಕೆಂದು ಅರಿಯಬೇಕೆಂದು ಬಯಸುವವರು ಭಕ್ತಿಯನ್ನವಲಂಬಿಸಬೇಕು......ಆದುದರಿಂದ ಅರ್ಜುನನೇ ಪೂರ್ಣ ನಂಬಿಗೆಯಿಂದ ಭಕ್ತಿಯಿಂದ ನನ್ನನ್ನು ಆರಾಧಿಸು" (ಭಗವದ್ಗೀತೆಯ ೧೧ ನೇ ಅಧ್ಯಾಯದಲ್ಲಿ ೫೩-೫೫ ನೇ ಶ್ಲೋಕಗಳು.) ಭಕ್ತಿಯಭಾಂಡಾರಿ, ಅಮೂಲ್ಯಭಾಂಡಾರಿ ಬಸವನು ಭಕ್ತಿಯ ವಿಷಯವಾಗಿ ಹೇಳಿದ ಉಕ್ತಿಗಳನ್ನಿಲ್ಲಿ ಉದಾಹರಿಸುವದು ಅನವಶ್ಯಕವೇ ಸರಿ. ನಿಜವಾಗಿ ನೋಡಿದರೆ ಬಸವನ ತತ್ತ್ವಗಳೆಲ್ಲವೂ, ಬೋಧೆಗಳೆಲ್ಲವೂ, "ಭಕ್ತಿ" ಎಂಬ ಒಂದೇ ಹೆಸರಿನಲ್ಲಿ ಸಂಪೂರ್ಣವಾಗಬಹುದು. ಗೀತೆಯಲ್ಲಿ ಶ್ರೀಕೃಷ್ಣನು ಸಾರಿದ ಭಕ್ತಿಯನ್ನೇ ಬಸವನು ತನ್ನ ವಚನದಲ್ಲಿ ಉದ್ಘೋಷಿಸಿದ್ದಾನೆ. *Give up all thought thou hast and*

*follow me.* (ನಿನ್ನಲ್ಲಿದ್ದುದನೆಲ್ಲ ತೊರೆ. ನನ್ನನ್ನು ಹಿಂಬಾಲಿಸು.) ಎಂದು ಕ್ರಿಸ್ತನು ಹೇಳಿದ್ದಾನೆ. ಕೃಷ್ಣನೂ ಹೇಳಿದಾನೆ. ಬಸವನೂ ಕೂಡ (ಕೊನೆಯರ್ಧದಲ್ಲಿ ವ್ಯತ್ಯಾಸವಿದೆ.) ಹಾಗೆಯೇ ಹೇಳಿದ್ದಾನೆ; ಆದರೆ ತನ್ನನ್ನು ಅನುಸರಿಸು ಎಂದು ಹೇಳಲಾರ. ಆತನಲ್ಲಿ ಆತ್ಮಪ್ರಾಪ್ತಿಗೆ ಅವಕಾಶವಿಲ್ಲ. ಇದೊಂದು ಬಸವನ ಶ್ರೇಷ್ಠತೆಯ ವೈಶಿಷ್ಟ್ಯವೇ ಎಂದು ಹೇಳಬಹುದು. ಕ್ರೈಸ್ತ ಧರ್ಮದ ಸೂತ್ರಗಳಾದ ದಶವಿಧಿಗಳಲ್ಲಿ ಹೇಳಿದ *Do not kill.* (ಕೊಲಬೇಡ) *Do not steal.* (ಕಳಬೇಡ) *Do not bear false witness* (ಹುಸಿಯ ನುಡಿಯಲುಬೇಡ) ಎಂಬ ಮಾತುಗಳಲ್ಲಿಯ ಸಾಮ್ಯವಂತೂ ಬೆರಗುಗೊಳಿಸುವಂತಹದಿದೆ. ಬಸವನ "ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ. ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರು ಹಳಿಯಲುಬೇಡ, ಇದೇ ಅಂತರಂಗಶುದ್ಧಿ" ಎಂಬ ವಚನವು ನಾನು ಹಿಂದೊಮ್ಮೆ ಹೇಳಿದಂತೆ ವಿಶ್ವಧರ್ಮದ ಸಾರವೇ ಎಂದು ಹೇಳಬಹುದು.

ಸತ್ಕೃತ್ಯವನ್ನೂ, ಸದ್ವರ್ತನೆಯನ್ನೂ, ಹಾಗೂ ಪಾವಿತ್ರ್ಯವನ್ನೂ ಬುದ್ಧನಾದರೂ ಬೋಧಿಸಿದ್ದಾನೆ. "ನಿನಗೆ ಯಾರೂ ಸಹಾಯ ಮಾಡಲಾರರು. ನಿನ್ನ ಮುಕ್ತಿಯ ಮಾರ್ಗವ ನೀನೇ ಕಂಡುಕೋ." ಎಂದು ಬುದ್ಧನು ಹೇಳಿದಂತೆ ಬಸವನಾದರೂ "ಆರುಗಾರು ಇಲ್ಲ" ಎಂದು ಹೇಳಿದ್ದಾನೆ. ಅನ್ಯರನ್ನು ಆಶ್ರಯಿಸಿ ಮುಕ್ತಿ ಪಡೆಯುವದು ಸಾಧ್ಯವಿಲ್ಲ." ಯಜ್ಞಯಾಗಾದಿಗಳ ಹಿಂಸೆಯ ವಿಷಯವಾಗಿಯಂತೂ ಬಸವ ಬುದ್ಧರಿಬ್ಬರೂ ಒಂದೇ ಅಭಿಪ್ರಾಯವುಳ್ಳವರಾಗಿದ್ದರೆ, ಧರ್ಮದ ಹೆಸರಿನಿಂದ ನಡೆದ ಹಿಂಸೆಯನ್ನು ಕಂಡು ಇವರಿಬ್ಬರ ಕರುಣೆ ಕೆರಳಿದೆ. ದಯಾರ್ದ್ರಭಾವ ಅರಳಿದೆ. ಅಳು ಕಂಡೆಯಾ ಹೊತೇ. ವೇದವನೋದಿದವರ ಮುಂದೆ ಅಳು ಕಂಡೆಯಾ ಹೊತೇ. ಎಂದು ಬಸವನು ವ್ಯಂಗ್ಯ ಮಾತನಾಡಿದ್ದಾನೆ. ಹಾಗೆಯೇ ಬುದ್ಧನು ಪಶುವನ್ನು ಆಹುತಿ ಕೊಡುವದರಿಂದ ಮುಕ್ತಿಯಾಗುತ್ತದೆ. ಮನುಷ್ಯರನ್ನು ಕೊಟ್ಟರೆ ಹೆಚ್ಚಿನದೇನಾದರೂ ದೊರಕುವದು. ಆದುದರಿಂದ ನನ್ನನ್ನೇ ಬಲಿ ಕೊಡಿರಿ" ಎಂದು ಹೇಳಿದ್ದಾನೆ. ಅಂತು ಬಸವ ಬುದ್ಧರ ಜೀವನ, ತತ್ತ್ವಬೋಧೆ, ಸಾಧನೆ ಇವುಗಳಲ್ಲಿ ಹೆಚ್ಚಾದ ಸಾಮ್ಯವು ಕಂಡುಬರುತ್ತದೆ. ಬಸವನ ಜೀವನವನ್ನು ಅಭ್ಯಾಸಿಸುವಾಗ ನನಗಂತೂ ಬುದ್ಧನ ಜೀವನವೇ ನೆನಪಿಗೆ ಬರುವದು. ಈ ದೃಷ್ಟಿಯಿಂದ

ಬಸವನ ಜೀವನವನ್ನು ಅಭ್ಯಾಸಿಸುವದು ಅವಶ್ಯವೆಂದು ನನಗನ್ನಿಸುತ್ತದೆ. "*Muhamad by his life showed that amongst Mahamadens there should be a perfect equality and brother hood. There was no question of race,, caste creed, colour or sex.*" (ಮುಸಲ್ಮಾನರಲ್ಲಿ ಸಂಪೂರ್ಣ ಸಮತೆಯೂ ಬಂಧುತ್ವವೂ ಇರುವದೆಂದು ಮಹಮ್ಮದನು ತನ್ನ ಜೀವನದಿಂದ ತೋರಿಸಿಕೊಟ್ಟನು. ಅಲ್ಲಿ ವಂಶ, ಜಾತಿ, ಪಂಥ, ವರ್ಣ, ಲಿಂಗ ಇವುಗಳ ಪ್ರಶ್ನೆಯೇ ಇಲ್ಲ.) ಮೇಲಿನ ಅವತರಣಿಕೆಗಳಲ್ಲಿ "ಮುಸಲ್ಮಾನ" "ಮಹಮ್ಮದ" ಶಬ್ದಗಳಿಗೆ ಪ್ರತಿಯಾಗಿ "ಲಿಂಗಾಯತ" "ಬಸವೇಶ" ಶಬ್ದಗಳನ್ನು ಹಾಕುವದು ಎಲ್ಲ ರೀತಿಯಿಂದಲೂ ಸಮಂಜಸವಾಗುವದು. ಶಿವಭಕ್ತನಾದ ಮಾತ್ರಕ್ಕೆ ಹೊಲೆಯರನ್ನೂ ತನ್ನ ಸರಿಕರೆಂದೂ, ಹೆಚ್ಚಿನವರೆಂದೂ ತಿಳಿದುಕೊಂಡ ಬಸವನಿಗೆ ಮೇಲಿನ ಮಾತು ಅನ್ವಯಿಸಲೇಬೇಕು. ಯಾವ ಕುಲವಾದರೇನು, ಶಿವಭಕ್ತಿಯಿದ್ದವನಿಗೆ ಎಂದು ಹೇಳಿ ಶಿವಭಕ್ತರಾದ "ಹೊಲೆ ಹದಿನೆಂಟು ಜಾತಿ" ಯವರನ್ನು ಒಂದಾಗಿಸಿ ಶುದ್ರಳೆಂದು ತಿರಸ್ಕರಿಸಲ್ಪಟ್ಟ ಸ್ತ್ರೀಗೂ ಸಮಾಜದಲ್ಲಿ ಯೋಗ್ಯ ಸ್ಥಾನವನ್ನು ಕಲ್ಪಿಸಿಕೊಟ್ಟ ಬಸವನ ಸಮತಾಬುದ್ಧಿಯು ಇಡೀ ಜಗತ್ತಿನಲ್ಲಿ ಮಾದರಿಯುದಾಗಿದೆ. ಕಾಯಕದಿಂದ ಬಂಧುತ್ವವನ್ನೂ ಅನುಭವ ಮಂಟಪದಿಂದ ಸಮತೆಯನ್ನೂ ಸಾಧಿಸಿದ **ಬಸವನಿಗೆ ಜಗತ್ತಿನ ಮಹದ್ವಿಭೂತಿಗಳ ಪರಮಶ್ರೇಷ್ಠನಾದ ಸ್ಥಾನವಿದೆ.** ಕಾಲವು ಹೊರಳಿದಂತೆ ಕೆಲವರ ತತ್ವಗಳು ಹಳೆಯುವಾಗಬಹುದು. ಮಸಕಾಗಬಹುದು. ಆದರೆ ಬಸವನ ದಿವ್ಯ ತತ್ತ್ವಗಳು ದಿನದಿನಕ್ಕೆ ನಾವಿನ್ಯತೆ ಪಡೆದು ದೇದಿಪ್ಯಮಾನವಾಗಿ ಬೆಳಗಹತ್ತಿವೆ ಎಂಬ ಮಾತನ್ನೂ ಹಾಗು ಬಸವನು ಇನ್ನಿತರಾರೂ ಕೈಕೊಳ್ಳದ ಅನೇಕ ಕಾರ್ಯರಂಗಕ್ಕಿಳಿದು ಬಹುಮುಖವಾದ ಯುಶಸ್ವಿತೆಯನ್ನು ಸಾಧಿಸಿದೆನೆಂಬುದನ್ನೂ ನೆನೆದಾಗಲಂತೂ ಬಸವ ಮಹಾಪುರುಷನ ವ್ಯಕ್ತಿವಿಶೇಷವು ಹೆಚ್ಚಾಗಿ ಆಕರ್ಷಕ ಹಾಗೂ ಆದರಣೀಯವಾಗುತ್ತದೆ, ಪೂಜಕವಾಗುತ್ತದೆ. ಇಂತಹ ಮಹದ್ವಿಭೂತಿಗೆ ಜನ್ಮಕೊಟ್ಟ ಕನ್ನಡನಾಡೀ ಧನ್ಯವಾದುದು.

---

# ಅಶೋಕನ ಶಿಲಾಲೇಖದೊಳಗಿನ ಕೆಲವು ಲೇಖಗಳು.

(ಲೇಖಕ:—ಗಂಗಾಧರ)



ಅಶೋಕರಾಜನ ಕಾಲದ ಶಿಲಾಶಾಸನಗಳ ಮಹತ್ವವು ಎಷ್ಟಿರುತ್ತದೆಂಬದನ್ನು ಯಾರಿಗೂ ಹೇಳಲಿಕ್ಕೆಬೇಡ. ಹಿಂದುಸ್ತಾನದ ಪ್ರಾಚೀನ ಇತಿಹಾಸವನ್ನು ಬರೆಯಲಿಕ್ಕೆ ಈ ಬರಹಗಳ ಉಪಯೋಗವು ವಿಶೇಷವಾಗಿದೆ. ಅಶೋಕರಾಜನ ಉದಾರ ಮತ್ತು ಧಾರ್ಮಿಕ ಅಂತಃಕರಣವನ್ನು ಪರೀಕ್ಷಿಸಲಿಕ್ಕೆ ಈ ಬರಹಗಳ ಹೊರತು ಮತ್ತಾವ ಉತ್ತಮಸಾಧನಗಳು ಇಲ್ಲ. ಇಂಗ್ಲೀಷ, ಫ್ರೇಂಚ, ಮತ್ತು ಜರ್ಮನೀ ಭಾಷೆಗಳಲ್ಲಿ ಈ ಶಿಲಾಶಾಸನಗಳ ಮೇಲೆ ಅನೇಕ ವಿದ್ವಾಂಸರು ಅನೇಕ ಬರಹಗಳನ್ನು ಬರೆದಿರುತ್ತಾರೆ; ಆದರೆ ಕರ್ಣಾಟಕ ಭಾಷೆಯಲ್ಲಿ ಈ ವಿಷಯದ ಚರ್ಚೆಯು ಆಗಬೇಕಾದಷ್ಟು ಆಗಿರುವದಿಲ್ಲ.

ಈ ಶಿಲಾ ಶಾಸನಗಳು ಪರ್ವತದ ಶಿಖರಗಳ ಮೇಲೂ, ಶಿಲೆಯ ಸ್ತಂಭಗಳ ಮೇಲೂ ಬರೆಯಲ್ಪಟ್ಟಿವೆ, ಮತ್ತು ಅವು ಪಾಲೀಭಾಷೆಯಲ್ಲಿ ಬರೆಯಲ್ಪಟ್ಟಿವೆ. ತ್ರಿಪಿಟಕಾದಿ ಗ್ರಂಥಗಳ ಪಾಲೀ ಭಾಷೆಯಲ್ಲಿಯೂ ಈ ಪಾಲೀ ಭಾಷೆಯಲ್ಲಿಯೂ ಬಹಳ ವ್ಯತ್ಯಾಸವಿರುತ್ತದೆ. ವೈದಿಕ ಸಂಸ್ಕೃತ ಭಾಷೆಯಿಂದ ಪಾಲೀಭಾಷೆಯು ಜನಿಸಿತು. ಪಾಲಿಯಿಂದ ಪ್ರಾಕೃತಭಾಷೆಗಳು ಹುಟ್ಟಿದವೆಂದೂ ಪ್ರಾಕೃತಭಾಷೆಯಿಂದ ಈಗಿನ ಹಿಂದೀ, ಬಂಗಾಲಿ, ಮರಾಠೀ ಮುಂತಾದ ಭಾಷೆಗಳು ಹುಟ್ಟಿದವೆಂದೂ ವಿದ್ವಾಂಸರ ಅಭಿಪ್ರಾಯವದೆ.

ಈ ಶಿಲಾಲೇಖದೊಳಗಿನ ಪಾಲಿಭಾಷೆಯ ಮಾದರಿಯನ್ನು ಓದುಗರ ಮುಂದಿಡುವದಕ್ಕಾಗಿ ಅವುಗಳೊಳಗಿನ ಕೆಲವುಗಳನ್ನು ಕನ್ನಡಭಾಷಾಂತರ ಸಹಿತ ಇಲ್ಲಿ ಕೊಡುತ್ತೇನೆ.

೧—ಅಶೋಕನಿಗೆ ಎರಡನೇ ದೇಶವನ್ನು ಗೆಲ್ಲಬೇಕೆಂಬುದರಲ್ಲಿ ಬೇಸರಿಕೆ ಹೇಗೆಯುಂಟಾಯಿತು, ಬೌದ್ಧ ಧರ್ಮದ ಕಡೆಗೆ ಆತನ ಪ್ರವೃತ್ತಿ ಹೇಗಾಯಿತು, ಮತ್ತು ಅವನು ಇತರ ರಾಷ್ಟ್ರಗಳನ್ನು ಶಸ್ತ್ರಗಳಿಂದಲ್ಲ, ಧರ್ಮಪ್ರಸಾರದಿಂದ ಹೇಗೆ ಗೆದ್ದನೆಂಬುದು ಕೆಳಗಿನ ಬರಹಗಳ ಮೇಲಿಂದ ಓದುಗರ ಲಕ್ಷಕ್ಕೆ ಬರಬಹುದು:—

## ೧೩ ನೇ ಶಿಲಾಶಾಸನವು

"ಅಷ್ಟವಸಾಭಿಸಿತಸ ದೇವಾನಂ ಪ್ರಿಯಸ ಪ್ರಿಯದಸಿ ಸರ ಇನೇಕ ಲಿಂಗಾ ವಿಜಿತಾ। ದಿಯಧಮತ್ರೇ ಪ್ರಾಣಸತಸಹಸ್ರೆ ಯೆತತೊ ಅಪವುಧೆ, ಸತಸಹಸ್ರ ವತ್ರೆ. ತತ್ರ ಹತೆ, ಬಹುಲಾವತಕೆ ಮುಟೆ। ತತೋ ಪಚ್ಛಾ ಅಧುನಾಲಧೇಸು ಕಲಿಂಗೇಸು ತಿವ್ರೆ ಧಂವು ಪಾಲನಂ, ಧಂವು ಕಾ ಮತಾ, ಧಂವಮಾನುಸಸ್ತಿ ಚ ದೇವಾನಪ್ರಿಯಸ। ಸೊ ಅಸ್ತಿ ಅನುಸೋಚನಂ ದೇವಾನಂ ಪ್ರಿಯಸ ವಿಜಿನಿತು ಕಲಿಂಗಾನಿ। ಅವಿಜಿತಂ ಹಿ ವಿಜಿನಮನೆ ಯೋತತ್ರವಧೊ ವಾ ಮರಣಂ ವಾ ಅಪವ ಹೋವಾಜನಸ, ತಂ ಬಾಢಂ ವೇದನಿಯಮತಂ ಗುರುಮತಂಚ ದೇವಾನಂ ಪ್ರಿಯಸ। ಇಮಂಪಿ ಚ ತತೋ ಗುರುಮತತರಂ ದೇವಾನಂ ಪ್ರಿಯಸತತ್ರ ಹಿ ವಸನ್ತಿ ಬ್ರಾಹ್ಮಣಾ ವಾಶ್ರಮಣಾವಾ ಅಂಜ್ಞೆಪಾಸಂಡಾ, ಗಹಥಾ ವಾ ಯೇಸುವಿಹಿತಾ ಏಸಾ ಅಗ್ರಭುತಿ, ಸುಸ್ರುಸಾ ಮಾತಾಪಿತುಸು, ಸುಸ್ರುಸಾ ಗುರುನಂ ಸುಸ್ರುಸಾ ಮಿತ್ರಸಂಸ್ತುತಸಹಾಯ ಜ್ಞಾತಿಕೇಸು, ದಾಸ ಭಟಕಾನಂ ಸಮ್ಯಾ, ಪ್ರತಿಪತಿ, ಧಿಡಭತೀತಾ। ತೇಸಂ ತತ್ರಹೋತಿ ಉಪ ಘಾತೋ ವಾ ವಧೋ ವಾ ಅಭಿರತಾನಂ ವಾ ನಿಕ್ರಮಣಂ। ಯೇಸಂ ವಾಪಿ ಸಂವಿಹಿತಾನಂ ಸಿನೆಹೋ ಅವಿಪ್ರಹಿನೋ ಏತೇಸಂ ಮಿತ್ರ ಸಂಸ್ತುತ ಸಹಾಯ ತಿಕಾವ್ಯಸನಂ ಪಾಪುಣತಿ। ತತ್ರ ತಂಪಿತೇಸಂ ಉಪಘಾತೋ ಹೋತಿ। ಪ್ರತಿಭಾಗಂ ಚಯೇತಂ ಸರ್ವಮನುಸಾನಂ ಗುರುಮತಂ ಚ ದೇವಾನಂ ಪ್ರಿಯಸ। ನಾಸ್ತಿಚ ಏಕತರಹ್ಮಿ ಪಾಸಂಡಹ್ಮಿ ನನಾಮ ಪ್ರಸಾದೋ। ಸೊಯಮತ್ರ ಜನೋ ತದಾ ಕಲಿಂಗೇ ಹತೋಚ ಮುಟೋ ಚ ಅಪವುಥೋಚ, ತತೋ ಸತಭಾಗಂ ವಾ ಅಜಗುರುಮತಂ ದೇವಾನಂ ಪ್ರಿಯಸಯೋಪಿತ ಅಪಕರೇಯತಂ ಛಮಿತ ವಿಯಮತೆ ಒದೇವಾನಂ ಪ್ರಿಯಸ ಯಂ ಸಕಂ ಛಮನಾಯೇ। ಯಾಪಿ, ಚ ಅಟವಿ ದೇವಾನಂ ಪ್ರಿಯಸವಿಜಿತೇಹೋತಿ ತಾಪಿ, ಅಸುನೇತಿ ಅನುನಿಝಾಪೇತಿ। ಅನುತಾಪೇಪಿ ಚ ಪ್ರಭವೆ ದೇವಾನಂ ಪ್ರಿಯಸ। ವುಚತಿತೇಸಂ, ಕಿಂ ತಿ? ಅವತ್ರಪೇಯುಂ ನಚ ಹಂ ಇವೆಯುಂ ಸು। ಇಛತಿಹಿ ದೇವಾನಂ ಪ್ರಿಯೋ ಸರ್ವಭೂತಾನಂ ಅಛತಿ, ಸಂಯಮಂ ಸಮಚರಿಯಂ ಮಾದವಂ ಚ। ಎಸೇಚ ಮುಖಮತೆ ವಿಜಯೆದೇವಾನಂ ಪ್ರಿಯಸ, ಯೋ ಧಂಮ ವಿಜಯೋ। ಸೋಚಪುನಲಧೋ ದೇವಾನಂ ಪ್ರಿಯಸ, ಇಹಚ ಸರ್ವೇ

ಸುಚ ಅಂತೇಸು ಅಥ ಸುಪಿ (ಯೋಜನ ಸತೇಲೇಸು, ಯತ್ರ ಅಂತಿಯೋಕೇ ನಾಮಯೋನ ರಾಜಾ, ಪರಂಚತೇನ ಅಂತಿಯೋಕೇನ ಚತುರೋ ರಾಜಾನೋ, ತುರಮಾಯೋ ನಾಮಅಂತಿಕಿನಿ ದಾಮ ಮಕನಾಮ ಅಲಿಕಸುದರೋ ನಾಮ; ನಿಚ ಚೋಡಾ ಪಂದಾ ಆವತಂಭಪಂ ಣಿಯಾ। ಏವಮೇವ ಹಿ ಧರಾಜಾ।

ಸವತ್ರ ದೇವಾನಂ ಪ್ರಿಯಸಧಂಮಾನು ಸಸ್ತಿಂ ಅನುವಟಂ ತಿ। ಯತ್ರಪಿ ದೇವಾನಂ ಪ್ರಿಯಸ ದುತಾನ ವ್ರಭಂತಿ, ತೇಪಿಸುತು ದೇವಾನಂ ಪ್ರಿಯಸಧಂಮ ವುತಂ ವಿಧಾನಂ ಧಂಮಾನುಸಸ್ತಿಂ ಧಂಮಂ ಅನುವಿಧಿಯಂತಿ ಅನುವಿಧಾಯಿಸಂತಿಚ। ಯೋಚಲಧೆ ಏತಕೇನ ಹೋತಿ ಸರ್ವತ್ರ ವಿಜಯೋ, ಸರ್ವತ್ರ ಪುನವಿಜಯೋ ಪ್ರಿತಿರಸೋಸೋ। ಲಧಾ ಸಾಪ್ರಿತಿ ಧಂಮವಿಜಯಹ್ಮಿ। ಲಹುಕಾತುಖೋ ಸಾಪ್ರಿತಿ, ಪರತ್ರಿಕಮೇವ ಮಹಫಲಂ ಮಂತಿ ದೇವಾನಂ ಪ್ರಿಯೋ।„

೧— ಅಶೋಕನ ಮುಖ್ಯ ಶಿಲಾಶಾಸನಗಳು ೧೪ ಇವೆ. ಅವೆಲ್ಲ ನಾಲ್ಕು ಸ್ಥಳಗಳಲ್ಲಿ ದೊರೆಯುತ್ತವೆ. ಅವುಗಳಲ್ಲಿ ಗಿರನಾರ, ಕಾಲಸೀ, ಮತ್ತು ಮನಸೇಹರಾ ಈ ಮೂರು ಸ್ಥಳಗಳಲ್ಲಿ ದೊರೆಯುವ ಈ ಹದಿಮೂರನೇ ಶಿಲಾಶಾಸನವು ಛಿನ್ನಭಿನ್ನವಾಗಿದೆ.

ರಾಜ್ಯಾಭಿಷೇಕವಾಗಿ ಎಂಟು ವರ್ಷಗಳು ಪೂರ್ಣವಾದ ಬಳಿಕ ದೇವಪ್ರಿಯ ಪ್ರಿಯದರ್ಶಿರಾಜನು ಕಲಿಂಗ ದೇಶವನ್ನು ಕೈವಶ ಮಾಡಿಕೊಂಡನು. ಅಲ್ಲಿಂದ ಒಂದೂವರೆ ಲಕ್ಷ ಜನರನ್ನು ಹಿಡಿದು ತಂದರು. ಒಂದು ಲಕ್ಷ ಅಲ್ಲಿಯೇ ಕೊಲ್ಲಲ್ಪಟ್ಟರು. ಮತ್ತು ಅದರಗಿಂತ ಹೆಚ್ಚುಜನರು ಸತ್ತರು. ಆಮೇಲೆ ಈಗ ಕಲಿಂಗದೇಶವನ್ನು ಗೆದ್ದಬಳಿಕ ದೇವಪ್ರೀತಿಪಾತ್ರನು ಉತ್ತಮ ರೀತಿಯಿಂದ ಧರ್ಮಪಾಲನ ಮಾಡುತ್ತಿರುವನು. ಆತನ ಧಾರ್ಮಿಕ ಉತ್ಸುಕತೆಯು ಬೆಳದಿರುತ್ತದೆ. ಮತ್ತು ಧರ್ಮಪ್ರಸಾರದ ಸಲುವಾಗಿ ಅವನು ಪ್ರಯತ್ನ ಮಾಡುತ್ತಿರುವನು. ಕಲಿಂಗದೇಶವನ್ನು ಈ ಬಗೆಯಾಗಿ ಗೆದ್ದಬಗ್ಗೆ ದೇವಪ್ರಿಯನಿಗೆ ಪಶ್ಚಾತ್ತಾಪ ಉಂಟಾಗಿದೆ; ಯಾಕಂದರೆ ಹೊಸ ರಾಷ್ಟ್ರವನ್ನು ಕೈವಶ ಮಾಡಿಕೊಳ್ಳುವಾಗ್ಗೆ ಅಲ್ಲಿ ಆಗತಕ್ಕ ಜನರ ಕೊಲೆ, ಸಾವು, ಇಲ್ಲವೆ ಹಿಡಿಯುವದು, ಇವುಗಳೆಲ್ಲ ನಿಃಸಂಶಯವಾಗಿ ವಿಚಾರಮಾಡತಕ್ಕಂಥವಿದ್ದು ಭಯಂಕರವಾಗಿವೆ. ಹೀಗೆ ದೇವಪ್ರಿಯನಿಗೆ ಅನ್ನಿಸುತ್ತದೆ ಮತ್ತು ಇದು ಒಂದು ಅದರಗಿಂತಲೂ ಭಯಂಕರವಾದ(ಕಾರ್ಯ)

ವದೆ, ಎಂದು ದೇವ ಪ್ರೇಮಿಗೆ ಅನ್ನಿಸುತ್ತದೆ, (ಅದುಏನೆಂದರೆ) ಅಲ್ಲಿ (ಸ್ವತಂತ್ರ ರಾಷ್ಟ್ರದಲ್ಲಿ) ಬ್ರಾಹ್ಮಣ, ಶ್ರಮಣ, ಮುಂತಾದ ಎರಡನೇ ಅನೇಕ ಪಂಥಗಳ ಸಾಧಗಳು ಅಥವಾ ತಾಯಿ ತಂದೆಗಳ ಜೋಕೆ ಮಾಡುವ, ಗುರುಗಳ ಸೇವೆಮಾಡುವ, ಮಿತ್ರ, ಆಪ್ತರಿಷ್ಟ ಮುಂತಾದವರಿಗೆ ಸಹಾಯು ಮಾಡುವ, ದಾಸರನ್ನೂ ಆಳುಗಳನ್ನೂ ಒಳ್ಳೇ ರೀತಿಯಿಂದ ನಡಿಸಿಕೊಳ್ಳುವದೂ, ದೃಢವಾದ ಶ್ರದ್ಧೆಯುಳ್ಳವರೂ ಮುಂತಾದ ಉತ್ತಮ ಗುಣವುಳ್ಳಜನರೂ, ಇರುತ್ತಾರೆ. ಅವರಿಗೆ ಇಂಥ (ಆ ರಾಷ್ಟ್ರವನ್ನು ಗೆಲಿಯುವ) ವೇಳೆಯಲ್ಲಿ ದುಃಖವಾಗುತ್ತದೆ. ಅಥವಾ ಅವರು ಕೊಲ್ಲಲ್ಪಡುತ್ತಾರೆ. ಇಲ್ಲವೆ ಅಲ್ಲಿಇರುವ ಇಚ್ಛೆ ಇರಲಿಕ್ಕಾಗಿ ಅವರಿಗೆ ಅಲ್ಲಿಂದ ಹೊರಟು ಹೋಗುವ ಪ್ರಸಂಗ ಬರುತ್ತದೆ. ಅವರಲ್ಲಿ ಯಾರನ್ನು ರಕ್ಷಣ ಮಾಡುವದರಲ್ಲಿ ಬರುತ್ತದೆ, ಅವರ ಮಿತ್ರ ಆಪ್ತೇಷ್ಟರು ಸಂಕಟದಲ್ಲಿ ಬಿದ್ದವರ ಮೇಲೆ ಪ್ರೇಮವಿರುತ್ತದೆ. ಆದುದರಿಂದ ಅವರನ್ನು (ರಕ್ಷಣಮಾಡಿದರೂ) ದುಃಖವಾಗುತ್ತದೆ. ಇದೆಲ್ಲ (ದುಃಖವು) ಇಂಥ ಕಾಲಕ್ಕೆ ಜನರಿಗೆ ಪ್ರಾಪವಾಗುತ್ತದೆ. ಅದು ದೇವಪ್ರೇಮಿಗೆ ಭಯಂಕರವಾಗಿ ತೋರುತ್ತದೆ. ಯಾವದೇ ಧರ್ಮಪಂಥದ ಬಗ್ಗೆ ದೇವಪ್ರೇಮಿಗೆ ಆದರವಿಲ್ಲ ಹೀಗೇನೂ ಇಲ್ಲ.

ಈ ಪ್ರಸಂಗದಲ್ಲಿ ಕಲಿಂಗ ದೇಶದಲ್ಲಿ ಯಾರು ಸಂಹರಿಸಲ್ಪಟ್ಟರೋ, ಅಥವಾ, ಸತ್ತರೋ ಅಥವಾ ಸೆರೆಯಲ್ಲಿಡಲ್ಪಟ್ಟರೋ ಅವರ ನೂರನೇ ಪಾಲು ಇಲ್ಲವೆ ಸಾವಿರ ಪಾಲಿನಿಂದ ಸಹ (ಕೊಂದುಬಿಡುವದೂ, ಸಾಯುವದೂ, ಶೆರೆಹಿಡಿಯುವದೂ) ಇದು ದೇವಪ್ರೇಮಿಗೆ ಇಂದೇ ಭಯಂಕರವೆನಿಸುತ್ತದೆ. ಶಕ್ಯವಾಗಿದ್ದರೆ, ಅಪಕಾರ ಮಾಡಿದವನಿಗೂ ಕ್ಷಮೆ ಮಾಡಬಹುದು ಹೀಗೆ ದೇವಪ್ರಿಯನಿಗೆ ಅನಿಸುತ್ತದೆ.

ದೇವಪ್ರೇಮಿಯ ರಾಜ್ಯದಲ್ಲಿ ಯಾವ ಕಾಡ ಜನರಿರುತ್ತಾರೆ. ಅವರನ್ನು ಆತನು ದಯೆಯಿಂದ ನಡಿಸುತ್ತಾನೆ. ಅವರನ್ನು ಸುಧಾರಿಸುವ ಪ್ರಯತ್ನ ಮಾಡುತ್ತಾನೆ. (ಹೀಗೆ ಮಾಡದಿದ್ದರೆ) ದೇವಪ್ರೇಮಿಗೆ ಪಶ್ಚಾತ್ತಾಪವಾದೀತು. ಅವರಿಗೆ ಆವನು ಅನ್ನುವದೇನಂದರೆ, ಪಾಪಕಾರ್ಯದ ನಾಚಿಕೆ ಹಿಡಿಯಿರಿ! ಸಾವಿಗೊಳಗಾಗಬೇಡಿರಿ! ಯಾಕೆಂದರೆ, ದೇವ ಪ್ರೇಮಿಯು ಇಚ್ಛಿಸುವದೇನಂದರೆ ಸರ್ವ ಪ್ರಾಣಿಗಳಿಗೂ ದುಃಖವಾಗಬಾರದು. ಎಲ್ಲರೂ ಮನಸ್ಸಿನ ಸಂಯಮನ ಮಾಡಬೇಕು, ಸರ್ವರೂ ಪರಸ್ಪರರ ಕೂಡ ಸಮಭಾವನೆಯಿಂದ ನಡೆಯಬೇಕು. ಮತ್ತು ಸರ್ವರೂ ಸವಿಯಿಂದ ನಡೆಯಬೇಕು.

ದೇವಪ್ರಿಯಿಯ ಮತದಿಂದ ಧರ್ಮಪ್ರಚಾರದ ವಿಜಯುವೇ ಶ್ರೇಷ್ಠ ವಿಜಯುವಾಗಿರುತ್ತದೆ. ಮತ್ತು ಆ ವಿಜಯುವು ದೇವಪ್ರೇಮಿಗೆ ತನ್ನ ಮತ್ತ ನೆರೆಹೊರೆಯ ರಾಜ್ಯಗಳಲ್ಲಿಯೂ, ಆರು ನೂರು ಯೋಜನದ ದೂರದ ಪ್ರದೇಶಗಳಲ್ಲಿಯೂ, ದೊರೆದದೆ. ಎಲ್ಲಿ ಅಂತಿಯೋಕ (*Antiochos*) ಎಂಬ ಯುವನ (ಗ್ರೀಕ) ರಾಜನಿರುತ್ತಾನೆ. ಅಲ್ಲಿ ಮತ್ತು ಆತನ ಆಚೇಕಡಿಗೆ ತುರುಮಾಯೆ (*ptolemy*) ಅಂತಿಕಿನೀ (*Antigonos*) ಮಗ (*Magus*) ಮತ್ತು ಅಲಿಕಸುಂದರ (*Alexander*) ಈ ಹೆಸರುಗಳ ನಾಲ್ಕು ಜನ ರಾಜರು ವಾಸಿಸುತ್ತಿದ್ದಾರೆ. ಮತ್ತು ಕೆಳಗಡೆ ದಕ್ಷಿಣಕ್ಕೆ ಚೋಳ, ಪಾಂಡ್ಯ ಮತ್ತು ತಾಮ್ರಪರ್ಣೀ (ಸಿಂಹಲದ್ವೀಪ) ವರೆಗೆ ಮತ್ತು ನನ್ನ ಸಾಮ್ರಾಜ್ಯದಲ್ಲಿ ಮಾಂಡಲಿಕರಾಗಿದ್ದವರ ರಾಜ್ಯದಲ್ಲಿ ಈ ಸ್ಥಳಗಳಲ್ಲಿ ದೇವಪ್ರೇಮಿಯ ಧರ್ಮೋಪದೇಶಕ್ಕೆ ಅನುಸರಿಸಿ ಜನರು ವರ್ತಿಸುತ್ತಾರೆ. ಎಲ್ಲಿ ದೇವಪ್ರೇಮಿಯ ದೂತರು ಹೋಗುವದಿಲ್ಲ ಅಲ್ಲಿಯೂ ಸಹ ಜನರು ದೇವಪ್ರೇಮಿಯ ಧಾರ್ಮಿಕ ಆಚರಣೆ ಮತ್ತು ಧರ್ಮೋಪದೇಶವನ್ನು ಕೇಳಿ ಅದರಂತೆ ಆಚರಿಸುತ್ತಾರೆ. ಮತ್ತು ಮುಂದೂ ನಡೆಯುವರು. ಮತ್ತು ಈ ಬಗೆಯಾಗಿ ಯಾವನು ಎಲ್ಲ ಕಡೆಗೂ ವಿಜಯುವನ್ನು ಹೊಂದುತ್ತಾನೋ ಅವನೇ ಎಲ್ಲ ಕಡೆಗೂ ಪ್ರೇಮರಸಮಯನಾಗಿರುತ್ತಾನೆ. ಅದಾವ ಧರ್ಮ ವಿಜಯದ ಪ್ರೀತಿಯು ನನಗೆ ದೊರೆತಿದೆ, ಆ ಪ್ರೀತಿಯು ಅಲ್ಪಫಲದಾಯಕವಾದರೂ (ಈ ಧರ್ಮ ವಿಜಯದಿಂದ) ಪಾರತ್ರಿಕವಾದ ದೊಡ್ಡಫಲವು ಪ್ರಾಪ್ತವಾಗತಕ್ಕದ್ದದೆ ಎಂದು ದೇವಪ್ರೇಮಿಯು ತಿಳಿಯುತ್ತಾನೆ.)

## ಶಿದ್ಧಪುರದ ಶಿಲಾಲೇಖವು.

೨ ಮೇಲ್ಕಂಡ ಬರಹಗಳೊಳಗಿನ ಪೂರ್ವಭಾಗದಲ್ಲಿ ಹೇಳಿದ ಅಶೋಕರಾಜನ ಕಲಿಂಗ ದೇಶದ ಕಾಳಗವು ಮುಗಿದ ಬಳಿಕ ಕಾಳಗ ಮಾಡಿದ ಬಗ್ಗೆ ಅವನಿಗೆ ಪಶ್ಚಾತ್ತಾಪವಾಯಿತು. ಅಗ್ಗೆ ಅವನು ಧರ್ಮ ಜ್ಞಾನ ಸಂಪಾದನಕ್ಕಾಗಿ ಎಂಥ ಪ್ರಯತ್ನಮಾಡಿದನೆಂಬರು ಮುಂದಿನ ಬರಹದ ಮೇಲಿಂದ ಕಂಡುಬರುವದು.

ದೇವಾನಂ ಪಿಯೆ ಅಣಾಪಯಿತಿ। ಅಧಿಕಾನಿ ಅಡತಿಯಾನಿ ವಸಾನಿಯಂ ಹಕಂ ಉಪಾಸಕೆ, ನೋತು ಖೋಬಾಢಂ ಪಕಂತೆ ಹುಸಂ

ಏಕಂ ಸವಚ್ಛರಂ ಸಾತಿರೇಕೆತು ಖೋಸವಚ್ಛರಂಯಂ ಮಯಾ ಸಂಘೆ ಉಪ ಯಿತೆ, ಬಾಢಂ ಚಮೇಪಕಂತೆ। ಇಮಿನಾ ಚು ಕಾಲೇನ ಅಮಿಸಾ ಸಮಾನಾ ಮುನಿಸಾ ಜಂಬುದೀಪಸೆ ಮಿಸಾದೇವೇಹಿ (ಕಟಾ)। ಪಕ ಮಸ ಹಿ ಇಯಂಫಲೆ, ನೋಹೀಯಂ ಸತ್ಯೆಮಹತ್ವೇನೇವಪಾಪತವೆ। ಕಾಮಂತು ಖೋಖುದ ಕೇನಪಿ ಪಕಮ ಮಾನೇನ ವಿಪುಲೆಸ್ವಗೆ ಸಕ್ಯೆ ಆರಾಧಯಿತವೆ। ಏತಾಯಥಾಯ ಇಯಂ ಸವಣೆ ಸಾವಾಪತೆ ಯಥಾ ಖುದಕಾ ಚಮಹತ್ವಾಚಂ ಇಮಂ ಪಕಮೇಯುತಿ ಅಂತಾಚಮೋ ಜಾನೆಯು, ಚಿರಠಿತಿಕೆ ಚ ಇಯಂ ಪಕಮೆಹೋತು।"

ದೇವಪ್ರೇಮಿಯು ಆಜ್ಞೆ ಮಾಡುವದೇನೆಂದರೆ, ನನಗೆ (ಬುದ್ಧನ) ಉಪಾಸಕನಾಗಿ ಎರಡೂವರೆ ವರ್ಷಕ್ಕಿಂತ ಹೆಚ್ಚುಕಾಲವಾಯಿತು; ಆದರೆ ಒಂದು ವರ್ಷದ ವರೆಗೆ ನಾನು ಎಷ್ಟು ಕಸುವಿನ ಪ್ರಯತ್ನ ಮಾಡಲಿಲ್ಲ; ಒಂದು ವರ್ಷವಾದ ಬಳಿಕ ನಾನು (ಬೌದ್ಧ) ಸಂಘದಲ್ಲಿ ಪ್ರವೇಶ ಮಾಡಿ ದೆನು. ಮತ್ತು ಕಸುವಿನಿಂದ ಪ್ರಯತ್ನಮಾಡಿದೆನು. ಈ ಅವಧಿಯಲ್ಲಿ ಎಲ್ಲ ಭಾರತ ವರ್ಷದಲ್ಲಿಯೂ ನಿಜವೆಂದು ತಿಳಿಯಲ್ಪಟ್ಟ ದೇವರು ಅವರ ಭಕ್ತರ ಸಹವಾಗಿ ಸುಳ್ಳಾಗಿರುವವೆಂದು ನನ್ನ ಮನವರಿಕೆಯಾ ಯಿತು. ಇದು ಪ್ರಯತ್ನದ ಫಲವದೆ, ಇದು ಶ್ರೀಮಂತಿಕೆಯಿಂದ ದೊರೆ ಯುವದೆಂದಲ್ಲ; ಪ್ರಯತ್ನ ಮಾಡಿದರೆ ಬಡವರಿಗೂ ನಿಶ್ಚಯದಿಂದ ಉತ್ತ ಮವಾದ ಸ್ವರ್ಗಸುಖವನ್ನು ಸಂಪಾದಿಸಲಿಕ್ಕೆ ಬರುತ್ತದೆ. ಬಡವರೂ ಶ್ರೀಮಂತರೂ ಹೀಗೆ ಯತ್ನಮಾಡತಕ್ಕದ್ದಲ್ಲ. ನೆರೆಹೊರೆಯ ರಾಜ್ಯದೊಳ ಗಿನ ಜನರಿಗೆ ಈ ಸಂಗತಿಯು ತಿಳಿಮುಬರಬೇಕು. ಮತ್ತು ಈ (ನನ್ನ) ಪ್ರಯತ್ನವು ಚಿರಕಾಲ ಉಳಿಯಬೇಕೆಂಬದರ ಸಲುವಾಗಿ ಈ (ಮೇಲಿನ) ಸಂಗತಿಯನ್ನು ಪ್ರಸಿದ್ಧಮಾಡಿದ್ದೇನೆ.

## ೧ ನೇ ಶಿಲಾಶಾಸನ.

೨ ಮೇಲಿನ ಲೇಖದಲ್ಲಿ ಹೇಳಿದಂತೆ ಅಶೋಕನು ಪೂರ್ಣವಾಗಿ ಬೌದ್ಧನಾದ ಬಳಿಕ ಪಶುಹಿಂಸೆಯನ್ನು ನಿಲ್ಲಿಸುವ ಮೊದಲನೇ ಪ್ರಯತ್ನ ಮಾಡಿದನು. ಎಂಬದು ಕೆಳಗಿನ ಬರಹದಿಂದ ವಿದಿತವಾಗುವದು.

" ಇಯಂಧಂಮಲಿಪಿ ದೇವಾನಂ ಪ್ರಿಯೆನ ಪ್ರಿಯದಸಿನಾ ರಾಜ್ಞಾ ಲಿಖಾಪಿತಾ। ಇಧನ ಕಿಂಚಿಜೀವಂ ಆರಭಿತ್ವಾ ಪ್ರಜೂ ಹಿತವ್ಯಂ ನಚ ಸಮಾಜೋಕಾತವ್ಯೋ। ಬಹುಕಂ ಹಿ ದೋಸಂ ಸಮಾಜಮ್ಹಿ ಪಸತಿ

ದೇವಾನಂ ಪ್ರಿಯೊನ ಪ್ರಿಯದಸಿರಾಜಾ । ಪುರಾಮಹಾನಹ್ಮಿ ದೇವಾನಂ ಪ್ರಿಯನ ಪ್ರಿಯದಸಿನೋ ರಾಜೋ ಅನುದಿವಸಂ ಬಹೂನಿ ಪಾಣಸತ ಸಹಸ್ರಾನಿ ಆರಂಭಿಸು ಸೂಪಾಥಾಯ । ಸೇ ಅಜಯದಾ ಅಯಂ ಧಮ್ಮ ಲಿಪೀಲಖಿತಾ (ತದಾ) ತೀ ಏವಪಾಣಾ ಆರಭರೇಸೂ ಪಾಥಾಯದ್ವೇ ಮೋರಾ ಏಕೋ ಮಗೋ। ಸೋಪಿಮಗೋ ನಧುವೋ। ಎತೇ ಏತ್ರೀ ಪ್ರಾಣಾಪಭಾನ ಆರಭಿಸರೇ ॥

ಈ ಧಾರ್ಮಿಕ ಬರಹವನ್ನು ದೇವ ಪ್ರೇಮಿ ಪ್ರಿಯದರ್ಶಿ ರಾಜನು ಬರಿಸಿದನು. ಯಾವ ಪ್ರಾಣಿಯನ್ನೂ ಕೊಂದು ಯಜ್ಞಮಾಡಬಾರದು, ಮತ್ತು ಮದ್ಯಮಾಂಸದಿಂದ್ಯುಕ್ತವಾದ ಮೇಜವಾನಿಯನ್ನು ಮಾಡಬಾರದು. ಯಾಕಂದರೆ, ಇಂಥ ಮೇಜವಾನಿಯಲ್ಲಿ ಎಷ್ಟೋ ದೋಷಗಳು ಇರುತ್ತವೆಂದು ದೇವಪ್ರೇಮಿ ಪ್ರಿಯದರ್ಶಿ ರಾಜನಿಗೆ ಅನ್ನಿಸುತ್ತದೆ. ಪೂರ್ವದಲ್ಲಿ ದೇವಪ್ರೇಮಿಯಾದ ಪ್ರಿಯದರ್ಶಿ ರಾಜನ ಪಾಕಶಾಲೆಯಲ್ಲಿ ಭೋಜನದ ಸಲುವಾಗಿ ಪ್ರತಿದಿವಸ ಸಾವಿರಾರು ಪ್ರಾಣಿಗಳು ಕೊಲ್ಲಲ್ಪಡುತ್ತಿದ್ದವು; ಆದರೆ ಯಾವಾಗ್ಗೆ ಈ ಧಾರ್ಮಿಕ ಲೇಖವು ಬರೆಯಲ್ಪಟ್ಟಿತೋ ಆವಾಗ್ಗೆ ಊಟದ ಸಲುವಾಗಿ ಮೂರೇ ಪ್ರಾಣಿಗಳು ಕೊಲ್ಲಲ್ಪಡುತ್ತವೆ. (ಅವು) ಎರಡು ನವಿಲುಗಳು ಒಂದು ಮೃಗ (ಚಿಗರಿ) ಆ ಮೃಗವನ್ನಾದರೂ ಪ್ರತಿದಿವಸ ಹೊಡೆಯುವದಿಲ್ಲ; ಇನ್ನು ಮುಂದೆ ಈ ಮೂರು ಪ್ರಾಣಿಗಳಾದರೂ ಕೊಲ್ಲಲ್ಪಡಲಾರವು.

## ೨ ನೇ ಶಿಲಾಶಾಸನ.

೪ ಮಾನವರ ಮತ್ತು ಪಶುಗಳ ಸುಖದ ಸಲುವಾಗಿ ಅಶೋಕನು ಔಷಧಾಲಯಗಳನ್ನು ಸ್ಥಾಪಿಸಿದನು. ದಾರಿಗಳಿಗೆ ಗಿಡಗಳನ್ನು ಹಚ್ಚಿಸಿದನು. ಮತ್ತು ಭಾವಿಗಳನ್ನು ತೋಡಿಸಿದನು.

"ಸರ್ವತ ವಿಜಿತಹ್ಮಿ ದೇವಾನಂ ಪ್ರಿಯಸ ಪ್ರಿಯದಸಿನೋರಾಜೋ ಏವಂ ಪಚಂತೇ ಸುಯಥಾ ಜೋಡಾಪಾಡಾ ಸತಿಯಪುತೋ ಕೇತ[ರ] ಪುತೋ ಆ ತಂಬಪಂಣೀ ಅಂತಿಯಕೋಯೋನರಾಜಾ, ಯೇವಾಪಿ ಅಂತಿಯಕಸ ಸಾಮೀಪಂ ರಾಜಾನೋ ಸರ್ವತ್ರ ದೇವಾನಂ ಪ್ರಿಯಸ ಪ್ರಿಯದಸಿನೋರಾಜೋದ್ವೆ ಚಿಕೀಛಾಕತಾ, ಮನುಸಚಿಕೀಛಾಚ ಪಸುಚಿಕೀಛಾಚ। ಓಸಧಾನಿ ಯಾನಿ ಮನಸೋಪಗಾನಿ ಚ ಪಸೋಪಗಾನಿಚ ಯತ ಯತನಾಸ್ತಿ ಸರ್ವತ್ರ ಹಾರಾಪಿತಾನಿಚ ರೋಪಾಪಿತಾನಿಚ। ಪಂಥೇ

ಸುಕೂಪಾಚ ಖಾನಾಪಿತಾ ವ್ರಛಾಚ ರೋಪಾಪಿತಾ ಪರಿಭೋಗಾಯ ಪಸು ಮನು ಸಾನಂ।

ದೇವಪ್ರೇಮಿ ಪ್ರಿಯದರ್ಶಿ ರಾಜನ ರಾಜ್ಯದಲ್ಲಿ ಅದರಂತೆ ಚೋಡ, ಪಾಂಡ್ಯ ಸತಿಯ ಪುತ್ರ ಕೇರಲಪುತ್ರ ತಾಮ್ರಪರ್ಣೀ (ಸಿಂಹಲದ್ವೀಪ) ಇಲ್ಲಿಯವರೆಗೆ ಅಂತಿಯಕ (*Antiochos*) ರಾಜರ ರಾಜ್ಯದಲ್ಲಿ ಮತ್ತು ಅವರ ಸಮೀಪದ ರಾಜರ ರಾಜ್ಯದಲ್ಲಿ ಎಲ್ಲ ಕಡೆಗೂ ದೇವಪ್ರೇಮಿ ಪ್ರಿಯದರ್ಶಿ ರಾಜನು ಪಶುಗಳಿಗೂ ಮಾನವರಿಗೂ ಕೂಡಿಯೇ ಔಷಧ ದೊರೆಯುವಂತೆ ವ್ಯವಸ್ಥೆ ಮಾಡಿದ್ದನು. ಪಶುಗಳ ಮತ್ತು ಮಾನವರ ಉಪಯೋಗ ಬೀಳತಕ್ಕ ವನಸ್ಪತಿಗಳು ದೊರೆಯದಿದ್ದಲ್ಲಿ ಅವುಗಳನ್ನು ಬೇರೆ ಸ್ಥಳಗಳಿಂದ ತರಿಸಿ ಹಚ್ಚಿಸಿದನು. ಪಶುಗಳ ಮತ್ತು ಮಾನವರ ಸುಖಕ್ಕಾಗಿ ದಾರಿಯಲ್ಲಿ ಬಾವಿ ತೋಡಿಸಿದನು ಮತ್ತು ಗಿಡಗಳನ್ನು ಹಚ್ಚಿಸಿದನು.

## ೩ ನೇ ಶಿಲಾಶಾಸನ.

೫. ಧರ್ಮಪ್ರಸಾರದ ಸಲುವಾಗಿ ಅಶೋಕರಾಜನು ತನ್ನ ಅಧಿಕಾರಿಗಳಿಗೆ ಕೊಟ್ಟ ಅಪ್ಪಣೆಯು:—

"ದೇವಾನಂ ಪ್ರಿಯೋಪ್ರಿಯದಸಿ ರಾಜಾ ಏವಂ ಆಹ। ದ್ವಾದಸ ವಸಾಭಿಸಿತೇನಮಯಾ ಇದಂ ಆಜ್ಞಾಪಿತಂ। ಸರ್ವತ ವಿಜಿತೆ ಮಮಯು ತಾಚ ರಾಜೂಕೇಚ ಪ್ರಾದೇಸಿಕೇಚ ಪಂಚಸು ಪಂಚಸು ವಾಸೇಸು ಅನುಸಂಯಾನಂ ನಿಯಾತು ಏತಾ ಏವ ಅಥಾಯ ಇಮಾಯ ಧಂಮಾನುಸಸ್ಟಿಯಾ ಯಥಾ ಅಜ್ಞಾಯಪಿ ಕಂಮಾಯ। ಸಾಧು ಮಾತರಿ ಚ ಪಿತರಿಚ ಸುಸ್ರುಸಾ ಮಿತಸಂಸ್ತುತ ಞಾತೀನಂ ಬಾಹ್ಮಣ ಸಮಣಾನಂ ಸಾಧು ದಾನಂ। ಪ್ರಾಣಾನಂ ಸಾಧು ಅಗಾರಂಭೋ। ಅಪವ್ಯಯತಾ ಅಪಮಂಡತಾ ಸಾಧು.।

ದೇವಪ್ರಿಯ ಪ್ರಿಯದರ್ಶಿರಾಜನು ಹೇಳುವದೇನಂದರೆ:— ರಾಜ್ಯಾಭಿಷೇಕಕ್ಕೆ ಹನ್ನೆರಡು ವರ್ಷಗಳಾದ ಬಳಿಕ ನಾನು ಅಜ್ಞಾಪಿಸಿದ್ದು ಏನಂದರೆ, ಪ್ರಾಂತದ ಅಧಿಕಾರಿ ಜಿಲ್ಲೆಯ ಅಧಿಕಾರಿ ಮತ್ತು ಅವರ ಕೈಕೆಳಗಿನ ಅಧಿಕಾರಿಗಳು ಉಳಿದ ಕೆಲಸದ ಸಲುವಾಗಿ ತಿರುಗಾಡುತ್ತಿರುವಂತೆ ಈ ಕಾರ್ಯಕ್ಕಾಗಿಯೂ ಅಂದರೆ ಧರ್ಮೋಪದೇಶ ಮಾಡುವದಕ್ಕಾಗಿ ಐದೈದು

ವರ್ಷಕ್ಕೊಮ್ಮೆ ತಿರುಗಾಡಲಿಕ್ಕೆ ಹೊರಡಬೇಕು. (ಆ ಧರ್ಮೋಪದೇಶವು ಹೇಗಿರಬೇಕೆಂದರೆ) ತಾಯಿತಂದೆಗಳ ಸೇವೆಮಾಡುವದು ಪುಣ್ಯ ಕಾರ್ಯ ವಾಗಿದೆ. ಇಷ್ಟಮಿತ್ರ ಆಪ್ತೇಷ್ಟರು ಬ್ರಾಹ್ಮಣರ ಮತ್ತು ಶ್ರಮಣ ಇವರಿಗೆ ಸಹಾಯ ಮಾಡುವದು ಪುಣ್ಯಕಾರ್ಯವಾಗಿದೆ. ಪ್ರಾಣಿಗಳ ವಧಮಾಡ ದಿರುವದು ಪುಣ್ಯಕರ್ಮವಾಗಿದೆ. ಲೂಟಿಮಾಡದೆ ಸ್ವಲ್ಪದರಲ್ಲಿ (ಸ್ವಲ್ಪ ವಸ್ತುಗಳಿಂದ) ಸಂತುಷ್ಟರಾಗಿರುವದು ಪುಣ್ಯಕರ್ಮವಾಗಿದೆ.

## ೫ ನೇ ಶಿಲಾಶಾಸನ.

## ೬ ಅಶೋಕನು ಧರ್ಮಾಧಿಕಾರಿಗಳನ್ನು ನೇಮಿಸಿದನು.

"ಅತಿಕಾತಂ ಅಂತರಂ ನ ಭೂತಪುರ್ವಂ ಧಂಮಮಹಾಮಾತಾ ನಾಮ। ತಮಯಾತೇದ ಸವಸಾಭಿಸಿತೇನ ಧಂಮಮಹಾಮಾತಾಕತಾ ತೆ ಸವಪಾಸಂಡೇಸು ವ್ಯಾಪತಾ ಧಂಮಾಧಿಷ್ಟಾನಾಯ ಚ ಧಂಮವಧಿ ಯಾಹಿತ ಸುಖಾಯೇಚ ಧಂಮಯುತಸ। ಯೋನಕಂಬೋಜ ಗಂಧಾ ರಾನಂ ರಸ್ತಿರೌನಂ ಪೇತಿನಿಕಾನಂ ಯೇ ವಾಪಿ ಅಂಜ್ಞೇ ಅಪರಂತಾ। ಭಟಮಯೇಸು ಬ್ರಮಣಿ ಭೇಸು ಅನಥೇಸು ವುಢೇಸು, ಹಿತಸುಖಾಯೇ ಅಪಲಿ ಬೋಧಾಯೆ ವ್ಯಾಪತಾ।

ಹಿಂದಕ್ಕೆ ಧರ್ಮಮಹಾಮಾತ್ರವೆಂಬ ಹೆಸರಿನ ಅಧಿಕಾರಿಗಳು ಎಂದೂ ಇದ್ದಿಲ್ಲ. ಅವರನ್ನು ನಾನು ನನ್ನ ಅಭಿಷೇಕವಾದ ಹದಿಮೂರು ವರ್ಷಗಳಾದ ಬಳಿಕ ನೇಮಿಸಿದೆನು. ಧರ್ಮದ ಪಾಲನವಾಗಬೇಕು, ಧರ್ಮದ ಬೆಳವಣಿಗೆಯಾಗಬೇಕು, ಮತ್ತು ಧಾರ್ಮಿಕ ಜನರ ಕಲ್ಯಾ ಣವಾಗಬೇಕೆಂಬ ಹೇತುವಿನಿಂದ ಆ ಧರ್ಮ ಮಹಾಮಾತ್ರರ ಯೋಜ ನೆಯನ್ನು ಎಲ್ಲ ಧರ್ಮಪಂಥಗಳ ಸಾಧುಗಳ ಮೇಲೆ ಮಾಡಿರುತ್ತೇನೆ. ಯೋನ, ಕಾಂಬೋಜ, ಗಾಂಧಾರ, ರಾಷ್ಟ್ರಿಕ ಮತ್ತು ಪೇತಿನಿಕ ಎಂಬ ದೇಶಗಳಲ್ಲಿ ಅವರ ಯೋಜನೆಮಾಡಿರುತ್ತೇನೆ. ಆಳುಮನುಷ್ಯರು, ಬ್ರಾಹ್ಮ ಣರು, ಅನಾಥರು, ವೃದ್ಧರು, ಮುಂತಾದ ಜನರ ಸುಖದ ಸಲುವಾಗಿ ಮತ್ತು ಅವರಿಗೆ ತ್ರಾಸವಾಗಬಾರದೆಂಬ ಬಗ್ಗೆ ಇವರ (ಧರ್ಮಮಾತ್ರ ಗಳ) ಯೋಜನೆ ಮಾಡಲ್ಪಟ್ಟಿದೆ.

## ೬ ನೇ ಶಿಲಾಶಾಸನ.

೭ ಎಲ್ಲ ಜನರ ಹಿತವೆಂಬುದೇ ಅಶೋಕನ ಕರ್ತವ್ಯಕರ್ಮವು. ಆದರಲ್ಲಿ ಅವನು ಯಾವಾಗಲೂ ತತ್ಪರನಾಗಿರುತ್ತಿದ್ದನು.

" ಅಂತಿಕಂತಂ ಅಂತರಂ ನಭೂತಪುರ್ವಂ ಸವಾಕಾಲಂ ಅಥಕಂ ಮೇವಾಪಟಿವೇದನಾವಾ । ತಂ ಮಯಾ ಏವಂ ಕತಂ । ಸನೇ ಕಾಲಿಭುಂ ಜಮಾನಸಂ ಮೇ ಓರೋ ಧನಹ್ಮಿ । ಗಭಾ ಗಾರಹ್ಮಿ, ವಚಹ್ಮಿ, ವಾ ವಿನೀತಹ್ಮಿ ಚ ಉಮಾನೇ ಸುಚ ಸವತ್ರ ಪಟಿವೇದಕಾ ಸ್ಥಿತಾ, ಅಥೇ ಮೇ ಜನಸ ಪಟಿವೆದೇಥ ಇತಿಃ । ಸರ್ವತ್ರ ಚ ಜನಸ ಅಥೇ ಕರೋಮಿ । ..............ನಾಸ್ತಿಹಿಮೆತೋಸೋ ಉಸ್ಟಾನಹ್ಮಿ ಅಥ ಸಂತೀರಣಾಯ ವಾ । ಕತನ್ವಮತೆ ಹಿಮೆ ಸರ್ವಲೋಕಹಿತಂ । ತಸಚಪುನ ಎಸ ಮೂಲೇ ಉಸ್ಟಾನಂ ಚ ಅಥ ಸಂತೇರಣಾಚ । ನಾಸ್ತಿಹಿ ಕಂಮತರಂ ಸರ್ವಲೋಕಹಿತತ್ಪಾ । ಯಂಚ ಕಿಂಚಿಪರಾಕ್ರಮಾಮಿ ಅಹಂ, ಕಿಂತಿ? ಭೂತಾನಂ ಆನಣಂ ಗಛೇಯಂ । ಇಧ ಚತಾನಿ ಸುಖಾಪಯಾಮಿ ಪರತ್ರಚ ಸ್ವಗಂ ಆರಾಧಯಂತು ।

ಹಿಂದಕ್ಕೆ ಎಲ್ಲ ಪ್ರಸಂಗಗಳಲ್ಲಿ ಅರ್ಜಿಗಳ ನಿಕಾಲಿ ಮಾಡುವದು ಅಥವಾ ಜನರ ಅರ್ಜಿಗಳನ್ನು ಕೇಳಿಕೊಳ್ಳುವದು, ಎಂಬಿವು ಎಂದೂ ಆಗಲಿಲ್ಲ. ಎಲ್ಲ ಕಾಲದಲ್ಲಿಯೂ ನಾನು ಊಟಮಾಡುವಾಗ ಅಂತಃ ಪುರದಲ್ಲಿರುವಾಗ ಮಲಗಿದಾಗ ಬಹಿರ್ದೇಶಕ್ಕೆ ಹೋದಾಗ ಉಪದೇಶ ವನ್ನು ಕೇಳುವಾಗ ವನದಲ್ಲಿದ್ದಾಗ ಇವೆಲ್ಲ ಸ್ಥಳಗಳಲ್ಲಿಯೂ ಜನರ ಅರ್ಜಿ ಗಳು ನನಗೆ (ಬಹುಬೇಗನೆ) ತಿಳಿಯಬೇಕೆಂಬ ಉದ್ದೇಶದಿಂದ ದೂತರ ನ್ನಿಟ್ಟಿರುತ್ತೇನೆ. ಎಲ್ಲ ಸ್ಥಳಗಳಲ್ಲಿಯೂ ನಾನು ಅರ್ಜಿಯ ನಿರ್ಣಯ ಮಾಡುತ್ತೇನೆ. ಯಾಕಂದರೆ, (ಜನರ ಹಿತಮಾಡುವ) ಕಾರ್ಯಮಾಡು ವದು ನನ್ನಿಂದ ಎಂದೂ ಪೂರ್ಣ ಆಗುವದಿಲ್ಲ; ಎಲ್ಲ ಜನರ ಹಿತಸಾ ಧಿಸುವದೇ ನನ್ನ ಮುಖ್ಯ ಕರ್ತವ್ಯವಾಗಿದೆ. ಮತ್ತು ಅದನ್ನು ಸಾಧಿ ಸುವ ಕಾರ್ಯವನ್ನೂ ಜನರ ಅರ್ಜಿಗಳ ವ್ಯವಸ್ಥೆಯನ್ನೂ ಮೊದಲು ಮಾಡಬೇಕಾಗುತ್ತದೆ. ಸರ್ವ ಪ್ರಾಣಿಗಳ ಹಿತ ಸಾಧಿಸುವದರ ಹೊರತು ಎರಡನೇ ಮಹತ್ವದ ಕಾರ್ಯವಿಲ್ಲ, ಮತ್ತು ನಾನು ಪ್ರಯತ್ನಮಾಡುವ ದರ ಉದ್ದೇಶವು ಪ್ರಾಣಿಮಾತ್ರದ ಋಣದಿಂದ ಮುಕ್ತನಾಗಬೇಕೆಂಬುವ ದಕ್ಕಾಗಿ ಇಹಲೋಕದಲ್ಲಿ ಅವರನ್ನು ಸುಖಿಗಳನ್ನಾಗಿ ಮಾಡಬೇಕೆಂಬು ದಾಗಿಯೂ ಪರಲೋಕದಲ್ಲಿ ಅವರಿಗೆ ಮುಕ್ತಿಯು ದೊರೆಯುವದರ ಸಲು ವಾಗಿಯೂ ಪ್ರಯತ್ನಮಾಡುತ್ತೇನೆ.

# ಪಾದೋದಕ.

(ಲೇಖಕರು: ಶ್ರೀ ಬ್ಯಾಳಿ ಕಲ್ಯಾಣಪ್ಪನವರು ಬಿ. ಎ. ಶ್ರೀ ಸಿದ್ಧೇಶ್ವರ ಹೈಸ್ಕೂಲ ವಿಜಾಪುರ.)

---

ಹರನುತ್ತಮಾಂಗದಿಂದಿಳಿದು ಬಂದಳೊಗಂಗೆ ।
ಪರಮದಿವ್ಯಜ್ಞಾನ ರಸವಾಗಿ ಪರಿಯುವದೊ
ಪರಶಿವನ ಚಳಿಬಿಟ್ಟ ಕರಗಿ ನೀರಾಗಿಹುದೋ ಕ್ಷೀರಾಬ್ಧಿ ಜಲ ಮಾಯಿತೋ ।
ಸುರಲೋಕದಾ ಸುಧೆಯು ಭುವನಕ್ಕೆಳಿಸಿದುದೆನೆ
ಗುರುಲಿಂಗಜಂಗಮದ ಕಾರುಣ್ಯರಸವಿಳಿದು
ಚರಣದಿಂ ಪೊರಮಟ್ಟು ಪರಿವಚ್ಚರಿಯನೆಂತು ನಾಂ ಬಣ್ಣಿಸಲು ಸಾಧ್ಯಮೇ ॥

ಪಾದೋದಕವು ಅಷ್ಟಾವರಣಗಳಲ್ಲಿ ನಾಲ್ಕನೆಯದು. ಪಾದೋದಕ ವೆಂದರೆ ಗುರುಲಿಂಗಜಂಗಮದಿಂದಾದ ಪವಿತ್ರೋದಕವು. ಅವುಗಳಿಗೆ ಸಂಬಂಧಪಟ್ಟ ಲಿಂಗಶಕ್ತಿಯು ಜಲರೂಪಧರಿಸಿ ಪಾದದಿಂದ ಪೊರಮಟ್ಟು ಭಕ್ತರನ್ನು ಪುನೀತರನ್ನಾಗಿ ಮಾಡುವದು. ಪರಶಿವನ ಶಿರದಲ್ಲಿರುವ ಜ್ಞಾನ ಗಂಗೆಯು ಹೃದಯದಲ್ಲಿ ವಾಸಮಾಡಿಕೊಂಡಿರುವ ವಿಷ್ಣುವಿನ ಪಾದ ದಿಂದ ಕರುಣಾರಸವಾಗಿ ಹೊರಬಿದ್ದಿರುವದು. ಪರಶಿವನೆಂದರೆ ಜ್ಞಾನದ ಕುರುಹು. ವಿಷ್ಣುವೆಂದರೆ ಭಕ್ತಿಯ ಚಿಹ್ನ. ಮೇಲಿನಿಂದ ಕೆಳಗೆ ಹರಿ ಯುವದು ನೀರಿನ ಸಹಜವಾದ ಧರ್ಮವು. ಆ ಪ್ರಕಾರ ಅದು ಮೊದಲು ಮಸ್ತಕದಲ್ಲುದಯಿಸಿ ಹೃದಯದಲ್ಲಿಳಿದು ಅಲ್ಲಿಂದ ಮುಂದೆ ಪಾದದೊಳ ಗಿಂದ ಹೊರಬೀಳುವದು. ಈ ಮನುಷ್ಯದೇಹವೆಂಬ ವೃಕ್ಷದಲ್ಲಿ ಶಿರಸ್ಸೆಂ ಬುದೇ ಮೂಲವು. ಹೃದಯವೆಂಬುದೇ ರಸಾತ್ಮಕ ದ್ರವ್ಯವು. ಹಸ್ತಪಾದ ಗಳ ತುದಿಯೇ ಕುಡಿಯು. ಕುಡಿಯು ಕೋಮಲವಾದುದೂ ಪ್ರೀತ್ಯಾ ಸ್ಪದವಾದುದೂ ಆಗಿರುವದರಿಂದ ಜನರು ಬೊಡ್ಡೆ ಬೇರುಗಳನ್ನು ಹಿಡಿ ಯದೆ ಕುಡಿಯನ್ನು ಮುಟ್ಟಿ ಮುದ್ದಾಡುವರಲ್ಲದೇ ? ನೇತ್ರಗಳಲ್ಲುದಿಸಿದ ಕರುಣಾರಸವೆಂಬ ವಿದ್ಯುಚ್ಛಕ್ತಿಯು ಪಾದಾಗ್ರದಲ್ಲಿ ಹೊರಚಿಮ್ಮುವದು. ಆ ಕರುಣರಸವನ್ನೇ ದ್ರವರೂಪವಾದ ಪಾದೋದಕವೆಂದು ಭಾವಿಸಿ ವೀರಶೈವರು ಸೇವಿಸುವರು. ಉಷ್ಣತೆಯಿಂದ ಕಣ್ಣುಗಳಿಗೆ ನೋವಾಗಿ

ಅವು ಕೆಂಪಗಾಗಿದ್ದರೆ ಕಾಲಿಗೆ ಔಡಲ ಎಣ್ಣೆಯನ್ನು ಹಚ್ಚಿ ತಿಕ್ಕುವರು. ಅದರಿಂದ ಕಣ್ಣಿಗೆ ತಂಪು ಹುಟ್ಟುವದು. ಆದರೆ ಔಡಲೆಣ್ಣೆಯನ್ನು ಕಣ್ಣಿಗೇಕೆ ಹಚ್ಚಬಾರದು? ನಾವು ಬರಿಗಾಲಿನಿಂದ ಕಲ್ಲುಮುಳ್ಳುಗಳಲ್ಲಿ ಸಂಚರಿಸಿದರೆ ಕಣ್ಣುಗಳಿಗೆ ಹೆಚ್ಚು ಆಯಾಸವಾಗುವದಲ್ಲವೇ? ಇದರಿಂದ ಕಾಲಿಗೂ ಕಣ್ಣಿಗೂ ಏನೋ ಸಂಬಂಧವಿದೆಯೆಂಬದು ಸಿದ್ಧವಾಗುವದಿಲ್ಲವೇ? ಪಂಚಜ್ಞಾನೇಂದ್ರಿಯಗಳಿಗೂ ಪಂಚಕರ್ಮೇಂದ್ರಿಯಗಳಿಗೂ ಪರಸ್ಪರ ಸಂಬಂಧವುಂಟು. ಕಣ್ಣಿಗೂ ಕಾಲಿಗೂ, ಮೂಗಿಗೂ ಕೈಯ್ಯಿಗೂ, ಕಿವಿಗೂ ಮಾತಿಗೂ, ನಾಲಿಗೆಗೂ ಗುದಕ್ಕೂ, ತ್ವಚಕ್ಕೂ ಗುಹ್ಯಕ್ಕೂ ನಿಕಟಸಂಬಂಧವಿದೆ. ನಾವು ಕಣ್ಣಿನಿಂದ ಯಾವ ವಸ್ತುವನ್ನಾದರೂ ಕಂಡರೆ ಕಾಲುಗಳು ಅದನ್ನು ದೊರಕಿಸಲಿಕ್ಕೆ ಮುಂದುವರಿಯುವವು. ಯಾವದಾದರೂ ಸುವಾಸಿಕ ದ್ರವ್ಯವಾಗಲಿ ಪುಷ್ಪವಾಗಲಿ ನಮ್ಮ ದೃಷ್ಟಿಗೆ ಬಿದ್ದರೆ ನಮ್ಮ ಕೈಗಳು ಅವನ್ನೆತ್ತಿ ಮೂಗಿಗೆ ಹಿಡಿಯುತ್ತವೆ. ಯಾರಾದರೂ ಮಾತನಾಡುತ್ತಿದ್ದರೆ ಆ ಮಾತು ಕೇಳಲಿಕ್ಕೆ ನಮ್ಮ ಕಿವಿಗಳು ಹಾತೊರೆಯುವವು. ಗುರುವಿನ ಕೃಪಾದೃಷ್ಟಿಯು ನಮ್ಮ ಮೇಲೆ ಬೀಳುವದರಿಂದ ಯಾವ ಫಲವೋ ಅದೇ ಫಲವು ಗುರುಪಾದೋದಕ ಸೇವನೆಯಿಂದ ಲಭಿಸುತ್ತದೆ. ಗುರುಕೃಪಾದೃಷ್ಟಿಯೂ ಗುರುಪಾದತೀರ್ಥವೂ ಒಂದೇ. ಮೊದಲನೆಯದು ಭಾವವಾಚಕವು; ಎರಡನೆಯದು ವಸ್ತುವಾಚಕವು. ಮೊದಲನೆಯದು ನಮಗೆ ಅನಿಸುತ್ತದೆ ಆದರೆ ಎರಡನೆಯದು ನಮಗೆ ಕಾಣುತ್ತದೆ.

ನಮ್ಮ ಪೂರ್ವಜರು ಪವಿತ್ರವಾದ ಉಳಿದ ಗಾತ್ರಗಳನ್ನುಳಿದು ಮಲಿನ ಪದಾರ್ಥಗಳನ್ನು ತುಳಿದಾಡುವ ಈ ಕಾಲುವೆಗಳಿಗೇಕೆ ಅಷ್ಟು ಮಹತ್ವವನ್ನು ಕೊಟ್ಟಿರಬಹುದು? ಶ್ರೇಷ್ಟವಾದ ವಸ್ತುಗಳಗಿಂತಲೂ ಕನಿಷ್ಟವಾದ ವಸ್ತುಗಳೇಕೆ ಅವರಿಗೆ ಪವಿತ್ರವಾಗಿ ತೋರಿರಬಹುದು? ಇದು ವಿಲಕ್ಷಣವಲ್ಲವೇ? ಎಂಬ ಆಕಾಂಕ್ಷೆಯು ಹೊರಡುವದು. ಇದು ಕೀಳ, ಇದು ಶ್ರೇಷ್ಠ ಎಂಬ ಭಾವನೆಯನ್ನುಳಿದು ಎಲ್ಲವೂ ಸಮಾನವೆಂಬ ಭಾವನೆಯನ್ನು ದೃಢಪಡಿಸಬೇಕೆಂಬ ಉದ್ದೇಶದಿಂದ ಪಾದವನು ಎತ್ತಿ ಹಿಡಿದಿರಬಹುದೇ? ಮನುಷ್ಯನು ತಾನು ಉನ್ನತಾವಸ್ಥೆಗೇರಬೇಕಾದರೆ ಮೊದಲು ಕೀಳಾಗಿ ವರ್ತಿಸಬೇಕೆಂದು ಬಲ್ಲವರು ಹೇಳುವರು. ಕೀಳಿಂಗಲ್ಲದೆ ಹೈನ ಕರೆಯುವದೇ? ಅಂತೆಯೇ ಕೀಳಾದ ಪಾದವನ್ನಾಶ್ರಯಿಸಿ ಏಳ್ಗೆಯನ್ನಿ

ಟ್ಟಿಸಿರಬಹುದೇನು ? ಜ್ಞಾನೇಂದ್ರಿಯಗಳೆಲ್ಲ ಕುಳಿತಲ್ಲಿಯೇ ಕುಳಿತುಕೊಂಡು ತಮ್ಮ ಕೆಲಸಮಾಡುತ್ತಿರುವವು. ಉಳಿದ ಕರ್ಮೇಂದ್ರಿಯಗಳ ಸ್ಥಿತಿಯಾದರೂ ಹಾಗೆಯೇ. ಆದರೆ ಪಾದವು ಮಾತ್ರ ಬಹು ಪರಿಶ್ರಮ ವಹಿಸಿ ಈ ದೇಹವನ್ನೆಲ್ಲ ಹೊತ್ತುಕೊಂಡು ಸಂಚರಿಸುತ್ತಿರುವದರಿಂದ ಆದರ ಉಪಕಾರ ಸ್ಮರಿಸುವದರ ಸಲುವಾಗಿ ಅದನ್ನು ಅಷ್ಟು ವಿಶೇಷವಾಗಿ ಸೇವಿಸುತ್ತಿರಬಹುದೇ? ಪರಮಾತ್ಮನ ಮಸ್ತಕದಿಂದ ಬ್ರಾಹ್ಮಣರೂ, ಭುಜದಿಂದ ಕ್ಷತ್ರಿಯರೂ, ತೊಡೆಯಿಂದ ವೈಶ್ಯರೂ, ಪಾದದಿಂದ ಶೂದ್ರರೂ ಜನಿಸಿದರೆಂದು ಪುರುಷ ಸೂಕ್ತದಲ್ಲಿ ಉಲ್ಲೇಖಿಸಿದೆ. ಶೂದ್ರರು ಜನಾಂಗದ ಶ್ರೇಯಸ್ಸಿಗೆ ಮುಖ್ಯ ಕಾರಣರಾದುದರಿಂದ ಅವರನ್ನು ಬಿಟ್ಟರೆ ಗತಿ ಇಲ್ಲವೆಂದು ತಿಳಿದು ಅವರ ಜನ್ಮಸ್ಥಾನವಾದ ಪಾದವನ್ನು ಬಿಟ್ಟು ಬಿಡದೆ ನಂಬಿಕೊಂಡಿರಬಹುದೇ ? ಶ್ರೀ ಸ್ವಾಮಿ ವಿವೇಕಾನಂದರು ಒಮ್ಮೆ ಹೇಳಿರುವದೇನಂದರೆ "ನಿನ್ನ ಕಣ್ಣುಗಳು ಸ್ತ್ರೀಯರ ಮುಖವನ್ನು ನೋಡಬೇಕೆಂದು ಹಂಬಲಿಸುತ್ತಿದ್ದರೆ ಅಗ್ಗೆ ನೀನು ನಿನ್ನ ದೃಷ್ಟಿಯನ್ನು ಅವರ ಪಾದದ ಕಡೆಗೆ ಹೊರಳಿಸುವದೊಳಿತು." ಆದುದರಿಂದ ಸ್ತ್ರೀಪುರುಷರಲ್ಲಿ ಅನಾಹುತಗಳೇನೂ ಸಂಭವಿಸಬಾರದೆಂದು ಪಾದಕ್ಕೇನೇ ಹೆಚ್ಚು ಪಾವಿತ್ರ್ಯತೆಯನ್ನು ಕಲ್ಪಿಸಿರಬಹುದೇ ? ಪರಮಾತ್ಮನ ಮಹಿಮೆ ಎತ್ತ? ನಮ್ಮ ಯೋಗ್ಯತೆ ಎತ್ತ? ನಾವೆಲ್ಲ ಆತನ ಪಾದ ಧೂಳಿಯು. ಆತನ ಅಸ್ತಿತ್ವವನ್ನರಿಯಲು ನಾವೆಷ್ಟರವರು? ಆತನ ಪಾದಸೇವೆಯೊಂದು ದೊರೆತರೆ ಸಾಕೆಂದು ನಮ್ರಭಾವದಿಂದ ಪಾದವನ್ನವಲಂಬಿಸಿರಬಹುದೇ? ಪಾಶ್ಚಾತ್ಯ ದೇಶಗಳಲ್ಲಿ ಕೈಗಳಿಗೆ ಮಹತ್ವಕೊಟ್ಟು ಪರಸ್ಪರ ಮರ್ಯಾದೆಯನ್ನು ತೋರಿಸಲಿಕ್ಕೆ ಹಸ್ತಾಂದೋಲನ (*Shake hand*) ಮಾಡುವದುಂಟು. ಕೆಲವು ದೇಶಗಳಲ್ಲಿ ಪಶುಗಳಂತೆ ಮೈಗೆ ಮೈಯನ್ನೂ ಹಣೆಗೆ ಹಣೆಯನ್ನೂ ಪ್ರೇಮದಿಂದ ತಿಕ್ಕಾಡುವ ಪದ್ಧತಿಯುಂಟು. ಆದರೆ ನಮ್ಮ ದೇಶದಲ್ಲಿ ಮಾತ್ರ ಯಾವ ಕಾರಣದಿಂದಲೋ ಏನೋ ಪೂಜ್ಯವಸ್ತುಗಳನ್ನು ಕಂಡಕೂಡಲೆ ಪಾದಮುಟ್ಟಿ ನಮಸ್ಕರಿಸುವದಾಗಲಿ ಪಾದತೀರ್ಥವನ್ನು ಪಡೆಯುವದಾಗಲಿ ಒಳ್ಳೇ ಮಂಗಲಕರವಾದ ಕಾರ್ಯಗಳೆಂದು ಗಣಿಸಲ್ಪಟ್ಟಿರುತ್ತವೆ.

ಅತಿಥಿಗಳೂ ಪೂಜ್ಯವಸ್ತುಗಳೂ ಮನೆಗೆ ಬಂದರೆ ಅವರ ಪಾದಪ್ರಕ್ಷಾಲನ ಮಾಡುವ ರೂಢಿಯು ನಮ್ಮ ದೇಶದಲ್ಲಿ ಬಹುಕಾಲದಿಂದ

ಪ್ರಚಾರದಲ್ಲಿರುತ್ತದೆ. ವಿವಾಹಕಾಲದಲ್ಲಿ ಮದುಮಕ್ಕಳ ಪಾದಗಳನ್ನು ತೊಳೆಯುವ ಸಾಂಪ್ರದಾಯವೂ ಉಂಟು. ವೀರಶೈವರು ಪ್ರತಿನಿತ್ಯದ ಕಾರ್ಯಗಳಲ್ಲಿ ಪಾದೋದಕ ಪ್ರಸಾದವನ್ನಾಗಲಿ ಕಡೆಗೆ ಧೂಳ ಪಾದೋದಕವನ್ನಾಗಲಿ ಉಪಯೋಗಿಸುತ್ತಿರುವರು. ನಾವು ಊಟ ಮಾಡುವ ಆಹಾರವು ಪ್ರಸಾದವಾಗಿರುವಂತೆ ನಾವು ಕುಡಿಯುವ ನೀರೇ ನಿಜವಾಗಿ ಪಾದೋದಕವೆಂದೆನಿಸುತ್ತದೆ. ಆಹಾರವನ್ನು ನಾವು ಪವಿತ್ರಭಾವನೆಯಿಂದ ಸೇವಿಸುವಂತೆ, ನೀರನ್ನಾದರೂ ಎಷ್ಟೇ ಪವಿತ್ರಭಾವನೆಯಿಂದ ಕುಡಿಯುವದಾದರೂ ಅವಶ್ಯಕ. ಕೇವಲ ಹಸಿವೆಗಾಗಿ ಆಹಾರವನ್ನೂ ತೃಷೆಗಾಗಿ ನೀರನ್ನೂ ಸ್ವೀಕರಿಸಿದ್ದಾದರೆ ಕೀಳ ಪ್ರಾಣಿಗಳಿಗೂ ನಮಗೂ ಏನೂ ವ್ಯತ್ಯಾಸವಿಲ್ಲದಂತಾಗುತ್ತದೆ. ಆದರೆ ಅದೇ ಅನ್ನಪಾನಾದಿಗಳಲ್ಲಿ ನಮಗೆ ಪವಿತ್ರಭಾವನೆಯುಂಟಾದರೆ ಮಾನವ ಪ್ರಾಣಿಗಳು ಶ್ರೇಷ್ಠರೆಂಬುವ ಮಾತು ಸಾರ್ಥಕವು. ವೀರಶೈವರಲ್ಲದೆ ಬೇರೆ ಯಾರೂ ಅನ್ನಪಾನಾದಿಗಳನ್ನು ಅಷ್ಟು ಪವಿತ್ರಭಾವನೆಯಿಂದ ಕಾಣುವದಿಲ್ಲ. ಪಾದೋದಕ ಪ್ರಸಾದವಾದ ನಂತರ ಮಧ್ಯದಲ್ಲಿ ಫಲಾಹಾರ ಮಾಡುವದಾಗಲಿ, ನೀರು ತೆಗೆದುಕೊಳ್ಳುವದಾಗಲಿ ವೀರಶೈವ ಶಾಸ್ತ್ರದೃಷ್ಟಿಯಿಂದ ನಿಷಿದ್ಧವು. ಕಂಡ ಕಂಡ ಅಪವಿತ್ರ ಸ್ಥಾನಗಳಲ್ಲಿ ಅನ್ನಪಾನಾದಿಗಳನ್ನು ವೀರಶೈವರು ಸರ್ವಥಾ ಮಾಡಲಿಕ್ಕಾಗದು.

ಪಾದೋದಕವು ಎಷ್ಟುವಿಧವಾಗಿವೆ? ಪಾದೋದಕವು ಗುರುಪಾದೋದಕ, ಲಿಂಗಪಾದೋದಕ, ಜಂಗಮಪಾದೋದಕವೆಂದು ತ್ರಿವಿಧವಾಗಿರುವದು. ಗುರುವಿನ ಕರುಣೆಯನ್ನು ಪಡೆದುಕೊಳ್ಳುವದೇ ಗುರುಪಾದೋದಕವು. ಲಿಂಗದಲ್ಲಿ ನಿಷ್ಠೆಯಿಟ್ಟು ಅದರ ಅನುಗ್ರಹ ಪಡೆಯುವದೇ ಲಿಂಗ ಪಾದೋದಕವು. ಜಂಗಮ ಕೃಪೆಯಿಂದ ಜ್ಞಾನಾರ್ಜನೆ ಮಾಡಿಕೊಳ್ಳುವದೇ ಜಂಗಮ ಪಾದೋದಕವು. ಗುರು ಲಿಂಗ ಜಂಗಮದ ಲಾಭವು ನಮಗೆ ಅವರ ಕೃಪೆ ಇಲ್ಲದೆ ದೊರೆಯದು. ನಮಗೆ ವಿದ್ಯೆಯು ಪ್ರಾಪ್ತಿವಾಗಬೇಗಾದರೆ ನಾವು ಮೊದಲು ವಿದ್ಯಾಗುರುವಿನ ಕೃಪೆಗೆ ಪಾತ್ರರಾಗಬೇಕಾಗುತ್ತದೆ. ಈ ಜಗತ್ತಿನಲ್ಲಿ ಯಾವದೇ ವಸ್ತುವಿನ ಪ್ರಾಪ್ತಿಯು ನಮಗಾಗಬೇಕಾದರೆ ಆ ವಸ್ತುವಿನ ಪ್ರೇಮ ಕೃಪೆಗಳು ಅತ್ಯಾವಶ್ಯಕವಾಗಿ ಆಗಬೇಕೆಂಬ ಮಾತು ನಿರ್ವಿವಾದವಾದದ್ದು. ಆದಕಾರಣ ನಾವು ಗುರುಲಿಂಗ ಜಂಗಮರ ಸೇವೆಯನ್ನು ಭಕ್ತಿಪುರಸ್ಸರವಾಗಿ ಮಾಡಿದರೆ

ನವುಗೆ ಅವರ ಕೃಪೆಯುಂಟಾಗುವದು. ಗುರು ಕರುಣೆ ಪಡೆದುಕೊಂಡರೆ ಇಷ್ಟಲಿಂಗಾರ್ಚನೆಯ ವಿಧಾನವನ್ನು ಹೇಳಿಕೊಡುವರು. ಲಿಂಗದ ಕೃಪೆಯನ್ನು ಸಂಪಾದಿಸಿದರೆ ಮೋಕ್ಷಕ್ಕೆ ಕಾರಣವಾದ ಜ್ಞಾನವನ್ನುಂಟು ಮಾಡಿ ಕೊಡುವದು ಜಂಗಮದ ಕಾರುಣ್ಯವನ್ನು ಪಡೆದುಕೊಂಡರೆ ಸಾಕ್ಷಾತ್ ಮೋಕ್ಷವೇ ಲಭಿಸುವದು. ಗುರುವನ್ನು ಬಿಟ್ಟು ಲಿಂಗವಿಲ್ಲ. ಲಿಂಗವನ್ನು ಬಿಟ್ಟು ಜಂಗಮವಿಲ್ಲ; ಜಂಗಮವನ್ನು ಬಿಟ್ಟು ಮೋಕ್ಷವಿಲ್ಲ. ಗುರು ಲಿಂಗ ಜಂಗಮರು ಭೂಮಿ, ವೃಕ್ಷ, ಫಲಗಳಂತಿರುವರು. ಗುರುವೇ ಭೂಮಿ; ಲಿಂಗವೇ ವೃಕ್ಷ; ಜಂಗಮವೇ ಫಲ. ಆದುದರಿಂದ ನಿಜವಾದ ವೀರಶೈವರು ಈ ಮೂರು ಅನರ್ಘ್ಯ ರತ್ನಗಳ ಕಾರುಣ್ಯವನ್ನು ಸರ್ವಥಾ ವರ್ಜಿಸಲಾಗದು. ಪ್ರತಿನಿತ್ಯದಲ್ಲಿಯೂ ಈ ತ್ರಿಪುಟಿಗಳ ಕರುಣೆಯನ್ನು ಹೊಂದಬೇಕು.

ಪಾದೋದಕವನ್ನೇಕೆ ಸೇವಿಸಬೇಕು? ಇದೇ ಪ್ರಶ್ನೆಯನ್ನು ಸ್ವಲ್ಪ ವಿಸ್ತರಿಸಿ ಹೇಳಬೇಕಾದರೆ ಕರುಣವನ್ನೇಕೆ ಪಡೆದುಕೊಳ್ಳಬೇಕು, ಈ ಪ್ರಶ್ನೆಗೆ ಎರಡು ರೀತಿಯಿಂದ ಉತ್ತರವನ್ನು ಕೊಡಬಹುದು. ಕರುಣವನ್ನು ನಮ್ಮ ಇಷ್ಟಾರ್ಥ ಸಾಧನೆಗಾಗಿ ಪಡೆದುಕೊಳ್ಳಬೇಕು. ಅಥವಾ ಕರುಣವನ್ನು ಕರುಣೆಗಾಗಿಯೇ ಪಡೆಯಬೇಕು. ಮೊದಲನೆಯದರಲ್ಲಿ ಫಲಾಪೇಕ್ಷೆ ಇರುವದು. ಎರಡನೆಯದರಲ್ಲಿ ನಿರಪೇಕ್ಷಬುದ್ಧಿಯು ಕಂಡುಬರುವದು. ಫಲಾಪೇಕ್ಷೆಯಾದರೂ ಮೋಕ್ಷಫಲಾಪೇಕ್ಷೆಯಾಗಿರುವದರಿಂದ ಸ್ತುತ್ಯವೇ ಸರಿ. ಆದರೆ ಎರಡನೆಯ ಮಾತಿನ ಬೆಲೆಯು ಅಸಾಧಾರಣವಾದುದು. ಮೋಕ್ಷಕ್ಕಿಂತಲೂ ಕರುಣೆಗೇನೇ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟು ಆಡಿದ ಮಾತು. ಹಸುಗೂಸುಗಳು ಹೆತ್ತಾಯಿಯ ಹಾಲನ್ನೇ ಹಂಬಲಿಸುವಂತೆ ಶಿವಶರಣರು ಯಾವಾಗಲೂ ಗುರುಲಿಂಗಜಂಗಮದ ಪಾದೋದಕವನ್ನೇ ಹಾರೈಸುತ್ತಿದ್ದರು. ಪಾದೋದಕವೇ ಅವರಿಗೆ ಪರಮಮೋಕ್ಷವು. ಬೇರೊಂದು ಮೋಕ್ಷಕ್ಕಾಗಿ ಅವರು ಹೆಣಗಾಡುತ್ತಿರಲಿಲ್ಲ. ಅವರ ಮನೆಯಲ್ಲಿ ಪ್ರತಿನಿತ್ಯ ಗುರುಲಿಂಗಜಂಗಮದಾಸೋಹವೂ ಪಾದೋದಕ ಪ್ರಸಾದವೂ ನಡೆಯುತ್ತಿದ್ದವು. ಗುರುವಾಗಲಿ ಜಂಗಮವಾಗಲಿ ಪಕ್ವಾನ್ನ ಭಿಕ್ಷೆಗಳ ಆಶೆಗಳಿಗಾಗಿ ಶಿಷ್ಯರ ಮನೆಗೆ ಹೋಗುತ್ತಿರಲಿಲ್ಲ. ಹಸುಗೂಸಿಗೆ ಮೊಲೆಯುಣಿಸುವದು ಹೆತ್ತಾಯಿಗೆ ಸಹಜ ಗುಣವಾಗಿರುವಂತೆ ಶಿಷ್ಯರಿಗೆ ಸದ್ಬೋಧಾಮೃತ ಪಾನಮಾಡಿಸುವದು ಗುರುಜಂಗಮರಿಗೆ ಸಹಜಸ್ವಭಾವವಾಗಿದ್ದಿತು. ಅಂತೆಯೇ ಆಗಿನ ಕಾಲದಲ್ಲಿ ಗುರುಶಿಷ್ಯರಲ್ಲಿ ನಿಕಟವಾದ

ಪ್ರೇಮವು ಅಳವಟ್ಟಿದ್ದಿತು. ಶಿಷ್ಯನಾದರೋ ಗುರುಗಳನ್ನು ಕಾಟಕ್ಕಾಗಿ ಕರೆಯಿಸದೆ ತನ್ನ ಮನದ ಹಂಬಲವು ಹೆಚ್ಚಾಗಿ ಗುರುವು ತಾನಾಗಿಯೇ ಬರುವಂತೆ ಮಾಡುತ್ತಿದ್ದನು. ಆದರೆ ಈಗಿನವರು 'ಕರೆಯುವಂತೆ ಕರಯುವೆವು ಬಾರದಂತೆ ಮನಕೊಡು ಶಿವನೆ' ಎಂದು ಬೇಡಿಕೊಳ್ಳುವರು. ಪಾದೋದಕ ಪ್ರಸಾದದ ನೆವದಿಂದ ಗುರುವನ್ನು ಯಥೇಚ್ಛವಾಗಿ ತೃಪ್ತಿಬಡಿಸಿ ಮನೆಗೆ ಕಳುಹಿಸಬೇಕೆಂತಲ್ಲ. ಆದರೆ ಪರ್ಯಾಯದಿಂದ ಸದಾಚಾರ ಸದ್ವಿಷಯಗಳ ಬಗ್ಗೆ ಗುರುಮುಖದಿಂದ ಕೇಳಿಕೊಳ್ಳಬೇಕು. ಗುರುವು ಭಕ್ತನ ಉದ್ಧಾರದ ಬಗ್ಗೆ ಸದ್ಬೋಧವನ್ನು ಮಾಡುತ್ತಿರಬೇಕು. ಪಾದೋದಕ ಪ್ರಸಾದವನ್ನಿಟ್ಟಿದ್ದರ ಉದ್ದೇಶವು ಇದಕ್ಕಾಗಿಯೇ. ಪ್ರತಿನಿತ್ಯವೂ ಗುರೂಪದೇಶದಿಂದ ಪವಿತ್ರಾಚರಣೆಯನ್ನು ಹೊಂದಿ ವರ್ತಿಸುವ ಶಿವಭಕ್ತನಿಗೆಂದಾದರೂ ಕೇಡು ಸಂಭವಿಸುವದುಂಟೇ ಅಥವಾ ಅವನಿಂದೇನಾದರೂ ಕೆಡಕು ಸಂಘಟಿಸುವದು ಶಕ್ಯವೇ? ಈ ಮೇರೆಗೆ ಲಿಂಗ ಕ್ರಿಯಾಚಾರಗಳು ನಿರಂತರವೂ ಸ್ಥಿರವಾಗಿರಲೆಂಬುದಾಗಿ ವೀರಶೈವರು ಪ್ರತಿನಿತ್ಯವೂ ಗುರುಕರುಣೆಯನ್ನು ಪಡೆದುಕೊಳ್ಳುವರು. ಗುರುಕರುಣೆ ಎಂದರೆ ಗುರುವು ಶಿಷ್ಯನ ವೃತ್ತಿಯನ್ನು ನೋಡಿ ಆನಂದಪರವಶನಾಗಿ ಅಶ್ರುಗಳನ್ನುದುರಿಸುವದು. ಗುರುವು ಆನಂದಾಶ್ರುಗಳನ್ನುದುರಿಸಿದರೆ ಶಿಷ್ಯನು ಕೃತಾರ್ಥನಾದನು. ಇನ್ನು ಲಿಂಗಪಾದೋದಕದ ಫಲವೇನು? ಲಿಂಗವನ್ನು ಭಕ್ತಿಯಿಂದ ನೋಡಿ ನೋಡಿ ನಿರ್ಮಲಾಂತಃಕರುಣವು ಉಕ್ಕಿ ಬಂದು ಕಂಬನಿಗಳು ಸುರಿಯಬೇಕು. ಲಿಂಗ ಭಕ್ತಿಯಿಂದ ಸುರಿಸಿದ ಆನಂದಾಶ್ರುಗಳಲ್ಲಿ ಅಪಾರವಾದ ಶಕ್ತಿ ಇರುತ್ತದೆಂಬದನ್ನು ಸರ್ವಥಾ ಮರೆಯಲಾಗದು. ನಮ್ಮ ಅತ್ಯಂತ ಪ್ರಿಯಕರ ವಸ್ತುವು ನಮ್ಮಿಂದಗಲಿದಾಗ ಇಲ್ಲವೆ ಬಹು ದಿವಸ ಕೈ ಬಿಟ್ಟು ಹೋದ ಪ್ರೀತಿಯ ಪದಾರ್ಥವು ಒಮ್ಮಿಂದೊಮ್ಮೆಲೇ ನಮಗೆ ಪ್ರಾಪ್ತವಾದಾಗ ನಮ್ಮ ಹರ್ಷವು ಹೊರಸೂಸಿ ಆನಂದಾಶ್ರುಗಳು ಪುಟಿಯುವವಲ್ಲವೇ? ಅಂತೂ ಒಂದಿಲ್ಲೊಂದು ಕಾರಣದಿಂದ ಮನುಷ್ಯನಿಗೆ ಆನಂದಾಶ್ರುಗಳನ್ನು ಸುರಿಸಲಿಕ್ಕೆ ಬರುತ್ತದೆಂದ ಹಾಗಾಯಿತು. ಆನಂದಾಶ್ರುಗಳನ್ನುದುರಿಸುವಾಗ ಆತ್ಮವು ಎಷ್ಟು ಪವಿತ್ರವಾಗಿರುವದೆಂಬದನ್ನು ನೀವು ಬಲ್ಲಿರೋ? ಅದೇ ಮೇರೆಗೆ ಲಿಂಗದಲ್ಲಿ ನಿರಂತರವಾದ ಪ್ರೇಮವನ್ನಿರಿಸಿ ಪ್ರತಿನಿತ್ಯವೂ ಆನಂದಾಶ್ರುಗಳನ್ನುದುರಿಸುತ್ತಿದ್ದರೆ ಹೃದಯವು ಎಷ್ಟು ಪವಿತ್ರತರವಾಗುವದಂಬದನ್ನು ನೀವೆ ಊಹಿಸಿರಿ. ಜ್ಞಾನಮೂರ್ತಿಯಾದ ಜಂಗಮವು ನುಡಿದಂತೆ ನಡೆದು

ಇದೇ ಜನ್ಮ ಕಡೆಯಾಗಿ ಜಗತ್ತಿಗೆ ಮಾರ್ಗದರ್ಶಕನಾಗಿರುವದರಿಂದ ಅಂಥವನ ಕರುಣಾಕಟಾಕ್ಷೆಯು ನಮ್ಮ ಮೇಲೆ ದಿನಾಲು ಬೀಳುತ್ತಿದ್ದರೆ ನಾವೆಂಥ ಕೃತಾರ್ಥರು? ಈ ಮೇರೆಗೆ ಪ್ರತಿನಿತ್ಯವೂ ನಮ್ಮ ಜೀವಿತ ವನ್ನು ಉದಾತ್ತ ಹಾಗೂ ಪವಿತ್ರಗೊಳಿಸುವ ಗುರುಲಿಂಗ ಜಂಗಮದ ಕರುಣೆಯು ನಮಗೆ ಅತ್ಯಾವಶ್ಯಕವಲ್ಲವೆ? ಒಂದೊಂದೇ ನಮ್ಮ ಜೀವ ವನ್ನು ಪಾವನ ಮಾಡುವದರಲ್ಲಿ ಪರಮ ಸಾಮರ್ಥ್ಯವುಳ್ಳವರಾಗಿರಲು ಮೂರು ಕೂಡಿದರಂತೂ ಕೇಳುವದೇನು?

"ವೀರಶೈವರು ಗುರುಲಿಂಗಜಂಗಮರ ಪಾದೋದಕವನ್ನು ಲಿಂಗ ಕ್ಕೆರೆಯಬಹುದೇ? ಅವರ ಪಾದೋದಕವು ಭಕ್ತಾದಿಗಳಿಗೆ ಶ್ರೇಷ್ಠವಾಗಿರ ಬಹುದು; ಪವಿತ್ರವಾಗಿರಬಹುದು. ಆದರೆ ಪರವಸ್ತುವಾದ ಲಿಂಗಕ್ಕೆಂ ದಾದರೂ ಅದು ಹೆಚ್ಚಿನದಾಗಬಲ್ಲುದೇ? ಗುರುಜಂಗಮ ಪಾದೋದಕ ವನ್ನು ಲಿಂಗಕ್ಕೆರೆಯುವದು ಮಹಾಪಾತಕವಲ್ಲವೇ? ಸುಜ್ಞರೆನಿಸಿಕೊಳ್ಳುವ ವೀರಶೈವರು ಈ ಅಜ್ಞಕಾರ್ಯವನ್ನೇಕೆ ಎಸಗುವರು? ಇದು ಅವರ ಸೌಜನ್ಯಕ್ಕೂ ಸದಾಚಾರಕ್ಕೂ ಸಲ್ಲುವದೇ?" ಎಂದು ಕೆಲವರು ಆಕ್ಷೇ ಪಿಸುವರು. ಈ ಪ್ರಶ್ನೆಯನ್ನು ನಾವು ಸೂಕ್ಷ್ಮವಾಗಿ ವಿಚಾರಿಸೋಣ. ಇದರಲ್ಲಿ ಜ್ಞಾನಕ್ರಿಯೆಗಳ ಸಾಮರಸ್ಯಭಾವವಿದೆ. ಉಚ್ಚ-ನೀಚ ಭಾವ ವಿಲ್ಲ. ಷಟ್‌ಸ್ಥಲದ ಪ್ರಕಾರ ಗುರುಲಿಂಗ ಜಂಗಮರ ಏಕೀಕರಣದಿಂ ದಲೇ ಸ್ಥೂಲ, ಸೂಕ್ಷ್ಮ ಕಾರಣ ಶರೀರಗಳಿಗೆ ಪಾವಿತ್ರ್ಯವು ಒದಗುತ್ತದೆ. ಈ ಭಾವವು ಇದರಲ್ಲಡಗಿದೆ. ಪಾದೋದಕವೆಂದರೆ ಕರುಣಾರಸವಲ್ಲವೇ? ಗುರುಜಂಗಮರ ಪಾದೋದಕವನ್ನು ಲಿಂಗಕ್ಕೆರೆಯುವದೆಂದರೆ ಗುರು ಜಂಗಮರ ಕರುಣೆಯನ್ನು ಲಿಂಗದಲ್ಲಿ ಸಮರಸಗೊಳಿಸುವದೆಂದು ಹೇಳ ಬಹುದು. ಇದರಿಂದ ನಮಗೆ ಹೆಚ್ಚು ಪ್ರಕಾಶಮಾನವಾಗಿಯೂ ಪವಿತ್ರ ತರವಾದುದಾಗಿಯೂ ಕಾಣುವದು. ಬಾಹ್ಯಕೃತಿಗಳು ಆಂತರಿಕ ತತ್ವ ವನ್ನೇ ಪ್ರಕಾಶಗೊಳಿಸುತ್ತವೆ. ಬಾಹ್ಯದಲ್ಲಿ ಲೋಕದ ಮಾನವರಿಗೆ ಗುರುಜಂಗಮದ ಪಾದೋದಕವನ್ನು ಲಿಂಗಕ್ಕೆರೆಯುವದು ಅಸಹ್ಯವಾಗಿ ತೋರಿದರೂ ಅದು ಅಂತರಂಗದಲ್ಲಿ ಉದಾತ್ತ ತತ್ವವನ್ನೊಳಕೊಂಡದ್ದಾ ಗಿರುವದಿಲ್ಲವೇ? ಇದೇ ಮಾತನ್ನೇ ದುರುಳವೇದಾಂತಿಗಳು ಬೇರೆ ರೀತಿಯಿಂದ ಅನ್ವಯಿಸಲಿಕ್ಕೆ ಹೋಗುವದು ಮಹಾ ಪಾತಕವು. ಇದ ಲ್ಲದೆ ವೀರಶೈವ ಧರ್ಮದಲ್ಲಿ ಗುರುಲಿಂಗಜಂಗಮದೊಳಗೆ ಭೇದವನ್ನೆಣಿ ಸುವದು ಮಹಾ ಪಾಪವೆಂದು ಹೇಳಿದೆ. ಒಬ್ಬನೇ ಪರಮಾತ್ಮನು ಗುರು

ಲಿಂಗ ಜಂಗಮರೂಪದಿಂದ ಭಕ್ತರ ಹಿತಾರ್ಥವಾಗಿ ಭೂಮಿಯಲ್ಲಿವತರಿಸಿರುವನು. ಗುರುಲಿಂಗಜಂಗಮವು ಆ ಪರವಸ್ತುವಿನ ತ್ರಿವಿಧಸ್ವರೂಪಗಳು. ಪರಮಾತ್ಮನೆಂದರೇನೆಂಬುದೇ ನಮಗೆ ಗೊತ್ತಿಲ್ಲದಿದ್ದಾಗ ಶ್ರೀಗುರುವು ಅದು ಇಷ್ಟಲಿಂಗವೆಂದು ನಮ್ಮ ಕರಸ್ಥಲಕ್ಕೆ ಕೊಟ್ಟ ಮಹದುಪಕಾರ ಮಾಡಿರುವದರಿಂದ ಗುರುವು ಸಾಮಾನ್ಯನೇ ? ಆ ಇಷ್ಟಲಿಂಗ ಪೂಜೆಯಿಂದಲೇ ನಮಗೆ ಮಹಾ ಜ್ಞಾನವು ಲಭಿಸುವದರಿಂದ ಆ ಲಿಂಗಕ್ಕೆಂದಾದರೂ ಕಲಂಕ ಹಚ್ಚಬಹುದೇ ? ಆ ಲಿಂಗಪೂಜೆಯ ಫಲವೇ ಜಂಗಮ (ಜ್ಞಾನ) ವಾದುದರಿಂದ ಆ ಜಂಗಮವು ಸಾಧಾರಣವೇ ? ಆದುದರಿಂದ ಪರಿಪೂರ್ಣ ಪವಿತ್ರಮಯರಾದ ಗುರು ಲಿಂಗ ಜಂಗಮರಲ್ಲಿ ಭೇದವನ್ನು ಸರ್ವಥಾ ಕಲ್ಪಿಸಲಾಗದು. ಆದುದರಿಂದ ಗುರುಲಿಂಗ ಜಂಗಮ ಪಾದೋದಕವು ಪರಸ್ಪರ ಪವಿತ್ರವಾಗಿಯೇ ಇರುವದರಿಂದ ಒಬ್ಬರ ಪಾದೋದಕವನ್ನೊಬ್ಬರು ಸ್ವೀಕರಿಸಿದರೆ ಯಾವ ದೋಷಕ್ಕೂ ಆಸ್ಪದವಿಲ್ಲ. ಇದು ಒಂದು ಭಾವನಾ ಪೂರಿತವಾದ ವಿಧಿಯಾಗಿದೆ.

ಹಣ್ಣಿನಲ್ಲಿ ರಸವುಂಟು; ರಸದಲ್ಲಿ ರುಚಿಯುಂಟು. ಹಣ್ಣುಬಿಟ್ಟು ರಸವಿಲ್ಲ; ರಸಬಿಟ್ಟು ರುಚಿಯಿಲ್ಲ. ಹಣ್ಣು ರಸ ರುಚಿಗಳಲ್ಲಿ ಯಾವದು ಹೆಚ್ಚೆಂದರೆ ಇಂತಹದೇ ಎಂದು ಹೇಗೆ ಹೇಳಲಿಕ್ಕೆ ಬರುವದಿಲ್ಲವೋ ಹಾಗೆಯೇ ಗುರು ಲಿಂಗ ಜಂಗಮರಲ್ಲಿ ಭೇದವನ್ನೆಣಿಸಲಿಕ್ಕೆ ಬರುವದಿಲ್ಲ. ಗುರುವೇ ಹಣ್ಣು; ಲಿಂಗವೇ ರಸವು. ಜಂಗಮವೇ ರುಚಿಯು. ಎಲ್ಲವೂ ತತ್ವತಃ ಒಂದೇ ಆದ ಬಳಿಕ ಗುರುಲಿಂಗ ಜಂಗಮದ ಪಾದೋದಕವು ಪರಸ್ಪರ ಒಡಗೂಡಿದರೆ ಮೋಕ್ಷವೇನು? ಪಾದೋದಕವೇನೋ, ನೀರೇ ಅಹುದು. ಆದರೆ ಅದು ತೀರ್ಥವೆಂಬ ಪವಿತ್ರ ಕಲ್ಪನೆಯನ್ನುಂಟುಮಾಡಿಕೊಂಡು ಅದನ್ನು ಸೇವಿಸುವದರಲ್ಲಿ ಹೆಚ್ಚು ಮಹತ್ವವಿದೆ. ಅದಕ್ಕೆ ಭಕ್ತಿಯು ಅತ್ಯವಶ್ಯವಾಗಿ ಬೇಕು. ಒಬ್ಬ ಶಿವಶರಣರು ಹೇಳಿರುವರೇನಂದರೆ" ಭಕ್ತಿಯಿಲ್ಲದ ಗುರುವು ನರನಿಂದ ಕರಕಷ್ಟ. ಭಕ್ತಿಯಿಲ್ಲದ ಲಿಂಗ ಶಿಲೆಯಿಂದಲತಿ ಕಠಿಣ; ಭಕ್ತಿಇಲ್ಲದ ಜಂಗಮವು ಜಡವೇಹಿ; ಭಕ್ತಿ ಇಲ್ಲದ ಪಾದೋದಕವು ಜಡನೀರೆನಿಸುವದು. ಭಕ್ತಿಯು ಭಾವನೆಯನ್ನನುಸರಿಸುತ್ತದೆ. ಗುರುಲಿಂಗ ಜಂಗಮ ಪಾದೋದಕ ಪ್ರಸಾದಗಳಲ್ಲಿ ನಾವು ಯಾವ ತರಹದ ಭಾವನೆಯನ್ನುಂಟುಮಾಡಿಕೊಳ್ಳುತ್ತೇವೆಯೋ ಆ ಪ್ರಕಾರದ ಭಕ್ತಿಯು ನಮ್ಮಲ್ಲಿ ಪ್ರಾದುರ್ಭವಿಸುವದು. ಈ ಜಗತ್ತಿನಲ್ಲಿ ಭಾವ

ನೆಯೇ ಪ್ರಾಧಾನ್ಯ ಭಾವನೆಯೆಂಬ ತಳಹದಿಯ ಮೇಲೆ ನಾವು ಭಕ್ತಿ, ಜ್ಞಾನ, ಇಚ್ಛಾಶಕ್ತಿ, ದೀರ್ಘ ಪ್ರಯತ್ನ, ಸಾಹಸಾದಿ ಗುಣಗಳನ್ನು ಕಟ್ಟಬಲ್ಲೆವು. ಆ ಭಾವನೆಯೊಂದಿಲ್ಲದಿದ್ದರೆ ಮನುಷ್ಯನ ಜೀವಿತವು ವ್ಯರ್ಥ. ಭಾವನೆಯು ಎಲ್ಲತರದ ಪ್ರಗತಿಗೂ ಬೀಜವು. ಅದು ಒಂದಿಲ್ಲೊಂದು ಗುಣದೊಂದಿಗೆ ಕೂಡಿಕೊಂಡು ಅದ್ಭುತವಾದ ಶಕ್ತಿಯನ್ನು ತಂದು ಕೊಡುತ್ತದೆ. ಆದುದರಿಂದ ನಾವಾದರೂ ಪರಮ ಪವಿತ್ರವಾದ ಪಾದೋದಕದಲ್ಲಿ ಪರಿಶುದ್ಧವಾದ ಭಾವನೆಯನ್ನಿಟ್ಟುಕೊಂಡು ನಿರಂತರ ಸೇವಿಸುವದು ಯುಕ್ತವಾಗಿದೆ.

---

# ಪಾಶ್ಚಾತ್ಯರ ತತ್ವ ಶಾಸ್ತ್ರ.

ಲೇಖಕ:—ಶ್ರೀವೀರಪ್ಪ, ಯುಗಟಿ. ಬಿ. ಎ. ಎಲ್. ಎಲ್. ಬಿ. ಹಾವೇರಿ.

## ಬಹುತ್ವವಾದ (Pluralism)

ಹೇರಾಕ್ಲೈಟಸನ ಸಾರ್ವತ್ರಿಕ ಬದಲಾವಣೆಯ ಸಿದ್ಧಾಂತವಾಗಲಿ ಅಥವಾ ಪಾರ್ಮೆನಿಡಿಸನ ಸಾರ್ವತ್ರಿಕ ಸ್ಥಿರತೆಯ ಸಿದ್ಧಾಂತವಾಗಲಿ ಬಹುತ್ವದ ಸಮಸ್ಯೆಯನ್ನು ಬಿಡಿಸಲಿಲ್ಲ. ಬಹುತ್ವವಾದವು ಈ ವಿರೋಧಾತ್ಮಕ ಸಿದ್ಧಾಂತಗಳ ತೊಡಕನ್ನು ಬಿಡಿಸಿತು. ಬದಲಾವಣೆಯು ರೂಪಾಂತರವೆಂದು ತಿಳಿಯದೆ ಸ್ಥಲಭೇದವೆಂದು ಬಹುತ್ವವಾದವು ಪ್ರತಿಪಾದಿಸಿತು. ಬದಲಾವಣೆಯು ವಸ್ತುವಿನ ಘಟಕಗಳ ಸ್ಥಲಭೇಧವಾಗಿತ್ತು. ಮೂಲ ಘಟಕಗಳ (*parts*) ಸಂಯೋಗದಿಂದ ಹೊಸ ಸೃಷ್ಟಿಯುತ್ಪನ್ನವಾಗುವದು. ಅವುಗಳ ಅಗಲುವಿಕೆಯಿಂದ ಲಯವುಂಟಾಗುವದು. ಯಾವ ವಸ್ತುವೂ ಸಂಪೂರ್ಣ ನಾಶ ಹೊಂದುವದಿಲ್ಲ. ಶಾಶ್ವತವಾದ ವಸ್ತುವು (*Permanent Being*) ಅನೇಕ ಭೂತಗಳಿಂದ (*elements*) ಆಗಿದೆ. ಈ ಭೂತಗಳು ಅನಾದಿಗಳಾಗಿಯೂ, ಅವಿನಾಶಿಯಾಗಿಯೂ, ಸ್ಥಿರವಾಗಿಯೂ ಇವೆ.

ಭೂತಗಳಲ್ಲಿ ಚಲನೆಯುಂಟಾಗಲು ನಿಮಿತ್ತಕಾರಣವು (*efficient cause*) ಅವಶ್ಯವೆಂದು ಬಹುತ್ವವಾದವು ಹೇಳುತ್ತದೆ. ಈ ಕಾರಣಗಳು

ಭೌತಿಕವಾಗಿವೆ. ಹೀಗೆ ಹೇಳುವದರಿಂದ ಬಹುತ್ವವಾದಿಗಳೂ ಸಹ ಪ್ರಕೃತಿಯು ಜೀವಮಯವಾದದ್ದೆಂದು ನಂಬುವ ಪಂಥಕ್ಕೆ ಸೇರಿದ್ದಾರೆ.

ಎಂಪಿಡಾಕ್ಲಸಃ— ಕ್ರಿ. ಪೂ. ೪೯೦. ಇವನು ಸಿಸಿಲಿದ್ವೀಪದವನು. ಬಹುತ್ವವಾದಿಯು. ಇವನು ಪೃಥ್ವಿ, ಜಲ, ವಾಯು, ಅಗ್ನಿ ಎಂಬ ನಾಲ್ಕು ಭೂತಗಳಿವೆಯೆಂದು ಹೇಳುತ್ತಾನೆ. ಈ ಭೂತಗಳ ಸ್ಥಲಾಂತರದಿಂದ ಮತ್ತು ಸಂಯೋಗದಿಂದ ಜಗತ್ತಿನಲ್ಲಿ ಅನೇಕ ವಸ್ತುಗಳ ಸೃಷ್ಟಿಯಾಗುವದೆಂದು ಹೇಳುತ್ತಾನೆ. ಪ್ರೇಮದಿಂದ ವಸ್ತುಗಳ ಕೂಡುವಿಕೆಯೂ ದ್ವೇಷದಿಂದ ಅಗಲುವಿಕೆಯೂ ಉಂಟಾಗುವವು. ಒಂದು ವಸ್ತುವು ಸದೃಶವಾದ ವಸ್ತುವನ್ನು ಆಕರ್ಷಿಸುವದು. ಮನುಷ್ಯನು ನಾಲ್ಕು ಭೂತಗಳಿಂದಾಗಿರುವದರಿಂದ ಪ್ರಪಂಚದ ವಸ್ತುಗಳೂ ಸಹ ಅದೇ ಭೂತಗಳಿಂದಾಗಿರುವದರಿಂದ ಅವುಗಳನ್ನು ಅರಿಯಬಲ್ಲನು. ದೇಹದಲ್ಲಿ ಪೃಥ್ವಿಯು ಘನಪದಾರ್ಥವಾಗಿಯೂ ನೀರು ರಸರೂಪವಾಗಿಯೂ, ವಾಯು ಪ್ರಾಣವಾಗಿಯೂ, ಅಗ್ನಿಯು ಆತ್ಮವಾಗಿಯೂ ಇವೆ. ರಕ್ತವು ನಾಲ್ಕು ಭೂತಗಳಿಂದಾಗಿದೆ. ಆದ್ದರಿಂದ ಅದಕ್ಕೆ ಎಲ್ಲವೂ ಅರಿಕೆಯಾಗುವದು. ಇವನು ಮಿದುಳು ಜ್ಞಾನದ ಕೇಂದ್ರವೆಂದು ತಿಳಿಯದೆ ರಕ್ತವೇ ಜ್ಞಾನೇಂದ್ರಿಯವೆಂದು ತಿಳಿದನು. ಇಂದ್ರಿಯಗಳಲ್ಲಿ ಎಲ್ಲ ಭೂತಗಳ ಅಂಶವಿಲ್ಲದ್ದರಿಂದ ಇಂದ್ರಿಯ ಜ್ಞಾನವು ಅನಿಶ್ಚಿತವಾದದ್ದು. ಬುದ್ಧಿಯಲ್ಲಿ ಎಲ್ಲ ಭೂತಗಳಿರುವದರಿಂದ ಬುದ್ಧಿ ಸಂಬಂಧವಾದ ಜ್ಞಾನವು ನಿಶ್ಚಿತವಾದದ್ದು ಎಂದು ಇವನ ಇಂದ್ರಿಯ ಜ್ಞಾನಸಿದ್ಧಾಂತವಿದೆ. (*theory of perception*) ನಾಲ್ಕು ಭೂತಗಳ ಕೂಡುವಿಕೆಯಿಂದ ಗೋಳಾಕಾರದ ಜಗತ್ತು ಉದ್ಭವಿಸುವದು. ಈ ಜಗತ್ತಿನಲ್ಲಿ ಕಾರ್ಯಕಾರಣಗಳಾದ ಪ್ರೇಮದ್ವೇಷಗಳು ಸಂಯೋಗ, ವಿಯೋಗಗಳನ್ನು ಅವಿಶ್ರಾಂತವಾಗಿಯೂ ಅನಂತವಾಗಿಯೂ ನಡೆಯಿಸಿರುವವು. ಇವನ ನಿಮಿತ ಕಾರಣಗಳಾದ ಪ್ರೇಮದ್ವೇಷಗಳು ಸಹ ಭೌತಿಕವಾದವುಗಳು (*material*) ಇಂದ್ರಿಯಗಳಿಗೆ ರಂಧ್ರಗಳುಂಟು. ಅವುಗಳಲ್ಲಿ ಹೊರಗಿನ ವಸ್ತುಗಳು ಸರಿಯಾಗಿ ಸೇರಿಕೊಂಡರೆ ಇಂದ್ರಿಯಜ್ಞಾನವಾಗುವದು. ಕಣ್ಣಿನಲ್ಲಿ ಅಗ್ನಿ, ಜಲಗಳ ಅಂಶವಿರುವದರಿಂದ ಕಣ್ಣು ನೋಡಲು ಸಮರ್ಥವಾಗಿದೆ. ಜನರ ದೇಹಸ್ಥಿತಿಯು ವ್ಯತ್ಯಸ್ಥವಾಗಿರುವದರಿಂದ ಶಾಶ್ವತವಾದ ಜ್ಞಾನಲಾಭವಾಗುವದು ಶಕ್ಯವಿಲ್ಲ;

ಅನೆಕ್ಸೆಗೊರಾಸಃ—ಕ್ರಿ. ಪೂ. ೫೦೦. ಅನೇಕ ರೂಪವಾದ ಜಗತ್ತು ನಾಲ್ಕು ಭೂತಗಳಿಂದ ಮಾತ್ರವೇ ಆಗಲಾರದು. ಗುಣಭೇದಯುಕ್ತವಾದ ಅನೇಕ ಭೂತಗಳಿಂದ ಜಗತ್ತು ಉಂಟಾಗಿದೆ. ರೂಪ, ರುಚಿ, ಬಣ್ಣಗಳು ಭೂತಗಳಲ್ಲಿಯ ಭೇದವನ್ನು ತೋರಿಸುತ್ತವೆ. ಗೋದಿಯ ರೊಟ್ಟಿಯನ್ನು ತಿಂದ ಮೇಲೆ ಅದು ಮಾಂಸ, ಎಲವು, ಕೂದಲುಗಳಾಗಿ ಪರಿಣಮಿಸುತ್ತದೆ. ಪ್ರತಿಯೊಂದು ಇಂದ್ರಿಯಗ್ರಾಹ್ಯವಸ್ತುವಿನಲ್ಲಿ ಎಲ್ಲ ಭೂತಗಳುಂಟು. ಅಗ್ನಿಯಲ್ಲಿ ನೀರಿನ ಅಂಶವಿದ್ದರೂ ಅಗ್ನಿಯ ಪ್ರಾಮುಖ್ಯತೆಯುಂಟು. ವಿರೋಧವಾದ ವಸ್ತುಗಳು ಸಹ ಒಂದನ್ನೊಂದು ಆಕರ್ಷಿಸುತ್ತವೆ. ಭೂತಗಳ ಸಂಯೋಗ ವಿಯೋಗಗಳನ್ನುಂಟುಮಾಡುವ ನಿಮಿತ್ತಕಾರಣವು ಬುದ್ಧಿಯಾಗಿದೆ. (*nous*) ಇದು ಅತಿ ಸೂಕ್ಷ್ಮವಾದದ್ದೂ, ಸ್ವಯಂಚಲನೆಯುಳ್ಳದ್ದೂ ಜಗತ್ತಿನ ಸುಸ್ಥಿತಿಗೆ ಕಾರಣವೂ ಆಗಿದೆ.

ಯಾವ ವಸ್ತುವೂ ಹೊಸದಾಗಿ ಹುಟ್ಟುವದೂ ಇಲ್ಲ, ಲಯವಾಗುವದೂ ಇಲ್ಲ. ಪ್ರಕೃತಿಯು ಅನಂತವಾಗಿ ವಿಭಾಗಿಸಲ್ಪಡಲು ಶಕ್ಯವಾಗಿದೆ. ಪ್ರಕೃತಿಯನ್ನು ಸದೃಶವಾದ ಪ್ರಕೃತಿಯೊಂದಿಗೆ ಕೂಡಿಸುವದರಿಂದ ವಿಶ್ವ ಸೃಷ್ಟಿಯುಂಟಾಗುವದು. ಇವನ ನಿಮಿತ್ತ ಕಾರಣದ ಬುದ್ಧಿಯು ಸ್ವಯಂ ಚೈತನ್ಯವುಳ್ಳದ್ದಾಗಿದ್ದು ತತ್ವಜ್ಞಾನದಲ್ಲಿ ಅಪೂರ್ವವಾಗಿದೆ. ಈ ಬುದ್ಧಿಯು ಭೌತಿಕವಾಗಿರದೆ ಪಾರಮಾರ್ಥಿಕವಾಗಿದೆ. ವಸ್ತುಗಳಲ್ಲಿ ಇದು ಚಲನೆಯನ್ನುಂಟುಮಾಡುತ್ತದೆ. ಜಗತ್ತು ಬುದ್ಧಿಯಿಂದ ನಿಯಾಮಕವಾಗಿರುವದು. ಮತ್ತು ನಿಯತವಾದ ಧ್ಯೇಯದ ಕಡೆಗೆ ಚಲಿಸುವದು. ಬುದ್ಧಿಯೂ ಪ್ರಕೃತಿಯೂ ಅನಾದ್ಯನಂತವಾಗಿವೆ. ಬುದ್ಧಿಯು ಪ್ರಕೃತಿಯನ್ನು ಸೃಷ್ಟಿಸುವದಿಲ್ಲ. ಆದರೆ ಅದನ್ನು ವ್ಯವಸ್ಥೆಯಿಂದ ಇಡುವದು. ಈ ಪ್ರತಿಪಾದನೆಯು ಸಾಂಖ್ಯತತ್ವದಲ್ಲಿಯ ಪ್ರಕೃತಿ ಪುರುಷರ ಸಂಬಂಧವನ್ನು ಕೆಲವು ಮಟ್ಟಿಗೆ ಹೋಲುವದು. ಚಂದ್ರನು ಪೃಥ್ವಿಯಿಂದಾಗಿದ್ದು ಸೂರ್ಯಪ್ರಕಾಶವನ್ನು ಪ್ರತಿಬಿಂಬಿಸುವನು. ಹೀಗೆ ಚಂದ್ರನ ಪ್ರಕಾಶದ ನಿಜವಾದ ಕಾರಣವನ್ನು ಹೇಳಿದವನು ಇವನೇ ಮೊದಲನೆಯವನು. ಮತ್ತು ಸೂರ್ಯ ಗ್ರಹಣವು ಚಂದ್ರನು ಪೃಥ್ವಿ ಸೂರ್ಯರ ನಡುವೆ ಬರುವದರಿಂದ ಉಂಟಾಗುವದೆಂತಲೂ ಮತ್ತು ಚಂದ್ರಗ್ರಹಣವು ಭೂಮಿಯ ನೆರಳು ಚಂದ್ರನ ಮೇಲೆ ಬೀಳುವದರಿಂದುಂಟಾಗುವದೆಂತಲೂ ಗ್ರಹಣಗಳ ನಿಜವಾದ ಕಾರಣವನ್ನು

ಹೇಳಿದ್ದು ಇವನೇ ಮೊದಲಿನವನು. ಇವನ 'ಇಂದ್ರಿಯಜ್ಞಾನ ಸಿದ್ಧಾಂತವು ಎಂಪಿಡಾಕ್ಲಸನ ಸಿದ್ಧಾಂತಕ್ಕೆ ಅತ್ಯಂತ ವಿರೋಧವಾಗಿದೆ. ಪರಸ್ಪರ ವಿರೋಧವಾದ ವಸ್ತುಗಳ ಸಂಯೋಗದಿಂದ ಇಂದ್ರಿಯಜ್ಞಾನ(*percaption*) ವಾಗುವದೆಂದು ಇವನ ಹೇಳಿಕೆಯಾಗಿದೆ.

ಇವನು ಬುದ್ಧಿ ಮತ್ತು ಪ್ರಕೃತಿಗಳನ್ನು ಅನಾದ್ಯನಂತವಾದವುಗಳೆಂದು ತಿಳಿದು ಅವುಗಳಲ್ಲಿ ವಿಭೇದವನ್ನು ತೋರಿಸಿದ್ದರಿಂದ ಇವನ ತತ್ವವು ದ್ವೈತದಲ್ಲಿ ಅವಸಾನ ಹೊಂದುತ್ತದೆ. ಇವುಗಳ ಸಮನ್ವಯ ಮಾಡಬೇಕಾಗಿದ್ದರೆ ಭೌತಿಕ ಏಕತ್ವವಾದವು (*monistic materialism*) ಬುದ್ಧಿಯು ಪ್ರಕೃತಿಯಿಂದ ಹುಟ್ಟಿದೆ ಎಂತಲೂ ಅಥವಾ ಪಾರಲೌಕಿಕ ಏಕತ್ವವಾದವು (*manistic idalism*) ಪ್ರಕೃತಿಯು ಬುದ್ಧಿಯಿಂದ ಹುಟ್ಟಿದೆಯೆಂತಲೂ ಹೇಳಬಹುದಾಗಿತ್ತು. ಆದರೆ ಅನೆಕ್ಷೆಗೋರಾಸನು ಹೀಗೆ ಸಮನ್ವಯ ಮಾಡಲಸಮರ್ಥನಾಗಿರುವನು.

ಮಾನವ ವರ್ಗದ ವಿಚಾರ (*Anthropoiogy*) **ಕ್ರಿ. ಪೂ. ೪೯೦** ಗ್ರೀಕರಿಗೂ ಪರ್ಶಿಯಾದವರಿಗೂ ಮ್ಯಾರಾಥಾನ್ ಯುದ್ಧವ ಸಂಭವಿಸಿದ ನಂತರ ಗ್ರೀಸ ದೇಶದಲ್ಲೆಲ್ಲ ಒದು ವಿಧವಾದ ಜ್ಞಾನಜಾಗ್ರತೆಯುಂಟಾಯಿತು. ಅಗ ಜ್ಞಾನದ ಕೇಂದ್ರಸ್ಥಾನವು ಮಿಲೆಟಸ್ ಪಟ್ಟಣದಿಂದ ಅಥೆನ್ಸ ಪಟ್ಟಣಕ್ಕೆ ಹೋಯಿತು.। ಈ ಜ್ಞಾನೋದಯವನ್ನು ಪ್ರಚಾರ ಮಾಡಿದವರಲ್ಲಿ ಸೋಫಿಸ್ಟ ಎಂಬ ಜನರು ಮುಖಂಡರಾಗಿದ್ದರು. ಇವರು ವಾಙ್ಮಯ, ತರ್ಕ, ರಾಜಕಾರಣ, ವ್ಯಾಕರಣ, ವಾಕ್ಪಟುತ್ವ ಮೊದಲಾದ ಶಾಸ್ತ್ರಗಳನ್ನು ಹರಡ ಹತ್ತಿದರು. ಮೊದಲು ಇವರಿಗೆ ಜ್ಞಾನಿಗಳೆಂತಲೂ, ಅನಂತರ ವಿತಂಡವಾದಿಗಳೆಂತಲೂ ಹೆಸರುಂಟಾಯಿತು. ಪೆರಿಕ್ಲಿಸ್ ಎಂಬ ಪ್ರಸಿದ್ಧ ರಾಜಕಾರಣ ಪಟುವಿನ ಆಶ್ರಯದಲ್ಲಿ ಈ ಜ್ಞಾನಪ್ರಸಾರವು ಭರದಿಂದ ಸಾಗಿತು. ಅಗ ಪ್ರಜಾಸತ್ತಾತ್ಮಕವು ಸ್ಥಾಪಿತವಾದ್ದರಿಂದ ಪ್ರತಿಯೊಬ್ಬ ವ್ಯಕ್ತಿಯೂ ಸ್ವತಂತ್ರವಾಗಿ ವಿಚಾರ ಮಾಡಲು ಆಸ್ಪದವುಂಟಾಯಿತು. ಪ್ರತಿಯೊಬ್ಬನು ಪೂರ್ವ ಪದ್ಧತಿ ಅಥವಾ ನಿಯಮವನ್ನು ತನ್ನ ವಿಚಾರದ ಒರೆಗಲ್ಲಿಗೆ ಹಚ್ಚಿನೋಡದ ಹೊರತು ನಂಬದಾದನು.

ಪ್ರೋಟ್ಯಾಗೊರಾಸಃ — ಕ್ರಿ. ಪೂ. ೪೮೦; ಇವನು ಸೋಫಿಸ್ಟ ಪಂಥದಲ್ಲಿ ಮೊದಲನೆಯವನು. ಇವನು ಸಂಬಂಧಾತ್ಮಕ ಸಿದ್ಧಾಂತವನ್ನು

(*Thosry of Retativism*) ಪ್ರತಿಪಾದಿಸುತ್ತಾನೆ. ನಮಗೆ ಪೂರ್ಣ ಸತ್ಯದ ಜ್ಞಾನವು ದೊರೆಯುವದೇ ಇಲ್ಲ. (*mation*) ವಿಷಯದ ಮಟ್ಟಿಗೆ ನಮಗೆ ಜ್ಞಾನವುಂಟು. ಮನುಷ್ಯಜ್ಞಾನವು ಸಂಬಂಧಾತ್ಮಕವಿದ್ದು ಪರಿಪೂರ್ಣ ವಾದದ್ದಿರುವದಿಲ್ಲ. ಹೆರಾಕ್ಲೈಟಸನ ಸಾರ್ವತ್ರಿಕ ಬದಲಾವಣೆಯ ಸಿದ್ಧಾಂತವು ಇವನಿಗೆ ಮಾನ್ಯವಾಗಿತ್ತು. ಜ್ಞಾನವೆಂಬುದು ಇಂದ್ರಿಯಗಳಿಂದುಂಟಾದದ್ದೇ ವಿನಹ ಬೇರೆ ಇಲ್ಲ. ಇಂದ್ರಿಯಗಳು ಬದಲಾವಣೆಯ ನಿಯಮಕ್ಕೆ ಒಳಪಟ್ಟಿದುದರಿಂದ ಇಂದ್ರಿಯ ಜ್ಞಾನವು ಕ್ಷಣಿಕವೂ ಅಸತ್ಯವೂ ಆಗಿದೆ. ಇಂದ್ರಿಯ ವಿಸ್ತಾರವೇ ಬುದ್ಧಿಯಾಗಿದೆ. ಬಾಹ್ಯಚಲನೆಯು ಇಂದ್ರಿಯವನ್ನು ತಗಲಿದಾಗ ಇಂದ್ರಿಯದಿಂದುಂಟಾದ ಪ್ರತಿಕ್ರಿಯೆಯೇ ಇಂದ್ರಿಯ ಜ್ಞಾನವೆಂದು (*Perception*) ಹೇಳಿಸಿಕೊಳ್ಳುತ್ತದೆ. ಪ್ರತಿ ಕ್ಷಣದಲ್ಲಾಗುವ ಇಂದ್ರಿಯ ಜ್ಞಾನವೇ ಜ್ಞಾನವು. ಅದೇ ಮತ್ತೊಂದು ಕ್ಷಣದಲ್ಲಿ ಬೇರೆ ವಿಧವಾಗಿ ತೋರಬಹುದು. ಮನುಷ್ಯನೇ ಎಲ್ಲ ವಸ್ತುಗಳಿಗೆ ಪ್ರಮಾಣನು. (*Man is the measvre of all things.*) ವಸ್ತುಗಳ ನಿಜರೂಪವು ನಮಗೆ ಗೊತ್ತಾಗದು. ಯಾವ ಇಂದ್ರಿಯ ಜ್ಞಾನವು ನಮಗಾಗುವದೋ ಅದೇ ಸತ್ಯವಾದದ್ದು. ಮತ್ತೊಬ್ಬನಿಗೆ ಅದೇ ಕ್ಷಣದ ಜ್ಞಾನವು ಬೇರೆಯಾಗಿದ್ದರೆ ಅವನಿಗೆ ಅದೇ ಸತ್ಯವಾದದ್ದು. ಇವನ ಈ ಸಿದ್ಧಾಂತವು ಸತ್ಯಜ್ಞಾನದ ಅಸ್ತಿತ್ವವನ್ನೇ ಅಲ್ಲಗಳೆಯುತ್ತದೆ. ಸತ್ಯಜ್ಞಾನವು ಒಂದೇ ಆಗಿದ್ದು ಅನೇಕ ವಿಧವಾಗಿರಲಾರದು. ಇವನು ಹೇಳುವಂತೆ ಜ್ಞಾನಕ್ಕೆ ಇಂದ್ರಿಯಗಳು ಮಾತ್ರವೇ ಆಧಾರವೆಂಬದು ನಿಜವಾದದ್ದಲ್ಲ. ಜ್ಞಾನಕ್ಕೆ ಬುದ್ಧಿಯು ಮುಖ್ಯ ಆಧಾರವಾಗಿದೆ.

ಗಾರ್ಗಿಯಾಸನ ಶೂನ್ಯವಾದ ಅಥವಾ ನಾಸ್ತಿಕವಾದಃ — ಪ್ರೋಟ್ಯಾಗೋರಾಸನು ಪ್ರತಿಯೊಂದು ವಸ್ತುವು ಸಂಬಂಧಾತ್ಮಕ ರೂಪದಲ್ಲಿ ಸತ್ಯವೆಂದು ಹೇಳುತ್ತಾನೆ. ಆದರೆ ಗಾರ್ಗಿಯಾಸನು ಪ್ರತಿಯೊಂದು ವಸ್ತುವು ಅಸತ್ಯವೆಂದು ಹೇಳಿದನು. ಜ್ಞಾನವೂ ಜ್ಞಾನ ಬೋಧೆಯೂ ಅಸಂಭವವೆಂದು ಇವನು ಹೇಳಿದನು. ನೇತಿ ನೇತಿ ಏನೂ ಇಲ್ಲ. ಏನಾದರೂ ಅಸ್ತಿತ್ವದಲ್ಲಿದ್ದರೆ ಅದು ಅಚಿಂತ್ಯವು. ಅದು ವಾಙ್ಮನಕ್ಕೆ ಗೋಚರವಾದದ್ದೆಂದು ತಿಳಿದರೂ ಅದನ್ನು ಇತರರಿಗೆ ಬೋಧಿಸಲು ಬರಲಾರದು. ವಸ್ತುಸಂಬಂಧವಾದ ಜ್ಞಾನವು ವಸ್ತುವಿನಿಂದ ಭಿನ್ನವಾದದ್ದು.

ವಿಚಾರವನ್ನು ಶಬ್ದಗಳಿಂದ ಹೇಳುವದು ವಿಚಾರದಿಂದ ಭಿನ್ನವಾಗಿದೆ. ಸೋಫಿಸ್ಟ ಪಂಥದವರು ತಮ್ಮ ಮಾನಸಿಕ ಶಾಸ್ತ್ರವನ್ನು ಇಂದ್ರಿಯಜ್ಞಾನದ ತಳಹದಿಯ ಮೇಲೆ ಮಾತ್ರವೇ ರಚಿಸಿದ್ದರಿಂದ ಈ ವಿಧವಾದ ವಿಪರೀತ ಸಿದ್ಧಾಂತವು ಹೊರಡಲು ಕಾರಣವಾಯಿತೆಂದು ಹೇಳಬಹುದು.

ಸಾಕ್ರೆಟಿಸ— ಕ್ರಿ. ಪೂ. ೪೭೦ ರಿಂದ ೩೯೯ ರ ವರೆಗೆ ಇವನು ಅಥೆನ್ಸದಲ್ಲಿ ಜನ್ಮನೆತ್ತಿದನು. ಇವನು ಸ್ಥೂಲದೇಹಿಯೂ, ಕಿರಿಯಾಳುವೂ ದೊಣ್ಣೆ ಮೂಗಿನವನೂ, ಅಗಲವಾದ ಬಾಯಿಯುಳ್ಳವನೂ, ಹರಕು ಗಡ್ಡದವನೂ ಅಂದರೆ ಒಟ್ಟಿನ ಮೇಲೆ ಕುರೂಪಿಯಾಗಿದ್ದನು. ಆದರೆ ಅವನಲ್ಲಿದ್ದ ಜನವಾತ್ಸಲ್ಯ, ಪ್ರೇಮಯುಕ್ತವಾದ ಹಾಸ್ಯರಸ ಮತ್ತು ಸ್ವಾರ್ಥತ್ಯಾಗಗಳು ಅನೇಕ ಜನರನ್ನು ಆಕರ್ಷಿಸಿ ಅವನಿಗೆ ಶಿಷ್ಯರಾಗುವಂತೆ ಮಾಡಿದವು. ಅವನು ಮಿತಾಹಾರಿಯೂ, ಆತ್ಮನಿಗ್ರಹಿಯೂ, ಕಷ್ಟಸಹಿಷ್ಣುವೂ ಆಗಿದ್ದನು. ಅವನು ಮೂರು ಸಲ ರಣಭೂಮಿಯಲ್ಲಿ ವೀರಾಗ್ರಣಿಯಾಗಿ ಸೇವೆ ಮಾಡಿದ್ದನು. ಅವನು ಹಿತವಾದದ್ದನ್ನು ಬಿಟ್ಟು ಸುಖವಾದದ್ದನ್ನು ಎಂದೂ ಪ್ರೀತಿಸುತ್ತಿರಲಿಲ್ಲ. ಅವನು ತನ್ನ ಪ್ರತಿಯೊಂದು ಕಾರ್ಯದಲ್ಲಿ ದೇವವಾಣಿಯ ಹೇಳಿಕೆಯಂತೆ ನಡೆಯುತ್ತಿದ್ದನು. ಸಮಾಜಸೇವೆಯಲ್ಲಿಯೇ ಯಾವಾಗಲೂ ನಿರತನಾಗಿದ್ದನು. ಮಾರಿಯಂತಿದ್ದ ಜಾಂತಿಫಿ ಎಂಬ ಹೆಂಡತಿಯು ಇವನಿಗೆ ಬೈಗಳ ಮಳೆಯನ್ನು ಸುರಿಸುತ್ತಿದ್ದರೂ ಇವನು 'ಗುಡುಗಿದ ನಂತರ ಮಳೆಯಾಗುವದು ಸ್ವಾಭಾವಿಕವು' ಎಂದು ಅವಳಿಗೆ ಹಾಸ್ಯದಿಂದ ಸಮಾಧಾನ ಮಾಡುತ್ತಿದ್ದನು.

ಮನುಷ್ಯನು ಎಲ್ಲ ವಸ್ತುಗಳಿಗೆ ಪ್ರಮಾಣನು ಎಂದು ಪ್ರೋಟ್ಯಾಗೋರಸನಂತೆ ಹೇಳದೆ ಮಾನವ ವರ್ಗವೇ ಎಲ್ಲ ವಸ್ತುಗಳಿಗೆ ಪ್ರಮಾಣ ಎಂದು ಇವನು ಹೇಳಿದನು. ಜ್ಞಾನವು ಅವನ ಧ್ಯೇಯವಾಗಿತ್ತು. ಜ್ಞಾನವು ಸದ್ಗುಣವಾಗಿದೆ. (*Knowledge is virtue*) ಎಂಬುದು ಅವನ ಪ್ರತಿಪಾದನೆ. ಸದ್ಗುಣದಿಂದ ಸುಖ ಲಭಿಸುತ್ತದೆ. ಜ್ಞಾನ, ಸುಖ, ಮತ್ತು ಪ್ರಯೋಜನ ಇವು ಮೂರು ಸದ್ಗುಣದ ಅಂಗಗಳಾಗಿವೆ. ಜ್ಞಾನವು ಸದ್ಗುಣದ ಸಾಧನವು, ಸುಖವು ಸದ್ಗುಣದ ಪರಿಣಾಮವು, ಪ್ರಯೋಜನವು ಸದ್ಗುಣದ ಚಿನ್ಹವು. ಜ್ಞಾನಿಯು ತಪ್ಪು ಮಾಡಲಾರನು. ಅಜ್ಞಾನದಿಂದ ತಪ್ಪು ಕೆಲಸವಾಗುವದು. ಅಜ್ಞಾನಿಯಾಗಿರುವದೇ ದುರ್ಗು

ಣವು. ಈ ತತ್ವವನ್ನು ಸಾಕ್ರೆಟಿಸನ ಶಿಷ್ಯನಾದ ಅರಿಸ್ಟಾಟಲನು ಖಂಡಿಸಿದ್ದಾನೆ. ಸಾಕ್ರೆಟಿಸನು ಪ್ರತಿಯೊಬ್ಬನ ಕ್ರಿಯೆಗಳು ಬುದ್ಧಿಯಿಂದ ನಿಯಂತ್ರಿತವಾದವುಗಳೆಂದು ನಂಬಿದ್ದು ತಪ್ಪಾಗಿತ್ತು. ಮನುಷ್ಯನ ಕ್ರಿಯೆಗಳು ಅನೇಕ ಸಲ ಮನೋವಿಕಾರಗಳಿಂದ ನಿಯಂತ್ರಿತ ವಾದದ್ದು ನಮಗೆ ಗೊತ್ತುಂಟು. ನಿಜವಾದದ್ದಾವದೆಂದು ತಿಳಿದಾಗ್ಯೂ ಜನರು ತಪ್ಪು ಮಾಡುತ್ತಾರೆಂಬುದು ನಮಗೆ ಅನುಭವವುಂಟು.

ಸಾಕ್ರೇಟಿಸನು ವಿಷಯ ವಿವೇಚನೆಯಲ್ಲಿ (*dialogue*) ಚರ್ಚಾತ್ಮಕ ಪ್ರವಚನ ಪದ್ಧತಿಯನ್ನು ಪ್ರಾರಂಭಿಸಿದ್ದರಿಂದ ಆ ಪದ್ಧತಿಯ ಉತ್ಪಾದಕನೆಂದು ಇವನಿಗೆ ಹೇಳಬಹುದು. ಪ್ರವಚನದ ಆರಂಭದಲ್ಲಿ ತನಗೆ ಏನೂ ಗೊತ್ತಿಲ್ಲನೆಂದು ಹೇಳಿ ಪ್ರತಿವಾದಿಯಿಂದ ವಿಷಯ ವಿವೇಚನ ಮಾಡಿಸಿ ಅದರ ಖಂಡನೆ ಮಾಡುತ್ತ ಮಾಡುತ್ತ ಕೊನೆಗೆ ನಿಜವಾದ ಸಿದ್ಧಾಂತವನ್ನು ತೆಗೆಯುತ್ತಿದ್ದನು. ಇವನು ತರ್ಕದಲ್ಲಿ ಅನುಮಾನಪದ್ಧತಿ (*Induction*) ಯನ್ನು ಅನುಸರಿಸಿದನು. ಸಮಷ್ಟಿಯ ಆಧಾರದ ಮೇಲೆ ವ್ಯಷ್ಟಿಗಳು ಅವಲಂಬಿಸಿರುವದನ್ನು ತೋರಿಸಿದನು.

ಇವನ ಸದಾಚಾರ ಸದ್ಗುಣಗಳು ಅಪ್ರತಿಮವಾಗಿದ್ದುದರಿಂದ ಅನೇಕ ಜನ ತರುಣರು ಇವನ ಬೆನ್ನುಹತ್ತಿ ಜ್ಞಾನಾರ್ಜನೆಗಾಗಿ ತಿರುಗುತ್ತಿದ್ದರು. ಆದರೆ ಇವನ ನಿಷ್ಠುರವಾದ ದೈನಿಕ ವಾಗ್ವಾದದಲ್ಲಿ ಇವನಿಗೆ ಅನೇಕರು ದ್ವೇಷಿಗಳಾದರು. ಅವರು ಇವನು ದೇವತೆಗಳನ್ನು ದೂಷಿಸುತ್ತಾನೆಂತಲೂ, ಹೊಸದೇವತೆಗಳ ಪ್ರತಿಪಾದನೆ ಮಾಡುತ್ತಾನೆಂತಲೂ, ತರುಣರನ್ನು ಕೆಡಿಸುತ್ತಾನೆಂತಲೂ ಇವನಮೇಲೆ ಆರೋಪಗಳನ್ನು ಹೊರಿಸಿದರು. ಆಗ ಸುವ್ಯವಸ್ಥಿತವಾದ ರಾಜ್ಯ ಪದ್ಧತಿ ಇರದೆ ಬಹುಮತ ರಾಜ್ಯಪದ್ಧತಿ (*mobrule*) ಇದ್ದುದರಿಂದ ಇವನ ವಿರೋಧಿಗಳಾದ ಬಲಿಷ್ಠರನೇಕರು ಇವನಿಗೆ ಶಿಕ್ಷೆಯನ್ನು ವಿಧಿಸುವಂತೆ ಮಾಡಿದರು. ಆಗ ಇವನಿಗೆ ಎಪ್ಪತ್ತು ವರ್ಷ ವಯಸ್ಸಾಗಿತ್ತು. ಕಾರಾಗ್ರಹದಲ್ಲಿರುವಾಗ ಇವನ ಸ್ನೇಹಿತರನೇಕರು ಇವನನ್ನು ಪಾರುಮಾಡುವೆವೆಂದು ಹೇಳಿದಾಗ್ಯೂ ಅದಕ್ಕೆ ಇವನು ಒಪ್ಪಲಿಲ್ಲ. ಆಗಿನ ರಾಜ್ಯಪದ್ಧತಿಯ ಕಾಯದೆಪ್ರಕಾರ ಇವನು ಕ್ಷಮೆಯನ್ನು ಬೇಡಿದ್ದರೆ ಬಿಡುಗಡೆ ಹೊಂದಬಹುದಾಗಿತ್ತು. ಆದರೆ ಅದಕ್ಕೂ ಮನಸ್ಸು ಮಾಡಲಿಲ್ಲ. ಇವನಿಗೆ ವಿಷಕುಡಿದು ಮರಣಹೊಂದುವ ಶಿಕ್ಷೆಯು ವಿಧಿಸಲ್ಪಟ್ಟಿತು. ಇವನು ಆನಂದದಿಂದ ವಿಷಪಾನ ಮಾಡಿ ಮರಣ ಹೊಂದಿದನು.

ಸಿನಿಕ್ ಅಥವಾ ವೈರಾಗಿ ಪಂಥ— ಅಂಟಿಸ್ತೆ ನಿಸ್ ಎಂಬುವನು ಇದರ ಉತ್ಪಾದಕನು. ಸದ್ಗುಣವೇ ಮುಖ್ಯ ಧ್ಯೇಯವೆಂದು ಸಾಕ್ರೆಟಿಸನಂತೆ ನಂಬಿದನು. ಸದ್ಗುಣದ ಹೊರತಾಗಿ ಉಳಿದ ಸಂಪತ್ತು, ಕೀರ್ತಿ, ಇಂದ್ರಿಯ ಸುಖ, ಸಂಸಾರ, ಮನೆಮಾರುಗಳು ತ್ಯಾಜ್ಯವೆಂದು ಈ ಪಂಥದವರು ಬೋಧಿಸಿದರು.

ಸೈರೆನಿಕ್ ಪಂಥ ಅಥವಾ ಸುಖವಾದ ಪಂಥ— ಇದನ್ನು ಅರಿಸ್ಟಿಪಸ್ ಎಂಬುವನು ಉತ್ತರ ಆಫ್ರಿಕಾದಲ್ಲಿ ಸ್ಥಾಪಿಸಿದನು. ಜೀವಿತದ ನಿಜವಾದ ಧ್ಯೇಯವು ಇಂದ್ರಿಯ ಸುಖದಲ್ಲಿದೆ. ದೀರ್ಘಕಾಲದ ಸುಖಕ್ಕಿಂತ ವಿಶೇಷವಾದ ಕ್ಷಣಮಾತ್ರ ಸುಖವೇ ಬೆಲೆಯುಳ್ಳದ್ದು. ಮಾನಸಿಕ ಸುಖಕ್ಕಿಂತ ದೇಹಿಕ ಸುಖಗಳೇ ಹೆಚ್ಚು ಬೆಲೆಯುಳ್ಳವು. ಪರರ ಸುಖಕ್ಕಿಂತ ಆತ್ಮಸುಖವೇ ಮಿಗಿಲಾದದ್ದು. ಹೀಗೆ ಇಂದ್ರಿಯಗಳಿಗೆ ಪ್ರಾಧಾನ್ಯ ಕೊಟ್ಟದ್ದರಿಂದ ಇವರ ಸುಖವಾದವು (*Hedonism*) ದೋಷಯುಕ್ತವಾಗಿದೆ. ಇದರಂತೆಯೇ ಚಾರ್ವಾಕರ 'ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ತಸ್ಮಾತ್ಸರ್ವ ಪ್ರಯತ್ನೇನ ಋಣಂ ಕೃತ್ವಾ ಘೃತಂ ಪಿಬೇತ್' ಅಂದರೆ ಸತ್ತವನು ಪುನಃ ಹುಟ್ಟುವದಿಲ್ಲವಾದ್ದರಿಂದ ಇರುವಾಗಲೇ ಯಾವ ಪ್ರಯತ್ನದಿಂದಾಗಲಿ ಸಾಲಮಾಡಿಯಾದರೂ ಸುಖಪಡೆಯಬೇಕೆಂಬ ಹೇಳಿಕೆಯಾಗಿದೆ.

---

# ಶೂನ್ಯಸಂಪಾದನೆಯ ರಹಸ್ಯ.

(ಲೇ:—ಮಿ. ಬ್ಯಾಳಿ ಕಲ್ಯಾಣಪ್ಪನವರು ಬಿ. ಎ. ಶ್ರೀ ಸಿದ್ಧೇಶ್ವರ ಹಾಯಸ್ಕೂಲ ವಿಜಾಪುರ.)

---

## ಚೆನ್ನಬಸವರಾಜದೇವರ ಸಂಪಾದನೆ.

ಈ ಸಂಪಾದನೆಯಲ್ಲಿ ಶ್ರೀ ಪ್ರಭುದೇವರು ಚನ್ನಬಸವದೇವರಾಜರಿಗೆ ಆಚಾರ, ಭಕ್ತಿ, ಅರಿವಿನ ಸೂಚನೆ, ಪ್ರಾಣಲಿಂಗಸಮರಸ ಈ ವಿಷಯಗಳನ್ನು ಕುರಿತು 'ವಿವರಿಸಿದ್ದರಿಂದ ಈ ಸಂಪಾದನೆಗೆ ಮೇಲ್ಕಾಣಿಸಿದ ಹೆಸರು ಪ್ರಾಪ್ತವಾಗಿದೆ. ಈ ಸಂಪಾದನೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಬಸವಣ್ಣನೇ ಇಷ್ಟಲಿಂಗ, ಚೆನ್ನಬಸವಣ್ಣನೇ ಪ್ರಾಣಲಿಂಗ, ಪ್ರಭುದೇವರೇ ಭಾವಲಿಂಗ ಎಂಬೀ ಗೂಢವಿಚಾರವು ವ್ಯಕ್ತವಾಗುತ್ತದೆ. ಕಾಯವೇ ಬಸವಣ್ಣ, ಪ್ರಾಣವೇ ಚೆನ್ನಬಸವಣ್ಣ ಭಾವವೇ ಪ್ರಭುವೆಂಬ ಗರ್ಭಿತಾರ್ಥವು ಸ್ಪಷ್ಟವಾಗಿ ಒಡೆದು ಕಾಣುತ್ತದೆ. ಸಾಕಾರವು ಬಸವನ ಸೊತ್ತೆಂದೂ, ಸಾಕಾರ-ನಿರಾಕಾರವು ಚೆನ್ನಬಸವನ ಸೊತ್ತೆಂದೂ, ನಿರಾಕಾರವು ಪ್ರಭುದೇವರ ಸೊತ್ತೆಂದೂ ಪ್ರತಿಯೊಬ್ಬರಿಗೆ ತಿಳಿಯುವಂತೆ ಇದೆ. ಬಸವನೇ ಗುರುವು, ಚೆನ್ನಬಸವನೇ ಲಿಂಗ, ಪ್ರಭುವೇ ಜಂಗಮನೆಂಬ ತತ್ವವು ಒಳ್ಳೇ ಸುಗಮವಾಗಿ ಇಲ್ಲಿ ವಿವರಿಸಲ್ಪಟ್ಟಿವೆ.

ಮೇಲೆ ಹೇಳಿದ ಮೂರು ತತ್ವಗಳು ಜಗತ್ತಿನಲ್ಲಿ ಪುರುಷರೂಪದಿಂದ ಹೊರಪಟ್ಟು ಅಧರೋತ್ತರ ವ್ಯಕ್ತಿತ್ವಕ್ಕೆ ಅವಕಾಶ ಕೊಡದೆ ಮೂರೂ ತತ್ವಗಳು ಸರಿಸಮಾನವಾಗಿರುವವೆಂಬ ವಿಚಾರವನ್ನು ಪರಸ್ಪರ ಪ್ರಶಂಸೆಯಿಂದ ಅವರು ತೋರಿಸಿಕೊಟ್ಟಿದ್ದಾರೆ. "ನಿನ್ನಿಂದ ನಾನು ಬದುಕಿದೆನು. ನಿನ್ನಿಂದ ನಾನು ಬದುಕಿದೆನು" ಎಂದು ಒಬ್ಬರಿಗೊಬ್ಬರು ವಿನೀತಭಾವದಿಂದ ಹೇಳಿಕೊಂಡದ್ದನ್ನು ನೋಡಿದರೆ ಅವರಲ್ಲಿ ಯಾರು ಹೆಚ್ಚು ಯಾರು ಕಡಿಮೆ ಎಂದು ನಿರ್ಧರಿಸುವದು ಶಕ್ಯವಿಲ್ಲ. ಈ ಮೇರೆಗೆ ತತ್ವಗಳನ್ನು ವಾಸ್ತವ ರೂಪದಲ್ಲಿ ಚಿತ್ರಿಸುವ ಜಾಣ್ಮೆಯು ನಮ್ಮ ಶಿವಶರಣರಿಗೆ ಚನ್ನಾಗಿ ಅಳವಟ್ಟಿದ್ದಿತೆಂಬ ಭಾವವು ತೋರಿಬರುತ್ತದೆ.

ಶರೀರದಲ್ಲಿ ಪ್ರಾಣಭಾವಗಳು ಬೆಸೆದಂತೆ ಅಡಗಿರುತ್ತವೆಂಬ ಮಾತನ್ನು ಪ್ರಭುದೇವರು ಈ ಪ್ರಕಾರವಾಗಿ ಚಿತ್ರಿಸಿದ್ದಾರೆ. "ಬಸವಣ್ಣನ

ಕಾರ್ಯದಲ್ಲಿ ಪ್ರಾಣಭಾವಗಳಡಗಿಹವು. ಆತನ ಅಂತರಂಗದಲ್ಲಿ ನಾನು ನಿಶ್ಚಿಂತವಾಸಿಯಾಗಿದ್ದೆನು. ಆತನ ಬಹಿರಂಗದಲ್ಲಿ ನಿಜವಾಸಿಯಾಗಿದ್ದೆನು. ಆತನ ಬಹಿರಂಗದಲ್ಲಿ ನಿರಾಲಂಬ ಜ್ಞಾನಿಯಾಗಿದ್ದೆನು. ಆ ಬಸವಣ್ಣನು ಎನ್ನಂತರಂಗದಲ್ಲಿ ನಿಜವಾಸಿಯಾಗಿದ್ದನು ಕಾಣಾ ಚನ್ನ ಬಸವಣ್ಣಾ." ಅಂದರೆ ಬಸವನೆಂಬ ಕಾಯದಲ್ಲಿ ಭಕ್ತಿರಸದಿಂದ ಪ್ರಭುವೆಂಬ ಭಾವವು ಎರಕ ಹೊಯ್ದಂತಾಗಿರುವದೆಂದು ಅವರ ತಾತ್ಪರ್ಯವು.

ಪ್ರಭುವಿನ ಮಾತನ್ನು ಕೇಳಿ ಚನ್ನಬಸವಣ್ಣನು ಬಸವ ಪ್ರಭುದೇವರಲ್ಲಿ ಭಕ್ತಜಂಗಮದ ಸಕೀಲ ಸಂಬಂಧವಿರುವದನ್ನು ಮನಗಂಡು ನುಡಿದುದೇನಂದರೆ" ಪ್ರಭುವೆ, ಭಕ್ತನಲ್ಲಿ ಜಂಗಮವಡಗಲು ಭಕ್ತನು ಅಧಿಕನಾಗುವನು. ಆತನು ಕ್ರಿಯಾನಿಷ್ಪತ್ತಿಯಿಂದ ಸಮರಸ ಸುಖಿಯಾಗುವನು. ಜಂಗಮದಲ್ಲಿ ಭಕ್ತನಡಗಿದರೆ ಜಂಗಮಾಧಿಕ್ಯದಿಂದ ಕರ್ತೃಭೃತ್ಯಭಾವವಳಿದು ಜಂಗಮವು ಸ್ವತಂತ್ರ ಶಿವಾಚಾರಿಯಾಗುವನು. ಈ ಉಭಯ ಭಾವವನ್ನೊಳಕೊಂಡ ಬಸವ ಪ್ರಭುದೇವರ ಶ್ರೀ ಪಾದಕ್ಕೆ ನಮೋ ನಮೋ ಎಂದು ಬದುಕಿದೆನು ಕೂಡಲ ಚನ್ನ ಸಂಗಮದೇವಾ."

ಆ ಮೇಲೆ ಪ್ರಭುದೇವರು ಕಾಯಪ್ರಾಣಗಳಿಂದಲೇ ಭಾವವು ಉದಯವಾಯಿತೆಂಬ ತತ್ವವನ್ನು ಈ ರೀತಿಯಾಗಿ ಹೇಳಿದ್ದಾರೆ. "ಬಸವಣ್ಣ ಎಂಬಲ್ಲಿ ಎನ್ನ ಕಾಯ ಬಯಲಾಯಿತ್ತು. ಚನ್ನಬಸವಣ್ಣ ಎಂಬಲ್ಲಿ ಎನ್ನ ಪ್ರಾಣ ಬಯಲಾಯಿತ್ತು. ಈ ಉಭಯಸ್ಥಲದ ನಿರ್ಣಯ ನಿಷ್ಪತ್ತಿಯೇ ಪ್ರಭುವೆಂಬ ಭಾವವಾಗಿತ್ತು ನೋಡಾ ಗುಹೇಶ್ವರಾ" ಇಲ್ಲಿ ಪ್ರಭುದೇವರು ಬಸವ ಚನ್ನಬಸವರನ್ನು ಅಧಿಕಮಾಡಿ ತಮ್ಮನ್ನು ಕಡಿಮೆ ಮಾಡಿ ಸ್ತುತಿಸಿದ್ದಾರೆ. ಅರ್ಥಾತ್ ಬಸವ ಚನ್ನಬಸವರಿಂದಲೇ ತಾವು ಬದುಕಿದರೆಂಬ ಭಾವವು ಈ ವಚನದಲ್ಲಿ ತೋರುತ್ತಿದೆ.

ಪ್ರಭುವು ತನ್ನ ಸ್ತುತಿ ಮಾಡಿದುದನ್ನು ಬಸವಣ್ಣನವರು ಅಪ್ಪಣೆ ಕೊಡಿಸಿದ್ದೇನಂದರೆ "ಬರೇ ಅಂಗದ ಮೇಲೆ ಲಿಂಗ ಧರಿಸಿ ಲಿಂಗಾರ್ಚನೆ ಮಾಡಿದರೆ ಭವ ಹಿಂಗದು. ಕಾರಣ ಪ್ರಾಣಲಿಂಗದ ಅನುಸಂಧಾನವು ಆವಶ್ಯ ಬೇಕು. ಆ ಪ್ರಾಣಲಿಂಗದ ನಿಜವ ಶ್ರೀ ಚನ್ನ ಬಸವಣ್ಣನು ನನಗೆ ತೋರಿದನಯ್ಯ. ಬರೇ ದಾಸೋಹ ಮಾಡಿದರೆ ಭವ ಹರಿಯದೆಂದು ಲಿಂಗಮುಖ ಜಂಗಮವಾಗಿ ಬಂದು ಎನ್ನ ರಕ್ಷಿಸಿದನಯ್ಯ ಪ್ರಭುದೇವರು.

ಈ ಮೋರೆಗೆ ಪ್ರಭುದೇವರ ಮತ್ತು ಚನ್ನಬಸವಣ್ಣನ ಕರುಣದಿಂದಲಾನು ಬದುಕಿದೆನು ಕೂಡಲಸಂಗಮದೇವಾ." ಈ ವಚನದಲ್ಲಿ ಬಸವೇಶನು ತನ್ನನ್ನು ಕೀಳ್ಮಾಡಿ ಪ್ರಭು ಚೆನ್ನಬಸವೇಶ್ವರರನ್ನು ಮೇಲುಮಾಡಿ ಸ್ತುತಿಸಿದ್ದು ಕಂಡುಬರುತ್ತದೆ.

ಬಸವೇಶನು ತಾನು ಚನ್ನಬಸವನಿಂದ ಬದುಕಿದೆನೆಂದ ನುಡಿಯನ್ನು ಕೇಳಿ ಪ್ರಭುವು "ಬೆಳಗುವ ಜ್ಯೋತಿಯ ತಿರುಳಿನಂತೆ ಹೊಳೆವ ಕಂಗಳ ಕಾಂತೆಯೊಳು ಅಳವಟ್ಟ ಶಿವಯೋಗಿಯ ಕಂಡೆ ನೋಡಾ. ನಿಜ ಉಂಡ ನಿರ್ಮಳದ ಘನವ ಕಂಡು ಬೆರಗಾದೆ ನಾನು. ಗುಹೇಶ್ವರ ಲಿಂಗದಲ್ಲಿ ಚನ್ನಬಸವಣ್ಣನಿಂದಲಾನು ಬದುಕಿದೆನು" ಎಂದು ತಾವೂ ಚೆನಬಸವೇಶನನ್ನು ಮೇಲುಮಾಡಿ ಸ್ತುತಿಸಿ ತಮ್ಮ ವಿನೀತಭಾವವನ್ನು ತೋರ್ಪಡಿಸಿದ್ದಾರೆ.

ಹೀಗೆ ಪರಸ್ಪರ ಪ್ರಶಂಸೆಯಾದ ತರುವಾಯ ಚನ್ನಬಸವರಾಜದೇವರು ಅಪ್ಪಣೆಕೊಡಿಸಿದ್ದೇನಂದರೆ "ಕೈಲಾಸದಿಂದ ಗುರುಲಿಂಗ ಜಂಗಮಕ್ಕೆ ಭಕ್ತಿಯಮಾಡಬೇಕೆಂದು ಏಳನೂರೆಪ್ಪತ್ತು ಪ್ರಮಥಗಣಂಗಳೊಂದಿಗೆ ಮರ್ತ್ಯಲೋಕಕ್ಕೈತಂದನಯ್ಯ ಬಸವಣ್ಣನು. ಭಕ್ತಿಯ ಸ್ಥಳಕುಳಂಗಳನ್ನು ಮರ್ತ್ಯಲೋಕದಲ್ಲಿ ಹರಡಲೆಂದು ಬಂದನಯ್ಯಾ ಬಸವಣ್ಣನು. ಬಿಜ್ಜಳನೆಂಬ ಒರೆಗಲ್ಲಿನಲ್ಲಿ ಶಿವಭಕ್ತಿಸಂಪಾದನೆಯ ಒರೆ ಹಚ್ಚಿ ಮೂವತ್ತಾರು ಕೊಂಡೆಯವರ ಪರಿಹರಿಸಿ ಶಿವಾಚಾರ ಧ್ವಜವನೆತ್ತಿಸಿದನಯ್ಯಾ ಬಸವಣ್ಣನು. ಆತನ ಆಚಾರದುಂದುಭಿಯ ನಾನೇನೆಂದುಪಮಿಸುವೆ? ಬೆಳಗಿ ತೊಳಗುತಲಿರ್ದುದು ಆತನ ಆಚಾರ. ಅರಿವಿನ ಆಚರಣೆಯ ತೆರನ ಉಸುರುತಲಿರ್ದುದು ಆತನ ಆಚಾರ. ಕಬ್ಬಿಣವ ಸುವರ್ಣಮಯವಾಗಿ ಮಾಡುವ ಪರುಷದಂತಿರ್ಪುದು ಆತನ ಆಚಾರ. ಸಂಪಿಗೆಯ ಪುಷ್ಪದಲ್ಲಿ ಕಂಪುಂಡ ಭ್ರಮರನಂತೆ, ಕೂಡಲಚನ್ನಸಂಗನಲ್ಲಿ ಶರಣಬಸವಣ್ಣನಾಚಾರ." ಈ ರೀತಿಯಾಗಿ ಚನ್ನಬಸವೇಶನು ಬಸವಣ್ಣನ ಭಕ್ತಿ ಆಚಾರಗಳನ್ನು ಉನ್ನತಶಿಖರಕ್ಕೇರಿಸಿರುವನು.

ಪ್ರಭುದೇವರು ಬಸವನ ಮಹಿಮಾತಿಶಯವನ್ನು ಈ ರೀತಿಯಾಗಿ ಕೊಂಡಾಡಿದರು. "ಆದಿಲಿಂಗ ಅನಾದಿಜಂಗಮವೆಂಬ ಭೇದವ ವಿವರಿಸಿ ತೋರಿದನಯ್ಯಾ ಬಸವಣ್ಣನು. ಕಾಯದ ಜೀವದ ಸಂಬಂಧವ ಮಾಡಿ

ತೋರಿದನಯ್ಯಾ ಬಸವಣ್ಣನು. ಎನ್ನ ಆದಿ ಅನಾದಿಯನು ಬಸವಣ್ಣ ನಿಂದ ತಿಳಿದು ನಮ್ಮ ಗುಹೇಶ್ವರಲಿಂಗದಲ್ಲಿ ಸುಖಿಯಾದೆನು ಕೇಳಾ ಚನ್ನ ಬಸವಣ್ಣಾ." ಈ ವಚನದಲ್ಲಿ ಜ್ಞಾನವು ಪರಮಾತ್ಮನಿಗಿಂತಲೂ ಅನಾದಿಯಾಗಿರುವದೆಂಬ ಭಾವವು ವ್ಯಕ್ತವಾಗುತ್ತದೆ.

ಈ ಮಾತಿಗೆ ಚನ್ನಬಸವದೇವರು ಪ್ರಭುವನ್ನುದ್ದೇಶಿಸಿ ಹೀಗೆ ಪ್ರಶ್ನ ಮಾಡಿದರು. "ನಿನಗೆ ಆದಿ ಅನಾದಿಗತೀತವಾದ ಲಿಂಗವೆಂತು ಸಾಧ್ಯ ವಾಯಿತು ಹೇಳಾ ಪ್ರಭುವೆ?" ಎನ್ನಲು ಪ್ರಭುವು 'ಆದಿಲಿಂಗ ಅನಾದಿ ಜಂಗಮವೆಂಬುದು ತನ್ನಿಂದ ತಾ ಮಾಡಲಾಯಿತ್ತು. ಧರೆ, ಆಕಾಶ, ಭವನಂಗಳು ಹುಟ್ಟದ ಮುನ್ನ ಪರಶಿವನು ತಾನೇ ತನ್ನ ಲೀಲೆಗೆ ಸಾಕಾರವ ಧರಿಸಿದೊಡೆ ಆ ಸಾಕಾರವೇ ಈ ಸಾಕಾರಲಿಂಗವಾಯಿತ್ತು. ಎನ್ನ ಸಾಕಾರ ನಿರಾಕಾರಗಳ ಆದಿಯನು ಬಸವಣ್ಣ ಬಲ್ಲನಾಗಿ ಗುಹೇಶ್ವರ ಲಿಂಗದ ಘನವು ಬಸವಣ್ಣನಿಂದ ಎನಗೆ ಸಾಧ್ಯವಾಯಿತ್ತು ಕಾಣಾ ಚನ್ನ ಬಸವಣ್ಣಾ." ಎಂದುಸುರಿದರು.

ಅದಕ್ಕೆ ಚನ್ನಬಸವಣ್ಣನು "ಆಯತವಿಲ್ಲದ ಅನುಭಾವ, ಸ್ವಾಯತವಿಲ್ಲದ ಸಮಾಧಾನ, ಸನ್ನಿಹಿತವಿಲ್ಲದ ಸಂಬಂಧವನೇನೆನಬಹುದಯ್ಯಾ? ಆದಿ ಅನಾದಿಯನೊಳಕೊಂಡ ಆಧಾರವಿಲ್ಲದ ನಿಲವು ನನಗೆ ಸಾಧ್ಯವಾಯಿತ್ತು ನೋಡಾ! ಕೂಡಲಚೆನ್ನಸಂಗನ ಶರಣ ಪ್ರಭುದೇವರು ಅಜಾತನೆಂಬ ಭೇದ ತಿಳಿಯಿತ್ತು." ಎಂದು ಹೇಳಿದ್ದಲ್ಲದೆ ಆ ನಿರಾಕಾರ ಮೂರ್ತಿಯಾದ ಪ್ರಭುವಿನಿಂದಲೇ ಸಮಸ್ತ ತತ್ವಂಗಳೆಲ್ಲ ಉತ್ಪನ್ನವಾದವೆಂದು ಈ ರೀತಿಯಾಗಿ ವಿಶದಪಡಿಸಿದ್ದಾನೆ. "ಬಯಲೇ ಮೂರ್ತಿಯಾಗಿ ನಿಂದನೊಬ್ಬ ಶರಣ. ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿಸ್ಥೈರಣೆಯಿಂದ ಹುಟ್ಟಿದಾತ ವಿಷ್ಣು. ಆತನ ಕೋಪಕ್ರೋಧದಿಂದ ಹುಟ್ಟಿದಾತ ರುದ್ರ. ಈ ತತ್ವತ್ರಯಂಗಳಿಗೆ ತಾನೆ ಕಾರಣವಾಗಿಪ್ಪ ಶರಣನ ನಿಲವನರಿದು ಶರಣೆನುತಿರ್ದೆನು ಕೂಡಲಚನ್ನಸಂಗಮದೇವಾ." ಈ ವಚನದಲ್ಲಿ ನಿರಾಕಾರವು ಆಯಾಯ ಗುಣವಿಶಿಷ್ಟತೆಯಿಂದ ಸಾಕಾರವಾಗುವದೆಂಬ ವಿಚಾರವು ತೋರಿಸಲ್ಪಟ್ಟಿದೆ.

ಆಮೇಲೆ ಪ್ರಭುದೇವರು ಚನ್ನಬಸವನ ಪ್ರಭಾವವನ್ನು ಅರ್ಥಾತ್ ಪ್ರಾಣದ ನಿಜವನ್ನು ಈ ಪ್ರಕಾರ ಕೊಂಡಾಡಿದ್ದಾರೆ. "ಅಯ್ಯಾ, ತತ್ವಾದಿ ತತ್ವಗಳಿಲ್ಲದಾಗ, ಪ್ರಕೃತಿ ಪುರುಷರಿಲ್ಲದಾಗ, ಜೀವಪರಮ

ರೆಂಬ ಭಾವ ತೋರದಾಗ, ಏನೇನೂ ಇಲ್ಲದಾಗ, ಬಯಲು ಬಲಿದು ಒಂದು ಬಿಂದುವಾಯಿತ್ತು ನೋಡಾ. ಆ ಬಿಂದು ಅಕ್ಷರತ್ರಯದ ಗದ್ದುಗೆಯಲ್ಲಿ ಕುಳ್ಳಿರಲು ಓಂಕಾರ ಉತ್ಪನ್ನವಾಯಿತ್ತು. ಆ ನಾದದಲ್ಲಿ ಮೂರ್ತಿಗೊಂಡನೊಬ್ಬ ಶರಣ. ಆ ಶರಣನಿಂದಾಯಿತ್ತು ಪ್ರಕೃತಿ. ಆ ಪ್ರಕೃತಿಯಿಂದಾಯಿತ್ತು ಲೋಕ. ಲೋಕ ಲೌಕಿಕವನತಿಗಳೆದು ನಿಜದಲ್ಲಿ ನಿವಾಸಿಯಾಗಿಪ್ಪ ಗುಹೇಶ್ವರನ ಶರಣ ಚನ್ನಬಸವಣ್ಣನ ಘನವನು ಬಸವಣ್ಣನ ಕೃಪೆಯಿಂದರಿದು, ನಮೋ ನಮೋ ಎನುತಿರ್ದೆನು." ಈ ವಚನದಲ್ಲಿ ಸಾಕಾರವು ನಿರಾಕಾರದಿಂದ ಹುಟ್ಟಿ ಕ್ರಮವಾಗಿ ನಾದಬಿಂದುಕಲೆಗಳಿಂದ ಕೂಡಿಕೊಂಡಿರುವದೆಂಬ ಭಾವವು ತೋರಿಸಲ್ಪಟ್ಟಿದೆ.

ಬಳಿಕ ಚನ್ನಬಸವೇಶನು ಪ್ರಭುವಿಗೆ ಬಸವಣ್ಣನ ಶ್ರೀಪಾದದ ಘನವನೆನಗೊಮ್ಮೆ ಅರುಹಬೇಕೆಂದು ಪ್ರಾರ್ಥಿಸಲು ಪ್ರಭುವು ಮರಳಿ "ಅದ್ವೈತಿಯಾದ ನನಗೆ ಎನ್ನ ಪೂರ್ವಾಪರ ಸಂಗತಿಗಳು ನಿಮ್ಮಿಂದ ತಿಳಿಯಲೆಂದು ನಾನು ನಿಮ್ಮನ್ನು ಮರೆಹೊಕ್ಕಿರಲು ಸಂಗನಬಸವಣ್ಣನ ಮಹಿಮೆಯನ್ನು ನಾನೆತ್ತಬಲ್ಲೆನು? ಗುಹೇಶ್ವರ ಸಾಕ್ಷಿಯಾಗಿ ಸಂಗನಬಸವಣ್ಣನು ನಿನ್ನಂತರಂಗದೊಳಗೆ ಬೆಳಗುತ್ತೈದಾನೆ. ಎನಗೊಮ್ಮೆ ಬಸವಣ್ಣನ ಘನವ ತಿಳುಹಿಸಿಕೊಡಾ ಚನ್ನಬಸವಣ್ಣಾ." ಎಂದು ಪ್ರಶ್ನೆಮಾಡಿದರು.

ಆ ಮೇರೆಗೆ ಚೆನ್ನಬಸವೇಶನು ಬಸವೇಶನ ಪೂರ್ವಾಪರ ಸಂಬಂಧವನ್ನು ಸುಜ್ಞಾನ ದೃಷ್ಟಿಯಿಂದರಿದು ಬಿನ್ನೈಸಿದ್ದೇನಂದರೆ— "ಪ್ರಭುವೇ, ಚತುರ್ದಶಭುವನಂಗಳು ಜನಿಯಿಸಿದ ಮುನ್ನ ಆಂದಾರೂ ಲಿಂಗವ ಕಂಡವರಿಲ್ಲ. ಆಗ ಲಿಂಗವ ಕೊಂಡು ಬಸವಣ್ಣನೊಬ್ಬನುದಯಿಸಿದನು. ಕೃತಯುಗದಲ್ಲಿ ಆಯಾಯ ಪ್ರಸಂಗಗಳಿಗನುಗುಣವಾಗಿ ಪ್ರಮಥ, ಉಗ್ರ, ನಿಶ್ಶಂಕ, ಶಂಕರ, ವಿಚಿತ್ರನೆಂಬ ಹೆಸರಿನ ಗಣಾಧೀಶನಾಗಿದ್ದನು. ತ್ರೇತಾಯುಗದಲ್ಲಿ ಕಾಲಾಗ್ನಿರುದ್ರ, ಮಾತಪಿತ, ತಾಳಮೇಳ, ಜನನಮರಣವರ್ಜಿತ, ಆದಿಗಣನಾಥ, ನಂದಿಮಹಾಂಕಾಳ, ವಂದ್ಯ, ಕಾಲಲೋಚನ, ನೀಲಲೋಹಿತ, ಸ್ಕಂದ, ನೀಲಕಂಠ ಈ ಹೆಸರಿನ ಗಣೇಶ್ವರನಾಗಿದ್ದನು. ದ್ವಾಪಾರದಲ್ಲಿ ವೃಷಭ, ನಂದಿಕೇಶ್ವರನೆಂಬ ನಾಮದ ಗಣಾಧೀಶ್ವರನಾಗಿದ್ದನು. ಕಲಿಯುಗದಲ್ಲಿ ಗುರುಲಿಂಗಜಂಗಮ ಪ್ರಾಣಿಯಾದ ಸರ್ವಾಚಾರ ಸಂಪನ್ನ ಬಸವಣ್ಣನೆಂಬ ಗಣಾಧೀಶ್ವರನಾಗಿ ಮೆರೆಯುತ್ತಿರ್ಪನು ನೋಡಾ" ಈ ವಚನವು ಮನುಷ್ಯನಿಗೆ ಜನ್ಮಜನ್ಮಾಂತರಗಳುಂಟೆಂದೂ

ಚೆನ್ನಬಸವಣ್ಣನಂಥ ತ್ರಿಕಾಲಜ್ಞಾನಿಯು ಅವುಗಳ ಪೂರ್ವಾಪರ ಸಂಗತಿಗಳನ್ನು ತಿಳಿಯಲು ಸಮರ್ಥನೆಂದೂ ನಮಗೆ ತಿಳಿಯುವದು.

ಪ್ರಭುದೇವರು ಚೆನ್ನಬಸವನ ತ್ರಿಕಾಲಜ್ಞಾನವನ್ನು ಈ ರೀತಿಯಾಗಿ ಹೊಗಳಿದರು. "ಹಿಂದೆ ಹೋದ ಯುಗಪ್ರಳಯಂಗಳನೆಲ್ಲ ಬಲ್ಲವರಾರಯ್ಯಾ! ಮುಂದೆ ಬಪ್ಪ ಯುಗಪ್ರಳಯಂಗಳ ಬಲ್ಲವರಾರಯ್ಯಾ? ಬಸವಣ್ಣನೇ ಆದಿ ಶರಣನೆಂದು ತಿಳಿದವರಾರಯ್ಯಾ ಚನ್ನಬಸವಣ್ಣನಲ್ಲದೆ ಗುಹೇಶ್ವರಾ." ಅದಕ್ಕೆ ಚನ್ನಬಸವೇಶನು ಪ್ರಭುವಿಗೆ ಬಸವಣ್ಣನು ಆದಿ ಶರಣನೆನ್ನಲಾಗದೆಂದು ಹೀಗೆ ಅರಿಕೆಮಾಡಿಕೊಳ್ಳುವನು. "ಆದಿ ಬಸವಣ್ಣನು ಅನಾದಿ ಲಿಂಗವೆಂಬುದು ತಾ ಹುಸಿ. ಈ ನುಡಿಯು ಕೇಳಲಾಗದು. ಆದಿಲಿಂಗ ಅನಾದಿ ಬಸವಣ್ಣನೆಂಬ ನುಡಿ ಸತ್ಯ. ಲಿಂಗವು ಬಸವಣ್ಣನುವರದಲ್ಲಿ ಹುಟ್ಟಿತ್ತು. ಜಂಗಮಪ್ರಸಾದಗಳು ಬಸವಣ್ಣನ ಅನುಕರಿಸಲಾದವು. ಇದು ಕಾರಣ ಕೂಡಲಸಂಗ, ನಿನ್ನಲ್ಲಿ ತ್ರಿವಿಧಸಂಪನ್ನ ಶರಣಸಂಗನಬಸವಣ್ಣ." ಈ ವಚನದಿಂದ ಬಸವಣ್ಣನೇ ವೀರಶೈವ ಮತಸ್ಥಾಪನಾಚಾರ್ಯನೆಂದೂ ಆತನಿಂದಲೇ ಲಿಂಗಜಂಗಮ ಪ್ರಸಾದಗಳುದ್ಭವಿಸಿದವೆಂದೂ ಸ್ಪಷ್ಟವಾಗಿ ತಿಳಿದುಬರುತ್ತದೆ.

ಪ್ರಭುದೇವರು ಶರೀರವಿಡಿದು ನೀನು ದಿವ್ಯಜ್ಞಾನಿಯಾಗಿರುವಿ ಎಂದು ಚನ್ನಬಸಪ್ಪಣ್ಣನನ್ನು ಹೊಗಳಲು ಆತನು ಕಾಯದಿಂದಲೇ ಲಿಂಗಜಂಗಮ ಪ್ರಸಾದದ ಸಂಪತ್ತು ದೊರಕೊಳ್ಳುವದೆಂದು ಹೇಳಿದನು. ಅದಕ್ಕೆ ಪ್ರಭುವು ಅಂಗವಿಡಿದು ಆಚಾರ ಉದಯಿಸುವದರಿಂದ ಆಚಾರವ ಭಿಕ್ಷವನಿಕ್ಕಬೇಕೆಂದು ಚನ್ನಬಸವನಿಗೆ ಬೇಡಿಕೊಳ್ಳಲು ಆತನು "ಪ್ರಭುವೇ ಸಂಗನಬಸವಣ್ಣನು ಆಚಾರವ ಬಲ್ಲನಲ್ಲದೆ ನಾನೆತ್ತ ಬಲ್ಲೆನಯ್ಯಾ? ಬಸವೇಶನು ಆಯತ ಸ್ವಾಯತ ಸನ್ನಿಹಿತನಾಗಿ ಆರಾಧ್ಯಲಿಂಗದಲ್ಲಿ ಅನುಭಾವಿಯಾಗಿಪ್ಪನು, ಜಂಗಮಲಿಂಗಪ್ರಾಣಿಯಾಗಿ ಪ್ರಾಣನಿಃ ಪ್ರಾಣವಾಗಿಪ್ಪನು. ಬಸವಣ್ಣನು ಆಚಾರ ಸಂಬಂಧದಿಂದ ಶ್ರೀಗುರುಸನ್ನಿಹಿತ ಅರುವಿನ ಸಂಬಂಧದಿಂದ ಲಿಂಗಸನ್ನಿಹಿತ. ಈ ಉಭಯ ಸನ್ನಿಹಿತವಾದಲ್ಲಿ ಜಂಗಮಲಿಂಗ ಸನ್ನಿಹಿತನು. ಬಸವರಾಜನು ಗುರುವಿನಲ್ಲಿ ಸದಾಚಾರಿ, ಲಿಂಗದಲ್ಲಿ ಶಿವಾಚಾರಿ, ಜಂಗಮದಲ್ಲಿ ಸಮಯಾಚಾರಿ ಪ್ರಸಾದದಲ್ಲಿ ಬ್ರಹ್ಮಚಾರಿ, ಆಚಾರದಲ್ಲಿ ಸುವಿಚಾರಿ ಕೂಡಲಚನ್ನಸಂಗಮದೇವಾ" ಇಂತೆಂಬುದಾಗಿ ವಿಶದಪಡಿಸಿದನು.

ಆ ಮೇಲೆ ಪ್ರಭುದೇವರು ಬಸವೇಶನು ಮಾಡುವ ದಾಸೋಹ ವನ್ನು ಪರೀಕ್ಷಿಸಬೇಕೆಂದು ಚೆನ್ನಬಸವಣ್ಣನಿಗೆ ಹೀಗೆ ಪ್ರಶ್ನೆಮಾಡಿದರು. "ಬಸವಣ್ಣನು ಜಂಗಮಸನ್ನಿಹಿತನಾದ ಬಳಿಕ ದಾಸೋಹಮಾಡಿ ಫಲ ವೇನಯ್ಯಾ? ಗುಹೇಶ್ವರಲಿಂಗದಲ್ಲಿ ಸಂಗನಬಸವಣ್ಣಂಗೆ ಆಚರಣೆತಿಳಿ ಯದುನೋಡಾ ಚನ್ನಬಸವಣ್ಣಾ" ಇದಕ್ಕೆ ಚನ್ನಬಸವಣ್ಣನು ಈ ಪ್ರಕಾರವಾಗಿ ಉತ್ತರಕೊಟ್ಟನು.

"ಆನೆಂಬುದಿಲ್ಲವಯ್ಯ ನಮ್ಮ ಲಿಂಗಮೂರ್ತಿ ಬಸವಣ್ಣಂಗೆ. ಮಿಂಚಿನಗೊಂಚಲಂತೆ ಹಿಂದೆ ರೂಪಾಗಿ ತೋರುತ್ತಿರ್ಪುದು. ಶರಣ ನೊಡಲುಗೊಂಡೊಡೆ ಸಾಮಾನ್ಯವೇ? ನಿಮ್ಮ ಶರಣಬಸವಣ್ಣನ ಪರಿ ಬೇರೆ. ಈತನು ದೃಷ್ಟಾದೃಷ್ಟ ಕಾಣಯ್ಯ, ಮುಟ್ಟದ ಮುಟ್ಟು ಕಾಣಯ್ಯ' ಅರಿಯದ ಅರಿವು ಕಾಣಯ್ಯ ಕೂಡಲಚನ್ನಸಂಗಮದೇವಾ ಸರ್ವಸಂಸಾರ ವಿರಹಿತನಾದ ಬಸವಣ್ಣನ ಶ್ರೀಪಾದಕ್ಕೆ ನಮೋನಮೋ ಎಂಬೆನು. ಪ್ರಭುವೇ ಬಸವಣ್ಣನ ಸಾಂಪ್ರದಾಯದಲ್ಲಿ ನನಗೂ ನಿಮಗೂ ನಿಜಪ ದವು ಸಾಧ್ಯವಾಯಿತ್ತು ನೋಡಾ"

ಆಗ ಪ್ರಭುವು ನಾನೂ ನೀನೂ ಒಂದೇಸಾಂಪ್ರದಾಯದವರು ಹೇಗಾ ದೆನೆಂದು ಒಳ್ಳೆ ಆತುರದಿಂದ ಚನ್ನಬಸವನನ್ನು ಹೀಗೆ ಕೇಳಿದನು. "ತಿಂಬ ಗಂಜಿ ಉಗುರ ಮೇಲೆ ಬಿದ್ದಂತಾಯಿತ್ತು. ಅರಸುವ ಬಳ್ಳಿ ಕಾಲ ಸುತ್ತಿ ದಂತಾಯಿತ್ತು. ಬಯಸುವ ಬಯಕೆ ತಾರ್ಕಣ್ಯಾ ಬಂದಿತ್ತು. ಗುಹೇಶ್ವರ ಲಿಂಗದಲ್ಲಿ ನನಗೂ ನಿನಗೂ ಒಂದಾದ ಪರಿ ಎಂತು ಹೇಳಾ ಚನ್ನಬಸ ವಣ್ಣಾ."

ಆ ಮೇಲೆ ಚೆನ್ನಬಸವಣ್ಣನು ಪ್ರಭುವಿಗೆ ಬಸವನ ಸೂತ್ರಸಂಬಂಧ ವನ್ನು ಈ ಪ್ರಕಾರ ತಿಳುಹಿಸಿದನು. "ಕಾಯ ಒಂದು, ಪ್ರಾಣ ಒಂದು ಭಾವ ಒಂದು, ಗುರು ಒಂದು, ಲಿಂಗ ಒಂದು, ಉಪದೇಶ ಒಂದು. ಕೂಡಲಚನ್ನಸಂಗಯ್ಯನಲ್ಲಿ ಬಸವಣ್ಣನ ಗರುಡಿಯಲ್ಲಿ ಇಬ್ಬರಿಗೆ ಅಭ್ಯಾಸ ಒಂದೇ ಕಾಣಾ ಪ್ರಭುವೇ" ಎಂದೆನ್ನಲು ಅದು ಹೇಗೆಂದು ಪ್ರಭುವು ಪುನಃ ಪ್ರಶ್ನೆ ಮಾಡಿದನು. ಅದಕ್ಕೆ ಚನ್ನಬಸವೇಶನು "ಪ್ರಭುವೇ ನನಗೆ ಲಿಂಗ ಕೊಟ್ಟಾತ ಬಸವಣ್ಣ. ನಿನ್ನ ಗುರುವಾದ ಅನಿಮಿಷದೇವರಿಗೆ ಲಿಂಗ ಕೊಟ್ಟಾತ ಬಸವಣ್ಣ. ಆ ಲಿಂಗ ನಿನಗೆ ಸೇರಿತ್ತಾಗಿ ಬಸವಣ್ಣನ ಸಾಂಪ್ರದಾಯದ ಕಂದನು ನೋಡಾ ನೀನು. ಚೆನ್ನಸಂಗಮನಾಥನೆಂಬ

ಲಿಂಗವನವಗ್ರಹಿಸಕೊಂಡಿಪ್ಪೆನಾಗಿ ಬಸವಣ್ಣನ ಸಾಂಪ್ರದಾಯದ ಕಂದನು ನೋಡಾ ನಾನು. ಇಂತು ಇಬ್ಬರಿಗೆಯೂ ಒಂದೇ ಸ್ಥಳಕುಳವಾದ ಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಬಸವಣ್ಣನ ಮಹಮನೆಯ ಪ್ರಸಾದ ಇಬ್ಬರಿಗೆಯೂ ಒಂದೇ ಕಾಣಾ. ಅನಿಮಿಷಂಗೆ ಬಸವಣ್ಣ ಗುರುವಾದ ಕಾರಣ ನಾನು ನಿನ್ನ ಚಿಕ್ಕ ತಮ್ಮ ಕೇಳಾ ಪ್ರಭುವೇ. ನಾವಿಬ್ಬರೂ ಬಸವನ ಶಿಷ್ಯರು ನೋಡಾ."

ಆ ಬಳಿಕ ಪ್ರಭುದೇವರು ಚನ್ನಬಸವಣ್ಣಂಗೆ ಹೀಗೆ ಪ್ರಶ್ನೆಮಾಡಿದರು. "ಅಂಗವಿಡಿದು ಅರಿದ ಅರಿವು ಅರಿವಲ್ಲ ಗುರುವಿಡಿದು ಅರಿದ ಅರಿವು ಅರಿವಲ್ಲ. ಗುರುವಿಡಿದು ಲಿಂಗ ಉಂಟೆಂಬುದು ಕಲ್ಪಿತ. ಅರಿವು ತನ್ನಿಂದ ತಾನಹುದಲ್ಲದೆ ಬೇರೊಬ್ಬರಿಂದ ಅದು ಹೇಗೆ ಸಾಧ್ಯವು ಹೇಳಾ ಚನ್ನಬಸವಣ್ಣಾ" ಇದನ್ನು ಕೇಳಿ ಚನ್ನಬಸವಣ್ಣನು ಸಿಟ್ಟಾಗಿ ಪ್ರಭುವಿಗೆ ಹಿಂದಿನ ಸಂಗತಿಯನ್ನು ಹೀಗೆ ನೆನಪುಮಾಡಿಕೊಡುತ್ತಾನೆ "ಗುರುವಿಲ್ಲದ ಲಿಂಗ ನಿನಗೆಲ್ಲಿಯದಯ್ಯಾ? ಕೊಂದೆ. ನಿಮ್ಮಯ್ಯನ ಕೊಂದೆ. ಅನಿಮಿಷನು ಅಂದು ನಿನಗೆ ಗುರುವಾಗಿ ಲಿಂಗವನು ಕೊಟ್ಟುದನರಿಯೆಯಾ? ಮೂರು ಲೋಕವರಿಯೆ ಅಲ್ಲಮುವ್ರತಗೇಡಿ, ಗುರುದ್ರೋಹಿ."

ಹಾಗೆ ಬೇಕೆಂತ ಬುದ್ಧಿಪೂರ್ವಕವಾಗಿ ಮಾತನಾಡಿದ್ದ ಪ್ರಭುವು ಇದನ್ನು ಕೇಳಿ ತನ್ನ ಮಾತನ್ನು ತಿದ್ದಿಕೊಂಡು ನುಡಿದುದೇನಂದರೆ, "ಗುರುವಿನ ಪ್ರಾಣ ಲಿಂಗದಲ್ಲಿ ಲಯ್ಯವಾದ ಬಳಿಕ ಆ ಲಿಂಗವೆನ್ನ ಕರಸ್ಥಲಕ್ಕೆ ಬಂದಿತ್ತು ನೋಡಾ ಇದ್ದಾನೆ ನೋಡಾ ಎನ್ನ ಗುರುವು ಅನಿಮಿಷನೆನ್ನ ಕರಸ್ಥಲದಲ್ಲಿದ್ದಾನೆ ನೋಡಾ. ಎನ್ನ ಗುರುವಿನ ಗುರುವು ಚನ್ನಬಸವಣ್ಣನೆನ್ನ ಕಂಗಳ ಮುಂದೆ ಇದ್ದಾನೆ. ಗುಹೇಶ್ವರ ಸಾಕ್ಷಿಯಾಗಿ ಎನ್ನಲ್ಲಿ ಗುರುದ್ರೋಹವಿಲ್ಲ ಕಾಣಾ ಚನ್ನಬಸವಣ್ಣಾ.

ಆಗ ಚನ್ನಬಸವಣ್ಣನು "ನೋಡುವದೊಂದು ನುಡಿಯುವದೊಂದು ನಿನ್ನಲ್ಲಿ ಎರಡುಂಟಲಾ. ಕರಸ್ಥಲದಲ್ಲಿ ಒಂದು ಮನಸ್ಥಲದಲ್ಲಿ ಒಂದು ಕೂಡಲಚನ್ನಸಂಗಯ್ಯನಲ್ಲಿ ಗುಹೇಶ್ವರನೆಂಬ ಲಿಂಗವು ನಿನಗೆಂತು ಸಾಧ್ಯವಾಯಿತ್ತು ಹೇಳಾ ಪ್ರಭುವೇ? ಎಂದು ಕೇಳಲು ಪ್ರಭುವು 'ಕರಸ್ಥಲದ ಲಿಂಗ ಮನಸ್ಥಲಕ್ಕೆ ವೇದ್ಯವಾಗಿ, ಮನಸ್ಥಲದ ಲಿಂಗ ಮಹಾಸ್ಥಲಕ್ಕೆ ವೇದ್ಯವಾದ ಬಳಿಕ ಇನ್ನು ಭಿನ್ನಭಾವಕ್ಕೆ ತೆರಹುಂಟೆ ಹೇಳಾ? ಲಿಂಗಪ್ರಾಣ, ಪ್ರಾಣಲಿಂಗವಾಯಿತ್ತು. ಗುಹೇಶ್ವರಲಿಂಗದಲ್ಲಿ ಸರ್ವಾಂಗ

ಪ್ರಾಣಲಿಂಗವಾಯಿತ್ತು ಕೇಳಾ ಚನ್ನಬಸವಣ್ಣಾ." ಎಂದು ಉತ್ತರ ಕೊಟ್ಟನು.

ಇದನ್ನು ಕೇಳಿ ಚನ್ನಬಸವಣ್ಣನು "ಸ್ವಯವಿಲ್ಲದೆ ಪರವಿಲ್ಲವೆಂಬುದು ನಿಮ್ಮಲ್ಲಿ ಕಾಣಬಂದಿತ್ತು ಕಾಣಾ ಪ್ರಭುವೇ," ಎಂದನು. ಆದರೆ ಉಭಯರು ಬಸವಣ್ಣನವರಿಗೆ ಗುರುತ್ವ ವಹಿಸಿ ಮಾತನಾಡಿದ್ದರಿಂದ ಬಸವೇಶನು ನುಡಿನುದೇನಂದರೆ "ಅಯ್ಯಾ, ನಿಮ್ಮ ಶರಣರೆನ್ನ ಪಾವನವ ಮಾಡಿ, ತಿಳುಹಿ ತಮ್ಮಂತೆ ಎನ್ನ ಮಾಡಿದ ಬಳಿಕ ನಾನು ಅವರು ಮಾಡಿದಂತೆ ಆದೆನಯ್ಯಾ ನಾನೊಬ್ಬನು ನಿಮ್ಮ ಶರಣರ ಬಳಗದವನು. ಕೂಡಲಸಂಗನ ಶರಣರು ಮೆಚ್ಚಿ ಎನಗೊಲಿದರೆ ನಾನು ಬದುಕಿದೆನಲ್ಲದೆ ಸಮರಸ ಸಂಗಕ್ಕೆ ಸರಿಯೆ ಹೇಳಾ ಚನ್ನಬಸವಣ್ಣಾ. ನೀನು ನನಗೆ ಪಂಚಾಚಾರ ಷಟ್‌ಸ್ಥಲಗಳ ಮಹಿಮೆಯನ್ನು ತಿಳಿಸಿಕೊಟ್ಟ ಪರಮಾರಾಧ್ಯನು ನೋಡಾ" ಹಿಮಗಿರಿಯ ಕದ್ದು ಭೂಮಿಯಲ್ಲಿ ಅಡಗಿಸಿಹೆನೆಂದರೆ ಆ ಕಳವು ಸಿಕ್ಕದೆ ಮಾಣ್ಬುದೇ? ಬಸವೇಶನು ತನ್ನ ಮಹಾತ್ಮ್ಯವನ್ನು ಮುಚ್ಚಿಟ್ಟು ವಿನೀತ ಭಾವವನ್ನು ಹೊರಪಡಿಸಿದರೆ ಆತನ ಪ್ರಕಾಶವು ಬೆಳಗದಿದ್ದೀತೆ? ಪ್ರಭುಚನ್ನಬಸವೇಶ್ವರರು ಆತನ ಮಹಿಮಾತಿಶಯವನ್ನು ಮನವಾರೆ ಕೊಂಡಾಡಿದರು.

ಈ ಸಂಪಾದನೆಯಲ್ಲಿ ನಮಗೆ ಕಂಡುಬರುವ ವಿಶೇಷ ಸಂಗತಿ ಏನಂದರೆ ಬಸವೇಶನೇ ಇಷ್ಟಲಿಂಗವೆಂಬ ಜ್ಯೋತಿಯನ್ನು ಪ್ರಕಾಶಕ್ಕೆ ತಂದವನು. ಚನ್ನಬಸವನಿಗೂ, ಪ್ರಭುವಿನ ಗುರುವಾದ ಅನಿಮಿಷದೇವರಿಗೂ ಲಿಂಗವನ್ನು ದಯಪಾಲಿಸಿದವನು ಬಸವಣ್ಣನೇ. ಅಂತೆಯೇ ಬಸವಣ್ಣನಿಗೆ ಅನಾದಿ ಭಕ್ತನೆಂದೂ ಲಿಂಗಕ್ಕೆ ಆದಿಲಿಂಗವೆಂದೂ ಚನ್ನಬಸವಣ್ಣನವರು ವಿಶದ ಪಡಿಸಿದ್ದಾರೆ.

# ಆವಾವ ದಾರಿಯೊಲು ಹೊಳೆಹಳ್ಳ ಹರಿದರೂ.

೧

ಆವಾವ ದಾರಿಯಲು ಹೊಳೆಹಳ್ಳ ಹರಿದರೂ
ಮುನ್ನೀರಿನಾಳವನೆ ಸೇರಲೆಂದೇ!
ಆವಾವ ರೀತಿಯಲು ಶಶಿತಾರೆ ತಿರುಗಿದರು
ಆ ದಿವ್ಯ ಸೂರ್ಯನನೆ ಸಾರಲೆಂದೇ!

೨

ಆವಾವ ಕೊರಳಿನಲಿ ಹಕ್ಕಿಗಳು ಹಾಡಿದರು
ಆ ನಾದಬ್ರಹ್ಮನಲಿ ಮೀಯಲೆಂದೇ!
ಆವಾವ ಬೆಡಗಿನಲಿ ಕುಸುಮಗಳು ಅರಳಿದರು
ತವೊಮ್ಮೊಲಾಪಾದ ಕೆಡೆಯೀಯಲೆಂದೇ

೩

ಆವಾವ ವೇಷದಲು ಜಗದಿ ನಾ ಭ್ರಮಿಸಿದರು
ನಿನ್ನನ್ನು ಕೊನೆಗೊಮ್ಮೆ ಕೂಡಲೆಂದೇ!
ಆವಾವ ಭಾವದಲು ನಾ ಹಾಡುತಿದ್ದರೂ
ನಿನ್ನುಸಿರನೇ ಜಗದಿ ತೀವಲೆಂದೇ!

ಈಶ್ವರಸಣಕಲ್ಲ.

# ನೂತನ ದೃಷ್ಟಿಕೋನ

## (ಕೇವಲ ತಾತ್ವಿಕದೃಷ್ಟಿಯಿಂದ)

(ಬರೆದವ:— ಹೊ. ರು. ಮಹಾಂತಯ್ಯ. ಬಿ. ಎ. (ಆನರ್ಸ) ಎಲ್. ಎಲ್. ಬಿ.
ಹೊನ್ನುಡಿಕೆ ಜಿ|| ತುಮಕೂರು.)

ಪ್ರಪಂಚದಲ್ಲಿ ನಾಗರಿಕತೆಯ ಅನೇಕ ಮೆಟ್ಟಿಲುಗಳಲ್ಲಿರುವ ಪ್ರತಿ ಜನಸಮುದಾಯಕ್ಕೂ, ತನ್ನ ಸಂಸ್ಕೃತಿ ದ್ಯೋತಕಗಳಾದ ಹೊತ್ತಗೆಗಳುಂಟು. ನಾಗರಿಕತೆಯಲ್ಲಿ ಮೇಲೇರಿದ ಅನೇಕ ಜನಾಂಗಗಳು ತಮ್ಮ ಸಂಸ್ಕೃತಿಯನ್ನು ಪುರಾಣ ಮಹಾಕಾವ್ಯ ಮತಗ್ರಂಥಗಳು, ಮತ್ತು ಜನದ ಸಾಹಿತ್ಯ ಇವುಗಳಲ್ಲಿ ಹರಿಯಿಸಿ ತಮ್ಮ ಸಮಾಜ ಜೀವಿಗಳಿಗೆ ಕುಡಿಸಿ, ಅವರ ಅವಿದ್ಯಾರೂಪವಾದ ನೀರಡಿಕೆಯನ್ನು ಕಡಿಮೆ ಮಾಡಲು ಪ್ರಯತ್ನಿಸಿವೆ. ಈ ಹೊತ್ತಗೆಗಳನ್ನು ಅವುಗಳ ಜನಕರು ಬಹಳ ಎಚ್ಚರಿಕೆಯಿಂದಲೂ ಜಾಣತನದಿಂದಲೂ ಬರೆದಿದ್ದಾರೆ. ಅವುಗಳ ಹುಟ್ಟು ಕಾಲ, ದೇಶ, ವರ್ತಮಾನಗಳನ್ನು ಅವಲಂಬಿಸಿವೆ. ಆ ಹೊತ್ತಗೆಗಳು ಇಂದೂ ನಮ್ಮ ಕೈಲಿವೆ; ಆದರೆ ಅವುಗಳನ್ನು ಬರೆದ ಕಾಲ, ದೇಶ, ವರ್ತಮಾನಗಳು ಮಾತ್ರ ಬದಲಾಗಿವೆ. ಆದುದರಿಂದ ಅವು ಜನಗಳಿಗೆ ರುಚಿಸವು. ತಮ್ಮ ಸನ್ನಿವೇಶ ಮತ್ತು ಮನೋಭಾವಗಳಿಗೆ ಅನುಗುಣವಾದ ಹೊಸ ಸಾಹಿತ್ಯವನ್ನು ಜನರು ಬೇಡುತ್ತಿದ್ದಾರೆ. ನಮ್ಮ ಪುರಾತನ ಸಾಹಿತ್ಯವನ್ನೆಲ್ಲಾ ಅಳಿಸಿ ಹೊಸ ಸಾಹಿತ್ಯವೊಂದನ್ನು ಸ್ಥಾಪಿಸಲೆತ್ನಿಸುವುದು ಸಾಧ್ಯವೂ ಅಲ್ಲ; ಯುಕ್ತವೂ ಅಲ್ಲ. ಏಕೆಂದರೆ ನಮ್ಮ ಹಿರಿಯರು ನಮಗಾಗಿ ಸಂಪಾದಿಸಿಟ್ಟಿರುವ ಅನೇಕ ರತ್ನಗಳನ್ನು ಕಳೆದುಕೊಳ್ಳಬೇಕಾದೀತು. ಆದುದರಿಂದಲೇ ನಮ್ಮ ಪ್ರಾಚೀನ ಸಾಹಿತ್ಯವನ್ನು ಚೆನ್ನಾಗಿ ಮನನಮಾಡಿ ಅವುಗಳಲ್ಲಿ ಇರುವ ವಿಷಯ ರತ್ನಗಳನ್ನೆಲ್ಲಾ ನವೀನ ಮನೋಭಾವಗಳಿಗೆ ಅನುಗೊಳಿಸಿ ಬರೆದು ಅವುಗಳ ಮಹತ್ವವನ್ನು ಜನಗಳಿಗೆ ತಿಳಿಯಪಡಿಸಬೇಕಾದುದು ಆಧುನಿಕ ಸಾಹಿತಿಗಳ ಕರ್ತವ್ಯಗಳಲ್ಲೊಂದಾಗಿದೆ.

ಪ್ರಕೃತ ಲೇಖನದಲ್ಲಿ ಮತಗ್ರಂಥಗಳ ವಿವೇಚನೆಯನ್ನು ಮಾತ್ರ ಮಾಡಲೆಳಸೋಣ. ಉದಾಹರಣೆಗಾಗಿ ಯೇಸುಕ್ರಿಸ್ತನು ಬೈಬಲ್‌ಗ್ರಂಥದ

ಜನಕನು. ಜೀವಿಗಳ ಆತ್ಮಗಳು ಆದಿಪುರುಷರಾದ "ಆಡ್ಯಾಮ್ ಮತ್ತು ಈವ್" (*Adam and Eve*) ಇವರ ಪಾಪದ ಭಾರದಿಂದ ಕ್ಷುಬ್ಧವಾಗಿದ್ದವು. ಅವುಗಳನ್ನು ಆ ಹೊರೆಯಿಂದ ಬಿಡುಗಡೆ ಮಾಡಲು ಹುಟ್ಟಿದವನು ಆ ಮಹಾಪುರುಷನು. ಆತನ ಗ್ರಂಥವು ಜಗತ್ತಿನ ಗ್ರಂಥರತ್ನಗಳಲ್ಲೊಂದಾಗಿದೆ. ಆತನ ತತ್ವಗಳು ಇಂದೂ ಅಚ್ಚಳಿಯದೆ ನಿಂತಿವೆ. ಆದರೆ ಆ ಮುಖ್ಯವಾದ ಅನೇಕ ವಿಷಯಗಳಲ್ಲಿ ಕಾಲ, ದೇಶ, ವರ್ತಮಾನಗಳ ಪರಿವರ್ತನದಿಂದ ಜನರಲ್ಲಿ ಸಂದೇಹ ಹುಟ್ಟಿ ಮುಖ್ಯ ತತ್ವಗಳಿಗೆ ಗೂಢಕ್ಕೆ ಬೀಳುವ ಸಂದರ್ಭ ಬಂತು. ಪಾಶ್ಚಾತ್ಯರು ಬಹಳ ಜಾಗ್ರತಿಯಿಂದ ಅವನ್ನೆಲ್ಲಾ ತತ್ವಶಾಸ್ತ್ರದ ಒರೆಗೆ ಹಚ್ಚಿ ಉತ್ತಮವಾದವುಗಳನ್ನು ಧೃಢೀಕರಿಸಿ ಅಯುಕ್ತವಾದವುಗಳನ್ನು ತೀವ್ರವೇ ತ್ಯಜಿಸಿ ತಮ್ಮ ಮತವೂ ಮತಗ್ರಂಥವೂ ಬಹುಜನಗಳಿಂದ ವ್ಯಕ್ತವಾಗವಂತೆ ಜಾಗರೂಕತೆಯನ್ನು ತೋರಿಸಿದರು.

ಅಲ್ಲಿ ಎದ್ದ ಅಲೆಯೇ ಆಂಗ್ಲಪ್ರಭುತ್ವದೊಡನೆ ಆವರ ಸಂಸ್ಕೃತಿಯ ಮೂಲಕ ಹಿಂದುಸ್ಥಾನಕ್ಕೆ ಬಂತು. ಬಂಗಾಳದಲ್ಲಿ ತೀವ್ರವಾಗಿ ಪಾಶ್ಚಾತ್ಯಸಾಹಿತ್ಯ ಮತ್ತು ವಿಜ್ಞಾನಗಳು ಬೇರೂರಿದವು. ಪಾಶ್ಚಾತ್ಯಸಾಹಿತ್ಯ ಮತ್ತು ವಿಜ್ಞಾನಗಳಿಂದ ಸಂಪಾದಿಸಿದ ದೃಷ್ಟಿಕೋನದಿಂದ ಹಿಂದೂಗಳು ತಮ್ಮ ಮತಗ್ರಂಥಗಳನ್ನು ಪರೀಕ್ಷಿಸಹತ್ತಿದರು. ಬೇರೊಂದು ಕಾಲ, ದೇಶ, ವರ್ತಮಾನಗಳಿಗಾಗಿ ಬರೆದಿದ್ದ ತಮ್ಮ ಪುರಾತನ ಗ್ರಂಥಗಳು ಅವರಿಗೆ ರುಚಿಸಲಿಲ್ಲ. ತಮ್ಮ ಧರ್ಮದಲ್ಲಿ ಅವರಿಗೆ ನಿರಾಶೆ ಮತ್ತು ತುಚ್ಛಭಾವಗಳು ಹುಟ್ಟಿದುವು. ಕ್ರೈಸ್ತ ಪಾದ್ರಿಗಳು ತಾವು ಮೊದಲೇ ಸಂಸ್ಕೃತವಾಗಿ ಮಾಡಿದ್ದ ತಮ್ಮ ಮತಗ್ರಂಥಗಳನ್ನು ಹರಡಿ ಜನಗಳನ್ನು ಎಳೆಯಲು ಪ್ರಯತ್ನಿಸಿದರು. ಬಹು ಶೀಘ್ರವಾಗಿ ಬಂಗಾಳದ ಸುಪ್ರಸಿದ್ಧವಾದ ಅನೇಕ ಮನೆತನಗಳು ಕ್ರೈಸ್ತ ಮತವನ್ನು ಅವಲಬಿಸಿದವು. ಅವರು ಬರಗಾಲದಲ್ಲಿ ಅನ್ನಕ್ಕೋಸ್ಕರ ಮತಾಂತರ ಹೊಂದಿದವರಲ್ಲ; ಚನ್ನಾಗಿ ಪರಿಶೀಲಿಸಿ ಮನಸೋತು ಕ್ರೈಸ್ತ ಮತಕ್ಕೆ ಸೇರಿದವರು. ಈ ಮತಾಂತರದ ದಾಳಿಯು ಬಹಳ ಕಾಲ ನಡೆಯಿತು. ಅದಕ್ಕೆ ಎದುರು ದಾಳಿಯು ನುಗ್ಗದೆ ಹೋಗಿದ್ದರೆ, ಶಿವಾಜಿ ಮಹಾಪ್ರಭುವು ಜನ್ಮಧಾರಣೆಮಾಡದೆ ಹೋಗಿದ್ದರೆ ದಕ್ಷಿಣದೇಶಕ್ಕೆ ಎಂತಹ ಕೇಡಾಗುತ್ತಿತ್ತೊ, ಅಂತಹ ಕೇಡೇ ಇಡೀ ಹಿಂದೂದೇಶಕ್ಕೆ ಆಗುತ್ತಿತ್ತು. ಆ ಕಾಲಕ್ಕೆ ಭಗವಾನ್ ರಾಮಕೃಷ್ಣ ಪರಮಹಂಸರ ಜನ್ಮಧಾರಣೆಯಾಯಿತು. ಸನಾತನ ಮಾರ್ಗದಿಂದಲೇ

ಸನಾತನ ಸಂಸ್ಕೃತಿಯೆಂಬ ಮೊಸರನ್ನು ಕಡೆದು ನವೀನವಾದ ಸನಾತನ ನವನೀತವನ್ನು ಸಿದ್ಧಮಾಡಿದ್ದು, ಪಾಶ್ಚಾತ್ಯ ದೃಷ್ಟಿಕೋಣದಲ್ಲಿ ತಪಿಸುತಿದ್ದ ಸ್ವಾಮಿ ವಿವೇಕಾನಂದರಿಗೆ ಕೊಟ್ಟು, ಅವರ ಮೂಲಕ ಹಿಂದೂ ಮತವು ಪುನರುಜ್ಜೀವನಗೊಳಿಸುವಂತೆ ಮಾಡಿದರು. ಹಿಂದೂ ಧರ್ಮದ ಶ್ರೇಷ್ಠತೆಯನ್ನು ತೋರಿಸಿ, ಅದರಲ್ಲಿ ವಿಶ್ವಾಸವನ್ನು ನೆಲೆಗೊಳಿಸಿದರು. ಭಾರತೀಯರೇ ಏಕೆ? ಅಮೇರಿಕದವರೇ ಮುಖ್ಯವಾಗಿ ಇತರ ಪಾಶ್ಚಾತ್ಯರು ಹಿಂದೂಧರ್ಮಕ್ಕೆ ಗೌರವ ಮತ್ತು ಪೂಜ್ಯತಾರೂಪವಾದ ಕಾಣಿಕೆಯನ್ನು ಕೊಡುವಂತೆ ಮಾಡಿದರು. ಮೊದಲೇ ಮತಾಂತರ ಹೊಂದಿದ್ದವರು ಪಶ್ಚಾತ್ತಾಪಪಡಲಾರಂಭಿಸಿದರು. ಅವರಿಗಾಗಿ " ಶುದ್ಧಿ " ಸಮಾರಂಭವು ಕಾಲಕ್ರಮದಿಂದ ಪ್ರಚಾರಕ್ಕೆ ಬಂತು. ಇಲ್ಲಿ ಆರ್ಯಸಮಾಜ ಮತ್ತು ಬ್ರಹ್ಮಸಮಾಜದ ಪ್ರತಿಷ್ಠಾಪಕರು ಮಾಡಿದ ಕಾರ್ಯಗಳನ್ನು ನೆನಸದಿರುವದು ಕೃತಘ್ನತೆಯಾದೀತು. ಇವರು ವೇದವೇ ಮೊದಲಾದ ಗ್ರಂಥಗಳಲ್ಲಿಯೂ, ರೂಢಿಯಲ್ಲೂ ಬಂದಿದ್ದ ಅನೇಕ ಅಸಾಧುವಾದ ವಿಷಯಗಳನ್ನೆಲ್ಲಾ ಒಂದೇ ಪೊರಕೆಯಿಂದ ಗುಡಿಸಿಬಿಟ್ಟು ಹಿಂದೂ ಸಂಸ್ಕೃತಿ ಗೃಹವನ್ನು ಸ್ವಚ್ಛಮಾಡಿಟ್ಟರು. ದಯಾನಂದ ಸರಸ್ವತಿಯವರು ವೇದಾದಿ ಗ್ರಂಥಗಳಿಗೆಲ್ಲಾ ಉತ್ತಮವಾದ ಅರ್ಥ ಕಲ್ಪನೆಯನ್ನು ಮಾಡಿರುವುದು ಸಕಲ ಮನುಷ್ಯರ ಹೃದಯವನ್ನೂ, ಮನಸ್ಸನ್ನೂ ಹರಣಮಾಡಿದೆ.

ಈ ವಿಧವಾದ ಸ್ವಚ್ಛೀಕರಣವು ವೀರಶೈವ ಸಮಾಜದಲ್ಲಿ ಇಂದು ಬೇಕಾಗಿದೆ. ಹಳೆಯ ಹೊತ್ತಿಗೆಗಳು ಹೊಸ ಸನ್ನಿವೇಶಗಳಿಗೆ ಸರಿಹೋಗದೆ ಜನರು ಸಂಶಯಾತ್ಮರೂ, ನಿರಾಶರೂ ಆಗುತ್ತಿದ್ದಾರೆ. ಇದನ್ನು ತೀವ್ರವಾಗಿ ಗುಣಪಡಿಸುವುದು ಹಿಂದುಗಳ ಮುಖ್ಯವಾಗಿ ಲಿಂಗಾಯತರ ಕರ್ತವ್ಯವಾಗಿದೆ. ಇವರು ತಮ್ಮ ಸಂಸ್ಕೃತಿ ಮತ್ತು ಸಾಹಿತ್ಯದಲ್ಲಿರುವ ಉತ್ತಮವಾದ ಮತ್ತು ಪೌರ್ವಾತ್ಯ ಪಾಶ್ಚಾತ್ಯರ ಮನ್ನಣೆಗೆ ಪಾತ್ರವಾಗುವ ಏಕೆ ಮಾನವ ಮನೋಭಾವಕ್ಕೆ ಸರಿದೋರುವ ವಸ್ತುಗಳನ್ನು ಹೆಣಗಿ ಹೆಣಗಿ ಉಳಿಸಿಕೊಳ್ಳಬೇಕು. ಅನುಪಯುಕ್ತ ಅಯುಕ್ತ ಮತ್ತು ಆಧುನಿಕ ಸನ್ನಿವೇಶ ವಿರುದ್ಧವಾದ ವಸ್ತುಗಳನ್ನು ನಿರಭಿಮಾನಪೂರ್ವಕವಾದ ಸಮತಾದೃಷ್ಟಿಯಿಂದ ತ್ಯಜಿಸಲೇಬೇಕು. ಕಿಲುಬನ್ನು ತೆಗೆಯುವುದರಿಂದ ಲೋಹನಿರ್ಮಿತ ಪುತ್ಥಳಿಯು ರಂಜಿಸುವುದಿಲ್ಲವೆ?

ಉದಾಹರಣೆಗಾಗಿ ವೀರಶೈವರ ಕೆಲವು ಮತಗ್ರಂಥಗಳು ತಮ್ಮ ಐದು ಜನ ಆಚಾರ್ಯರು ಲಿಂಗೋದ್ಭವರೆಂದು ಬೋಧಿಸುತ್ತವೆ. ಇದರ

ಸತ್ಯಾಸತ್ಯತೆಯನ್ನೂ, ಯುಕ್ತಾಯುಕ್ತತೆಯನ್ನೂ ವಿವೇಚಿಸೋಣ. ನಿಷ್ಪಕ್ಷಪಾತ ದೃಷ್ಟಿಯಿಂದ, ನಿರುಗ್ರ ಬುದ್ಧಿಯಿಂದ, ಸಮತಾಭಾವದಿಂದ.

ಪ್ರಾಣಿವರ್ಗವು— ಪ್ರಾಣಿವರ್ಗಶಿಖರವೇ ಮನುಷ್ಯ ಲೋಹವರ್ಗದಿಂದ ಹುಟ್ಟುವುದು ಸಾಧ್ಯವೇ? ಸೃಷ್ಟಿಯನ್ನೆಲ್ಲಾ ಸಾಮಾನ್ಯವಾಗಿ ಮೂರು ಮೆಟ್ಟಲುಗಳುಳ್ಳ ಪ್ರಗತಿದ್ಯೋತಕವಾದ ಒಂದು ಏಣಿಯ ಹೋಲಿಕೆಯಿಂದ ತಿಳಿಯಬೇಕಾದರೆ ಅದನ್ನು ಲೋಹವರ್ಗ, ಸಸ್ಯವರ್ಗ, ಪ್ರಾಣಿವರ್ಗ ಎಂದು ವಿಂಗಡಿಸಬಹುದು. ಲೋಹ ವರ್ಗದಲ್ಲಿ ಕಲ್ಲು, ಮಣ್ಣು, ಖನಿಜ ಇತ್ಯಾದಿಗಳು ಸೇರುತ್ತವೆ. ಇವು ಅಚರ ವಸ್ತುಗಳು. ಇವುಗಳಲ್ಲಿ ಪ್ರಾಣವಿಲ್ಲವೆಂದೇ ಸಾಮಾನ್ಯ ಕಲ್ಪನೆ. ಆದರೆ ಆಧುನಿಕ ಸಂಶೋಧನೆಗಳಿಂದ ವಿಜ್ಞಾನಕ್ಕೂ ತತ್ವಶಾಸ್ತ್ರಕ್ಕೂ ವೈರುಧ್ಯಹೋಗಿ ಸ್ನೇಹ ಬೆಳೆದಿರುವುದರಿಂದ ಇಷ್ಟು ಮಾತ್ರ ನಮಗೆ ಸಿದ್ಧವಾಗುತ್ತದೆ. ಭೌತಿಕ ಶಾಸ್ತ್ರವು ವಿಭಜನಾ ದೃಷ್ಟಿಯಿಂದ ಹೊರಟು ಮೊದಲಿನಲ್ಲಿ ವಸ್ತುವನ್ನು ಚೇತನ ಮತ್ತು ಅಚೇತನ (*Energy and matter*) ಎಂದು ಎರಡು ಭಾಗ ಮಾಡಿತು. ಅಚೇತನದ ವಿಭಜನೆಯ ಪರಮಾವಧಿಯಲ್ಲಿ ಸಿಕ್ಕಿದ ಅಣು (*Atom*)ವೂ ಕೂಡ ಅಚೇತನವೇ ತಾನೇ! ಆದರೆ ಭೌತಿಕ ಶಾಸ್ತ್ರವು ಮುಂದುವರಿದಂತೆಲ್ಲಾ ಅಣುವನ್ನು ವಿಭಜನೆ ಮಾಡಿತು. ಅದರಲ್ಲಿ ಸಿಕ್ಕಿದುವು ಪ್ರಕೃತಿ ಮತ್ತು ಪುರುಷ (*Proton & Electron*). ಇವೂ ದೃಷ್ಟಿಗೆ, ಏಕೆ, ಮನಸ್ಸಿಗೆ ಕೂಡ ಅಗಾಧವಾದಷ್ಟು ವೇಗದಿಂದಲೂ ನಿಯಮ ನಿರಂಕುಶತ್ವದಿಂದಲೂ ಸಂಚರಿಸುತ್ತವೆ. ಅಂದರೆ ಯಾವುದನ್ನು ನಾವು ಅಚೇತನವೆಂದು ಬಹುಕಾಲ ತಿಳಿದಿದ್ದೆವೋ ಅದು ಚೈತನ್ಯವಲ್ಲದೆ ಬೇರೆಯಲ್ಲವೆಂಬುದು ಗೋಚರವಾಯಿತು. "ಅಣೋರಣೀಯಾನ್ ಮಹತೋಮಹೀಯಾನ್" ಎಂಬ ವೇದಾಂತ ವಾಕ್ಯವು ದೃಢೀಕೃತವಾಯಿತು.

ಸಸ್ಯವರ್ಗದಲ್ಲಿ ಜೀವವುಂಟು, ಅಲ್ಲಿ ಹೃದಯವುಂಟು ಎಂಬ ಸಿದ್ಧಾಂತವನ್ನು ಸುಪ್ರಸಿದ್ಧ ಸಸ್ಯ ಶಾಸ್ತ್ರಜ್ಞರಾದ ಜಗದೀಶ ಚಂದ್ರ ಬೋಸರು ನಮಗೆ ಅರುಹಿದ್ದಾರೆ. ಪ್ರಾಣಿವರ್ಗದಲ್ಲಿ ಪ್ರಾಣ, ಹೃದಯ ಮಿದುಳುಗಳು ಉಂಟೆಂಬುದನ್ನು ಪ್ರತ್ಯಕ್ಷ ನೋಡಬಹುದು. ಒಟ್ಟಿನಲ್ಲಿ ಪ್ರಪಂಚದಲ್ಲಿ ಇರುವ ಸಮಸ್ತವಸ್ತುಗಳೂ ಚೇತನಾತ್ಮಕಗಳೇ ಎಂದು ಸಿದ್ಧವಾಗುತ್ತದೆ. ಆದರೆ ಈ ಮೂರು ವರ್ಗಗಳಲ್ಲಿರತಕ್ಕ ಚೈತನ್ಯಗ

ಳಿಗೂ ಭೇದವುಂಟು. ಒಂದರಿಂದ ಒಂದು ಉತ್ಕ್ರಾಂತಿ (*Evolution*) ಯನ್ನು ಹೊಂದಬೇಕು. ಹಾಗೆ ಕ್ರಮವಾದ ಉತ್ಕ್ರಾಂತಿಯಿಲ್ಲದೆ ಒಂದ ರಿಂದ ಒಂದು ಉದ್ಭವಿಸಲಾರವು. ಉದ್ಭವಿಸಕೂಡದೆಂಬುದು "ಪರ ಮಾತ್ಮನ" ನಿಯಮವಾಗಿರಬೇಕು. ಹೇಗೆಂದರೆ:— ಪರಮಾಣುವೂ ಚೈತ ನ್ಯಮಯವಾಗಿದೆ. ನಿರಂಕುಶವಾಗಿದೆ. ಆದರೆ ಪ್ರತಿಯೊಂದು ಅಣುವೂ ಮತ್ತೊಂದು ಅಣುವಿನಿಂದ ಬೇರ್ಪಟ್ಟು ನಿಯಮ (*adhesion*) ರಹಿತ ವಾಗಿ ವರ್ತಿಸುವುದಾದರೆ ವಿಶ್ವವೆಲ್ಲಾ ಕ್ಷೋಭಮಯವಾಗಬೇಕಾದೀತು. ಒಂದು ಲೋಹ ವರ್ಗದ ಅಣುವು (*Atom*) ಉತ್ತರ ಕ್ಷಣದಲ್ಲಿ ಸಸ್ಯ ಅಥವ ಪ್ರಾಣಿವರ್ಗದ ಜೀವಾಣು (*Cell*) ವಾಗಿ ಪರಿಣಮಿಸಿದರೆ ಜಗತ್ತು ಆಂದೋಳನಾಮಯವಾದೀತು. ವಿಜ್ಞಾನಿಗಳೂ ಅತಿ ಭೌತಿಕರೂ (*metaphygisians*) ಸೃಷ್ಟಿಯ ಅಂತರಾಳದಲ್ಲಿ ಇರುವ ನಿಯಮಗಳನ್ನು ಕಂಡು ಹಿಡಿಯಲು ಸಾಧ್ಯವೇ ಆಗುತ್ತಿರಲಿಲ್ಲ. ಸೃಷ್ಟಿಯಲ್ಲಿ ಏಕರೂಪ ತೆಯುಂಟು (*Uniformity*). ಆದರೆ ಪ್ರಗತಿಯಿಲ್ಲದೆ ಕಾಲಾಂತದ ವರೆಗೂ ಹಿಡಿತಕ್ಕೆ ಸಿಕ್ಕು ಬಳಲಬೇಕೆಂದಲ್ಲ. ಲೋಹವರ್ಗದ ಅಣುವು ಕ್ರಮವಾಗಿ ಸಸ್ಯ ವರ್ಗದ ಅಣುವಾಗಿ ಸಮಸ್ತ ಉತ್ತಮ ಸಸ್ಯ ವರ್ಗ ವನ್ನೆಲ್ಲಾ ಹಾದು ಉತ್ತೀರ್ಣವಾಗಿ ಪ್ರಾಣಿವರ್ಗದ ಅಣುವಾಗಿ ಸಮಸ್ತ ಪ್ರಾಣಿವರ್ಗದಲ್ಲೆಲ್ಲಾ ಅನುಕ್ರಮವಾಗಿ ಸಂಚರಿಸಿ ನಂತರ ಮಾನವ ವರ್ಗಕ್ಕೆ ಸೇರಿ ಅಲ್ಲೂ ನಾಗರೀಕತೆಯಿಂದ ಜ್ಞಾನಿಯಾಗಿ ಮುಂದುವರಿ ಯುತ್ತಾ "ಆರು ನಾನೆಂದು ವಿಚಾರಿಸಿ" ಕಾಲಕ್ರಮದಲ್ಲಿ ಮುಕ್ತನಾಗು ತ್ತಾನೆ. ಪ್ರತಿಯೊಂದು ಲೋಹ ವರ್ಗದಲ್ಲಿ ಅಣುವಿಗೂ ಈ ಹಕ್ಕು ಉಂಟು. ಕಿಡಿಯು ಪರಂಜ್ಯೋತಿಯನ್ನು ಸೇರಲೇಬೇಕು. ಕಿಡಿಯೂ ಹಾತೊರೆಯುತ್ತದೆ. ಪರಂಜ್ಯೋತಿಯೂ ಕಿಡಿಯನ್ನು ನಿರೀಕ್ಷಿಸುತ್ತದೆ.

ಹೀಗೆ ಸಮಗ್ರ ವಿಶ್ವವೂ ನಿಯಮಪೂರಿತವಾಗಿದೆ. ನಿಯಂತ್ರಿತ ವಾಗಿದೆ. ಕೆಲವರು ಅನ್ನಬಹುದು. ವಿಶ್ವವೇನೋ ನಿಯಮಬದ್ಧವಾಗಿದೆ. ಆದರೆ ವಿಶ್ವಚಾಲಕನೂ ನಿಯಮಬದ್ಧನೇ? ಅವನಿಗೆ ತನ್ನ ಸೃಷ್ಟಿಯ ಮೇಲೆ ಸ್ವಾತಂತ್ರ್ಯವಿಲ್ಲವೇ? ಪರಮಾತ್ಮನು ಮನುಷ್ಯಾಕೃತಿಯಿಂದಲೇ ಲೋಹವರ್ಗದ ವಸ್ತುಗಳಿಂದೇಕೆ ಜನಿಸಬಾರದು? ಆತನು ಲೀಲಾ ಪುರುಷನಲ್ಲವೇ? ಇದೂ ವಿವೇಚಿಸತಕ್ಕ ಪ್ರಶ್ನೆಯೇ ಆಗಿದೆ. ಇದಕ್ಕೆ ಪರಿಹಾರ ಹೇಳುವುದೂ ಸುಲಭವೇ ಆಗಿದೆ. ಪರಮಾತ್ಮನು ನಿಯಮ

ಬದ್ಧನೂ ಅಲ್ಲ. ನಿಯಮಾತೀತನೂ ಅಲ್ಲ. ಕೇವಲ ನಿಯಮ ಸ್ವರೂಪನೇ ಆಗಿದ್ದಾನೆ. ಹೇಗೆಂದರೆ ಆ ಪರಮಾತ್ಮನನ್ನು ಅರಸುತ್ತಿರುವುದೇ ಸಮಸ್ತ ವಿಜ್ಞಾನಶಾಸ್ತ್ರಗಳ ಮತ್ತು ತತ್ವಶಾಸ್ತ್ರದ ಧ್ಯೇಯವಾಗಿದೆ. ವಿಜ್ಞಾನವು ಸೃಷ್ಟಿಯ ಅನೇಕ ವರ್ಗಗಳಲ್ಲಿ ಇರುವ ನಿಯಮಗಳನ್ನು ಕಂಡು ಹಿಡಿಯುತ್ತದೆ. ತತ್ವಶಾಸ್ತ್ರವು ಅವುಗಳನ್ನೆಲ್ಲಾ ಒಂದುಗೂಡಿಸಿ ಪರಸ್ಪರ ವಿರುದ್ಧವಿಲ್ಲದಂತೆ ಹೊಂದಿಸಿ ನೈಜವನ್ನೂ (*Reality*) ಅಸ್ತಿತ್ವವನ್ನೂ (*existance*) ವಿವರಿಸುತ್ತದೆ. ಇದಕ್ಕೆ ಅರಿಸ್ಟೋಟಲ (*Aristotle*) ನೆಂಬ ಯವನ ತತ್ವವೇತ್ತಿಯು "ತತ್ವಜ್ಞಾನಿಯು ಸಮಸ್ತಕಾಲದ ಸಮಗ್ರ ಅಸ್ತಿತ್ವದ ಪ್ರೇಕ್ಷಕ"ನೆಂದು ಉಸುರಿಸಿದ್ದಾನೆ. ಜ್ಞಾನವು ವಿಜ್ಞಾನವ ಕಾರ್ಯವನ್ನು ಪೂರ್ತಿಗೊಳಿಸುತ್ತದೆ. ಅಂತ್ಯದಲ್ಲಿ ಎರಡೂ ಏಕೀಭವಿಸುತ್ತವೆ. ಪರಮಾತ್ಮನು ನಿಯಮಸ್ವರೂಪನಲ್ಲದಿದ್ದರೆ ಅವನನ್ನು ತಿಳಿಯುವ ಬಗೆ ಹೇಗೆ? ತಿಳಿಯುವ ಪ್ರಯತ್ನ ಮಾಡುವುದಾದರೂ ಯಾವ ನಂಬುಗೆಯ ಮೇಲೆ? ಒಂದು ಲೌಕಿಕ ಉದಾರಣೆಯನ್ನು ತೆಗೆದುಕೊಳ್ಳೋಣ. ಸಂಗೀತ ನಾಟ್ಯ ಮೊದಲಾದುವು ನಮ್ಮ ಸಂತೋಷಕ್ಕಾಗಿಯಲ್ಲವೇ ಇರುವದು? ಲೀಲಾದ್ಯೋತಕವಲ್ಲವೆ? ಆದರೆ ನಿಯಮರಹಿತನಾಗಿ ನಾಟ್ಯಮಾಡಲು ಉದ್ಯುಕ್ತನಾದರೆ ಅದು ಅನರ್ಥಕಾರಿಯಾದ ಗಜಿಬಿಜಿಯಾಗಿ ಪರಿಣಮಿಸುವುದಿಲ್ಲವೆ? ನಿಯಮವಿಲ್ಲದ ವಸ್ತುವೇ ಸೃಷ್ಟಿಯಲ್ಲಿಲ್ಲ. ಪರಮಾತ್ಮನೂ ನಿಯಮ ಸ್ವರೂಪನೇ. ಇಷ್ಟರಿಂದ ಲೋಹವರ್ಗದ ವಸ್ತುವು ಲೋಹವರ್ಗದ ವಸ್ತುವಿಗೇ ಜನ್ಮ ಕೊಡಲು ಸಾಧ್ಯ; ಸಸ್ಯ ಮತ್ತು ಪ್ರಾಣಿವರ್ಗದ ವಸ್ತುಗಳು ಅನುಕ್ರಮವಾಗಿ ಸಸ್ಯ ಮತ್ತು ಪ್ರಾಣಿವರ್ಗಗಳ ವಸ್ತುಗಳಿಗೆ ಜನ್ಮ ಕೊಡಲು ಮಾತ್ರವೇ ಸಾಧ್ಯ ಎಂದು ಸಿದ್ಧವಾಗುವುದಿಲ್ಲವೆ? ಕಲ್ಲಿನಲ್ಲಿ ಸಸ್ಯವು ಹುಟ್ಟಲಾರದು. ಸಸ್ಯದಲ್ಲಿ ಪ್ರಾಣಿಯು ಹುಟ್ಟಲಾರದು. ಎಲ್ಲವೂ ಉತ್ಕ್ರಾಂತಿಯಿಂದ ಕ್ರಮವಾಗಿ ಹುಟ್ಟಬೇಕು. ಅಂದರೆ ಮನುಷ್ಯನು ತನ್ನ ತಂದೆಯ ವೀರ್ಯದಿಂದಲೇ ಮತ್ತು ತಾಯಿಯ ಗರ್ಭಪೋಷಣೆಯಿಂದಲೇ ಹುಟ್ಟಬೇಕು. ಮಾನವ ದೇಹಧಾರಿಗಳಾದ ಪಂಚಾಚಾರ್ಯರು ಲೋಹನಿರ್ಮಿತ ಶಿವಲಿಂಗ ವಿಗ್ರಹಗಳಲ್ಲಿ ಹುಟ್ಟುವುದು ಅಸಾಧ್ಯ ಮತ್ತು ಅನವಶ್ಯಕ. ರೇಣುಕಾಚಾರ್ಯರು ತನ್ನ ತಂದೆಯಾದ ಶಾಂತಿಮಯ್ಯನವರ ಔರಸಪುತ್ರರೆಂಬ ಶಿಲಾಶಾಸನದಿಂದ ನಿರ್ಧಾರವಾಗಿರುವ ಚಾರಿತ್ರಿಕ ವಿಷಯವನ್ನು ವಿಜ್ಞಾನ ಮತ್ತು ತತ್ವಜ್ಞಾನಗಳಿಂದಲೂ ದೃಢಪಡಿಸಬಹುದಾಗಿದೆ.

ಇಲ್ಲಿ ಮತ್ತೊಂದು ಪ್ರಶ್ನೆಯುತ್ಪನ್ನವಾಗುತ್ತದೆ. ಪಂಚಾಚಾರ್ಯರು ಲಿಂಗೋದ್ಭವರೆಂದು ಬರೆದಿರುವ ಪುರಾಣಗ್ರಂಥಗಳ ಜನಕರು ಮೇಲೆ ಹೇಳಿದ ವಿಚಾರವನ್ನು ತಿಳಿಯಲಾರದಷ್ಟು ದಡ್ಡರೇ? ಅಥವಾ ತಿಳಿದೂ ಅಸತ್ಯವನ್ನು ಹೇಳಿರುವರೇ? ಎಂದರೆ ಅವರು ದಡ್ಡರೂ ಅಲ್ಲ; ಸುಳ್ಳರೂ ಅಲ್ಲ; ಜಾಣರು. ಹೇಗೆಂದರೆ ಈ ಕಥೆಯನ್ನು ಬರೆಯುವದರಲ್ಲಿ ಬಹಳ ಬುದ್ಧಿಕೌಶಲ್ಯವನ್ನು ಅವರು ತೋರಿಸಿದ್ದಾರೆ. ಅವರ ಉದ್ದೇಶವು ಸತ್ಯವನ್ನು ಮರೆಮಾಚುವುದಕ್ಕಲ್ಲ; ತತ್ವವನ್ನು ಪ್ರಸರಿಸುವುದಕ್ಕೆ ಮಾನವನ ಆತ್ಮವನ್ನು ಉದ್ಧಾರಮಾಡುವುದಕ್ಕೆ. ಅವರ ಉದಾತ್ತ ಕಲ್ಪನೆ ಹೀಗಿತ್ತು. ಇರುವೆಯೇ ಮೊದಲಾದ ಎಂಭತ್ತುನಾಲ್ಕುಲಕ್ಷ ಜೀವರಾಶಿಗಳೆಲ್ಲವೂ ಕೇವಲ ಮೈಥುನಪೂರ್ವಕವಾಗಿಯೇ ತಮ್ಮ ತಮ್ಮ ಪೀಳಿಗೆಗಳನ್ನು ಮುಂದುವರಿಸುತ್ತವೆ. ಮನುಷ್ಯನೂ ಹಾಗೆಯೇ. ಆದರೆ ನಮ್ಮ ಆಚಾರ್ಯರೂ ಹಾಗೆಯೇ ಹುಟ್ಟಿದರೆಂದು ಹೇಳಿ ಬಿಟ್ಟರೆ ಅವರಲ್ಲಿ ಸಾಕಾದಷ್ಟು ಭಕ್ತಿ ಜನಗಳಿಗೆ ಹುಟ್ಟದೆ ಇರಬಹುದು; ಹಾಗೆ ಭಕ್ತಿ ಹುಟ್ಟದೆ ಇದ್ದರೆ ಆಚಾರ್ಯರು ಬೋಧಿಸಿದ ಅತಿ ಗಹನವಾದ ಮತ್ತು ಆತ್ಮೋದ್ಧಾರಕವಾದ ತತ್ವವು ಶೀಘ್ರವಾಗಿಯೇ ಜನಗಳಲ್ಲಿ ಪ್ರಸರಿಸುವುದೆಂತು? ಈ ದೃಷ್ಟಿಯಿಂದ ಎಂದರೆ ಅವರನ್ನು ಅತಿಮಾನುಷರನ್ನಾಗಿ ಮಾಡಿ ಅವರು ಅವಗಾಹನಾತೀತರೆಂದು ಜನಗಳಿಗೆ ಮನಗಾಣಿಸಿ ಅವರ ತತ್ವಗಳು ಕೂಡಲೇ ಜನಗಳನ್ನು ಸೂರೆಗೊಂಡು ಜೀವಿಗಳ ಆತ್ಮೋದ್ಧಾರವಾಗಲಿ ಎಂಬ ಸದುದ್ದೇಶದಿಂದ ಬರೆದವರು ಈ ಗ್ರಂಥಕರ್ತೃಗಳು ಅವರು ದಡ್ಡರೂ ಅಲ್ಲ; ಸುಳ್ಳರೂ ಅಲ್ಲ; ಜಾಣರು; ಕಾರ್ಯಚಾಲಕಪಟುಗಳು. ಅವರನ್ನು ನಾವು ಅಭಿನಂದಿಸಬೇಕು.

ಇಂತಹ ಅಭಿಪ್ರಾಯಗಳು ಜಗತ್ತಿನ ಸಮಸ್ತ ಜನವರ್ಗಗಳಲ್ಲೂ ಉಂಟು. ಅವುಗಳನ್ನೆಲ್ಲಾ ಅವರು ಪರಿಶೀಲಿಸಿ ಇದೇ ದೃಷ್ಟಿಯಿಂದ ವಿವೇಚನೆ ಮಾಡಿ ಪೂರೈಸಿದ್ದಾರೆ. ನಾವು ಇನ್ನೂ ಹಿಂದುಳಿದಿದ್ದೇವೆ. ಕೂಡಲೆ ಎಚ್ಚತ್ತು ಈ ದೃಷ್ಟಿಯಿಂದ ನಮ್ಮ ಸಮಗ್ರ ಸಂಸ್ಕೃತಿ ಮತ್ತು ಸಾಹಿತ್ಯಗಳನ್ನು ನಿಜತ್ವದ ಒರೆಗಲ್ಲಿನ ಮೇಲೆ ತೀಡಿ ಅವುಗಳ ಸತ್ಯಾರ್ಥವನ್ನು ಪ್ರಕಾಶಿಸಬೇಕು. ಪ್ರತಿಯೊಬ್ಬ ಆಧುನಿಕ ಸುಶಿಕ್ಷಿತ ವ್ಯಕ್ತಿಯೂ ಒಂದೊಂದು "ಸತ್ಯಾರ್ಥ ಪ್ರಕಾಶಿಕೆ" ಯಾಗಲೆಂದು ನನ್ನ ಹಂಬಲಿಕೆ.

ಹಾಗೆ ಮಾಡದಿದ್ದರೆ ಅಪಾಯವೇನೆಂಬುದನ್ನು ವಿವೇಚಿಸಿದರೆ, ಏಕೆ ಮಾಡಲೇಬೇಕೆಂಬುದು ವ್ಯಕ್ತವಾಗುತ್ತದೆ. ತಾತ್ವಿಕ ದೃಷ್ಟಿಯಿಂದ

ವಿಚಾರಿಸಿ ಸಮಂಜಸವಾದ ಉತ್ತರಗಳನ್ನು ನಾನೇ ಕೊಟ್ಟುಕೊಳ್ಳುವು ದರಿಂದ ನಮ್ಮ ವಿನಾಶವನ್ನು ಪರಿಹರಿಸಿಕೊಳ್ಳಬಹುದು (ಸಂಶಯಾತ್ಮಾ ವಿನಶ್ಯತಿ!) ವ್ಯಕ್ತಿವಿನಾಶ ಮತ್ತು ಸಮಾಜವಿನಾಶ ಸಹ. ಜನರಿಗೆ ನಾವು ಈ ರೀತಿ ನಿಜವಾದ ಅರ್ಥಕಲ್ಪನೆ ಮಾಡಿಕೊಡದಿದ್ದರೆ ಅವರು ನಮ್ಮ ಸಂಸ್ಕೃತಿಯಲ್ಲಿ ನಿರಾಶರಾಗಿ, ಹತಾಶರಾಗಿ ಸುಗಮವಾಗಿ, ಕಾಣಬಹು ದಾದ ಅನ್ಯ ಮತಗಳ ಪಾಲಾಗುವರು. ನಮ್ಮ ಕರ್ತವ್ಯವನ್ನು ನಾವು ಮಾಡದೆ ನಮ್ಮ ಭ್ರಾತೃಗಳು ಮತ್ತು ನಮ್ಮ ಸಮಾಜದ ಕ್ಷೀಣತೆಯನ್ನು ಬಗೆದಂತಾಗುವುದು. ನಾವು ಎಷ್ಟು ಬೇಗ ಎಚ್ಚೆತ್ತರೂ ಅಷ್ಟು ಮೇಲಲ್ಲವೇ?

"ಯತ್ಕರೋಷಿ............... ತತ್ಕುರುಷ್ವಮದರ್ಪಣಂ"

---

# ಹರೀಶ್ವರನ ರಗಳೆಗಳು.

ವೀರಶೈವ ವಚನ ವಾಙ್ಮಯದಲ್ಲಿ ಆಧ್ಯಾತ್ಮಿಕ ವಿಚಾರಗಳು ಒಳ್ಳೇ ಸ್ಫುರಣ ಹಾಗೂ ಉತ್ಸಾಹ ಪೂರಿತವಾಗಿ ನೆಲಿಸಿರುವಂತೆ ವೀರಶೈವ ಪದ್ಯವಾಙ್ಮಯದಲ್ಲಿ ಹರೀಶ್ವರನ ರಗಳೆಗಳಲ್ಲಿ ಭಕ್ತಿಯ ಪ್ರವಾಹವು ಕಥಾರೂಪದಿಂದ ತಿಳಿಯಾಗಿ ಜುಳುಜುಳನೆ ಪರಿದಿರುವದು. ಘನಗಂಭೀ ರವಾದ ವೀರಶೈವ ವಚನಗಳು ಚಿದಾನಂದವನ್ನು ಮುಮುಕ್ಷುಗಳಿಗೆ ಬೀರುವಂತೆ ಸುಲಲಿತವಾದ ಹರಿಹರನ ರಗಳೆಗಳು ಸಹೃದಯರಿಗೆ ಕಾವ್ಯಾ ನಂದದ ಒಳ್ಳುಣಿಸನ್ನುಣಿಸುವವು. ಹನ್ನೆರಡನೆಯ ಶತಮಾನದಲ್ಲಿ ವಚನ ವಾಙ್ಮಯದ ದಿವ್ಯರತ್ನಗಳ ಅಗಾಧವಾದ ಕಣಿಯೊಂದು ಹೊರ ಟಂತೆ ಅದೇ ಕಾಲದಲ್ಲಿಯೇ ರಗಳೆಗಳೆಂಬ ಅಮಳಾನಂದವಾದ ಅಮೃ ತರಸವಾಹಿನಿಗಳು ಹೊರಹೊಮ್ಮಿದವು. ವಚನ ಹಾಗೂ ರಗಳೆಗಳು ಕನ್ನಡ ಸಾಹಿತ್ಯಕ್ಕೆ ಒಳ್ಳೆ ಶೋಭೆಯನ್ನುಂಟುಮಾಡಿವೆ. ವಚನವೆಂಬ ಉನ್ನತವಾದ ತರುವಿಗೆ ರಗಳೆಯೆಂಬ ಕೋಮಲವಾದ ಲತೆಯು ಸುತ್ತಿ ಕೊಂಡಂತೆ ಕಂಗೊಳಿಸುವದು. ಜ್ಞಾನವೆಂಬ ಪುರುಷನಿಗೆ ಭಕ್ತಿಯೆಂಬ ಸತಿಯು ದೊರೆತಂತೆ ವಿರಾಜಿಸುವವು. ವಚನ ರಗಳೆಗಳ ಸಂಯೋಗವು ಸುವರ್ಣಕ್ಕೆ ಸುಗಂಧ ಕೂಡಿದಂತಾಗಿದೆ.

ರಗಳೆಗಳು ಚಂಪೂಕಾವ್ಯಗಳಂತೆ ಕ್ಲಿಷ್ಟವಾದವುಗಳಲ್ಲ. ಅವುಗಳಲ್ಲಿ ಸರಳತನ ಮಾಧುರ್ಯಗಳು ನಲಿನಲಿದಾಡುತ್ತವೆ. ಕ್ಲಿಷ್ಟಕಾವ್ಯಗಳ

ಸವಿಯನ್ನು ಪಂಡಿತರಷ್ಟೇ ಸವಿಯಬಹುದು. ಆದರೆ ಸರಳಕಾವ್ಯದ ಸುಧೆಯನ್ನು ಪಂಡಿತಪಾಮರರೆಲ್ಲರೂ ಈಂಟಿ ತಣಿಯುತ್ತಾರೆ. ತ್ರಿಪದಿ ಸಾಂಗತ್ಯ ಷಟ್ಪದಿ ಕಾವ್ಯಗಳು ಸರಳವಾಗಿದ್ದು ಅವುಗಳ ಉದ್ದೇಶವು ಸಾಮಾನ್ಯರಿಗೂ ಪಂಡಿತರಿಗೂ ಕೂಡಿಯೇ ಆನಂದವನ್ನುಂಟುಮಾಡುವ ದಿರುತ್ತದೆ. ಆದರೆ ರಗಳೆಗಳಲ್ಲಿ ಕಂಡು ಬರುವ ಸೊಬಗುಸೌಂದರ್ಯ ಗಳೂ ಅವಿಚ್ಛಿನ್ನತೆಯೂ ತುದಿಮೊದಲ್ಗೊಂಡು ಕೊನೆಯ ವರೆಗೆ ಪ್ರವಾ ಹದಂತೆ ಹರಿದಿರುವವು. ರಸ, ಭಾವ ಚಿತ್ರಗಳನ್ನು ರಗಳೆಗಳಷ್ಟು ಸುಲಭ, ಸುಲಲಿತ, ಸುಮನೋಹರವಾದ ಶೈಲಿಯಲ್ಲಿ ವ್ಯಕ್ತಗೊಳಿಸುವ ಬೇರಾವ ಕಾವ್ಯಗಳು ಕನ್ನಡ ವಾಙ್ಮಯದಲ್ಲಿ ದೊರೆಯುವದು ಬಹು ಅಪರೂಪ. ರಗಳೆಗಳೆಂದರೆ ಹಾಳುಹರಟೆ ಅಥವಾ ಏನೋ ಬೇಸರ ಗೊಳಿಸುವ ಗೊಳ್ಳು ನುಡಿಗಳೆಂದು ಜನರು ವಾಡಿಕೆಯಾಗಿ ತಿಳಿದುಬಿ ಟ್ಟಿರುತ್ತಾರೆ. ಆದರೆ ಇದಕ್ಕೆ ವಿಪರೀತವಾಗಿ ಹರೀಶ್ವರನ ರಗಳೆಗಳು ಸುಂದರ ಚಿತ್ರದಂತೆಯೂ ಸುಮನೋಹರ ಗಾಯನದಂತೆಯೂ ಬಂದ ಬೇಸರವನ್ನು ಸುಲಭವಾಗಿ ಕಳೆಯುವಂಥವುಗಳಾಗಿವೆ. ಒಟ್ಟಿನ ಮೇಲೆ ಕನ್ನಡನುಡಿಯು ಸುಲಿದ ಬಾಳೆಯ ಹಣ್ಣಿನಂತೆ, ಕಳೆದ ಸಿಬರಿನ ಕಬ್ಬಿನಂತೆ, ಅಳಿದಉಸ್ಣದ ಹಾಲಿನಂತೆ ಸುಮಧುರವಾಗಿರುವದೆಂಬ ಮಾತು ಹರೀಶ್ವರನ ರಗಳೆಗಳನ್ನೋದಿದಾಕ್ಷಣವೇ ನಮಗೆ ತಟ್ಟನೆ ಹೊಳೆಯದಿರದು.

ಹರಿಹರನ ರಗಳೆಗಳ ಭಾಷಾಶೈಲಿಯು ಪರಿಶುದ್ಧವಾದುದು. ಚಂಪೂ ಕಾವ್ಯಗಳಂತೆ ವಿಶೇಷವಾದ ಸಂಸ್ಕೃತ ಶಬ್ದಗಳಿಂದ ಅವು ಹೆಣೆಯಲ್ಪ ಟ್ಟಿರುವದಿಲ್ಲ. ರಗಳೆಗಳು ರಚಿಸಲು ಸುಲಭವಾಗಿರುವವು. ಶೈಲಿಯಲ್ಲಿ ಸುಲಭವಾದಾಗ್ಯೂ ರಸಭಾವಗಳನ್ನು ಚಿತ್ರಿಸುವಲ್ಲಿ ಉದಾತ್ತವಾಗಿರುವವು. ಹರಿಹರನ ರಗಳೆಗಳಲ್ಲಿ ಆದಿಪ್ರಾಸ ಅಂತ್ಯಪ್ರಾಸಗಳೆರಡೂ ಕಂಡುಬರು ವವು. ಇದೊಂದು ಈತನು ಕಾವ್ಯಸಾಹಿತ್ಯದಲ್ಲಿ ಸಾಧಿಸಿದ ಅಸದೃಶವಾದ ಸಾಹಸವೆಂದೇ ಹೇಳಬಹುದು. ಉಭಯ ಪ್ರಾಸಗಳುಳ್ಳ ಕಾವ್ಯಗಳನ್ನು ಪ್ರವಾಹರೂಪವಾಗಿ ಸುಲಲಿತವಾಗಿ ರಚಿಸುವದು ಕಷ್ಟವು. ಈತನ ರಗ ಳೆಗಳು ಮಂದಾನಿಲ, ಲಲಿತ ಮೊದಲಾದ ಛಂದಸ್ಸಿನಲ್ಲಿರುವವಲ್ಲದೆ ಅಲ್ಲಲ್ಲಿ ಸುಗಮವಾದ ಗದ್ಯಭಾಗಗಳೂ ಕಂಡುಬರುತ್ತವೆ. ವರ್ಣನೆಯ ದೃಷ್ಟಿ ಯಿಂದ ಗದ್ಯಭಾಗಗಳು ರಗಳೆಗಳಿಗೆ ಕುಂದನ್ನುಂಟುಮಾಡದೆ ಅವುಗಳ ಶೋಭೆಯನ್ನು ಮತ್ತಿಷ್ಟು ಹೆಚ್ಚಿಸಿರುತ್ತವೆ.

ಹರೀಶ್ವರನ ರಗಳೆಗಳು ವಿಶೇಷವಾಗಿ ಕಥನಪರ ಕಾವ್ಯಗಳಾಗಿವೆ. ಅವು ಒಳ್ಳೆ ರಸವತ್ತಾಗಿಯೂ ಹೃದಯಂಗಮವಾಗಿಯೂ ಇರುವವಲ್ಲದೆ ವರ್ಣನಾದೃಷ್ಟಿಯಿಂದ ಇಂಗ್ಲಿಷದಲ್ಲಿ ಪ್ರಸಿದ್ಧಿಪಡೆದ ಟೆನಿಸನ್ ಸ್ಕಾಟ್ ಕವಿಗಳ ಕಥನಪರಕಾವ್ಯ (*Narative poems*) ಗಳಿಗಿಂತ ಎಂದಿಗೂ ಯೋಗ್ಯತೆಯಲ್ಲಿ ಕಡಿಮೆಯಾಗಿರುವದಿಲ್ಲ. ಈ ರಗಳೆಗಳನ್ನು ಪ್ರಾಮುಖ್ಯ ವಾಗಿ (೧) ಶಿವಶರಣರ ರಗಳೆ (೨) ಪುರಾತನರ ರಗಳೆ (೩) ಶಿವ ಭಕ್ತರ ರಗಳೆಗಳೆಂದು ಮೂರು ಭಾಗಗಳನ್ನು ಮಾಡಬಹುದು. ಇವೆಲ್ಲ ಬಹುಶಃ ಕಥಾರೂಪದಲ್ಲಿಯೇ ಇವೆ. ಇದಲ್ಲದೆ ಆತನು ರಚಿಸಿದ ಲಿಂಗಾ ರ್ಚನೆಯ ರಗಳೆ ಪುಷ್ಪದ ರಗಳೆ ಮೊದಲಾದವುಗಳು ಕಥನಪರವಲ್ಲದಿದ್ದರೂ ಭಕ್ತಿಭಾವನೆಯನ್ನು ಬೆಳೆಯಿಸುವದರಲ್ಲಿ ಮಿಗಿಲಾಗಿರುತ್ತವೆ. ಕಥನಪರ ರಗಳೆಗಳಲ್ಲಿ ಸಂದರ್ಭತಪ್ಪಿಹೋಗುವಂಥ ಅನಾವಶ್ಯಕವಾದ ವರ್ಣನೆಗ ಳಿರುವದಿಲ್ಲ. ತೊಡಕು ತೊಂದರೆಗಳ ತಾಕಲಾಟವು ಅವುಗಳಲ್ಲಿಲ್ಲ. ಕಥಾ ವೇಗವು ಅಶ್ವಗತಿಯಿಂದ ರಮಣೀಯವಾಗಿ ಸಾಗಿರುತ್ತದೆ.

ಹರಿಹರನಿಗಿಂತಲೂ ಪೂರ್ವದಲ್ಲಿ ರಗಳೆಗಳಿದ್ದವು. ಆದರೆ ಅವುಗ ಳನ್ನು ಹೆಚ್ಚಾಗಿ ಪ್ರಚಾರದಲ್ಲಿ ತಂದವನು ಹರೀಶ್ವರನೇ ಇದ್ದಾನೆ. ಆದ್ದ ರಿಂದಲೇ ಆತನಿಗೆ ರಗಳೆಯ ಕವಿಯೆಂಬ ಹೆಸರು ಪ್ರಾಪ್ತವಾಗಿದೆ. ಒಂದೊಂದು ರಗಳೆಯು ಪ್ರತ್ಯೇಕವಾದ ಒಂದೊಂದು ಕಾವ್ಯದಂತಿರು ತ್ತದೆ. ಚಂಪೂಕಾವ್ಯಗಳಾಗಲಿ ಷಟ್ಪದಿ ಕಾವ್ಯಗಳಾಗಲಿ ಒಂದು ಕಥೆ ಯನ್ನು ಹೇಳಬೇಕಾದರೆ ಅನೇಕ ಸರ್ಗ ಅಥವಾ ಸಂಧಿಗಳು ಇರು ತ್ತವೆ. ಆದರೆ ಹರಿಹರನು ಇಂಥ ಉದ್ದವಾದ ವರ್ಣನೆಯ ಗೊಂದಲಕ್ಕೆ ಬೀಳದೆ ಸುಮಾರು ೬೦೦ ರಿಂದ ೮೦೦ ಪಂಕ್ತಿಗಳಲ್ಲಿಯೇ ಒಂದೊಂದು ಕಥೆಯನ್ನು ಪೂರೈಸಿ ಬಿಟ್ಟಿದ್ದಾನೆ. ಚಿಕ್ಕವಾದ ಸಂಪೂರ್ಣ ಕಾವ್ಯಗಳನ್ನೋದಿ ಆನಂದಬಡಬೇಕೆನ್ನುವವರು ಹರಿಹರನ ರಗಳೆಗಳಿಂದಲ್ಲದೆ ಇನ್ನುಳಿದ ಯಾವ ಕಾವ್ಯಗಳಿಂದಲೂ ಶಕ್ಯವಿಲ್ಲ. ಈ ಕಥನಪರ ಕಾವ್ಯಗಳು ಸುಲ ಭವಾಗಿಯೂ ಸಂಕ್ಷೇಪವಾಗಿಯೂ ಇರುವದರಿಂದ ವಿದ್ಯಾರ್ಥಿಗಳು ಅಲ್ಪಾ ವಕಾಶದಲ್ಲಿ ಅವುಗಳನ್ನು ಸಂಪೂರ್ಣವಾಗಿ ಓದಿ ಆನಂದಪಡಬಹುದು. ಆದುದರಿಂದ ರಗಳೆಗಳು ಪ್ರಾಥಮಿಕ ಮಾಧ್ಯಮಿಕ ಶಾಲೆಗಳಲ್ಲಿ ಪಠ್ಯ ಪುಸ್ತಕಗಳನ್ನಾಗಿ ಉಪಯೋಗಿಸಲು ಬಹು ಯೋಗ್ಯವಾಗಿವೆ. ಉಚ್ಚ ಶಿಕ್ಷಣಪಡೆಯುವವರೂ ಪಂಡಿತರೂ ಎಲ್ಲ ರಗಳೆಗಳನ್ನು ವಿಮರ್ಶನಾತ್ಮಕ ದೃಷ್ಟಿಯಿಂದ ಅಭ್ಯಾಸಮಾಡಿ ಪ್ರತಿಯೊಂದು ರಗಳೆಯ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಆಸ್ಪದ ಉಂಟು.

---

# ರೇವಣಸಿದ್ಧೇಶ್ವರನ ರಗಳೆ.

ಲೇಖಕ— ಶರಣಸೇವಕ.

---

ಕೈಲಾಸಪರ್ವತದಲ್ಲಿ ಪರಶಿವನು ರೇಣುಕನೆಂಬ ಗಣನಾಥನಿಗೆ ತಾಂಬೂಲವನ್ನು ಕೊಡೆಂದು ಆಜ್ಞಾಪಿಸಲು ಆತನು ಅವಸರದಿಂದ ಬರುವಾಗ ದಾರುಕನೆಂಬ ಗಣನಾಥನನ್ನು ದಾಂಟಿ ಬಂದನು. ಶಿವನು ಇದನ್ನು ನೋಡಿ ಸಿಟ್ಟಿಗೆದ್ದು "ದಾರುಕನನಿಂತು ದಾಟುವರೆ ರೇಣುಕ, ನಿನಗೆ ಧಾರುಣಿಯೊಳಗೆ ಜಡಜನ್ಮವಾದುದು" ಎಂದು ಶಾಪವಿತ್ತನು. ಆಗ ರೇಣುಕನು ಪುನಃ ತನ್ನ ಸನ್ನಿಧಿಯು ಶೀಘ್ರ ದೊರೆಯುವಂತೆ ಕರುಣಿಸಬೇಕೆಂದು ಬೇಡಿಕೊಳ್ಳಲು ಶಿವನು ಧರಣಿಯಲ್ಲಿ ಲಿಂಗದೊಳ್ ಜನ್ಮವೆತ್ತಿ ಸುಖದುಃಖಂಗಳನ್ನನುಭವಿಸಿ ಮರಳಿ ಕೈಲಾಸಕ್ಕೆ ಬಾರೆಂದು ಆಜ್ಞಾಪಿಸಿದನು.

ಪರಶಿವನ ಆಜ್ಞಾನುಸಾರವಾಗಿ ರೇಣುಕ ಗಣನಾಥನು ಕೊಲ್ಲಿಪಾಕಿಯ ಸೋಮನಾಥ ಶಿವಾಲಯದಲ್ಲಿ ರೇವಣಸಿದ್ಧನೆಂಬ ನಾಮದಿಂದ ಲಿಂಗೋದ್ಭವನಾದನು. ಕಂಥೆ, ಲಾಕುಳ, ಭಸಿತ, ಕೋವಣ ಮುಂತಾದ ಶಿವಲಾಂಛನಗಳು ಒಪ್ಪುತ್ತಿದ್ದವು. ಅಗಸ್ತ್ಯ ಮಹಾಮುನಿಯನ್ನು ಕೂಡಿಕೊಂಡು ಶಿವಭಕ್ತಿಗೋಷ್ಠಿಯಲ್ಲಿ ದಕ್ಷಿಣ ದಿಶೆಯಲ್ಲಿ ಸಂಚರಿಸಿದನು. ದ್ರಾವಿಡದೇಶದ ಶಿವಪುರಂಗಳನ್ನು ನೋಡುತ್ತ ಶಿವಲಿಂಗಸಂತತಿಗಳ ಪೂಜಸಂಗೈಯುತ್ತ ಸಾಗಿದನು. ಪೊನ್ನಾಂಬಲದ ನಟೇಶ್ವರನನ್ನೂ ಕಾಂಚೀಪುರದ ಏಕಂಬ್ರನಾಥನನ್ನೂ ಪೂಜಿಸಿ ಅಭಿಷೇಕವನ್ನು ಮಾಡಿದನು. ರೇವಣಸಿದ್ಧನ ಲಾಂಛನ ಮತ್ತು ಪೂಜಾಕ್ರಿಯೆಗಳನ್ನು ನೋಡಿದರೆ ಈತನು ಶುದ್ಧ ಶೈವನಿರಬೇಕೆಂದು ಕಾಣುತ್ತದೆ.

ರೇವಣಸಿದ್ಧನು ವೈಷ್ಣವ ಮತ ಖಂಡನೆಯಲ್ಲಿ ತೊಡಗಿದ್ದನೆಂದು ಕೆಳಗಿನ ಕೃತಿಯ ಮೇಲಿಂದ ತಿಳಿನುಬರುತ್ತದೆ. ವೈಷ್ಣವ ಚೋಳನೆಂಬ ವಿಷ್ಣುಭಕ್ತನೊಬ್ಬನು ಎಲ್ಲೆಡೆಯಲ್ಲಿಯೂ ವಿಷ್ಣುಮೂರ್ತಿಗಳನ್ನು ಸ್ಥಾಪಿಸಬೇಕೆಂಬ ಕುತೂಹಲದಿಂದ ಸಂಚರಿಸುತ್ತಿರಲು ಅದನ್ನು ಕೇಳಿ ರೇವಣಸಿದ್ಧನು ವೈಷ್ಣವ ಚೋಳನಿದ್ದಲ್ಲಿಗೆ ಬಂದು ವಿಷ್ಣುಪ್ರತಿಮೆಗೆ ಭಂಗಬಡಿಸಿದನು.

ಬಳಿಕ ರೇವಣಸಿದ್ಧನು ಮಾಸನೂರ ಗ್ರಾಮದ ಶಿವಾಲಯಕ್ಕೆ ಆಗ ಮಿಸಿ ಅಲ್ಲಿ ಇಬ್ಬರು ರಾಕ್ಷಸರು ಶಾಪವಶದಿಂದ ಎರಡು ತಗಣಿಗಳಾಗಿ ಜನರಿಗೆ ಕಚ್ಚಿ ಹಿಂಸಿಸುತ್ತಿದ್ದುದನ್ನು ಕೇಳಿ ತನ್ನ ನೊಸಲಾಗ್ನಿಯಿಂದ ಅವುಗಳನ್ನು ಸುಟ್ಟು ಎರಡು ಉಕ್ಕಿನ ಗುಂಡು ಮಾಡಿ ಅವುಗಳನ್ನು ಕಮ್ಮಾ ರನಿಂದ ಸುರಿಗೆಯು ಮಾಡಿಸಿ ನಡಿಯು ಪೆರ್ಮಡುವಿನ ನಡುವೆ ಇರಿಸಿ ದನು. ಅಲ್ಲಿಂದ ಮುಂದೆ ವಿಕ್ರಮಾದಿತ್ಯನೆಂಬ ರಾಜನ ಅರಮನೆಗೆ ಬಿಜಯಂಗೈದು ಆತನ ಆದರ ಸತ್ಕಾರಕ್ಕೆ ಮೆಚ್ಚಿ ದಿವ್ಯ ವಸ್ತ್ರಾಭರಣ, ಅಮೃತಾನ್ನ ಸುಖವನ್ನೀಯಲು ಸಮರ್ಥವಾದ ಒಂದು ಕಠಾರಿಯನ್ನು ಕರುಣಿಸಿ ಕೊಟ್ಟನು. ಇವೆಲ್ಲವು ವಿಚಿತ್ರ ಸಮಾಡಗಳಾಗಿವೆ.

ಅಲ್ಲಿಂದ ಮುಂದೆ ಕಲ್ಯಾಣಕ್ಕೆ ತೆರಳಿ ಕಲ್ಲಶೆಟ್ಟಿಯೆಂಬ ಗಾಣಿಗನ ಗಾಣದ ಕೊಟ್ಟಿಗೆಯಲ್ಲಿ ನಿಂದನು. ಆ ಗಾಣಿಗನಿಗೂ, ಆತನ ಹೆಂಡ ತಿಗೂ, ಗಾಣದೆತ್ತಿಗೂ, ಒಂದೊಂದೇ ಕಣ್ಣುಗಳಿದ್ದವು. ಆ ಗಾಣಿಗನು ರೇವಣಸಿದ್ಧನನ್ನು ಕುರಿತು 'ಎಲೆ ಅಯ್ಯಾ, ಗಾಣದೆತ್ತಂ ಹೊಡೆದೊಡೆ ಹಿಂಡಿಯಂ ಮೆಲಲಿಕ್ಕುವೆ ನಡೆ'ಯೆಂದು ನುಡಿದನು. ರೇವಣಸಿದ್ಧನು ಆನಂದಿತನಾಗಿ ಅವರ ಕಣ್ಣುಗಳನ್ನು ತೆರಿಸಿ ಅವರನ್ನು ಕೃತಾರ್ಥರನ್ನಾಗಿ ಮಾಡಿದನು. ಆ ಗಾಣಿಗನೂ ಅವನ ಹೆಂಡತಿಯೂ, ದಿವ್ಯಾಂಗನೆಯು ರಿಂದ ಕಾಲೊತ್ತಿಸಿಕೊಳ್ಳುತ್ತ ಪ್ರಕಟವಾದ ರೇವಣಸಿದ್ಧನನ್ನು ಕಣ್ತುಂಬ ನೋಡಿ ಆನಂದಬಟ್ಟರು. ರೇವಣಸಿದ್ಧನು ಗಾಣಿಗನಿಗೆ ತವನಿಧಿಯನ್ನು ದಯಪಾಲಿಸಿದನು. ಮುಂದೆ ಮಂಗಳವಾಡದಲ್ಲಿ ಮಾಯಿದೇವಿಯೆಂಬ ವಳೊಡನೆ ಕೆಲವು ದಿನವಿದ್ದು ರೇವಣದೇವಿಯೆಂಬ ಕುವರಿಯನ್ನು ಹಡೆದನು.

ಹಿಂದಕ್ಕೆ ರಾಮನಿಂದ ಗಾಯಹೊಂದಿದ ರಾವಣನು ವಿಭೀಷಣ ನನ್ನು ಕುರಿತು "ಎಲೈ ನಾನು ೯ ಕೋಟಿ ಲಿಂಗ ಪ್ರತಿಷ್ಠೆ ಮಾಡಿಸು ವೆನೆಂದು ನೇಮವ ಕೈಕೊಂಡು ಈಗ ೬ ಕೋಟಿ ಲಿಂಗಗಳನ್ನು ಸ್ಥಾಪಿ ಸಿರುವೆನು. ಇನ್ನು ಮೂರು ಕೋಟಿ ಲಿಂಗಗಳನ್ನು ಸ್ಥಾಪಿಸಬೇಕು." ಎಂದು ಆಜ್ಞಾಪಿಸಿದನು. ಅದಕ್ಕೆ ವಿಭೀಷಣನು ತಾನು ಶುದ್ಧ ವೈಷ್ಣವ ನಿರುವದರಿಂದ ೯ ಕೋಟಿ ನಾರಾಯಣರ ಪ್ರತಿಷ್ಠೆ ಮಾಡಿಸುವೆನೆಂದನು. ಅದನ್ನು ಕೇಳಿ ಮರಣೋನ್ಮುಖನಾಗಿದ್ದ ರಾವಣನು 'ಎಲೆ ಮರುಳೆ, ನಿನ್ನ ನೆಚ್ಚಿನ ನಾರಾಯಣನು ದಶಾವತಾರದ ದೋಷ ಪರಿಹಾರಕ್ಕಾಗಿ

ಮತ್ಸ್ಯಕೇಶ್ವರ ಲಿಂಗವನ್ನು ಪ್ರತಿಷ್ಠೆ ಮಾಡಿದನು. ಈಗ ನನ್ನ ಕೊಂದ ಪಾಪವಿಮೋಚನೆಗಾಗಿ ನಾರಾಯಣನ ಅವತಾರವಾದ ರಾಮನು ರಾಮೇಶ್ವರ ಲಿಂಗವನ್ನು ಸ್ಥಾಪಿಸಿದನು. ಅದು ಕಾರಣ ನನ್ನ ನೇಮದಂತೆ ಇನ್ನೂ ೩ ಕೋಟಿ ಲಿಂಗಗಳನ್ನು ಪ್ರತಿಷ್ಠೆ ಮಾಡೆಂದು ಆಜ್ಞಾಪಿಸಿ, ಸ್ವರ್ಗಲೋಕಕ್ಕೆ ತೆರಳಿದನು.

ಅಣ್ಣನ ಆಜ್ಞಾನುಸಾರವಾಗಿ ವಿಭೀಷಣನು ಮತ್ಸ್ಯಕೇಶ್ವರಲಿಂಗೋಪಾಸನೆಯನ್ನು ಮಾಡಿ ಆ ದೇವರಿಂದ ಉತ್ತರದಲ್ಲಿ ರೇವಣಸಿದ್ಧನೆಂಬ ಶಿವಯೋಗಿಯು ಇರುವನೆಂತಲೂ ಅವನ ಸಹಾಯದಿಂದ ೩ ಕೋಟಿ ಲಿಂಗಪ್ರತಿಷ್ಠೆಮಾಡೆಂತಲೂ ತಿಳುಹಲ್ಪಟ್ಟವನಾಗಿ ಕೇರಳ, ತೆಲಂಗ, ಕೊಂಕಣ, ಕರ್ನಾಟ, ಕಾಶ್ಮೀರ, ಕಳಿಂಗದೇಶಗಳಲ್ಲಿ ಸಂಚರಿಸುತ್ತ ಕೊನೆಗೆ ಮಂಗಳವಾಡವನ್ನು ಸೇರಿ ಅಲ್ಲಿ ವಿರೂಪಾಕ್ಷ ಸಿದ್ಧನೆಂಬ ನಾಮವನ್ನು ಧರಿಸಿ ಊರಹೊರಗಿನ ಕೆರೆಯ ದಂಡೆಯ ವಟವೃಕ್ಷದ ಬುಡದಲ್ಲಿ ಕುಳಿತನು. ಅಷ್ಟರಲ್ಲಿ ರೇವಣಸಿದ್ಧನು ಆ ಕೆರೆಗೆ ಗುಪ್ತವೇಷದಿಂದ ಕಂಬಿಯ ಕೊಡಗಳನ್ನು ಹೊತ್ತುಕೊಂಡು ಬಂದು, ನೀರು ತುಂಬುತ್ತಿರಲು ವಿರೂಪಾಕ್ಷ ಸಿದ್ಧವೇಷದ ವಿಭೀಷಣನು ಆತನ ತೇಜಸ್ಸು ಶೈವ ಚಿಹ್ನಗಳನ್ನು ಕಂಡು ಹಿಗ್ಗಿ ಈತನೇ ರೇವಣಸಿದ್ಧ ಯತಿ ಎಂದು ಆತನ ಅಡಿಗಳ್ಗೆ ಪೊಡಮಟ್ಟು ತನ್ನ ಮನದ ಬಯಕೆಯನ್ನು ನಿವೇದಿಸಿದನು. ಅದಕ್ಕೆ ರೇವಣಸಿದ್ಧನು ಕರುಣಿಸಿ ಲಂಕೆಗೆ ಬಿಜಯಂಗೈದು ೩ ಕೋಟಿ ಲಿಂಗ ಪ್ರತಿಷ್ಠೆಯನ್ನು ವಿಭೀಷಣನಿಂದ ಮಾಡಿಸಿದನು. "ಲಿಂಗ ಪ್ರತಿಷ್ಠೆಯ ಮಾಡುವವರಿಗೆ ನಾಯಕ ನರಕ ತಪ್ಪದು ಗುಹೇಶ್ವರಾ" ಎಂದು ನಮ್ಮ ಶಿವಶರಣರು ಹೇಳಿದ್ದನ್ನು ನೋಡಿದರೆ ರೇವಣಸಿದ್ಧನು ಶುದ್ಧ ಶೈವನೇ ಅಹುದೆಂದು ತಿಳಿಯಬಹುದಾಗಿದೆ.

ಅಲ್ಲಿಂದ ಮುಂದೆ ರೇವಣಸಿದ್ಧನು ಮಂಗಳವಾಡಕ್ಕೆ ಆಗಮಿಸಲು ರಾಜ ಬಿಜ್ಜಳನು ಆತನಿಗೆ ಸತ್ಕಾರಮಾಡಿ ಕುದಿಯುವ ಓಗರವನ್ನು ನೀಡಲು ಊರೆಲ್ಲ ಉರಿ ಎದ್ದಿತು. ಆಗ ಬಿಜ್ಜಳನು ದೈನ್ಯದಿಂದ ರೇವಣಸಿದ್ಧನ ಕ್ಷಮೆಯನ್ನು ಬೇಡಿಕೊಳ್ಳಲು ಉದ್ಧಟನಾದ ಆತನ ಗರ್ವವನ್ನು ಹರಣಮಾಡಿ ಕರುಣೆ ಮಾಡಿದನು.

ಆ ಬಳಿಕ ಕೊಲ್ಲಾಪುರಕ್ಕೆ ಬಂದು ಅಲ್ಲಿ ಗೋರಕನಾಥನೆಂಬ ಸಾಧುವಿನ ಗೃಹವನ್ನು ಪ್ರವೇಶಿಸಲು ಆತನು ರೇವಣಸಿದ್ಧನನ್ನು ಸ್ವಲ್ಪ

ಗಣನೆಗೆ ತಾರದೆ ಹಾಸ್ಯಮಾಡಿದನು. ಅವನ ಹೆಂಡತಿಯಾದ ಲಕ್ಮಾದೇವಿಯು ಈತನು ಮಹಾಯೋಗಿಯೆಂದು ತಿಳಿದು ಆತನು ಬೇಡಿದ ಹೊಸ ಕಠಾರಿಯೊಂದನ್ನು ತಂದು ರೇವಣಸಿದ್ದನ ಮುಂದಿರಿಸಿದಳು. ರೇವಣಸಿದ್ದನು ಬಿಸುಗಣ್ಣಿನಿಂದ ಆ ಲೋಹವನ್ನು ನೋಡಲು ಅದು ಕರಗಿ ನೀರಾಯಿತು. ಆ ಲೋಹರಸವನ್ನು ರೇವಣ ಯತಿಯು ಪಾನ ಮಾಡಲು ಗೋರಕನಾಥನ ಎದೆಯನ್ನು ಸೀಳಿ ಆ ಕಠಾರಿಯು ಹೊರಮೂಡಿತು. ಆಗ ಉತ್ತಮಾಂಗಸ್ಥಲದ ಶಿವಲಿಂಗ ಸಂಪನ್ನೆಯಾದ ಲಕ್ಕ್ಮದೇವಿಯು ರೇವಣಸಿದ್ಧನಿಗೆ ಕರುಣೆಮಾಡೆಂದು ಬೇಡಿಕೊಳ್ಳಲು ಆತನು ಲೋಹರಸವನ್ನು ಕಾರಿದನು. ಆಗ ಗೋರಕನಾಥನ ಎದೆಯೊಳಗಿಂದ ಕಠಾರಿಯು ಕಳಚಿ ಬಿದ್ದಿತು. ಅವನ ಗರ್ವಭಂಗವು ಆಯಿತು.

ಮಂಗಳವಾಡದ ಅರಸು ಬಿಜ್ಜಳನು ಮಾಸನೂರ ನದಿಯಲ್ಲಿ ಬೈಚಿಟ್ಟ ಸುರಿಗೆಯನ್ನು ತೆಗೆದುಕೊಟ್ಟವರಿಗೆ ೧೦ ಸಾವಿರ ಹೊನ್ನಿನ ನಾಣ್ಯಗಳನ್ನು ಕೊಡುವೆನೆಂದು ಪಣವಿಟ್ಟಿದ್ದನು. ಆ ಮೇರೆಗೆ ಕಪ್ಪರನೆಂಬ ಕುಟಿಲ ಜೋಗಿಯು ರಾಜನ ಬಳಿಗೆ ಬಂದು ನುಡಿದುದೇನಂದರೆ, " ಪ್ರಭುವೇ, ೧೨ ಸಾವಿರ ಕನ್ಯೆಯರನ್ನು ಸುರಗಿಗೆ ಆಹುತಿ ಕೊಟ್ಟರೆ ಆ ಸುರಗಿಯು ಕೈಸೇರುವದೆಂದು " ಹೇಳಿದನು. ಆ ಪ್ರಕಾರ ಬಿಜ್ಜಳನು ಕನ್ನಿಕೆಯರನ್ನೆಲ್ಲ ಬಲಾತ್ಕಾರದಿಂದ ಹಿಡಿತರಿಸಿ ಕೂಡಹಾಕಿದನು. ಕಡೆಗೆ ಒಬ್ಬ ಕನ್ನಿಕೆಯು ಕಡಿಮೆಯಾಗಲು ರೇವಣಸಿದ್ಧನ ಸೂಳೆಯ ಮಗಳಾದ ರೇವಣದೇವಿಯನ್ನು ಎಳೆದೊಯ್ಯಬೇಕೆನ್ನುವಷ್ಟರಲ್ಲಿ ರೇವಣಸಿದ್ಧ ಯತಿಯು ಬಂದು ಸ್ತ್ರೀಹತ್ಯವು ಮಹಾ ಪಾಪವೆಂದು ಬಿಜ್ಜಳನಿಗರುಹಿ ಎಲ್ಲ ಕನ್ನಿಕೆಯರ ಬಂಧವಿಮೋಚನೆಯನ್ನು ಮಾಡಿಸಿದನು. ಆ ಮೇಲೆ ಬಿಜ್ಜಳನನ್ನು ಮಾಸನೂರ ನದಿಗೆ ಕರೆದೊಯ್ದು ತಾನು ನೆಟ್ಟಿದ್ದ ಸುರಗಿಯನ್ನು ಕಿತ್ತಿ ತೋರಿಸಿದನು. ಬಿಜ್ಜಳನು ಅದನ್ನು ತೆಗೆದುಕೊಳ್ಳಬೇಕೆಂದು ಹಾತೊರೆದು ಕೈಚಾಚಲು ಏಳು ಹೆಡೆಯ ಸರ್ಪವು ಭುಸ್ಸೆಂದು ವಿಷದ ನಾಲಿಗೆಯನ್ನು ಚಾಚಿತು. ಆತನು ಅಂಜಿ ತನ್ನನ್ನು ರಕ್ಷಿಸೆಂದು ರೇವಣಯತಿಗೆ ಬೇಡಿಕೊಂಡನು. ಆಗ ರೇವಣಸಿದ್ಧನು ಆ ಸುರಗಿಯನ್ನು ಇದ್ದಲ್ಲಿಯೇ ಇರಿಸಿ ಬಿಜ್ಜಳ ನಗರಿಗೆ ಬಂದು ಆತನ ಮಗಳನ್ನು ಲಗ್ನವಾದನು. ರೇವಣಸಿದ್ಧನು ಪವಾಡವಿದ್ಯೆಯಲ್ಲಿ ಬಲ್ಲಿದನಿದ್ದನೆಂದು ತೋರುತ್ತದೆ.

ಅಲ್ಲಿಂದ ಮುಂದೆ ಚೋಳದೇಶದ ರಾಜಪುತ್ರಿಯು ವಿವಾಹ ಮಾಡಿಕೊಂಡನು. ಅವಳು ೩ ತಿಂಗಳ ಗರ್ಭಿಣಿ ಇದ್ದಾಗ ರೇಣುಕನು ಒಂದು ಕೆರೆಯನ್ನು ನಿರ್ಮಾಣಮಾಡಬೇಕೆಂದು ಗುದ್ದಲಿಯಿಂದ ನೆಲವನ್ನು ಅಗಿಯಹತ್ತಿದನು. ಆದರೆ ಸುಕುಮಾರ ಶರೀರದ ರಾಜಕುವರಿಯು ಅವನೊಡನೆ ಶರೀರ ಶ್ರಮದ ಕೆಲಸವನ್ನು ಮಾಡಲು ಸಮ್ಮತಿಸಲಿಲ್ಲ. ಆದದರಿಂದ ರೇವಣಸಿದ್ಧನು ಸಿಟ್ಟಾಗಿ ನಮ್ಮ ವಸ್ತುವನ್ನು ನಮಗೆ ಕೊಟ್ಟು ನೀನು ನಿನ್ನ ತಂದೆಯ ರಾಜ್ಯಕ್ಕೆ ಹೋಗೆಂದು ಹೇಳಿ ಗರ್ಭದೊಳಗಿನ ೩ ತಿಂಗಳ ಶಿಶುವನ್ನು ಕಡೆಗೆ ತೆಗೆದುಕೊಂಡು ಕೆರೆಯ ಏರಿನಲ್ಲಿ ಅದನ್ನು ಹೂಳಿದನು. ನವಮಾಸ ತುಂಬಲು ಕಮಲದಂತೆ ಒಂದು ಗಂಡು ಶಿಶುವು ಜನಿಸಿತು. ಅದಕ್ಕೆ ರೇವಣಸಿದ್ಧನು ರುದ್ರಮುನಿ ಎಂಬ ಹೆಸರನ್ನಿಟ್ಟನು.

ಬಳಿಕ ರೇವಣಸಿದ್ಧನು ನಾನಾ ದೇಶಂಗಳಲ್ಲಿ ಸಂಚರಿಸುತ್ತ ಹಾವಿನಾಳಿಗೆ ಬಂದು ಅಲ್ಲಿ ಶಿವಭಕ್ತಿಸಂಪನ್ನನಾದ ಕಲ್ಲಯ್ಯನೆಂಬವನಿಗೆ ರುದ್ರಮುನಿಯಿಂದ ಶಿವದೀಕ್ಷೆಯನ್ನು ಕೊಡಿಸಿದನು. ಅನಂತರ ಸೊನ್ನಲಿಗೆಗೆ ಬಂದು ಚಾಮಲದೇವಿಗೆ ದರ್ಶನಕೊಟ್ಟು ಆಕೆಗೆ ಕರುಣವನ್ನು ನೀಡಿ ಆನೆಯ ಮೇಲೆ ಸಂಚರಿಸುತ್ತ ಮಾರ್ಗದಲ್ಲಿ ಬರುತ್ತಿರಲು ರೇವಣಸಿದ್ಧನು ಒಮ್ಮೆಲೆ ಆನೆಯಿಂದಿಳಿದು ಪಾದಚಾರಿಯಾಗಿ ಭಯಭಕ್ತಿಯಿಂಕೂಡಿ ಹೊನ್ನಪಾದುಕೆಗಳನ್ನು ಬದಿಗಿಟ್ಟು ನಡೆಯುತ್ತಿರುವದನ್ನು ಚಾಮಲದೇವಿಯು ಕಂಡು ಬೆರಗಾಗಿ 'ದೇವಾ, ಇದೇನು ವಿಚಿತ್ರ?' ಎಂದು ಕೇಳಲು ರೇವಣಸಿದ್ಧನು, "ಮಗಳೇ, ಇಲ್ಲಿಯ ಮೊರಡಿಯ ಮುದ್ದುಗೌಡನ ಅರ್ಧಾಂಗಿಯಾದ ಸುಗ್ಗವ್ವೆಯ ಹೊಟ್ಟೆಯಲ್ಲಿ ಒಬ್ಬ ಮಹಾಸಿದ್ಧನುದಯಿಸುವನು. ಅವನ ಯಶೋವಲ್ಲರಿಯು ಮೂಜಗಕೆ ಹಬ್ಬುವದು" ಎಂದು ಹೇಳಿದನು. ಆ ಮೇಲೆ ಮುದ್ದುಗೌಡನ ಮನೆಗೆ ಹೋಗಿ ಸುಗ್ಗವ್ವೆಯ ಗರ್ಭಕ್ಕೆ ಭಸಿತವ ತೊಡೆದು ಅವರನ್ನು ಆಶೀರ್ವದಿಸಿದನು.

ಇಲ್ಲಿ ರೇವಣಸಿದ್ಧನ ಪಾಪವಿಮೋಚನೆಯಾಗಲು ರೇವಣಸಿದ್ಧನು ಕೊಲ್ಲಿಪಾಕಿಯ ಸೋಮನಾಥಲಿಂಗದಲ್ಲಿ ಐಕ್ಯನಾಗಿ ಕೈಲಾಸಮಂಪೊಕ್ಕನು.

ಈ ರಗಳೆಯಲ್ಲಿ ಸುಂದರವಾದ ಕೆಲವು ಪಂಕ್ತಿಗಳನ್ನು ಇದರಡಿಯಲ್ಲಿ ಕೊಟ್ಟಿದ್ದೇವೆ.

## ರೇವಣಸಿದ್ಧನ ಲಿಂಗೋದ್ಭವ.

ನಿಷ್ಠೆ ಮಿಗೆ ಸಿದ್ಧ ರೇವಣನ ನಾಮದಿಂ ನೋಡ
ಅದೆ ಕಂಥೆಯದೆ ವದನವದೆ ವಜ್ರಕುಂಡಲಂ
ಅದೆ ವಕ್ತ್ರವದೆ ಹಸ್ತವದೆ ಪಿಡಿದ ಲಾಕುಳಂ
ಅದೆ ಕೋವಣಂ ನೋಡೆನುತ್ತಮಿರಲುದಿಸಿದಂ
ಸದಮಳವೆನಿಪ್ಪ ಶಿವಲಿಂಗದೊಳ್ಪುಟ್ಟಿದಂ
ಲೋಕಮಂ ಪಾವನಂ ಮಾಡುವುದ್ಯೋಗದಿಂ
ಆಕಸ್ಮಿಕಂಗಳಂ ತೋರುವನುರಾಗದಿಂ
ಭಸಿತದಿಂ ನೊಸಲಕಣ್ಣಂ ಮುಸುಕಿನಲ್ಲಿಟ್ಟು
ಎಸೆವೆರಡು ಕಣ್ಗಳಿಂ ಬೆಳಬೆಳಗುತಂತಲ್ಲಿ
ಜ್ಯೋತಿಯಿಂದಂ ಜ್ಯೋತಿಯೊಗೆದೊಂದು ತೆರನಾಗೆ
ಓತು ಪುಟ್ಟಿದನಯ್ಯ ನಿಜವಿಳೆಗೆ ಪೊಸತಾಗೆ

---

## ಚಾಮಲದೇವಿಗೆ ಸಿದ್ಧರಾಮೇಶನ ಜನನವನ್ನುಸುರಿದ್ದು.

ಆನೆಯಿಂದಿಳಿವುಶಂ ಸಿದ್ಧರೇವಣತಂದೆ
ಸೇನೆಯಂ ಪೊರಗೆ ನಿಲವೇಳುತ್ತೆ ತಾ ಮುಂದೆ
ಹೊನ್ನ ಹಾವುಗೆಗಳಂ ಮೆಟ್ಟಲಮ್ಮದೆ ಕಳೆದು
ತನ್ನ ಮನದೊಳಗೆ ಭಯಭಕ್ತಿರಸಮಂ ತಳೆದು
ಚರಣದಿಂ ನಡೆಯೆ ಚಾಮಲದೇವಿ ಕಾಣುತಂ
ಧರಣಿಗಿದು ಪೊಸತೆನುತೆ ಕೌತುಕಮನಾಳುತಂ
ದೇವ ಏನೆಂಬ ಪರಿ ಕರುಣಿಸುವುದಿದನೆಮಗೆ
ದೇವ ದಿವ್ಯಾಂಘ್ರಿಯಿಂ ನಡೆವುದದ್ಭುತವೆನಗೆ
ಎನೆ ಕೇಳು ಮಗಳೆ ಶಿವಲಿಂಗವಾದಪುದಿಲ್ಲಿ
ಘನಮಹಿಮೆಯುಳ್ಳ ಶಿವಭೋಗವಾದಪುದಿಲ್ಲಿ
ಇಲ್ಲಿ ಮೊರಡಿಯ ಮುದ್ದುಗೌಡನರ್ಧಾಂಗಿಯೊಳು
ಸಲ್ಲಲಿತೆ ಸುಗ್ಗವ್ವೆಯೆಂಬ ಕಾರಣಿಕೆಯೊಳು

---

# ಬಸವರಾಜದೇವ ರಗಳೆಯೂ ಬಸವನ ಚರಿತ್ರೆಯೂ.

ಬಸವನ ಬಳಗದಿಂದ

( ಎಸ್. ಎಸ್. ಮಾಳವಾಡ ಬಿ. ಎ. (ಆನರ್ಸ್)

ಹರಿಹರನೇ ಬಸವರಾಜದೇವ ರಗಳೆಯ ಗ್ರಂಥಕರ್ತೃವೇ ಎಂಬ ವಾದ ನಮಗೆ ಅಪ್ರಸ್ತುತ. ಪ್ರೊ. ವೆಂಕಣ್ಣಯ್ಯನವರು ಮಾತ್ರ ಬಲವತ್ತರವಾದ ಕಾರಣಗಳಿಂದ ಹಾಗಿರಬೇಕೆಂದು ಊಹಿಸಿ ಹರಿಹರ ಕವಿಯ ಬಸವರಾಜದೇವರಗಳೆ ಎಂದೇ ಪುಸ್ತಕ ಪ್ರಸಿದ್ಧಿಸಿದ್ದಾರೆ. ಆದರೂ ಹಾಗೆಯೇ ಎಂದು ಅವರೂ ನಿಷ್ಕರ್ಷವಾಗಿ ಹೇಳಲಾರರು. ಮ॥ ರಾಜಶ್ರೀ ಬುದ್ಧಯ್ಯ ಮುಗಯ್ಯ ಪುರಾಣಿಕ ಅವರು ಹರಿಹರನು ಕರ್ತೃವಾಗಿರಲಿಕ್ಕಿಲ್ಲವೆಂದು ತರ್ಕಿಸುವದಕ್ಕೆ ಅನುಕೂಲವಾಗಬಹುದಾದ ಕೆಲವು ಸಂಶಯಗಳನ್ನು ಸೂಚಿಸಿದ್ದಾರೆ. ಹೀಗಿದ್ದರೂ ಪ್ರೊ. ವೆಂಕಣ್ಣಯ್ಯನವರ ಅಭಿಪ್ರಾಯವನ್ನು ಅವರು ಪೂರ್ಣವಾಗಿ ಅಲ್ಲಗಳೆಯುವಂತೆ ತೋರುವದಿಲ್ಲ. ವಿರುದ್ಧ ಊಹೆಗಳಿಗೆ ಆಸ್ಪದವಿದೆಯೆಂದು ತೋರಿಸಿಕೊಟ್ಟಿದ್ದಾರೆ. ಅಂತು ನಾವೀಗ ಹರಿಹರನೇ ಗ್ರಂಥಕರ್ತೃವೆಂದು ಗ್ರಹಿಸಿಕೊಂಡು ಮುಂದೆ ಸಾಗುವದು ಯೋಗ್ಯವಾಗಿದೆ. ಈ ವಿಷಯದ ಹೆಚ್ಚಿನ ಚರ್ಚೆಗೆ ಅವಕಾಶವಿದ್ದರೂ ನಮಗೆ ಆಗತ್ಯವಿಲ್ಲವೆಂದು ಒಪ್ಪಿ ಮುಂದೆ ಸಾಗುವಾ.

ಇನ್ನು ಹರಿಹರನ ಕಾಲದ ವಿಷಯವಾಗಿಯೂ ದೊಡ್ಡ ವಾದವೇ ಇದೆ. ಅದನ್ನೂ ವಿವರವಾಗಿ ಚರ್ಚಿಸುವದು ಪ್ರಸ್ತುತ ಬರಹದ ಉದ್ದೇಶವಲ್ಲ. ಆದರೂ ಹರಿಹರನ ನಿಶ್ಚಿತ ಕಾಲವನ್ನು ಕಂಡುಕೊಳ್ಳುವದು ನಮಗೆ ಹೆಚ್ಚು ಪ್ರಯೋಜನಕಾರಿಯಾಗುವದು. ಯಾಕಂದರೆ ನಾವಿಲ್ಲಿ ಬಸವರಾಜದೇವ ರಗಳೆಯನ್ನು ಬಸವನ ಚರಿತ್ರಾಂಶಗಳನ್ನು ಶೋಧಿಸುವ ದೃಷ್ಟಿಯಿಂದ ಅವಲೋಕಿಸಬೇಕಾಗಿದೆ. ಆದುದರಿಂದ ಪ್ರಕೃತ ಗ್ರಂಥವು ಹೆಚ್ಚು ಪ್ರಾಚೀನವಾದಷ್ಟು ಚರಿತ್ರಾಂಶಗಳು ನಂಬಲರ್ಹವಾಗುತ್ತವೆ. ಬಸವನ ಚರಿತ್ರೆಯು ಪ್ರಗೂಢವಾಗಿದೆ. ಅವನ ವಿಷಯವಾಗಿ ಅನೇಕಾನೇಕವಾದ ಹೇಳಿಕೆ *(Various versions)*ಗಳಿವೆ. ಅವೆಲ್ಲವುಗಳನ್ನು ಅವಲೋಕಿಸುವದಾದರೆ ನಿಷ್ಕರ್ಷೆಯಾದ ಚರಿತ್ರೆಯನ್ನು ಕಂಡುಕೊಳ್ಳುವದು ಸಾಧ್ಯವಾಗದೆ ಹೋಗುತ್ತದೆ. ಭಾವನಾಪ್ರಧಾನ ಭಕ್ತರು ಮನ

ಸೋಕ್ತವಾಗಿ ಆತನನ್ನು ಹೊಗಳಿ ಅವನ ಚರಿತ್ರೆಯು ಸುತ್ತಲೂ ಸಂಭಾವ್ಯ-ಅಸಂಭಾವ್ಯ ಘಟನೆಗಳನ್ನು ಹೆಣೆದಿದ್ದಾರೆ. ಭಕ್ತರ ದೃಷ್ಟಿಯು ಹೀಗಿರುವಾಗ ವಿರೋಧಿಗಳ ದೃಷ್ಟಿಯಲ್ಲಿ (*Reaction*) ಪ್ರತಿಕ್ರಿಯೆ ಇದೆ. *Action and reaction are equal and opposite* ಎಂಬ ವೈಜ್ಞಾನಿಕ ಸತ್ಯವನ್ನು ಇಲ್ಲಿ ಅನ್ವಯಿಸಬಹುದಾಗಿದೆ. ಬಸವ ಭಕ್ತರು ಆತನನ್ನು ಹೊಗಳಿದಷ್ಟು ಜೈನ ಪುರಾಣಕಾರರು ತೆಗಳಿದ್ದಾರೆ. ಇಂತಹ ಅಸಂದಿಗ್ಧ ವಾತಾವರಣದಲ್ಲಿ ಬಸವನ ಚರಿತ್ರೆಯನ್ನು ಕಂಡು ಹಿಡಿಯುವದಕ್ಕೆ ಅನುಕೂಲವಾಗುವಂತಹ ಪ್ರಮಾಣ ಗ್ರಂಥದ ಅವಶ್ಯಕತೆ ಬಹಳವಾಗದೆಯೆಂದು ಬೇರೆ ಹೇಳಬೇಕಾಗಿಲ್ಲ. ಕನ್ನಡದಲ್ಲಿ ಬಸವನ ವಿಷಯವಾಗಿ ರಚಿತವಾದ ಗ್ರಂಥಗಳಲ್ಲಿ ಬಸವರಾಜದೇವ ರಗಳೆಯು ತೀರ ಮೊದಲಿನದೆಂಬ ಹೇಳಿಕೆಯು ಈ ಗ್ರಂಥದ ಮಹತ್ವವನ್ನು ಹೆಚ್ಚಿಸಿದೆ. ಆದುದರಿಂದ ಚರಿತ್ರ ದೃಷ್ಟಿಯಿಂದ ಇದು ಹೆಚ್ಚು ವಿಶ್ವಸನೀಯವಾಗಿದೆ. ಬಹುಶಃ ಹರಿಹರನು ಬಸವನ ಸಮಕಾಲೀನನಾಗಿದ್ದನು. ಆತನ ಕಾಲವಾದ ೧೦-೨೦ ವರುಷಗಳಲ್ಲಿದ್ದರಬಹುದೆಂಬ ಅಭಿಪ್ರಾಯವು ಒಳ್ಳೇ ಮಹತ್ವದ್ದಾಗಿದೆ. ಆದುದರಿಂದ ನಾವಿಲ್ಲಿ ಹರಿಹರನ ಕಾಲದ ವಿಷಯವಾಗಿ ಕೊಂಚ ಹೆಚ್ಚಾಗಿ ವಿವರಿಸುವದು ಅಪ್ರಸ್ತುತವಾಗಲಿಕ್ಕಿಲ್ಲ.

ಕನ್ನಡ ಸಾಹಿತ್ಯ ಸಂಶೋಧಕರಲ್ಲಿ ಅಗ್ರಗಣ್ಯರಾದ ಮಹಾಮಹೋಪಾಧ್ಯಾಯ ಆರ್. ನರಸಿಂಹಾಚಾರ್ಯರ ಅಭಿಪ್ರಾಯದಿಂದಲೇ ಮೊದಲು ಮಾಡುವದು ಸಯುಕ್ತಿಕವು. ಕರ್ನಾಟಕ ಕವಿಚರಿತೆಯ ಮೊದಲ ಸಂಪುಟದಲ್ಲಿ ಆಚಾರ್ಯರು ಹರಿಹರ, ರಾಘವಾಂಕ, ಕೆರೆಯ ಪದ್ಮರಸರ ಕಾಲವನ್ನು ವಿಶದವಾಗಿ ಚರ್ಚಿಸಿದ್ದಾರೆ. ಅವರೆಲ್ಲರೂ ಸಮಕಾಲೀನರೆನ್ನುವದಕ್ಕೆ ಪುರಾಣಗಳ ಆಧಾರವಿದೆ. ಆಚಾರ್ಯರ ಚರ್ಚೆಯ ಸಾರಾಂಶ ವಿಷ್ಟು:—

ಕಿಟೆಲ್‌ರು ಹರಿಹರನ ಕಾಲವು ೧೨೯೦ ಎಂದು ನಿರ್ಧರಿಸುತ್ತಾರೆ. ಯಾಕಂದರೆ ರಾಘವಾಂಕ ಚರಿತ್ರೆಯಿಂದ ಹರಿಹರನು ರಾಘವಾಂಕನ ಸೋದರಮಾವನೆಂದು ತಿಳಿಯುತ್ತದೆ. ಅಲ್ಲದೆ ರಾಘವಾಂಕನು ಪಂಪಾಪುರದ ದೇವರಾಜನ (೧೨೦೮—೧೩೨೮) ಸಭೆಯಲ್ಲಿ ತನ್ನ ಹರಿಶ್ಚಂದ್ರ ಕಾವ್ಯವನ್ನು ಓದಿದನು. ಓರಂಗಲ್ಲಿಗೆ ಹೋಗಿ ಕಾಕತೀಯ ರುದ್ರ (೧೨೯೨-೧೩೩೫) ನ ಸಭೆಯಲ್ಲಿ ವೀರೇಶ್ವರ ಚರಿತವನ್ನು ನಿರ್ಮಿಸಿ ಓದಿ ಅಲ್ಲಿದ್ದ ಕುಕವಿಗಳನ್ನು ಸೋಲಿಸಿದನು. ಹಾಗೂ ನರಸಿಂಹ ಬಲ್ಲಾಳನ ಮಂತ್ರಿಯಾದ

ಕೆರೆಯ ಪದ್ಮರಸನನ್ನು ಕಾಣಲಿಕ್ಕೆ ಬೇಲೂರಿಗೆ ಹೋದನು ಹೀಗೆ ತಿಳಿಯುತ್ತದೆ. ಅಂದ ಮೇಲೆ ಕೆರೆಯ ಪದ್ಮರಸನು ಮಂತ್ರಿಯಾಗಿದ್ದ ನರಸಿಂಹ ಬಲ್ಲಾಳರಾಜನು ದೇವರಾಜ, ಕಾಕತೀಯ ರುದ್ರ ಇವರುಗಳ ಸಮಕಾಲೀನನಾಗಬೇಕಾಯಿತು. ಆದುದರಿಂದ ೧೨೨೩ ರಿಂದ ರಾಜ್ಯಭಾರ ಮಾಡಿದ ವೀರನರಸಿಂಹ ಬಲ್ಲಾಳನೇ ಈತನಾಗಿರಬೇಕು. ಈತನಲ್ಲಿಯೇ ಕೆರೆಯ ಪದ್ಮರಸನು ಮಂತ್ರಿಯಾದುದರಿಂದ ರಾಘವಾಂಕನು ಹಾಗೂ ಆವನ ಸೋದರಮಾವನಾದ ಹರಿಹರನೂ ಅಜಮಾಸು ೧೨೩೦ ರಲ್ಲಿ ಇರಬೇಕಾಯಿತು. ಇದಿಷ್ಟು 'ಕಿಟೆಲ್' ರವರ ಅಭಿಪ್ರಾಯ. ಇದನ್ನು ಅಲ್ಲಗಳೆದು ಆಚಾರ್ಯರು ಹೀಗೆ ಅಭಿಪ್ರಾಯಪಡುತ್ತಾರೆ:— ಹರಿಹರ ಮೊದಲಾದವರು ೧೧೬೫ ರಲ್ಲಿ ಇದ್ದಿರಬೇಕು. ಈ ಅಭಿಪ್ರಾಯವನ್ನು ಸಮರ್ಥಿಸುವದಕ್ಕೆ ಪ್ರಬಲವೆಂದು ತೋರುವ ಐದಾರು ಕಾರಣಗಳನ್ನು ಆವರು ಕೊಡುತ್ತಾರೆ (ಕವಿಚರಿತೆಯ ಮೊದಲನೆಯ ಸಂಪುಟ ಪುಟ ೨೭೦-೭೧). ಅವುಗಳನ್ನು ಹೀಗೆ ಸಂಗ್ರಹಿಸಬಹುದು. ಸೋಮರಾಜನು (೧೨೨೨) ತನ್ನ ಉದ್ಭಟ ಕಾವ್ಯದಲ್ಲಿ ಹರಿಹರನನ್ನು ಸ್ತುತಿಸಿದ್ದಾನೆ. ಅರ್ಥಾತ್ ಹರಿಹರನು ೧೨೨೨ ಕ್ಕೆ ಮೊದಲೇ ಇದ್ದಿರಬೇಕಾಯಿತು. ಕೆರೆಯ ಪದ್ಮರಸನು ಮಂತ್ರಿಯಾಗಿದ್ದ ನರಸಿಂಹ ಬಲ್ಲಾಳನು ೧೨೨೨ ಕ್ಕೆ ಹಿಂದಿನವನಾಗಿರಬೇಕು. ಹೊಯ್ಸಳ ಪರಂಪರೆಯಲ್ಲಿ ೧೨೨೨ ಕ್ಕೆ ಹಿಂದೆ ವಿಷ್ಣುವರ್ಧನನ ಮಗ ನರಸಿಂಹ ಬಲ್ಲಾಳನಲ್ಲದೆ ಬೇರೊಬ್ಬರು ಆ ಹೆಸರಿನವರು ಕಂಡುಬರುವದಿಲ್ಲ. ಈ ವಿಷ್ಣುವರ್ಧನನ ಮಗ ನರಸಿಂಹ ಬಲ್ಲಾಳನು ೧೧೪೧ ರಿಂದ ೧೧೭೩ರ ವರೆಗೆ ಆಳಿದನು. ಈತನ ಕಾಲದಲ್ಲಿಯೇ ಅಂದರೆ ೧೧೪೧-೧೧೭೩ ರಲ್ಲಿ ಕೆರೆಯ ಪದ್ಮರಸ ಹರಿಹರರು ಇದ್ದಿರಬೇಕು. ಪದ್ಮರಾಜ ಪುರಾಣದಿಂದ ರಾಘವಾಂಕ, ಹರಿಹರ, ಕೆರೆಯ ಪದ್ಮರಸರು ಸಮಕಾಲೀನರೆಂದು ತಿಳಿಯುತ್ತದೆ. ಆದುದರಿಂದ ಈ ಮೂವರೂ ಕವಿಗಳು ಅಜಮಾಸು ೧೧೬೫ ರಲ್ಲಿಯೇ ಇದ್ದಿರಬೇಕು ಇತ್ಯಾದಿ. ಸ್ವಾರಸ್ಯಪೂರ್ಣವಾದ ಈ ವಿವೇಚನೆಯನ್ನು ಆಚಾರ್ಯರು ಮಾಡಿದ್ದಾರೆ. ಕರ್ನಾಟಕ ಕವಿಚರಿತೆಯ ಮೊದಲ ಸಂಪುಟದಲ್ಲಿ ಉಕ್ತರಾದ ಕೆಲವು ಕವಿಗಳ ಕಾಲವನ್ನು ಕುರಿತು ಬೇರೊಬ್ಬ ಸಮರ್ಥ ಸಂಶೋಧಕರು ಕೆಲವು ದಿವಸಗಳ ವರೆಗೆ ಅರ್ಥಪೂರ್ಣವೂ ಸ್ವಾರಸ್ಯಯುಕ್ತವೂ ಆದರೆ ಕೆಲವುಮಟ್ಟಿಗೆ ಅಪ್ರಿಯವೂ ಆದ ವಾಗ್ಯುದ್ಧವನ್ನು ನಡೆಸಿದರು. ಅವರೆಂದರೆ ಡಾ॥ ಎ. ವೆಂಕಟಸುಬ್ಬಯ್ಯ M. A. Ph. D. LL. B. ಆವರು. ಅವರ ತಮ್ಮ "ಕೆಲವು ಕನ್ನಡ ಕವಿಗಳಜೀವನ ಕಾಲವಿಚಾರ"ವೆಂಬ

ವಿಚಾರಪೂರ್ಣ ಗ್ರಂಥದ ೨೬೨ ಹಾಗೂ ಮುಂದಿನ ಪುಟಗಳಲ್ಲಿ ನರಸಿಂಹಾಚಾರ್ಯರ ಅಭಿಪ್ರಾಯವು ಅಸಾಧುವಾದುದೆಂದು ಸಾಧಿಸುವ ಪ್ರಯತ್ನ ಮಾಡಿದ್ದಾರೆ. ಆ ವಿವೇಚನೆಯಲ್ಲಿಯೂ ಹುರುಳಿಲ್ಲದೆ ಇಲ್ಲ. ವಿಸ್ತೃತವಾದ ಅವರ ವಿವೇಚನೆಯಲ್ಲಿ ನಾನು ಸಂಗ್ರಹಿಸಿ ಹೇಳುವೆ. ಸೋಮರಾಜನು ಉದ್ಭಟ ಕಾವ್ಯವನ್ನು ೧೫೨೨ ರಲ್ಲಿ ಬರೆದನು. ೧೨೨೨ ರಲ್ಲಿ ಅಲ್ಲ. ಅಂದ ಮೇಲೆ ಹರಿಹರ ಮೊದಲಾದವರು ೧೫೦೦ಕ್ಕೆ ಮೊದಲು ಇದ್ದಿರಬಹುದಲ್ಲದೆ ೧೨೦೦ಕ್ಕೆ ಹಿಂದೆ ಅಲ್ಲ. ಹೀಗೆ ಹೇಳಿ ಅಯ್ಯನವರು ಆಚಾರ್ಯರ ಆಧಾರದ ಅಡಿಗಲ್ಲನ್ನೇ ಅಸ್ತವ್ಯಸ್ತ ಮಾಡಿದ್ದಾರೆ. ಗಿರಿಜಾಕಲ್ಯಾಣವು ಮಲ್ಲಿಕಾರ್ಜುನನ ಸೂಕ್ತಿ ಸುಧಾರ್ಣವಕ್ಕಿಂತ ಮೊದಲು ಅಂದರೆ ೧೨೬೩ (ವೆಂಕಟಸುಬ್ಬಯ್ಯನವರು ಅಭಿಪ್ರಾಯಕೊಟ್ಟ ಪ್ರಕಾರ) ಕ್ಕೆ ಮೊದಲು ಬರೆಯಲ್ಪಟ್ಟಿರಬಹುದು. ಪದ್ಮರಾಜ ಪುರಾಣದಲ್ಲಿ ವಿಪ್ರನಾದ 'ನರಸಿಂಹ ಬಲ್ಲಾಳ' ಎಂಬ ಪದಕ್ಕೆ ೧ ನೇ ನರಸಿಂಹ ಹೊಯ್ಸಳನೆಂದು (ಇದೇ ಸುಸಂಗತವೆಂದಾದರೂ ಹೀಗೆ ಹೇಳಬೇಕು.) ಅರ್ಥ ಹಚ್ಚಿ ನರಸಿಂಹ ಪುತ್ರನಾದ ೩ ನೇ ಬಲ್ಲಾಳನೇ (೧೨೯೧-೧೩೪೨) ಇವನೇ ಪದ್ಮರಾಜ ಪುರಾಣದಲ್ಲಿ ವಿಪ್ರನಾದವನಾಗಿರಬೇಕು. ಇವನು ಒರೆಗಲ್ಲಿನ ಪ್ರತಾಪರುದ್ರನ ಸಮಕಾಲೀನನೂ ಅಹುದು. ಕೆರೆಯಪದ್ಮರಸನು ಈ ನರಸಿಂಹ ಬಲ್ಲಾಳನಲ್ಲಿಯೇ ಮಂತ್ರಿಯಾಗಿರಬೇಕು. ಕಿಟೆಲ್‌ರವರ ಅಭಿಪ್ರಾಯದಂತೆ ವೆಂಕಟಸುಬ್ಬಯ್ಯನವರಾದರೂ ಬ್ರೌನ ಸಾಹೇಬರ ಹೇಳಿಕೆಯನ್ನು ಅನುಸರಿಸಿ ೧೨೮೬ ರಿಂದ ೧೩೨೮ ರ ವರೆಗೆ ಪಂಪಾಪುರದಲ್ಲಿ ಆಳಿದ ದೇವರಾಜನನ ಕಾಲದಲ್ಲಿ ರಾಘವಾಂಕನು ಇದ್ದಿರಬಹುದೆಂದು ಊಹಿಸುತ್ತಾರೆ. ಈ ಎಲ್ಲ ಕಾರಣಗಳಿಂದಲೂ ವೀರಶೈವ ಪುರಾಣಗಳಲ್ಲಿ ಹೇಳಿದ್ದನ್ನೆಲ್ಲ ಐತಿಹಾಸಿಕ ಸತ್ಯವೆಂದು ನಂಬುವುದು ತಪ್ಪೆಂದು ಅಭಿಪ್ರಾಯ ಪಟ್ಟು ಹರಿಹರನ ಗ್ರಂಥಗಳು ಸುಮಾರಾಗಿ ೧೨೬೦—೧೨೭೦ರಲ್ಲಿ ರಚಿತವಾಗಿರಬೇಕೆಂದು ಅಭಿಪ್ರಾಯಪಡುತ್ತಾರೆ (ಕೆರೆಯಪದ್ಮರಸನು ಹರಿಹರ ರಾಘವಾಂಕರ ಸಮಕಾಲೀನನಾಗಿರಲಾರನೆಂದು ಅವರು ಪ್ರತಿಪಾದಿಸುತ್ತಾರೆ.) ಆಚಾರ್ಯರು ಹರಿಹರನ ಕಾಲವು ೧೧೬೫ ಎಂದು ಅಭಿಪ್ರಾಯ ಪಟ್ಟರೆ ಡಾ. ವೆಂಕಟಸುಬ್ಬಯ್ಯನವರು ಹರಿಹರನ ಕಾಲವನ್ನು ಒಂದು ನೂರು ವರುಷ ಈಚೆಗೆ ಎಳೆದು ತಂದು ಅಜಮಾಸು ೧೨೬೦-೭೦ ಎಂದು ಹೇಳುತ್ತಾರೆ (ಇವರ ಅಭಿಪ್ರಾಯದ ಪ್ರಕಾರ ಬಸವ ಚನ್ನಬಸವರೂ ಕೂಡ ೧೨೦೦ ರಕ್ಕೆ ಈಚಿನವರು) ಈ ಎಲ್ಲ ಹೇಳಿಕೆಗಳಲ್ಲಿ ಎಷ್ಟೋ

ವ್ಯತ್ಯಾಸವು ತೋರಿಬರುವದಾದರೂ ಉಳಿದಾವ ಕವಿಗಳಿಗಿಂತಲೂ ಹರಿಹರನು ಬಸವನಿಗೆ ಸಮೀಪದವನು ಎಂಬ ಅಭಿಪ್ರಾಯವು ಹೊರಟೇ ಹೊರಡುತ್ತದೆ. ಅಂದಮೇಲೆ ಬಸವದೇವರಾಜರಗಳೆಯೇ ಬಸವನ ವಿಷಯಕವಾದ ಆದ್ಯಗ್ರಂಥವೆಂದ ಹಾಗಾಯಿತು. ಹಾಗೂ ಬಸವನ ಕಾಲವಾದ ಸ್ವಲ್ಪ ದಿವಸಗಳಲ್ಲಿಯೇ (ತುಲನಾತ್ಮಕವಾಗಿ) ರಚಿಸಲ್ಪಟ್ಟಿರಬೇಕು. "ಬಸವದೇವರಾಜರಗಳೆ" ಯ ವಿದ್ವಾನ ಸಂಪಾದಕರಾದ ಪ್ರೊ. ಟಿ ಎಸ್. ವೆಂಕಣ್ಣಯ್ಯನವರಾದರೂ ಈ ಇತ್ತಂಡ ವಾದವನ್ನು ಸೂಕ್ಷ್ಮವಾಗಿ ಬಿಟ್ಟು ಗೊಟ್ಟು ಸ್ಥೂಲವಾಗಿ ಹರಿಹರನು ಸೋಮನಾಥ (ಬಸವಪುರಾಣದಕರ್ತೃ) ನಕ್ಕಿಂತ ಮೊದಲಿನವನೆಂದೂ ಅರ್ಥಾತ್ "ಈಗ ದೊರೆತಿರುವ ಬಸವಣ್ಣನವರ ಚರಿತ್ರರೂಪವಾದ ಪುರಾಣಗಳಲ್ಲೆಲ್ಲ ಬಸವದೇವರಾಜ ರಗಳೆಯೇ ಅತ್ಯಂತ ಪ್ರಾಚೀನವಾದುದೆಂದು ತೋರುತ್ತದೆ", ಎಂದು ಅಭಿಪ್ರಾಯಪಡುತ್ತಾರೆ. ಎಮ್. ಆರ್. ಶ್ರೀನಿವಾಸರಾದರೂ ಹೀಗೇ ಹೇಳಿದ್ದಾರೆ. ಈ ವಿಷಯವಾಗಿ ಸ್ವತಂತ್ರ ವಿಚಾರಿಗಳುಳ್ಳ ಬರೆಹವನ್ನು ಶಿವಾನುಭವದಲ್ಲಿ ಮ| ಶ್ರೀ ಬುದ್ಧಯ್ಯ ಪುರಾಣಿಕರು ಬರೆದಿರುತ್ತಾರೆ. ಅದರಲ್ಲಿ ಅವರು ಡಾ|| ವೆಂಕಟಸುಬ್ಬಯ್ಯನವರ ವಾದವನ್ನು ಖಂಡಿಸಿ ಹರಿಹರನು ಅಜಮಾಸು ೧೨೦೦ ರ ಸುಮಾರಿಗೆ ಇರಬಹುದಾಗಿ ಹೇಳುತ್ತಾರೆ.

ಸೂಕ್ಷ್ಮಾಂಶಗಳನ್ನು ಬಿಟ್ಟುಕೊಟ್ಟರೂ ಸ್ಥೂಲವಾಗಿಯಾದರೂ ಬಸವದೇವರಾಜ ರಗಳೆಯು ಬಸವನ ವಿಷಯಕವಾದ ತೀರ ಪ್ರಾಚೀನ ಗ್ರಂಥವೆಂಬದನ್ನು ಒಪ್ಪಲೇಬೇಕು. ಅಂದಮೇಲೆ ಅದು ಹೆಚ್ಚು ವಿಶ್ವಸನೀಯವೂ ಎಂದು ತಾನೇ ಸಿದ್ಧವಾಗುತ್ತದೆ. ಬಸವದೇವರಾಜ ರಗಳೆಯಲ್ಲಿ ನಿರೂಪಿತವಾದ (ಕೆಲಮಟ್ಟಿಗೆ ತರ್ಕಶುದ್ಧವಾಗಿರುವ) ಬಸವನ ಚರಿತ್ರೆಯಂತೂ ಈ ಮಾತನ್ನು ಹೆಚ್ಚಾಗಿ ಸಮರ್ಥಿಸುತ್ತದೆ. ಆದುದರಿಂದ ಈ ಗ್ರಂಥದಲ್ಲಿ ಹೇಳಲ್ಪಟ್ಟ ಬಸವ ಚರಿತ್ರೆಯನ್ನು ನಾವು ಕಂಡುಕೊಳ್ಳುವದೂ ಇನ್ನುಳಿದ ಪುರಾಣಗಳ ಹೇಳಿಕೆಗಳ ಮೂಲಕ ತುಲನಾತ್ಮಕ ದೃಷ್ಟಿಯಿಂದ ಈ ಗ್ರಂಥವನ್ನು ನಾವು ಅಭ್ಯಾಸ ಮಾಡುವುದೂ ಅವಶ್ಯವೆಂದು ಸಿದ್ಧವಾಗುವದಿಲ್ಲವೇ?

ಪೌರಾಣಿಕ ಭಕ್ತರ ದೃಷ್ಟಿಯನ್ನು ಬಿಟ್ಟುಕೊಟ್ಟು ವೀರಶೈವ ಪುರಾಣಗಳನ್ನು ಅವಲೋಕಿಸುವದಾದರೆ ಅವುಗಳಲ್ಲಿ ಹೇಳಲ್ಪಟ್ಟ ಘಟನೆಗಳು ಹೆಚ್ಚಾಗಿ ಅಸಂಭಾವ್ಯವೆಂದು ನಮಗೆ ತೋರದಿರದು. ಬಸವ ಮೊದ

ಲಾದವರು ಅಲೌಕಿಕ ಪುರುಷರೆಂಬ ಗ್ರಹಿಕೆಯಿಂದಲೇ ಪುರಾಣಗಳು ರಚಿಸಲ್ಪಟ್ಟಿರುವದರಿಂದ ಅವುಗಳಲ್ಲಿ ಐತಿಹಾಸಿಕ ಸತ್ಯದ ಅಭಾವವಿರುತ್ತಿದ್ದರೆ, ಅಸಂಭಾವ್ಯ. ಅಲೌಕಿಕ ಸಂಗತಿಗಳೇ ಪ್ರಸ್ತಾಪಿಸಲ್ಪಟ್ಟಿದ್ದರೆ ನಾವು ಆಶ್ಚರ್ಯಪಡುವ ಕಾರಣವಿಲ್ಲ. ಅಂತೆಯೇ ಬಸವನ ವಿಷಯವಾಗಿರುವ ಅನೇಕ ಗ್ರಂಥಗಳಲ್ಲಿ ಅಸಂಭಾವ್ಯ ನಿರೂಪಣೆಯನ್ನು ಹಳಿಯದೆ ಸಾಧ್ಯವಿದ್ದಷ್ಟು ಸಂಗತಿಗಳನ್ನು ಅವುಗಳಿಂದ ನಾವು ಸಂಗ್ರಹಿಸಬೇಕು. ವೀರಶೈವ ಪುರಾಣಗಳನ್ನೂ ವಚನಗಳನ್ನೂ ಸೂಕ್ಷ್ಮವಾಗಿ ಅವಲೋಕಿಸಿ, ವಿಭಜಿಸಿ, ತುಲನೆಮಾಡಿ ಅನ್ಯಸಾಧನೆಗಳ ಆಶ್ರಯವನ್ನು ಪಡೆದು (ಸಾಧ್ಯವಿದ್ದರೆ) ಬಸವಾದಿ ಮಹಾಪುರುಷರ ಚರಿತ್ರವನ್ನು ಕಂಡುಕೊಳ್ಳಬೇಕಾಗಿದೆ. ಸಮಂಜಸ ವಿಷಯಗಳನ್ನು ಸಂಗ್ರಹಿಸಬೇಕಾಗಿದೆ. ಆ ದೃಷ್ಟಿಯಿಂದ ನಾವು ಬಸವದೇವರಾಜ ರಗಳೆಯನ್ನು ಅವಲೋಕಿಸುವಾ. ಹಾಗೆ ಮಾಡುವದಕ್ಕೆ ಮೊದಲು ಬಸವನ ವಿಷಯಕವಾಗಿರುವ ಪ್ರಮುಖ ಗ್ರಂಥವಾಗಿರುವ ಭೀಮ ಕವಿಯ ಬಸವ ಪುರಾಣದ ಕಥಾಸಾರವನ್ನಿಲ್ಲಿ ಸಂಗ್ರಹಿಸಬೇಕಾಗಿದೆ. ಯಾಕಂದರೆ ಉಳಿದ ಪುರಾಣಗಳ ಹೇಳಿಕೆಗಳು ಹೆಚ್ಚಾಗಿ ಬಸವಪುರಾಣವನ್ನು ಆಧಾರವಾಗಿಟ್ಟುಕೊಂಡಿವೆ. ಆದುದರಿಂದ ನಾವು ಬಸವದೇವರಾಜ ರಗಳೆ ಹಾಗೂ ಸಾಮಾನ್ಯವಾಗಿ ಉಳಿದ ಪುರಾಣಗಳ ಹೇಳಿಕೆಯಲ್ಲಿರುವ ವ್ಯತ್ಯಾಸವನ್ನು ಕಂಡುಕೊಳ್ಳಬಹುದು. ಹಾಗೆ ಮಾಡುವದಕ್ಕಿಂತ ಮೊದಲು ಬಸವದೇವರಾಜ ರಗಳೆ ಗ್ರಂಥದಿಂದ ಹೊರಡುವ ಒಂದು ಸ್ವಾರಸ್ಯವಾದ ವಿಷಯನ್ನು ಇಲ್ಲಿ ನಿರೂಪಿಸಬಹುದು. ಅದೆಂದರೆ ಆಗ್ರಂಥದ ಮೂಲಕವಾಗಿ ನಾವು ಅರಿಯಬಹುದಾದ ಬಸವನ ಕಾಲದ ಸಾಮಾಜಿಕ ಸ್ಥಿತಿ. ಈ ದೃಷ್ಟಿಯಿಂದಲೂ ಚರಿತ್ರ ದೃಷ್ಟಿಯಿಂದಲೂ ಅಭ್ಯಾಸ ಮಾಡುವಾಗ ಈ ಗ್ರಂಥವು ಹೆಚ್ಚು ಉಪಯುಕ್ತವೆಂದು ತೋರದಿರಲಾರದು. ಅದಕ್ಕಾಗಿ ಬಸವನ ಕಾಲದ ಸ್ಥಿತಿಗಳನ್ನು ಮೊದಲು ಸಂಕ್ಷಿಪ್ತವಾಗಿ ನಿರ್ದೇಶಿಸಿ ತುಲನಾತ್ಮಕ ದೃಷ್ಟಿಯಿಂದ ಬಸವ ಚರಿತ್ರವನ್ನು ನಂತರ ಚರ್ಚಿಸುವೆನು.

ವೀರಶೈವರ ಪದ್ಧತಿಃ— ವೀರಶೈವರಲ್ಲಿಯೇ ಶೀಲವಂತರೆಂಬ ಒಳಪಂಗಡವಿದೆಯಷ್ಟೇ. ಅವರು ನೀರನ್ನು ಸ್ವಚ್ಛವಾಗಿ ಸೋಸಿ, ಕೊಡದಲ್ಲಿ ತುಂಬಿ ಅದರ ಮೇಲೆ ಸ್ವಚ್ಛವಾದ ಬಟ್ಟೆಯನ್ನು ಮನೆಗೆ ತರುವ ಪದ್ಧತಿ ಇದೆ. ಈ ಪದ್ಧತಿಯು ಆಗಲೂ ಇತ್ತು.

ಸದಮಳ ಶಿವೈಕ್ಯ ಚಿತ್ತಂ ಹರುಷದಿಂ ಮಿಂದು ।
ಸೋದಿಸಿದ ಶೀತೋದಕಂಗಳಂ ತೀವ್ರಂ ।
ಆದರಂಮಿಗೆ ಸಪುರದಿಂ ಬಾಸಣಿಸುತಂ ।
ಸಹಜ ಸುವರ್ಮಾನಿ ಸುಖದಿಂದ ಬರುತಿರ್ದ ।

ಹಾಗೆಯೇ ಊಟದ ಸಮಯದಲ್ಲಿ ಹರಿವಾಣದಲ್ಲಿಯ ಅನ್ನವನ್ನು ಅನ್ಯರು ನೋಡಕೂಡದೆಂದಿದೆ. ಈ ಪದ್ಧತಿ ಆಗಲೂ ಇತ್ತೆಂಬುದನ್ನೂ ಕಂಡುಕೊಳ್ಳಬಹುದು.

ನವಮಧುರ ರಸವೊಸರ್ವ ಪಕ್ವಾನ್ನಮುಂ ಬಡಿಸಿ ।
ನಡುವೆ ಜವನಿಕೆ ವಿಡಿದು ಪೊರಗೆ ಕೈಮುಗಿದಿರ್ದು

ವೀರಶೈವಸ್ಥಿತಿಃ— ಕಾಳಾಮುಖರು ಲಿಂಗಗಳನ್ನು ಹಣೆಗೆ ಹಚ್ಚಿಕೊಳ್ಳುತ್ತಿದ್ದರೆಂದು ತಿಳಿಯುತ್ತದೆ. ಆದರೆ ಬಸವನ ಕಾಲದಿಂದ ಲಿಂಗಗಳನ್ನು ಕರಡಿಗೆಗಳಲ್ಲಿಟ್ಟು ಕೊರಳಲ್ಲಿ ಅಡ್ಡವಾಗಿ ಧರಿಸುತ್ತಿರುವರು. ಈ ರೂಢಿಯು ಬಸವನ ಕಾಲದಲ್ಲಿ ಅಸ್ತಿತ್ವದಲ್ಲಿತ್ತೆಂದು ನಮಗೆ ಗೊತ್ತಾಗುತ್ತದೆ.

"ಲೇಸೆನುತ್ತೀಸಿಕೊಂಡು ತನ್ನ ಕಕ್ಷಪುಟದೊಳಗಿನ ರನ್ನದ ಸೆಜ್ಜೆಯುಂ ತೆಗೆದು ಒಳಗಣ ಸಂಗಮೇಶ್ವರ ಲಿಂಗಕ್ಕೆ ಕೊಟ್ಟು ಹಿಂಗದಿರ್ಪಲ್ಲಿ.

ಬಸವರಾಜಂ ತನ್ನ ಕೆಲಬಲದ ಸಹಸ್ರ ಮಾಹೇಶ್ವರರ ಕಕ್ಷಪುಟದ ಸೆಜ್ಜೆಗಳನುಪ್ಪರಿಸಿ"

ವೀರಶೈವರಲ್ಲಿ ಅನೇಕ ಪಂಗಡಗಳಿರುವವಷ್ಟೇ. ಅವುಗಳಲ್ಲಿ ಪರಸ್ಪರ ಅನ್ನೋದಕ ವ್ಯವಹಾರಗಳು ಕೂಡ ನಡೆಯುವದಿಲ್ಲ. ಈಗಲೂ ಕೂಡ ಈ ಅನೈಕ್ಯಭಾವವು ಇದ್ದಿರಬೇಕು. ಅಂತೆಯೇ ಬಸವನು ಅವರೆಲ್ಲ ಒಟ್ಟಾರೆ ಸೇರುವಂತೆ ಪ್ರಯತ್ನ ಮಾಡಿದನು. ಆತನು ಮಂಗಳವಾಡಕ್ಕೆ ಬಂದ ಕೂಡಲೇ ಅಸಂಖ್ಯ ಜನರನ್ನು ವೀರಶೈವ ಮತಕ್ಕೆ ಕೂಡಿಸಿಕೊಂಡನು. ಅವರನ್ನೆಲ್ಲ ಹೇಗೆ ಉದ್ಧರಿಸಬೇಕು. ಅವರಲ್ಲಿ ಐಕ್ಯಭಾವ ಹೇಗೆ ತರಬೇಕು ಎಂಬ ಸಂಗತಿಯನ್ನು ಕುರಿತು ಆತನು ಚನ್ನಾಗಿ ಆಲೋಚಿಸಿದನು. ವಿವಿಧ ಪಂಗಡಗಳ ಜನರಲ್ಲಿ ಪರಸ್ಪರ ಅನ್ನೋದಕ ವ್ಯವಹಾರ ನಡೆಯುತ್ತಿರಲಿಲ್ಲ. ಬಸವನು ಎಲ್ಲ ಪಂಗಡಗಳ ಜನರನ್ನು ಒಟ್ಟಾರೆ ಸೇರಿಸಿ ಅಲ್ಲಿ ಎಲ್ಲರೂ ಊಟ ಮಾಡುವಂತೆ

ನಿಯಮ ಹಾಕಿಕೊಟ್ಟನು. ಅಲ್ಲಿ ಜಾತಿಭೇದವನ್ನು ಎಣಿಸಲಾಗದೆಂದು ಹೇಳಿದನ್ನು ಅದರ ಪ್ರಸ್ತಾಪ ಬಸವದೇವರಾಜ ರಗಳೆಯಲ್ಲಿ ಬಂದಿದೆ.

"ಅಂಗದಲ್ಲಿ ಕಠಿನಮಂ ಕೇಳೆ ಜಂಗಮದಲ್ಲಿ ಜಾತಿಯನರಸೆ ಪ್ರಸಾದದಲ್ಲಿ ಅಪವಿತ್ರತೆಯನರಿಯೆ"

ಆಸ್ಥಾನದ ಸ್ಥಿತಿಗಳು:— ಹರಿಹರನು ಸ್ವತಃ ಕರಣಿಕನಾದುದರಿಂದ ಆಸ್ಥಾನದ ವ್ಯವಹಾರಗಳನ್ನೆಲ್ಲ ಸೂಕ್ಷ್ಮವಾಗಿ ನಿರೀಕ್ಷಿಸಿದ್ದಾನೆ. ಆ ಕಾಲ ದಲ್ಲಿ ದಂಡಾಧೀಶರು, ದೊಡ್ಡ ಅಧಿಕಾರಿಗಳು ಅಥವಾ ಒಕ್ಕಲಿಗರು ಲಂ ಚವನ್ನು ಕೊಡುವ ರೂಢಿಯನ್ನಿಟ್ಟುಕೊಂಡಿದ್ದರೆಂದು ತಿಳಿಯುತ್ತದೆ "ಬರೆ ವ ಲಂಚವನೀವ" ಎಂಬ ವಾಕ್ಯದಿಂದ ಕಂಡುಕೊಳ್ಳಬಹುದು. ಆ ಕಾಲ ದಲ್ಲಿ ವರುವರುಷಕ್ಕೆ ಲೆಕ್ಕ ಮಾಡಿ ಅಧಾವ ತೆಗೆದಿಡುವ ರೂಢಿಯಿದ್ದಿ ರಬೇಕು. ಯಾಕಂದರೆ ಪ್ರಸ್ತುತ ಗ್ರಂಥದಲ್ಲಿ "ಗಣಕ ನಾಯಕಮಂ ಮನಂಗೊಂಡು......... ಆಯದೊಳು ಬೀಯಮಂ ಕಳೆದು ನಿಲವಂ ಕಂಡು" ಎಂದು ಮೊದಮೊದಲಾಗಿ ಉಕ್ತವಾಗಿದೆ.

ಮೊದಲಿನ ಆ ಕಾಲದಲ್ಲಿ ಮಂತ್ರಿಗಳು, ದಂಡಾಧೀಶರು, ಮೊದ ಲಾದವರು ವಾರ್ಷಿಕ ಅಥವಾ ಮಾಸಿಕ ಸಂಬಳವನ್ನು ಪಡೆಯುತ್ತಿ ದ್ದರು. ಆದರೆ ಈ ಪುಸ್ತಕದಲ್ಲಿ ಬಸವನು "ಒಂದು ವರುಷಕ್ಕೆ ನೂರೊಂದು ಹೊನ್ನ" ಪಡೆಯುತ್ತಿದ್ದನೆಂದು ಹೇಳಿದೆ. ಅಂದಮೇಲೆ ಬಸವನ ಕಾಲ ದಲ್ಲಿ ಸಂಬಳ ಕೊಡುವ ಪದ್ಧತಿಯಿತ್ತೆಂದು ತಿಳಿಯುತ್ತಿದೆ.

ಬಸವನ ಕಾಲವು ಆರ್ಥಿಕ ಅಗ್ಗಳತೆಯ ಕಾಲವಿರಬೇಕು. ಯಾಕಂ ದರೆ ಬಸವನಂತಹ ಕೌಶಲ್ಯಶಾಲಿಯಾದ ಅಧಿಕಾರಿಯೂ ಕೂಡ ಒಂದು ವರುಷಕ್ಕೆ ನೂರೊಂದು ಹೊನ್ನವನ್ನೇ ಪಡೆಯುತ್ತಿದ್ದರೆ ಇನ್ನುಳಿದ ಕಡಿಮೆ ತರಗತಿಯ ಸೇವಕರ ಸಂಬಳವು ತೀರ ಕಡಿಮೆ ಇರಬೇಕಾಯಿತು. ಹೀಗಿದ್ದರೂ ಅವರ ಉಪಜೀವನವು ನಿರಾತಂಕವಾಗಿ ಸಾಗಿತ್ತೆಂದ ಮೇಲೆ ಆ ಕಾಲದಲ್ಲಿ ಧಾನ್ಯ ಅರಿವೆ ಮುಂತಾದ ಜೀವನಕ್ಕುಪಯುಕ್ತವಾದ ವಸ್ತುಗಳು ತೀರ ಅಗ್ಗವಾಗಿ ದೊರೆಯುತ್ತಿರಬಹುದು.

ಊಟದಲ್ಲಿ ಜುಲುಮೆ:— ಇಷ್ಟೇಷ್ಟರಾಗಲಿ, ಅತಿಥಿಗಳಾಗಲಿ, ಗುರುಗಳಾಗಲಿ, ಮಿತ್ರರಾಗಲಿ ಮನೆಗೆ ಬಂದರೆ ಅವರನ್ನು ಒಳ್ಳೇ ಆದರ ಪೂರ್ವಕವಾಗಿ ಬರಮಾಡಿಕೊಂಡು ಅವರನ್ನು ಉಣಬಡಿಸುವದೂ ಹೆಚ್ಚು ಊಟಮಾಡಿರೆಂದು ಒತ್ತಾಯಪಡಿಸುವದೂ ಆ ಕಾಲಕ್ಕೆ ರೂಢಿಯಲ್ಲಿರ

ಲ್ಲಿರಬೇಕು. ಯಾಕಂದರೆ "ದೇವಾ ಇನ್ನೊಂದೆ ತುತ್ತು ಎನ್ನಾಣೆಕೊಳ್ಳೆನುತ" ಎಂಬ ಉಕ್ತಿಯಿಂದ ಅದು ಸ್ಪಷ್ಟವಾಗುತ್ತಿದೆ. ನವನಾಗರಿಕತೆಯ ಕಾಲದಲ್ಲಿ ಈ ಪದ್ಧತಿಯು ಕಡಿಮೆಯಾಗುತ್ತ ಬಂದಿದ್ದರೂ ಹಳ್ಳಿಗಳಲ್ಲಿ ಈ ಪದ್ಧತಿಯು ಇನ್ನೂ ವಿಶೇಷವಾಗಿದೆ. ಕನ್ನಡ ನಾಡಿನಲ್ಲಂತೂ ಈ ಪದ್ಧತಿಯು ಉಳಿದೇ ಇದೆ.

ಅತಿಥಿಯು ಹರಿವಾಣದಲ್ಲಿಯ ಅನ್ನವನ್ನು ಮುಟ್ಟದಿದ್ದರೆ ಅಥವಾ ಕಡಿಮೆ ಊಟಮಾಡಿದರೆ ಯಜಮಾನನು ವ್ಯಥೆಪಟ್ಟುಕೊಂಡು "ಕೊಟ್ಟ ಪಕ್ವಾನ್ನಮಂ ಮೆಲಲೊಲ್ಲೆಯೇಕೆಂ" ಬದಾಗಿ ಆಗ ಕೇಳುತ್ತಿದ್ದಿರಬೇಕು.

ಪದ್ಧತಿಃ— ಸುಂದರ ವಸ್ತುಗಳಿಗೆ ಕೆಟ್ಟ ದೃಷ್ಟಿ ತಗಲುವದೆಂಬ ನಂಬಿಗೆ ಬಹು ಪ್ರಾಚೀನಕಾಲದಿಂದಲೂ ಬಂದಿದೆ. ಆ ಕೆಟ್ಟ ದೃಷ್ಟಿಯ ದೋಷವನ್ನು ಕಳೆಯುವದಕ್ಕಾಗಿ ಉಪ್ಪು, ಮೆಣಶಿನಕಾಯಿ, ಕಡ್ಡಿ, ಆರತಿ ಮುಂತಾದ ಪದಾರ್ಥಗಳನ್ನು ಉಪಯೋಗಿಸುವ ಪದ್ಧತಿ ಈಗಲೂ ಇದೆಯಷ್ಟೆ. ಈ ಪದ್ಧತಿಯಾದರೂ ಆ ಕಾಲದಲ್ಲಿತ್ತೆಂದು ಕಂಡುಬರುತ್ತಿದೆ. "ಕೊಟ್ಟ ಪಕ್ವಾನ್ನಮಂ ಮೆಲಲೊಲ್ಲೇಕೆಂಬ ದೃಷ್ಟಿಯಾಯ್ತೆಲೆಲೆ ಉಪ್ಪಾರತಿಯನೆತ್ತೆಂಬ."

ಹೀಗೆ ಈ ಪುಸ್ತಕದಿಂದ ಆ ಕಾಲದ ಸ್ಥಿತಿಗಳನ್ನು ± ಅರಿಯಬಹುದಾಗಿದೆ.

ಇನ್ನು ಚರಿತ್ರ ದೃಷ್ಟಿಯಿಂದ ಬಸವದೇವರಾಜ ರಗಳೆ ಗ್ರಂಥದಲ್ಲಿಯ ನಿರೂಪಣೆಯನ್ನು ಇನ್ನುಳಿದ ವೀರಶೈವ ಪುರಾಣಗಳೊಡನೆ ತುಲನಾತ್ಮಕ ದೃಷ್ಟಿಯಿಂದ ಅವಲೋಕಿಸುವಾ. ಅದಕ್ಕಾಗಿ ಬಹು ಮುಖ್ಯವಾದ ಭೀಮಕವಿಯ ಬಸವಪುರಾಣದ ಕಥಾಸಾರಾಂಶವನ್ನಿಲ್ಲಿ ವಿವರಿಸುವದು ಅವಶ್ಯವಾಗಿದೆ.

(ಮುಂದುವರಿಯುವದು.)

---

± ಈ ಭಾಗವನ್ನು ಪ್ರೊಫೆಸರ ಕುಂದಣಗಾರರ ಟಿಪ್ಪಣೆಗಳ ಮೇಲಿಂದ ತಯಾರಿಸಿದುದಾಗಿದೆ. —ಲೇಖಕ.

# ಶಿವಾನುಭವಕ್ಕೆ ಸಹಾಯ.



ಶಿವಾನುಭವ ಪತ್ರಿಕೆಗೆ ಕೆಳಗೆ ಕಾಣಿಸಿದ ಮಹನೀಯರು ವಿಶೇಷ ಸಹಾಯ ಮಾಡಿದ್ದಕ್ಕೆ ನಾವು ಅವರಿಗೆ ತುಂಬಾ ಆಭಾರಿಯಾಗಿರುವೆವು. ಶಿ॥ ಮ॥ ಚಂದ್ರಶೇಖರಯ್ಯ ಮಠ ಮು- ಚೋಳಚಗೋಡ ತಾಲೂಕ ಬದಾಮಿ ಇವರು ತಮ್ಮ ಕೆಲಸವನ್ನು ಬದಿಗೊತ್ತಿ ಶಿವಾನುಭವ ಪ್ರಚಾರಕ್ಕಾಗಿ ಏನೂ ಪ್ರತಿಫಲವನ್ನಪೇಕ್ಷಿಸದೆ ಮೈಸೂರ ಪ್ರಾಂತದಲ್ಲಿ ಸಂಚರಿಸಿ ನಮಗೆ ವಿಶೇಷ ಸಹಾಯ ಮಾಡಿದರು. ಇವರು ಬಹಳ ದಿವಸಗಳ ವರೆಗೆ ಶಿವಾನುಭವ ಆಫೀಸಿನಲ್ಲಿದ್ದು ಗ್ರಂಥ ಪ್ರಕಟನೆ ಮತ್ತು ಪತ್ರಿಕಾ ಪ್ರಚಾರ ಇವುಗಳಲ್ಲಿ [illegible]ಯ ಮಾಡುತ್ತಲೇ ಬಂದಿರುವರು ಇದಕ್ಕೋಸ್ಕರ ನಾವು [illegible]ತ್ಯಂತ ಕೃತಜ್ಞರಾಗಿದ್ದೇವೆ.

ಶ್ರೀ ಮಹಾದೇವ ಸ್ವಾಮಿಗಳು ಸರ್ಪಭೂಷಣಮಠ ಬೆಂಗಳೂರ ಇವರು ಯಾವಾಗಲೂ ಅನೇಕ ರೀತಿಯಿಂದ ಸಹಾಯ ಮಾಡುತ್ತಿರುವರು. ಈ ಮಹನೀಯರು ವಚನ ವಾಙ್ಮಯ ಪ್ರಸಾರಕ್ಕೋಸ್ಕರ ಮಾಡುತ್ತಿರುವ ಪ್ರಯತ್ನಗಳು ಮಹತ್ತರವಾಗಿರುವವು. ಇದಕ್ಕೋಸ್ಕರ ನಾವು ಅವರಿಗೆ ಬಹಳ ಆಭಾರಿಯಾಗಿರುವೆವು.

ಅಲ್ಲದೆ ನಮ್ಮ ಪ್ರಚಾರಕರಿಗೆ ತಿಪಟೂರಲ್ಲಿ ಶ್ರೀ ಡಿ. ಎಸ್. ಮಲ್ಲಪ್ಪನವರು ತುಮಕೂರಲ್ಲಿ ಶ್ರೀ ಎಲೆ ರೇವಣ್ಣ ಮಂಡಿ ಮರ್ಚಂಟ ಹಾಗು ಶಿ॥ ಮೂ॥ ಶಿವಮೂರ್ತಿಶಾಸ್ತ್ರಿಗಳು, ಕುಣಿಗಲ್ಲಲ್ಲಿ ಗ್ರಾಮಮುನಸೂಫರಾಧ ಶ್ರೀಯುತ ರುದ್ರಪ್ಪನವರು ಹಾಗೂ ಶ್ರೀ ಚನ್ನಬಸವಸ್ವಾಮಿಗಳು ಕರಿಸಿದ್ಧೇಶ್ವರ ಮಠ ಬ್ಯಾಡಗಿ ಈ ಯಾವತ್ತರು ಶಿವಾನುಭವ ಪತ್ರಿಕೆಗೋಸ್ಕರ ಪ್ರೇಮವನ್ನು ವಹಿಸಿ ಸಹಾಯ ಮಾಡಿದ್ದಕ್ಕೋಸ್ಕರ ನಾವು ಅವರಿಗೆ ಅತ್ಯಂತ ಋಣಿಯಾಗಿದ್ದೇವೆ.

ರಾಯಚೂರಿನ ಶ್ರೀಯುತ ನಾಗಪ್ಪ ಪಲ್ಲಕ್ಕಿ ಇವರು ಶಿವಾನುಭವದ ಪೋಷಣಾರ್ಥವಾಗಿ ೩ ರೂಪಾಯಿಗಳನ್ನು ಕಳಿಸಿಕೊಟ್ಟಿರುವರು. ಇದನ್ನು ನಾವು ಅತ್ಯಂತ ಆದರಪೂರ್ವಕವಾಗಿ ಸ್ವೀಕರಿಸುತ್ತೇವೆ.

ಸಂಪಾದಕ.

೪

ಕಾಣಬಾರದಂಥ ಲಿಂಗವ ಕಂಡೆನವ್ವಾ ಎನ್ನ
ಪ್ರಾಣ ಕಾಂತ ಗುರುವಿನುಪದೇಶದಿಂದ ॥ಪ॥

ಮೂರು ದಾರಿ ಮಾರ್ಗ ಪಥದಿ ಪೋದೆನವ್ವ।
ಘಾರುಣಿಯೊಲ್ಲವ ಕಳೆದು ನಿಂದೆನವ್ವ॥
ಆರಿ ಮೂರರೊಳು ಮುಕ್ತನಾದೆನವ್ವ।
ಆರಿಸಾರಿ ಯನ್ನಗುರುವು ಅರುಹಿದನವ್ವ ॥೧॥

ಶ್ರೀ ಕೂಟಾಚಲವೆಂಬ ಪುರವ ಪೊಕ್ಕೆನವ್ವ।
ಅಖಿಳವಿಧನ ನಂಬಿದಾ... ಇಟ್ಟೆನವ್ವ॥
ತ್ರಿದಳುಕ್ಕೆ ತಿರುಗಿನ್ನು ಬರಲಿ...।
ಪದುಳದಿಂದಘ್ಯ್ ... ಹೇಳಿ ... ॥೨॥

ಪದಮುಲಾಮೃತದ ಶ್ರೀ ... ಸವಿದೆನವ್ವ।
ಅದಗೂಡಿ ಪ್ರಸಾದ ಸವಿದೆನವ್ವ।
ಕಾಮವಳಿದು ಮೋಕ್ಷ ಕಾಮುವಾಯಿತವ್ವ।
ಮಾಯುವಳಿದು ಮನೆಯು ಸತಿಯು ನೆರೆದೆನವ್ವ ॥೩॥

ಆಯಾ ಸಂಸಾರಸುಖವನರಿತೆನವ್ವ।
ಗುರುವಿನಾಯದಿಂದ ಎನಗೆ ಸಾಧ್ಯವಾಯಿತವ್ವ।
ತ್ರಿವಿಧಭಾವದಿಂದ ಭವವ ಪರಿವುದವ್ವ ॥೪॥

ತ್ರಿವಿಧಮೂಲ ತ್ರಿಗುಣವಳಿದು ನಿಂದೆವವ್ವಾ।
ಶಿವಯೋಗಿ ನಂಜೇಶ ದಯುವಾದನವ್ವ।
ಶಿವಾವ ಧೂತರೊಳಗೆ ನಾ ಬೆರೆದೆನವ್ವ ॥೫॥

೫

## (ಕರಸ್ಥಲದ ನಾಗಲಿಂಗಪ್ಪನವರು ಹಾಡಿದ್ದು)

ಆರುಗಾಲಿ ಕೀಲುಮೂರು ಏರಿ ಮೇಲೆ ಕುದುರೆ ಕುಣಿಸೋ।
ವಾರಿಜಾಕ್ಷ ಎನ್ನ ನೋಡಯ್ಯ ಓ ಪರಮಹಂಸ ಪಾರಿಜಾತದ
ಕಮಲ ಕಂಡೆನು ।೧॥

ವಾರಿಜಾಕ್ಷಿ ಹೆಣ್ಣೆ ಕೇಳೆ ಪಾರಿಜಾತದ ಕಮಲವ ಕಂಡೆ।
ಮೂರಿ ಪ್ರಣವನಾದದೊಳಗೆಲ್ಲ ಓ! ಮುಕ್ತಿಕಾಂತೆ ಏರಿ ನೋಡೆ
ಏಳು ನೆಲೆಯನು ॥೨॥

ಕೀಲು ಸಂಚಿನೆ ಕೇರಿನ ಮೇ[illegible] ನುಡಿಸೊ ಜಾಣ।
ಕಣ್ಣ ತಿರುಹಿ ಎನ್ನ ನೋ[illegible]ಯ ಮಾಡ[illegible]ಹಂಸ ಕಿನ್ನಡಿಗೆ
ಕಾಯ ಕಳುಹೆನು ॥೩॥

ಸನ್ನೆ ಸಂಜ್ಞೆಯಿಲ್ಲದ ಹೆಣ್ಣೆ। ಎನ್ನ ಕೂಡ ಸರಸಬೇಡ
ಕಣ್ಣು ತಿರುಹಿದ ಕಾರಣವೇನು ಹೇಳೆ। ಓ! ಮುಕ್ತಿಕಾಂತೆ ಹುಣ್ಣಿಮೆ
ಚಂದ್ರನಾ ಕಂಡೆ ॥೪॥

ಏಳು ನೆಲೆಯ ಮೇಲೆ ಕುಳಿತು ವೀಣೆಯ ಶ್ರುತಿ ಮಾಡುವ ಯೋಗಿ
ಮಾಜದೆ ಎನ್ನೊಳು ಕೂಡಯ್ಯ, ಓ! ಪರಮಹಂಸ ಜಾಣನಹುದು
ನಾಗಲಿಂಗಯ್ಯ ॥೫॥

---

೬

ಎಂಥ ಗಾರುಡಿಗ ಸದ್ಗುರುಮೂರ್ತಿ ಎಂಥ ಗಾರುಡಿಗ॥ಪ॥

ಶರಣುಮಾಡೆಂದೊಡೆ ಶರಣುಮಾಡುತಲಿದ್ದೆ।
ಕರದಲ್ಲೇನಿತ್ತು ಜೀವಿಯ ಬೂದಿ ||
ಶಿರದ ಮೇಲೆ ಎನ್ನ ನ್ಯೆಮೇಲೆರೆಯಲು।
ಶರೀರವ ಮರೆದು ಮನ ಸಾಕ್ಷಿಯಾದನೆ ॥೧॥

ಯಾರೂ ಇಲ್ಲದ್ದ ನೋಡಿ ಬೇರೆನ್ನ ಕರೆದೊಯ್ದು।
ಮೋರೆ ಕಿವಿಯೊಳಗಿಟ್ಟು ಮಂತ್ರಿಸಿದ ॥
ನಾರಿ ಬದುಕು ಮನೆ ಮಕ್ಕಳನೆಲ್ಲ।
ಸೇರುಸೇರದ ಹಾಂಗೆ ಮಾಡಿದನೆ ॥೨॥

ಕುಲಗೇಡಿ ಭವಗೇಡಿ ಸಂಗಗೇಡಿಯಾದೆ ।
ಇವನ ವಿಶ್ವಾಸದ ಫಲದಿಂದ ॥
ಇವನ ಮೇಲಿನ್ನ ವ್ಯಾಕುಲ ಹೆಚ್ಚಿತು ।
ವ್ಯವಹಾರೆಂಬುದು ಎಡವಟ್ಟಾಯಿತು ॥೩॥

ಮಂತ್ರಿಸಿದ ಕ್ರಿಯೆ ಮರಳೇನೆಂದರಿಲ್ಲ ।
ಮಂತ್ರತಂತ್ರಕ್ಕದು ಜಗ್ಗಲಿಲ್ಲ ॥
ಮಂತ್ರದ ಮಹಿಮೆ ಮಹಾನು ಮಹಿಮನೆ ಬಲ್ಲ ।
ಮಂತ್ರಕಾರರೊಳು ಗುರು ದೊಡ್ಡವನೆ ॥೪॥

ಇವನ ನಂಬಿದ ಮೇಲೆ ಇವನಂತೆ ಅಲ್ಲದೆ ।
ಭುವನಕ್ಕೆ ತಿರುಗಿನ್ನು ಬರಲಿಲ್ಲ ॥
ವಿವರಿಸೆ ಹುರುಡಿಲ್ಲ ಹೇಳಿ ಕೇಳುವರಿಲ್ಲ ।
ಭುವನ ಚಿದಾನಂದ ರಕ್ಷಿಸನೇ ಗುರು ॥೫॥

---

೭

## ಹಾಗಲವಾಡಿ ಮುದಿಯಪ್ಪನಾಯಕರ ಮಗಳು ರಚಿಸಿದ್ದು.

ಮುತ್ತೈದೆಯಹುದು ನಾನು ಸತ್ತುಹುಟ್ಟುವರಿಗೆ ಸೆರಗು ಹಾಸುವಳಲ್ಲ ।
ಮುತ್ತೈದೆತನ ಮಾಡುವಳಲ್ಲವೋ ॥ಪ॥

ಕರ್ತೃಶ್ರೀಗುರು ಚನ್ನಸಂಗಮೇಶ್ವರಲಿಂಗ ।
ಕರಸ್ಥಲಕೆ ನೆಲೆಗೊಂಡ ಬಳಿಕ ॥ಅನುಪ ॥

ಶರಣುಕುಲದವರೆಲ್ಲ ವರವ ಬೇಡಲಿಕ್ಕಾಗಿ ।
ಪರಲೋಕದರಸು ಪಟ್ಟದ ರಮಣನು ॥
ಹರುಷದಿಂದೆದುಗೊಂಬ ಸಮಯದೊಳು ನಾ ಕಂಡೆ ।
ಪರವಶದಿ ಮೈಮರೆದೆ ತೊರೆದೆ ಲಜ್ಜೆಯನು ॥೧॥

ಆತ್ಮಕುಲದವರೆಲ್ಲ ಗೋತ್ರಸೂತ್ರವ ನೋಡಿ ।
ಆತ್ಮಕೂಟಗಳಿಂದ ಆಯ್ತು ವಿವಾಹ ॥
ರಾತ್ರಿ ಸರಿ ಹೊತ್ತಿನಲಿ ಲಗ್ನ ನಿಶ್ಚಯ ಮಾಡಿ ।
ವೇದೋಕ್ತದಿಂದೆನಗೆ ಆಯ್ತು ವಿವಾಹ ॥೨॥

ಮೂರು ಕೂಟದ ಮೇಲೆ ಮೌನ ಕಂಭವ ನಿಲಿಸಿ।
ಸಾರತತ್ವಂಗಳೆಂಬ ಮೇಲ್ಕಟ್ಟ ಕಟ್ಟಿ॥
ಚೀರುತಿದೆ ಪ್ರಣವ ಮೃದಂಗವುಂ ಲಾಲಿಸುತೆ
ಧಾರೆಯೆರೆದರು ಎನ್ನ ಧಗಧಗಿಪ ಚಿನ್ಮಯಗೆ ॥೩॥

ಶರಣಸತಿ ಲಿಂಗಪತಿ ಎಂದು ಭಸಿತವ ಧರಿಸಿ।
ಕರೆದು ನಾಲ್ವರ ಮುಂದೆ ಸಾಕ್ಷಿಯನೆ ಇಟ್ಟು॥
ಶರಗ ಗಂಟಿಕ್ಕಿ ಕರವಿಡಿದು ಕಂಕಣ।
ಧರಿಸಿ ಸತಿಪುರುಷರೆಂದು ಸೇಸೆಯನಿಟ್ಟ ಬಳಿಕ ॥೪॥

ಪಂಚ ಕಲಶವು ಪಂಚ ನಳಿತಳಿರು ಎಳೆಸುತ್ತಿ।
ಪಂಚಾಭಿಷೇಕ ಮೋದಕ ಹಸ್ತದಿ।
ಪಂಚಮುಖದೊಡೆಯನ ಕಳೆಯೇರಿ ಗುರುಪ್ರಣವ।
ಪಂಚಾಕ್ಷರೀ ಶಿಕ್ಷೆಯೆನಗಿತ್ತ ಬಳಿಕ ॥೫॥

ತಂದೆತಾಯಿಗಳೆಂಬ ಹಂಬಲನೆ ತಾರದೆ।
ಹಿಂದೆ ಗಂಡಧ್ಯಾನ ನಿಮಿಷವೆಡಬಿಡದೆ॥
ಚಂದದಿಂ ನಾಕಬಲಿ ಮೆರವಣಿಗೆಯಂ ಮಾಡಿ।
ತಂದು ಕೊಟ್ಟರು ಕಾಮಧೇನೆಂಬ ಬಲುಹುಲಿಯ ॥೬॥

ಆರು ತಿಂಗಳ ಮೇಲೆ ಆದೆ ನಾ ಶೋಭನವ।
ಸೇರಿದೆನು ಬ್ರಹ್ಮಾಂಡ ಗಂಡನರಮನೆಯ॥
ಆರು ಸರಿಯಿಲ್ಲೆನಗೆ ಇಲ್ಲ ಜನ್ಮಗಳಿನ್ನು।
ತೂರ್‍ಯವಾಯಿತು ಗಮನ ಹುಚ್ಚಾದ್ಯರೊಡವೆರೆದೆ ॥೭॥

---

೮

ಜಾರೆಯೊಂದೆನಲೆನ್ನ ಮೂರುತ್ತರವನೀವೆ।
ಪರಮಾರ್ಥ ಜ್ಞಾನಿ ನೀ ಪುಸಿಯನುಸಿರುವರೆ ॥ಪ॥

ಒಬ್ಬನಿಗೆ ತನುವಿತ್ತೆ ಒಬ್ಬನಿಗೆ ಮನವಿತ್ತೆ।
ಒಬ್ಬನಿಗೆ ಧನವಿತ್ತೆ ಅಂತಲ್ಲದೆ॥
ಹಬ್ಬದ ಹವಣರಿತು ಹಲವು ಮಂದಿಯ ಕೂಡಿ।
ಮಬ್ಬಿನಲಿ ಪೋಗಿ ಮುಂಜಾವದಲಿ ಬರುವೆ ॥೧॥

ಒಬ್ಬನೊಳು ನೋಟ ಮತ್ತೊಬ್ಬನೊಳು ಕೂಟ
ಬೇರೊಬ್ಬನೊಳು ಮಧುರವೆರಸಿದ ಊಟ
ಒಬ್ಬನೊಳು ಸರಸ ಸಂಗೀತ ಸುಖದೋಲಾಟ
ಒಬ್ಬನೊಳು ತೆಕ್ಕೆ ಮತ್ತೊಬ್ಬರಿಗೆ ಧಕ್ಕೆ ॥೨॥

ಮುಗುಳು ನೊಲೆಗಳ ಮುಟ್ಟಿ ಮಧುರ ಮಾತುಗಳಾಡಿ।
ಬಗೆಬಗೆಯ ಬಂಧನದ ಕಳೆಗಳರುಹಿ॥
ಸೊಗಸುತಿಹ ಸವಿಗಲೆಯು ಸಲ್ಲಿದರೆ ಮನಸೋತು
ಜಗದ ಭೀತಿಯು ಬಿಟ್ಟು ಜಾರೆ ಹೆಣ್ಣಾದೆ ॥೩॥

ಕಣ್ಣಿಟ್ಟ ಮೇಲವನ ಕಡೆಗೆ ಬಿಟ್ಟವಳಲ್ಲ।
ಹೆಣ್ಣೆ, ಹಾ! ಎಂದವನ ಹಿಂಗಲಿಲ್ಲ॥
ಹುಣ್ಣಿಮೆಯು ಬೆಳಕಿನೊಳು ಹೊಳೆದವನ ಎಡೆಬಿಡದೆ
ಸಣ್ಣಬಾಗಿಲ ಮನೆಯೊಡವೆರೆದೆ ರಮಣಿ ॥೪॥

ಮರೆಯು ಮಾತಿನ್ನೇನು ನೂರೊಂದು ಮಂದಿಯನು।
ನೆರೆದು ಬಾಳಿದುದುಂಟು ಲೋಕಕಂಜಿ
ಕೂರುಹಿಗೊಬ್ಬನ ಕೂಡಿಕೊಂಡಿಹೆನು ಅದರಿಂದ।
ಗುರುಸಿದ್ಧರಾಮ ಮನವಿಲ್ಲದವನಾ ॥೫॥

---

೯

ಸುಖಿವಾಯಿತೆನಗೆ ಭವರುಜೆಗಳಿಲ್ಲೆಲೆ ಕಾಂತೆ।
ಅಕಳಂಕ ಚಂದ್ರಶೇಖರನಿಂದಾ ॥ಪ॥

ನಾರಿ ಕೇಳೆನ್ನ ಕರವಿಡಿದು ನಾಡಿಯ ನೋಡಿ।
ಮೂರು ದೋಷಗಳು ಹೆಚ್ಚಿರಲು ಕಂಡು।
ಮೂರು ತನುವಿನ ಮೇಲೆ ಮೂರು ಮುದ್ರೆಯನೊತ್ತಿ;
ಮೂರು ಗುಳಿಗೆಯ ನಿತ್ತಾರೈದ ರಮಣಿ ॥೧॥

ಆಶೆ ಎಂತೆಂಬ ಜ್ವರ ಹೆಗ್ಗಳಿಸುತಿರೆ ಕಂಡು।
ಈಶ ಜಲಪತ ಕಷಾಯ ವೆರೆದು।
ಶೇಷ ಪ್ರಸಾದವಿದು ಪಥ್ಯ ನಿನಗೆಂದರುಹಿ।
ಬೇಸರದೆ ಪೇಳಿ ರಕ್ಷಿಸಿದ, ಕಮಲಾಕ್ಷಿ ॥೨॥

ಭವರೋಗದೊಳು ಬಹಳ ನವೆದು ಶಿರನೋವುತಿದೆ ।
ನವ ಭಸಿತವ ನಿನ್ನು ಫಣೆಗಿಟ್ಟು ಬೇನೆ ।
ಭುವಿಯೊಳೊಂದೊಂದೂ ಬಾರದೆಂದರುಹಿ ।
ಯುವತಿ, ಸಲಹಿದ ಕಾಣೆ, ಜಾಣೆ, ನಿನ್ನಾಣೆ ॥೩॥

ಭೂತ ಪಂಚಕವೆಂಬ ಧಾತು ಹೆಚ್ಚಿರಲೆನಗೆ ।
ಜಾತಿ ಮಂತ್ರಗಳಿಂದವನು ಕೆಡಿಸಿ ।
ಪ್ರೀತಿ ಚೂರ್ಣವನಿತ್ತು ವಾತಗುಣಗಳ ಬಿಡಿಸಿ
ಆತ ಸಲಹಿದ ಕಾಣೆ, ಪ್ರವೀಣೆ ॥೪॥

ಹೆದರದಿರು ಮಗನೆ ಬಾರೆಂದು ಕರುಣಾಮೃತದ ।
ಉದಕದಲಿ ಶಿರದೊಳೆದು ಮಹದರಿವಿನ
ಹೊದ್ದಿಕೆಯನೆ ಪೊದಿಸಿ ಸ್ಥಿರಕಾಲ ನೀ ಬಾಳೆಂದು ।
ಚದುರ ಚನ್ನಬಸವೇಶ ಪೊರೆದ ಚಿತ್ಕಾಂತೆ ॥೫॥

---

೧೦

ಗಂಡಕಲಿಸಿದ ಹಾದರವನಾನೇನು ಒಲ್ಲೆನೆ ನೆರೆಮನೆ
ತುಂಡು ಮುಂಡರೆಲ್ಲ ಆಡಲಿಕ್ಕವರಂಜಿ ತೆನಗೇನೆ
ಪೂರ್ವದಲ್ಲಿ ಐದು ಮಂದಿ ಊರಗೌಡರ ಹೋಗುತಿದ್ದೆ
ಆರುಮಂದಿ ಪಾರಗಳನು ದೂರ ಮಾಡಿದ್ದೆ
ಬೇರೆ ಒಬ್ಬ ಪುರುಷ ಬಂದು ಮೋರೆ ನೋಡೆನ್ನೊಳಗೆ ಒಯ್ದು
ಭಾರಿಗುಣದವಳೆಂದು ಮುತ್ತಿನಹಾರ ಹಾಕಿದನೆ
ಪಟ್ಟಮಂಚವ ಹಾಸಿ ನಾನು ಮುಟ್ಟಿಸಿದ್ದೆ ಜ್ಯೋತಿಗಳು
ಅಚ್ಚಮಲ್ಲಿಗೆ ಹುವಿನ ಹರವಿ ಇದಿರಿಗಿಟ್ಟಿದ್ದೆ
ದಟ್ಟಪಟ್ಟದೊಂದುಸೀರೆ ಪುಟ್ಟನಿರಿಯು ಹೊಡುತಿದ್ದೆ
ಅವನ ಮುಟ್ಟಿಕೊಂಡು ಹೋದ ಮೇಲಿನ್ನೆಷ್ಟು ಸುಖವಿದೆ
ಓಲೆ ಕೊಪ್ಪು ಜುಮುಕಿ ಬುಗುಡಿ ಮೇಲೆ ರಾಗಟೆ
ಚೌಲಿಗೊಂಡೆ ಬಾಲೆ ಕೇಳಿ ಕುಂದಣ ಹಚ್ಚಿದ ಮೂಗುತಿಟ್ಟಿದ್ದೆ
ಓರೆನೋಟಕೆ ಮೆಚ್ಚಿ ಎನ್ನ ಸೇರದವಳಿನ್ನಾರು ಚದುರು
ಧೀರ ಕೂಡು ಲೇಸು ಬಂದು ತಾನೆ ಕೂಡಿದನು

೧೧

ಮೂರು ದಾರಿ ಮೂಲವಿಡಿದು ಪೋದೆವಮ್ಮ ಅಲ್ಲಿದ್ದ ।
ಧಾರುಣಿಯೆಲ್ಲ ಕಳೆದು ನಿಂದೆವಮ್ಮ
ತ್ರಿಕೂಟಾಚಲವೆಂಬ ಪುರವ ಪೊಕ್ಕೆವಮ್ಮ ಅಲ್ಲಿ ।
ಪ್ರಕಟವಾದಂಥ ಲಿಂಗಸಂಗವಮ್ಮ
ಮುಕುಟದೊಡನೆ ಮಜ್ಜನ ಮಾಳ್ಪರಮ್ಮ
ಅಖಿಳ ವಿಧದ ಪೂರ್ಣ ಭಸಿತ ವಿಟ್ಟೆವಮ್ಮ
ಸದಮಲಾಮೃತದ ತೀರ್ಥ ಸವಿದೆವಮ್ಮ
ಹದಗೂಡಿದ ಪ್ರಸಾದ ನಾವು ಸಲಿಸೇವಮ್ಮ
ಮಾಯುವಳಿದು ಮನೆಯ ಸತಿಯು ನೆರೆದಳಮ್ಮ
ಕಾಮವಳಿದು ಮೋಕ್ಷಕಾಮವಾಯಿತಮ್ಮ
ಗುರುವಿನಾಯದಿಂದ ನನಗೆ ಸಾಧ್ಯವಾಯಿತಮ್ಮ
ಶಿವಯೋಗಿ ನಂದೀಶನ ದಯ ನಮಗಾಯಿತಮ್ಮ

---

೧೨

ಗುರುಮಲ್ಲೇಶನ ಗುಪಿತದ ಯೋಗವು ।
ಯಾರಿಗು ತಿಳಿಯದು ವೀರನು ಧೀರನು ॥ಪ॥
ಆರಸುಮಾರನು ದೂರು ಮಾಡುತೆ ।
ಮೀರಿದುನ್ಮನೆಯೊಳು ಸೇರಿದ ಸದ್ಗುರು ॥೧॥
ಬಾಲಯುವ್ವನಕೌಮಾರಿಗಳಿಲ್ಲದೆ ।
ಭಾವಿಸಿ ನೋಡಲು ಬಾಲಬ್ರಹ್ಮಚಾರಿ ॥೨॥
ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣನು ।
ಮೃತ್ಯು ಜಯಿಸಿದ ಮೂಲ ನಿರಂಜನ ॥೩॥
ದೇವನ ಪುರದೊಳು ಧೀರನಭಪತಿಗೆ ।
ಮನವನು ಮರುಗಿಸಿ ಮಾಡಿದ ಗದ್ದುಗೆ ।
ಗುರುಮಲ್ಲೇಶನ ಗುಪಿತದ ಯೋಗವು ॥೪॥

---

೧೩

ರತ್ನ ಬಂದಿದೆ ನೋಡಿರೋ। ಉನ್ನತಜೀವರತ್ನ ಬಂದಿದೆ ನೋಡಿರೋ। ಪೃಥ್ವಿಗಧಿಕ ಬ್ರಹ್ಮ। ಪುರದಿಂದ ಬಂದಿದೆ। ರತ್ನಪರೀಕ್ಷೆಯ ಬಲ್ಲ ಸತ್ಪುರುಷರು। ರತ್ನ ಬಂದಿದೆ ನೋಡಿರೋ ॥ಪ॥

ಶಿರದೊಳಗಡಗಿದೆ ಆವಾಗಲು। ಕರದಲ್ಲಿ ಕಾಣುತಿದೆ। ವರಚಂದ್ರಸೂರ್ಯಬೀದಿಗಳೊಳಗಿಟ್ಟಿದೆ। ದುರಿತ ಕರ್ಮಗಳಳಿ। ದವಗೆ ಕಾಣುತಲಿದೆ॥೧॥

ಅಷ್ಟದಳಂಗಳಿಂದಲಿ ರತ್ನವು। ದಿಟ್ಟವಾಗಿಹುದರಿಂದ। ದೃಷ್ಟಿಯಿನ ಗಲದೆ ನೋಡಿದ ಪುರುಷರು। ನಷ್ಟಪಾತಕರಾಗಿ। ಶ್ರೇಷ್ಠವಾಗುವರಂತೆ ॥೨॥

ಕಳ್ಳರ ಭಯವಿಲ್ಲ ಈ ರನ್ನಕೆ। ಸುಳ್ಳರ ಸುಳಿವಿಲ್ಲವು। ಎಲ್ಲೆಲ್ಲಿ ನೋಡಲಲ್ಲೇ ಕಾಂಬುದು ತಾನು। ಒಲ್ಲೆನೆಂದರು ಬಿಡದೆ ದೂರೀಗೆ ನಿಲ್ಲದು ॥೩॥

ದೊರೆದೇಸಾಯಿಗಳಲ್ಲಿಯೂ॥ ನವಕೋಟಿಯವರಲ್ಲಿಯೂ ನೆರೆ ಚಕ್ರವರ್ತಿಪೊಕ್ಕಸದೊಳಗಿಲ್ಲ। ಶ್ರೀಗುರು ಸಿದ್ಧಲಿಂಗ। ಲಿಂಗಭಂಡಾರದೊಳಗಿಹ ರತ್ನ ಬಂದಿದೆ ॥೪॥

---

೧೪

ಬೆಳಗುತಿದೆ ಜ್ಯೋತಿ ಬೆಳಗುತಿದೆ ಜ್ಯೋತಿ
ಉರಿಯುತಿದೆ ಜ್ಯೋತಿ ನೋಡವ್ವ ॥ಪಲ್ಲ॥
ಎಣ್ಣೆ ಬತ್ತಿಯ ಹಂಗು ಮುನ್ನ ತಾನಿಲ್ಲದ
ಕಣ್ಣು ಕಪ್ಪಿನ ಜ್ಯೋತಿ ನೋಡವ್ವ ॥೧॥
ಥಳಥಳಥಳಿಸುತ ಒಳಹೊರಗೆಸೆದಿಹ।
ಕಳೆಯುಳ್ಳ ಜ್ಯೋತಿಯ ನೋಡವ್ವ ॥೨॥
ಭ್ರೂಮಧ್ಯಸ್ಥಳದೊಳು ಹೇಮವೀಧಿಯ ಮಧ್ಯೆ।
ಹೇಮಮಂಟಪದೊಳು ನೋಡವ್ವ ॥೩॥
ಭ್ರೂಮಧ್ಯಸ್ಥಳದೊಳು ಸಚ್ಚಿದಾನಂದದಿಂ।
ನಿಶ್ಚಿಂತ ಜ್ಯೋತಿಯ ನೋಡವ್ವ ॥೪॥

---

# ದ್ವಿತೀಯ ಸ್ಥಲ

**ವೃತ್ತ**॥ ನೋಡದೆ ರಾಜ್ಯಮಂ ಸಕಲ ಸಂಪದಮಂ ಬಿಸುಟಿನ್ನ ಚಿಂತೆಯಿಂ।
ಕೂಡಿದ ಚಿತ್ತದಿಂ ನಡೆದು ಬಂದನಿವಂ ಫಲಿಯೆಂದು ಸಂತಸಂ॥
ಮಾಡುತ ತನ್ನ ಮುಂದೆ ಮೆರೆದೋಹಿಲದೇವನ ಮುಗ್ಧಭಾವಮಂ।
ನೋಡುತ ಸೋಮನಾಥನೆಸೆದಂ ನಿಜ ಭಕ್ತಮನೋರಥ ಪ್ರದಂ॥

**ಗದ್ಯ**॥ ಇಂತು ಸೋಮನಾಥನ ಮುಂದೆ ಕುಳ್ಳಿರ್ದೋಹಿಲಯ್ಯ ತಂದೆಗೆ ಮುದ್ದಿಸುವ ಕಂದನಂತೆ ದೇವ ದೇವ ಜನನ ಮರಣಕ್ಕಂಜಿದೆಂ ಮಾಯೆಗೆ ಮಲ್ಲಳಿಗೊಂಡೆಂ ತಾಪತ್ರಯಕ್ಕೆ ತಲ್ಲಣಿಸಿದೆಂ ನೋವಿಂ ನಾಣ್ಚಿದೆಂ ಸಾವಿಂಗೆ ಸೆಡೆದೆಂ ಅಜಾತ ನಿರ್ಮಾಯ ನಿರ್ಗುಣ ನಿರ್ಮಳ ನಿತ್ಯ ಶಿವಶಿವ ಕರುಣಿ ಸಾಯಲೀಯ್ಯದೆ ಸಲಹೆನ್ನ ಸಲಹೆಂದು ಜಿನುಗಿ ಜಿನುಗಿ ಅತ್ತತ್ತು ಬಿಕ್ಕಿ ಬಿಕ್ಕಿ ಉಲ್ಲೆಗರೆವ ಪರಮ ಭಕ್ತನ ಮುದ್ದು ನುಡಿಗಳಂ ಕೇಳುತ್ತಿರಲಿರುಳಾಗೆ ಶಿವಪರಿಚಾರಕ ಮುಖ್ಯಂ ಕೆಯ್ದೀವಿಗೆವೆರಸು ಶಿವಾಂಗಣ ರಂಗಮಂಟಪಂ ಶುಕನಾಸಮಂ ಶೋಧಿಸುತ್ತುಂ ಗರ್ಭಗೃಹಕ್ಕೆ ಬಂದು ಶಿವಲಿಂಗದ ಕೆಲಬಲನಂ ನೋಡುತ್ತಂ ಬರ್ಪಾಗಳ್ವೋಹಿಲಯ್ಯಂ ಬಾಡಿದ ಲತೆಯಂತೆ ಬಿದಿಗೆಯ ಚಂದ್ರನಂತೆ ಬಳಲ್ದ ಚಕೋರನಂತೆ ಮಾಗಿಯ ಕೋಗಿಲೆಯಂತೆ ಮಳೆಗಾಲದ ಹಂಸನಂತೆ ಚಂದ್ರಧರನ ಮುಂದೆ ನಿಬ್ಬರಗಾಗಿ ಕುಳ್ಳಿರ್ದ ಓಹಿಲ್ಲೈಯ್ಯನಂ ಕಂಡು ಇರುಳಿಲ್ಲಿ ಏಕಿರ್ದಪೆ ಎಂದು ನುಡಿಯೆ ನುಡಿಯದಿರೆ ಕೈವಿಡಿದೆತ್ತಿ ತೆಗೆವಾಗ ಶಿವಲಿಂಗಮಂ ಬಿಡದೆ ಬಿಗಿಯಪ್ಪಿಯೊಡೆಯನಂ ಬಿಡೆಂ ಬಿಡೆಂ ಅಗಲಲಾರೆನಾರೆನೆನಲ್ಬಲ್ಪಿಂದೆ ಳತರ್ಪಾಗಳಭವಾ ಶಂಕರಾ ಶಿವನೆ ಭವನೆ ಗುರುವೆ ತಾಯೆ ತಂದೆಯೆ ತವರೆ ಪುಣ್ಯವೆ ಗತಿಯೆ ಮತಿಯೆ ಪತಿಯೆ ಕಣ್ಣೆ ಶಿವಘೋಮೊರೆಯೋ ಎಂದಳಲುತ್ತುಂ ಬಳಲುತುಂ ಬಾಯ್ವಿಡುತಿರಲದಂ ನೋಡದೆ ಶಿವಜ್ಞಾನ ಸೂತ್ರಮಂ ತಪ್ಪದಂತೆ ಪೊರಮಡಿಸಿ ಕವಾಟಂಗಳಂ ಮುಚ್ಚಿ ಮುದ್ರಿಸಿ ಪೂಜಾರಿ ಪೋಗಲಿತ್ತಲು,

ಓಹಿಲ ದೇವಂ ಪೊರಗಿರ್ದು ಎಲೆ ಅಯ್ಯ ಎಲೆ ತಂದೆ ಎಲೆ ದೇವ ನಿನ್ನಂ ನೋಡದೆಂತು ನಿಲಲಾರ್ಪೆಂ ನಿನ್ನಂ ನುಡಿಸದೆಂತು ಬರ್ದುಂಕುವೆಂ ನಿನ್ನಂ ಸೋಂಕದೆಂತು ಸೈರಿಪೆಂ ನಂಬಿದನನಗಲ್ಚುವರೆ ನಚ್ಚಿದನಂ

ಬೆರ್ಚಿಸುವರೆ ಕಾಲ್ವಿಡಿದವನಂ ಕಾಣದಂತಿರ್ಪರೆ ಪೊರ್ದಿದನಂ ಪೊರ ಮಡಿಪರೆ ಕೂಡಿದನಂ ಕೊಲ್ವರೆ ಎನುತುಂ ಬಾಗಿಲಂ ನೆಮ್ಮಿ ಪೊಸಂ ತಿಲ್ಗೊಳ್ ತಲೆಯಿಟ್ಟು ಕರುಣವುಂ ಪತ್ತಿ ವಿರಹಾಗ್ನಿ ಎತ್ತಿ ಹರಣಂ ಹೊತ್ತಿ ಕರಣಂ ಕಲಂಕಿ ಮನ ಉಕ್ಕಿ ತನು ಬೆಂದು ಅಳಲಾವರಿಸಿ ಕಾಣದ ಖಾತಿ ಕಣ್ಗೆಡಿಸಿ ಮಾಣದಳ್ಕಿ ಮುಂದುಗೆಡಿಸಿ ಒದರುತಂ ಬೆದರುತಂ ಇರ್ಪ ನಿಜ ಭಕ್ತನ ಕಿಂಕುರ್ವಾಣಂ ವಿಕ್ಕ್ಯ ಪತ್ತಿದ ಶೋಕವುಂ ಕೇಳಲಾರದೆ ಭಕ್ತಜನಬಾಂಧವಂ ಕರುಣಿಗಳರಸಂ ಕೂಡಿದರ ಕಾಮಧೇನು ನೋಡಿದರ ಕಣ್ಣ ಪುಣ್ಯ ಬೇಡಿದರ ಕಲ್ಪಭೂಜಂ ಸಾರ್ದರ ಸಿದ್ಧರಸಂ ಪೊರ್ದರ ಪರಮ ಗುರು ನೆನೆವರ ನಿಧಾನಂ ಅರ್ಚಿಸುವರಾಯುಂ ಶ್ರೀಯುಮೆನಿಪ ಸೌರಾಷ್ಟ್ರಪತಿ ಸೋಮನಾಥಂ ಕದವಂ ತೆರೆಯಲನುಮಾನಿಸುತ್ತೊಲ್ಲದೆ ತಾಂ ಮಾಡಿದ ಶಿವಾಜ್ಞೆ ತಪ್ಪಲಾಗದೆಂದೆನ್ನ ಭಕ್ತನನೆಲ್ಲರ್ಗರುಪಿ ತೋರುವೆನೆಂದು ನಡೆತಂದು ನಟ್ಟಿರುಳೋಳ್ಪಟ್ಟಿರ್ದ ಶಿವನಿಯೋಗಕ್ಕೆ ಮುಖ್ಯನಪ್ಪ ರಾಜಮುದ್ರಾಹಸ್ತನಪ್ಪನನಂ ಗಂಟಲಂ ತ್ರಿಶೂಲದೊಳೊತ್ತಿ ಎನ್ನಣುಗಂ ಎನ್ನ ಭಕ್ತಂ ಓಹಿಲ ದೇವನಂ ಪೊರಗಿರಿಸಿ ಕದವಂ ಚಾಚಲಾಗದು ಬೇಗಂ ತಂದೊಳಪುಗಿಸೆಂದು ಕನಸಿನೊಳ್ಬೆಸಸಿ ಪೋಗೆ

ಪೂಜಾರಿಯೋಜೆಗೆಟ್ಟೆಚ್ಚತ್ತು ಮೂರ್ಛೆವೋಗಿ ಬೆಚ್ಚಿ ಬೆದರಿಯುಂ ತಿಂತು ನಡನಡುಗಿ ಎಂತಕ್ಕೆ ನಿಂದು ಹೋದ ಹರಣಮುಂ ಹಸರಿಸಿಕೊಂಡಾಗಳೆ ಪೊರಮಟ್ಟು ಒಡನೆಯೆ ಪರಿಚಾರಕರ್ಗರಿಪುತ್ತಂ ಕೂಡಿಕೊಂಡು ಮಧ್ಯರಾತ್ರಿಯೊಳ್ ಚೋದ್ಯಂಬಡುತುಂ ಶಿವನಿಳಯಕ್ಕೆ ಬಂದು ಮುದ್ರೆಯನೊಡೆದು ಕದವಂ ತೆರೆದು ಓಹಿಲಯ್ಯನಂ ನೋಡಿ ಸಾಮರ್ಥ್ಯದ ಸಸಿಯೆ ಭಕ್ತಿಭರಿತನೆ ಮುಕ್ತಿಚರಿತನೆ ಒಳಗೆ ಪೋಗೆಂದೊಳಪೊಗಿಸಿ ಮತ್ತೆ ಕದವನಿಕ್ಕಿ ಬಿಯ್ಯಗಂಗೊಳಿಸಿ ಮುದ್ರೆಯನಿಕ್ಕಿ ಇಂತಪ್ಪ ಕಾರಣಿಕನಂ ಕಂಡು ಕಂತುಹರನ ಕೂಡೆಂತಿರ್ಪನೋ ಎಂದು ತಮತಮಗೆ ಗವಾಕ್ಷೆಯ ವಿವರದೊಳ್ಮೆಲ್ಲನೆ ನೋಡಿ ಮನವಿಟ್ಟು ನೋಡುತ್ತಿರಲೋಹಿಲದೇವನೊಳಪೊಕ್ಕು ಜೀವಂ ಬಂದಂತೆ ಕಣ್ಪಡೆದಂತೆ ಪರಿತಂದು ಸೋಮನಾಥನಂ ತೆಗೆದಪ್ಪಿ ಬಿಗಿಯಪ್ಪಿಯುಮರ್ದಪ್ಪಿ ಸೋಂಕಿನೊಳಪ್ಪಿ ಮೆಯ್ಯೊಳಪ್ಪಿ ಕಣ್ಣೊಳಪ್ಪಿ ಮನದೊಳಪ್ಪಿ ಚಿತ್ತದೊಳಪ್ಪಿ ತಣಿವಿಡಿದು ಸುಖಂಬಡೆದು ಕಂಡು ಕಂಡು ಶಿವಮರುಳ್ಗೊಂಡು ಆಲಿಂಗನವುಂ ಸಡಿಲ್ಚಿ

ಪುಟವೆಳ್ದು ಹೊಮ್ಮಿ ಹೊರಳ್ದು ಜುಮ್ಮನೆ ಬೆಮರ್ತು ಕೊರ್ಚಿ ಕೊನರ್ತು
ಉಬ್ಬಿ ಯುರುಳ್ದುಬ್ಬರಿಸುತಿರ್ಪ ಓಹಿಲಯ್ಯನಂ ಶ್ರೀ ಹಸ್ತದಿಂ
ಸೋಮನಾಥಂ ಬರತೆಗೆದು ಮುಂದಿರಿಸಿಕೊಂಡು ಸವಿ ನುಡಿಗಳಿಂ ಸಂತ
ವಿಡುತ್ತಮಿರೆ ಪೂಜಾರಿಗಳ್ಕಂಡು ಸೋಜಿಗಂಬಡುತ್ತುಂ ಬೆರಗಾಗಿ ನೋಡ
ಲಣ್ಮದೆ ಪೊರಮಡುತ್ತಿರಲಾದಿತ್ಯೋದಯವಾಗಲ್,

ಎಂದಿನಂದದೆ ಸುಪ್ರಭಾತ ಸಮಯ ಸಮುದ್ಭೂತ ಮೃದು ಮೃದಂಗ
ಭೇರೀರವ ಪಟಹಶಂಖ ಕಹಳಾನಾದಂಗಳುಂ ಸಮಸ್ತಭಕ್ತಜನ ಭಜಿತ
ಶುದ್ಧ ಸಂಕೀರ್ತನ ಸಂಯುಕ್ತ ಗಂಭೀರಧ್ವಾನಪುರಾತನ ಗೀತರವಂಗಳಂ
ಬುಧನಿಕರವದನೋದ್ಗತ ಮಧುರತರ ಗದ್ಯಪದ್ಯ ಸೇವ್ಯಕಾವ್ಯ ನಾಟಕ
ಪ್ರಸಂಗಂಗಳುಂ ಶುದ್ಧ ರಸಭರಿತ ಶಿವಧರ್ಮೋತ್ತರಾದಿ ಮಹಾಪುರಾ
ಣಂಗಳುಂ ವಿವಿಧ ಋಷಿಚರಿತ ಋಗ್ಯಜುಃ ಸಾಮಾದಿವೇದಘೋಷಂ
ಗಳುಂ ಪುಣ್ಯಪಾಠಕ ಪ್ರಕರ ರವಸ್ತೋತ್ರ ರಸಾಳಾಪಂಗಳುಂ ನವರಸ
ಪ್ರಜ್ವಲಿತ ಸಂಜನಿತ ತೂರ್ಯತ್ರಯಾರಂಭ ಸರ್ತಕ ನರ್ತಕೀಲಾಸ್ಯಂಗಳುಂ
ಸೌರಾಷ್ಟ್ರಪತಿ ಸೋಮನಾಥನಾಲಯ ದೊಳ್ಭೋರೆಂದೋರಂತೆ ನೆಗಳೆ
ಶಿವಂಗೆ ಸುಖ ಮಜ್ಜನಂ ಮಾಡಿಸಿ ಸಕಲ ಸುಕುಮಾರಕರ ಕುಸುಮ ಪ್ರಕ
ರದಿಂ ಸಿಂಗರಂ ಮಾಡಿ ಧೂಪದ ಸವಿಯನಿತ್ತಾರತಿಗಳಂ ಬೆಳಗಿ ಅಮೃ
ತಾನ್ನವನಾರೋಗಿಸಲಿತ್ತು ರಸವೊಸರ್ವ ತಾಂಬೂಲಮನಿತ್ತು ಲೋಕೋ
ನ್ನತಾಧಿಕಾರಿ ಮುಖ್ಯರೆಲ್ಲರುಂ ರಂಗಮಂಟಪದೊಳ್ನೆರದಿರಲೋಹಿಲಯ್ಯನಂ
ಶಿವಂಗೆ ಬಿನ್ನಪಂ ಮಾಳ್ಪನಂ ಸಾವಿಂಗಂಜಿ ಶರಣ್ಪೊಕ್ಕನಂ ಕಾರುಣ್ಯ
ಕಟಾಕ್ಷದಿಂ ನೋಡಿ ರಕ್ಷಿಸೆಂಬ ಮಗನ ಬಿನ್ನಪಮಂ ಸೋಮನಾಥ
ಕೇಳ್ದು ಎಲೆ ಕಂದ ನಿನ್ನ ಮನವಾರೆ ಪನ್ನೆರಡು ಬರಿಸಂ ಹಿಗ್ಗಿ ಪೊರೆ
ಯೇರಿ ಗುಗ್ಗುಳಮಂ ತಂದೆಮಗಿಕ್ಕೆ ಸಗ್ಗದವರುಂ ಬೆರಗಾಗೆ ಶರೀರಂ
ಬೆರಸು ಕೊಂಡೊಯ್ದಪೆವೆನೆ ಹೊಂಗಿ ಹೊರೆಯೇರಿ ನೋಡಿ ನಲವೇರಿ
ಹಿಗ್ಗಿ ಹರುಷಂದಳೆವೋಹಿಲಯ್ಯಂ ಸಾಹಸನಿಧಿ ಸೋಮನಾಥನಂ
ಬೀಳ್ಕೊಂಡು

ಧೂಪದ ನಿಮಿತ್ತಂ ದ್ವೀಪಾಂತರಕ್ಕೆ ಪೊರಮಡುವಾಗಳಲ್ಲಲ್ಲಿಯ
ಶಿಷ್ಯರುಂ ಸೇವ್ಯರುಂ ಬಲ್ಲಿದರುಂ ಪಸಾಯಿತರುಂ ಸಚಿವರುಂ ವಡ್ಡಬೆ
ವಹಾರಿಗಳುಂ ಭೂಪತಿಗಳುಂ ತಂದಾರಾಧಿಸಿದ ದಂಡಿಗೆಯ ಧವಳ
ಚಕ್ರದ ಸಿಗುರಿಯ ಚಾಮರದ ಕಮನೀಯ ಕಮಂಡಲದ ಹಡಪಿಗರ

ಬಾಹತ್ತರ ನಿಯೋಗಿಗಳ ಗುಗ್ಗುಳದ ಕಂಬಿಕಾರರ ಮಹಾ ಮಾಹೇಶ್ವ
ರರ ಹೊಗಳ್ವ ಜನಂಗಳಂ ವಂದಿಗುಡುತ ತನ್ನ ಮುನ್ನಿನ ಪದವಿಯಿಂ
ಬೇರೊಂದು ಶೈವ ಸಾಮ್ರಾಜ್ಯಂ ನೂರ್ಮಡಿಸೆ ಪುರಮಂ ಪೊರಮಟ್ಟೂ
ರೂರ್ಗಳಂ ಕಳಿದು ನಾಡಂ ಪಾಯ್ದು ನದಿಗಳಂ ಮೀರಿ ಬೆಟ್ಟಂಗಳ
ನೇರಿ ಗಟ್ಟದೊಳ್ನಡೆದು ಪಟ್ಟಣಂಗಳಂ ಬಿಟ್ಟು ಶಿವಕ್ಷೇತ್ರಂಗಳಂ ಕಂಡು
ಪ್ರಸಾದಂಗಳಂ ಕೊಂಡು ವಿಂಧ್ಯಂಗಳಂ ಪೊಕ್ಕು ವ್ಯಾಳ ಮೃಗಂಗಳಂ
ಮಿಕ್ಕು ದೇಶಂಗಳನುತ್ತರಿಸಿ ಸಮುದ್ರಂಗಳಂ ಮೀರಿ ದ್ವೀಪಂಗಳಂ ಕಳಿದು
ರಸ ಒಸರ್ವ ಧೂಪಕ್ಕೆ ಧೂಪಾರತಿಯಂ ಕೊಟ್ಟು ಅಡಿಗಡಿಗೆ ಮೆಯ್ಯಿ
ಕ್ಕುತಂ ತೂಗುತುಂ ತೇಗುತುಂ ಬಳಲುತುಂ ಬರ್ದುಂಕುತುಂ ಪಲವೆ
ಡೆಗೆಯ್ದಿ ಧೂಪದ ಬಲಂ ಭೋರೆಂದು ಬರೆ ಸೌರಾಷ್ಟ್ರ ಪುರಜನಂ
ಬೆರಸಿಯಲ್ಲಿಯ ರಸಂ ಇದಿರ್ಗೊಳುತ್ತಿರೆ ಭಕ್ತರ್ಗುಡಿಗಟ್ಟೆ ಬೌದ್ಧರ್ಬಾ
ಯಾರೆ ಜೈನರ್ಜವಂಗುಂದೆ ಚಾರ್ವಾಕರ್ಚಲ್ಲಿಪೋಗೆ ಪರಮ ಹರುಷದಿಂ
ಪುರಮಂ ಪೊಕ್ಕು ಶಿವನಿಳಯಕ್ಕೆ ಬಂದು ಸಮಸ್ತ ದೇವರ್ಕಳ ಗುರುವಂ
ನಿರುಪಾಧಿಕ ಜ್ಯೋತಿಯಂ ಪರಿಮಳರೂಪನಂ ಭುವನಪ್ರದೀಪನಂ ದಿವ್ಯ
ರೂಪನಂ ಶುದ್ಧಜನ ಸಮೀಪನಂ ವ್ಯೋಮಕೇಶನಂ ಕಾಮಹರನಂ
ಸೋಮನಾಥನಂ ಕಂಡು ಮೆಯ್ಯಿಕ್ಕಿ ನಿಂದು ತಂದ ಧೂಪಮಂ ಸೋಮ
ನಾಥಂಗೊಪ್ಪಿಸಿ ಸರ್ವಾಭರಣನ ಮುಂದಿರಿಸಿ ಭಂಡಾರದ ಮನೆಗೆ ತೆಗೆ
ಯವೇಳ್ದು ಮುಂದಿರ್ದ ಸಜ್ಜುಗವೆರಸಿದ ಗುಗ್ಗುಳದೊಳ್ ರಸಮುಯುಪೆ
ನಿಪ ಕೆನೆದಿರುಳಧೂಪಮಂ ಕೊಂಡು ಶರ್ಕರೆಯೊಳುಂ ಜೇನುತುಪ್ಪ
ದೊಳುಂ ನವಘೃತದೊಳುಂ ತೊಯ್ದು ಸೋಮನಾಥಂಗೆ ಕುಡೆ ಶಿವ
ಲಿಂಗದಿಂ ಶ್ರೀಹಸ್ತ ಪೊರಮಟ್ಟು ತಳಿದು ಕೊಳುತ್ತಿರಲಿತ್ತಂ ಶಿವನಿಳೆ
ಯದ ಸಕಳ ದ್ವಾರಮಂ ಮುಚ್ಚಿ ತಾನುಂ ಸೋಮನಾಥನುಂ ಧೂಪ
ಮಿಲ್ಲದಿರೆ ಪಾತ್ರೆಯಂ ತಂದು ಮುಂದಿರಿಸಿ ಸಿಡಿಲಕಿಡಿಯಂತಿರ್ಪ ಕೆಂಡಂ
ಗಳಂ ಕುಪ್ಪಳಿಸಿ ಗುಗ್ಗುಳಮಂ ಮೇಲೆ ತಂದು ಸುರಿಯೆ ಗಳಗಳನ
ರಳ್ದು ಚಿಮಿಚಿಮಿಸಿ ಕಾಯ್ದು ಧೂಪಂ ಸವಿಯ ಹೊಗೆಯನುಗುಳೆ ಬೀಸು
ವಾಗಳುಂ ಅಮೃತರಸದ ತುಂತುರು ತೆರಳ್ವಂತೆ ಧೂಪವೆತ್ತಿ ಕಂಪು
ತೆರೆ ಮಸಗಿ ತೀಡುತ್ತೆ ಪರಿಮಳದ ಮಂಜು ಕವಿವಂತೆ ಸವಿಯ ತುಷಾ
ರವನೊತ್ತುವಂತೆ ಧೂಪದ ಸವಿಯು ಸರ್ವಾಂಗಮಂ ಪುಗೆ ಶಿವನ
ಮೆಯ್ಯೆಲ್ಲಂ ಮುಖವಾಗೆ ನಾಸಿಕಕ್ಕೆ ನಾಲಿಗೆ ಬಂದಂತಾಘ್ರಾಣಿಸುತ್ತುಂ

ಸವಿಯುತ್ತುಂ ಪುಳಕಿಸುತ್ತುಂ ಮೆಚ್ಚುತಿರಲಿಂತು ಪೊಕ್ಕ ದ್ವೀಪಂಗಳಂ ಮರಲ್ದು ಪುಗದೆ ಲೇಸಿಂಗೆ ಲೇಸನರಸಿ ತಂದಿಕ್ಕುವ ಧೂಪದ ಸೊಗಸಿನ ಸೊಕ್ಕು ಸವಿಯ ಸಾಲಿಡೆ ಧೂಪದೋಹಿಲನೆಂಬ ಪೆಸರ ಪುಣ್ಯಕೀರ್ತಿ ಸಕಳ ಜಗಮಂ ತೀವೆ,

ಪನ್ನಗಧರಂಗೆ ಪನ್ನೆರಡು ಬರಿಸಂ ಗುಗ್ಗುಳಮಂ ಸಲಿಸಿ ಪಾವನ ಪರಿಮಳವನಿನಿತು ದಿನವಿತ್ತೆ ಇನ್ನು ಶರೀರಂಬೆರಸು ಪೋಪೆನೆಂಬ ಗರ್ವ ಬಲವಂ ಕೂಡಿಕೊಂಡು ಸೋಮನಾಥನಲ್ಲಿಗೆ ಬಂದು ಎಲೆ ದೇವ ನಿಮ್ಮಡಿಗಳ್ಗರುಣಿಸಿದ ಪನ್ನೆರಡು ಬರಿಸಂ ನಿರ್ಮುಕ್ತವಾದುದಿನ್ನೆನಗೆ ಕರುಣಿಸೆಂದು ಬಿನ್ನವಿಸಿದ ಓಹಿಲದೇವಂಗೆ ಸಕಲಜೀವ ಸೂತ್ರಧಾರನನವರತ ಲೀಲಾಲೋಲಚಿತ್ತನಪ್ಪ ಸೋಮನಾಥಂ ತಣಿವಿಲ್ಲದೆ ಭಕ್ತನ ಕಯ್ಯೊಳಿನ್ನು ಧೂಪನಿಕ್ಕಿಸಿಕೊಳ್ವ ಸ್ನೇಹ ಪರಿಮಳದ ಸವಿಗೆ ಮನದ ಬಾಯೊರೆಯೆ ಮುಂತಿರ್ದೋಹಿಲಯ್ಯಂಗಿಂತೆಂದಂ ಎಲೆ ಮಗನೆ ನಿನಗಿನ್ನೆಮ್ಮ ಚಿಂತೆ ಏಕೆ ನಿನ್ನ ಮುನ್ನಿನ ರಾಜ್ಯದ ನೂರ್ಮಡಿ ಸಂಪದವಾಪ್ತು ಸುಖಿಯಾದೆ ಸುಕುಮಾರನಾದೆ ಅರಸಾದೆ ಸಂತಸದೊಳಿರು ಎನೆ ಕೇಳ್ದು ದೆಸೆಗೆಟ್ಟು ಕಂಗೆಟ್ಟು ಬಾಯ್ಬಿಟ್ಟು ಬೆಬ್ಬಳಿಸಿ ಪನ್ನೆರಡು ಬರಿಸ ದುಮ್ಮಾಳಂ ಒರ್ಮೆ ಕವಿದು ದುಮ್ಮಾನಂ ಕಾಹೇರಿ ಆಪತ್ತೆಡೆಗೊಂಡು ಮೆಯ್ಗುಂದಿ ಮನಂ ತಾರಿ ಬುದ್ಧಿ ಕಾವುಳಂ ಮಸಗಿ ಅಹಂಕಾರವನರಿತು ಚಿತ್ತಂ ಕೊರೆದು ಜೀವಂ ಬೆಂದು ಘಳಿಲನೆ ಬೀಳ್ವ ನೆಲದೊಳ್ಪೊರಳ್ದು ಕಂಬಮಂ ಪಾಯ್ದು ಕಯ್ಯೆತ್ತಿ ಮೊರೆಯಿಟ್ಟು ಬಾಯಿ ಬತ್ತೆ ಶಿವದಿಟ್ಟು ದೇವ ದೇವ ಇನ್ನೆಂತು ಜೀವಿಪೆಂ ಎನ್ನ ಪುಟ್ಟಿಸುವಲ್ಲಿಯುಂ ರಾಜ್ಯದೊಳಿರಿಸುವಲ್ಲಿಯುಂ ವಿರಕ್ತಿಯುಂ ಕೊಂಡೆಳ್ದು ಬರಿಸುವಲ್ಲಿಯುಂ ಸಕಲಸುಖವನೀವಲ್ಲಿಯುಂ ಅಭವನುಂ ಮೃಡನುಂ ಗಿರೀಶನುಂ ಯಂತ್ರವಾಹಕನಾಗಿಯುಂ ಮಾಡಿದವನುಂ ನೀನೆ ಮತ್ತಿದೆಲ್ಲಮನಲ್ಲೆಂಬುವನುಂ ನೀನೆ ಎನ್ನ ಮೇಲೆಳ್ಳನಿತು ತಪ್ಪಿಲ್ಲ ಯಂತ್ರವಾಹಕ ನೀನೆ ಎನ್ನೊಳಿರ್ದು ನಡೆಯಿಸುವಲ್ಲಿಯುಂ ನೀನಿರಲಾನೊಂದು ರೂಪುಂಟೆ ದೇವ ದೇವ ಎನ್ನೊಳಿನಿತೇಕೆ ಒಡೆದೊಡಂ ನೂಂಕಿದೊಡಂ ಸೀಳ್ದೊಡಂ ಬಡಿದೊಡಂ ಬಿಡೆಂ ಬಿಡೆಂ ಅಭವಾ ಶಂಭುವೇ ಗುರುವೇ ಗತಿಯೇ ಮತಿಯೇ ಶಿವಧೋ ಶಿವಧೋ ಎಂದು ತನು ಒಡೆಯಲೊಟ್ಟಿ ಒರಲ್ದು ತನ್ನ ಕಾಲಂ ಪತ್ತಿ ಕಣ್ಣೊಳು ಹರಣಂ ಕಯ್ಯೊಳು ಕಾಯುವಾಗಿರ್ದೋಹಿಲ ದೇವನಂ ಪ್ರಾಣ

ನಾಥನಪ್ಪ ಸೋಮನಾಥಂ ಬರ ತೆಗೆದು ಕಣ್ಣ ನೀರಂ ತೊಡೆದು ಮಂದ ತಾಪವನಾರಿಸುತ್ತಂ.

ಅಂಜದಿರಂಜದಿರೆಲೋ ಮಗನೆ ನಿನಗೊಂದು ಹಿತೋಪದೇಶಮಂ ಕೊಟ್ಟಪೆಂ ಸಕಲ ಜಗವೆಲ್ಲೆನ್ನ ಸೊಮ್ಮಾದೊಡಂ ಪರರಂ ಪ್ರೇರಿಸಿದೆ ಪರ ಸೊಮ್ಮಂಕೊಳ್ಳವಾರ್ಗಂ ನಿರೋಧವಿಲ್ಲದೆನ್ನ ಸೊಮ್ಮನೆನಗಿತ್ತು ಪ್ರಸಾದಮಂ ಕೊಂಬ ಪರಿಯಂ ಕೇಳ್ಮಗನೆ ಕಟ್ಟಿದ ಕೆರೆ ಇಟ್ಟರವೆ ಬಿತ್ತಿದ ಬೆಳೆ ಮಾಡಿದ ಮನೆ ಪರರ ವಸ್ತು ನೀರಂ ಕುಡಿಯದೆ ನೆಳಲಂ ಸೇರದೆ ಫಲಮನುಣ್ಣದೆ ಮರೆದು ಪಟ್ಟಿರದೆ ಪರಿವ ತೊರೆಯ ನೀರ್ಗುಡಿಯುತ್ತುಂ ಕಾಡ ಮರಂಗಳ ನೆಳಲೊಳ್ನಿಂದು ಫಲಂಗೊಳ್ಳುತ್ತುಂ ಹೊಡೆ ಹುಲ್ಲ ಬತ್ತಮನುಣುತ್ತುಂ ಮೆಳೆ ಗುಹೆಗಳ ತಳದೊಳ್ಪಟ್ಟಿರುತ್ತುಂ ಪೋಗಿ ಎಲ್ಲಗೇ ಸಮಮಪ್ಪ ವಸುಧಾತಳಂಗಳ ಪೊನ್ನಂ ಕೊಂಡು ದ್ವೀಪಕ್ಕೆ ನಡೆದುಂ ಧೂಪಕ್ಕೆ ಕೊಟ್ಟು ನಾನಾ ವಿಧದಿಂ ಹೊತ್ತು ಹೊತ್ತೀ ತೆರದಿಂದಿನ್ನೊಮ್ಮೆ ಪನ್ನೆರಡು ವತ್ಸರಂ ಹಿಗ್ಗಿ ಹೊರೆ ಯೇರಿ ಗುಗ್ಗುಳಮನೆಮಗಿಕ್ಕಿ ಬಳಿಕ್ಕೆ ನಿನ್ನ ಮನೋರಥಮಂ ಮಾಳ್ಪೆನೆಂದು ಭಕ್ತಜನ ಸಂತುಷ್ಟ ವಿನೋದಂ ಶರಣ ಕುಲ ಗೀತಾಮೃತ ರಸಾವಗಾಹ ಚಿತ್ತಂ ಭೃತ್ಯ ಸಂಕುಳ ಪ್ರೇಮಂ ವಿವಿಧವಾಕ್ಯ ಕುಸುಮಕರ್ಣಾವತಂಸಂ ಶರಣ ಪರಿಣತ ಸ್ತೋಮ ಸನ್ನಿಹಿತಂ ನತನಿಕರ ಗೋಷ್ಠಿ ಸುಲಭಂ ದೇವ ದೇವಂ ಸೋಮನಾಥಂ ಬೆಸಸುತ್ತಮಿರೆ ಇರೆ.

## ದ್ವಿತೀಯಸ್ಥಲಂ ಸಮಾಪ್ತಂ



## ತೃತೀಯ ಸ್ಥಲ.

ವೃ॥ ಶಿವಭಕ್ತಂ ಭಕ್ತಿರೂಪಂ ಕಲಿಭಲಿಯುಚಲಂ ಸ್ನೇಹದಿಂದೋಹಿಲಯ್ಯಂ।
ಶಿವನೋಳ್ನಿರ್ಲೇಪವುಪ್ಪೊಂದನುಪಮಹಿತವುಂ ಬುದ್ಧಿಗಳ್ತ್ರೋಜೆಯಿಂದಂ॥
ಭವನಂ ಭಾಳಾಕ್ಷನಂ ಭರ್ಗನನಘಹರನಂ ಭೀಮನಂ ಭಕ್ತವೃಂದೋ-।
ತ್ಸವನಂ ಶ್ರೀಸೋಮನಾಥಪ್ರಭುವನವುವು ಬೀಳ್ಕೊಂಡನಾನಂದದಿಂದಂ॥

### ರಗಳೆ.

ಇಂತು ಬೀಳ್ಕೊಂಡು ಬಂದೋಹಿಲಯ್ಯಂ ನಿಂದು
ಕಂತು ಮದಹರಣಂಗೆ ಮತ್ತೆ ಪೊಡಮಡುತಂದು
ಭಸಿತವುಂ ಕಾಯದೊಳಗುದ್ಧೂಳನಂ ಮಾಡಿ
ಎಸೆವ ರುದ್ರಾಕ್ಷಿಗಳನವಯವದೊಳೊಡಗೂಡಿ
ಹೊಸ ಸಪುರ ವಸ್ತ್ರದಿಂ ಕೌಪೀನನಾಗುತುಂ
ಮಿಸುಪ ಪಟ್ಟಿಗಳ ತೆಗೆದಿಟ್ಟು ಹೊದೆದೊಪ್ಪುತುಂ
ಕಾವಡಿಯ ಕಂಬಿಯೊಳ್ಸನ ಪಾತ್ರೆಗಳನಿರಿಸಿ
ಕಾವಿಗಳ ಸಪುರ ವಸ್ತ್ರಂಗಳಿಂ ಬಾಸಣಿಸಿ
ದೇವಲೋಕಕ್ಕಿದು ಪರಸ್ಥಾನವೆಂಬಂತೆ
ದೇವ ಶಿವಭಕ್ತಿಯುಂ ಹೆಗಲೊಳಾಂತಿರ್ಪಂತೆ
ಎತ್ತಿದಂ ಪರಿಮಳದ ಕಂಬಿಯುಂ ನೂತನಂ
ಮುತ್ತಿದಂ ಕರಣಂಗಳಿಂ ಸೋಮನಾಥನಂ
ನಡೆಯುತೊಂದಡಿಯನಿಟ್ಟಗಲಲಾರದೆ ತಿರುಗಿ
ಮೃಡನೆ ಎನ್ನಯ್ಯ ಎನ್ನರಸ ಎನುತುಂ ಮರುಗಿ
ಕಂಬಿ ಸಹಿತಂ ಬಂದು ಬಿಗಿಯಪ್ಪಿ ನಿಂದಿರ್ದ
ಶಂಭುವೇ ಶಂಕರನೆ ಶಿವಶಿವಾ ಎನುತಿರ್ದ
ಬರುತೆ ಪೂಜಾರಿಗಳನೆಂದನೋಹಿಲದೇವ
ಎರಡಿಲ್ಲದೇಕನಿಷ್ಠೆಯ ಶಿವನ ಸದ್ಭಾವ
ಅಭವಂಗೆ ಧೂಪಮಂ ಕೊರತೆ ಮಾಡಲ್ವೇಡ
ವಿಭವದಿಂ ಬೆಳ್ಪನಿತನೀವುದಂಜಲ್ಬೇಡ
ಬಡವ ಮಾಡದಿರೀಶನಂ ಸೋಮನಾಥನಂ

ಮೃಡನಂ ಮಹೇಶನಂ ಸುರನಾಥನಾಥನಂ
ಎಂದೆನುತೆ ಎಲ್ಲರೊಳ್ನಂಬುಗೆಗಳಂ ಪಡೆದು
ನಿಂದವರ ಕಯ್ಗಳಂ ಬೇಡಿಕೊಳುತುಂ ಪಿಡಿದು
ಅಂದಲ್ಲಿ ಬಿಳ್ಕೊಂಡು ಪೊರಮಟ್ಟು ಬರುತಿರಲ್
ಬಂದ ಪರಿಜನವೆಲ್ಲ ಮುನ್ನಿನಂದದೋರಲ್
ನೋಡಿ ಬೆರಗಾಗುತ್ತೆಯೋಹಿಲಯ್ಯಂ ಬಂದು
ಬೇಡ ಬೇಡೆಲೆ ಜನಂಗಳಿರ ಬೇಡೆನುತ್ತಂದು
ಮುನ್ನಿನಂತಲ್ಲ ಜನವಂ ಶಿವಂ ಸೈರಿಸಂ
ಪನ್ನಗಧರಂ ಪುರುಡಿಗಂ ಬೇರೆ ಪೊರ್ದಿಸಂ
ಮನದೊಳಗೆ ಹೊರೆಯಾಗದೊಳಗಾಗದೊಲ್ಲೆನೆಸೆ
ಮನುಜರ್ಗಲಂಬರಿರೆಸಂದಣಿಯು ಸೈರಿಪನೆ
ಎಂದಲ್ಲಿ ಹೋಗನೊಲ್ಲದೆ ಮನುಜರಂ ಕಳಿಸಿ
ಬಂದನೆಮ್ಮಯ್ಯಂ ವಿರಕ್ತಿಭಾವಕ್ಕಳಿಸಿ

ಬರೆ ಶಿವಪ್ರಚ್ಛನ್ನವೇಷದಿಂದೊಡನೊಡನೆ
ಬರುತಲಿರ್ದಂ ಪುತ್ರನೇಹದಿಂದೊಡನೊಡನೆ
ಇಂತು ಬರೆ ಬಂದನೋಹಿಲದೇವನೊಲ್ಮೆಯಿಂ
ಸಂತಸದೆ ರೂಪಪಿಕ್ಕುವ ಚಿತ್ತದಳ್ತಿಯಿಂ
ಪಾದಕ್ಕೆ ರಕ್ಷೆ ನಡೆವುದೆ ರಕ್ಷೆಯಾಗುತಿರೆ
ಸಾದರಂ ಮಿಗೆ ಬಂದನಭವನಲ್ಲಾಡುತಿರೆ
ಎಲ್ಲೆಯುಂ ನಿಲ್ಲನಾರೊಡನೆಯುಂ ಸುಡಿಯಿಲ್ಲ
ತಲ್ಲಣಿಸಲಿಲ್ಲ ತನಗೊಂದುವುಂ ಭಯವಿಲ್ಲ
ಕಲ್ಗಳಂ ಪರಳೊಳಂ ಮುಳ್ಳೊಳಂ ನಡೆನಡೆದು
ಅಲ್ಲಲ್ಲಿಯೂರ್ಗಳಂ ದಾಂಟುತಂ ನಡೆನಡೆದು
ಬಿಸಿಲನರಿಯದೆ ಗಾಳಿಗೋಸರಿಸದೈಯ್ತಂದು
ಪಸಿವನರಿಯದೆ ನಿದ್ರೆಯನರಿಯದೈತಂದು
ಪಗಲೆನ್ನದಿರುಳೆನ್ನದಕ್ಕರಿಂದೈತಂದು
ಮೃಗವೆನ್ನದಡವಿ ಎನ್ನದೆ ನಿಷ್ಠೆಯಿಂ ನಡೆದು
ದೇಶಂಗಳಂ ಕಳೆದೆರಡು ದಿನಂ ಪಸಿದಿರ್ದು
ಆಸುರದ ಪೇರಡವಿಯುಂ ಪೊಕ್ಕು ನಲಿದಿರ್ದು

**ಭಾವ:**— ಮನುಷ್ಯನು ೮೪ ಲಕ್ಷ ಜೀವರಾಶಿಗಳ ಯೋನಿಗಳಲ್ಲಿ ಅನಂತ ಜನ್ಮಗಳನ್ನು ತಾಳಿ ಅನೇಕ ಬಗೆಯ ಕಷ್ಟಗಳನ್ನು ಹೊಂದುವನು. ಈ ಕಷ್ಟಗಳು ದೂರಾಗಬೇಕೆಂದು ಗುರುವು ಲಿಂಗಧಾರಣ ಮಾಡುವನು. ಹೀಗೆ ಲಿಂಗಧಾರಣೆ ಮಾಡಿದೊಡನೆಯೇ ಅವನು ಅಯೋನಿಜನಾಗುವನು. ಯಾಕಂದರೆ ಅವನ ಜನ್ಮವು ಗುರುವಿನಿಂದಾಯಿತೆಂತಲೇ ತಿಳಿಯಬೇಕು. ಹೀಗೆ ಭಕ್ತನು ಗುರುವಿನ ಕೃಪಾಕಟಾಕ್ಷದ ಮೂಲಕ ಅವನ ಕರಕಮಲದಲ್ಲಿ ಪುನರ್ಜಾತನಾಗುವನು. ಹೀಗೆ ಹುಟ್ಟಿದವನಿಗೆ ಭವಮಾಲೆಯು ಹೊದ್ದಲಾರದು. ಈತನು ಶರಣನೆಂದು ತಿಳಿಯಬೇಕು ಎಂದು ವಚನಕಾರನು ಇಲ್ಲಿ ಹೇಳುತ್ತಾನೆ.

**ವಚನ:**— ೨೦. ಲಿಂಗವು ಸರ್ವಾಂಗದಲ್ಲಿ ಭರಿತವಾಗಿರಲು ಮನ ಮರಿಯದು, ತನು ಸೋಂಕದು, ಜ್ಞಾನ ಕಾಣಿಸದು, ಭಾವ ಮುಟ್ಟದು. ಶಿವಶಿವಾ ವಿಶ್ವಾಸದಿಂದ ಗ್ರಹಿಸಿ ಹಿಡಿಯದು. ಶಿವಶಿವಾ ಕೆಟ್ಟೆ ಕೆಟ್ಟೆ. ಅಂತರಂಗ ಬಹಿರಂಗ ಭರಿತವಾಗಿ ಲಿಂಗವಿದ್ದಾನೆ. ಮನ ವಿಶ್ವಾಸದಿಂದ ಗ್ರಹಿಸಿದಡೆ, ಸತ್ಯನಪ್ಪೆ ನಿತ್ಯನಪ್ಪೆ ಮುಕ್ತನಪ್ಪೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:**— ಲಿಂಗಧಾರಣೆಯ ಪರಿಣಾಮಗಳನ್ನು ಇಲ್ಲಿ ವಚನಕಾರನು ವಿವರಿಸಿರುವನು. ಇದರಿಂದ ಲಿಂಗದ ಉಚ್ಚ ಮತ್ತು ಉದಾತ್ತ ಗುಣಗಳು ಸರ್ವಾಂಗದಲ್ಲೆಲ್ಲ ತುಂಬಿಹೋಗುವವು. ಮತ್ತು ದೇಹಸಂಬಂಧದ ಗುಣಗಳು ಅಡಗುವವು. ಅಂದರೆ ಮನ, ತನು, ಜ್ಞಾನ, ಭಾವ, ಇವೆಲ್ಲವುಗಳ ಕೆಡಕು ಮತ್ತು ದುಷ್ಟ ಒಲವುಗಳು ನಿಂತುಹೋಗಿ ಅವುಗಳಲ್ಲಿ ಲಿಂಗದ ಶ್ರೇಷ್ಠ ಒಲವುಗಳು ತುಂಬುವವು. ಆದರೆ ಮನುಷ್ಯನಲ್ಲಿ ಲಿಂಗಸಂಬಂಧವಾಗಿ ವಿಶ್ವಾಸಭಾವವು ಇರದ್ದರಿಂದ ಈ ಸ್ಥಿತಿಯುಂಟಾಗುವದಿಲ್ಲ. ಅವನು ಭವದತ್ತವೇ ಹೊರಳುವನು. ಆದ್ದರಿಂದ ಪರಶಿವನೇ ನಾನು ಕೆಟ್ಟೆನೆಂದು ವಚನಕಾರನು ಇಲ್ಲಿ ಪರಮಾತ್ಮನಿಗೆ ಹೇಳಿಕೊಳ್ಳುತ್ತಾನೆ. ವಿಚಾರಮಾಡಿ ನೋಡಿದಲ್ಲಿ ಪರಮಾತ್ಮನು ದೇಹದ ಒಳಗೂ ಹೊರಗೂ ತುಂಬಿಕೊಂಡಿದ್ದಾನೆ. ಈ ರೀತಿಯನ್ನು ಮನುಷ್ಯನು ವಿಶ್ವಾಸಪೂರ್ವಕವಾಗಿ ಗ್ರಹಿಸಿದರೆ, ಅವನು ಸತ್ಯನೂ ನಿತ್ಯನೂ ಮುಕ್ತನೂ ಆಗುವನೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

---

# ಲಿಂಗಭಕ್ತಿ.

**ವಿವರಣೆಃ**— ಲಿಂಗಧಾರಣೆಯಾದ ಬಳಿಕ ಯಾವಾಗಲೂ ಲಿಂಗ ಭಕ್ತಿಯಿಂದಿರಬೇಕೆಂದು ವಚನಕಾರನು ಮುಂದಿನ ವಚನಗಳಲ್ಲಿ ಹೇಳಿದ್ದಾನೆ. ಇವುಗಳಲ್ಲಿ ಆತನು ಲಿಂಗಭಕ್ತಿ ಏನೆಂಬುದನ್ನು ಬಹು ವಿಶದವಾಗಿ ವಿವರಿಸಿದ್ದಾನೆ.

ಭಕ್ತಿ ಎಂದರೆ ಪರಮಾತ್ಮನನ್ನು ಕುರಿತು ಹಂಬಲಿಸುವದು, ಅವನ ಉಚ್ಚಸ್ಥಿತಿಗೆ ಮೋಹಿತನಾಗಿ ತನ್ನಲ್ಲಿ ಲಿಂಗದ ಗುಣಗಳನ್ನು ಪ್ರಜ್ವಲಿಸುವದು ಮತ್ತು ಕಡೆಗೆ ಪರಮಾತ್ಮನನ್ನು ಹೊಂದುವದು. ಈ ಉದ್ದೇಶಗಳನ್ನಿಟ್ಟುಕೊಂಡೇ ಭಕ್ತನು ಪರಮಾತ್ಮನನ್ನು ನೆನೆಯಬೇಕು. ಈ ನೆನಹೇ ಭಕ್ತನ ಪ್ರಾರ್ಥನೆಯಲ್ಲಿ ಕೂಡಿರಬೇಕು. ಲಿಂಗಾಂಗಿಯು ತನ್ನ ಪ್ರಾರ್ಥನೆಗಳಲ್ಲಿ ಬಾಹ್ಯ ಸುಖಗಳನ್ನು ಎಂದಿಗೂ ಅಪೇಕ್ಷಿಸಬಾರದು. ಆ ಕಾಲದಲ್ಲಿ ಅವನು ಅತ್ಯಂತ ಶ್ರೇಷ್ಠ ಮತ್ತು ಉಚ್ಚ ಭಾವಗಳಿಂದ ಪೂರಿತನಾಗಿರಬೇಕು. ಈ ವಿಚಾರಗಳು ಮುಂದಿನ ವಚನಗಳಲ್ಲಿ ಬಂದಿವೆ.

**ವಚನಃ**— ೨೧. ವಟಬೀಜ ವಟವೃಕ್ಷ ಕೋಟಿಯ ನುಂಗಿಪ್ಪಂತೆ ಸಟೆಯಿಂದಾದ ಅಜಾಂಡ ಬ್ರಹ್ಮಾಂಡ ಕೋಟಿಯನೊಳಕೊಂಡಿಪ್ಪ ಲಿಂಗವೇ ದಿಟಪುಟವಾಗಿ ಎನ್ನ ಕಣ್ಗೆ ಮನ ಕರ ಸ್ಥಲಕ್ಕೆ ಬಂದು ಪ್ರಕಟವಾದೆ. ಮಝು ಭಾಪು ಮಝು ಭಾಪು ಲಿಂಗವೇ. ನ ಚ ರೇಣು ನ ಚಕ್ಷುವೆಂದೆನಿಸುವ ಲಿಂಗವೇ. ನಿನ್ನುವ ಮುಟ್ಟಿ ಉತ್ಪತ್ತಿ ಸ್ಥಿತಿ ಲಯಕ್ಕೆ ಹೊರಗಾದೆನು ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ**— ಪ್ರಾರ್ಥನೆಯ ಕಾಲದಲ್ಲಿ ಭಕ್ತನು ಪರಮಾತ್ಮನ ದಿವ್ಯ ಸ್ವರೂಪಕ್ಕೋಸ್ಕರ ಆಶ್ಚರ್ಯಚಕಿತನಾಗಿರಬೇಕು. ಆಗ ಅವನು ಬೆರಗುಗೊಂಡು ತಾನು ಯಾರು ತನ್ನದು ಅವುದು ಎಂಬದನ್ನು ಮರೆತು ನುಡಿಯುತ್ತಾನೆ. ವಚನಕಾರನಲ್ಲಿ ಈ ಸ್ಥಿತಿಯು ತಲೆದೋರಿದಾಗ ಈ ವಚನವನ್ನು ಅವನು ನುಡಿದಿರುವನೆಂದು ಭಾಸವಾಗುತ್ತದೆ. ಲಿಂಗವನ್ನು ಕುರಿತು ಅವನು ಮಝು ಭಾಪು ಮಝು ಭಾಪು ಎಂದು ಉದ್ಗಾರಗಳನ್ನು ಹೊರಡಿಸಿದ್ದಾನೆ. ಭಕ್ತನಲ್ಲಿ ಈ ಬಗೆಯ ಉದ್ಗಾರಗಳು ಅವನ

ಅಂತಃಕರಣದಿಂದ ಹೃದಯದಿಂದ ಹೊರಹೊರಡಬೇಕು. ಲಿಂಗದ ನಿಜ ಸ್ವರೂಪ ಹೀಗೆ ಸ್ಪಷ್ಟವಾಗಿ ಗೋಚರವಾದಾಗಲೇ ಇಂಥ ಉದ್ಗಾರಗಳು ಮತ್ತು ಭಾವಗಳು ಹೊರಪಡುವವು. ವಚನಕಾರನು ತನ್ನ ಪ್ರಾರ್ಥನೆಯಲ್ಲಿ ಲಿಂಗದ ನಿಜಸ್ವರೂಪ ಎಂಥದಿರುವದೆಂಬದನ್ನು ಮನಸ್ಸಿನಲ್ಲಿ ತಂದು ಕೊಂಡು ಅನ್ನುವದೇನಂದರೆ, ಹ್ಯಾಗೆ ಒಂದು ಆಲದ ಬೀಜದಲ್ಲಿ ವಿಶಾ ಲವಾದ ವಟವೃಕ್ಷವು ಅಡಗಿರುವದೋ ಹಾಗೆಯೇ ಈ ಲಿಂಗದಲ್ಲಿ ಬ್ರಹ್ಮಾಂಡ ಕೋಟಿಗಳು ಅಡಗಿರುತ್ತವೆಂದು ವಚನಕಾರನು ಇಲ್ಲಿ ಅನ್ನು ತ್ತಾನೆ. ಇದು ಆಶ್ಚರ್ಯವಲ್ಲವೇ ಎಂದು ವಚನಕಾರನು ಅಂದುಕೊಂಡು ನುಡಿಯುವದೇನಂದರೆ, ಇಂಥ ಮಹತ್ತರಲಿಂಗವು ಹಸ್ತದಲ್ಲಿ ಇಷ್ಟಲಿಂಗ ವಾಗಿದೆ. ಮತ್ತು ಈ ಇಷ್ಟಲಿಂಗವೇ ಚಕ್ಷುವಿನ ದ್ವಾರಾ ಮನಸ್ಸಿನಲ್ಲಿ ಪ್ರಾಣಲಿಂಗವಾಗಿದೆ. ಹೀಗೆ ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿದ ವಸ್ತುವು ನನ್ನಲ್ಲಿಯೇ ಪ್ರಕಟವಾದೆಯಲ್ಲಾ ಎಂದು ಮನಸ್ಸಿನಲ್ಲಿ ಭಾವಿಸಿಕೊಂಡು ಮಝು ಭಾಪು ಮಝು ಭಾಪು ಎಂದೆನ್ನುತ್ತಾನೆ. ಹೀಗೆ ಮಹತ್ತರವಾದ ಲಿಂಗವನ್ನು ಪಡೆದು ಅದರ ಮೂಲಕ ನನ್ನ ಉತ್ಪತ್ತಿ ಸ್ಥಿತಿಲಯಗಳೆ ಲ್ಲವನ್ನು ದೂರಮಾಡುವೆನೆಂದು ವಚನಕಾರನು ಅನ್ನುತ್ತಾನೆ.

ಈ ಪ್ರಾರ್ಥನೆಯಲ್ಲಿ ಪರಮಾತ್ಮನ ಮಹತ್ತರ ಸ್ವರೂಪ ಮತ್ತು ಆತನ ಅತ್ಯದ್ಭುತ ಶಕ್ತಿ ಇವುಗಳನ್ನು ಧ್ಯಾನದಲ್ಲಿ ತಂದುಕೊಂಡು ಅವು ಗಳನ್ನು ಲಿಂಗದ ದ್ವಾರಾ ಬಾಹ್ಯೇಂದ್ರಿಯ ಅಂತರಿಂದ್ರಿಯಗಳಲ್ಲಿ ತುಂಬಿ ಕೊಂಡು ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳಿಂದ ಹ್ಯಾಗೆ ತಾನು ಪಾರಾ ಗುವೆನೆಂಬ ಅರಿವುಳ್ಳವನಾದರೆ ಪರಮಾತ್ಮನಲ್ಲಿ ನಿಜವಾದ ಭಕ್ತಿಯು ನೆಲೆಗೊಳ್ಳುವದು. ಇಂಥ ಸ್ಥಿತಿಯು ಬಂದೊದಗಿದರೆ ನಿಜವಾದ ಭಕ್ತಿಯ ಉದ್ಗಾರಗಳು ಹೊರಪಡುವವು.

**ವಚನ:**— ೨೨. ಯತೋವಾಚೋ ನಿವರ್ತಂತೆ ಅಪ್ರಾಪ್ಯ ಮನಸಾ ಸಹ।" ಎಂದೆನಿಸುವ ಲಿಂಗವು; "ಅತ್ಯತಿಷ್ಠದ್ದಶಾಂಗುಲಂ" ಎಂದೆನಿಸುವ ಲಿಂಗವು" ಶೃತಿಚಕಿತಮಭಿಧತ್ತೆ" ಎಂದೆನಿಸುವ ಲಿಂಗವು; "ಅಣೋರಣೀಯಾನ್ಮಹತೋ ಮಹಿಯಾನ್" ಎಂದೆನಿಸುವ ಲಿಂಗವು; "ಅಯಂ ಮೇಹಸ್ತಂ ಭಗವಾನ್। ಅಯಂ ಮೇಭಗವತ್ತರಂ" ಎಂದೆ ನಿಸುವ ಲಿಂಗವು; "ಏಕ ಮೂರ್ತಿ ತ್ರಿಧಾಭೇದಂ" ಎಂದೆನಿಸುವ ಲಿಂಗವು; ಶ್ರೀಗುರುಲಿಂಗಜಂಗಮರೂಪಾಗಿ, "ಇಷ್ಟ ಪ್ರಾಣಸ್ತಥಾಭಾವಂ ತ್ರಿಧಾ

ಮೋಕಂ ವರಾನನೆ" ಎಂದುದಾಗಿ, ತ್ರಿವಿಧವು ಏಕೀಭವಿಸಿ, ಲಿಂಗರೂಪಾಗಿ ಎನ್ನ ಕರಸ್ಥಲಕ್ಕೆ ಬಂದು, ಕರತಳಾಮಳಕವಾಗಿ ತೋರುತ್ತಿದಾನೆ. ಆಹಾ ಎನ್ನ ಪುಣ್ಯವೆ! ಆಹಾ ಎನ್ನ ಭಾಗ್ಯವೆ! ಆಹಾ ಎನ್ನ ಸತ್ಯವೆ! ಆಹಾ ಎನ್ನ ನಿತ್ಯವೆ! ಶಿವಶಿವಾ ಮಹಾದೇವ, ಮಹದೇವ, ನೀನೇ ಬಲ್ಲೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ—** ಇಲ್ಲಿ ವಚನಕಾರನು ಪರಮಾತ್ಮನ ಉದಾತ್ತ ಸ್ವರೂಪವನ್ನು ತನ್ನ ಮನಸ್ಸಿನಲ್ಲಿ ತಂದುಕೊಂಡು ತಾನು ಎಂಥ ಭಾಗ್ಯವಂತನು ಎಂಥ ಪುಣ್ಯವಂತನು ಎಂದು ಅಂದುಕೊಂಡು ಪ್ರೇಮೋದ್ಗಾರಗಳನ್ನು ತೆಗೆದಿರುತ್ತಾನೆ. ಅವನು ಪರಮಾತ್ಮನ ಬಗ್ಗೆ ಇರುವ ಪುರಾತನ ಉಕ್ತಿಗಳನ್ನು ಧ್ಯಾನದಲ್ಲಿ ತಂದುಕೊಂಡು ಅನ್ನುವದೇನಂದರೆ ಎಲೋ ಪರಮಾತ್ಮನೇ ನೀನು ನುಡಿಗೆ ದೂರಾಗಿರುವೆ, ಮನಸ್ಸಿಗೂ ಸಹ ನಿಲುಕದವನಾಗಿರುವೆ, ನಿನ್ನ ವಿಸ್ತಾರವು ಎಷ್ಟಿರುವದೆಂದರೆ ಈ ಬ್ರಹ್ಮಾಂಡವನ್ನು ಸಹ ದಾಟಿ ಹತ್ತಂಗುಲ ಪ್ರಮಾಣ ಹೆಚ್ಚಾಗಿರುವೆ, ಶೃತಿಗಳಿಗೂ ಕೂಡ ನಿಲುಕದವನಾಗಿರುವೆ, ಸಣ್ಣದರಲ್ಲಿ ಸಣ್ಣವನೂ ದೊಡ್ಡದರಲ್ಲಿ ದೊಡ್ಡವನೂ ಆಗಿರುವೆ, ಇಂಥವನಾಗಿದ್ದರೂ ಕೂಡ ನೀನು ನನ್ನ ಹಸ್ತದಲ್ಲಿ ತಲೆದೋರಿರುವೆ, ನೀನೊಬ್ಬನೇಯಾಗಿದ್ದರೂ ಮೂರು ವಿಧವಾಗಿರುವೆ, ಅವು ಗುರು ಲಿಂಗ ಜಂಗಮಗಳಿದ್ದು ಇವೇ ಇಷ್ಟ, ಪ್ರಾಣ ಭಾವಗಳಾಗಿವೆ. ಈ ತ್ರಿವಿಧವು ಪುನಃ ಏಕೀಭವಿಸಿ ಏಕಲಿಂಗವಾಗಿರುವೆ. ಇಂಥಾತನಾದ ನೀನು ನನ್ನ ಕರಸ್ಥಲಕ್ಕೆ ಬಂದು ಕರತಳಮಳಕನಾದೆ, ನನ್ನ ಕೇವಲ ಅಧೀನವಾದೆ ಎಂದು ಪರಮಾತ್ಮನ ಸ್ವರೂಪವನ್ನು ಮನಸ್ಸಿನಲ್ಲಿ ತಂದುಕೊಂಡು ಅನ್ನುವದೇನೆಂದರೆ, ಏನು ನನ್ನ ಪುಣ್ಯವು! ಏನು ನನ್ನ ಭಾಗ್ಯವು! ಎಂದು ವಚನಕಾರನು ನುಡಿದು ಅತ್ಯಂತ ಭಕ್ತಿಪೂರಿತನಾಗಿ ಎಲೋ ನನ್ನ ಸತ್ಯವೇ, ನಿತ್ಯವೇ ಶಿವಶಿವ ಮಹಾದೇವ ಎಂದು ಉಚ್ಚರಿಸಿ ಈ ನಿನ್ನ ವಿಧವನ್ನು ನೀನೇ ಬಲ್ಲೆ ಹೆರವರು ಅರಿಯರು ಎಂದು ಆಶ್ಚರ್ಯಚಕಿತನಾಗಿ ಪರಮಾತ್ಮನನ್ನು ಕುರಿತು ವಚನಕಾರನು ಪ್ರಾರ್ಥಿಸಿರುತ್ತಾನೆ.

**ವಚನಃ—** ೨೩. ನಿತ್ಯನಿರಂಜನ ಜ್ಯೋತಿರ್ಲಿಂಗವು ಪ್ರತ್ಯಕ್ಷವಾಗಿ ಕರಸ್ಥಲಕ್ಕೆ ಬರಲು ಮತ್ತೆ ನೆನೆನೆನೆದು ಬದುಕಿಹೆನೆಂಬುದು ಅಜ್ಞಾನ ಕಾಣಿರೇ. ಅದು ಏನು ಕಾರಣವೆಂದೊಡೆ ಸತ್ಯವು ಸರ್ವಾಂಗಲಿಂಗವೆಂ

ದರಿಯದೆ ಮತ್ತೆ ಕಾಯವೆರಸಿ ಕೈಲಾಸಕ್ಕೆ ಹೋಗಬೇಕೆಂಬರು. ಕ್ರಮವಲ್ಲ. ಪಂಚಾಮೃತವು ಮುಂದೆ ಬಂದಿರಲು ಹಸಿದೆನೆಂದು ಲೋಗರಮನೆಯಲ್ಲಿ ಅನ್ನ ಬೇಡುವರೇ? ಕಣ್ಣ ಮುಂದೆ ನಿಧಾನವಿರುತ್ತಿರಲು ಬಳಸಲರಿಯದೆ ಬಡತನದೊಳಗಿಹರೇ? ಲಿಂಗವಿಲ್ಲದವರು ಮೊದಲೇ ಲಿಂಗವ ನೆನೆದು ಬದುಕಿಹೆವೆಂಬರು. ಇದ ಕಂಡು ನಂಬದಿಹುದುಚಿತವೇ? ಆಹಾ ಇದು ಗುಣವಲ್ಲ. ಮುಂಗಯ್ಯ ಕಂಕಣಕ್ಕೆ ಕನ್ನಡಿಬೇಡ. ಅಂಗದ ಮೇಲೆ ಲಿಂಗವಿದ್ದುದಕ್ಕೆ ಲಿಂಗದ ಪರಿ ಎಂತೆಂದು ಅನ್ಯರ ಬೆಸಗೊಳಲಿಲ್ಲ. ಬೇರೆ ಮತ್ತೆ ಅರಸಲಿಲ್ಲ. ಕಾಣೆನೆಂದು ಮರುಗಲಿಲ್ಲ. ಮುಂದೆ ಜನ್ಮ ಉಂಟೆಂದು ಮನದಲ್ಲಿ ನೋಯಲಿಲ್ಲ. ಇದು ಕಾರಣ ತನ್ನ ಕರಸ್ಥಲದಲ್ಲಿದ್ದ ವಸ್ತುವ ತಾನರಿದೊಡೆ ತಾನೇ ಶಿವನು. ಇದು ಸತ್ಯ, ಶಿವ ಬಲ್ಲ, ಶಿವನಾಣೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ**— ಭಕ್ತಿಯಲ್ಲಿ ದೃಢಭಾವವಿರಬೇಕು. ಅಂದರೆ ತಾನು ಮಾಡುವ ಪ್ರಾರ್ಥನೆಯ ಕಾಲದಲ್ಲಿ ನುಡಿದ ನುಡಿಗಳು ನಿಜವೆಂದು ಅವುಗಳಲ್ಲಿ ಪೂರ್ಣ ವಿಶ್ವಾಸವಿಟ್ಟಿರಬೇಕು. ಅಂದರೆ ಮಾತ್ರ ಅವುಗಳಲ್ಲಿ ಮಹತ್ತರ ಶಕ್ತಿಯುತ್ಪನ್ನವಾಗುವದು. ಆದ್ದರಿಂದ ತನ್ನ ಇಷ್ಟಲಿಂಗವನ್ನು ಕುರಿತು ಭಕ್ತನು ಪ್ರಾರ್ಥಿಸುವಲ್ಲಿ ಆ ಇಷ್ಟಲಿಂಗವು ಪರಮಾತ್ಮನ ಸ್ವರೂಪೇ ಎಂದು ದೃಢವಿಶ್ವಾಸವಿಡಬೇಕು. ಅಂದರೆ ಮಾತ್ರ ಆ ಇಷ್ಟಲಿಂಗವನ್ನು ಕುರಿತು ಮಾಡಿದ ಕ್ರಿಯೆಗಳ ಮೂಲಕ ಅವನು ಉಚ್ಚಸ್ಥಿತಿಗೆ ಬರುವನು.

ಅಂದರೆ ಭಕ್ತನು ಈ ಇಷ್ಟಲಿಂಗವು ನಿತ್ಯನಿರಂಜನ ಜ್ಯೋತಿರ್ಲಿಂಗವೆಂತಲೇ ಭಾವಿಸಬೇಕು. ಈ ಜ್ಯೋತಿರ್ಲಿಂಗವು ತನ್ನ ಶರೀರವನ್ನೆಲ್ಲ ಆವರಿಸಿದೆಂದು ತಿಳಿಯಬೇಕು. ಹೀಗೆ ತಿಳುವಳಿಕೆ ಇದ್ದಲ್ಲಿ ಆ ಲಿಂಗಕ್ಕೂ ತನಗೂ ಭೇದಭಾವವು ಉಳಿಯಲಾರದು. ಈ ಸ್ಥಿತಿಯುಂಟಾದಲ್ಲಿ ಅದನ್ನು ನೆನೆಯಲಿಕ್ಕೆ ಬರಲಾರದೆಂದು ವಚನಕಾರನ ಅಭಿಪ್ರಾಯವಿದೆ. ಯಾಕಂದರೆ ನೆನವಿನಲ್ಲಿ ನೆನೆಯುವವನು ಮತ್ತು ನೆನೆಯತಕ್ಕ ಪದಾರ್ಥ ಎಂದು ವಿವಿಧತೆಯು ಇರುತ್ತದೆ. ಈ ವಿವಿಧತೆಯು ಲಿಂಗಿಯಾದವನಲ್ಲಿ ಇರಕೂಡದು. ಅವನು ದೇಹವೇ ಜ್ಯೋತಿರ್ಲಿಂಗವೆಂದು ಭಾವಿಸುವನಾದ್ದರಿಂದ ಅದನ್ನು ನೆನೆಯಲಿಕ್ಕೆ ಅವನಿಗೆ ಬರಲಾರದು.

ಹಾಗೆಯೇ ಅನೇಕರು ಕಾಯ ಸಹಿತ ಕೈಲಾಸಕ್ಕೆ ಹೋಗಬೇಕೆಂದು ಅನ್ನುವರು. ಇದೂ ತರವಲ್ಲ. ಯಾಕಂದರೆ ದೇಹದಲ್ಲಿಯೇ ಪರಮಾತ್ಮ

ನಿದ್ದ ಬಳಿಕ ಕೈಲಾಸದಲ್ಲಿ ಬೇರೊಬ್ಬ ಪರಮಾತ್ಮನಿರುವನೆಂದು ಅಲ್ಲಿಗೆ ಹೋಗಬೇಕೆಂಬ ಅಪೇಕ್ಷಿಸುವದು ತರವಲ್ಲವೆಂದು ವಚನಕಾರನ ಭಾವವು.

ಅವನು ಅನ್ನುವದೇನೆಂನರೆ ಲಿಂಗವೆಂಬುದೊಂದು ಪಂಚಾಮೃತ ದಂತಿದೆ. ಇಂಥ ಪಂಚಾಮೃತವು ತನ್ನೆದುರಿಗೆ ಇರಲು ಅದನ್ನು ಉಣ್ಣು ವದನ್ನು ಬಿಟ್ಟುಕೊಟ್ಟು ಹಸಿದೆನೆಂದು ಭವಸಂಬಂಧಿಗಳಾದವರ ಮನೆಗೆ ಹೋಗಿ ಅವರ ಅನ್ನವನ್ನು ಅಪೇಕ್ಷಿಸುವದು ಎಂದಿಗಾದರೂ ಉಂಟೇ? ಅದೇ ಪ್ರಕಾರ ಲಿಂಗವಂತನಾದವನು ಪರಮಾತ್ಮನು ಬೇರೆ ಕಡೆಗೆ ಇರುವನೆಂದು ಭಾವಿಸಿ ಅತ್ತಿತ್ತ ಹರಿದಾಡುವುದು ಹುಚ್ಚುತನವೆಂದು ವಚನಕಾರನು ಅನ್ನುತ್ತಾನೆ.

ಅವನು ಪುನಃ ಅನ್ನುವದೇನೆಂದರೆ ಲಿಂಗವು ಕಣ್ಣು ಮುಂದಿದ್ದ ದ್ರವ್ಯದ ರಾಶಿಯಂತಿದೆ. ಇಂಥ ರಾಶಿಯು ತನ್ನ ಎದುರಿಗೆ ಬಿದ್ದಿರಲು ಅದನ್ನು ಭೋಗಿಸಲರಿಯದೆ ಬಡತನದಲ್ಲಿ ಕೊರಗುವದು ಅತ್ಯಂತ ಮೂರ್ಖತನವು.

ಆದರೆ ಲಿಂಗವಿಲ್ಲದವರು ತಾವು ಲಿಂಗವನ್ನು ಧ್ಯಾನಿಸಿ ಧ್ಯಾನಿಸಿ ಬದುಕಿದೆವೆನ್ನುತ್ತಾರೆ. ಆವರು ಹೀಗೆ ಧ್ಯಾನಿಸುವರೆಂದು ಅವರ ಆಚರ ಣೆಗಳನ್ನೇ ನಂಬಿ ಭಕ್ತನು ಆಚರಿಸುವದೆಂದರೆ ಅವನು ಲಿಂಗವನ್ನು ನಂಬಿದಂತಲ್ಲ. ಇದು ಸರಿಯಾದ ಮಾರ್ಗವಲ್ಲೆಂದು ವಚನಕಾರನ ಅಭಿ ಪ್ರಾಯವಿದೆ. ಇದು ಮುಂಗಯ್ಯಲ್ಲಿ ಕಂಕಣವಿರುತ್ತಿರಲು ಅದನ್ನು ಪ್ರತ್ಯಕ್ಷ ನೋಡುವದನ್ನು ಬಿಟ್ಟುಕೊಟ್ಟು ಅದನ್ನು ನೋಡಲು ಕನ್ನಡಿಯನ್ನು ಬಯಸಿ ದಂತೆಯೇ ಸರಿ ಎಂದು ಅನ್ನುತ್ತಾನೆ.

ಆದ್ದರಿಂದ ಅಂಗದ ಮೇಲೆ ಲಿಂಗವಿರಲು, ಪರಮಾತ್ಮನ ರೀತಿ ಹೇಗೆಂದು ಹೆರವರನ್ನು ಕೇಳುವ ಕಾರಣವಿಲ್ಲ. ಅವನನ್ನು ಹೀಗೆ ಹುಡು ಕಾಡಲೂ ಬೇರೆ ಕಡೆಗೆ ಹೋಗಬಾರದು. ಅಥವಾ ಪರಮಾತ್ಮನು ಕಾಣ ಲಿಲ್ಲೆಂದು ಮರುಗುವದೂ ಕಾರಣವಿಲ್ಲ. ಅಥವಾ ತಾನು ಮುಂದೆ ಪುನಃ ಹುಟ್ಟುವೆನೆಂದು ನೋಯುವದೂ ಅವಶ್ಯವಿಲ್ಲ.

ಈ ರೀತಿ ಲಿಂಗದಲ್ಲಿ ಸಂಪೂರ್ಣ ವಿಶ್ವಾಸಭಾವವಿರಬೇಕು. ಅಂದರೆ ಅದರ ನಿಜಸ್ಥಿತಿಯನ್ನು ಅರಿಯುವನು. ಹೀಗೆ ಅರಿತದ್ದಾದರೆ ಅವನು ತಾನೇ ಶಿವನಾಗುವನು. ಇದು ಸತ್ಯವೆಂದು ವಚನಕಾರನು ದೃಢವಾಗಿ

ಹೇಳುತ್ತಾನೆ. ಈ ಮಾತನ್ನು ಶಿವನು ಬಲ್ಲ, ಅವನು ಒಪ್ಪುವನು, ಶಿವನಾಣೆ ಎಂದು ವಚನಕಾರನು ವಿಶ್ವಾಸಪೂರ್ವಕವಾಗಿ ಹೇಳುತ್ತಾನೆ.

ಅಂದರೆ ಲಿಂಗವನ್ನು ಕುರಿತು ಮಾಡುವ ಕ್ರಿಯೆಗಳಲ್ಲಿ ಅತ್ಯಂತ ದೃಢವಿಶ್ವಾಸವಿರಬೇಕೆಂದು ವಚನಕಾರನ ಮುಖ್ಯ ಭಾವವಿದೆ. ಈ ಭಾವವನ್ನು ಇಟ್ಟುಕೊಂಡು ಮಾಡಿದ ಪ್ರಾರ್ಥನೆಗಳು ಸಫಲವಾಗುವವು.

**ವಚನ:—** ೨೪. ನಾನು ಕಾಮಿಸುತ್ತಿರ್ಪ ಸಾಲೋಕ್ಯವಿದೆ; ಸಾಮಿಪ್ಯವಿದೆ; ಸಾರೂಪ್ಯವಿದೆ; ಸಾಯುಜ್ಯವಿದೆ; ಧರ್ಮವಿದೆ; ಅರ್ಥವಿದೆ; ಕಾಮವಿದೆ; ಮೋಕ್ಷವಿದೆ ನಾನೇನರಸುವ ಬಯಕೆ ಎಲ್ಲವೂ ಇದೆ ನೋಡಾ. ನಾನೇನನರಸುವ ಅರಿಕೆ ಎಲ್ಲವೂ ಇದೆ ನೋಡಾ. ಶ್ರೀಗುರು ಕಾರುಣ್ಯದಿಂದ ಮಹಾ ವಸ್ತು ಕರಸ್ಥಲಕ್ಕೆ ಬಂದ ಬಳಿಕ ಸರ್ವ ಸುಖಂಗಳೆಲ್ಲವೂ ಇದೆ ನೋಡಾ. ಇನ್ನೆನ್ನ ಬಯಲ ಭ್ರಮೆಯೊಳಗೆ ಹೊಗಿಸದಿರಯ್ಯಾ ನಿಮ್ಮ ಬೇಡಿಕೊಂಬೆನು, ನಿಮಗೆ ಎನ್ನಾಣೆ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ.

**ಭಾವ:—** ವಚನಕಾರನು ಹಿಂದಿನ ವಚನಗಳ ಅಭಿಪ್ರಾಯಗಳನ್ನೇ ಪುನಃ ಈ ವಚನದಲ್ಲಿ ಬೇರೆ ರೀತಿಯಿಂದ ಹೇಳಿದ್ದಾನೆ. ಅವನು ಅನ್ನುವದೇನಂದರೆ, ನಾನು ಇಚ್ಛಿಸುವಂಥ ಸಾಲೋಕ್ಯ, ಸಾಮಿಪ್ಯ, ಸಾರೂಪ್ಯ, ಸಾಯುಜ್ಯ ಪದಗಳು ಈ ಇಷ್ಟಲಿಂಗದಲ್ಲಿಯೇ ಇವೆ. ಅರ್ಥ, ಕಾಮ, ಮೋಕ್ಷಗಳೂ ಕೂಡ ಇಲ್ಲಿಯೇ ಇವೆ. ನಾನು ಶೋಧಿಸುತ್ತಲಿರುವ ಜ್ಞಾನವೂ ಕೂಡ ಇಲ್ಲಿಯೇ ಇದೆ. ಯಾಕಂದರೆ ಶ್ರೀಗುರು ಕಾರುಣ್ಯದಿಂದ ಮಹತ್ತಾದ ಪರಮಾತ್ಮವಸ್ತುವು ಕರಸ್ಥಲಕ್ಕೆ ಬಂದಿದೆ. ಆದ್ದರಿಂದ ಜಗತ್ತಿನಲ್ಲಿಯ ಎಲ್ಲ ಸುಖಗಳೂ ಇದೇ ಇದೇ ಎಂದು ವಚನಕಾರನು ಒತ್ತಿ ಒತ್ತಿ ಹೇಳುತ್ತಾನೆ. ಆದ್ದರಿಂದ ಇಂಥ ಶ್ರೇಷ್ಠ ವಸ್ತುವನ್ನು ಅವಿಶ್ವಾಸಿಸಿ ಬಯಲಭ್ರಮೆಯೊಳಗೆ ಹೊಗಿಸಬೇಡೆಂದು ವಚನಕಾರನು ಪ್ರಾರ್ಥಿಸುತ್ತಾನೆ. ಮತ್ತು ಇದಕ್ಕೋಸ್ಕರ ಪ್ರತಿಜ್ಞೆ ಮಾಡುವೆನೆಂತಲೂ ಪರಮಾತ್ಮನನ್ನು ಕುರಿತು ಹೇಳಿಕೊಳ್ಳುತ್ತಾನೆ.

**ವಚನ:—** ೨೫ ಕಾಮಿಸುವ ವಸ್ತುವು ಕರಸ್ಥಲಕ್ಕೆ ಬಂದ ಬಳಿಕ ಕಾಮಿಸಲೇನುಂಟು ಹೇಳಾ! ಇನ್ನು ನಾನೇನಕಾಮಿಸುವೆನಯ್ಯಾ! ಅದೆಂತೆಂದಡೆ ॥ಶ್ರುತಿ॥ ಓಂ ನಮೋ ಹಿರಣ್ಯ ಬಾಹವೆ। ಹಿರಣ್ಯವರ್ಣಾಯ, ಹಿರಣ್ಯ ರೂಪಾಯ, ಹಿರಣ್ಯಪತಯೆ ಎಂಬ ವಸ್ತು ಓಂ ಯೋ ವೈ

ರುಪ್ರಷ್ಟ ಭವವಾನೆ ಪಂಚಾಮೃತಂ ಎಂಬ ವಸ್ತು ಸುಖಸ್ವರೂಪನು, ಶಾಂತನು, ಕರುಣಿ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ ಲಿಂಗವೇ, ನೀವೆನ್ನ ಕರಸ್ಥಲಕ್ಕೆ ಬಂದ ಬಳಿಕ ನಾನಿನ್ನೇನ ಕಾಮಿಸುವೆನಯ್ಯಾ ?

**ಭಾವಃ**— ವಚನಕಾರನು ಅನ್ನುವದೇನಂದರೆ, ನಾನು ಇಚ್ಛಿಸುವ ವಸ್ತುವು ಕರಸ್ಥಲಕ್ಕೆ ಬಂದ ಬಳಿಕ ಇಚ್ಛಿಸತಕ್ಕ ಬೇರೊಂದು ವಸ್ತುವು ಏನಿರುವದು? ನಾನು ಏನು ಇಚ್ಛಿಸಲಿ? ಎಂದು ಅಂದು ಅದಕ್ಕೋಸ್ಕರ ಒಂದು ಶೃತಿಯನ್ನು ಉದಹರಿಸಿರುವನು. ಈ ಶೃತಿಯಲ್ಲಿ ಪರಮಾತ್ಮನ ಸ್ವರೂಪು ವರ್ಣಿಸಲ್ಪಟ್ಟಿದೆ. ಇಂಥ ಪರಮಾತ್ಮನು ಸುಖಸ್ವರೂಪನು, ವರದ ಹಸ್ತನು, ಶಾಂತನು, ಕರುಣಿಯು ಆಗಿದ್ದು ಅವನು ಕರಸ್ಥಲಕ್ಕೆ ಬಂದ ಬಳಿಕ, ನಾನು ಏನು ಕಾಮಿಸಲಿ ಎಂದು ಹೇಳಿಕೊಳ್ಳುತ್ತಾನೆ.

**ವಚನ:**— ೨೬. ಜಾತಿವೇದಿಯಲ್ಲಿ ಶೋಧಿಸಿ, ಪುಟವಿಟ್ಟ ಬೂದಿಯಂತಾದೆನಯ್ಯಾ ನಿಮ್ಮನಾರಾಧಿಸಿ! ಅದೆಂತೆಂದೊಡೆ ॥ಶ್ಲೋ॥ ಜ್ಞಾನಾಗ್ನಿಸ್ಸರ್ವ ಕರ್ಮಾಣಿ ಭಸ್ಮಸಾತ್ಕುರುತೆ ಯಥಾ ಎಂದುದಾಗಿ, ಕಾದ ಲೋಹದ ಮೇಲೆ ಉದಕವನೆರೆದಂತಾದೆನಯ್ಯಾ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ.

**ಭಾವಃ**— ಒಂದು ಧಾತವನ್ನು ಅಗ್ನಿಯಲ್ಲಿ ಶೋಧಿಸಿ ಪುಟವಿಡಲು ಹೇಗೆ ಅದರ ಕಶ್ಮಲವು ಹೊರಟು ಹೋಗಿ ಅದರ ಸಾರವು ಮಾತ್ರ ಉಳಿದು ಭಸ್ಮವಾಗುವದೋ ಹಾಗೆಯೇ ಮನುಷ್ಯನು ಭಕ್ತಿಭಾವದಿಂದ ಪರಮಾತ್ಮನನ್ನು ಆರಾಧಿಸಿದಲ್ಲಿ ಅವನಲ್ಲಿಯ ಮಾಲಿನ್ಯತೆಯು ಹೊರಟು ಹೋಗಿ ಶುದ್ಧವಾಗುವನೆಂದು ವಚನಕಾರನು ಇಲ್ಲಿ ಹೇಳುತ್ತಾನೆ. ಇದಕ್ಕೋಸ್ಕರ ಅವನು ಒಂದು ಶ್ಲೋಕದ ಆಧಾರವನ್ನು ಕೊಟ್ಟಿದ್ದು ಅದರಲ್ಲಿ ಜ್ಞಾನಾಗ್ನಿಯು ಕರ್ಮಗಳನ್ನು ಸುಟ್ಟು ಭಸ್ಮಮಾಡುತ್ತಿದೆ ಎಂದು ಹೇಳಿದೆ. ಹ್ಯಾಗೆ ಕಾದ ಕಬ್ಬಿಣದ ಮೇಲೆ ನೀರನ್ನು ಎರಚಿದರೆ ಆ ನೀರು ಕಬ್ಬಿಣವನ್ನು ಏನೂ ತೊಡೆಯದೆ ಅದೇ ಸುಟ್ಟುಹೋಗಿ ಕಬ್ಬಿಣದ ಸ್ವರೂಪವು ಚಕಿಚಕಿತವಾಗಿ ಹೊಳೆಯುತ್ತದೆಯೋ ಅದರಂತೆಯೇ ಭಕ್ತಿಭಾವವುಳ್ಳ ಮನುಷ್ಯನನ್ನು ಯಾವ ತರದ ಕರ್ಮಗಳು ತಾಕಲಾರವೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

ಶಿವಾನುಭವ ಗ್ರಂಥಮಾಲಾ ನಂ॥ ೪೧

# ಬಸವೇಶ್ವರ
# ಷಟ್‌ಸ್ಥಲ ವಚನದ ಕಥಾಸಾರ.



ಸಂಪಾದಕರು.

ರಾ॥ ಸಾ॥ ಫ. ಗು. ಹಳಕಟ್ಟಿ.

ಬಿ. ಏ ಎಲ್. ಎಲ್. ಬಿ.

ವಿಜಾಪುರ.

೧೯೩೪

ಬೆಲೆ ೧೨ ಆಣೆಗಳು.

# ಪ್ರಸ್ತಾವನೆ.

→*0*←

ಈಗ ಶ್ರೀ ಬಸವೇಶ್ವರ ಷಟ್‌ಸ್ಥಲ ವಚನದ ಕಥಾಸಾರ ಎಂಬ ಗ್ರಂಥವನ್ನು ಅಚ್ಚು ಹಾಕಿದ್ದೇವೆ. ಇದರ ಗ್ರಂಥಕರ್ತನಾರೆಂಬುದು ತಿಳಿದಿಲ್ಲ. ಅವನು ಈ ವಚನ ಗ್ರಂಥದಲ್ಲಿ ಉಲ್ಲೇಖವಾಗಿರುವ ಶಿವ ಶರಣರ ಮತ್ತು ಪೌರಾಣಿಕ ಪುರುಷರ ಚರಿತ್ರೆಗಳನ್ನು ಸಂಕ್ಷಿಪ್ತವಾಗಿ ವಿವರಿಸಿರುವನು. ಈ ವಿವರಣೆಗಳ ಮೇಲಿಂದ ಗ್ರಂಥಕಾರನು ಎಷ್ಟು ಬಹುಶ್ರುತನಾಗಿದ್ದನೆಂಬದು ಚನ್ನಾಗಿ ವ್ಯಕ್ತವಾಗುತ್ತದೆ. ಬಸವೇಶ್ವರನ ವಚನಗಳನ್ನು ಅಭ್ಯಾಸಿಸುವವರಿಗೆ ಈ ಗ್ರಂಥವು ಉಪಯೋಗವಾಗಬಹುದೆಂದು ಎಣಿಸಿ ಇದನ್ನು ಪ್ರಸಿದ್ಧಿಸಿದ್ದೇವೆ.

ಈ ಗ್ರಂಥವು ಒಂದೇ ಒಂದು ಹಸ್ತಲಿಖಿತ ಗ್ರಂಥದ ಆಧಾರದಿಂದ ಅಚ್ಚು ಹಾಕಲ್ಪಟ್ಟಿದೆ. ಆದ್ದರಿಂದ ಅನೇಕ ಕಡೆಗೆ ಚರಿತ್ರೆಗಳ ಭಾಗಗಳು ಅಶುದ್ಧವಾಗಿ ಉಳಿದು ಅರ್ಥವಾಗುವದಿಲ್ಲಾದ್ದರಿಂದ ನಾವು ವಿಷಾದಿಸುತ್ತೇವೆ. ಆದಕ್ಕೋಸ್ಕರ ವಾಚಕರು ನಮ್ಮನ್ನು ಕ್ಷಮಿಸಬೇಕು. ಬೇರೆ ಹಸ್ತಲಿಖಿತ ಗ್ರಂಥಗಳು ದೊರೆದಲ್ಲಿ ಈ ಆವೃತ್ತಿಯನ್ನು ಶುದ್ಧಗೊಳಿಸಲು ಸಹಾಯವಾಗುವದು. ಆದ್ದರಿಂದ ಈ ಗ್ರಂಥದ ಪ್ರತಿಗಳು ಯಾರ ಕಡೆಗಾದರೂ ಇದ್ದಿದ್ದಾದರೆ ಅವರು ಅವುಗಳನ್ನು ನಮ್ಮ ಕಡೆಗೆ ಕಳಿಸಿಕೊಟ್ಟಲ್ಲಿ ನಾವು ಅವರಿಗೆ ಬಹಳ ಆಭಾರಿಯಾಗುವೆವು. ಇದರಿಂದ ೨ನೇ ಆವೃತ್ತಿಯನ್ನು ಶುದ್ಧವಾಗಿ ಅಚ್ಚುಹಾಕಲು, ನಮಗೆ ಬಹಳ ಸಹಾಯವಾಗುವದು.

ವಿಜಾಪುರ
ತಾ॥ ೩-೧೨-೩೪

ಫ. ಗು. ಹಳಕಟ್ಟಿ
ಸಂಪಾದಕ.

ಗುಣವ ನೋಡದೆ ನಿಷ್ಠೆಯಲ್ಲಿರುತ್ತಿರಲು ಒಂದು ದಿನ ಶಿವನ ವೇಷವ ಮರಸಿಕೊಂಡು ಸತ್ತ ಕರುವ ಹೊತ್ತುಕೊಂಡು ಭೋಗಣ್ಣನ ಮನೆಗೆ ಬರಲು ಅವರ ಲಿಂಗವ ಕಂಡು ಒಳಯಿಕೆ ಕರೆಕೊಂಡು ಹೋಗಿ ಕುಳ್ಳಿರಿಸಿ ಪಾದಾರ್ಚನೆಯು ಮಾಡಿ ಪಾದೋದಕ ಪ್ರಸಾದವ ಸಲಿಸಿರಲು ಆವರ ಹಾರುವರು ಕಂಡು ಚಂದಿಮರಸನೆಂಬರಸಿಗೆ ಹೇಳಿದರು. ಎಲೆ ಅರಸೆ ಇನ್ನು ನಿನ್ನೂರಲ್ಲಿರಲಾಗದೆನೆ ಅದೇಕೆನಲು ಭೋಗಣ್ಣ ಆಚಾರಗೆಟ್ಟನು, ನಿನ್ನಾಜ್ಞೆ ಎಂಬುದಿಲ್ಲ, ಹೊಲೆಯನ ಹಿರಿಯನ್ನೆ ಭಕ್ತನೆಂಪು ಕಾಲಿಗೆ ಬಿದ್ದ ಮೇಲೆ ವಿಪ್ರಾಚಾರವೆಲ್ಲಿಯದೆನಲು, ಅರಸನದ ಕೇಳಿ ಭೋಗಣ್ಣನ ಕರಿಸಿ ಇಂತೆಂದನು, ಶ್ವಪಚನ ಮನೆಯು ಹೊಗಿಸುವರೇ, ಎನಲು ಆದಕ್ಕೆ ಭೋಗಣ್ಣನು ನಮ್ಮ ಮನೆಗೆ ಸೂರ್ಯಭಟ್ಟ ಶ್ವಪಚನು ಬಂದನೇ, ಕೃಷ್ಣಭಟ್ಟ ಶ್ವಪಚಬಂದನೇ, ವಿಷ್ಣುಭಟ್ಟ ಶ್ವಪಚ ಬಂದನೇ, ಎನಲು ಆ ಮಾತಿಗೆ ವಿಪ್ರರು ಕೋಪಿಸಿ ಮಟ್ಟಿಯನಿಟ್ಟ ವಿಪ್ರರೆಲ್ಲರನು ಶ್ವಪಚರೆನಬಹುದೇ ಎನಲು ಆ ಮಾತಿಗೆ ಚಂದಿಮರಸು ನಮ್ಮ ಪುರದಲ್ಲಿರಬೇಡ ಹೋಗೆನಲು ಊರ ಹೋರಟು ಹೋಗುವಾಗ ಆ ಪುರದ ಲಿಂಗಗಳು ಸಂಗಡ ಹೋದವು. ಅಂತರದಲ್ಲಿ ಕೆಲವು ಭೂಮಿಯಲ್ಲಿ ಕೆಲವು ಉರುಳುತ ಕೆಲವು ಮರದ ನೆಳಲಲ್ಲಿ ಕೆಲವು ಸೋರುತಿದ್ದ ಫಲದ ರಸವೆ ಮಜ್ಜನವಾಗಿ ಉದುರುತಿಹ ಎಲೆಯೆ ಪತ್ರೆಯಾಗಿ ಈ ಪ್ರಕಾರದಲ್ಲಿ ಅಲ್ಲಿಯು ಲಿಂಗಗಳೇ ಭೋಗಣ್ಣನ ಹಿಂದಟ್ಟಿ ಹೋಗುತ್ತಿರಲು ಆ ಲಿಂಗಗಳ ಕೂಡೆ ಭೋಗಣ್ಣ ನಿಂತೆಂದನು. ದೇವಿಯರ ಬಿಟ್ಟು ಎನ್ನ ಕೂಡೆ ಹೇಗೆ ಚಳಿಗಾಳಿ ಬಿಸಿಲೊಳು ಬರುತಲೆ ಎಂದು ಬಲಗಡೆಯ ಲಿಂಗಗಳ ಬಲಗಯ್ಯೊಳಪ್ಪುತ ಸುತ್ತಲಿದ್ದ ಲಿಂಗಗಳ ಸುಳಿದಪ್ಪುತ ಎಡಗಡೆಯ ಲಿಂಗಗಳ ಎಡಗಯ್ಯೊಳಪ್ಪುತ ಹಿಂದೆ ಬರುವ ಲಿಂಗಗಳ ಬೆನ್ನಿನಲ್ಲಪ್ಪುತ ಮುಂದೆ ಬರುವ ಲಿಂಗಗಳ ಮುಂಬಪ್ಪುತ ಮೇಲೆ ಹೋಗುವ ಲಿಂಗಗಳ ತಲೆಯಲ್ಲಪ್ಪುತ ನೋಡುವ ಲಿಂಗಗಳ ನಯನದಲ್ಲಪ್ಪುತ ಸುತ್ತಲಿದ್ದ ಲಿಂಗಗಳ ಸುಳಿಸುಳಿದಪ್ಪುತ ಭೋಗಣ್ಣನೊಡನೆ ಲಿಂಗಗಳು ಹೋಗುತ್ತಿರಲು ಇತ್ತ ಪೂಜಕರು ಗುಡಿಗೆ ಹೋಗಿ ನೋಡಲು ಪೀಠಗಳಲ್ಲಿ ಲಿಂಗಗಳಿಲ್ಲದಿರೆ ಭೋಗಣ್ಣ ನೊಂದುಕೊಂಡು ಹೋದ ಕಾರಣ ಲಿಂಗಗಳು ಹೋದವು ಆವರ ಕರಿಸದಿದ್ದರೆ ಬಹಳ ಕೇಡು ಬರುವುದು ಸಮುದ್ರ ಮೇರೆದಪ್ಪಿ ಪ್ರಳಯವಾದಿತ್ತು ಎಂದು ವಿಪ್ರರು ಹೇಳಲು ಆಗ ಚಂದಿಮರಸರು ವಾದ್ಯ ಕನ್ನಡಿ ಕಳಶ ಸಹವಾಗಿ ಹೋಗಿ

ಭೋಗಣ್ಣಗೆರಗಿ ನಿಮ್ಮ ಮಹಿಮೆಯನರಿಯದ ಪಾಪಿಗಳಿಗೆ ಕರುಣಿಸು ನರಕಕೆ ಬೀಳುವವರನೆತ್ತಿಕೋ ಎನಲು ಆಗ ಕರುಣದಿಂದ ಕೆಂಭಾವಿಗೆ ತಿರುಗಿ ಬಂದರು. ಶಿವನನು ದೇವಿಯನು ಒಂದು ಗೂಡಿಸಿದಂತೆ ಲಿಂಗ ಗಳು ಪೀಠದ ಮೇಲೆ ಕುಳಿತವು. ಆಗ ಪೂಮಳೆಗರೆದವು. ಶಿವನು ಮುಚ್ಚಿ ಭೋಗಣ್ಣನ ಪುಸ್ತಕದೊಳಗಿಟ್ಟು ಕೈಲಾಸಕ್ಕೆ ಕರೆದೊಯ್ದರು.

## ೨೧೦ ನೆಯ ವಚನದ ಕಥೆ (೧೧೨—೨)

### ಬಸವ.

ಬಿಜ್ಜಳನು ಬಸವೇಶ್ವರನ ನಂದಿಯುಂಗರವ ತೆಗೆದು ಕೈಮುಗಿ ಎನೆ ಗದ್ದುಗೆಯ ಮೇಲೆ ಮಡಗಿ ಕೈಮುಗಿಯೆ ಗದ್ದುಗೆ ಉರಿಯಿತ್ತು.

## ೨೧೧ ನೆಯ ವಚನದ ಕಥೆ (೧೧೩—೩)

### ಚನ್ನಯ್ಯ.

ಕರಿಕಾಲ ಚೋಳರಾಯನು ಪಿರಿ ಒಡೆಯರೆಂಬ ಲಿಂಗಕ್ಕೆ ಮೊನೆ ಮುರಿಯದ ಸಣ್ಣ ರಾಜಾನ್ನದಕ್ಕಿಯ ಮೂನ್ನೂರರುವತ್ತು ಖಂಡುಗದ ಬೋನ ವಮಾಡಿ ಮೂವತ್ತು ಕೊಳಗದ ಮೆಣಸಿನ ಅಮ್ರುವ ಮಾಡಿ ಮೂನ್ನೂರು ಅಡ್ಡಣಿಗೆಯ ಮೇಲೆ ಮೂನ್ನೂರು ಚಿನ್ನದ ಹರಿವಾಣದಲ್ಲಿ ಎಡೆ ಮಾಡಿ ಮೂನ್ನೂರು ಚನ್ನದ ಕೆಲತಟ್ಟೆಯ ಮಡಗಿ ದೇವಾನ್ನ ದಿವ್ಯಾನ್ನ ಅಮೃತಾನ್ನ ಪದಾರ್ಥಂಗಳು ಹಪ್ಪಳ ಸಂಡಿಗೆ ಚಿಲುಪಾಲು ತುಪ್ಪ ಕೆನೆ ಮೊಸರು ಸಕ್ಕರೆಗಳ ನೀಡಿ ಜವನಿಕೆಯ ಹಾಕಿ ಹೊರಗೆ ನಿಂತು ಸಲಿ ಸುವುದನಾಲಿಸಲು ಸುಮ್ಮನಿರುವದ ಕಂಡು ತೆರೆಯ ತೆಗೆದು ನೋಡಿ ಎಡೆಗಳ ಕಂಡು ಖಡ್ಗವ ತಕ್ಕೊಂಡು ಕೊರಳ ಮೇಲೆ ಮಡಗಲು ಆಗ ಶಿವನು ಹೋ ಹೋ ನಿಲ್ಲೆಂದು ಚೆನ್ನನೊಡನೆ ಉಂಡೆವು ಎಮ ಗಿಂದು ಹಸುವಿಲ್ಲ ತೆಪ್ಪಂಬಕಳದ ಸವಿಯುವನೇನ ಬಣ್ಣಿಪೆನು ಆ ಅಂಬ ಕಳ ಸವಿ ಚೋಳಾದಿಗಳಿಗೆ ದೊರೆಯದು ನೀನು ಇನ್ನು ಭಕ್ತಿಯ ಮಾಡಿ ಕೊಂಡು ಸುಖದಲ್ಲಿರು ಎಂದು ಅರಮನೆಗೆ ಕಳುಹಿದನು.

# ೭೧೫ ನೆಯ ವಚನದ ಕಥೆ (೧೧೩—೪)

## ನಿಂಬಿಯಕ್ಕ.

ಶಿವನು ಸಿರಿಯಾಳಶೆಟ್ಟಿಯ ಕೊಟ್ಟಣದ ನಿಂಬಿಯಕ್ಕನ ಮನೆಗೆ ಬರಲು ಆಕೆ ಸಲಿಸನೀಡಲು ನಾನೊಲ್ಲೆನೆನಲು ಸಲಿಸದಿದ್ದರೆ ಒನಕೆಯಲ್ಲಿ ಹೊಯ್ದೆನೆನಲು ಶಿವನು ರೂಪದೋರಿ ಕೈಲಾಸಕ್ಕೆ ಬಾರೆನಲು ಒಲ್ಲೆನೆಂದಳು.

---

# ೭೧೮ ನೆಯ ವಚನದ ಕಥೆ (೧೧೩—೭)

ಎಲೆ ದೇವನೆ ಬ್ರಹ್ಮ ಮೊದಲಾದವರು ಬಂದು ನಿನ್ನ ಸಮೀಪಸ್ಥರಾಗಿ ಇದ್ದಾರೆ ನಿಮ್ಮ ಗೋತ್ರವೇನೆಂದು ಬೆಸಗೊಳ್ಳುತ್ತಿದ್ದೇನೆ ಎಂಬ ಗಿರೀಶ್ವರನ ವಾಕ್ಯವನು ಕೇಳಿ ಉತ್ತರಂಗೊಡದೆ ಚಿಂತಿಸುತ್ತಿರ್ದ ಈಶ್ವರನ ಕಂಡು ಸಮಸ್ತ ಲೋಕಕ್ಕೆ ಒಡೆಯತನದಿಂ ಕುಲವಿಲ್ಲವೆಂದು ಸನುಮಿಸಿದರು. ॥ಗ್ರಂಥ॥ ಬ್ರಹ್ಮಾದಯೋ ದೇವಾಸ್ತತ್ಸಮೀಪಮಿಹಾಗತಾಃ ಕಿಂಗೋತ್ರಮಿತಿ ಪೃಚ್ಛೆಯ ವಿಷಾಮಗ್ರೆ ವಿಭೋವದಾ ॥ಟೀಕು॥ ಬ್ರಹ್ಮಾದಯಃ ಬ್ರಹ್ಮ ಮೊದಲಾದಂಥ ಅಮಿದೇವಾಃ ಈ ದೇವರ್ಕ್ಕಳು ಇಹ ಇಲ್ಲಿ ತತ್ಸಮೀಪವನು ನಿನ್ನ ಸಮೀಪವನು ಆಗತಾಃ ಎಯ್ದಿದರು ಗೋತ್ರಂ ಗೋತ್ರವು ಕಿಂ ಏನು ಇತಿ ಹೀಗೆಂದು ಪೃಚ್ಛಾಮಿ ಬೆಸಗೊಳುತ್ತಿದ್ದೆನು. ಭೋ ವಿಭೋ ಎಲೆ ಒಡೆಯನೆ ಏಷಾಂ ಇವರುಗಳ ಅಗ್ರೆ ಇದಿರಲ್ಲಿ ವದ ಹೇಳು. ಶೃತ್ವಾ ತುಭಾರತಿಂ ತಸ್ಯ ವಿಶ್ವೇಶೋ ವಿಶ್ವವಂದಿತಃ ಕಿಂ ಗೋತ್ರಮಿತಿ ಸಂಚಿಂತ್ಯನೋತರಂ ಚ ನ ಸಜಹ ॥ಟೀಕು॥ ವಿಶ್ವೇಶಃ ಸಮಸ್ತಲೋಕಕ್ಕೆ ಒಡೆಯನಾದಂಥ ವಿಶ್ವವಂದಿತಾಃ ಸಮಸ್ತಲೋಕದಿಂದ ವಂದೆ ವಂದಿಸಿಕೊಳ್ಳಲ್ಪಟ್ಟಂಥ ಆ ಪರಮೇಶ್ವರನು ತಸ್ಯ ಗಿರಿರಾಜನ ಭಾರತೀವಾಕ್ಯವನು ಶೃತ್ವಾ ತು ಕೇಳಿ ಗೋತ್ರಂ ಗೋತ್ರವು ಕಿಮಿತಿ ಏನೆಂದು ಸಂಚಿಂತ್ಯ ಚಿಂತಿಸಿ ಉತ್ತರಂ ಮಾತನು ನಸರ್ಜಹ ನುಡಿದುದಿಲ್ಲ. ದೃಷ್ಟ್ವಾ ನಿರುತ್ತರಂ ಶಂಭು ಜಹಸ್ತುರ್ದೇವದಾನವಾಃ ಏಷ ಏವಜಗದ್ಯೋನಿ ಗೋಜತ್ರಮಸ್ಯೆ ಕಥಂ ಭವೇತ್ ನಿರುತ್ತರಂ ಉತ್ತರವಿಲ್ಲದೆ ಇದ್ದಂಥ ಶಂಭು ಪರಮೇಶ್ವರನು ದೃಷ್ಟ್ವಾ ಕಂಡು ದೇವದಾ

ನವ ದೇವರ್ಕಳು ರಾಕ್ಷಸರು ಜಹಂತು ನಕ್ಕರು ಏನನಿವ ಈ ಪರಮೇ ಶ್ವರನೆ ಜಗದ್ಯೋನಿಃ ಲೋಕಕ್ಕೆ ಉತ್ಪತ್ತಿ ಸ್ಥಾನವಾದಹಂಥ ಆತನು ಅಸ್ಯ ಈ ಶಿವಂಗೆ ಗೋತ್ರಂ ಗೋತ್ರವು ಕಥಂ ಭವೇತ್ ಹೇಗಹುದು.

## ೨೨೦ ನೆಯ ವಚನದ ಕಥೆ (೧೧೪---೯)

**ಬಸವ.**

ಬಸವೇಶ್ವರನ ಕೂಡೆ ಮೀಮಾಂಸಕ ತರ್ಕಕ್ಕೆ ನಿಂದೆಡೆಯೊಳು ತೃಣ ಪುರುಷನಿಂದಲೆ ಶಿವನೇ ಘನವೆಂದು ಅವನ ಗೆದ್ದ ಪ್ರಸ್ತಾವದ ವಚನ.

## ೨೨೨ ನೆಯ ವಚನದ ಕಥೆ (೧೧೪—೧೧)

**ಬಸವ.**

ಬಸವೇಶ್ವರ ದೇವರು ತೃಣಪುರುಷನಂ ಮಾಡಿ ಮೀಮಾಂಸಕಗೆ ಉತ್ತರವಂ ಕೊಡುಹೋಗೆನಲು ಆ ತೃಣಪುರುಷನು ಮಹಾಪ್ರಸಾದ ವೆಂದು ಕೈಕೊಂಡು ಮೀಮಾಂಸಕಂಗೆ ಉತ್ತರವಂ ಕೊಟ್ಟು ಶಿವವಿರ ಹಿತವಾದ ಕಾಳ್ಪುರಾಣವೆಲ್ಲವಂ ಬಯಲುಮಾಡಿ ನುಡಿಯಲು ಆತಂಗೆ ಶಿವಜ್ಞಾನ ತಲೆದೋರಿ ಆ ಬಸವೇಶ್ವರಂಗೆ ವಂದನೆಗೆಯ್ದು ಉಪದೇಶವಂ ಮಾಡಬೇಕೆನಲು ಆತಂಗೆ ವೀರಶೈವ ದೀಕ್ಷೆಯಂ ಮಾಡಿ ಷಟ್‌ಸ್ಥಲ ಮಾರ್ಗ ಕ್ರಿಯೆ ನಿರೂಪಿಸಿ ತಿಳಿಸಿದರು.

## ೨೩೨ ನೆಯ ವಚನದ ಕಥೆ (೧೧೫—೧೭)

**ಬಸವ**

ಬಸವೇಶ್ವರನು ಪೆಟ್ಟಿಗೆ ಧನವ ಜಂಗಮಕ್ಕೆ ಕೊಟ್ಟ ಮುನ್ನಿನಂತೆ ನಿರ್ಮಿಸಿದರು.

# ೨೩೩ ನೆಯ ವಚನದ ಕಥೆ(೧೧೫—೨೨)

## ಬಸವ

ಕಾಳಿಂಗ ದೇಶದ ಮಹಾದೇವ ಸೆಟ್ಟಿಯ ಮುಂದೆ ಓರ್ವ ಮಹೇಶ್ವರನು ಬಸವಣ್ಣ ಹಾಡಿದ ವಚನ ಕೊಂಡಾಡಲು ಬೇಡಿದುದ ಶರಣರಿಗೆ ನೀಡದಿದ್ದರೆ ತಲೆದಂಡ ಕೂಡಲಸಂಗ ಅವರಾದರೂ ಎಂಬ ಗೀತವಂ ಪಾಡೆ ಮಹಾದೇವ ಶೆಟ್ಟಿ ಕೇಳಿ ನಡುಗಿ ಮಡಿವಾಳ ಮಾಚಯ್ಯ. ಮೋಳಿಗೆ ಮಾರಯ್ಯ. ಆಯದಕ್ಕಿ ಮಾರಯ್ಯ ಮೊದಲಾದವರು ಹೀಗೆ ನುಡಿಯುಲಮ್ಮರು ಈ ವಚನದ ನೆವ ಪರೀಕ್ಷಿಸಿ ನೋಡಬೇಕೆಂದು ಮುತ್ತುರತ್ನಂಗಳ ಬೇಡುವೆನೆಂದು ಕಲ್ಯಾಣದ ಸಮೀಪದಲ್ಲಿದ್ದ ಶಿವಪುರದೊಳಗೆ ವಸ್ತಿಯ ಮಾಡಿದರು. ಇತ್ತ ಶಿವನು ಬಸವಣ್ಣನ ಮನವ ನೋಡುವೆನೆಂದು ಕೆಂಜೆಡೆಸರ್ಪ ಕುಂಡಲಂಗಳಂ ಧರಿಸಿ ಗಳಗಳನೆ ಬಂದು ಶಿವಯೋಗನಿದ್ರೆಯಲ್ಲಿರ್ದ ಬಸವಣ್ಣನ ಎಬ್ಬಿಸಿ ಮುಂದರಿಯದೆ ಗೀತವಂ ಪಾಡಿದೆ ಇದ ಮಹಾದೇವ ಶೆಟ್ಟಿ ಎಂಬ ಭಕ್ತನು ಚಿನ್ನ ರತ್ನಗಳ ಬೇಡುವದಕ್ಕೆ ಬರುತಿಹನು ನೀನು ಹೇಗೆ ಕೊಟ್ಟೆಯಾ ಎಂದರು. ಸಂಗಮೇಶ್ವರ ಪೇಳಿದ ಮಾತಿಂಗೆ ಶರಣರ ಮನೆಯ ಬಿರದಿನಂಕಕ್ಕೆ ಹಿಮ್ಮೆಟ್ಟೆನು ಓಡದಿರು ದೇವಾ ಎನಲು ಈತನ ನಿಷ್ಠೆಗೆ ನಿಲಲಮ್ಮದೆ ಕೈಲಾಸಕ್ಕೆ ಹೋದರು. ಇತ್ತ ಬಸವಣ್ಣ ಮಾಹೇಶ್ವರರ ನಡುವೆ ಭಯಭಕ್ತಿಯಿಂದ ಕುಳಿತಿರ್ಪ ಸಮಯದಲ್ಲಿ ಮಹಾದೇವ ಶೆಟ್ಟಿಯರು ಬಂದರೆಂಬುದ ಕೇಳಿ ಇದಿರೆದ್ದು ನಮಸ್ಕರಿಸಿ ಗದ್ದುಗೆಯಲ್ಲಿ ಮೂರ್ತವ ಮಾಡಿಸಿ ಪಾದಾರ್ಚನೆಯ ಮಾಡಿ ಗಣಂಗಳು ಸಹವಾಗಿ ಮಹಾದೇವ ಸೆಟ್ಟಿಯರ ಒಳಯಿಂಕೆ ಬಿಜಯಂಗೆಯಿಸಿ ಆರೋಗಣೆಯ ನೀಡಿ ಸಲಿಸುವಾಗ ಎಲೆ ಬಸವಣ್ಣ ನಿನ್ನ ವಚನದ ಬಿಂಕದ ಬಿರಿದ ಕೇಳಿ ನಿಮ್ಮ ಬೇಡಬಂದೆನೆಂದು ಶಿವಾಣತಿಯಿಂದ ನುಡಿ ತಡಬಡಿಸಿ ಮುತ್ತು ಮಾಣಿಕವ ಬೇಕೆಂಬುದ ಮರೆದು ಜೋಳ ಕಡಲೆ ತೊಗರೆಗಳ ಕೊಡು ಎನಲು ಆ ಮಾತಿಗೆ ಬಸವಣ್ಣ ನಕ್ಕು ನಿಮಗೆ ಭಯ ಬೇಡ ನೀವು ಏನು ಬಯಸಿದಿರಿ ಅದನೆ ಬೇಡಿ ಎನಲು ಆ ಭಕ್ತನು ಮುತ್ತು ಮಾಣಿಕ ಹೊನ್ನುಗಳು ಮೂವತ್ತು ಹೇರಾಗಬೇಕೆನಲು ಕೊಟ್ಟು ಕಳುಹಿದರು.

---

# ೨೪೮ ನೆಯ ವಚನದ ಕಥೆ(೧೧೬—೨)

## ಪಗಲ್ಟೋಳ

ಚೋಳಮಂಡಲದ ಕರವೂರಲ್ಲಿ ಪಗಲ್ಟೋಳನೆಂಬ ಭಕ್ತನಿಹನು. ಆತನು ಲಿಂಗವಲ್ಲದೆ ಅನ್ಯ ದೈವವ ನೋಡನು. ಜಂಗಮವಲ್ಲದೆ ಅನ್ಯ ದರ್ಶನವ ಮನ್ನಿಸದೆ ಹೀಗಿರುತ್ತ ಒಂದು ದಿನ ಅರಿರಾಜರ ಮೇಲೆ ದಂಡ ಕಳಹಲು ಬಳಿಕ ತಾನೇ ಹೋಗಬೇಕೆಂದು ಉಜ್ಜುಗಿಸಲು ಆಗ ಹಿರಿಯ ದಳವಾಯಿ ನೀವೇಕೆ ಹೋದಿರಿ ನಾ ಹೋದಿಹೆವೆಂದು ಹೋಗಿ ಕಾದಿ ಮೂವತ್ತು ಬಂಡಿ ತಲೆಗಳ ಹೊಯಿತರಲು ಅದರೊಳಗೆ ಒಂದು ತಲೆ ರಕ್ತದಿಂದ ನೆನೆದು ಜಡೆಗಟ್ಟಲು ಅದ ಕಂಡು ಅಯ್ಯೋ ಇದು ಜಂಗಮದ ತಲೆ ಪಾಪ ಬಂದಿತೆಂದುದು, ಪ್ರಾಣವ ಬಿಟ್ಟೆನೆಂಬಾಗ ಮಂತ್ರಿ ಎಂದನು ಇದಕೆ ಚಿನ್ನದ ತಲೆಯ ಮಾಡಿಕೊಟ್ಟರೆ ಪಾಪವಿಲ್ಲವೆನಲು ಅರಸೆಂದನು. ಇದರಿಂದಲೇನಾಗುವುದೆಂದು ತನ್ನ ಶಿರಸ್ಸ ಗುಡಿಯ ಮುಂದೆ ಕತ್ತರಸಿಕೊಂಬಾಗ ಆ ಲಿಂಗದೊಳಗಿಂದ ಶಿವನು ಜಂಗಮಕ್ಕೆ ಪ್ರಾಣವ ಕೊಟ್ಟೆವು ನಿಲ್ಲು ಎನಲು ಹಾಗಾಗಲೆಂದನು. ಆಗ ಅರಣ್ಯದಲ್ಲಿದ್ದ ಮುಂಡವು ಶಿರಸ್ಸಿನ ಬಳಿಗೆ ಬರಲು ರಾಯ ಆ ಶಿರವನೆತ್ತಿ ಮುಂಡದ ಮೇಲೆ ಇರಿಸಲು ಅದಕ್ಕೆ ಪ್ರಾಣ ಬಂದು ದಿಟದ ಜಂಗಮವಾಗಲು ಶಿವನು ಆ ಜಂಗಮದೇವರು ಸಹಿತವಾಗಿ ಪಗಲ್ಟೋಳನ ರಜತ ಪರ್ವತಕ್ಕೆ ಕೊಂಡುಹೋದನು

---

# ಪ್ರಸಾದಿಸ್ಥಲದ ವಚನದ ಕಥೆಗಳು.

## ೭ ನೆಯ ವಚನದ ಕಥೆ. (೧೧೮—೭)

### ಬಸವ

ಕಲ್ಯಾಣದಲ್ಲಿ ಬಸವೇಶ್ವರನು ತ್ರಿಪುರಾಂತಕಲಿಂಗದ ಮುಂದೆ ವಿಷವ ಅಮೃತವ ಮಾಡಿ ಮೆರೆದ ಪ್ರಸ್ಥಾವದ ವಚನ.

---

# ಪ್ರಸಾದಿಯ ಶರಣ

## ೨೬ ನೆಯ ವಚನದ ಕಥೆ. (೧೨೧—೨)

### ಕಾಟಕೋಟ ✓

ಗೋಲಗಿರಿ ಎಂಬ ಪುರದಲ್ಲಿ ಕಾಟಕೋಟನೆಂಬ ಗೊಲ್ಲನಿಪ್ಪನು. ಆತನು ಒಂದು ದಿನದಲ್ಲಿ ಆಡಿನ ಹಿಕ್ಕೆ ಲಿಂಗಾಕಾರವಾಗಿರಲು ಅದ ಕಂಡು ಮಳಲಲ್ಲಿ ಶಕ್ತಿಪೀಠವಮಾಡಿ ಹಿಕ್ಕೆಯ ತಂದಲ್ಲಿ ಮಡಗಿ ಹಾಲಿನಿಂದಭಿಷೇಕವ ಮಾಡಿ ಎಕ್ಕೆ ಕಕ್ಕೆ ಹುವ್ವಿನಿಂದ ಅರ್ಚಿಸಿ ಎದೆ ಎಂಬ ಹರೆಯ ಬಾಗಿಸಿ ಕೊಳಲನೂದುತ್ತ ಗೋಲಗಿರೀಶ್ವರಂಗೆ ಹಸಿವಾಯಿತ್ತೆಂದು ಆಡುಗಳ ಹಾಲುಕರೆದು ನೀಡುತ್ತಿರಲು ಆ ಮೇಲೆ ತಂದೆಯು ಆಡುಗಳು ಹಾಲನೇಕೆ ಕರೆವುದಿಲ್ಲ ಇದೇನು ಕಾರಣ ನೋಡಬೇಕೆಂದು ಪೂಜೆಯ ಮಾಡುವಲ್ಲಿಗೆ ಬಂದು ಆ ಪೂಜೆಯನಳಿಯಲು ಅದ ಗೊಲ್ಲಾಳಯ್ಯ ಕಂಡು ಪರಸು ಕೊಡಲಿಯಿಂದ ತಂಧೆಯ ಶಿರವನರಿವಾಗ ಶಿವನು ಮೆಚ್ಚಿದೆವು ಬೇಡು ಎನಲು ಯಾವ ಪದವಿಯನು ಒಲ್ಲೆವೆಂದು ಗುರುಕಾರುಣ್ಯವ ಪಡೆದು ವೀರಶೈವರಾಗಿ ಶಾಂಭವಲೋಕಕ್ಕೆ ಹೋದರು.

### ವೇಮಯ್ಯ

ಮೊರನ ವೇಮಯ್ಯಗೆ ಶಿವನು ಜಂಗಮವಾಗಿ ಬಂದು ಸಿದ್ಧರಸವ ಕೊಡವಲ್ಲೆನೆನೆ ಮನೆಯೊಳಗಿರಿಸಿ ಹೋಗಲು ಕಸನಲ್ಲಿ ತೊಡೆದು ಬಿಡೆ ಜಂಗಮ ಬಂದು ಸಿದ್ಧರಸವ ಕೊಡು ಎನೆ ಕಂಕುಳ ಮಲಿನ ಕೊಡಲು ಆ ಮಲಿನವ ಮಾನಸ್ತೋತ್ರಕ ಪರ್ವತದ ಮೇಲೆ ಹಿಡಿಯೆ ಅದ ಸೋಂಕಿದ ಇಂದ್ರಕೀಲ ಹೊನ್ನಾಗಲು ರುದ್ರಗೆ ಕೊಟ್ಟರು.

---

# ಪ್ರಾಣಲಿಂಗಿಸ್ಥಲದ ವಚನದ ಕಥೆಗಳು

## ೧ ನೆಯ ವಚನದ ಕಥೆ(೧೨೧—೧)

ಗ್ರಂಥ॥ ತದ್ದೇಹಮಿಂದ್ರಿಯಾಣಿವಾ। ಸರ್ವಥಾಲಿಂಗಭೋಗಿನಾಂ। ತನ್ಮುಖ ಪಂಚವಕ್ತ್ರಂಚ। ಪ್ರಾಣಲಿಂಗಸ್ಯಲಕ್ಷಣಂ॥

ಪ್ರಾಣಪೂರ್ವಗುಣವಳಿದು ಪ್ರಾಣಲಿಂಗಿಯ ದೇಹವು ಆವಾಗಲೂ ಲಿಂಗಸಹಿತವಾಗಿ ಇಂದ್ರಿಯ ಭೋಗವ ಭೋಗಿಸುವುದು ಪ್ರಾಣಲಿಂಗಿಸ್ಥಲದ ಲಕ್ಷಣವು ಹೇಗೆಂದಡೆ ಈಶ್ವರನ ಪಂಚಮುಖಕ್ಕೆ ಪಂಚೇಂದ್ರಿಯ ಮುಖಂಗಳಲ್ಲಿ ಸಮರ್ಪಿಸುವುದು.

---

## ೧೨ ನೆಯ ವಚನದ ಕಥೆ. (೧೨೩—೧೬)

### ತಂಗಟೂರು ಮಾರಯ್ಯ ೪

ತಂಗಟೂರ ಮಾರಯ್ಯಗಳು ಪ್ರಾಣಲಿಂಗಸಂಬಂಧಿಗಳಾಗಿ ಬಸವಣ್ಣನವರ ಮನೆಯ ಪಾರಿಯ ಕಾವುತ್ತಿರಲು ಅವರು ಅಪ್ಪಣೆಯಕೊಟ್ಟುದಿಲ್ಲವೆಂದು ಹನ್ನೆರಡು ವರುಷ ಮನೆಗೆ ಬಾರದಿರಲು ಬಸವಣ್ಣನದ ತಿಳಿದು ಮನೆಗೆ ಹೋಗಿ ಎಂದು ಕಳುಹಲು ಬಂದು ಸತಿಪತಿಗಳು ಪವಡಿಸಿರಲು ಒಬ್ಬರ ಲಿಂಗ ಒಬ್ಬರಿಗೆ ಪಲ್ಲಟವಾಗಿರಲು ಆಗ ಮಾರಯ್ಯ ಐಕ್ಯವಾಗಲು ಅವರ ಮನೆಯಲ್ಲಿ ಸೇವೆಯ ಮಾಡುವ ಅಕ್ಕಮ್ಮನು ಉದಕಕ್ಕೆ ಹೋದಲ್ಲಿ ಈ ಸುದ್ದಿಯ ಕೇಳಿ ತಾನು ಐಕ್ಯವಾದಳು. ಬಳಿಕ ಸತ್ಯಣ್ಣಗಳು ಮಾರಯ್ಯಗಳ ಐಕ್ಯವಾದ ಠಾವಿಗೆ ಬಂದು ಇವರು ಲಿಂಗ ಪ್ರಾಣಿಗಳೆಂಬುದ ತಿಳಿದು ಅವರವರ ಲಿಂಗವ ಅವರವರಿಗೆ ಕೊಡಲು ಸತಿಪತಿಗಳೆದ್ದರು. ಇದ ಕೇಳಿ ಅಕ್ಕಮ್ಮ ಎದ್ದು ಆಗ್ಗಣಿಯ ಕೊಂಡು ಬಂದಳು. ಇತ್ತ ಚನ್ನಬಸವೇಶ್ವರ ದೇವರು ಸತ್ಯಣ್ಣಗಳ ಲಿಂಗ ಪ್ರಾಣತ್ವವ ನೋಡಬೇಕೆಂದು ಸೆಜ್ಜೆಯೊಳಗಣ ಲಿಂಗವ ಸತ್ಯಣ್ಣ ಮಲಗಿದಾಗ ತರಿಸಿ ಬಸವೇಶ್ವರನ ಮನೆಯಲ್ಲಿ ಗದ್ದುಗೆಯ ಮೇಲಿಟ್ಟು ಎಲ್ಲರಿಗೆ ಎಡೆಮಾಡುವಂತೆ ಈ ಲಿಂಗದ ಮುಂದೆ ಎಡೆಮಾ

ಡಲು ಮಾಗಿದೇವರಾಗಿ ಸಲಿಸಿ ಮತ್ತೆ ಲಿಂಗವಾಗಲು ಕೊಂಡು ಬಂದು ಸೆಜ್ಜೆಯೊಳಗೆ ಮಡಗಿ ಚೆನ್ನಬಸವಣ್ಣ ಕೇಳುವಂತೆ ಸತ್ಯಣ್ಣಗಳೇ ಸಲಿಸು ವುದಕ್ಕೆ ಬನ್ನಿ ಎಂಪು ಬಸವಣ್ಣನ ಮನೆಯವರು ಕರೆಯಲು ನಾವು ಸಲಿಸಿದೆವೆನಲು ಅದ ಕೇಳಿ ಚೆನ್ನಬಸವಣ್ಣ ಅಚ್ಚರಿವಟ್ಟನು.

---

## ೧೬ ನೆಯ ವಚನದ ಕಥೆ. (೧೨೪—೧)

### ಮಹಾದೇವಿಯಕ್ಕ. ✓

ಗಿರಿಜೆಯಂಶವಾದ ರುದ್ರಕರ್ಣಿಕೆಯೆ ನಿರ್ಮಳ ಸುಮತೆಗೆ ಉಡು ತಡೆಯ ಮಹಾದೇವಿಯಕ್ಕನೆಂಬ ನಾಮದಿಂ ಪ್ರಸನ್ನಳಾಗಿ ಭವಿಸಂಗ ಸೋಂಕದೆ ಉಡಿಗೆ ತೊಡಿಗೆಯ ಪರಿದು ಹಾಕಿ ದಿಗಂಬರದಿ ಪರಮ ವೈರಾಗ್ಯದಿಂ ಕಲ್ಯಾಣಕ್ಕೆ ಬರಲು ಪ್ರಭುಸ್ವಾಮಿ ಮುಖ್ಯವಾದ ಶರಣರು ಒರೆದು ನೋಡಲು ಕಿನ್ನರಯ್ಯಗಳಿಂತಹ ಕಾಮನ ಸುಟ್ಟ ಭಸ್ಮವ ಗುಹ್ಯದಲ್ಲಿ ತೋರಲು ಬಸವಣ್ಣ ಮುಖ್ಯವಾದ ಪ್ರಮಥರು ಕೊಂಡಾಡಿ ಬೀಳ್ಕೊಂಡು ಕದಳಿಯಲ್ಲಿ ಮಲ್ಲಿಕಾರ್ಜುನನಲ್ಲಿ ಏಕಾರ್ಥವಾದಳು.

---

## ೨೫ ನೆಯ ವಚನದ ಕಥೆ. (೧೨೫—೧೧)

### ವಿಕ್ರಮಚೋಳ.

ಕರವೂರಿನಲ್ಲಿ ವಿಕ್ರಮಚೋಳನು ಹೊನ್ನ ದೇಗುಲವ ಮಾಡಿ ಶಿವನೊಲಿದಪ್ಪಿದನು.

### ಓಹಿಲಯ್ಯ.

ತಿರುಪನ್ನೆ ಎಂಬ ಪುರದಲ್ಲಿ ಓಹಿಲಯ್ಯನು ಭಾವಲಿಂಗ ಪೂಜೆ ಯಿಂದಿರೆ ಶಿವನು ಜಂಗಮವಾಗಿ ಬಂದು ಬೇಡು ಎನೆ ಹೃದಯವ ಬಗಿದು ಲಿಂಗವನು ಪುಷ್ಪವನು ತೋರೆ ಶಿವನೊಲಿದನು.

---

## ೨೮ ನೆಯ ವಚನದ ಕಥೆ. (೧೨೬—೩)

### ಬಸವ

ಬಸವೇಶ್ವರನು ಶಿವಯೊಗ ನಿದ್ರಾಮುದ್ರೆಯಲ್ಲಿ ಜಂಗಮದ ಕೂಡೆ ಪ್ರಾಣ ಪೋಗೆ ಚನ್ನಬಸವೇಶ್ವರ ಜಂಗಮವ ಕರಿಸೆ ಪ್ರಾಣ ಬಂದಿತ್ತು.

ಶಿವನು ಇನ್ನೊಮ್ಮೆ ಬಸವೇಶ್ವರನು ಜಂಗಮ ಪ್ರಾಣತ್ವವ ನೋಡಬೇಕೆಂದು ಕಿನ್ನರಯ್ಯನ ಪ್ರಾಣವ ಕೊಂಡೊಯ್ಯೆ ಬಸವೇಶ್ವರನು ಪ್ರಾಣವ ಬಿಡೆ ಮಡಿವಾಳಯ್ಯಗಳಿಂದ ಕಿನ್ನರಯ್ಯನ ಬಸವೇಶ್ವರನ ಪ್ರಾಣವ ಬಂದುದು.

---

## ೩೪ ನೆಯ ವಚನದ ಕಥೆ. (೧೨೭--೧)

### ಬಸವ

ಬಸವೇಶ್ವರನ ಕಿಲಾರದ ಗೋವ ಕಳ್ಳರು ಹೊಡೆದು ಬಿಡೆ ಕಳ್ಳರಿಗೆ ಜ್ಞಾನೋದಯವಾಗಿ ಗೋವನೊಪ್ಪಿಸಿ ವಂದಿಸಿ ನೂರೊಂದು ಕಳ್ಳರು ಅವರು ಗಣಂಗಳಾದರು.

---

## ೫೮ ನೆಯ ವಚನದ ಕಥೆ (೧೩೦--೫)

### ಹರಳಯ್ಯ

ಪಂಡಿತಾರಾಧ್ಯರ ಶಿಷ್ಯರು ದೊನಮಯ್ಯನು ಅವರ ಶಿಷ್ಯ ಹರಳಯ್ಯನ ಮನೆಯ ಚಚ್ಚಲನೀರ ಮಧುವಯ್ಯನ ಮನೆಯ ತೊತ್ತು ಮಾಯಿದೇವಿಯು ತಂದು ಮಿಾಯಿಸೆ ಮಧುವಯ್ಯನ ತೊನ್ನಳಿದುದು.

### ಬೊಮ್ಮಯ್ಯ

ಸೊನ್ನಲಾಪುರದಲ್ಲಿ ಅಣ್ಣ ಬೊಮ್ಮಯ್ಯನಿಂತೆಂದು ನುಡಿವನು ಸಿದ್ಧರಾಮಯ್ಯ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಗುಡಿಗಳ ಕಟ್ಟಿಸಿದರು, ನಮಗೊಂದು ಲಿಂಗಸ್ಥಾನವ ಕಟ್ಟುವುದಕ್ಕೆ ಹಣವಿಲ್ಲೆಂದು ಚಿಂತಿಸುತ್ತಿರಲು ಅದ ರಾಮಯ್ಯ ತಿಳಿದು ಅಣ್ಣ ಬೊಮ್ಮಯ್ಯನ ಕರೆದು ತಮ್ಮ ಅಂಗಳವನಗಿಸಿ ಒಂದು ಕೊಪ್ಪರಿಗೆ ಹೊನ್ನ ತೋರಲು ಆದರಿಂದ ಗುಡಿಗಳ ಕಟ್ಟಿಸಿ ಲಿಂಗವ ಪೂಜಿಸಿ ಸುಖದಲ್ಲಿದ್ದರು.

---

# ಶರಸ್ಥಲದ ವಚನದ ಕಥೆಗಳು.

## ೪ ನೆಯ ವಚನದ ಕಥೆ. (೧೩೧-೪)

### ಮಾರ್ಕಂಡೇಯ

ಭೃಗುವಿನ ಸತಿ ಖ್ಯಾತಿಯ ಮಗ ದಾತಾರನ ಮಗ ಪ್ರಾಣ ಈತಗೆ ಮೇರುವಿನ ಸತಿ ಧರಣಿಯ ಮಗಳು ಸತಿಯಾದಳು. ಈಕೆಯ ಮಗ ಮೃಕಂಡುವಿನ ಸತಿ ಹೇರಂಬದೇವಿ ಇವರಿಬ್ಬರು ರಾಮದಿಪುರದ ವನದಲ್ಲಿ ತಪವ ಮಾಡುವಾಗ ಶಿವ ಮೆಚ್ಚಿ ಏನು ಬೇಕೆನಲು ಮಗ ಬೇಕೆನಲು ಹದಿನಾರು ವರುಷ ಬದುಕುವ ಬಲ್ಲಿದ ಬೇಕೋ ನೂರು ವರುಷ ಬದುಕುವ ಹೆಡ್ಡ ಬೇಕೋ ಎನಲು ಹದಿನಾರು ವರುಷದ ಪ್ರೌಢ ಬೇಕೆನಲು ಅಂತವನೆ ಹುಟ್ಟಲು ಬಳಿಕ ಹದಿನಾರು ವರುಷಕ್ಕೆ ವೇದಶಾಸ್ತ್ರಂಗಳ ಪಠಿಸಿ ಸುಖದಲ್ಲಿರುವಾಗ ಆಯುಷ್ಯ ತೀರಿತ್ತೆಂದು ತಂದೆ ತಾಯಿಗಳು ಅಳುತ್ತಿರಲು ನಿಲ್ಲಿಸಿ ಲಿಂಗದ ಪೂಜೆಯ ಮಾಡುತ್ತಿರಲು ಯಮ ಬಂದು ಪಾಶವ ಹಾಕಲು ಶಿವನೇ ಎಂದು ಮೊರೆಯಿಟ್ಟು ಲಿಂಗವನಪ್ಪಿಕೊಳ್ಳಲು ಶಿವನು ಯಮನ ಒದ್ದು ಕೆಡಹಿ ಮಾರ್ಕಂಡೇಯ ಮೆಚ್ಚಿದೆ ಬೇಡು ಎನಲು ಎಂದೆಂದು ಹದಿನಾರು ವರುಷದ ಪ್ರಾಯ ವಾಗಿರುವದ ಕೊಡು ಎನಲು ಹಾಗೆ ಬದುಕು ಎಂದು ವರವ ಕೊಟ್ಟು ಶಿವನು ಹೋದನು.

---

## ೨೨ ನೆಯ ವಚನದ ಕಥೆ. (೧೩೪-೪)

### ಬಸವ

ಬಸವೇಶ್ವರನರಮನೆಯಲ್ಲಿ ಪ್ರಸಾದವಂ ಕರಿಯ ಬಿಡಾಲ ಮುಟ್ಟು ತ್ತಿರೆ ಬಸವೇಶ್ವರನು ಬಿಜ್ಜಳನೋಲಗದಿ ಚುಃ ಚಾಃ ಎಂದು ಕೈಯ್ಯ ಚಪ್ಪ ಳಿಕ್ಕೆ ಬಿಜ್ಜಳನಿದೇನೆಂದು ಕೇಳೆ ಪ್ರಸಾದವ ಬಿಡಾಲ ಮುಟ್ಟುತ್ತಿರೆ ಹೊಡೆ ದೆವು. ೧೦ ಚರರ ಕಳುಹಿ ನೋಡಿಸಿ ನಿಜವೆನೆ ಅರಸು ತಾವೇ ಹೋಗಿ ನೋಡಲು ಜಂಗಮದ ಪಾದಾರ್ಚನೆಯ ಕೊಳನ ಕಂಡು ಇದು ಓಕುಳಿಯೋ ಎಂದು ಬಸವಣ್ಣನ ಕೇಳೆ ಜಂಗಮದ ಪಾದಪರುಷದ ರಸವೆನೆ ಮತ್ತೊಂದು ಕಬ್ಬುನದ ಮೊಟ್ಟೆಗಳ ಹಾಕಿ ತೆಗೆಯೆ ಸುವರ್ಣವಾಗೆ ಮುಂದೆ ಎಸೆಯೆ ಬಸವೇಶ್ವರಗೆ ದಂಡಪ್ರಣಾತನಾಗಿ ಸಾಷ್ಟಾಂಗವೆ ರಗಿ ವಂದಿಸಿ ರತ್ನಾಂಬರವ ಕಾಣಿಕೆಗೆ ತನ್ನ ಶಿರವನಿಕ್ಕಿದನು.

---

# ಅಕ್ಷರಾನುಗುಣ ವಿಷಯಸೂಚಿಕೆ.

*R. N. B. 2554.*

# ಶಿವಾನುಭವ



ಸಂಪಾದಕ

**ರಾ|| ಸಾ|| ಫ. ಗು. ಹಳಕಟ್ಟಿ**

ಬಿ. ಎ. ಎಲ್. ಎಲ್. ಬಿ.

**ವಿಜಾಪುರ**



**ಸಂಪುಟ ೯ ಸಂಚಿಕೆ ೬**

**ಮಾರ್ಚ**

**೧೯೩೫**

ವಾ. ವರ್ಗಣಿ ೪-೪-೦ ]  [ ಬಿಡಿಸಂಚಿಕೆ ೦-೧೨-೦

# ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೯ ] ಮಾರ್ಚ ೧೯೩೪ [ ಸಂಚಿಕೆ ೬

## ಶೂನ್ಯಸಂಪಾದನೆಯ ರಹಸ್ಯ.

(ಲೇ:— ಕಲ್ಯಾಣಪ್ಪ ಬ್ಯಾಳಿ, ಬಿ. ಏ. ವಿಜಾಪುರ)

### ೯ ಮಡಿವಾಳಯ್ಯಗಳ ಸಂಪಾದನೆ.

ಗುರು ಹರ ಚರ ಸಾಹಿತ್ಯದ
ನಿರುಗೆಯ ಸುಜ್ಞಾನದಿರವ ಘನಲಿಂಗೈಕ್ಯಂ ।
ಪರಮ ಪ್ರಭು ಮಡಿವಾಳಗೆ
ಬರೆದುದ ನಾಂ ಪೇಳ್ವೆ ಶರಣಜನರಿಂಗೊಲವಿಂ ॥

ಮೇಲಿನ ಪದ್ಯದಲ್ಲಿ ಪ್ರಭುವು ಮಡಿವಾಳ ಮಾಚಿದೇವರಿಗೆ ಹರ ಗುರು ಚರ ಸಾಹಿತ್ಯ ಮೊದಲಾದ ವಿಷಯದಲ್ಲಿ ಪರೀಕ್ಷೆ ಮಾಡಿದ್ದರಿಂದ ಈ ಸಂಪಾದನೆಗೆ ಮಡಿವಾಳಯ್ಯಗಳ ಸಂಪಾದನೆಯೆಂಬ ಹೆಸರು ಬಂದಿದೆ. ಮಡಿವಾಳನೆಂದರೆ ಶರಣರ ಮೈಲಿಗೆಯ ಬಟ್ಟೆಗಳನ್ನು ತೊಳೆಯುವ ಸರ್ವಸಾಮಾನ್ಯ ಅಗಸನೆಂದು ಯಾರೂ ಭಾವಿಸಲಾಗದು. ಮಾನವರ ಮಲತ್ರಯಗಳನ್ನು ಹೋಗಲಾಡಿಸಿ ಅವರನ್ನು ಪಾವನರನ್ನಾಗಿ ಮಾಡುವ ಪವಿತ್ರಾತ್ಮನವನು. ಆತನ ತನು ಶುದ್ಧ, ಮನ ಶುದ್ಧ, ಭಾವ ಶುದ್ಧ ಆತನ ನುಡಿಯಲ್ಲಿ ಪ್ರಸಾದವಿದೆ. ನಡೆಯಲ್ಲಿ ಗಾಂಭೀರ್ಯವಿದೆ. ಕುಲದಲ್ಲಿ ಮಡಿವಾಳನಾದರೂ ನೆಲೆಯಲ್ಲಿ ಪರಶಿವನ ಸ್ವರೂಪನಾಗಿದ್ದಾನೆ. "ಕುಲವೇನೋ ಅವಂದಿರ ಕುಲವೇನು? ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ಲಿಂಗಸುಖಿಗಳಾದ ನಮ್ಮ ಕೂಡಲಸಂಗನ ಶರಣರೇ ಕುಲಜರು" ಎಂಬೀ ಬಸವನ ನುಡಿಗೆ ಮಡಿವಾಳ ತಂದೆಗಳೇ ಸಾಕ್ಷಿ. ಮಾಚಿದೇವರಂಥ ಆಯಾಯ ಕುಲದಲ್ಲಿ ಜನಿಸಿದ ಅನರ್ಘ ರತ್ನಗಳೆಷ್ಟೋ ಬಸವಣ್ಣನವರಿಗೆ ದೊರೆತದ್ದರಿಂದ ಅವರ ಅಧ್ಯಾ

ತ್ರಿಕ ಪ್ರಭೆಯು ದೈದೀಪ್ಯಮಾನವಾಗಿ ಬೆಳಗಹತ್ತಿತು. ಮಡಿವಾಳ ತಂದೆ ಗಳು ಬಸವಣ್ಣನವರಿಂದಲೇ ತಮಗೆ ಸರ್ವಸ್ವಾಯತವಾಯಿತ್ತೆಂಬದನ್ನು ಪ್ರಭುದೇವರೆದುರಿಗೆ ನಿರ್ವಂಚನೆಯಿಂದ ಉಸುರಿದ್ದಾರೆ. ಈ ಮಾತನ್ನೇ ಪ್ರಭುದೇವರು ಈ ಸಂಪಾದನೆಯಲ್ಲಿ ಪರೀಕ್ಷಿಸಿ ನೋಡುತ್ತಾರೆ.

ಪ್ರಭುದೇವರು ಚನ್ನಬಸವರಾಜದೇವರೊಂದಿಗೆ ಶಿವಾನುಭವ ಗೋಷ್ಠಿಯ ಮಾಡುವ ಸಂದರ್ಭದಲ್ಲಿ ಅವರನ್ನು ಸ್ತುತಿಸಿ ನುಡಿದುದೇನಂದರೆ, "ತನುವ ಗುರುವಿಂಗರ್ಪಿಸಿ, ಮನವ ಲಿಂಗಕ್ಕರ್ಪಿಸಿ, ಭಾವವ ಜಂಗಮಕ್ಕರ್ಪಿಸಿ ನಿತ್ಯಪ್ರಸಾದಿಯಾಗಿ ಪ್ರಸಾದದ ಹಾದಿಯನ್ನೆಲ್ಲರಿಗೆ ತೋರಿ ಮಹಾಪ್ರಸಾದದ ಬೆಳವಿಗೆಯ ಮಾಡಿದನು ಗುಹೇಶ್ವರನ ಶರಣ ಚನ್ನಬಸವಣ್ಣನು."

ಅದಕ್ಕೆ ಚನ್ನಬಸವಣ್ಣನವರು ಉತ್ತರ ಕೊಟ್ಟದ್ದೇನಂದರೆ, "ಎನ್ನ ಶಿವಜ್ಞಾನ, ಮಹಾಪ್ರಸಾದಿತ್ವಗಳು ಮಡಿವಾಳ ಮಾಚಿತಂದೆಗಳಿಂದಲೂ ಬಸವಣ್ಣನವರಿಂದಲೂ ಪ್ರಾಪ್ತವಾದವು. ಪ್ರಭುವೇ, ಮಹಾಪ್ರಸಾದದ ಮಹಿಮೆಯ ನಾನೆತ್ತ ಬಲ್ಲೆನು? ಮಡಿವಾಳ ತೋರಲ್ಕೆ ಅರಿವು ಕಂದೆರವಾದುದ ಕಂಡೆನು. ಬಸವಣ್ಣನಿಂದ ಭಕ್ತಿಯ ಮುಸುಗು ಕಂದೆರವಾದುದ ಕಂಡೆನು. ಬಸವ ಮಡಿವಾಳ ತಂದೆಗಳು ಪರಾರ್ಥವನಾರೋಗಿಸಿ ಕೊಡಲು ಪ್ರಸಾದಿಯಾದೆನು ಕಾಣಾ ಪ್ರಭುವೇ"

ಇದನ್ನು ಕೇಳಿ ಮಡಿವಾಳಯ್ಯನು ನುಡಿದುದೇನಂದರೆ "ಪ್ರಭುವೇ, ಅಂಗವೇ ಲಿಂಗವಾಗಿ, ಲಿಂಗವೇ ಪ್ರಾಣವಾಗಿ, ಜಂಗಮವೇ ಭಾವವಾಗಿ, ಪ್ರಾಣವೇ ಪ್ರಸಾದವಾಗಿ ಪ್ರಸಾದವೇ ಪ್ರಾಣವಾಗಿ ಇರುವ ನಮ್ಮ ಕಲಿದೇವಯ್ಯ ಚನ್ನಬಸವಣ್ಣನ ಪ್ರಸಾದವ ಕೊಂಡು ನಾನು ಬದುಕಿದೆನು ಕಾಣಾ."

ಆಗ ಪ್ರಭುವು ಮಾಚಿದೇವರನ್ನು ಪರೀಕ್ಷಿಸಿ ನೋಡುವ ಉದ್ದೇಶದಿಂದ ಈ ಪ್ರಕಾರ ಪ್ರಶ್ನೆ ಮಾಡಿದರು. "ಎಂತಯ್ಯ ಮಡಿವಾಳ, ನಿನಗೆ ಪ್ರಸಾದವು ಸಾಧ್ಯವಾದ ಪರಿಯನ್ನು ಹೇಳಾ. ನಿನ್ನ ಮನವೆಲ್ಲ ವಿರಸ, ನುಡಿಯೆಲ್ಲ ಸರಸ. ಮಾತಿನಲ್ಲಿ ಅಹಂಕಾರ ತುಂಬಿದೆ. ಅರುಹಿನ ಕುರುಹಿನ ಮರವೆ ಮಾತಿನೊಳಗಿದೆ. ಹೀಗಿದ್ದು ನಿನಗೆ ಪ್ರಸಾದದ ನಿಜವೆಂತು ಸಾಧ್ಯವಪ್ಪುದು? ಕುರುಹನಳಿದು ಕುರುಹನರಿಯ ಬಲ್ಲಡೆ ಗುಹೇಶ್ವರ ಲಿಂಗದ ಪ್ರಸಾದ ಸಾಧ್ಯವಾಯಿತ್ತು ನೋಡಾ."

ಅದಕ್ಕೆ ಮಡಿವಾಳಯ್ಯಗಳು ವಿನಯದಿಂದ ಉತ್ತರ ಕೊಟ್ಟಿದ್ದೇನಂದರೆ, "ಪ್ರಭುವೇ, ಎನ್ನ ಆದಿ ಅನಾದಿಗಳನ್ನು ನೀನೇ ಬಲ್ಲೆ. ಬಸವಣ್ಣನ ದೆಸೆಯಿಂದ ಒಡಲುಗೊಂಡು ನಾನು ಮರ್ತ್ಯಕ್ಕೆ ಬಂದೆನೆಂಬುದ ನೀನೆ ಬಲ್ಲೆ. ಅಂದ ಮೇಲೆ ನನಗೆ ಒಡಲುಪಾಧಿಯೆಂಬುದಿಲ್ಲ ನೋಡಾ. ಎನ್ನ ಒಡಲೇ ಬಸವಣ್ಣ, ಪ್ರಾಣವೇ ಚನ್ನಬಸವಣ್ಣ, ಮಹಾಜ್ಞಾನವೇ ನೀವು ನೋಡಾ. ಇಂತು ಎರಡಿಲ್ಲದಿಪ್ಪ ಸುಡಿಯು ನಿಮ್ಮ ಶರಣ ಬಸವಣ್ಣ ಬಲ್ಲ ಕಾಣಾ ಕಲಿದೇವರ ದೇವಯ್ಯ."

ಬಳಿಕ ಪ್ರಭುವು ಪುನಃ ಪ್ರಶ್ನೆ ಮಾಡಿದ್ದೇನಂದರೆ "ಗುರುವಿದು, ಲಿಂಗವಿದು, ಜಂಗಮವಿದು ಎಂಬ ಭೇದವ ಏಕ ಮಾಡಿ ನಿನಗೆ ತೋರಿದವರಾರು ಹೇಳಾ? ದೀಕ್ಷೆ, ಶಿಕ್ಷೆ, ಸ್ವಾನುಭವದ ಪರಿಯ ತೋರಿದವರಾರು ಹೇಳಾ? ಗುಹೇಶ್ವರ ಲಿಂಗದಲ್ಲಿ ನಿನ್ನ ಆಯತವ ಹೇಳಾ ಮಡಿವಾಳ ಮಾಚಯ್ಯ"

ಈ ಮಾತಿಗೆ ಮಡಿವಾಳಯ್ಯಗಳು "ಪ್ರಭುವೇ, ನಿಮ್ಮ ಬಸವಣ್ಣನ ಪ್ರಸಾದದಿಂದ ಎನಗೆ ಭಕ್ತಿ ಜ್ಞಾನ ಶಿವಾಚಾರಗಳು ಸ್ವಾಯತವಾದವು. ನೀವು ಆ ಬಸವಣ್ಣನಿಂದಾದಿರಾಗಿ ಬಸವಣ್ಣಂಗೆ ನಮೋ ನಮೋ ಎಂಬೆನು ಕಾಣಾ ಕಲಿದೇವರ ದೇವಾ. ಆದಿಯುಗದಲ್ಲಿ ಒಬ್ಬ ಮಾಯಾಂಗನೆಯು ಹಲವು ಬಣ್ಣದ ವಸ್ತ್ರವನ್ನುಟ್ಟು ಹೆಡಿಗೆ ತುಂಬಿದ ದೇವರ ಹೊತ್ತುಕೊಂಡು 'ಓ ದೇವ ಕೊಳ್ಳಿರಯ್ಯ, ಓ ದೇವ ಕೊಳ್ಳಿರಯ್ಯ ಎಂದರೆ ಆ ದೇವರನಾರೂ ಕೊಂಬುವರಿಲ್ಲ. ನಾನೊಂದರುವೆಯ (ಜ್ಞಾನ) ಕೊಟ್ಟು ಆ ದೇವರ ಕೊಂಡು ಎನ್ನ ಹೆತ್ತ ತಂದೆ ಬಸವಣ್ಣನ ಪ್ರಸಾದದಿಂದ ಬದುಕಿದೆನು ಕಾಣಾ ಪ್ರಭುವೇ. ಎಲ್ಲ ಭಕ್ತಿಯ ಭೇದವನು, ಎಲ್ಲ ಶೀಲದ ಭೇದವನು ಬಸವಣ್ಣ ಮಾಡಿದನು. ಆದಿ ಅನಾದಿಗಳನ್ನೂ ಲಿಂಗಜಂಗಮರನ್ನೂ ಮಾಡಿದವನಾತನೇ. ಎನ್ನ ಸರ್ವಸ್ವಾಯತವನು ಬಸವಣ್ಣ ಮಾಡಿದ ಕಾರಣ ಆ ಬಸವಣ್ಣನ ನೆನೆದು ಬದುಕಿದೆನು ಕಾಣಾ ಪ್ರಭುವೇ."

ಇದಲ್ಲದೆ ಬಸವನಿಂದಲೇ ತನಗೆ ಸರ್ವಸ್ವಾಯತವಾಯಿತೆಂದು ಮಡಿವಾಳತಂದೆಗಳು ಪುನಃ ಅರಿಕೆಮಾಡಿಕೊಂಡಿದ್ದೇನಂದರೆ "ಶಿವ ತಾನೀತ ಮರ್ತ್ಯಲೋಕವ ಪಾವನಮಾಡಲು, ಗುರು ತಾನೀತ. ಭವರೋಗವ ನೀಗಲು, ಭಕ್ತ ತಾನೀತ ಭಕ್ತಿಯ ವಿಸ್ತಾರವ ತೋರಲು, ಜಂಗಮ

ತಾನೀತ ಅನಾದಿ ಸಂಸಿದ್ಧಘನಮಹಿಮೆಯನರುಹಲು, ಲಿಂಗಕಾನೀತನೆನ್ನ ಪ್ರಾಣವಾಗಿ ತೋರಲು —ಎನಗೆ ಸರ್ವಸ್ವಾಯತವ ಮಾಡಿದ ಮಹಾ ಮಹಿಮನೀತ ಕಾಣಾ ಕಲಿದೇವರ ದೇವ. ನಿಮ್ಮ ಶರಣ ಬಸವಣ್ಣನು ಎನ್ನ ಅರಿವನು ಆಯತದಲ್ಲಿ ನಿಲಿಸಿ ನಿಜಸ್ವಾಯತವ ಮಾಡಿದನು ಕಾಣಾ ಪ್ರಭುವೇ.

ಅದಕ್ಕೆ ಪ್ರಭುವು ಅಪ್ಪಣೆಕೊಡಿಸಿದ್ದೇನಂದರೆ ''ಮಡಿವಾಳಾ, ಅರಿವು ಉದಯವಾದಲ್ಲಿ ಮರವು ನಷ್ಟವಾಗುವದು. ಮರವು ನಷ್ಟವಾದ ಬಳಿಕ ಅರಿವು ಸ್ವಾಯತವಾಗುವದು. ಅರಿವು ಸ್ವಾಯತವಾದ ಮೇಲೆ ಗುರು ವಾರು? ಲಿಂಗವಾರು? ಆವುದು ಘನ? ಆವುದು ಕಿರಿದು? ಹೇಳಾ. ನಿನಗೆ ಅರಿವು ಸ್ವಾಯತವಾಗಿದ್ದರೆ ಗುಹೇಶ್ವರ ಲಿಂಗದಲ್ಲಿ ನಿನಗೆ ನಿಜವು ಸಾಧ್ಯ ವಾದ ಪರಿಯೆಂತು?

ಇದನ್ನು ಕೇಳಿ ಮಡಿವಾಳತಂದೆಗಳು "ಅಯ್ಯ ಪ್ರಭುವೇ ಅರಿವಿನಿಂ ದಲೇ ಗುರುವನ್ನು ಕಾಣಬೇಕು. ಲಿಂಗವನ್ನುಕಾಣಬೇಕು. ಜಂಗಮ ವನ್ನು ಕಾಣಬೇಕು. ಇಂತೀ ತ್ರಿವಿಧವು ಬಸವಣ್ಣನ ಕೃಪೆಯಿಂದ ನನಗೆ ಸಾಧ್ಯವಾಯಿತ್ತಾಗಿ ಭಿನ್ನವಿಲ್ಲ ಕಾಣಾ ಕಲಿದೇವರದೇವಾ. ಅರಿವಿನಿಂದಲೇ ಗುರುವಾದ ನಿಮ್ಮ ಪ್ರಸಾದ ಹೊಂದಲು ನಾನು ಸಿದ್ಧನಿರುವೆನು ಕೇಳಾ ಪ್ರಭುವೇ." ಎಂದು ಬಿನ್ನೈಸಿದರು.

ಇದಕ್ಕೆ ಪ್ರಭುದೇವರು ನಿರೂಪಿಸಿದ್ದೇನಂದರೆ "ಗುರು ಸ್ವಾಯತವಾ ದರೆ ತನುವಿಲ್ಲದಿರಬೇಕು. ಲಿಂಗಸ್ವಾಯತವಾದರೆ ಮನವಿಲ್ಲದಿರಬೇಕು. ಜಂ ಗಮ ಸ್ವಾಯತವಾದರೆ ಅರಿವರಿತು ಮರವು ನಷ್ಟವಾಗಿರಬೇಕು. ಗುಹೇ ಶ್ವರಲಿಂಗದಲ್ಲಿ ತನುಮನಭಾವ ನಿರ್ಲೇಪವಾದರೇನೇ ಪ್ರಸಾದವು ದೊರ ಕೊಳ್ವದು ನೋಡಾ ಮಾಚಯ್ಯ."

ಹೀಗೆನ್ನಲು ಮವವಾಳಯ್ಯಗಳು "ಪ್ರಭುವೇ, ಎನ್ನ ತನುವಿನಲ್ಲಿ ಜಡತ್ವವೆಂಬುದಿಲ್ಲ, ಮನದಲ್ಲಿ ವ್ಯಾಕುಲತೆಯೆಂಬುದಿಲ್ಲ, ಭಾವದಲ್ಲಿ ಬಯಕೆ ಯೆಂಬುದಿಲ್ಲ, ಅಂದಮೇಲೆ ತನುಮನಭಾವ ನಿರ್ಲೇಪವಾದ ನನಗೆ ಪ್ರಸಾ ದವು ಹೇಗೆ ಸಾಧ್ಯವಲ್ಲ ಹೇಳಾ ಕಲಿದೇವರದೇವಾ" ಎಂದು ಅರಿಕೆಮಾ ಡಿಕೊಂಡರು.

ಆಗ ಪ್ರಭುದೇವರು ನುಡಿದುದೇನಂದರೆ "ಅಯ್ಯಾ, ಕಾಮಕ್ರೋಧ ಲೋಭಾದಿಗಳನ್ನು ಮನದಲ್ಲಿ ತುಂಬಿಕೊಂಡು ತನುಮನ ಶುದ್ಧವಾಯಿ

ತ್ತೆಂದರೆ ನಮ್ಮ ಗುಹೇಶ್ವರ ಲಿಂಗ ಮೆಚ್ಚ ನೋಡಾ. ನನ್ನಲ್ಲಿ ಅದು ಇಲ್ಲ ಇದು ಇಲ್ಲವೆಂದು ಬರೀ ಬಾಯಿಮಾತನಾಡುವ ಡಂಭಕರಿಗೆ ನಮ್ಮ ಗುಹೇಶ್ವರನ ಪ್ರಸಾದವೆಂತು ಲಭಿಸುವದು ಹೇಳಾ ಮಡಿವಾಳ ಮಾಚಯ್ಯಾ"

ಅದಕ್ಕೆ ಮಾಚಿದೇವರು ಉತ್ತರಕೊಟ್ಟಿದ್ದೇನಂದರೆ "ಪ್ರಭುವೇ, ಕಾಮದ ಕರಸ್ಥಲದಲ್ಲಿ ಗುರು ಸ್ವಾಯತವ ಮಾಡಿದೆನು. ಕ್ರೋಧದ ನಯನದಲ್ಲಿ ಜಂಗಮಸ್ವಾಯತವ ಮಾಡಿದೆನು. ಲೋಭವಿಲ್ಲದೆ ಪ್ರಸಾದವ ಗ್ರಹಿಸಿದೆನು. ಇಂತೀ ತ್ರಿವಿಧದಲ್ಲಿ ಶುದ್ಧನಾದೆನು ಕಾಣಾ ಕಲಿದೇವರ ದೇವಾ ನಿಮ್ಮಾಣೆ. ಇದಲ್ಲದೆ ಅಯ್ಯಾ, ನೀವು ಮೂರ್ತಿಮಂತ ಲಿಂಗವಾದ ಕಾರಣ ನಿಮ್ಮ ಅರ್ಚನೆಯಿಂದ ಎನ್ನ ತನು ಶುದ್ಧವಾಯಿತ್ತು. ನೀವು ಜಂಗಮವಾದ ಕಾರಣ ನಿಮ್ಮ ಸಂದರ್ಶನದಿಂದ ಎನ್ನ ಮನ ಶುದ್ಧವಾಯಿತ್ತು. ನಿಮ್ಮ ಪ್ರಸಾದವು ದೊರಕೊಂಡಿತ್ತಾದ ಕಾರಣ ಎನ್ನ ಕಾಮಕ್ರೋಧಾದಿಗಳಳಿದವಯ್ಯಾ ಪುಸಿಯಲ್ಲ ಕಲಿದೇವರದೇವಾ."

ಈ ಮಾತಿಗೆ ಪ್ರಭುದೇವರು ಈ ಪ್ರಕಾರವಾಗಿ ಅಪ್ಪಣೆ ಕೊಡಿಸಿದರು "ಕುರುಹು ಹಿಡಿದು ತನು ಮನ ಶುದ್ಧವಾದರೆ ಪರಸುಖ ದೊರೆಯದು ನೋಡಾ. ಕುರುಹ ನಳಿದು ಅರಿವ ಹಿಡಿದು ಭಾವ ಶುದ್ಧವಾದಲ್ಲಿ ಪರಮಸುಖ ನೆಲಿಸಿರ್ಪುದು ನೋಡಾ. ಕುರುಹನಳಿದು ಕೂಡುವ ಪರಮಸುಖವು ಗುಹೇಶ್ವರ ಲಿಂಗದಲ್ಲಿ ನಿನಗೆ ಸಾಧ್ಯವಾದ ಪರಿಯ ಹೇಳಾ ಮಡಿವಾಳ ಮಾಚಯ್ಯಾ."

ಇದಕ್ಕೆ ಮಡಿವಾಳ ತಂದೆಗಳು ಪ್ರತ್ಯುತ್ತರವಿತ್ತುದೇನಂದರೆ "ಅಯ್ಯಾ ಪ್ರಭುವೇ, ಕುರುಹು ಹಿಡಿದು ತನುಮನಶುದ್ಧವಾಗಿ ಪರ ಸುಖವನನುಭವಿಸುವ ಎನ್ನ ಪರಿಯ ನಿಮ್ಮ ಶರಣ ಬಸವಣ್ಣ ಬಲ್ಲ. ಬೆಸಗೊಳ್ಳಾ ಕಲಿದೇವರ ದೇವಾ."

ತನ್ನ ಅಂತಸ್ಥಿತಿಗತಿಗಳನ್ನು ಬಸವಣ್ಣನಿಂದ ಕೇಳಿಕೊಳ್ಳೆಂದು ಬಿನ್ನವಿಸಲು ಪ್ರಭುದೇವರು ಬಸವೇಶನನ್ನು ಕುರಿತು "ಮನಮನ ಬೆಂಸಿ ಸಮರತಿಯ ಸಂಗದಲ್ಲಿ ಸುಖಿಗಳಾಗಿಪ್ಪ ಶರಣರ ಸಂಗಸುಖವನು ಶರಣರೇ ಬಲ್ಲರಲ್ಲದೆ ಕೆಲದಲ್ಲಿದ್ದವರಿಗೆ ತಿಳಿಯಬಹುದೇ? ಗುಹೇಶ್ವರ ಲಿಂಗದಲ್ಲಿ ಮಡಿವಾಳ ಮಾಚಯ್ಯನ ಪರಿಯ ನೀನೆ ಬಲ್ಲೆ. ಅದನ್ನು ಎನಗೊಮ್ಮೆ ಹೇಳಾ ಸಂಗನಬಸವಣ್ಣಾ" ಎಂದು ಕೇಳಿಕೊಂಡರು

ಅದಕ್ಕೆ ಬಸವರಾಜ ದೇವರು ಬಿನ್ನೈಸಿದ್ದೇನಂದರೆ "ಅಯ್ಯಾ' ಎನ್ನ ಕಾಯದ ಕತ್ತಲೆಯು ಕಳೆಯಲರಿಯೆನು. ಎನ್ನ ಜೀವದ ನಿಲವ ಗೆಲಲರಿಯೆನು. ನಾನೆಂತು ಬಲ್ಲೆನಯ್ಯ ನಿಮ್ಮ ಘನಮಹಿಮರ ನಿಲವ? ಕೂಡಲಸಂಗಮದೇವಾ ನಿಮ್ಮ ಶರಣ ಮಡಿವಾಳ ಮಾಚಿದೇವರಘನವ ನೀವೇ ಬಲ್ಲಿರಿ.

ಅದನ್ನು ಕೇಳಿ ಪ್ರಭುದೇವರು ಪುನಃ ಮಡಿವಾಳಯ್ಯಗಳಿಗೆ ಬೆಸಗೊಂಡದ್ದೇನಂದರೆ "ಯುಕ್ತಿಯ ಕೇಳಿದರೆ ಭಕ್ತಿಯ ತೋರಿದ. ಭಕ್ತಿಯ ಕೇಳಿದರೆ ಯುಕ್ತಿಯ ಹೇಳಿದ. ನಾನೊಂದು ಕೇಳಿದರೆ ತಾನೊಂದು ಹೇಳಿದ ಗುಹೇಶ್ವರನ ಶರಣ ಸಂಗನಬಸವಣ್ಣ ಮರೆಗೆ ಮರೆಯನೊಡ್ಡಿ ಜಾರಿದನು. ಮಾಚಯ್ಯ, ಶರಣ ಬಸವಣ್ಣನ ಪರಿಯು ಎಂತಪ್ಪುದು ನೀನು ಹೇಳಾ ಗುಹೇಶ್ವರಾ."

ಆಗ ಮಡಿವಾಳ ತಂದೆಗಳು ಬಸವರಾಜದೇವರ ಮಹಾತ್ಮೆಯನ್ನು ಹೀಗೆ ಬಿನ್ನೈಸಿದರು "ಅಯ್ಯಾ ಪ್ರಭುವೇ, ಬಸವಣ್ಣನು ಮರ್ತ್ಯಕ್ಕವತರಿಸಿ ಜಗತ್ತನ್ನು ಶಿವಮಯವಾಗಿ ಮಾಡಿದನು. ತಾನು ನಿಮ್ಮಲ್ಲಿ ಭಕ್ತಿದಾಸೋಹವನ್ನಳವಡಿಸಿಕೊಂಡನು. ಆದಿಯಲ್ಲಿ ಶಿವಲಿಂಗಾರ್ಚನೆ, ಶಿವಪ್ರಸಾದ, ಜಂಗಮಾರಾಧನೆಗಳ ಮಹತ್ವವನ್ನು ತೋರಿಸಿಕೊಟ್ಟಾತನೀತನೇ. ಬಸವಣ್ಣನ ತನುಮನ ಭಾವಸರುಷಬಸವಣ್ಣನ ನೆನೆವುದೇ ಲಿಂಗಾರ್ಚನೆ. ಬಸವಣ್ಣನ ನೆನೆವುದೇ ಪರತತ್ವ. ಬಸವಣ್ಣನ ನೆನೆವುದೇ ಕಲ್ಯಾಣವೆನಗೆ ಕಲಿದೇವರದೇವಾ. ನಿಮ್ಮ ಶರಣ ಬಸವಣ್ಣನಿಂತಹ ಮಹಿಮ ನೋಡಯ್ಯಾ."

ಬಳಿಕ ಪ್ರಭುವು ಅಪ್ಪಣೆಕೊಡಿಸಿದ್ದೇನಂದರೆ "ಬಸವಣ್ಣಾ ಮಡಿವಾಳ ಮಾಚಿ ತಂದೆಯ ಕೃಪೆಯಿಂದ ನಿನ್ನ ಘನವನರಿತೆನು ನೋಡಾ. ನಿನ ದಶೆಯಿಂದ ಮಹಾ ಶರಣರ ಮಡಿವಾಳಯ್ಯನ ಕಂಡು ಸುಖಿಯಾದೆ ಕಾಣಾ ಗುಹೇಶ್ವರಾ."

ಆಗ ಮಡಿವಾಳ ತಂದೆಗಳು ಬಸವರಾಜ ದೇವರ ಅನುಗ್ರಹದಿಂದಲೇ ತಮಗೆ ಪ್ರಭುದೇವರ ಸಂದರ್ಶನ ಲಾಭವುಂಟಾಯಿತೆಂದು ಈ ಪ್ರಕಾರ ಪ್ರಸ್ತಾಪಿಸಿದರು. 'ಅಯ್ಯಾ, ನಿಮ್ಮ ಪ್ರಸಾದದ ಮಹಿಮೆಯನೇನೆಂಬೆನಯ್ಯ? ವೇದಗಳರಿಯವು. ಶಾಸ್ತ್ರಂಗಳರಿಯವು. ಇಂತಪ್ಪ ಪುಣ್ಯಶಾಲಿಗಳ ದರ್ಶನ ಪ್ರಸಾದವನು ನಿಮ್ಮ ಶರಣ ಬಸವಣ್ಣ ತೋರಿದನಾಗಿ ಎನ್ನ ಭವ ನಾಸ್ತಿಯಾಯಿತ್ತು. ಪ್ರಭುವೇ ಕಾಣಾ ಕಲಿದೇವರ ದೇವಯ್ಯ."

ಅದಕ್ಕೆ ಬಸವಣ್ಣನವರು ನುಡಿದುದೇನಂದರೆ "ಪ್ರಭುವೇ, ಮಡಿವಾಳ ತಂದೆಯು ಎನಗೆ ಶುಭ್ರವಾದ ಹೊಸಮಡಿಯನೊಂದು ಹೊದಿಯಲಿಕ್ಕೆ ಕೊಟ್ಟು ಎನ್ನನ್ನು ಬದುಕಿಸಿದನು ನೋಡಾ. ಎನ್ನ ಕಾಯವ ಶುದ್ಧ ಮಾಡಿದಾತ ಮಡಿವಾಳ. ಎನ್ನ ಮನವ ನಿರ್ಮಲ ಮಾಡಿದಾತ ಮಡಿವಾಳ. ಎನ್ನಂತರಂಗವ ಬೆಳಗಿದಾತ ಮಡಿವಾಳ. ಎನ್ನ ಬಹಿರಂಗವ ನೀಗಿದಾತ ಮಡಿವಾಳ. ಕೂಡಲ ಸಂಗಮದೇವಾ, ಎನ್ನ ಮಲತ್ರಯವೆಂಬ ಮೈಲಿಗೆಯ ತೊಳೆದು ಮಡಿಯ ಹೊದಿಸಿ ಎನ್ನನು ನಿಮಗೆ ಯೋಗ್ಯನ ಮಾಡಿದವನು ಮಡಿವಾಳಯ್ಯನು."

ಆ ಮೇಲೆ ಮಾಚಿದೇವರು ಬಸವಣ್ಣನವರನ್ನು ಈ ರೀತಿಯಾಗಿ ಕೊಂಡಾಡಿದರು. "ನಾದ ಬಿಂದು ಕಲೆಗಳನತಿಗಳೆದು ಅಸಾಧ್ಯ ಸಾಧಕನಾದೆಯಲ್ಲ ಬಸವಣ್ಣ. ಕಾಯವು ಹೊದ್ದದೆ ಮಾಯೆಯು ಸೋಂಕದೆ, ನಿರಾಳವಾಗಿ ನಿಂದೆಯಲ್ಲ ಬಸವಣ್ಣಾ. ಕಲಿದೇವರ ದೇವನು ಕಾಯಗೊಂಡಿಪ್ಪುದ ನಿನ್ನಿಂದ ನಾನು ಕಂಡೆ ನೋಡಾ ಸಂಗನಬಸವಣ್ಣಾ."

ಆ ಬಳಿಕ ಪ್ರಭುವು ಬಸವಣ್ಣನ ಕೃಪೆಯಿಂದ ನಿಮ್ಮ ಘನವನರಿತು ಬದುಕಿದೆನೆಂದು ಮಡಿವಾಳ ತಂದೆಗಳನ್ನು ಕೊಂಡಾಡಿದರು. ಮಾಚಿದೇವರಾದವರು ಜಂಗಮಮೂರ್ತಿಗಳಾದ ಪ್ರಭುದೇವರ ದರ್ಶನವನ್ನು ಬಸವಣ್ಣನ ಅನುಗ್ರಹದಿಂದ ಪಡೆದು ಧನ್ಯನಾದೆನೆಂದು ಅರಿಕೆಮಾಡಿಕೊಂಡರು. ಬಸವರಾಜದೇವರು ಸಹ ತಾವು ಮಡಿವಾಳಯ್ಯನ ಸಹವಾಸದಲ್ಲಿ ಪರಮಸುಖಿಗಳಾಗಿರುವೆವೆಂಬುದಾಗಿ ಉಸುರಿದರು. ಅದರಂತೆಯೇ ಮಡಿವಾಳ ತಂದೆಗಳು 'ಈ ಕಲ್ಯಾಣವೆಂಬ ಮಹಾ ಘನದೊಳಗೆ ಬಸವಣ್ಣನೂ ನಾನೂ ಕೂಡಿ ಹದುಳದೊಳಿರ್ದೆವು ಕಾಣಾ ಕಲಿದೇವರ ದೇವಾ." ಎಂಬುದಾಗಿ ಅಪ್ಪಣೆಕೊಡಿಸಿದರು.

ಈ ಮಾತಿನಿಂದ ಪ್ರಭುದೇವರು ಆನಂದ ತುಂದಿಲರಾಗಿ ನುಡಿದುದೇನಂದರೆ "ಒಂದು ಮಾಡ ಹೋಗಿ ಮತ್ತೊಂದು ಪರಿಯನಗಾಯಿತ್ತಯ್ಯ. ಮಡಿವಾಳಯ್ಯನ ಪರಿಯನೊರೆದು ನೋಡಿದರೆ ನಿನ್ನ ಪೂರ್ವಾಪರದ ಅರಿವು ಎನಗೆ ಬಂದಿತ್ತು ನೋಡಾ. ನಿನ್ನ ಪೂರ್ವಾಪರ ಸಂಗವ ಮಾಡಬಂದರೆ ಎನ್ನ ಪೂರ್ವಾಪರದರಿವು ಎನಗೆ ಬಂದಿತ್ತು ನೋಡಾ. ಮಹಾ ಜ್ಞಾನಿಗಳ ಸಂಗದಿಂದ ಉಭಯ ಸಂಗ ಸಿದ್ಧಿಯೆಂಬುದು ದಿಟ

ವಾಯಿತ್ತು ನೋಡಾ ಬಸವಣ್ಣ. ಗುಹೇಶ್ವರನ ಶರಣ ಮಡಿವಾಳನ ಪಾದಕ್ಕೆ ನಮೋ ನಮೋ ಎನುತಿರ್ದೆನು."

ಇದನ್ನು ಕೇಳಿ ಬಸವಣ್ಣನವರು ಮಡಿವಾಳ ತಂದೆಗಳ ಶ್ರೀ ಪಾದದ ಘನವನ್ನು ಚನ್ನಬಸವಣ್ಣನಿಂದರಿದು ಸುಖಿಯಾದೆನೆಂದು ಬಿನ್ನೈಸಿದರು. "ಅಯ್ಯ,ಚನ್ನಬಸವಣ್ಣನು ಎನ್ನ ಕಾಯದಲ್ಲಿ ಮಡಿವಾಳನ ತೋರಿದ. ಎನ್ನ ಮನದಲ್ಲಿ ತನ್ನ ನಿಲವ ತೋರಿದ. ಎನ್ನ ಅರುವಿನಲ್ಲಿ ನಿಮ್ಮ ತೋರಿದ. ಇಂತೀ ತ್ರಿವಿಧವನು ಎನ್ನ ಸರ್ವಾಂಗದಲ್ಲಿ ಪ್ರತಿಷ್ಠೆಗೊಳಿಸಿದ. ಕೂಡಲಸಂಗಮದೇವಾ ನಿಮ್ಮ ಚನ್ನಬಸವಣ್ಣನ ಕರುಣದಿಂದೆ ಮಡಿವಾಳನೆಂಬ ಹೆಸರು ಸಾಧ್ಯವಾಯಿತ್ತಯ್ಯ, ಎನಗೆ."

ಆ ಮಾತಿಗೆ ಚನ್ನಬಸವರಾಜದೇವರು "ನಾನೊಂದ ತೋರಲರಿಯೆನು. ನಾನೊಂದ ಹೇಳಲರಿಯೆನು. ನಾನೊಂದ ಸ್ಥಲವಿಡಲರಿಯೆನು. ಕೂಡಲ ಚೆನ್ನಸಂಗಮದೇವರಲ್ಲಿ ಮಡಿವಾಳನ ನಿಲವ ನಾನೆತ್ತ ಬಲ್ಲೆನು ಹೇಳಾ ಸಂಗನಬಸವಣ್ಣಾ."

ಆ ಬಳಿಕ ಮಡಿವಾಳ ತಂದೆಗಳು ಅಪ್ಪಣೆ ಕೊಡಿಸಿದ್ದೇನಂದರೆ "ಅಹುದಹುದು. ಇಂತಿರ ಬೇಡವೇ ನಿರಹಂಕಾರ? ಮಹಾಜ್ಞಾನಕ್ಕೆ ನಿರಹಂಕಾರವೇ ಶೃಂಗಾರ. ನಿರಹಂಕಾರಕ್ಕೆ ಭಕ್ತಿಯೇ ಶೃಂಗಾರ. ಆ ಭಕ್ತಿಗೆ ಬಸವಣ್ಣನೇ ಶೃಂಗಾರ. ಆ ಬಸವಣ್ಣಂಗೆ ಚನ್ನಬಸವಣ್ಣನೇ ಶೃಂಗಾರ. ಇದಲ್ಲದೆ ಎನ್ನಂಗದಾಚಾರದಲ್ಲಿ ಸಂಗನಬಸವಣ್ಣನ ಕಂಡೆನು. ಎನ್ನ ಮನದ ಅರುವಿನಲ್ಲಿ ಚನ್ನಬಸವಣ್ಣನ ಕಂಡೆನು. ಭಾವದ ಕೊನೆಯಲ್ಲಿ ಪ್ರಭುದೇವರ ಕಂಡೆನು. ಕಲಿದೇವರ ದೇವಯ್ಯ, ನಿಮ್ಮ ಶರಣರ ಘನವನು ಎನ್ನ ಸರ್ವಾಂಗದಲ್ಲಿ ಕಂಡು ನಮೋ ನಮೋ ಎನುತಿರ್ದೆನು.

ಹರಿಹರಕೃತ

# ಶ್ರೀ ಪ್ರಭುದೇವರ ರಗಳೆ.

(ಲೇಖಕ:— ಬುದ್ದಯ್ಯ ಮುಗಯ್ಯ ಪುರಾಣಿಕ ಧಾರವಾಡ.)

ಶ್ರೀಮದನಾದಿ ಅಲ್ಲಮ ಪ್ರಭುದೇವರ ಜೀವನ ಚರಿತ್ರೆಯನ್ನು ತಿಳಿಸುವ ಗ್ರಂಥಗಳಲ್ಲಿ ಶ್ರೀ ಪ್ರಭುದೇವರ ರಗಳೆಯು ಒಂದಾಗಿದೆ. ಆತನ ಚರಿತ್ರೆಯನ್ನು ತಿಳಿಸುವ ಅನೇಕ ಗ್ರಂಥಗಳು ಈಗ ಉಪಲಬ್ಧವಿದ್ದರೂ ಆತನ ಜೀವನಕ್ಕೆ ಸಂಬಂಧಿಸಿದ ನಿಜವಾದ ಅನೇಕ ಸಂಗತಿಗಳು ಉಳಿದಿರುವವು. ಮತ್ತು ಅವು ಯಾವವು ಎಂಬುದು ಇನ್ನೂ ನಿಶ್ಚಿತವಾಗಿಲ್ಲ. ಹಂಪೆಯ ಹರಿಹರಕೃತವೆಂದು ಸುಪ್ರಸಿದ್ಧವಲ್ಲದಿದ್ದರೂ ಆತನವೆಂದು ತೋರುವ ಮತ್ತು ಪ್ರೊ. ವೆಂಕಣ್ಣಯ್ಯನವರು ಮೂರನೆಯ ಗುಂಪಿಗೆ ಸೇರಿಸಿದ ರಗಳೆಗಳಲ್ಲಿ ಈ ಪ್ರಭುದೇವರ ರಗಳೆಯು ಒಂದಾಗಿದೆ. ಇದನ್ನು ಓದಿದ ಕೂಡಲೇ ಓದುಗರಿಗೆ ಶ್ರೀ ಪ್ರಭುದೇವರ ಜೀವನ ಚರಿತ್ರೆಯನ್ನು ಐತಿಹಾಸಿಕ ದೃಷ್ಟಿಯಿಂದ ನಿರ್ಧರಿಸುವದಕ್ಕೆ ವಿಶೇಷ ಸಹಾಯವಾಗುವದೆಂದು ಗೊತ್ತಾಗುವದು. ಆದರೆ ಅದು ತೀರ ಭ್ರಾಮಕವು. ಯಾಕಂದರೆ ಈ ರಗಳೆಯನ್ನು ಬರೆದಿರುವ ಹರಿಹರನು ಶ್ರೀ ಪ್ರಭುವನ್ನು ಕಂಡವನಲ್ಲ. ಆತನ ಹತ್ತರವಿದ್ದು ಆತನ ವಿಚಾರಗಳನ್ನು ಮತ್ತು ನಡಾವಳಿಗಳನ್ನು ಕಣ್ಣಿನಿಂದ ನೋಡಿ ತಿಳಿದಿದ್ದ ಜನರ ಪರಿಚಯವು ಹರಿಹರನಿಗೆ ಇರಲಿಲ್ಲ. ಪುರಾತನ ಭಕ್ತರಿಂದ ಕೇಳಿದ ಕಥೆಯನ್ನು ಅವಲಂಬಿಸಿಯಾಗಲಿ ಅಥವಾ ತನಗಿಂತ ಹಿಂದಿನ ವೀರಶೈವ ಕವಿಗಳು ಶ್ರೀ ಪ್ರಭುದೇವರ ವಿಷಯವಾಗಿ ಬರೆದಿಟ್ಟ ಪುರಾಣಗಳ ಆಧಾರದ ಮೇಲಿಂದಾಗಲಿ ತಾನು ಶ್ರೀ ಪ್ರಭುದೇವರ ರಗಳೆಯನ್ನು ರಚಿಸಿದಂತೆ ಈತನು ಹೇಳಿಕೊಂಡಿರುವದಿಲ್ಲ. ಶ್ರೀ ಪ್ರಭುದೇವರು ಬೈಲಾದ ಅನೇಕ ವರ್ಷಗಳ ಮೇಲೆ ಈ ಕವಿಯು ಈ ಗ್ರಂಥರಚನೆ ಮಾಡಿದಂತೆ ಗೊತ್ತಾಗುತ್ತದೆ. ಆದಕಾರಣ ಈ ರಗಳೆಯಲ್ಲಿ ಹೇಳಿರುವುದನ್ನೆಲ್ಲ ನಿಜವಾದದ್ದೆಂದು ನಂಬಲಾಗುವದಿಲ್ಲ. ನಿಜವಾದ ಸಂಗತಿಗಳೂ ಕಲ್ಪಿತ ಕಥೆಗಳೂ ಸಮ್ಮಿಶ್ರವಾಗಿರುತ್ತವೆ.

ಶ್ರೀ ಪ್ರಭುದೇವರ ಜೀವನ ಚರಿತ್ರೆಯನ್ನು ತಿಳಿದುಕೊಳ್ಳಲು ಸದ್ಯಕ್ಕೆ ಉಪಲಬ್ಧವಿರುವ ಮುಖ್ಯ ಸಾಧನಗಳು ಎರಡು. ಒಂದನೇದು ವೀರಶೈವ ಕವಿಗಳು ಬರೆದಿರುವ ಶಿವಶರಣರ ಪುರಾಣಗಳು. ೨ನೇದು ಪ್ರಭುದೇವರ ಹಾಗು ಅವರ ಸಮಕಾಲಿಕ ವಚನಗಳು ಪುರಾಣಗಳಂತೆ ಕಾಲಕ್ರಮದಲ್ಲಿ ವ್ಯತ್ಯಾಸವನ್ನು ಹೊಂದುವ ಸಂಭವವು ವಚನಗಳಲ್ಲಿ ಕಡಿಮೆಯಾದ್ದರಿಂದ ಅವು ಪುರಾಣಗಳಿಗಿಂತಲೂ ಹೆಚ್ಚು ವಿಶ್ವಾಸಾರ್ಹವಾದವು. ಈ ಎರಡು ಸಾಧನಗಳಲ್ಲಿ ಒಂದನ್ನಾದರೂ ಈ ಕವಿಯು ಅನುಸರಿಸಿಲ್ಲ. ಆದುದರಿಂದ "ಪುರಾಣ ಮಿತ್ಯೇವನಸಾಧು ಸರ್ವಂ" ಎಂಬ ನ್ಯಾಯದಂತೆ ಹಳೆಯದೆಂದು ಹೆಚ್ಚು ಪ್ರಶಸ್ತಿಯನ್ನು ಕೊಡಲಾಗದು. ಈ ದೃಷ್ಟಿಯಿಂದ ನೋಡಿದರೆ ಈಗ ಉಪಲಬ್ಧವಿರುವ ಶ್ರೀಪ್ರಭುದೇವರ ಚರಿತ್ರರೂಪವಾದ ಪುರಾಣಗಳಲ್ಲೆಲ್ಲ ಚಾಮರಸನ (ಸು ರೆ॥ ಶ॥ ೧೪೩೦) ಪ್ರಭುಲಿಂಗಲೀಲೆಯೇ ಅತ್ಯಂತ ಮಹತ್ವವಾದದ್ದು. ವೀರಶೈವ ಕವಿಗಳಲ್ಲಿ ಅತ್ಯಂತ ಪ್ರಖ್ಯಾತನಾದ ಚಾಮರಸನಿಂದ ರಚಿತವಾಗಿರುವದರಿಂದಲೂ, ೨೫ ಗತಿಗಳುಳ್ಳ ಈ ಪ್ರಭುಲಿಂಗ ಲೀಲೆಯ ಪ್ರತಿಯೊಂದು ಗತಿಯ ತಲೆಕಟ್ಟಿನಲ್ಲಿ ಶ್ರೀಪ್ರಭುದೇವ, ಬಸವ, ಚನ್ನಬಸವ, ಮಡಿವಾಳ ಮಾಚಿದೇವ, ಅಕ್ಕಮಹಾದೇವ ಮೊದಲಾದವರ ವಚನಗಳನ್ನು ಉದಹರಿಸಿ ಅವುಗಳಿಗೆ ಅನುಸರಿಸಿ ಶ್ರೀಪ್ರಭುವಿನ ಚರಿತ್ರೆಯನ್ನು ಬರೆದಿರುವದರಿಂದಲೂ, ಐತಿಹಾಸಿಕ ದೃಷ್ಟಿಯಿಂದ ಶ್ರೀಪ್ರಭುದೇವರ ಚರಿತ್ರೆಯನ್ನು ನಿರ್ಣಯಿಸುವಾಗ ಈ ಚಾಮರಸನ ಪ್ರಭುಲಿಂಗ ಲೀಲೆಯಲ್ಲಿ ಹೇಳಿರುವ ಸಂಗತಿಗಳಿಗೆ ತಕ್ಕಷ್ಟು ಪ್ರಾಮಾಣ್ಯವನ್ನು ಕೊಡಲೇಬೇಕಾಗುತ್ತದೆ. ಚಾಮರಸನ ಪ್ರಭುಲಿಂಗಲೀಲೆಯೊಳಗಿನ ಹೆಸರುಗಳು ರೂಪಕವಾಗಿ ಇದ್ದಂತೆ ಕಂಡರೂ ಅದರಲ್ಲಿಯ ವಸ್ತು ರಚನೆ ಪಾತ್ರ ಪೋಷಣೆ ಮೊದಲಾದವುಗಳಿಂದ ಶ್ರೀಪ್ರಭುದೇವರಿಗೆ ಸಂಬಂಧಪಟ್ಟ ಅನೇಕ ಸಂಗತಿಗಳನ್ನು ನಿರೂಪಿಸುವ ಕ್ರಮದಲ್ಲಿಯೇ ಚಾಮರಸನು ಅವರ ಜೀವನದ ಮೂಲ ರೇಖೆಗಳು ಸ್ಪಷ್ಟವಾಗುವಂತೆ ಕಾವ್ಯರಚನೆಯನ್ನು ಮಾಡಿದಂತೆ ಕಂಡುಬರುತ್ತದೆ. ಚಾಮರಸನು ತನ್ನ ನೈಪುಣ್ಯದಿಂದ ಶ್ರೀಪ್ರಭುದೇವ್ಯಕ್ತಿಚಿತ್ರಕ್ಕೆ ಜೀವಕಳೆಯನ್ನು ಕೊಟ್ಟಿದ್ದಾನೆ. ಶ್ರೀಪ್ರಭುವಿನ ಅಲೌಕಿಕವರ ಕಾರ್ಯಗಳನ್ನೂ, ಅದ್ಭುತ ಮಹಿಮೆಗಳನ್ನೂ ಚಾಮರಸನು ಮೇಲಿಂದ ಮೇಲೆ ಹೇಳಿದರೂ ಅವನ ಸರಳವಾದ ಹೃದಯವನ್ನು ಮಾತ್ರ ಎಲ್ಲಿಯೂ ಮರೆಮಾಡಿಲ್ಲ. ಆದುದರಿಂದ ಇದರಲ್ಲಿ ಹೇಳಿರುವುದ ವಿಶ್ವಾಸಾರ್ಹವೆಂದು ಸ್ಪಷ್ಟವಾಗಿ ಹೇಳಬಹುದು.

ಇದನ್ನರಿತು ಕವಿಚರಿತ್ರಕಾರರು ತಮ್ಮ ಕವಿಚರಿತೆಯ ಪ್ರಥಮ ಸಂಪುಟದ ೧೮೦ನೆಯ ಪುಟದಲ್ಲಿ "ಪ್ರಭುದೇವನು (ಸ॥೮॥ಶ॥೧೧೬೦) ಷಟ್ಸ್ಥಲ ಜ್ಞಾನಚಾರಿತ್ರ, ಶೂನ್ಯಸಂಪಾದನೆ, ಮಂತ್ರಗೋಪ್ಯ, ಸೃಷ್ಟಿಯ ವಚನ, ಬೇಡಗಿನ ವಚನ, ಮಂತ್ರ ಮಾಹಾತ್ಮ್ಯ, ಕಾಲಜ್ಞಾನ ವಚನ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಇವನಿಗೆ ಅಲ್ಲಮ ಎಂಬ ಹೆಸರೂ ಉಂಟು. ಮಾಯಾಕೋಲಾಹಲ ಎಂಬ ಬಿರುದು ಇದ್ದಂತೆ ತಿಳಿಯುತ್ತದೆ. ಈತನ ವಿಷಯವಾಗಿ ಚನ್ನಬಸವ ಪುರಾಣ ಪ್ರಭುಲಿಂಗ ಲೀಲೆ ಮೊದಲಾದ ಗ್ರಂಥಗಳಿಂದ ಈ ಅಂಶಗಳು ತಿಳಿಯುಬರುತ್ತವೆ. ಇವನು ವೀರಶೈವ ಕವಿ. ಈತನ ತಂದೆ ನಿರಹಂಕಾರ. ತಾಯಿ ಸುಜ್ಞಾನಿ. ಇವನ ಚಿತ್ತಸ್ಥೈರ್ಯವನ್ನು ಪರೀಕ್ಷಿಸುವದಕ್ಕಾಗಿ ಪಾರ್ವತೀ ದೇವಿಯು ತನ್ನ ತಾಮಸ ಗುಣವನ್ನು ಸ್ತ್ರೀ ರೂಪವಾಗಿ ಹುಟ್ಟುವಂತೆ ಅಟ್ಟಿದಳು ಅದು ಬೆಳವೊಲ ನಾಡಿನ ಬನವಸೆಯ ರಾಜನಾದ ಮಮಕಾರ ನೃಪನ ಪತ್ನಿ ಮೋಹಿನೀದೇವಿಯ ಗರ್ಭದಲ್ಲಿ ಮಾಯೆ ಎಂಬ ಹೆಣ್ಣುಮಗಳಾಗಿ ಹುಟ್ಟಿತು. ಆ ಹೆಣ್ಣುಮಗಳು ಈತನನ್ನು ಮೋಹಗೊಳಿಸಲು ಯತ್ನಿಸಿದಾಗ ಈತನು ಅವಳನ್ನು ತಿರಸ್ಕರಿಸಿದನು. ಗೊಗ್ಗಯ್ಯ ಮುಕ್ತಾಯಗಳಿಗೆ ಬೋಧಿಸಿ ಮುಕ್ತಿಯನ್ನು ಕೊಟ್ಟನು. ಸೊನ್ನಲಿಗೆಗೆ ಹೋಗಿ ಸಿದ್ಧರಾಮನಿಗೆ ಶಿವತತ್ವವನ್ನು ತಿಳಿಸಿ ಅವನೊಡನೆ ಕಲ್ಯಾಣಕ್ಕೆ ಹೋಗಿ ಬಸವನಿಂದ ಸತ್ಕೃತನಾಗಿ ಶೂನ್ಯ ಪೀಠವನ್ನು ಹತ್ತಿದನು. ಬಳಿಕ ಶ್ರೀಶೈಲಕ್ಕೆ ಹೋಗಿ ಅಲ್ಲಿ ಮಹಾದೇವಿಗೆ ನಿರ್ವಾಣ ಪದವಿಯನ್ನು ಉಪದೇಶಿಸಿ ಬಸವನಿಗಿಂತ ಸ್ವಲ್ಪ ಕಾಲ ಮುಂಚೆ ಕದಳಿಯಲ್ಲಿ ಬೈಲಾದನು. ಇವನು ವೀರಶೈವ ಗುರುಗಳಲ್ಲಿ ಬಹಳ ಪ್ರಖ್ಯಾತನು. "ಶ್ರೀಮದ್ದೇಶಿಕ ಷಟ್‌ಸ್ಥಲ ಚಕ್ರವರ್ತಿ ಬ್ರಹ್ಮಾನಂದ ಪಂಶಿವಮೂರ್ತಿ ವಿರಕ್ತಶಿಖಾಮಣಿ ಮಾಯಾ ಕೋಳಾಹಳ ಪ್ರಭುದೇವರು ಎಂದು ಕೆಲವು ವೀರಶೈವ ಗ್ರಂಥಕರ್ತರು ಈತನನ್ನು ವಿಶೇಷಿಸಿ ಬರೆದಿದ್ದಾರೆ. ಇವನ ವಿಷಯವಾಗಿ ಪ್ರಭುಲಿಂಗಲೀಲೆ, ಪ್ರಭುದೇವರ ಪುರಾಣ, ಪ್ರಭುಸಟನ ತಾರಾವಳಿ, ಪ್ರಭುಚರಿತ್ರೆ, ಪ್ರಭುಗೀತೆ ಮೊದಲಾದ ಗ್ರಂಥಗಳು ಹುಟ್ಟಿವೆ ಎಂದು ಬರೆದಿರುವರು. ಆದರೆ ಈ ರಗಳೆಯಲ್ಲಿ ಬರೆದ ವೃತ್ತಾಂತವನ್ನು ಸ್ಥೂಲ ದೃಷ್ಟಿಯಿಂದ ನೋಡಿದರೆ ಇದರಲ್ಲಿ "ನಲ್ಲಿಯಪುರದ ನಾಗವಾಸಾಧಿಪತಿ ಯಪ್ಪನಾಯಕನ ಸತಿಯ ಬಸರೊಳು ನಿರ್ಮಾಯನೆಂಬ ಗಣೇಶ್ವರನು ಶಾಪಕ್ಕೊಳಗಾಗಿ ಅಲ್ಲಮನೆಂಬಭಿಧಾನದಿಂದ ಲಿಂಗಸಹಿತ ಜನಿಸಿದನೆ

ತಲೂ, ಅವನು ಮೃದಂಗ ವಾದ್ಯದಲ್ಲಿ ಬಹು ಪ್ರವೀಣನಾಗಿದ್ದನೆಂತಲೂ, ಆ ಪಟ್ಟಣದಲ್ಲಿಯ ಗೊಗ್ಗೇಶ್ವರಾಲಯದಲ್ಲಿ ವಾದ್ಯ ಬಾರಿಸುವ ಸಮಯ ದಲ್ಲಿ ಆ ಪುರದ ಧನದತ್ತನೆಂಬ ವರ್ತಕನ ಮಗಳು ಕಾಮಲತೆಯೆಂಬ ವಳು ಆ ಶಿವಾಲಯಕ್ಕೆ ಬಂದಿರಲು ಆಕೆಯು ಅವನಲ್ಲಿ ಅನುರಾಗವುಳ್ಳ ವಳಾಗಿ ಅವನನ್ನು ತನ್ನ ಮಂದಿರಕ್ಕೆ ಕರೆದೊಯ್ದು ಇಬ್ಬರೂ ಅನೇಕ ಕಾಲ ದಂಪತಿಗಳಂತೆ ಸುಖನಾಗಿ ಕಾಲಕಳೆಯಹತ್ತಿದರೆಂತಲೂ, ಮುಂದೆ ಈ ಕಾಮಲತೆಯು ಜ್ವರದಿಂದ ತೀರಿಕೊಳ್ಳಲು ಅಲ್ಲಮನು ಅಲ್ಲಿಂದ ಹೊರಟು ಪಟ್ಟಣದ ಹೊರಗೆ ಕಣಗಿಲ ತೋಟದಲ್ಲಿ ಕುಳಿತು ದುಃಖಮಾ ಡುತ್ತಿದ್ದನೆಂತಲೂ, ದುಃಖಿಸುತ್ತ ಬೆರಳಿನಿಂದ ನೆಲವನ್ನು ಅಗಿಯುತ್ತಿರಲು ಒಂದು ಹೊನ್ನ ಕಲಶವು ತೋರಿತೆಂತಲೂ, ಇದು ಅಲ್ಲಿಯ ಅರಸನಿಗೆ ತಿಳಿಯಲು ಅರಸನು ಬಂದು ಆ ಭೂಮಿಯನ್ನು ಅಗಿಸಲು ಒಂದು ಶಿವಾ ಲಯ ಹೊರಟಿತೆಂತಲೂ, ಅಲ್ಲಿ ಅನಿಮಿಷನೆಂಬ ಶಿವಯೋಗಿಯು ಇದ್ದು ಅರಸನ ಪ್ರಾರ್ಥನೆಯ ಮೇರೆಗೆ ಅಲ್ಲಮನು ನಿರಾಶನಾಗಿ ಒಳನುಗ್ಗಲು ಅನಿಮಿಷನ ದರ್ಶನದಿಂದ ಅಲ್ಲಮನಿಗೆ ವೈರಾಗ್ಯ ಪ್ರಾಪ್ತವಾಯಿತೆಂತಲೂ, ಈ ಘನವೈರಾಗ್ಯವನ್ನು ಕಂಡು ರಾಜ ಮೊದಲಾದ ಪುರಜನರು ಅಲ್ಲ ಮನು "ಕಾಮಲತೆಗೊಲಿದಿರ್ದನೆಂಬುದದು ಪುಸಿನೋಡ" ಎಂದು ಕೊಂ ಡಾಡಿದರೆಂತಲೂ, ಮುಂದೆ ಅಲ್ಲಮನು ಸಂಚಾರಕ್ಕೆ ಹೊರಟು ಸಂಚಾ ರದಲ್ಲಿ ಬಸವಣ್ಣನನ್ನು ಕಂಡನೆಂತಲೂ, ಮುಂದೆ ಸೊನ್ನಲಿಗೆ ಪುರಕ್ಕೆ ಹೋಗಿ ಸಿದ್ಧರಾಮನನ್ನು ಕಂಡು "ಕಲಿಯುಗಂ ಪೊಲ್ಲೆಂದು ಬುದ್ಧಿಯಂ" ಪೇಳಿದನೆಂತಲೂ. ಕದಳೀ ಬನದಲ್ಲಿ ಕೈಲಾಸದ ದಾರಿಯನ್ನು ಭೈರನೇಶ್ವರನು ತೋರಿಸಿದನೆಂತಲೂ, ಆ ದಾರಿಯಲ್ಲಿ ಗೋರಕ್ಷ ಹಾಗು ಹನುಮನನ್ನು ಕಂಡನೆಂತಲೂ" ಹೀಗೆ ಅನೇಕ ಮಾತುಗಳು ಬರೆದಿರು ವವು. ಅಲ್ಲಮನು ಬಸವಾದಿಗಳನ್ನು ನೋಡಿದ ವರ್ಣನೆಯು ನಾಲ್ಕು ಪಂಕ್ತಿಗಳಲ್ಲಿ ಮುಗಿದದೆ. ಮತ್ತು ಬೇರೆ ಯಾವ ಪಟ್ಟಣಕ್ಕೆ ಹೋದದ್ದರ ಉಲ್ಲೇಖವೂ ಇಲ್ಲ. ಇದನ್ನು ನೋಡಿದರೆ ಕವಿ ಚರಿತೆಕಾರರು ವೀರಶೈವ ಗ್ರಂಥಗಳ ಆಧಾರದ ಮೇಲಿಂದ ಹೇಳಿರುವ ವೃತ್ತಾಂತಕ್ಕೂ ಈ ರಗಳೆ ಯಲ್ಲಿಯ ವೃತ್ತಾಂತಕ್ಕೂ ಭೂಮ್ಯಾಕಾಶದಷ್ಟು ಅಂತರ ಬೀಳುವದು. ಇದನ್ನೇ ಇನ್ನೊಂದಾವರ್ತಿ ಸೂಕ್ಷ್ಮದೃಷ್ಟಿಯಿಂದ ನೋಡಿದರೆ ಈ ರಗಳೆ ಯಲ್ಲಿ ಹೇಳಿರುವ ಕಥೆಗೂ ಈಗ ಪ್ರಚಾರದಲ್ಲಿರುವ ಇನ್ನುಳಿದ ವೀರಶೈ ವರ ಪುರಾಣಗಳ ಕಥೆಗೂ ಕೆಲವು ಮುಖ್ಯವಾದ ಸಂಗತಿಗಳಲ್ಲಿ ವ್ಯತ್ಯಾ

ಸವಿದೆಯೆಂದು ಕಂಡುಬರುವದಲ್ಲದೆ. ಈ ಕವಿಯ ವಿಚಾರಗಳು ಅಪಕ್ವ ವಾದವುಗಳೆಂದು ಸಹಜವಾಗಿ ತೋರುವವು. ಅದು ಹೇಗೆಂಬದನ್ನು ಇಲ್ಲಿ ಕೊಟ್ಟಿದೆ.

ಇತರ ಪುರಾಣಗಳಲ್ಲಿ ಉಪಮಿಸಲ್ಬಾರದಾ ಪರಾತ್ಪರ ವಸ್ತುವೇ ಕೃಪೆಯಿಂದ ಬೋಧರೂಪಿ ಜಂಗಮವಾದುದೆಂತಲೂ ಹಾಗು, ನಿರ್ಮಲ ಬ್ರಹ್ಮವೇ ಕರಚರಣ ಶರೀರವಿಡಿದು ಜಂಗಮರೂಪವ ಧರಿಸಿತೆಂತಲೂ, ಮತ್ತೆ ಆ ಜಂಗಮ ಲಿಂಗವೇ ಗುರು ಕುಲಾಂಬರ ಸೂರ್ಯನೂ ಶರಣಜನಹಿತ ಕಾರ್ಯನೂ ಷಟ್‌ಸ್ಥಲಶರಧಿ ಚಂದ್ರನೂ ಆದ ಶ್ರೀಮದನಾದಿ ಅಲ್ಲಮ ಪ್ರಭುದೇವನೆಂತಲೂ ಹೇಳಿದೆ. ಆದರೆ ಈ ರಗಳೆಯಲ್ಲಿ ಶ್ರೀಪ್ರಭುವು ಶರಣರೊಳಗೊಬ್ಬನಾದ ನಿರ್ಮಾಯನೆಂಬ ಗಣೇಶ್ವರನ ಅವತಾರವೆಂದು ಹೇಳಿದೆ. ಇತರ ಗ್ರಂಥಗಳಲ್ಲಿ ಅವತಾರದ ಕಾರಣಗಳು

ಮುಕ್ಕಣ್ಣನ ಸಭೆಯೊಳಗೆ ಧಿಕ್ಕರಿಸಿದ ಗಿರಿಸುತೆಯ ಸೊಕ್ಕು ಮುರಿಯುವದಕ್ಕೆ ಮರ್ತ್ಯ ಲೋಕಕ್ಕೆ ನಿರುತ ನಿರಂಜನ ಭರಿತನಾದ ನಿಃಕಾಯ ಪ್ರಭು ಬಂದನೆಂದು ಹೇಳಿದೆ ಆದರೆ ಇಲ್ಲಿ "ಸುರಸತಿಯರೊಳಗೊಬ್ಬಳಂ ನೋಡಲಳುಪಿಂದ ॥ ಹರನ ವರ ನೀಕ್ಷಿಸುತ್ತಂ ದಯಾಪರದಿಂದ ॥ ನಿರ್ಮಾಯರುಂ ಪೋಗಿ ವಸುಮತಿಯೊಳಗೆ ಪುಟ್ಟಿ। ಕಾಮಂಗೆ ವಶನಾದ ಸಕಲ ಸುಖಮಂ ಮುಟ್ಟಿ ॥ ಹರುಷದಿಂದಿರ್ದಿರದೆ ಒಪ್ಪವಂದದೊಳೆಸೆದು" ಎಂದು ಹೇಳಿದೆ. ಈ ಪ್ರಕಾರದ ವಿಧಾನಗಳನ್ನು ಮಾಡಿದರೂ ಚರಿತ್ರನಾಯಕನಾದ ಅಲ್ಲಮನಿಗೆ ಯಾವ ಬಗೆಯ ಕುಂದ ಕೊರತೆಗಳು ಹತ್ತುವದಿಲ್ಲ. ಆದರೆ ಕವಿಯು ವಿಸಂಗತ ವಿಚಾರಗಳ ಪ್ರದರ್ಶನ ಮಾತ್ರ ಮಾಡಿದಂತೆ ಆಗುವದು. ಅದು ಹೇಗಂದರೆ, ನಿರ್ಮಾಯನೆಂಬ ಗಣೇಶ್ವರನು ಮಾಯಾಬದ್ಧನಾದನೆಂದು ಹೇಳುವದೆಂದರೆ ಬಂಜೆಯ ಮಗನು ಆಕಾಶ ಪುಷ್ಪವನ್ನು ಧರಿಸಿಕೊಂಡು ತಿರುಗುತ್ತಿರುವನೆಂದು ಹೇಳಿದಂತೆ ಹಾಸ್ಯಾಸ್ಪದವಾಗುವದಲ್ಲದೆ, ಮಿಥ್ಯಾರೋಪ ಮಾಡಿದ ದೋಷವು ಕೂಡ ಪ್ರಾಪ್ತವಾಗುವದು. ದೇವರು ದೋಷಿಗಳನ್ನು ಶಿಕ್ಷಿಸುವ ಅನೇಕ ಶಿಕ್ಷೆಗಳಲ್ಲಿ ಶಾಪವು ಒಂದಾಗಿದೆ. ಆದರೆ ಶಾಪವು ಕೋಪಮಿಶ್ರಿತವಾಗಿರುವದು ಸಹಜವು. "ಸುರಸತಿಯರೊಳಗೊಬ್ಬಳಂ ಅಳುಪಿಂದೆ ನಿರ್ಮಾಯನು ನೋಡಲು ಹರನವರ ನೀಕ್ಷಿಸುತ್ತಂ ದಯಾಪರದಿಂದ" ಶಾಪಕೊಟ್ಟನೆಂದು ಹೇಳುವದರಿಂದ ಕವಿಯು ಇಲ್ಲಿ

ವಿಪರೀತ ಭಾವನೆಯನ್ನು ಮಾಡಿದಂತೆ ಆಗಿದೆ. ಮತ್ತು ಶಾಪಗ್ರಸ್ತನಾದ ಅಪರಾಧಿಯು ಪ್ರಾರ್ಥನೆಯ ಮೇರೆಗೆ ಶಾಪ ಕೊಟ್ಟವನು ವಿಶಾಪ ಕೊಡುವ ಪರಿಪಾಠವುಂಟು. ಶಾಪನಿಃಶಾಪಗಳು ಏಕ ಕಾಲಕ್ಕೆ ಆದುದರಿಂದ ಈ ಕ್ರಮವಾದರೂ ಇಲ್ಲಿ ತಪ್ಪಿದೆ.

## ತಾಯಿ ತಂದೆಗಳು ಹಾಗು ಶ್ರೀಪ್ರಭುವಿನ ಜನನ.

ವೀರಶೈವ ಪುರಾಣಗಳಲ್ಲಿ ಕರವೂರ ಸುಜ್ಞಾನಿ ನಿರಹಂಕಾರರಿಗೊಲಿದು ವರಪುತ್ರನಾಗಿ ಅವರಿಗೆ ಪರಮ ಪವಿತ್ರನೆಂದು ಹೇಳಿ ಅಲ್ಲಮನು ಅಯೋನಿಜನೆಂದು ಹೇಳಿದೆ. ಆದರೆ ಇಲ್ಲಿ ನಲ್ಲಿಯಪುರದ ನಾಗವಾಸಾಧಿಪತಿಯಪ್ಪ ನಾಯಕನ ಸತಿಯ ಬಸುರಿನೊಳು ಬಂದನೆಂದು ಹೇಳುವದರಿಂದ ಈತನು ಯೋನಿಜನೆಂದು ಹೇಳಿದೆ. ಶಿವಮೊಗ್ಗಾ ಡಿಸ್ಟ್ರಿಕ್ಟ ಶಿಕಾರಪುರ ತಾಲೂಕ ಕರವೂರ ಗ್ರಾಮದಲ್ಲಿ ಈಗಲೂ ಅಲ್ಲಮನ ವಿಷಯವಾದ ಮಠ ಮೊದಲಾದ ಸ್ಥಾನಿಕ ಐತಿಹಾಸಿಕ ಕುರುಹುಗಳುಂಟು. ಆದರೆ ಈ ನಲ್ಲಿಯಪುರದ ವಿಷಯವಾಗಿ ಏನೂ ಗೊತ್ತಿಲ್ಲ. ಕರ್ಣನು ಕಿವಿಯಲ್ಲಿಯೂ ಅಗಸ್ತ್ಯನು ಕೊಡದಲ್ಲಿಯೂ ಹುಟ್ಟಿದರೆಂದು ಹೇಳುವಂತೆ ಇಂಥ ಅನೇಕ ಅಯೋನಿಜರ ಕಥೆಗಳು ರಾಮಾಯಣ ಮಹಾಭಾರತಾದಿ ಗ್ರಂಥಗಳಲ್ಲಿ ಹೇಳಿದ್ದರೂ ಆ ಗ್ರಂಥಗಳಿಗೆ ಮೂಲಿಗರಾದ ಶ್ರೀ ರಾಮ ಕೃಷ್ಣಾದಿಗಳು ಯೋನಿಜರೆಂದು ಹೇಳಿದ ಮಾತ್ರಕ್ಕೆ ಹೇಗೆ ಅವರಿಗೆ ಪರಮಾತ್ಮ ಪದವಿಯು ತಪ್ಪಲಿಲ್ಲವೋ ಅದರಂತೆ ಅಲ್ಲಮನಿಗೆ ಕವಿಯು ಯೋನಿಜನೆಂದು ಹೇಳಿದರೂ ಅವನು ಕಾರುಣಿಕ ಹಾಗು ಪರಶಿವಮೂರ್ತಿಯಾಗಿರುವದು ತಪ್ಪಲಾರದು. ಮತ್ತು ತನ್ನ ಜನನದ ವಿಷಯವಾಗಿ ಅಲ್ಲಮಪ್ರಭುದೇವನು ತನ್ನ ವಚನದಲ್ಲಿ "ಆದಿಯ ಸಂಗದಿಂದಾದವನಲ್ಲ। ಸಂಗಸುಖದೊಳಗಿದ್ದವನಲ್ಲ। ಇಬ್ಬರ ಸಂಗದಿಂದಾದವನಲ್ಲ। ರವಿಶಶಿಯ ಬೆಳಗಿನಿಂದ ಬೆಳೆದವನಲ್ಲ। ನಾದ ಬಿಂದು ಕಳೆ ಹುಟ್ಟದ ಮುನ್ನ ಅಲ್ಲಿಂದತ್ತ ಗುಹೇಶ್ವರ" ಎಂದು ಹೇಳಿರುವನು.

## ಅಲ್ಲಮನ ಬಾಲ್ಯ.

ಇತರ ಗ್ರಂಥಗಳಲ್ಲಿ ಅಲ್ಲಮನು ಜನಿಸಿದ ಕೂಡಲೆ ಆತನ ಕೊರಳಲ್ಲಿ ಇಷ್ಟಲಿಂಗವಿತ್ತೆಂದು ಹೇಳಿದೆ. ಆದರೆ ಇದರಲ್ಲಿ ಆ ಇಷ್ಟಲಿಂಗದ ಸುದ್ದಿಯನ್ನೇ ಹೇಳಿಲ್ಲ. ಅಲ್ಲಮನ ವಿಷಯವಾಗಿ "ಲಿಂಗದಂಘ್ರಿಯೊಳು

ನೋಟಂ ಪುಟ್ಟಿ ಕಣ್ದೆರೆಯೆ" ಎಂದು ಹೇಳಿರುವದಲ್ಲದೆ ಆತನ ಜನ್ಮವು ಶುಭ ಮುಹೂರ್ತ ಶುಭ ಲಗ್ನದಲ್ಲಿ ಆಯಿತೆಂತಲೂ ದಶಕರ್ಮಗಳಲ್ಲಿ ಜಾತಕರ್ಮ ನಾಮಕರಣವಿಧಿ ಮೊದಲಾದವುಗಳನ್ನು ಶುಭ ಮುಹೂರ್ತಗಳಲ್ಲಿ ಮಾಡಿದರೆಂತಲೂ ಆತನ ಜನನಿಯು ಗೊಗ್ಗೇಶ್ವರ ಪ್ರಸಾದದ ಬೆಣ್ಣೆಯನ್ನು ತಂದು ಇಕ್ಕಿದಳೆಂತಲೂ ಹೇಳಿದೆ

## ಅಲ್ಲಮನ ಯೌವನ.

ಬೇರೆ ಗ್ರಂಥಗಳಲ್ಲಿ ಮಾಯಾತಮ ದಿವಾಕರ ಮಾಯಾಸುರ ಕೋಲಾಹಲನೂ ಮಯಾವಲ್ಲರಿ ಪವಿತ್ರನೂ ಮಾಯಾಂಭೋಜ ಕುಠಾರನೂ ಮಾಯಾಂಬುಧಿಪವಮಾನನೂ ಮಾಯಾಕುಮುದದಿನೇಶನೂ ಮಾಯಾಶರನಿಧಿವಡವಾನಲನೂ ಮಾಯಾಕರಿಗೆ ಪಂಚಾಸ್ಯನೂ ಮಾಯಾಭೇಕಕ್ಕೆ ಭುಜಂಗನೂ ಮಾಯಾಂಬುಧಿ ಕುಂಭಜಾತನೂ ಮಾಯಾಘನವನದಾವನೂ ಮಾಯೋರಸ್ಥಲಕೃಂತನೂ ಮಾಯೋರಗಖಗರಾಜನೂ ಮಾಯಾನಾಸಾಗ್ರಶಸ್ತ್ರನೂ ಮಾಯಾಕುಲಾದ್ರಿತೇಜನೂ ಆದ ಶ್ರೀಮದನಾದಿ ಅಲ್ಲಮಪ್ರಭುದೇವನು ಪ್ರಾಪ್ತ ವಯಸ್ಕನಾಗಲು ಈತನಿಗೆ ಮನ್ಮಥನ ಪುಷ್ಪ ಬಾಣಗಳು ತಾಗಿ ಪರವಶದೊಳಿರುತಿರುವ ಮಾಯೆಯು ಶರೀರದೊಳಗೆ ಕಾಮಜ್ವರವ ಯೋಜಿಸಿ ಕಡೆಯಾಗಿಯಿರುತಿರ್ದನೆಂತಲೂ ಅಕಟಾ ಕಾಂತಾ ಬಾರೆಂದು ಸಕಳೆ ಕರೆದೊಯ್ದು ದುರ್ಮುಖಿಯಾದ ಮಾಯಾ ಸಂಗಸುಖದೊಳಗಿರಿಸಿದಡೆ ಕೆಲಕೆ ಸಾರ್ದುನಿಲ್ಲುವನೆಂತಲೂ ಪಿಡಿದಪ್ಪಿ ಚುಂಬನವ ಕೊಡು ಎನಲು ಎಲೆ ಮಾಯೆ ವಡಲಂಗ ಗುಣವ ರಹಿತನಾದ ನಾನು ಸಿಲ್ಕಲಾರೆ ಹೋಗೆಂದು ಹೇಳಿದನೆಂತಲೂ ಮತ್ತು ಕಾಯ ಕರ್ರನೆ ಕಂದಿ ಮಾಯೆ ಮೂರ್ಛಿತಳಾಗಿ ಆಯಾಸ ಬಡುತ ಬಾಯಾರಿ ಅಳುತಿರಲು ನಗುತಿರ್ದನೆಂತಲೂ ವರ್ಣನೆ ಮಾಡಿದೆ. ಆದರೆ ಈ ರಗಳೆಯಲ್ಲಿ ಅಲ್ಲಮನು ಕಾಮಲತೆಯ ಸೌಂದರ್ಯವನ್ನು ಕಂಡು ಮೂರ್ಛೆಗೊಂಡು ಜೋಲಿಯಿಂದ ಪಕ್ಕಣಿಗರ ಮೇಲೆ ಬಿದ್ದನೆಂತಲೂ ಆಮೇಲೆ ಆತನ ಮೃದಂಗವನ್ನು ಸಡಲಿಸಿ ಕಾಮಲತೆಯ ಸತಿಯರು ಕೊಂಡೊಯ್ದು ಸರಿ ಮಂಚದ ಮೇಲೆ ಆವರೀರ್ವರನ್ನು ಕುಳ್ಳಿರಿಸಿದರೆಂತಲೂ, ಅಲ್ಲಮನು ಕಾಮಲತೆಗೆ ತನು ಮನಧನಗಳನ್ನಿತ್ತು ಕೆಲವು ಕಾಲ ಸುರತ ಸುಗ್ಗಿಯೊಳಗೆ ಇದ್ದನೆಂತಲೂ ಹೇಳಿದೆ. ಈ ಕಥೆಯನ್ನು ಓದುವವರಿಗೆ ಶ್ರೀ ಪ್ರಭುದೇವರ ಜೀವನವು ವಿಕಾಸಗೊಳ್ಳುವ ರೀತಿಯು ಸಹಜವು ಎಂದು ಕಂಡು ಬರುತ್ತದೆ. ಯಾಕಂ

ದರೆ ಬಾಲ್ಯದಲ್ಲಿ ಪ್ರಭುದೇವರಿಗೆ ಮೃದಂಗ ವಾದ್ಯದ ವಿದ್ಯೆಯನ್ನು ಕಲಿಸಿರುವದರಿಂದ ಅವರಿಗೆ ಪ್ರಾಯವು ಬಂದಾಗ ಸ್ವಜನವನ್ನೂ ಸ್ವಗ್ರಾಮವನ್ನೂ ತ್ಯಾಗ ಮಾಡುವ ಬುದ್ಧಿಯು ಬರುವದು. ಆ ಪ್ರಕಾರ ಅವರು ಗೊಗ್ಗೇಶ್ವರಾಲಯವನ್ನು ಬಂದು ಸೇರುವದು; ಅಲ್ಲಿ ಮೃದಂಗವನ್ನು ಬಾರಿಸುತ್ತಿರಲು ಕಾಮಲತೆಯು ಬಂದ ಕೂಡಲೆ ಅವಳ ಸೌಂದರ್ಯವನ್ನು ನೋಡಿ "ಕ್ವಚಿತ್ ಗಾಯಕಃ ಶುಚಿಃ" ಎಂಬ ನ್ಯಾಯದಂತೆ ಮೋಹಿಸಿ ಮೂರ್ಛೆ ಹೊಂದುವದು; ಆ ಮೇಲೆ ಆ ಇಬ್ಬರನ್ನು ಒತ್ತಟ್ಟಿಗೆ ಇರಿಸಿದಲ್ಲಿ ಅವರಿಬ್ಬರು ಸುರತಸುಖದಲ್ಲಿ ಲೋಲಾಡುವದು.— ಇವೆಲ್ಲವು ಸ್ವಾಭಾವಿಕವಾಗಿ ನಡೆಯಬಹುದಾದ ಸಂಗತಿಗಳೆಂದು ಕಂಡುಬರುವದು. ಆದರೆ ಪ್ರಾಪ್ತವಯಸ್ಕರಾದ ಯುವಕರೆಲ್ಲರೂ ಕಾಮಿಗಳಾಗಬೇಕೆಂಬ ಸಿದ್ಧಾಂತವೇನೂ ಇಲ್ಲ. ಷಣ್ಮುಖಸ್ವಾಮಿಯು ವಯಸ್ಸಿಗೆ ಬಂದಕೂಡಲೆ ಆತನ ತಾಯಿಯಾದ ಪಾರ್ವತೀದೇವಿಯು ಆತನ ವಿವಾಹದ ವಿಷಯವಾಗಿ ಮಗನ ಮುಂದೆ ಪ್ರಸ್ತಾಪ ತೆಗೆಯಲು ಆದಕ್ಕೆ ಆತನು ನಾನು ಲಗ್ನವನ್ನು ಒಲ್ಲೆನೆಂದೂ ಮತ್ತು ಭೂಮಂಡಲದ ಮೇಲಿನ ಸ್ತ್ರೀಯರೆಲ್ಲರು ನಿನ್ನ ಸಮಾನರೆಂದು ಭಾವಿಸುತ್ತೇನೆಂದೂ ಹೇಳಿ ವೈರಾಗ್ಯದಿಂದ ಇದ್ದನೆಂತಲೂ ಮತ್ತು ಹನುಮನು ಪ್ರಾಯಕ್ಕೆ ಬಂದಾಗ ವಿಕಾರ ವಶನಾಗದೆ ನಿರಂತರ ಬ್ರಹ್ಮಚರ್ಯವೃತ್ತಿಯುಳ್ಳವನಾಗಿದ್ದನೆಂತಲೂ ಹಾಗು ಮುಗ್ಧಸಂಗಾರ್ಯನನ್ನು ವ್ಯಭಿಚಾರದ ಉದ್ದಿಶ್ಯವಾಗಿ ವೇಶ್ಯಾಂಗನೆಯರ ಮನೆಗೆ ಕಳುಹಲು ಆತನು ವೇಶ್ಯೆಯ ರೂಪಕ್ಕೆ ಮರುಳುಗೊಳ್ಳದೆ ಪ್ರಸನ್ನಚಿತ್ತನಾಗಿ ಆ ಸ್ಥಲದಲ್ಲಿ ಶಿವಪೂಜೆಯ ಮಾಡುತ್ತ ತನ್ನ ಇಷ್ಟಲಿಂಗದಲ್ಲಿ ದೃಷ್ಟಿಯನ್ನು ಕೀಲಿಸಿ ತನ್ನನ್ನೇ ಮರೆತುಬಿಟ್ಟನೆಂದೂ ಹೇಳಿದ್ದು ನಿಜವೆಂದು ಕಾಣುವಂತೆ ನಿರ್ಗುಣ ನಿರಂಜನನಾದ ಮಾಯಾಕೋಳಾಹಳನಾದ ಪ್ರಭುವರನು ಮಾಯಾಂಗನೆಗೆ ವಶವಾಗಲಿಲ್ಲವೆಂದು ವೀರಶೈವ ಪುರಾಣಗಳಲ್ಲಿ ಹೇಳಿರುವದು ನಿಜವೂ ಸಹಜವೂ ಎಂದು ಕಂಡುಬರುತ್ತದೆ. ಮತ್ತು ಅಷ್ಟಮದಗಳಲ್ಲಿ ಧನ, ರಾಜ್ಯ, ಯೌವನ, ಸತಿ-ಸುತರೆಂಬ ಐದು ಮದಗಳು ಒತ್ತಟ್ಟಿಗೆ ಕೂಡಿದರೂ "ಅಹಿಂಸಾ ಪರಮೋ ಧರ್ಮಃ" ಎಂಬ ತತ್ವದ ಜನಕನಾದ ಗೌತಮ ಬುದ್ಧನಿಗೆ ವೈರಾಗ್ಯವು ಉತ್ಪನ್ನವಾಯಿತೆಂದು ಹೇಳಿದ್ದರ ಉದಾಹರಣೆಯು ಇತಿಹಾಸದಲ್ಲಿ ಕಂಡುಬರುವದರಿಂದ ವೈರಾಗ್ಯ ಮೂರ್ತಿಯಾದ ಪ್ರಭುವಿಗೆ ಪ್ರಾಯಬಂದಾಗ ವೈರಾಗ್ಯವು ಉತ್ಪನ್ನವಾಯಿತೆಂದು ವೀರಶೈವಕವಿಗಳು ಹೇಳಿದ್ದು ಸಹಜವೆಂದು ಕಂಡುಬರುವದು.

ಹದಿನಾರು ಸಾವಿರ ಸತಿಯರು ಅರವತ್ತು ಸಾವಿರ ಸುತರೊಡನೆ ಪರಿಣಮಿಸುತ್ತಿದ್ದ ಶ್ರೀಕೃಷ್ಣನ ವಿಷಯವಾಗಿ ಗೋಪಾಲಕರು ತಮ್ಮ ಗೋಪಿಕಾಸ್ತ್ರೀಯರನ್ನು ಕದ್ದೊಯ್ದು ಕ್ರೀಡಿಸುವನೆಂದು ದೂರ ಹೇಳಿದರೂ ಮಂಡನಮಿಶ್ರನ ಹೆಂಡತಿಯು ಮುಂದೆ ಮಂಡನ ಮಿಶ್ರನಿಗೂ ಶಂಕರಾಚಾರ್ಯನಿಗೂ ವಾದ ನಡೆದಾಗ್ಗೆ ಸಂಸಾರ ಸುಖದ ಪ್ರಸ್ತಾಪ ಹೊರಟ ಸಮಯದಲ್ಲಿ ಬ್ರಹ್ಮಚಾರಿಯಾದ ನಿನಗೆ ಈ ಬಗ್ಗೆ ಮಾತಾಡಲಿಕ್ಕೆ ಅಧಿಕಾರವಿಲ್ಲೆಂದು ಶಂಕರಾಚಾರ್ಯನಿಗೆ ಮಂಡನಮಿಶ್ರನ ಹೆಂಡತಿಯು ಹೇಳಲು ಆಗ್ಗೆ ಶಂಕರಾಚಾರ್ಯನು ಪರಕಾಯ ಪ್ರವೇಶ ವಿದ್ಯೆಯನ್ನು ಅರಿತದ್ದರಿಂದ ಮೃತನಾದ ಒಬ್ಬ ರಾಜನ ಶರೀರದಲ್ಲಿ ತಾನು ಪ್ರವೇಶಿಸಿ ಆತನ ಸ್ತ್ರೀ ಸುಖವನ್ನನುಭವಿಸಿ ಮರಳಿ ಬಂದು ಉತ್ತರ ಕೊಟ್ಟನೆಂದು ಹೇಳುವದರಿಂದಲೂ ಹಾಗು ಪೂಜ್ಯಪಾದನಾದ ಶ್ರೀ ರೇಣುಕಾಚಾರ್ಯನು ಮುನ್ನೂರು ಪತ್ನಿಯರೊಡನೆ ರಮಿಸುತ್ತಿದ್ದನೆಂದು ರೇವಣ ಸಾಂಗತ್ಯದಲ್ಲಿ ಹೇಳುವದರಿಂದಲೂ ಹೇಗೆ ಅವರ ಗೌರವಕ್ಕೆ ಮತ್ತು ಬ್ರಹ್ಮಚರ್ಯಕ್ಕೆ ಚ್ಯುತಿಯು ಬರುವದಿಲ್ಲವೋ ಅದರಂತೆ ನಿರ್ವಾಣಯನಾದ ಗಣೇಶ್ವರನು ಕಾಮುಲತೆಯ ಗೂಡ ಪರಿಣಮಿಸಿ ಅವಳ ಮರಣದಿಂದ ಪ್ರಭುವಿಗೆ ವೈರಾಗ್ಯವು ಉತ್ಪನ್ನವಾಗಲು "ಕಾಮುಲತೆಗೊಲದಿರ್ಪನೆಂಬುದು ಪುಸಿ ನೋಡ" ಎಂದು ಕವಿಯು ವರ್ಣಿಸಿದ್ದರೂ ಚರಿತ್ರನಾಯಕನಾದ ಅಲ್ಲಮನಿಗೆ ಯಾವ ಕುಂದುಕೊರತೆಗಳು ಬರುವದಿಲ್ಲ.

## ಅಲ್ಲಮನ ವೈರಾಗ್ಯ.

"ಮರದೊಳಗಣ ಪತ್ರ ಫಲಂಗಳು ಮರದಕಾಲ ವಶದಲ್ಲಿ ತೋರುವಂತೆ, ಹರನೊಳಗಣ ಪ್ರಕೃತಿ ಸ್ವಭಾವಂಗಳು ಹರನ ಇಚ್ಛೆಯಂತೆ ತೋರುವವು ಲೀಲೆಯಾದೊಡೆ ಉಮಾಪತಿ ಲೀಲೆ ತಪ್ಪಿದಡೆ ಸ್ವಯಂಭು ಗುಹೇಶ್ವರ" ಎಂಬ ಆತನ ದಿವ್ಯ ವಚನದಲ್ಲಿ ಅಡಕವಾಗಿದ್ದ ಶಕ್ತಿವಿಶಿಷ್ಟಾದ್ವೈತ ತತ್ವದ ಮರ್ಮವನ್ನು ಜಗತ್ತಿನಲ್ಲಿ ಬೀರುವ ಉದ್ದಿಶ್ಯವಾಗಿ ನಿತ್ಯ ನಿರ್ಗುಣ ನಿರಂಜನ ನಿರಾಕಾರನಾದ ಶ್ರೀಮದನಾದಿ ಅಲ್ಲಮಪ್ರಭುದೇವನು "ಕೃತಯುಗದಲ್ಲಿ ನಾನು ಭಕ್ತಿಕಾರಣ ಸ್ಥೂಲಕಾಯನೆಂಬ ಗಣೇಶ್ವರನಾಗಿರ್ದೆನಯ್ಯಾ; ತ್ರೇತಾಯುಗದಲ್ಲಿ ನಾನು ಭಕ್ತಿ ಕಾರಣ ಶೂನ್ಯಕಾಯನೆಂಬ ಗಣೇಶ್ವರನಾಗಿರ್ದೆನಯ್ಯಾ; ದ್ವಾಪಾರದಲ್ಲಿ ನಾನು ಭಕ್ತಿ ಕಾರಣ ಅನುಮಿಷನೆಂಬ ಗಣೇಶ್ವರನಾಗಿರ್ದೆನಯ್ಯಾ; ಕಲಿಯುಗದಲ್ಲಿ ನಾನು ಭಕ್ತಿ ಕಾರಣ ಅಲ್ಲಮಪ್ರಭುದೇವನೆಂಬ ಗಣೇಶ್ವರನಾಗಿರ್ದೆ ಕಾಣಾ ಗುಹೇ

ಶ್ವರಾ." ಎಂದು ತನ್ನ ವಚನದಿಂದ ತಾನು ಯುಗಯುಗಾಂತರದಲ್ಲಿ ವೈರಾಗ್ಯಭಾಗ್ಯಾನ್ವಿತನಾಗಿ ಅವತರಿಸಿದೆನೆಂದು ಹೇಳಿರುವನು. ಆದರೆ ಈ ರಗಳೆಯಲ್ಲಿ ಕಾಮಲತೆಯು ಮಹಾಜ್ವರದಿಂದ ಮೃತ್ಯುದೇವತೆಗೆ ತುತ್ತಾದ ಕೂಡಲೆ ಅಲ್ಲಮನು ಕಾಮಲತೆ ಕಾಮಲತೆ ಎಂದು ಮರುಗಿ ಖೇದದಿಂದ ಮನ ಉಕ್ಕಿ ಮನದೊಳಗೆ ಅತಿ ವಿರಕ್ತಿಯನ್ನು ಕೈಕೊಂಡು "ಬೆರಳಿಲ್ಲ ಕಿವಿಯಿಲ್ಲ ಮುಡುಹು ಮುಂದಲೆಯಿಲ್ಲ। ಉರವಿಲ್ಲ ಮೂಗಿಲ್ಲ ಸತಿ ಕಾಮಲತೆಯಿಲ್ಲ। ಇನ್ನೇಕೆ ದೇಹದ ದುರಾಶೆ ಛೀ ತೆಗೆಯೆಂದು। ತನ್ನ ಮನದೊಳಗೆ ನಿಶ್ಚೈಸಿ ಭರದಿಂದಂದು॥ ಹತಾಶನಾಗಿ ಹೊರಟು ಶಿವಾಲಯದೊಳಗೊಳನುಗ್ಗಿದನೆಂದು ಹೇಳುವದರಿಂದ ಅಲ್ಲಮನಿಗೆ ಕಾಮಲತೆಯು ಸತ್ತ ಕೂಡಲೆ ಆತನಿಗೆ ವೈರಾಗ್ಯವು ಉತ್ಪನ್ನವಾದಂತೆ ಹೇಳಿರುವದು ಅಸಮಂಜಸವು. ಯಾಕಂದರೆ ಕಾಮಲತೆಯು ಸತ್ತ ಕೂಡಲೆ ವೈರಾಗ್ಯವು ಬರಬೇಕಾದರೆ ಅದು ಸ್ಮಶಾನ ವೈರಾಗ್ಯವು; ನಿಜವಾದ ನಿತ್ಯ ವೈರಾಗ್ಯವಲ್ಲ. ಪ್ರೀತಿಯ ವಸ್ತುವನ್ನು ಕಳಕೊಂಡ ಕೂಡಲೆ ಬರುವ ವೈರಾಗ್ಯವು ಕ್ಷಣಿಕವಿರುವದು; ಅದರಂಥಾದ್ದು ಅಥವಾ ಅದಕ್ಕೂ ಹೆಚ್ಚಿನ ಇನ್ನೊಂದು ವಸ್ತುವು ಸಿಕ್ಕರೆ ಈ ವೈರಾಗ್ಯವು ಮಾಯವಾಗುವದು ಅಂದ ಮೇಲೆ ಇದು ನಿಜ ವೈರಾಗ್ಯವೆನಿಸಲಾರದು. ಇದಕ್ಕೆ ಉದಾಸೀನತೆ ಅಥವಾ ನಿರಾಶೆಯನ್ನಬಹುದು. ಇಂಥ ಅಭಾವ ವೈರಾಗ್ಯಕ್ಕಿಂತಲೂ ನಾವು ಮೇಲೆ ಹೇಳಿದಂತೆ ಅಷ್ಟಮದಗಳಲ್ಲಿ ಐದು ಮದಗಳು ಒತ್ತಟ್ಟಿಗೆ ಕೂಡಿದರೂ ಗೌತಮನಿಗೆ ವಿಚಾರದಿಂದ ಉಂಟಾದದ್ದು ನಿಜವಾದ ವೈರಾಗ್ಯವು. ಆದುದರಿಂದ ಅಲ್ಲಮನು ನಿಮಿತ್ತ ವೈರಾಗ್ಯಯುತನಾಗದೆ ಹುಟ್ಟ ವೈರಾಗ್ಯಭಾವಾನ್ವಿತನಿದ್ದದ್ದು ನಿಜವು.

## ಅಲ್ಲಮನೂ ಅನುಮಿಷನ ಇಷ್ಟಲಿಂಗವೂ.

ಇತರ ಗ್ರಂಥಗಳಲ್ಲಿ "ಅಂಗೈಯೊಳಗಣ ಲಿಂಗವ ಕಂಡು ಮನ ಹಾರೈಸಿದಲ್ಲಿ ಅಂಗೇಂದ್ರಿಯಂಗಳೆಲ್ಲ ಲಿಂಗೇಂದ್ರಿಯಂಗಳಾದವು. ಅಂಜದಿರು ಮನವೆ, ಅಳುಕದಿರು ಮನವೆ, ಅಂಗಕ್ಕೂ ನಿನಗೂ ದೂರವೆನ್ನದಿರು. ಅಂಗದ ಕಂಗಳಲ್ಲಿಪ್ಪ, ಮನದ ಮಧ್ಯದಲ್ಲಿಪ್ಪ, ಪ್ರಾಣದ ಭಾವದಲ್ಲಿಪ್ಪ ಅಂಗ ಮನ ಪ್ರಾಣವು ಭರಿತವಾದ ಬಳಿಕ ಅಂಗಮಧ್ಯವೇ ಪ್ರಾಣ, ಪ್ರಾಣಮಧ್ಯವೇ ಲಿಂಗ, ಇದು ಸತ್ಯ ಶಿವ ಬಲ್ಲ ಶಿವನಾಣೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ ಎಂಬ ವಚನದಲ್ಲಿ ಅಡಕವಾಗಿರುವ ಲಿಂಗಾಂಗ ಸಾಮರಸ್ಯದ ಜ್ಞಾನವನ್ನು ಗೊಗ್ಗಯ್ಯನಿಗೆ ಮಾಡಿಕೊಡಬೇಕೆಂಬ ಭಾವ

ನೆಯಿಂದ ಅಲ್ಲಮದೇವನು ಅನಿಮಿಷನ ಕೈಲಿಂಗವನ್ನು ಎತ್ತಲು ಆ ಲಿಂಗದ ಕೂಡ ಅನಿಮಿಷನ ಪ್ರಾಣವು ಮತ್ತು ದೃಷ್ಟಿಯು ಕಿತ್ತು ಬರುವದನ್ನು ತೋರಿಸಿ ಆ ಮೇಲೆ ಆ ಅನಿಮಿಷನು ಇಷ್ಟಲಿಂಗದಲ್ಲಿ ತಾನು ಬೈಲಾಗಿ ತೋರಿಸಿದನೆಂದು ಹೇಳಿದೆ. ಆದರೆ ಈ ರಗಳೆಯಲ್ಲಿ ಅಲ್ಲಮನು ಅನಿಮಿಷನನ್ನು ಕಂಡು ಆತನನ್ನು ಸ್ತುತಿಸಿದ ಕೂಡಲೆ ಮನದೊಳಗೆ ಇವನು ಕಾರುಣಿಕನೆಂದು ನಿಶ್ಚೈಸಿ ತನಗೆ ತನುವಿನ ತೊಡಕು ಸಾಕೆಂದು ಭಾವಿಸಿ ಅಲ್ಲಮನು ಕೈಯೊಡ್ಡಿದ ಕೂಡಲೆ ಅನಿಮಿಷನು ಶಿವಲಿಂಗದ ನಿರೀಕ್ಷಣೆಯನ್ನು ಇಳಿಸಿ ತನ್ನ ಇಂಷ್ಟಲಿಂಗವನ್ನು ಕೊಟ್ಟನೆಂದು ಹೇಳಿದೆ. ಇದು ಅಸದ್ಧವು. ಮತ್ತು ವೀರಶೈವ ಶಾಸ್ತ್ರಕ್ಕೆ ವಿರುದ್ಧವು. ಯಾಕಂದರೆ ಅನಿಮಿಷನು ತನ್ನ ಇಷ್ಟಲಿಂಗವನ್ನು ಅಲ್ಲಮನಿಗೆ ಕೊಟ್ಟು ಉದ್ಧಾರ ಮಾಡಿದನೆಂದು ಹೇಳುವದರಿಂದ ಒಬ್ಬ ಗುರುವು ಮುಮುಕ್ಷುವಾದ ತನ್ನ ಶಿಷ್ಯನನ್ನು ಉದ್ಧಾರ ಮಾಡಬೇಕಾದರೆ ಗುರುವು ತನ್ನ ಇಷ್ಟಲಿಂಗವನ್ನು ಶಿಷ್ಯನಿಗೆ ಧರಿಸಿ ಉದ್ಧಾರ ಮಾಡಿವನೆಂದು ಕವಿಯ ಭಾವನೆ ಇದ್ದಂತೆ ತೋರುವದು. ಇದರಿಂದ ಒಬ್ಬ ಗುರುವಿನಿಂದ ಒಬ್ಬನೇ ಶಿಷ್ಯನು ಉದ್ಧಾರವಾದಂತೆಯಾಗುವದು. ಇದು ತೀರ ತಪ್ಪು; ಯಾಕಂದರೆ ಜ್ಞಾನ ಜ್ಯೋತಿಯು ಅನೇಕ ದೀವಿಗೆಗಳನ್ನು ಪ್ರಕಾಶಗೊಳಿಸುವಂತೆ ಒಬ್ಬ ಗುರುವು ಲಿಂಗಧಾರಣದಿಂದ ಅನೇಕ ಜನ ಶಿಷ್ಯರನ್ನು ಉದ್ಧಾರ ಮಾಡಬಲ್ಲನು. ಮತ್ತು ಇಷ್ಟಲಿಂಗ ಧಾರಣದ ರೀತಿಯನ್ನು ತೋಂಟದಾರ್ಯನು ತನ್ನ ವಚನದಲ್ಲಿ "ಬಯಲ ಮೂರ್ತಿಯ ಮಾಡಿ ಎನ್ನ ಕರಸ್ಥಲಕ್ಕೆ ಕೊಟ್ಟನಯ್ಯಾ ಶ್ರೀಗುರು, ಬಯಲ ಮೂರ್ತಿಯ ಅಮೂರ್ತಿಯ ಮಾಡಿ ಎನ್ನ ಪ್ರಾಣದೊಳಗೆ ಇರಿಸಿದನಯ್ಯಾ ಶ್ರೀಗುರು, ಬಯಲು ಬಯಲನೇ ಬಯಸಿ ಬಯಲೆಂದೆನಿಸಿ ಎನ್ನ ಭಾವದಲ್ಲಿಯಿರಿಸಿದನಯ್ಯಾ ಶ್ರೀಗುರು, ಇದುಕಾರಣ ಎನ್ನ ಕರಸ್ಥಲ ಮನಸ್ಥಲ ಭಾವಸ್ಥಲದಲ್ಲಿ ಧರಿಸಿ ನಾನು ಅಂಗಲಿಂಗ ಸಂಬಂಧಿಯಾದೆನಯ್ಯಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ" ಎಂದು ಹೇಳಿರುವನು. ಆದುದರಿಂದ ಅಲ್ಲಮನು ಅನಿಮಿಷನ ಇಷ್ಟಲಿಂಗವನ್ನು ಧರಿಸಿದನೆಂದು ಹೇಳಿರುವದು ತಪ್ಪು.

## ಉಪಸಂಹಾರ.

ಇತರ ಗ್ರಂಥಗಳಲ್ಲಿ ಶ್ರೀಮದನಾದಿ ಅಲ್ಲಮಪ್ರಭುದೇವನು ಮರುಳಶಂಕರದೇವ, ಅಜಗಣ್ಣಯ್ಯ, ಮುಕ್ತಾಯಕ್ಕ ಮತ್ತು ಅಕ್ಕಮಹಾ

ದೇವಿ ಮೊದಲಾದವರನ್ನು ಉದ್ಧಾರ ಮಾಡಿದನೆಂದೂ ಹಾಗು ಕಲ್ಯಾಣ ಪಟ್ಟಣಕ್ಕೆ ಹೋಗಿ ಬಸವನಿಂದ ರಚಿಸಲ್ಪಟ್ಟ ಶೂನ್ಯ ಸಿಂಹಾಸನವನ್ನು ಅಲಂಕರಿಸಿದನೆಂದೂ ಮತ್ತು ಲಕ್ಷದ ಮೇಲೆ ತೊಂಭತ್ತಾರು ಸಾವಿರ ಗಣಂಗಳಿಗೆ ಮಾಡಿದ ಪ್ರಸಾದವನ್ನು ಒಬ್ಬನೇ ಸ್ವೀಕರಿಸಿದನೆಂದೂ ಹೇಳ ರುವದು. ಆದರೆ ಈ ರಗಳೆಯಲ್ಲಿ ಇವುಗಳ ನಾಮನಿರ್ದೇಶವನ್ನಾದರೂ ಮಾಡಿಲ್ಲ. ಇತರ ಗ್ರಂಥಗಳಲ್ಲಿ ಅಲ್ಲಮನ ಅನೇಕ ಪವಾಡಗಳನ್ನು ಹೇಳಿ ದರೆ ಇದರಲ್ಲಿ ಅಲ್ಲಮನು ಪರ್ವತಾಭಿಮುಖವಾಗಿ ನಡೆಯಲು ದಾರ್ಿ ಯಲ್ಲಿ ಕೈ ಕಾಲುಗಳುಳ್ಳ ಸರ್ಪಂಗಳು, ಮುದದಿಂದ ಮಾತಾಡುತ್ತಿದ್ದ ವೃಕ್ಷಂಗಳು, ನಡೆವ ಗಿಡಗಳು, ಹಾಡುವ ಲತಾವಳಿಗಳು, ಸುಳಿವ... ನೋಡುವ ಮರಗಳು, ರೆಕ್ಕೆಯ ಗಡಗಳು ಮೊದಲಾದ ಅನೇಕ ಅದ್ಭು ತಂಗಳನ್ನೂ ಹಾಗು ಗಾವುದದಗಲದ ನೀಲವರ್ಣದ ಇರಿವೆಗಳು, ಹರಿವ ಕೆಂಡದ ತೊರೆಗಳು ಮುಂತಾದ ಭಯಾನಕಗಳನ್ನು ಕಂಡನೆಂದು ಹೇಳಿದೆ. ಮತ್ತು ಹರಿಹರನ ಕಾಲದಲ್ಲಿ (ಕಿ. ಶ. ೧೨೦೦) ಮಹಾಮಹಿಮರಿಗೆ ದೇವ ರೆಂದೆ ತಿಳಿಯುತ್ತಿದ್ದರೇ ಹೊರ್ತು ಈ ರಗಳೆಯಲ್ಲಿ ಬರೆದಂತೆ ಬರೆಯುವ ಸಾಂಪ್ರದಾಯವಿರದ್ದರಿಂದಲೂ ಮತ್ತು ಇದಕ್ಕೆ ಆಗಿನ ಕಾಲದ ವಚನ ಗಳು ಸಾಕ್ಷಿಯಾಗಿರುವದರಿಂದಲೂ ಈ ರಗಳೆಯು ಮತ್ತು ಬಸವರಾಜ ದೇವರ ರಗಳೆಯು ಹರಿಹರನವಲ್ಲವೆಂದು ಸಹಜವಾಗಿ ಗೊತ್ತಾಗುವದು. ಇಡೀ ಗ್ರಂಥವನ್ನು ಆಮೂಲಾಗ್ರ ಓದಿದರೂ ಆದರಿಂದ ವೀರಶೈವ ಧರ್ಮದ ಹೆಚ್ಚಿನ ಜ್ಞಾನವೇನೂ ಆಗದ್ದರಿಂದಲೂ ವೀರಶೈವರ ಸಹವಾಸ ದಿಂದ ವೀರಶೈವ ಧರ್ಮದ ಅನೇಕ ಪಾರಿಭಾಷಿಕ ಶಬ್ದಗಳು ಈ ಗ್ರಂಥ ದಲ್ಲಿ ಬಂದಿರುವದರಿಂದಲೂ ಪ್ರಭುವಿನ ವಿಷಯವಾಗಿ ಕವಿಯು ಈ ಗ್ರಂಥದಲ್ಲಿ ತೋರಿಸಿದ ನಿಸ್ಸೀಮ ಅವ್ಯಭಿಚಾರಿಣಿ ಭಕ್ತಿಯಿಂದಲೂ ಈ ರಗಳೆಯಲ್ಲಿ ಕಂಡುಬರುವ ಕವಿತಾ ಸಾಮರ್ಥ್ಯವು ಅಷ್ಟಿಷ್ಟೆಂದು ಹೇಳ ಲಿಕ್ಕೆ ಬಾರದಿರುವದರಿಂದಲೂ ಈತನು ವೀರಶೈವನಾದ ಬೇರೊಬ್ಬ ಕವಿಯು ಇರಬೇಕೆಂದು ಗೊತ್ತಾಗುವದು. ಮತ್ತು ಈ ಕವಿಯ ಕೈವಾಡವು ಬಹಳ ಮಾಡಿ ಹರಿಹರನ ಶಿಷ್ಯನೇ ಇರಬೇಕೆಂದು ತೋರುವದು. ಐತಿ ಹಾಸಿಕ ದೃಷ್ಟಿಯಿಂದ ಇದು ಅಷ್ಟು ಉಪಯೋಗಬೀಳದಿದ್ದರೂ ಕಾವ್ಯ ದೃಷ್ಟಿಯಿಂದ ಈ ಗ್ರಂಥವು ಗೌರವಾರ್ಹವಾಗಿದೆ. ವರ್ಣನಶೈಲಿ ಮೊದ ಲಾದವುಗಳಲ್ಲಿ ಈ ಕಾವ್ಯವು ಉದ್ಗ್ರಂಥಗಳೆಂದು ಹೊಗಳಿಸಿಕೊಳ್ಳುತ್ತಿ ರುವ ಅನೇಕ ಕಾವ್ಯಗಳಿಗಿಂತಲೂ ಶ್ರೇಷ್ಠತರವಾಗಿರುತ್ತದೆ.

# ಅಮುಗಿದೇವ ಅಥವಾ ಅಮೂಕಸಿದ್ಧನ ಶಿಲಾಶಾಸನ.

(ರಾ॥ ಸಾ॥ ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ)

ವೀರಶೈವ ಧರ್ಮದ ನಿಜತತ್ವಗಳು ಕರ್ನಾಟಕದ ಜನತೆಯಲ್ಲಿ ...ರವಾದ ಕಾಲಕ್ಕೆ ಅನೇಕ ಮಹತ್ವದ ಕಾರ್ಯಗಳಾಗಿರುತ್ತವೆ. ಇವು ಗಳ ಮೂಲಕ ಇಲ್ಲಿ ಅನೇಕ ಬಗೆಯ ಸಾಮಾಜಿಕ ರಾಜಕೀಯ ಮತ್ತು ಧಾರ್ಮಿಕ ಕ್ರಾಂತಿಗಳು ಘಟಿಸಿರುತ್ತವೆ. ನೀಚವೆಂದು ತಿಳಿಯಲ್ಪಟ್ಟಿದ್ದ ಸಮಾಜಗಳು ಉಚ್ಚ ಸ್ಥಿತಿಗೆ ಬಂದಿರುತ್ತವೆ. ಹೀನ ಸ್ಥಿತಿಯಲ್ಲಿದ್ದ ಅನೇಕ ವ್ಯಕ್ತಿಗಳು ಧಾರ್ಮಿಕ ಪುರುಷರೆಂದು ಪ್ರಸಿದ್ಧರಾಗಿ ರಾಜರಿಂದ ಸಹ ಮನ್ನಣೆಯನ್ನು ಹೊಂದಿರುವರು. ಅವರಲ್ಲಿ ಅನೇಕರು ತಮ್ಮ ಉಚ್ಚ ವಿಚಾರಗಳನ್ನು ವಚನಗಳ ಮೂಲಕ ಜನತೆಯಲ್ಲೆಲ್ಲ ಪಸರಿಸಿರುವರು. ಈ ತರದ ಕ್ರಾಂತಿಗಳು ಬಸವೇಶ್ವರನ ಕಾಲದಲ್ಲಿ ಉತ್ಪನ್ನವಾಗಿರುತ್ತವೆ.

ಕರ್ನಾಟಕದಲ್ಲಿ ಕುರುಬ ಜನಾಂಗವು ಬಹಳ ಮಹತ್ವವಾದದ್ದು. ವಿಜಾಪುರ ಜಿಲ್ಹೆಯಲ್ಲಿ ಕುರುಬರ ಸಂಖ್ಯೆಯು ಬಹು ದೊಡ್ಡದಾಗಿದೆ. ವೀರಶೈವ ಮತದ ಉದಾರ ತತ್ವಗಳು ಹಿಂದೆ ಉಳಿದಿರುವ ಈ ಸಮಾಜವನ್ನು ಸಹ ತಾಕದೆ ಇರಲಿಲ್ಲ. ಈ ಸಮಾಜದಲ್ಲಿಯೂ ಅನೇಕ ಜನ ಶರಣರು ಉತ್ಪನ್ನರಾಗಿರುವರು. ಈ ಶರಣರಿಗೆ ಸಿದ್ಧರೆಂಬ ಹೆಸರು ರೂಢವಾಗಿದೆ. ಈ ಸಿದ್ಧರಲ್ಲಿ ಅಮೂಕಸಿದ್ಧನು ಅತ್ಯಂತ ಶ್ರೇಷ್ಠನಾಗಿರುತ್ತಾನೆ. ಈ ಅಮೂಕಸಿದ್ಧನು ಅಮುಗಿದೇವನೆಂಬ ವೀರಶೈವ ವಚನಕಾರನಿರುವನು. ಕೆಳಗಿನ ಶಿಲಾಶಾಸನದಿಂದ ಅವನ ಚರಿತ್ರೆಯ ಕೆಲ ಅಂಶಗಳು ತಿಳಿದು ಬರುತ್ತವೆ.

ಶಿವಶರಣರು ಉಲ್ಲೇಖಿಸಲ್ಪಟ್ಟ ಶಿಲಾಶಾಸನಗಳಲ್ಲಿ ಎರಡು ಮಾತ್ರ ನಮಗೆ ಈ ವರೆಗೆ ಉಪಲಬ್ಧವಾಗಿರುತ್ತವೆ. ಅಬ್ಬಲೂರಲ್ಲಿಯ ಏಕಾಂತದ ರಾಮಯ್ಯನ ಶಿಲಾಶಾಸನವು ಮೊದಲನೆಯದು. ಈತನು ಕಲಚೂರ್ಯ, ಚಾಲುಕ್ಯ, ಕದಂಬ ಈ ರಾಜರಿಂದ ಮನ್ನಣೆಯನ್ನು ಹೊಂದಿದನು. ಹುಕ್ಕೇರಿ ಸಮೀಪದಲ್ಲಿರುವ ಅರ್ಜುನವಾಡದಲ್ಲಿ ದೊರೆದ ಶಿಲಾಶಾಸನವು ಎರಡನೆಯದು. ಇದರಲ್ಲಿ ಬಸವೇಶ್ವರನ ವಂಶಜನಾದ ಹಾಲಬಸವಿದೇವನ

ಉಲ್ಲೇಖವಿದೆ. ಈತನು ದೇವಗಿರಿ ಯಾದವ ರಾಜರಿಂದ ಬಹಳ ಮನ್ನಣೆ ಹೊಂದಿದ್ದನೆಂದು ತಿಳಿದುಬರುತ್ತದೆ. ಈಗ ಪ್ರಸ್ತುತ ಲೇಖದಲ್ಲಿ ಇನ್ನೊಬ್ಬ ಶಿವಶರಣನಾದ ಅಮುಗಿದೇವನ ಶಿಲಾಶಾಸನದ ವಿವರವನ್ನು ವಾಚಕರ ಎದುರಿಗೆ ಇಡುತ್ತೇವೆ. ಈತನು ದೇವಗಿರಿ ಅರಸರಲ್ಲಿ ಅತಿ ಪ್ರಖ್ಯಾತನಾದ ಸಿಂಘಣನಿಂದ ಮನ್ನಣೆ ಹೊಂದಿದ್ದನೆಂದು ಇದರಿಂದ ಕಂಡುಬರುತ್ತದೆ. ಈ ಶಿಲಾಶಾಸನವು ಪಂಢರಪುರದಿಂದ ಪೂರ್ವಕ್ಕೆ ಹದಿನೆಂಟು ಮೈಲಿನ ಮೇಲಿರುವ ಪುಳುಜ ಎಂಬ ಗ್ರಾಮದಲ್ಲಿರುವ ಲಿಂಗೇಶ್ವರ ಎಂಬ ದೇವಾಲಯದಲ್ಲಿದೆ.

ಅಮುಗಿದೇವನ ಈ ಶಿಲಾಶಾಸನವು ಕ್ರಿ. ಶ. ೧೨೦೦ನೆಯದಾಗಿದೆ. ಏಂಕಾತದ ರಾಮಯ್ಯನ ಅಬಲೂರು ಶಿಲಾಶಾಸನವಾದರೂ ೧೨೦೦ ನೆಯದೆಂದು ತರ್ಕಿಸಲ್ಪಟ್ಟಿದೆ. ಆದ್ದರಿಂದ ಈ ಉಭಯ ಶಿವಶರಣರು ಬಸವೇಶ್ವರನ ಕ್ರಾಂತಿಯ ಕಾಲದಲ್ಲಿ ಉತ್ಪನ್ನರಾದರೆಂದು ಕಂಡುಬರುವದು. ಹಾಲಬಸವಿದೇವನ ಶಿಲಾಶಾಸನವು ೧೨೬೦ ನೇ ಇಸ್ವಿಯದು ಇರುತ್ತದೆ. ಆದ್ದರಿಂದ ಬಸವೇಶ್ವರನ ಕಾಲದಲ್ಲಿ ವೀರಶೈವ ಸ್ಥಿತಿಯನ್ನರಿಯಲು ಈ ಮೂರೂ ಶಿಲಾಶಾಸನಗಳು ಬಹು ಸಹಾಯಕವಾಗಿರುತ್ತವೆ.

ಕೆಳಗೆ ಕಾಣಿಸಿದ ಈ ಶಿಲಾಶಾಸನವು ಕುರುಬ ಅಥವಾ ಹಾಲುಮತದವರಿಂದ ಅತ್ಯಂತ ಮನ್ನಣೆಯನ್ನು ಹೊಂದಿದ ಅಮಾಕಸಿದ್ಧನ ಚರಿತ್ರೆಯ ಮೇಲೆ ಬಹು ದೊಡ್ಡ ಪ್ರಕಾಶವನ್ನು ಕೆಡಹುತ್ತಲಿದೆ.

ಅಮಾಕಸಿದ್ಧನು ವೀರಶೈವ ಶಿವಶರಣನಾದ ಅಮುಗಿದೇವನೆಂತಲೇ ಹೇಳಬಹುದಾಗಿದೆ. ಅಮೋಘ ಎಂಬ ಸಂಸ್ಕೃತ ಶಬ್ದದ ತದ್ಭವವೇ ಅಮುಗಿ ಇರುತ್ತದೆ. ಈ ಅಮುಗಿ ಎಂಬುದೇ ರೂಢಿಯಲ್ಲಿ ಅಮಾಕ ಎಂದಾಗಿರುತ್ತದೆ.

ವಚನಕಾರರಾದ ಶಿವಶರಣರ ವಾಸಸ್ಥಾನಗಳನ್ನು ಕಂಡು ಹಿಡಿಯಲು ಅವರ ಮುದ್ರಿಕೆಗಳು ಬಹಳ ಸಹಾಯವಾಗುತ್ತವೆ. ಈ ಮುದ್ರಿಕೆಗಳು ಬಹುಶಃ ವಚನಕಾರರ ಇಷ್ಟದೇವತೆಗಳ ಹೆಸರುಗಳೇ ಇರುವದರಿಂದ ಈ ದೇವತೆಗಳ ಸ್ಥಳಗಳೇ ಆ ಶಿವಶರಣರ ಸ್ಥಾನಗಳಾಗಿದ್ದವೆಂದು ಊಹಿಸಬಹುದಾಗಿದೆ. ಅಲ್ಲದೆ ಆ ಶರಣರು ಒಳ್ಳೇ ಪ್ರಖ್ಯಾತಿಯನ್ನು ಹೊಂದಿದವರಾಗಿದ್ದರೆ ಅವರ ಐತಿಹ್ಯಗಳೂ ಆ ಸ್ಥಾನಗಳಲ್ಲಿ ದೊರೆಯುವದುಂಟು.

ಇವುಗಳ ಮೇಲಿಂದಲೂ ಶಿವಶರಣರ ಸ್ಥಾನಗಳನ್ನೂ, ಚರಿತ್ರೆಗಳನ್ನೂ ಕಂಡುಹಿಡಿಯಲು ಬಹಳ ಸಹಾಯವಾಗುತ್ತದೆ.

ಅಮುಗಿದೇವನ ಮುದ್ರಿಕೆಯು ಸಿದ್ಧಸೋಮನಾಥ ಎಂದು ಇರುತ್ತದೆ. (ವಚನಶಾಸ್ತ್ರಸಾರ ಭಾಗ ೧ ಉತ್ತರಾರ್ಧ ಪುಟ ೨೯೫ ಎರಡನೇ ಆವೃತ್ತಿ) ಪುಳುಜ ಈ ಗ್ರಾಮದಲ್ಲಿ ಸಿದ್ಧ ಸೋಮನಾಥ ಎಂಬ ಹೆಸರಿನ ದೇವಾಲಯವು ಈಗ ಇಲ್ಲದಿದ್ದರೂ ಈ ಶಿಲಾಶಾಸನದಲ್ಲಿ ಸಿದ್ಧಸೋಮದೇವ ದೇವಾಲಯವೆಂದು ಈ ಶಿಲಾಲೇಖವಿದ್ದ ದೇವಾಲಯದ ಉಲ್ಲೇಖವಿದೆ. ಆದ್ದರಿಂದ ಈ ದೇವಾಲಯದ ಪೂರ್ವದ ಹೆಸರು ಈಗ ನಷ್ಟವಾಗಿರಬಹುದೆಂದು ತೋರುತ್ತದೆ. ಈ ದೇವಾಲಯಕ್ಕೂ ಸಿದ್ಧಸೋಮನಾಥನ ಭಕ್ತನಾಗಿದ್ದ ಅಮುಗಿದೇವನಿಗೂ ಸಿಂಘಣನು ದಾನ ಕೊಟ್ಟಿದ್ದರ ಉಲ್ಲೇಖವು ಇದರಲ್ಲಿ ಬಂದಿದೆ.

ಅಮುಗಿದೇವನ ಉಲ್ಲೇಖವು ದೊರೆಯುವ ದೇವಾಲಯಗಳು ಪಂಢರಪುರದ ಸಮೀಪವಾಗಿರುವ ಈ ಪುಳುಜ ಅಥವಾ ಪುಳುಂಜ ಮಾತ್ರವಷ್ಟೇ ಅಲ್ಲ ವಿಜಾಪೂರ ಜಿಲ್ಹೆಯ ಉತ್ತರಭಾಗ, ಜತ್ತಿ ಸಂಸ್ಥಾನ, ಮುಧೋಳ ಸಂಸ್ಥಾನ ಇಲ್ಲಿಯೂ ಕೂಡ ಅವನ ದೇವಾಲಯಗಳು ಪ್ರಸಿದ್ಧವಾಗಿರುತ್ತವೆ. ವಿಜಾಪೂರ ಪಟ್ಟಣದ ಉತ್ತರಕ್ಕೆ ೬ ಮೈಲಿನ ಮೇಲಿರುವ ಅರಕೇರಿ ಎಂಬ ಗ್ರಾಮದಲ್ಲಿಯೂ, ಪೂರ್ವಕ್ಕೆ ೫ ಮೈಲುಗಳ ಮೇಲಿರುವ ಮದಭಾವಿ ಎಂಬಲ್ಲಿಯೂ ಅಮೂಕಸಿದ್ಧನ ದೇವಾಲಯಗಳಿವೆ. ಮುಧೋಳದಲ್ಲಿಯೂ ಆತನ ಒಂದು ದೇವಾಲಯವಿದೆ. ಆದರೆ ಅರಕೇರಿಯ ದೇವಸ್ಥಾನವು ಎಲ್ಲಕ್ಕೂ ಬಹು ಪ್ರಸಿದ್ಧವಿದ್ದು ಇಲ್ಲಿಯ ಜಾತ್ರೆಯು ಪ್ರತಿವರ್ಷ ಬಹು ದೊಡ್ಡದಾಗುತ್ತದೆ. ಮೇಲ್ಕಂಡ ಯಾವತ್ತು ದೇವಾಲಯಗಳಿಗೆ ಇಲ್ಲಿಯ ಎಲ್ಲ ಸಮಾಜದವರು ಬಹು ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ವಿಜಾಪೂರ ಮತ್ತು ಜತ್ತ ಸಂಸ್ಥಾನಗಳಲ್ಲಿ ಅನೇಕ ಸಿದ್ಧರ ದೇವಾಲಯಗಳುಂಟು. ಪೂರ್ವ ಕಾಲದಲ್ಲಿ ಅನೇಕ ಸಿದ್ಧರು ಹುಟ್ಟಿ ಬಸವೇಶ್ವರನಿಗೆ ಬಹಳ ಸಹಾಯಮಾಡಿದರೆಂದು ಈ ಕಡೆಯ ಕುರುಬ ಜನಾಂಗದಲ್ಲಿ ಐತಿಹ್ಯವದೆ. ಆದರೆ ಈ ಎಲ್ಲ ಸಿದ್ಧರಲ್ಲಿ ಅಮೂಕಸಿದ್ಧ ಅಥವಾ ಅಮುಗಿದೇವನೇ ಒಳ್ಳೇ ಪ್ರಸಿದ್ಧನಾಗಿದ್ದನೆಂದು ತೋರುತ್ತದೆ. ಅರಕೇರಿಯ ಅಮೂಕಸಿದ್ಧನ ಜಾತ್ರೆಯ ಕಾಲದಲ್ಲಿ ಮೇಲೆ ಹೇಳಿದ ಎಲ್ಲ ಭಾಗಗಳಲ್ಲಿರುವ ಸಿದ್ಧರ ದೇವಾಲಯಗಳಿಂದ ಪಲ್ಲಕ್ಕಿಗಳು ಇಲ್ಲಿಗೆ

ಬಂದು ಕೂಡುತ್ತವೆ. ಮತ್ತು ಅಮೂಕಸಿದ್ಧನನ್ನು ಮನ್ನಿಸಿ ಹಿಂದಿರುಗು ತ್ತವೆ. ಮೇಲ್ಕಂಡ ಸಂಗತಿಗಳಿಂದ ಅಮುಗಿದೇವನು ಪುಳುಜು ಗ್ರಾಮ ದಲ್ಲಿ ಇದ್ದು ಅವನು ಮಹತ್ವಿಕ ಪುರುಷನಾದ್ದರಿಂದ ಅವನು ಸಂಚ ರಿಸಿದ ಸ್ಥಳಗಳಲ್ಲಿ ಅನೇಕ ದೇವಾಲಯಗಳು ಉತ್ಪನ್ನವಾಗಿರುತ್ತವೆಂದು ಊಹಿಸಬಹುದಾಗಿದೆ.

ವಿಜಾಪುರ ಜಿಲ್ಹೆಯಲ್ಲಿ ಕುರುಬ ಜನಾಂಗದಲ್ಲಿ ಬಹು ಜನರು ವೀರಶೈವ ಮತವನ್ನು ಸ್ವೀಕರಿಸಿರುತ್ತಾರೆ. ಅವರು ಈಗಲೂ ಪೂರ್ಣ ವೀರಶೈವರಂತೆಯೇ ನಡೆಯುತ್ತಾರೆ. ಅನೇಕ ಜನ ದೊಡ್ಡ ದೊಡ್ಡ ವತನದಾರರು ಈ ಸಮಾಜದಲ್ಲಿ ಇರುವರು. ಈ ವೀರಶೈವ ಕುರುಬ ರನ್ನು ಹಂಡೇ ವಜೀರರೆಂಬ ಹೆಸರಿನಿಂದ ಇಲ್ಲಿ ಕರೆಯುವದುಂಟು. ಅಮುಗಿದೇವನ ಕಾಲದಲ್ಲಿಯೇ ಇವರು ವೀರಶೈವರಾಗಿರಬಹುದೆಂದು ತೋರುತ್ತದೆ. ಇನ್ನು ಮೇಲೆ ಅಮುಗಿದೇವನ ಚರಿತ್ರೆಯ ಮೇಲೆ ಈ ಶಿಲಾಲೇಖದಿಂದ ಯಾವ ಪ್ರಕಾಶವು ಬೀಳುತ್ತದೆಂಬದನ್ನು ನಿರೀಕ್ಷಿಸುವಾ.

ಶಿಲಾಲೇಖದಲ್ಲಿಯ ಈತನ ಒಕ್ಕಣಿಕೆಗಳನ್ನು ನೋಡಿದರೆ ಅವನು ಆಗ ಅತ್ಯಂತ ಪೂಜ್ಯನಾಗಿದ್ದನೆಂಬುದು ಸ್ಪಷ್ಟವಾಗುತ್ತದೆ. ದೇವಗಿರಿ ಯಾದವರಲ್ಲಿ ಅತ್ಯಂತ ಪ್ರಸಿದ್ಧ ರಾಜನಾದ ಸಿಂಘಣದೇವನು ಪುಳುಜ ಗ್ರಾಮಕ್ಕೆ ಬಂದು ಸಿದ್ಧಾರ್ಥಿ ಸಂವತ್ಸರದ ಮಾಘ ಶುದ್ಧ ಏಕಾದಶಿ ದಿವಸ ಶ್ರೀ ಸ್ವಯಂಭು ಸಿದ್ಧಸೋಮನಾಥದೇವರ ಪೂಜಾ ಸಮಯದಲ್ಲಿ "ಅಮುಗಿ ದೇವರಸರಿಗೆ ಇಥ್ಥೀ ಎಂಬ ಗ್ರಾಮವನ್ನು ಧಾರಾಪೂರ್ವಕ ದಾನ ಕೊಟ್ಟಿದ್ದು ಇದರಲ್ಲಿ ಉಲ್ಲೇಖವಿದೆ. (ಓಳಿ ೩೨—೩೫) ಅದೇ ಮೇರೆಗೆ ಈ ರಾಜನು ಸೋಮನಾಥದೇವರಿಗೂ ಇನಾಮುಗಳನ್ನು ಕೊಟ್ಟಿರುವನು. ಇದರ ಮೇಲಿಂದ ಅಮುಗಿದೇವನು ಈ ಕಾಲದಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿದ್ದನೆಂದು ತಿಳಿದು ಬರುವದು.

ಈ ಶಿಲಾಶಾಸನದಲ್ಲಿ ಅಮುಗಿದೇವನ ವರ್ಣನೆಯು ಬಂದಿದ್ದು ಅದರ ಮೇಲಿಂದ ಅವನು ವೀರಶೈವ ಧರ್ಮವನ್ನು ಪಾಲಿಸುತ್ತಿದ್ದನೆಂಬ ಊಹೆಗೆ ಆಸ್ಪದವಿದೆ. ೫ ನೇ ಓಳಿಯಲ್ಲಿ ಅವನು "ಶಿವಾಚಾರೈಕ ನಿರ ತನೂ ಲಿಂಗೈಕ್ಯನೂ" ಎಂದು ಹೇಳಲ್ಪಟ್ಟಿದ್ದಾನೆ. ೧೫ ನೇ ಓಳಿಯಲ್ಲಿ 'ಲಿಂಗೈಕ್ಯದೇಹಿ' ಎಂದು ವರ್ಣಿಸಲ್ಪಟ್ಟಿದ್ದಾನೆ. ಈ ಶಬ್ದಗಳು ವೀರಶೈವ ಧರ್ಮಕ್ಕೆ ಸಂಬಂಧಪಟ್ಟವುಗಳಾಗಿವೆ. ಈ ಶಬ್ದಗಳು ವೀರಶೈವರನ್ನು

ಬಿಟ್ಟು ಇತರ ಸಮಾಜದವರಿಗೆ ಬಹುಶಃ ಅನ್ವಯಿಸುವದಿಲ್ಲ. ೧೬ ನೇ ಓಳಿಯಲ್ಲಿ 'ಶರಣ ಸಂತಾನ ಶ್ರೀ ಅಮುಗಿದೇವರಸಗೆ' ಎಂಬ ಉಲ್ಲೇಖವಿದೆ. ಬಸವೇಶ್ವರನ ಸಂಪ್ರದಾಯಕರನ್ನು ಶರಣರೆಂದು ಕರೆಯುವದುಂಟು. ಈ ವಿವರಣೆಗಳ ಮೇಲಿಂದ ಅಮುಗಿದೇವನು ಬಸವೇಶ್ವರನ ಕಾಲೀನನಾಗಿ ಪ್ರಖ್ಯಾತಿಯನ್ನು ಹೊಂದಿದ್ದನೆಂದು ಊಹಿಸಬಹುದಾಗಿದೆ.

ಶಿಲಾಶಾಸನದ ೫ ನೇ ಓಳಿಯಲ್ಲಿ "ಮುನಿವತ್ ಪೂಜಿತೋಯತಿಃ" ಎಂದು ಅಮುಗಿದೇವನು ಹೇಳಲ್ಪಟ್ಟಿದ್ದಾನೆ. ಮುಂದೆ ೮ ನೇ ಓಳಿಯಲ್ಲಿ "ಮಾಹೇಶ್ವರ ಗಣಕುಲಾನ್ವಯ ದಿವಾಕರ" ಎಂದು ಹೇಳಲ್ಪಟ್ಟಿದ್ದಾನೆ. ಅರ್ಜುನವಾಡದ ಶಿಲಾಶಾಸನದಲ್ಲಿ ಹಾಲಬಸವಿದೇವನು "ಮಹಾಮಾಹೇಶ್ವರ" ನೆಂತಲೂ "ಮುನೀಶ್ವರ" ನೆಂತಲೂ ಕರೆಯಲ್ಪಟ್ಟಿದ್ದಾನೆ. ಅವನ ವಂಶಸ್ಥರೆಲ್ಲರೂ ಸಹ 'ಮುನಿಪ' 'ಮಹಾಮಹೇಶ್ವರ' ಎಂದು ಹೇಳಲ್ಪಟ್ಟಿದ್ದಾರೆ. ಇವೇ ಶಬ್ದಗಳಿಂದಲೇ ಅಮುಗಿದೇವನಾದರೂ ಈ ಶಿಲಾಶಾಸನದಲ್ಲಿ ಸಂಬೋಧಿಸಲ್ಪಟ್ಟಿರುವನು. ಈ ಸಂಗತಿಗಳ ಮೇಲಿಂದಲೂ ಬಸವೇಶ್ವರನ ವಂಶದವರಂತೆ ಅಮುಗಿದೇವನಾದರೂ ವೀರಶೈವನಿರಬಹುದೆಂದು ಊಹಿಸಬಹುದಾಗಿದೆ.

ಮೇಲ್ಕಂಡ ಮೂರೂ ಶಿಲಾಶಾಸನಗಳು ಶಿವಶರಣರಿಗೆ ಸಂಬಂಧಿಸಿದ್ದರೂ ಅವುಗಳಲ್ಲಿ 'ವೀರಶೈವ' ಈ ಶಬ್ದವು ಬಂದಿರುವದಿಲ್ಲೆಂಬದು ಲಕ್ಷಿಸತಕ್ಕ ಸಂಗತಿಯಾಗಿದೆ. ಬಸವೇಶ್ವರನ ಕಾಲದಲ್ಲಿ ವೀರಶೈವ ಸಮಾಜಕ್ಕೆ 'ವೀರಶೈವ' ಎಂಬ ಹೆಸರು ಇದ್ದಿಲ್ಲೆಂದು ತೋರುತ್ತದೆ. ಬಸವೇಶ್ವರನ ಕಾಲದ ವಚನಗಳಲ್ಲಿ ಮತ್ತು ಆಗಿನ ಶಿಲಾಶಾಸನಗಳಲ್ಲಿ ಈ ಹೆಸರು ಉಪಲಬ್ಧವಿಲ್ಲ. ಅದರ ಬದಲು ಅವುಗಳಲ್ಲಿ ವಾಡಿಕೆಯಾಗಿ ಬರುತ್ತಿರುವ ಶಬ್ದಗಳೆಂದರೆ ಲಿಂಗಿ, ಲಿಂಗವುಳ್ಳವರು, ಲಿಂಗವಂತರು, ಶಿವಾಚಾರದವರು, ಭಕ್ತರು, ಮಾಹೇಶ್ವರರು, ಶರಣರು ಈ ಬಗೆಯ ಶಬ್ದಗಳೇ ಬರುವದುಂಟು. ಆದರೆ ಬಸವೇಶ್ವರನ ತರುವಾಯ ೨೦೦–೩೦೦ ವರ್ಷಗಳಾದ ಬಳಿಕ ಉತ್ಪನ್ನವಾದ ಗ್ರಂಥಗಳಲ್ಲಿ ವೀರಶೈವ ಈ ಶಬ್ದವು ಬರಹತ್ತುತ್ತದೆ.

ಶಿಲಾಶಾಸನದ ೯ ನೇ ಓಳಿಯಲ್ಲಿ ಅಮುಗಿದೇವನು ಸಿದ್ಧಕುಲಾನ್ವಯಾರ್ಣವ ಪ್ರವರ್ಧನ ಸುಧಾಕರ" ಎಂದು ಕರೆಯಲ್ಪಟ್ಟಿದ್ದಾನೆ. ಇದರ ಮೇಲಿಂದ ಅಮುಗಿದೇವನ ಕಾಲದಲ್ಲಿ ಅನೇಕ ಸಿದ್ಧರು ಇದ್ದ

ರೆಂದು ತಿಳಿಯುತ್ತದೆ. ಈ ಸಿದ್ಧರಿಗೆಲ್ಲ ಹೆಚ್ಚಳವನ್ನುಂಟುಮಾಡತಕ್ಕವನೆಂದು ಅಮುಗಿದೇವನು ಇಲ್ಲಿ ವರ್ಣಿಸಲ್ಪಟ್ಟಿದ್ದಾನೆ. ಈ ಸಂಗತಿಯಾದರೂ ವೀರಶೈವ ಸಮಾಜದ ಪ್ರಸಾರವು ಹೇಗಾಯಿತೆಂಬದನ್ನು ಸೂಚಿಸುವಂತಹದಿರುತ್ತದೆ.

ಅಮುಗಿದೇವನು ವಿಶೇಷ ತರದ ಸಿದ್ಧಿಗಳನ್ನು ಪಡೆದವನೆಂತಲೂ ೧೨ ನೇ ಓಳಿಯಲ್ಲಿ ವರ್ಣಿಸಲ್ಪಟ್ಟಿದ್ದಾನೆ. ಅವನು ದೂರಶ್ರವಣ, ದೂರದರ್ಶನ, ಜ್ಞಾನಸಂಪನ್ನ, ಅಣಿಮಾದ್ಯಷ್ಟಗುಣಪರಿಪೂರ್ಣ ಎಂದು ಹೇಳಲ್ಪಟ್ಟಿದ್ದಾನೆ

ಅಮುಗಿದೇವನು ಅತ್ಯಂತ ವಿದ್ವಾಂಸನೂ ಬಹುಶ್ರುತನೂ ಇದ್ದನೆಂದು ತಿಳಿದುಬರುತ್ತದೆ. ಯಾಕಂದರೆ ಶಿಲಾಶಾಸನದ ೧೧ ನೇ ಓಳಿಯಲ್ಲಿ ಅವನು ಷಡ್‍ದರ್ಶನಗಳನ್ನು ಬಲ್ಲವನೆಂತಲೂ ೧೬ ನೇ ಓಳಿಯಲ್ಲಿ ವೇದ ವೇದಾಂಗ ತತ್ವಜ್ಞಾನರ್" ಎಂತಲೂ ೧೮ ನೇ ಓಳಿಯಲ್ಲಿ "ಷಟ್ ಕರ್ಮನಿರತ" ನೆಂತಲೂ ೧೯ ನೇ ಓಳಿಯಲ್ಲಿ "ಅಷ್ಟಾದಶ ಶ್ರುತಿ ಸ್ಮೃತಿ ಪುರಾಣ ಕಾವ್ಯ ನಾಟಕ ಭಂಗಿ ಭಾಷಣ ಕವಿ ಗಮಕಿ ವಾದಿ ವಾಗ್ಮಿ ಹೃದಯಾಕೃಷ್ಟ ಮಂತ್ರಾಕ್ಷರ" ನೆಂತಲೂ ಹೇಳಲ್ಪಟ್ಟಿದ್ದಾನೆ.

೧೪ ನೇ ಒಳಿಯಲ್ಲಿ "ವೀರನಾಗರಸ ಲಬ್ಧವರ ಪ್ರಸಾದ" ಎಂದು ಹೇಳಲ್ಪಟ್ಟಿದ್ದಾನೆ. ಆದರೆ ಈ ವೀರನಾಗರಸನ ವೃತ್ತಾಂತವಾವುದೆಂಬುದು ನಮಗೆ ಗೊತ್ತಾಗಿರುವದಿಲ್ಲ. ಆದರೆ ಶಿಲಾಶಾಸನದ ೪೪ ನೇ ಓಳಿಯಲ್ಲಿ ಈ ಬಗ್ಗೆ ಸ್ವಲ್ಪ ಉಲ್ಲೇಖವು ಬಂದಿದೆ. ವೀರನಾಗರಸನ ದೇವಾಲಯವು ಈ ಗ್ರಾಮದಲ್ಲಿದ್ದು ಮಹಾ ಮಂಡಳೇಶ್ವರನಾದ ವಿಕ್ರಮಾದಿತ್ಯನು ಪುಳುಂಜದಲ್ಲಿ ಅದನ್ನು ಕಟ್ಟಿಸಿದನೆಂದು ಇದರಲ್ಲಿ ಉಲ್ಲೇಖವಿದೆ. ಇದರಿಂದ ಅಮುಗಿದೇವನು ಈ ನಾಗರಸನಿಂದ ಪ್ರಸಾದವನ್ನು ಹೊಂದಿದವನಾಗಿಯೂ ಸಿದ್ಧಸೋಮನಾಥನ ಭಕ್ತನಾಗಿಯೂ ಇದ್ದನೆಂದು ವ್ಯಕ್ತವಾಗುತ್ತದೆ. (ಓಳಿ ೧೫)

ಮೇಲ್ಕಂಡ ವಿವರಣೆಗಳಿಂದ ಅಮುಗಿದೇವನು ಆ ಕಾಲದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದವನೂ ವೀರಶೈವನೂ ಆಗಿದ್ದನೆಂದು ಸ್ಪಷ್ಟವಾಗುತ್ತದೆ.

ಅಮುಗಿದೇವನು ವೀರಶೈವರಲ್ಲಿ ಶಿವಶರಣನೆಂದು ಪ್ರಸಿದ್ಧಿಹೊಂದಿರುವದಲ್ಲದೆ ವಚನಕಾರನೆಂತಲೂ ಪ್ರಸಿದ್ಧಿಯನ್ನು ಹೊಂದಿದ್ದಾನೆ. ನಾನು ಸಂಗ್ರಹಿಸಿದ ವಚನಗಳಲ್ಲಿ ಈತನವು ೧೭ ವಚನಗಳು ಮಾತ್ರ ನನಗೆ

ದೊರಕಿವೆ. ಇವುಗಳನ್ನು ನಾನು ಈ ಲೇಖದ ಅಂತ್ಯದಲ್ಲಿ ಕೊಟ್ಟಿದ್ದೇನೆ. ಅವುಗಳು ಪುರಾತನ ವಚನಗಳಂತೆಯೇ ಭಾವಗರ್ಭಿತವೂ ಸೂತ್ರರೂಪವೂ ಆಗಿರುತ್ತವೆ. ಆದರೆ ನನಗೆ ದೊರೆದ ವಚನಗಳ ಈ ಸಂಖ್ಯೆಯು ಅತ್ಯಲ್ಪವಾಗಿರುತ್ತದೆ. ಆದರೆ ಇನೂ ಹೆಚ್ಚಾಗಿ ನಾವು ಶೋಧಿಸಿದಲ್ಲಿ ಇನ್ನೂ ಅನೇಕ ವಚನಗಳು ದೊರೆಯಬಹದಾಗಿವೆ. ಈ ಸಂಗತಿಯು ಮೇಲಿಂದಲೂ ಅಮುಗಿದೇವನು ಪೂರ್ಣ ವೀರಶೈವನಾಗಿದ್ದನೆಂಬದು ಮತ್ತಿಷ್ಟು ದೃಢಪಡುತ್ತದೆ.

ಅಮುಗಿದೇವನಿಗೆ ರಾಯಮ್ಮ ಎಂಬ ಹೆಂಡತಿಯು ಇದ್ದು ಆಕೆಯಾದರೂ ವಚನಗಳನ್ನು ರಚಿಸಿದಂತೆ ವಚನ ಸಂಗ್ರಹಗಳಿಂದ ಗೊತ್ತಾಗುತ್ತದೆ. ಆಕೆಯ ವಚನಗಳ ಮುದ್ರಿಕೆಯು 'ಅಮುಗೇಶ್ವರ ಲಿಂಗ' ಎಂದು ಇದೆ. ಈಕೆಯ ವಚನಗಳು ನಮಗೆ ದೊರೆತದ್ದು ನಾಲ್ಕು ಮಾತ್ರ. ಅವುಗಳನ್ನೂ ಕೂಡ ಈ ಲೇಖದ ಅಂತ್ಯದಲ್ಲಿ ಕೊಟ್ಟಿದ್ದೇವೆ.

ಬಸವೇಶ್ವರನ ಕಾಲದಲ್ಲಿ ಶಿವಶರಣರು ಮುನಿಗಳೂ, ಯತಿಗಳೂ, ಮಾಹೇಶ್ವರರೂ ಎಂದು ಸಂಭೋಧಿಸಲ್ಪಟ್ಟರೂ ಅವರು ವಿವಾಹಿತರಾಗಿದ್ದು ಕಂಡುಬರುತ್ತದೆ. ಷಟ್‌ಸ್ಥಲಶಾಸ್ತ್ರದ ತತ್ವಗಳ ಪ್ರಕಾರ ವೀರಶೈವರಲ್ಲಿ ವಿವಾಹವು ತ್ಯಾಜ್ಯವಾದುದಲ್ಲ. ಅವಿವಾಹಿತರಾಗಿ ಉಳಿದವರೇ ಹೆಚ್ಚಿನವರೆಂದು ತಿಳಿಯುವ ಪದ್ಧತಿಯು ವೀರಶೈವರಲ್ಲಿ ಈಚಿನದಾಗಿರುತ್ತದೆ. ಬಸವೇಶ್ವರನ ಕಾಲದಲ್ಲಿ ಹೀಗಿರಲಿಲ್ಲ. ಹಾಲಬಸವಿದೇವನ ವಂಶಜರೆಲ್ಲರೂ ಮಾಹೇಶ್ವರರೆಂದು ಕರೆಯಲ್ಪಟ್ಟರೂ ಅವರು ವಿವಾಹಿತರಾಗಿಯೇ ಇದ್ದರು. ಹಾಗೆಯೇ ಅಮುಗಿದೇವನು ವಿವಾಹಿತನಾಗಿದ್ದನು. ಆದರೂ ಶಿಲಾಶಾಸನದ ೧೧ನೇ ಓಳಿಯಲ್ಲಿ ಅವನು "ನಿತ್ಯನಿರಂಜನ ಪ್ರಭಾವ ಪರಿಪೂರ್ಣ" "ಸಕಲ ಭೂತ-ಚೇತ-ಚೈತನ್ಯ ಸ್ವರೂಪ" ಎಂದು ಉಚ್ಚಪದವಿಗೆ ಶೋಭಿಸುವಂಥ ಶಬ್ದಗಳಿಂದ ವರ್ಣಿಸಲ್ಪಟ್ಟಿದ್ದಾನೆ. ಇದರಿಂದ ಅಮುಗಿದೇವನು ಆಗಿನ ಕಾಲದ ಜನರಿಂದ ಬಹಳವಾಗಿ ಮನ್ನಿಸಲ್ಪಡುತ್ತಿದ್ದನೆಂಬುದು ವಿಶದವಾಗುತ್ತದೆ.

ಇನ್ನು ಮೇಲೆ ಈ ಶಿಲಾಲೇಖದಲ್ಲಿ ಕಂಡುಬರುವ ಕೆಲವು ಐತಿಹಾಸಿಕ ವಿಷಯಗಳನ್ನು ಇಲ್ಲಿ ವಿವರಿಸುವದು ಅವಶ್ಯವಿರುತ್ತದೆ. ಇದರ ೨೯ ನೆಯ ಓಳಿಯಲ್ಲಿ ಸಿಂಘಣರಾಜನ ವರ್ಣನಾಪರ ಒಕ್ಕಣಿಕೆಯ ಮೇಲಿಂದ ಅವನು ಎಷ್ಟು ಪ್ರಬಲನಾಗಿದ್ದನೆಂಬದು ಗೊತಾಗುತ್ತದೆ. ಅವನು

ಗುರ್ಜರ ಹೃದಯ ಜರ್ಝರ' ಎಂತಲೂ 'ಮಾಳವೇಶ್ವರ ಮದನ ಮಹೇಶ್ವರ' ನೆಂತಲೂ 'ಪ್ರಬಳತರ ಹೊಯಿಸಳ ಲಕ್ಷ್ಮೀಹರಣ' ನೆಂತಲೂ ಹೇಳಲ್ಪಟ್ಟಿದ್ದಾನೆ. ಸಿಂಘಣನ ರಾಜ್ಯವು ಗುಜರಾಥ ಮತ್ತು ಮಾಳವಾ ದೇಶಗಳಲ್ಲಿ ವ್ಯಾಪಿಸಿದ್ದಲ್ಲದೆ ಅವನು ಹೊಯಿಸಳರ ಕೂಡ ಕಾಳಗ ಮಾಡಿ ಜಯವನ್ನು ಸಂಪಾದಿಸಿದ್ದನೆಂದು ತೋರುತ್ತದೆ. ಈ ರಾಜರು ಪುಳುಜ ಗ್ರಾಮಕ್ಕೆ ಬಂದ ಕಾಲದಲ್ಲಿ ಸಿದ್ಧಸೋಮದೇವರಿಗೂ ಅಮುಗಿದೇವನಿಗೂ ಅವನು ದಾನಕೊಟ್ಟಂತೆಯೂ ಅವನ ಕೈಕೆಳಗಿನ ಅಧಿಕಾರಿಗಳಾದ ಸಾಹಣಿಕುಮಾರ, ಸೋಯಿದೇವ, ಗಂಗಿದೇವ, ಸಂಕಮದೇವ, ಬಿಜ್ಜನಾಣ, ರವಿಯದೇವ, ಜೋಯಿದೇವ ಇವರೇ ಮೊದಲಾದವರು ಸಹ ದಾನಕೊಟ್ಟದ್ದು ಇದರಲ್ಲಿ ಹೇಳಲ್ಪಟ್ಟಿದೆ.

ಈ ಶಿಲಾಲೇಖದಲ್ಲಿ ಪುಳುಜ ಗ್ರಾಮದ ಸುತ್ತಲಿನ ಗ್ರಾಮಗಳು ಉಲ್ಲೇಖಿಸಲ್ಪಟ್ಟಿವೆ. ಇನೆಲ್ಲವು ಸೊಲ್ಲಾಪೂರ ಜಿಲ್ಹೆಯಲ್ಲಿ ಪಂಢರಪೂರ ಮಾಢೆ ಮತ್ತು ಸೊಲ್ಲಾಪೂರ ಈ ಮೂರು ತಾಲೂಕುಗಳಲ್ಲಿ ಈಗಲೂ ಅಸ್ತಿತ್ವದಲ್ಲಿವೆ. ಈ ಶಿಲಾಶಾಸನದ ಕಾಲದಲ್ಲಿ ಈ ಗ್ರಾಮಗಳ ಸುತ್ತುಮುತ್ತು ಕನ್ನಡ ಭಾಷೆಯು ನಡಿಯುತ್ತಿದ್ದದ್ದು ಗೊತ್ತಾಗುತ್ತದೆ. ಆದರೆ ಈ ಭಾಗದಲ್ಲೆಲ್ಲ ಈಗ ಮರಾಠೀ ಭಾಷೆಯು ವ್ಯಾಪಿಸಿನೆ. ಶುದ್ಧ ಕನ್ನಡ ಗ್ರಾಮಗಳ ಹೆಸರುಗಳು ಹ್ಯಾಗೆ ಈಚೆಗೆ ಮರಾಠೀ ಸ್ವರೂಪವನ್ನು ಹೊಂದಿರುತ್ತವೆಂಬದು ಈ ಶಿಲಾಲೇಖದಿಂದ ಚನ್ನಾಗಿ ತಿಳಿಯುತ್ತದೆ. ಈ ಬದಲಾವಣೆಗಳು ಬಹು ಮನೋರಂಜಕವಾಗಿವೆ. ಈಗಿನ ಪುಳುಂಜ ಗ್ರಾಮವು ಶಿಲಾಲೇಖದಲ್ಲಿ ಪೂರ್ಣಜಾ ಎಂದು ಸಂಸ್ಕೃತದಲ್ಲಿ, ಹೂಳಜೆ ಎಂದು ಕನ್ನಡದಲ್ಲಿ ಹೇಳಲ್ಪಟ್ಟಿದೆ. ಕನ್ನಡ ಇಥ್ಥೀ (ಓಳಿ ೩೪) ಇದು ಈಗ ಇಟಿ ಎಂದು ಆಗಿರುತ್ತದೆ. ಈ ಗ್ರಾಮವು ಈಗ ಪುಳುಂಜೆಯ ಪಶ್ಚಿಮಕ್ಕೆ ಎರಡು ಮೈಲಿನ ಮೇಲೆ ಇದೆ. ಕನ್ನಡ ಸೋಯಿಜಣ ಗಾಮವು (ಓಳಿ ೪೫) ಈಗ ಸೌದನೆ ಎಂಬ ಹೆಸರಿನ ಗ್ರಾಮವಾಗಿದೆ. ಇದು ಪುಳುಜೆಯಿಂದ ಈಶಾನ್ಯಕ್ಕೆ ೭ ಮೈಲಿನ ಮೇಲೆ ಇದೆ. ಶಿಲಾಲೇಖದಲ್ಲಿಯ ಕುರುವಲಿಗೆ ಗ್ರಾಮವು (ಓಳಿ ೪೯) ಈಗ ಕುರೂಲ ಎಂದು ಆಗಿರುತ್ತದೆ. ಇದು ಪುಳುಜೆಯ ಪೂರ್ವಕ್ಕೆ ೧೧ ಮೈಲಿನ ಮೇಲೆ ಇದೆ. ಕನ್ನಡ ದೇಗ್ರಾವೆ ಗ್ರಾಮವು (ಒಳಿ ೫೨) ಈಗ ದೇಗಾಂವ ಎಂದು ಕರೆಯಲ್ಪಡುತ್ತದೆ. ಇದು ಪುಳುಜೆಯ ಆಗ್ನೆಯ ದಿಕ್ಕಿಗೆ ೬ ಮೈಲಿನ ಮೇಲೆ ಇದೆ. ಕನ್ನಡ

ದಕ್ಷಿಯ ಲ್ಳಿಗೆ ಗ್ರಾಮವು (ಓಳಿ ೫೨) ನಳೀ ಎಂಬ ಹೆಸರಿನದಾಗಿದೆ. ಇದು ಪುಳುಜದಿಂದ ಪೂರ್ವಕ್ಕೆ ೮ ಮೈಲಿನ ಮೇಲೆ ಇದೆ. ಪಥ್ಥರಿಗೆ ಎಂಬ ಗ್ರಾಮವು (ಓಳಿ ೫೬) ಈಗ ಪಾಥರಿ ಎಂದಾಗಿರುತ್ತದೆ. ಇದು ಪುಳುಜದಿಂದ ಪೂರ್ವಕ್ಕೆ ೧೨ ಮೈಲಿನ ಮೇಲೆ ಇದೆ. ಕನ್ನಡದಲ್ಲಿಯ ಕೊರವಳ್ಳಿ ಗ್ರಾಮವು (ಓಳಿ ೫೬) ಈಗ ಕುರೋಲಿ ಎಂದಾಗಿರುತ್ತದೆ. ಇದು ಪುಳುಜದಿಂದ ೧೬ ಮೈಲಿನ ಮೇಲೆ ಇದೆ. ಚಿಂಚವಳ್ಳಿ ಗ್ರಾಮವು (ಓಳಿ ೫೮) ಈಗ ಘೂಲಚಿಂಚೋಲಿ ಎಂದು ಕರೆಯಲ್ಪಡುತ್ತದೆ. ಇದು ಪುಳುಜದ ಉತ್ತರಕ್ಕೆ ೪ ಮೈಲಿನ ಮೇಲೆ ಇದೆ. ಕನ್ನಡದಲ್ಲಿಯ ಆಸುಟಿಗೆ ಈ ಗ್ರಾಮವು (ಓಳಿ ೬೦) ಈಗ ಅಷ್ಟೇ ಎಂದಾಗಿರುತ್ತದೆ. ಇದು ಪುಳುಜದಿಂದ ವಾಯುವ್ಯಕ್ಕೆ ೧೮ ಮೈಲಿನ ಮೇಲೆ ಇದೆ. ಕನ್ನಡದಲ್ಲಿಯ ರವಳಪಳ ಈ ಗ್ರಾಮವು (ಓಳಿ ೬೦) ಇದು ಈಗ ರೋಪಳೆ ಎಂದು ಕರೆಯಲ್ಪಡುತ್ತದೆ. ಇದು ಪುಳುಜದಿಂದ ೧೨ ಮೈಲಿನ ಮೇಲೆ ಇದೆ. ಕನ್ನಡದಲ್ಲಿಯ ತುಂಗತೂಹ ಈ ಗ್ರಾಮವು (ಓಳಿ ೬೨) ಈಗ ತುಂಗತ ಎಂದಾಗಿರುತ್ತದೆ. ಇದು ಪಂಢರಪುರದ ಉತ್ತರಕ್ಕೆ ೪ ಮೈಲಿನ ಮೇಲೆ ಇದೆ. ಕನ್ನಡದಲ್ಲಿಯ ಏವಂತಿಗೆ ಎಂಬ ಗ್ರಾಮವು (ಓಳಿ ೬೨) ಈಗ ಏವತೀ ಎಂದು ಆಗಿರುತ್ತದೆ. ಇದು ಪಂಢರಪುರದ ಈಶಾನ್ಯಕ್ಕೆ ೭ ಮೈಲಿನ ಮೇಲೆ ಇದೆ. ಕನ್ನಡದಲ್ಲಿಯ ಪೊರಗಾಂವೆ ಎಂಬ ಗ್ರಾಮವು (ಓಳಿ ೬೩) ಇದು ಈಗ ಪೊಹರಗಾಂವ ಎಂದು ಆಗಿರುತ್ತದೆ. ಇದು ಪುಳುಜದ ಪಶ್ಚಿಮಕ್ಕೆ ೪ ಮೈಲಿನ ಮೇಲೆ ಇದೆ. ಈ ಶಬ್ದಗಳ ಮೇಲಿಂದ ಈ ಭಾಗವೆಲ್ಲ ಮೊದಲಿಗೆ ಸಂಪೂರ್ಣ ಕನ್ನಡ ನಾಡಾಗಿದ್ದು ಈಚೆಗೆ ಮರಾಠೀ ಪ್ರದೇಶವಾಗಿರುತ್ತದೆ.

ಪುಳುಜದ ಸುತ್ತಲು ೩೦ ಮೈಲಿನ ವರೆಗೆ ಸಣ್ಣದೊಡ್ಡ ಅನೇಕ ಗ್ರಾಮಗಳು ಇಲ್ಲಿ ಉಲ್ಲೇಖಿಸಲ್ಪಟ್ಟಿದ್ದರೂ ಈ ಗ್ರಾಮದ ಪಶ್ಚಿಮಕ್ಕೆ ೧೮ ಮೈಲಿನ ಮೇಲೆ ಇರುವ ಪಂಢರಪೂರ ಗ್ರಾಮವು ಮಾತ್ರ ಉಲ್ಲೇಖಿಸಲ್ಪಡದೆ ಇರುವದು ಲಕ್ಷಿಸತಕ್ಕ ಸಂಗತಿಯಾಗಿದೆ. ಈ ಶಿಲಾಶಾಸನದ ಕಾಲದಲ್ಲಿ ಇನ್ನೂ ಈ ಪಟ್ಟಣವು ಪ್ರಸಿದ್ಧಿಗೆ ಬಂದಿದ್ದಿಲ್ಲವೆಂದು ತೋರುತ್ತದೆ. ಪಂಢರಪೂರ ವಿಠೋಬಾನ ಮಹತ್ವವು ಮೊದಲಿಗೆ ಏನೂ ಇರದೆ ಈಚೀಚೆಗೆ ಹೆಚ್ಚುತ್ತ ಬಂದಿರುತ್ತದೆಂದು ತಜ್ಞರ ಅಭಿಪ್ರಾಯವದೆ. ಈ ಅಭಿಪ್ರಾಯವು ಮೇಲ್ಕಂಡ ಸಂಗತಿಯಿಂದ ದೃಢಪಡುತ್ತದೆ.

ಶಿಲಾಲೇಖದಲ್ಲಿ ಬಂದ ಹೆಸರುಗಳಲ್ಲಿ ವೀರಶೈವರಿಗೆ ಅತ್ಯಂತ ಮಹತ್ವವಿರುವ ರೇವಣಸಿದ್ಧೇಶ್ವರನ ಬಗ್ಗೆ ಉಲ್ಲೇಖವು ಇದರಲ್ಲಿ ಸ್ವಲ್ಪ ಬಂದಿರುತ್ತದೆ. ೬೧ ನೇ ಓಳಿಯಲ್ಲಿ 'ರೇವಣ ಮಡುವ ಹೂದೋಟ' ಎಂಬ ಉಲ್ಲೇಖವಿರುತ್ತದೆ. ಈ ಮಡುವಿಗೆ ರೇವಣಸಿದ್ಧೇಶ್ವರನ ಏನೋ ಸಂಬಂಧವಿರಬೇಕೆಂದು ತೋರುತ್ತದೆ. ಇದು ಶೋಧಿಸತಕ್ಕ ವಿಷಯವಾಗಿರುವದು. ಈ ಮಡುವು ಪಂಢರಪುರದ ಉತ್ತರಕ್ಕೆ ಇರಬಹುದು. ರೇವಣಸಿದ್ಧೇಶ್ವರನು ಈ ಭಾಗದಲ್ಲಿ ವಿಶೇಷವಾಗಿ ಸಂಚರಿಸಿರುವನು. ಅವನು ವಾಸವಾಗಿದ್ದ ಮಂಗಳವಾಡ, ಸೊನ್ನಲಿಗೆ, ರೇಣಾವಿ ಈ ಗ್ರಾಮಗಳು ಇಲ್ಲಿಗೆ ಬಹು ಸಮೀಪದಲ್ಲಿಯೇ ಇವೆ. ರೇವಣಸಿದ್ಧೇಶ್ವರನು ಇಲ್ಲಿ ಉಲ್ಲೇಖಿಸಲ್ಪಟ್ಟಿರುವದರಿಂದ ಅವನು ೧೨೦೦ ಕ್ಕಿಂತಲೂ ಮೊದಲು ಇದ್ದನೆಂಬದು ನಿರ್ವಿವಾದವು.

ಈ ಶಿಲಾಶಾಸನವು ಪುಳುಜ ಗ್ರಾಮದಲ್ಲಿ ಇರುವ ಲಿಂಗೇಶ್ವರ ದೇವಾಲಯದ ದಕ್ಷಿಣಕ್ಕೆ ಉತ್ತರಾಭಿಮುಖವಾದ ಒಂದು ಸಣ್ಣ ಗುಡಿಯಲ್ಲಿ ಇಡಲ್ಪಟ್ಟಿದೆ. ಈ ಶಿಲಾಲೇಖದ ಉದ್ದ ೬॥ ಫೂಟ ಮತ್ತು ಅಗಲ ೨॥ ಫೂಟ ಇದೆ. ಮೇಲ್ಭಾಗದಲ್ಲಿ ಚಂದ್ರ ಸೂರ್ಯರೂ ಶಿವಲಿಂಗವೂ ಕರಕ್ಕೆ ಮೊಲೆ ಕುಡಿಸುವ ಒಂದು ಆಕಳೂ ಒಂದು ಕತ್ತಿಯೂ ಕೊರೆಯಲ್ಪಟ್ಟಿವೆ. ಈ ದೇವಾಲಯದ ಈಗಿನ ಅರ್ಚಕರು ಜಂಗಮರೇ ಇರುವರು.

ಈ ಶಿಲಾಶಾಸನವು ಭಾರತ ಇತಿಹಾಸ ಸಂಶೋಧನ ಮಂಡಳಿಯ ತ್ರೈಮಾಸಿಕ ಸಂಚಿಕೆಗಳು ಡಿಸೆಂಬರ ೧೯೩೨ ಮತ್ತು ಸೆಪ್ಟೆಂಬರ ೧೯೩೩ ಇವುಗಳಲ್ಲಿ ಮಿ॥ ಗ. ಹ. ಖರೆ ಇವರು ಪ್ರಸಿದ್ಧಿಸಿರುವರು. ಅವರು ವಿಶೇಷ ಶ್ರಮವನ್ನು ವಹಿಸಿ ಈ ಶಿಲಾಶಾಸನವನ್ನು ಪ್ರಸಿದ್ಧಿಸಿದ್ದು ಅತ್ಯಂತ ಅಭಿನಂದನೀಯವಾಗಿರುತ್ತದೆ. ಈ ಶಿಲಾಶಾಸನವೇ ಇದರಲ್ಲಿ ಕೊಡಲ್ಪಟ್ಟಿದೆ.

## ಹುಳುಜದ ಶಿಲಾಲೇಖ.

೧. ಓಂ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೆ ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೆ.

೨. ನಮಶ್ಶಿವಾಯ ಭಕ್ತಭ್ಯ ಪರಮಾನಂದದಾಯಿನೆ ಸದಾ ಸಮೀಹಿತ ಪ್ರಾಪ್ತಿ ಹೇತು ಜ್ಞಾನವಿಧಾಯಿನೆ॥ ಪೂ

೩. ರ್ವಜಾಯಾಂಪುರೆ ಹಿತಸ್ಸಿದ್ಧಸೋಮ ಯತಿಶ್ರುತಃ। ಭಕ್ತಾನಾಮುಪಕಾರಾಯ ನ್ರಿಣಾಂಪಾಪಾಪನುತ್ತಯೆ.

೪. ಏವಂಭೂತೋ ಮಹಾಲಿಂಗೋ ರಹಿಕುಂಡಳಭೂಷಿತಃ ಕ್ರಿಪಯಾಚಾಮ್ಮಿದೇವಸ್ಯ ಪ್ರತ್ಯಕ್ಷಃ ಸಮಜಾ

೫. ಯತ ॥ ತತ್ಪಾದಪಂಕಜ ಭೃಂಗೋ ಮುನಿವತ್ಪೂಜಿತೋ ಯತಿಃ। ಶಿವಾಚಾರ್ಯೈಕನಿರತೋ ಲಿಂಗಕ್ಯೋ ಲಿಂಗವೇದಕಃ॥

೬. ಏತಚ್ಚಿತ್ರಗುಣೈರ್ಯುಕ್ತೋ ಅಮ್ಮಿದೇವೋ ಮಹಾಮತಿಃ। ಚಕಾರ ಶಾಸನಂಸಮ್ಯಕ್ ಗದ್ಯಪದ್ಯ ಸಮನ್ವಿತಂ।

೭. ಸ್ವಸ್ತಿ ಸಮಸ್ತ ಭುವನಸ್ತುತ। ಸಮಸ್ತ ಜಗತಿತಳಖ್ಯಾತ। ಸಮಸ್ತ ಜನ ಸಕಾರುಣ್ಯ। ವರದಾಭಯಹಸ್ತ। ಸ

೮. ಮಸ್ತ ಗುಣಗಣನಿಳಯ। ಕಾಮ ಕ್ರೋಧ ಲೋಭ ಮೋಹ ಮದ ಮಾಚ್ಛರ್ಯ ದುರಿತ ಕುಳದೂರ। ಮಾಹೇಶ್ವ

೯. ರಗಣ ಕುಲಾನ್ವಯ ದಿವಾಕರ। ಅನಾದಿ ಸಂಸಿದ್ಧ ಪ್ರಸಿದ್ಧನ। ಸಾಸಿದ್ಧ ಕುಲಾನ್ವಯಾರ್ಣವ। ಪ್ರವ

೧೦. ರ್ಧನ ಸುಧಾಕರ। ಸರ್ವಜ್ಜೀವ ದಯಾಪರ। ನ ಗಣ್ಯಪುಣ್ಯ ಮೂರ್ತಿ। ಸರಣಾಗತ ಕರ್ಮ ನಿರ್ಮೂಳನ। ಸಕಳ

೧೧. ಭೂತ ಚೇತ ಚೈತನ್ಯ ಸ್ವರೂಪ। ನಿತ್ಯ ನಿರಂಜನ ಪ್ರಭಾವ ಪರಿಪೂರ್ಣ್ಣ ಸದುದರುಶನ ಸಮಾಹಿ

೧೨. ತ। ದೂರಸ್ರವಣ ದೂರದರುಶನ। ಜ್ಞಾನಸಂಪನ ಅಣಿಮಾದ್ಯಷ್ಟಗುಣ ಪರಿಪೂರ್ಣ। ಘೂರ್ಣ್ಣಿತಾರ್ಣ್ಣವ

೧೩. ಆಚಾರ ಕುಳಕುಮುದಿನಿ ಸರಶ್ಚಂದ್ರ ಹೊಂಗೆ ಹೆಂಗೆ ಮಂಗೆ ನಿರೂಪೇಕ್ಷಿತ ಶರಿರ। ಅಜ್ಞಾನಾಂ

೧೪. ಕುಶ। ಭಕ್ತಜನ ಚಿಂತಾಮಣಿ। ಗುರುಚರಣ ಸ್ಮರಣ। ಶರಿ ಣತಾಂತಃ ಕರಣ ಸ್ವರೂಪ। ವೀರನಾಗರಸ

೧೫. ಲಬ್ಧವರ ಪ್ರಸಾದ। ಶ್ರೀ ಸಿದ್ಧ ಸೋಮನಾಥದೇವ ಶ್ರೀಪಾದ ಪಂಕಜಭ್ರಮರ। ಲಿಂಗೈಕದೇಹಿ। ತೇಜೋನಿಧಿಸರ

೧೬. ಸರಣಸಂತಾನ ಶ್ರೀ ಅಮ್ಮುಗಿದೇವರಸರ್ಗೆ । ಸ್ವಸ್ತಿ ಸಮ ಸ್ತ ವಿಜ್ಞಾತಾನೇಕ ವೇದವೇದಾಂಗ ತತ್ವಜ್ಞಾನಮೂರ್ತ

೧೭. ದ ಜ್ವಾಳಾಮಂಡಿತ ಪುಂಡರೀಕಾಕ್ಷ ಬ್ರಹ್ಮ ಲಕ್ಷ್ಮೀ ಲಕ್ಷಿತ ವಿಶಾಳವಕ್ಷಸ್ಥಳ ಹಂಸ ಯುವತಿ ವಿರಾ

೧೮. ಜಿತಮೂರ್ನನೋನ್ನತರುಂ ಯಜನ ಯಾಜನಾಧ್ಯಯನಾಧ್ಯಾಪ ನದಾನ ಪ್ರತಿಗ್ರಹ ಶಟ್ಕರ್ಮ ನಿರತರುಂ

೧೯. ಅಷ್ಟಾದಶ ಸ್ಮೃತಿಪುರಾಣ ಕಾವ್ಯ ನಾಟಕ ಭಂಗೀಭಾಷಣ ಕವಿ ಗಮಕೀವಾದಿವಾಗ್ಮಿರ್ಹ್ಮ ದಯಾಕೃಷ್ಟ

೨೦. ಮಂತ್ರಾಕ್ಷರರುಂ ಪ್ರತಿಪನ್ನ ಶಿಲಾಕ್ಷರರುಮಪ್ಪ ಶ್ರೀಮತುದ ಕ್ಷಿಣ ವಾರಣಾಸೀ ಸರ್ವ ನಮಸ್ಯದು

೨೧. ತಮುದಗ್ರಹಾರಂ ಪೂರ್ಣ್ಣಜೆಯಶೇಷ ಮಹಾಜನಂಗಳು ಶ್ರೀ ಸೋಮನಾಥ ದೇವರ್ಗೆ ಊರಿಂ ಮೂಡವೊಲ

೨೨. ಗಣ (ಪ) ತಿಗೆ ಗೆಯ್ಯಿಂ ಮೂಡ ಗಣ (ಪ) ತಿಗೆಯ್ಯ ಬಟ್ಟೆ ಯಿಂ ಬಡಗಲು ವ್ರಿತ್ತಿ ೨ ಆ ಕೆಯ್ಯ ಬಳಿಯ ಮನೆ ಸಿ

೨೩. ದ್ಧೇಶ್ವರ ದೇವರ ಕೇರಿಯಿಂ ತೆಂಕಲು ಪೂರುಗೋಡೆ ತನಕ ಕೇರಿ ಪೂರಿಂ ಪಡುವಲು ಹೂದೋಟ ೧ ಮಂಧಾರ ಪೂ

೨೪. ರ್ವಕಂ ಮಾಡಿ ಕೊಟ್ಟರು ಆ ಕೇರಿಯ ಮನೆ ಮಳವ ಕೆಯಿ ಗಳಲ್ಲಿ ಅಪುತ್ರಿಕದಂದ ಆಯ ದಾಯ ಕೊಳ್ಳಿ ಕಳ್ಳ ತಳಾರ

೨೫. ಗೂಲಿ ಹಾಲು ಕೂಳು ಬಿಟ್ಟಿ ಪೂರುಗೋಟಿ ಬೇಲಿ ಸುಂಕ ತೊಲಗಡೆ ಪಾಲಿ ಕಾಯ ಆ ಕೇರಿಯ ಅಂಗಡಿ ಘಾಣಯಿಂ

೨೬. ತಿದೆಲ್ಲವಂ ಸರ್ವ್ವ ಬಾಧೆ ಪರಿಹಾರವಾಗಿ ಕಾದೂಡುವರು॥ ಆ ಮಹಾ ಜನಂಗಳಿಗೆ ಅಮ್ಮುಗಿ ದೇವರ ಸರು

೨೭. ದಮ್ಮ ೧ ರ ಕಳಾಂತರದಿಂ ಕೊಟ್ಟ ಪ್ರಿಯ ಶ್ರಾಹೆ ಗಜಮಲ್ಲ ಗದ್ಯಾಣ ೬ ಆ ಕಳಾಂತರದ ಮರು ಹೊನ್ನ ಮಂ

೨೮. ವರುಶಂ ಪ್ರತಿ ನಾಗರಸನ ಸರ್ವ್ವದಲು ಆ ಚಂದ್ರಾರ್ಕ್ಕತಾರಂಬರಂ ಅಶೇಷ ಮಹಾ ಜನಂಗಳುಂ ಭೋಜನ ಮಾಡುವರು॥

೨೯. ಸ್ವಸ್ತಿ ಸಮಸ್ತ ಭುವನ ಭುವನಾಶ್ರಯಂ ಶ್ರೀ ಪೃಥ್ವಿವಲ್ಲಭಂ ಮಹಾರಾಜಾಧಿರಾಜ ಪರಮೇಶ್ವರ ದ್ವಾರಾವತಿ ಪೂ

೩೦. ರವರಾದೀಶ್ವರ ವಿಷ್ಣುವಂಶೋದ್ಭವ ಜಾದವ ಕುಳಕಮಳ ಕಳಿಕಾವಿಕಾಸ ಭಾಸ್ಕರ ಗೂರ್ಜರ ಹೃದಯ ಜರ್ಜರ

೩೧. ಮಾಳವೇಶ್ವರ ಮದನ ಮಹೇಶ್ವರ ದಾಹಳ ಹೃತ್ಕತೂಹಳ ಚೋಳಗಳಗಾಳ ಪ್ರಬಳ ತರಹೋಯ

೩೨. ಸಣ ಲಕ್ಷ್ಮೀಹರಣ ಸಕಳ ಲಕ್ಷ್ಮೀಪತಿ ಪ್ರತಾಪ ಚಕ್ರವರ್ತಿ ಶ್ರೀ ಸಿಂಘಣ ದೇವರಸರು ಸರ್ವ ಸಿದ್ಧಾರ್ಥಿ ಸಂ

೩೩. ವತ್ಸರದ ಮಾಘ ಶು. ೧೧ ಸೋಮವಾರ ವ್ಯತಿಪಾತದಂದು ಪೂರ್ಣ್ನಜೆಗೆ ಬಂದಲ್ಲಿ ದೇವತಾರ್ಚನೆಯ ಸಮಯದ

೩೪. ಲು ಶ್ರೀ ಸ್ವಯಂಭು ಸಿದ್ಧಸೋಮನಾಥ ದೇವರ್ಗಿಂದಾಯಿಘ್ಥಿಯವನು ಸರ್ವ ನಮುಶ್ಯವಾಗಿ ಅಮ್ಮುಗಿದೇವರ ಸಗೇ

೩೫. ಅಕರ ಪರಿಹಾರವಾಗಿ ಧಾರಪೂರ್ವಕಂ ಮಾಡಿಕೊಟ್ಟರು. । ಆ ಹಳ್ಳಿಯಲು । ತಹಭಕ್ತಕೆ ಸುಂ

೩೬. ಕ ಅಂಬಿಲಿ ಗದ್ಯಾಣ ಓವಾಡವಿಲ್ಲ ಆ ಹಳ್ಳಿಯ ವೊಳಗಣ ದೇವಪಮುಹಲೆಯುನ ಪ್ರಭುತ್ವದ ಕಮ

೩೭. ತ ಮತ್ತರು ನೂರುಮಂ । ಬಳಿ ಸಹಿತವಾಗಿ ಶ್ರೀ ಸಿದ್ಧಸೋಮನಾಥ ದೇವರ್ಗಿಂದು ಅವರ ಮಕಳು ಜತ ತಟ್ಟದ ಸಂಖೆ

೩೮. ಯ ಸಾಹಣಿ ದೇವೆಯ ಸಾಹಣದಾಯಿಯ ನಾಯಕ ಕುವರ ಸೋಯಿದೇವ ಯಿಂತೀ ನಾಲ್ವರುಂ ಅಮ್ಮುಗಿ

೩೯. ದೇವರಸರ್ಗೆ ಧಾರಾಪೂರ್ವಕಂ ಮಾಡಿ ಸರ್ವ್ವ ನಮುಶ್ಯವಾಗಿ ಕೊಟ್ಟರು ಆ ಹಳ್ಳಿಯ ಕೊಳ್ಳಿವಣವಂ ಶ್ರೀ ಸಿದ್ಧ

೪೦. ಸೋಮನಾಥದೇವರ್ಗೆ ರಾಜ ಬಿಜ್ಜ ಅಯ್ಯಣ ದೇವನ ಪರ್ವವೆಂದು ಗಂಗಿದೇವ ಸಂಕಮದೇವ ಬಿಜ್ಜರಾಣಿಯ ಕವಡಿಯ ಖಿ

೪೧. ಯಿದೇವ ಕವಡಿಯ ಜೋಯಿದೇವಂಗಳು ಸರ್ವ ನಮಸ್ಯ ವಾಗಿ ಧಾರಾಪೂರ್ವಕಂ ಮಾಡಿಕೊಟ್ಟರು ಅಲ್ಲಿ ಫಳಿತಮಂ

೪೨. ದೆ ಹಾಗ ಹಣವಂ ಕೊಡುವನು ಗೊಮಾಂಸ ಸುರಾಪಾನ ಮಾಡಿದವನು ಸ್ವಾನ ಗಾರ್ಧಭ ಚಾಂಡಾಳ ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿ

೪೩. ತ ಶ್ರೀಮನು ಮಹಾಮಂಡಳೇಶ್ವರಂ ಸಾಹಸೋತ್ತುಂಗ ಭುಜಬಳ ಭೀಮ ವಿಕ್ರಮಾದಿತ್ಯ ದೇವರಸರು ಪೂರ್ಣ್ಣ

೪೪. ಜೇಯಲು ವೀರನಾಗರಸನ ದೇವಲ್ಯಯಮಂ ಮಾಡಿಸಿದಲ್ಲಿ ಶ್ರೀ ಸಿದ್ಧ ಸೋಮನಾಥದೇವರ್ಗ್ಗೆ ಸ್ವಸ್ತಿಯನವರತಕ

೪೫. ಲ್ಯಾಣಾಭ್ಯುದಯ ಸಹಸ್ರ ಫಳ ಭೋಗ ಭಗಿನಿಯ-ರಪ್ಪ ಸಿರಿ ಯಾದೇವಿಯರು ಸೋಯಿಜಣವಲ್ಲಿ ವೂರಿಂತೆಂಕ

೪೬. ಹೊಳಜೆಯ ಬಟ್ಟೆಯಿಂ ಪಡುವಲು ತೆಂಕಲು ಲಖುಮಾದೇ ವಿಯ ಕೆಯ್ಯ ಸಿಮೆಇಂ ಪಡುವಲು ಹಳ್ಳ ಬಡಗಲು ಸಾ

೪೭. ಸನ ಮರಿಯಾದೆ ಮತ್ತರು ೧೦೦ ಅಲ್ಲಿ ದೇವಭಾವಿಯಿಂ ತ್ರೆಂಕ ಹೂದೋಟ ೧ ಅಸಗೇಶ್ವರ ದೇವರ ಕೇರಿ ಇಂ

೪೮. ಹಿಂದೆ ಕೇರಿ ೧ ಬಣಬೆಯ ನಿವೇಸನ ೧ ಮಂ ಸರ್ವ್ವ ನಮ ಸ್ಯವಾಗಿ ಧಾರಾಪೂರ್ವ್ವಕಂ ಮಾಡಿಕೊಟ್ಟರು ॥ ಮತ್ತಂದೇ

೪೯. ವರ್ಗೆ ಶ್ರೀಮನು ಮಹಾ ಪ್ರಧಾನಂ ಸಿಹೆಯ ಸಾಹಣಿಯರು ಕುರುವಲಗೆಯಲ್ಲಿ ವೂರಿಂ ಪಡುವಲು ಮುಂ.

೫೦. ಜಳಿಯ ಕೆರೆಯಿಂಮೂಡ ಮತ್ತರು ೧೦೦ ಆದರ ಬಳಿಯ ಮನೆ ನಾರಾಯಣದೇವರ ಕೆರೆಯಿಂಮೂಡಗಣ.

೫೧. ಮರದಿಂತೆಂಕ ಕೆರಿ ೧ ಮಂಧಾರಾ ಪೂರ್ವ್ವಕಂ ಮಾಡಿ ಕೊಟ್ಟರು ॥ ಮತ್ತಂ ಶ್ರೀ ಸಿದ್ಧಸೋಮನಾಥ ದೇವರ್ಗೆ ಶ್ರೀಮನು ಮಹಾ ಪಸಾ.

೫೨. ಯಿತಂ ಬೇಂಟೆಕಾರ ತಿಪುರೆಯ ನಾಯಕರು ದೇಗಾವೆ ಯಲ್ಲಿ ವೂರಿಂ ಪಡುವಲು ಲಳಿಗೆಯ ಸೀಮೆಯಿಂ.

೫೩. ಪಡುವಲು ಲಳಿಗೆಯ ಬಟ್ಟೆಯಿಂ ಬಡಗಲು ಮತ್ತರು ೨೬ ಆದರ ಬಳಿ ಉರುಗವನೀಯಿಂ ಮೂಡಮನೆ ೧ ಊರಿಂಮೂ.

೫೪. ಡಿಬಾವಿಯ ಮೂಡದೆಸೆಯ ಹೂದೋಟ ೧ ಮಂ ಸರ್ವ್ವ ನಮಸ್ಯವಾಗಿ ಕೊಟ್ಟರು. ಸ್ವಸ್ತಿಸಮಸ್ತ ಪ್ರ

೫೫. ಶಸ್ತಿಸಹಿತಂ ಶ್ರೀಮತು ರಾಯಸೆಟ್ಟಿ ಗಂಡಭೇರುಂಡ ಜೋಯಿಸೆಟ್ಟಿಯರು ತಮ ಕಾರುವಲಗೆ ನಾಡೊಳಗಣಕೊ

೫೬. ರವಳ್ಳಿಯಲ್ಲಿ ಪೂರಿಂ ಮೂಡ ಚಟ್ಟಣ ಹಳ್ಳದಿಂ ಮೂಡ ಪಥ್ತರಿಗೆಯ ಬಟ್ಟೆಯಿಂ ಬಡಗಲು ಹಿರಿಯ ಹಳ್ಳದಿಂ

೫೭. ತೆಂಕಲು ಕೋಲಮತ್ತರು ೨೬ ಕಂಚಗಾರ ಗೋರಿ ಇಂ ಬಡಗಲು ಮೆಳಿ ಸಂಖರ ದೇವರಿಂ ಮೂಡಲು ಕೆರಿ ೧ ಬಣಬೆ ನಿವೇಶನ ಮತ್ತಂ

೫೮. ಚಿಂಚವಳ್ಳಿಯಲ್ಲಿ ಪೂರಿಂ ತೆಂಕ ಹಳ್ಳದಿಂ ಮೂಡೆ ಚಂಮು ರಾಣೆಯನ ಮಳವದಿಂ ಪಡುವಲು ಹೂದೋಟ ೧ ಸರ್ವ್ವನಮಸ್ಯ

೫೯. ವಾಗಿ ಕೊಟ್ಟರು ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನು ಮಹಾಪ್ರಧಾನ ಮಸ್ನೆಯ ಬೇಂಟೆಕಾರ ಇಸಯ್ಯ ನಾಯಕರು

೬೦. ಶ್ರೀಸಿದ್ಧ ಸೋಮನಾಥ ದೇವರ್ಗೆ ಅಸುಂಗಿಯಲ್ಲಿ ರವಳಸ ಳದ ಬಟ್ಟೆ ಬಿವದಳೆಯಿಂ ಪಡುವಲು ವೃತ್ತಿ ೧ ಜಕ್ಕಿಯುರ ಭಾವಿ

೬೧. ರೇವಣ ಮಡುವ ಹೂದೋಟ ೧ ವಾಸುದೇವನ ಮನೆಯ ಹತ್ತಿದ ಮನೆ ೧ ಸರ್ವ ನಮಸ್ಯ ಧಾರಾಪೂರ್ವಕಂ ಮಾಡಿ ಕೊಟ್ಟರು.

೬೨. ಶ್ರೀ ವಾಮನ ನಾಯಕರು ತುಂಗ ತೂಹದಲು ಪೂರಿಂ ಬಡಗಲು ಹಳ್ಳದಿಂ ಪಡುವಲು ಏವನ್ನಿಗೆ ಬಟ್ಟೆ ಇಂ ಮೂಡ ಹೂದೋ

೬೩. ಟ ೧ ನಿವೇಶನ ೧ ಮಂ ಸರ್ವ ನಮಸ್ಯವಾಗಿ ಕೊಟ್ಟರು. ಶ್ರೀ ಮತ್ ಲ ಹಿದೇವ ನಾಯಕ ತಮ್ಮಯ್ಯ ನಾಯಕರು ಸೋರ

೬೪. ಗಾವೆಯಲ್ಲಿ ಇರೆಯದ ಸಿದ್ಧೇಶ್ವರ ದೇವರ ಕೆ ಇ ಪಡುವ ಮತ್ತರು ೧೨ ಮಂ ಸರ್ವ ನಮಸ್ಯವಾಗಿ ಕೊಟ್ಟರು॥ ಬಹು ಭಿರ್ವಸುಧಾ ದತ್ತಾ

೬೫ ರಾಜಭಿಸ್ಸಗರದಿಭಿಯಸ್ಯ ಯಸ್ಯ ತದಾ ಭೂಮಿಃ ತಸ್ಯ ತಸ್ಯ ತದಾ ಫಲಂ॥ ಸ್ವದತ್ತಂ ಪರದತ್ತಂ ವಾ ಯೊ ಹರೆತ ವಸುಧರಾಂ ಶಷ್ಟಿವ

೬೬. ರುಶ ಸಹಸ್ರಾಣಾ ವಿಷ್ಟಾಯಾಂ ಜಾಯತೆ ಕ್ರಿಮಿಃ॥ ಶ್ರೀ ದಾ ಮೋದರ ದಂಡನಾಯಕರ ಶ್ರೀ ಕರಣಂ ಚಮುಂಡ ರಸ ನಾಯಕರ ಲಿಪಿ

೬೭. ಚಟ್ಟಿಸೆಟ್ಟಿ ಚಾಡಿಸೆಟ್ಟಿ ದೇವಲ್ಯಾ ಇದು.

೬೮. ಗೆ — ರಯುಸ್ತರದು ಕೊಟ್ಟರು ಅತ್ಯಂತಿಕವಾಗಿ

೬೯. ಅಮ್ಮಯ್ಯಂಗಳ ಕೆಯ್ಯಲಿ ಒಂದು ಹೊಸ್ನ ಕೊಂಡು ಸರ್ವ ಮಾನ್ಯವಾಗಿ ಸೋಮನಾಥದೇವರಿ

೭೦. ಗೆ ಚಿಂತವಳ್ಳಿಯ ಒಟ್ಟಿಯಿಂ ಪಡುವಲು ಜಜ್ಜಗಿ ನಾಯ ಕನ ಸ್ಥಳದಿಂ ಮೂಡಲು ಝುಂಝೇಶ್ವರ ದೇವಲ ಕೆಯಿಂ ತೆಂ

೭೧ ಕಲು ಗಣಪತಿಯ ಕೆಯಿಂ ಬಡಗಲು ಎರಡು ಹಾನ್ನಿಮತ್ತರು ಕೆಇಯ ಸ್ಥಳವನು ಸಳಪತಿಯಾಗಿ ಅ

೭೨. ಕೆಯ್ಯ ಬಣಬೆ ಖೆಯಿಯನಿಂತೆಂಕಲು ಸೋಮಯ್ಯಸಿಂ ಬಡಗಲು ಆ ಕೆರೆ ಖೆಯಿಯನಿಂ ಪಡುವಲು .........

೭೩. ಮ ಅಮ್ಮಯ್ಯಂಗಳಿಗೆ ವಾಯಿಯನು ಕ್ರಯವಾಗಿ ಮಾರಿದರು. ಆ ವ್ರಿತ್ತಿಗೆ ಅಶೇಷ ಮಹಾಜನಂಗಳು .........

# ಅಮುಗಿದೇವನ ವಚನಗಳು.

೧. ಅಂಗಾಶ್ರಯವ ಕಳೆದು ಲಿಂಗಾಶ್ರಯವ ಮಾಡಿದ ಗುರುವೇ ಶರಣು, ಶ್ರೀ ಗುರುವೇ ಶರಣು. ಪರಮ ಸುಖವ ತೋರಿದೆಯಾಗಿ ಮಹಾ ಘನ ಸೋಮೇಶ್ವರನ ಸಾಹಿತ್ಯವ ಮಾಡಿ ನಿಜ ನಿವಾಸದಲ್ಲಿರಿಸಿದೆಯಾಗಿ.

೨. ಮರುಳ ಮದ್ದುಗುಣಿಕೆಯ ಕಾಯ ತಿಂದು ಮರುಳೇರಿತು. ಹೇಳಲುಂಟೇ ಶಿವ ಶಿವಾ? ಲಿಂಗ ತನ್ನಲ್ಲಿ ಗ್ರಹಿಸಿದ ಬಳಿಕ ಅಂಗವಿಕಾರವೇಂಬುದನರಿಯರು, ಸಿದ್ಧಸೋಮನಾಥನೆಂಬ ಶಬ್ದ ಭಂಗವಳಿದು ಸಂಗ ಉಳಿದ ಬಳಿಕ.

೩. ಗುರುಲಿಂಗದ ಕೃಪೆಯಿಂದ ಸಜ್ಜನ ಶರಣರ ಸುಖವ ಕಂಡೆ. ಏನೆಂದುಪಮಿಸುವೆನಯ್ಯ ಗುರುಲಿಂಗದ ಮಹಿಮೆಯನು, ಮಹಾ ಘನ ಸೋಮೇಶ್ವರನೆಂಬ ಗುರುಲಿಂಗವ ತೋರಿದವನಾಗಿ?

೪. ಕಂಗಳ ಕತ್ತಲೆಯ ಕೆಡಿಸಿದ ರವಿಯ ಚಂದದಂತಾಯಿತ್ತೆನ್ನ ಗುರುವಿನುಪದೇಶ. ಇಂದು ಕಾಂತದ ಶಿಲೆಯ ನಿಂದು ಸೋಂಕಿದಂತಾಯಿತ್ತೆನ್ನ ಗುರುವಿನುಪದೇಶ. ಕೊಡನೊಳಗಣ ಬಯಲ ಹಂಚಿಕೊಂಡಂತಾಯಿತ್ತೆನ್ನ ಗುರುವಿನುಪದೇಶ. ದರ್ಪಣಕ್ಕೆ ದರ್ಪಣವ ತೋರಿಸಿದಂತಾಯಿತ್ತೆನ್ನ ಗುರುವಿನುಪದೇಶ. ಮಹಾ ಘನ ಸಿದ್ಧ ಸೋಮನಂತಾಯಿತ್ತೆನ್ನ ಗುರುವಿನುಪದೇಶ.

೫. ಗುರುವಿನ ಕರುಣದಿಂದ ಲಿಂಗ ಜಂಗಮವ ಕಂಡೆನಯ್ಯಾ. ಇಂದಿನ ಸುಖಕ್ಕೆ ಹವಣಿಲ್ಲೆಂದು ಕಂಡೆನಯ್ಯಾ. ಸಿದ್ಧ ಸೋಮನಾಥ ಲಿಂಗವಲ್ಲದಿಲ್ಲೆಂದು ಕಂಡೆನಯ್ಯ.

೬. ಗುರು ಶಿಷ್ಯ ಸಂಬಂಧದನುಭಾವವ ಕೇಳಿರಯ್ಯ. ಗುರುವೆಂಬ ಪರಾಪರ, ಶಿಷ್ಯನೆಂಬ ಇಹಪರ, ಗುರುವೆಂಬ ಪರಮಾರ್ಥ, ಶಿಷ್ಯನೆಂಬ ಏಕಾರ್ಥ. ಗುರುವೆಂಬನಲ್ಲ. ಶಿಷ್ಯನೆಂಬನಲ್ಲ. ಏಕೋ ಸಿದ್ಧ ಸೋಮನಾಥನಲ್ಲಿ ಶಬ್ದಕ್ಕಿಂಬಿಲ್ಲ.

೭. ಜ್ಞಾನದಲರಿದರೇನಯ್ಯಾ ಸತ್ಕ್ರಿಯೆಯನಾಚರಿಸದನ್ನಕ್ಕ? ನೆನೆದ ಮಾತ್ರಲಾಗಿ ಕಾವುದೆ ಕಾರ್ಯದಲಾದಲ್ಲದೆ? ಕುರುಡ ಕಾಣ ಪಥವ. ಹೆಳವ ನಡೆಯಲರಿಯ. ಒಂದಿಲ್ಲದಿದ್ದರೊಂದಾಗದು. ಜ್ಞಾನವಿಲ್ಲದ ಕ್ರಿ

ಜಡನು. ಕ್ರಿ ಇಲ್ಲದ ಜ್ಞಾನ ವಾಗ್ಜಾಲಭ್ರಾಂತು. ಇದು ಕಾರಣ ಸಿದ್ಧ ಸೋಮನಾಥನಲ್ಲಿ ಎರಡೂ ಬೇಕು.

೮. ಶಿವನ ನೆನದರೆ ಭವ ಹರಿವುದೆಂಬ ವಿವರಗೇಡಿಗಳ ಮಾತ ಕೇಳಲಾಗದು. ಅದೇನು ಕಾರಣವೆಂದರೆ, ಜ್ಯೋತಿಯು ನೆನದರೆ ಕತ್ತಲೆ ಹರಿವುದೆ? ವೃಷ್ಟಾನ್ನವ ನೆನೆದರೆ ಹೊಟ್ಟೆ ತುಂಬುವದೆ? ರಂಭೆಯು ನೆನೆದರೆ ಕಾಮದ ಕಳವಳ ಹಿಂಗುವದೇ? ನೆನೆದರಾಗದು. ನಿಜನಲ್ಲಿ ನಿಂದು ನಿರ್ಧರಿಸದನ್ನಕ್ಕ ಸದ್ಗುರು ಸಿದ್ಧ ಸೋಮನಾಥನೆಂಬ ಲಿಂಗವ ನೆನೆಯಬಾರದು.

೯. ಕಾಯ ಲಿಂಗಾರ್ಪಿತವಾದರೆ ಕರ್ಮವಿಲ್ಲ, ಜೀವ ಲಿಂಗಾರ್ಪಿತವಾದರೆ ಜನಿತವಿಲ್ಲ, ಭಾವಲಿಂಗಾರ್ಪಿತವಾದರೆ ಭ್ರಮೆ ಇಲ್ಲ. ಅರುಹು ಲಿಂಗಾರ್ಪಿತವಾದ ಬಳಿಕ, ಆ ಪ್ರಸಾದವ ಗ್ರಹಿಸದಾಗಿ ಮರಹು ಮುನ್ನಿಲ್ಲ. ಮಾಯಾಪ್ರಪಂಚವನತಿಗಳೆದು ನಿಮಗರ್ಪಿಸಬಲ್ಲನಾಗಿ ಆತನೇ ಶರಣ. ಬೆಚ್ಚಂತೆ ಬೆರಸಿ ಆಚ್ಚೊತ್ತಿದಂತೆ, ಅಪ್ಪು ಒಳಕೊಂಡ ಆಣಿಕಲ್ಲಿನಂತೆ, ಜ್ಯೋತಿಯಿಂದ ತಮವಿಲ್ಲದಂತೆ ಜಲಉಂಡ ಮುತ್ತಿನಂತೆ ಬಯಲುಂಡ ಬೆಳಗಿನಂತೆ ಇದ್ದನಾಗಿ ಮಹಾ ಘನ ಸದ್ಗುರು ಸಿದ್ಧಸೋಮನಾಥ ನಿಮ್ಮ ಶರಣರ ಹೆಸರಡಗಿದ ಲಿಂಗೈಕ್ಯರೆಂಬೆ.

೧೦. ಅಂಗ ಅನಂಗವೆಂಬೆರಡರ ಸಂಗವಳಿದ ಮಹಂತರ ಅಂಗ ಸೋಂಕಿತ್ತೆಲ್ಲವು ಪವಿತ್ರ ಕಾಣಿರೇ. ಪವಿತ್ರವಿದ್ದಲ್ಲಿ ಪದಾರ್ಥವಿಹುದು, ಹಸ್ತವಿದ್ದಲ್ಲಿ ಜಿಹ್ವೆ ಇಹುದು, ಜಿಹ್ವೆ ಇದ್ದಲ್ಲಿ ರುಚಿ ಇಹುದು, ರುಚಿ ಇದ್ದಲ್ಲಿ ಅವಧಾನವಿಹುದು, ಅವಧಾನವಿದ್ದಲ್ಲಿ ಭಾವವಿಹುದು, ಭಾವವಿದ್ದಲ್ಲಿ ಲಿಂಗವಿಹುದು, ಲಿಂಗವಿದ್ದಲ್ಲಿ ಅರ್ಪಿತವಿಹುದು, ಅರ್ಪಿತವಿದ್ದಲ್ಲಿ ಪ್ರಸಾದವಿಹುದು, ಪ್ರಸಾದವಿದ್ದಲ್ಲಿ ಪರಿಣಾಮವಿಹುದು. ಇದು ಕಾರಣ ಮಹಾಘನ ಸದ್ಗುರು ಸಿದ್ಧಸೋಮನಾಥ ಲಿಂಗಾ ನಿಮ್ಮ ಶರಣರು ಪ್ರಾಣಲಿಂಗ ಪ್ರವೇಶಿಗಳಾಗಿ ಪರಿಣಾಮ ಪ್ರಸಾದಿಗಳಯ್ಯಾ.

೧೧. ಆಲಿಕಲ್ಲ ಕಡಿದು ಪುಥ್ಥಳಿಯ ಖಂಡಿಸುವಂತೆ ಉಪ್ಪಿನ ಪೊಟ್ಟಣವನುದಕದಲ್ಲಿ ಅದ್ದುವಂತೆ, ಕರ್ಪೂರದ ಪ್ರಣುತೆಯಲ್ಲಿ ಜ್ಯೋತಿಯು ಬೆಳಗುವಂತೆ, ಸಿದ್ಧ ಸೋಮನಾಥ ಲಿಂಗಗ್ರಾಹಿಯುವ ಗ್ರಾಹಿಯಾಗಿ.

೧೨. ಅರಿವನ್ನಕ್ಕ ಭೃತ್ಯಾಚಾರಿ. ಮೀರಿ ಮಿಕ್ಕು ಶರಣ ಪಥದ ಸೋಂಕು ತಾನಾಗಿದ್ದ ಸುಖವು ಕೊಡುವನ್ನಕ್ಕ ಪ್ರಾಣಲಿಂಗಿ. ಕೊಡ

ಲಿಲ್ಲ ಕೊಡಲಿಲ್ಲ ಲಿಂಗಪ್ರಾಣಿಯಾದಂಗೆ ಸಿದ್ಧ ಸೋಮನಾಥ ಲಿಂಗದಲ್ಲಿ ಅರುಹಿನವಗ್ರಾಹಕ.

೧೩. ಅಲಗಿನ ಮೊನೆಯನೇರಬಹುದು. ಹುಲಿಯ ಬಿಲವ ಹೊಗಬಹುದು. ಸಿಂಗದ ಕೊರಳಿಗೆ ಹಾಯಬಹುದು. ಸಿದ್ಧ ಸೋಮನಾಥ ನಿಮ್ಮ ಮುಂದೆ ಮನ ಸಹಿತ ನಿಮಿಷ ಕುಳ್ಳಿರಲಾಗದು.

೧೪. ಮಂಗಳ ಮಣ್ಣ ಬೆರಸದಂತೆ, ಗಾಳಿಯ ನೂಳು ಹತ್ತದಂತೆ, ಬಿಸಿಲು ಮಳೆಯಲ್ಲಿ ನೆನೆಯದಂತೆ, ಬಯಲು ಮೂರ್ತಿಗೊಳ್ಳದಂತೆ, ಸಿದ್ಧ ಸೋಮನಾಥ ನಿಮ್ಮ ಶರಣನೆಲ್ಲಿಯೂ ಬಳಸಿ ಬಳಸದಂತಿಪ್ಪನು.

೧೫. ಇಹಪರನಲ್ಲ, ಪರಾಪರನಲ್ಲ, ಕಾಮಿಸಿ ಕಾಮಿಯಲ್ಲ, ಭಾವಿಸಿ ಭಾವಿಯಲ್ಲ. ಅನಾಯಾಸ ನಿರಂಜನನು. ಸಿದ್ಧ ಸೋಮನಾಥಲಿಂಗ ನಿಮ್ಮ ಶರಣ ಬಳಸಿಯೂ ಬಳಸುವನಲ್ಲ.

೧೬. ಸಾವನಲ್ಲ ಸ್ವರೂಪ ಕುರುಹಿಸನಾಗಿ. ನಿರವಯನಲ್ಲ ನಿರೂಪ ಭಾವಿಸನಾಗಿ. ದ್ವೈತಿಯಲ್ಲ ಸೇವ್ಯ ಸೇವಕನೆಂಬುಭಯವಳಿದುಳಿದನಾಗಿ. ಅದ್ವೈತಿಯಲ್ಲ ನಾಹಂ ಕೋಹಂ ಸೋಹಂವೆಂಬ ಭ್ರಮೆಯುಳಿದುಳಿದನಾಗಿ. ಇಂತೀ ಸಕಲ ಭ್ರಮೆಯುಳಿದು ಹೋಹನಲ್ಲಿ ನಿಷ್ಪತ್ತಿಯಾಗಿಪ್ಪ ಸಿದ್ಧ ಸೋಮನಾಥಲಿಂಗ.

೧೭. ಹುಡಿ ಹತ್ತದ ಗಾಳಿಯಂತೆ, ಕಾಡಿಗೆ ಹೆತ್ತದ ಆಲಿಯಂತೆ, ನೆಯಿ ಹತ್ತದ ನಾಲಿಗೆಯಂತೆ, ಮಂಗಲ ಮಣ್ಣ ಬೆರಸದಂತೆ, ಸಿದ್ಧ ಸೋಮನಾಥ ನಿಮ್ಮ ಶರಣನು ಸಕಲ ಸುಖಂಗಳ ಸುಖಿಯಿಸಿ ಬೇರಿಪ್ಪನು.

## ರಾಯಮ್ಮನ ವಚನಗಳು.

೧. ಜ್ಞಾನವೆಂಬುವದು ಬೀದಿಯ ಪಸಾರವೆ? ಬೊಕ್ಕಣ ತುಂಬುವ ಹುರುಳಿಯೆ? ಚೀಲುದೊಳಗಣ ಜೀರಿಗೆಯೆ? ಗಾಣದೊಳಗಣ ಹಿಂಡಿಯೆ? ಜ್ಞಾನವೆಂಬುದು ಎಲ್ಲರೊಡನೆ ಬೀರದಿರಬೇಕು. ಗೆಲ್ಲ ಸೋಲಿನ ಮಾತ ಬಂದಡೆ ಗೆಲವ ನುಡಿಯದಿರಬೇಕು. ಹೀಗಿರಬಲ್ಲರೆ ಶರಣನೆಂಬೆನು. ಅಮುಗೇಶ್ವರಲಿಂಗವೆಂಬೆನು.

೨. ಅಂಗಕ್ಕಾಚಾರ, ಮನಕ್ಕೆ ಜ್ಞಾನ, ಸಮರಸಾದ್ವೈತವಾದ ಮತ್ತೆ ಪುನರ್ದೀಕ್ಷೆಯುಂಟೆ? ಗರುಡಿಯಲ್ಲಿ ಕೋಲಲ್ಲದೆ ಕಾಳಗದಲ್ಲಿ ಉಂಟೇ ಕೋಲು? ಭವಿಗೆ ಮೇಲುವ್ರತ ಪುನರ್ದೀಕ್ಷೆ ಯಲ್ಲದೆ ಶರಣಂಗುಂಟೆ? ವ್ರತ ತಪ್ಪಿ ಅನುಗ್ರಹವಿಡಿದ ನರಕಿಗಳಿಗೆ ಮುಕ್ತಿಇಲ್ಲ ಎಂದೆ ಅಮುಗೇಶ್ವರ ಲಿಂಗದಲ್ಲಿ.

೩. ವೇದ ಶಾಸ್ತ್ರಗಮ ಪುರಾಣಂಗಳಲ್ಲಿ, ಶ್ರುತಿ ಸ್ಮೃತಿಗಳಲ್ಲಿ ನುಡಿವುದು ಹುಸಿ. ಇಷ್ಟಲಿಂಗ ಭಿನ್ನವಾಗಲು ಮತ್ತೊಂದು ಲಿಂಗವ ಧರಿಸಿ ಕೊಳ್ಳಬೇಕೆಂಬುದಿಲ್ಲ. ಅಮುಗೇಶ್ವರ ಲಿಂಗವೇ ನಿಮ್ಮ ಶರಣರು ಲಿಂಗ ಭಿನ್ನವಾಗಲು ಲಿಂಗದೊಳು ಅಂಗವ ಬಯಲುಮಾಡುವರಯ್ಯ.

೪. ವಿಶ್ವಮಯರೂಪಾಗಿ ಬಂದೆಯಯ್ಯ. ಭಕ್ತಿಗೆ ಎನ್ನ ಮನಕ್ಕೆ ಸಲೆಸಂದ ನಿಲವು ಅಮುಗೇಶ್ವರ ಲಿಂಗಕ್ಕೆ ಮಾಟವಾಯಿತ್ತು.

# ಜೇಡರದಾಸಿಮಯ್ಯ, ಶಂಕರದಾಸಿಮಯ್ಯಗಳ ವಿಚಾರ.

(ಲೇಖಕಃ— ಕೀರ್ತನಕೇಸರಿ, ಕೀರ್ತನವಿಚಕ್ಷಣ, ಕೀರ್ತನಶಿರೋಮಣಿ, ಶಿವಕೀರ್ತನಕೇಸರಿರಾಜ, ಕವಿರತ್ನ ಬಿ. ಶಿವಮೂರ್ತಿಶಾಸ್ತ್ರಿ ಹುಲ್ಯಂಟಿನ್ಸಂತ ತುಮಕೂರು)

ತಾ. ೨೬-೧೧-೩೪ನೇ ಶರಣಸಂದೇಶದಲ್ಲಿ ಶ್ರೀಮಾನ್ ಎಸ್. ಎಸ್. ಮಾಳವಾಡ ಬಿ. ಎ. ಇವರು "ದೇವರ ದಾಸಿಮಯ್ಯನು ಬಸವನ ಸಮಕಾಲೀನನೇ" ಎಂಬೊಂದು ಲೇಖವನ್ನು ಬರೆದು ಅದೇ ಶರಣಸಂದೇಶದಲ್ಲಿ ನಾನು ಬರೆದಿದ್ದ "ಜಯಸಿಂಹನ ಕಾಲದ ಜೇಡರ ದಾಸಿಮಯ್ಯನೇ ಬೇರೆ ಬಸವೇಶ್ವರನ ಕಾಲದ ವಚನಕಾರ ದಾಸಿಮಯ್ಯನೇ ಬೇರೆ." ಎಂಬ ಅಭಿಪ್ರಾಯವನ್ನು ಚರ್ಚಿಸಿ ಕಡೆಗೆ ನನ್ನ ಅಭಿಪ್ರಾಯಗಳನ್ನು ತಪ್ಪೆಂದು ಸಾಧಿಸಲಿಕ್ಕೆ ಪ್ರಯತ್ನಿಸಿದ್ದಾರೆ. ಅವರ ವಾದದ ಸಾರಾಂಶವೇನಂದರೆಃ—

(೧) ವಚನಕಾರ ದಾಸಿಮಯ್ಯನು ಬಸವನ ಕಾಲದವನು. ಆದರೆ ಜಯಸಿಂಹನ ಕಾಲದ ದಾಸಿಮಯ್ಯನು ವೀರಶೈವನಲ್ಲ. ಶೈವನಾಗಿರಬಹುದು.

(೨) ಬಸವನಿಗಿಂತ ಮೊದಲು ಕರ್ನಾಟಕದಲ್ಲಿ ವೀರಶೈವ ಮತದ ಚಳವಳಿ ಕಾಣಲಿಲ್ಲ.

(೩) "ಭಕ್ತಿಭಂಡಾರಿ ಬಸವಣ್ಣನವರು" ಎಂಬ ಗ್ರಂಥದಲ್ಲಿಯೂ "ವೀರಶೈವ ಮತಾಚಾರ್ಯರ ಕಾಲನಿರ್ಣಯ" ಎಂಬ ಗ್ರಂಥದಲ್ಲಿಯೂ ದಾಸಿಮಯ್ಯಗಳ ವಿಚಾರದಲ್ಲಿ ಬರೆದಿರುವದೇ ಸರಿ ಎಂಬುದು.

ಈಗ ನಾನು ಪ್ರತಿಪಾದಿಸುವ ಮುಂದಿನ ಲೇಖನದಲ್ಲಿನ ಪೌರಾಣಿಕ ಹಾಗೂ ಐತಿಹಾಸಿಕ ಪ್ರಮಾಣಗಳಿಂದ ಶ್ರೀಯುತ ಮಾಳವಾಡರ ವಾದವು ಸರಿಯಲ್ಲವೆಂಬುದನ್ನು ವಾಚಕರಿಗೆ ತೋರಿಸಿ ಕೊಡುತ್ತೇನೆ.

ಈಗ ನಾನು ಚರ್ಚಿಸುವ ಸಂಗತಿಯು ವೀರಶೈವಮತ ಚರಿತ್ರೆಯಲ್ಲಿ ಬಹು ಮಹತ್ವದ್ದಾದ್ದರಿಂದ ಈ ಲೇಖನವನ್ನು ಕೊಂಚ ವಿಸ್ತಾರವಾಗಿ ಬರೆದಿದ್ದೇನೆ.

ವೀರಶೈವ ಮತ ಚರಿತ್ರೆಯಲ್ಲಿ ದಾಸಿಮಯ್ಯಗಳ ವಿಚಾರವು ಬಹು ಮಹತ್ವದ್ದಾಗಿದೆ. ನನ್ನ ಅಭಿಪ್ರಾಯದಲ್ಲಿ ಜೇಡರ ದಾಸಿಮಯ್ಯ, ಶಂಕರ ದಾಸಿಮಯ್ಯ, ಇವರು ಜಯಸಿಂಹನ ಕಾಲದವರಾಗಿಯೂ ಪರಮ ವೀರ ಶೈವರಾಗಿಯೂ ಬಸವೇಶ್ವರನಿಗಿಂತ ಮೊದಲು ಕರ್ನಾಟಕದಲ್ಲಿ ವೀರಶೈವ ಮತ ಪ್ರಸಾರ ಮಾಡಿದವರಾಗಿಯೂ ಇದ್ದರು. ವಚನಕಾರನಾದ ದೇವರ ದಾಸಿಮಯ್ಯನು ಬಸವೇಶ್ವರನ ಸಮಕಾಲದವನಾಗಿಯೂ ವೀರಶೈವನಾಗಿಯೂ ಇದ್ದಾನೆ. ಈ ಅಭಿಪ್ರಾಯವನ್ನೇ ನಾನು ಮುಂದೆ ಯಥಾಮತಿ ಸಮರ್ಥಿಸಿದ್ದೇನೆ.

## ದೇವರದಾಸಿಮಯ್ಯ.

"ದೇವರ ದಾಸಿಮಯ್ಯನ ವಚನಗಳು" ಎಂಬ ಗ್ರಂಥವು ಕವಿಚರಿತ್ರೆ ಬರೆಯುವ ಕಾಲಕ್ಕೆ ಅಚ್ಚಾಗದೆ ಇದ್ದುದರಿಂದಲೂ ದಾಸಿಮಯ್ಯನ ವಚನಗಳೆಲ್ಲಾ ಒಂದು ಗ್ರಂಥರೂಪದಲ್ಲಿಲ್ಲದೆ ಅವರಿಗೆ ಲಭಿಸದುದರಿಂದಲೂ ಗೌರವಣೀಯರಾದ ಆರ್. ನರಸಿಂಹಾಚಾರ್ಯರು ವಚನಕಾರ ದಾಸಿಮಯ್ಯನೂ ಜಯಸಿಂಹನ ಕಾಲದ ದಾಸಿಮಯ್ಯನೂ ಒಬ್ಬನೇ ಎಂದು ಬರೆದಿದ್ದಾರೆ. ಶ್ರೀಮಾನ್ ರಾ. ಸಾ. ಹಳಕಟ್ಟಿ ವಕೀಲರೂ ದೇವರ ದಾಸಿಮಯ್ಯನ ವಚನಗಳ ಪೀಠಿಕೆಯಲ್ಲಿ ಶ್ರೀ. ಆರ್. ನರಸಿಂಹಾಚಾರ್ಯರನ್ನೇ ಹಿಂಬಾಲಿಸಿದ್ದಾರೆ. ದಾಸಿಮಯ್ಯನ ವಚನಗಳನ್ನೂ, ಬಸವೇಶ್ವರನ ವಚನಗಳನ್ನೂ ಓದಿದರೆ ಓರ್ವ ದಾಸಿಮಯ್ಯನು ಬಸವನ ಸಮಕಾಲೀನನಾಗಿದ್ದನೆಂದೂ, ಅವನು ವೀರಶೈವನೇ ಆಗಿದ್ದನೆಂದೂ ತೋರುತ್ತದೆ. ಅದು ಹೇಗಂದರೆ:- ಶಿವಾನುಭವ ಗ್ರಂಥಮಾಲೆಯಲ್ಲಿ ಅಚ್ಚಾಗಿರುವ ದೇವರ ದಾಸಿಮಯ್ಯನ ವಚನಗಳಲ್ಲಿ ೩೧ನೇ ಪುಟದಲ್ಲಿ "ಕೇಳು ಡೋಹರಕಕ್ಕ, ಕೇಳು ಮಾದರಚನ್ನ, ಕೇಳು ವಹಿಲದೇವ, ಕೇಳು ಉದ್ಭಟಯ್ಯ ಕೇಳಿಂಗಲ್ಲದೆ ಹಯನು ಕರೆಯದು ಕಾಣಾ ರಾಮನಾಥಾ" ಎಂಬ ವಚನವಿದೆ. ಇದರಲ್ಲಿ ವಚನಕಾರ ದಾಸಿಮಯ್ಯನು ಡೋಹರ ಕಕ್ಕಯ್ಯ, ಮಾದರ ಚನ್ನಯ್ಯನ ಹೆಸರೆತ್ತಿರುವುದರಿಂದಲೂ ಈ ಕಕ್ಕಯ್ಯ, ಚನ್ನಯ್ಯಗಳು ಬಸವನ ಸಮಕಾಲೀನರಾದುದರಿಂದಲೂ ಅನುಮಾನವಿಲ್ಲದೆ ಈ ವಚನಕಾರ ದಾಸಿಮಯ್ಯನು ಬಸವನ ಕಾಲದವನೆಂದು ಸಿದ್ಧವಾಗುತ್ತದೆ. ಶ್ರೀಮಾನ್ ಹಳಕಟ್ಟಿ ವಕೀಲರು ಪ್ರಕಟಿಸಿರುವ (ಎರಡನೇ ಮುದ್ರಣ) ಬಸವೇಶ್ವರ ವಚನದ ೫೧ನೇ ಪುಟದಲ್ಲಿ ೯೪ನೇ ವಚನವು

"ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟ ತರದ ಹೊರೆಯ ಹೊರಿಸದಿರಯ್ಯಾ! ಕಕ್ಕಯ್ಯ ನೊಕ್ಕುದ ನಿಕ್ಕ ನೋಡಯ್ಯಾ. ದಾಸಯ್ಯ ಶಿವದಾನವನೀಯ ನೋಡಯ್ಯಾ. ಮನ್ನಣೆಯ ಚನ್ನಯ್ಯ ನೆನ್ನ ಮನ್ನಿಸ. ಉನ್ನತ ಮಹಿಮ ಕೂಡಲ ಸಂಗಮದೇವಾ ಶಿವಧೋ ಶಿವಧೋ" ಈ ಪ್ರಕಾರವಿದೆ. ಇದರಲ್ಲಿ ಬಸವೇಶ್ವರನು ತನ್ನ ಸಮಕಾಲದವರಾದ ಹಾಗೂ ಮಹಿಮಾಶಾಲಿಗಳಾದ ಕಕ್ಕಯ್ಯ ಚನ್ನಯ್ಯಗಳ ಜತೆಯಲ್ಲಿಯೇ ದಾಸಯ್ಯನ ಹೆಸರೆತ್ತಿರುವದರಿಂದಲೂ "ಶಿವದಾನವನೀಯನು" ಎಂಬ ವಚನದಿಂದ ಅವನು ಲಿಂಗಧಾರಿಯೂ ತನ್ನ ಸಮಕಾಲದವನೆಂತಲೂ ಸೂಚಿಸಿದ್ದಾನೆ. ಅಲ್ಲದೆ ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಕಟವಾಗಿರುವ ಶೂನ್ಯಸಂಪಾದನೆಯ ೧೮೭ನೇ ಪುಟದಲ್ಲಿ ಅನುಭವ ಮಂಟಪದಲ್ಲಿ ಇದಕ್ಕೆ ದಾಸಿಮಯ್ಯಗಳ ವಚನ "ಕರಸ್ಥಲದ ಜ್ಯೋತಿಯದು ಕರುವಿಟ್ಟಿಂಕವದು. ಆದರೆ ನೆಲೆಯ ತಿಳಿದರೆ, ನಿಜದಾನಂದವು ಹೊಲಬು ದೋರದಿಹ ನಿಸ್ಸೀಮನ ಹೊಲಬನರಿದು ಕೂಡಿದಾತನೇ ವ್ಯಾಡನು ಕಾಣಾ ರಾಮನಾಥಾ" ಎಂಬೀ ವಚನವು ಬಂದಿದೆ. ಇದರಿಂದ ಈ ದಾಸಿಮಯ್ಯನು ವಚನಕಾರನಾಗಿಯೂ ಬಸವನ ಸಮಕಾಲೀನನಾಗಿಯೂ, ವೀರಶೈವನಾಗಿಯೂ, ಮಹಿಮಾಶಾಲಿಯಾಗಿಯೂ ಇದ್ದನೆಂಬುದು ಸಿದ್ಧಾಂತವಾಗುತ್ತದೆ.

ಗೌರವೀಯರಾದ ಶ್ರೀ ನರಸಿಂಹಾಚಾರ್ಯರು ಕವಿಚರಿತ್ರೆ ೧ನೇ ಭಾಗದಲ್ಲಿಯೂ ಶ್ರೀ ಹಳಕಟ್ಟಿ ವಕೀಲರು ದಾಸಿಮಯ್ಯನವರ ವಚನಗಳ ಪೀಠಿಕೆಯಲ್ಲಿಯೂ ವಚನಕಾರ ದಾಸಿಮಯ್ಯನೂ ಜಯಸಿಂಹನ ಕಾಲದ ದಾಸಿಮಯ್ಯನೂ ಒಬ್ಬನೇ ಎಂದು ಹೇಳಿದುದು ಸರಿಯಲ್ಲವೆಂದೂ ಶ್ರೀ ಕರ್ಲ ಮಂಗಲಂರವರು ಹೇಳುವಂತೆ ವಚನಕಾರನೇ ಬೇರೆ, ಪುರಾಣ ಕಥಿತನೇ ಬೇರೆ ಎಂಬುವ ಅಭಿಪ್ರಾಯವು ಸರಿಯೆಂದೂ ಈಗ ಸೂರ್ಯ ಪ್ರಕಾಶದಷ್ಟು ಸ್ಪಷ್ಟವಾಗಿದೆ. ಶ್ರೀ ಬಸವೇಶ್ವರನ ಕಾಲದಲ್ಲಿದ್ದ ದಾಸಿಮಯ್ಯನು ವಚನಕಾರನೆಂದು ಹಿಂದಿನ ವಿವರಣೆಯಿಂದ ತಿಳಿದು ಬಂದಿದೆ. ಇನ್ನು ಜಯಸಿಂಹನ ಕಾಲದಲ್ಲಿದ್ದ ಜೇಡರ ದಾಸಿಮಯ್ಯನು ವೀರಶೈವನೆಂದು ಸಿದ್ಧಮಾಡುವದು ನಮ್ಮ ಕರ್ತವ್ಯವಾಗಿದೆ.

ಶ್ರೀ ಕರ್ಲ ಮಂಗಲಂ ಶ್ರೀ ಕಂಠಯ್ಯನವರು "ವೀರಶೈವರ ಮತಾಚಾರ್ಯರ ಕಾಲ ನಿರ್ಣಯ" ಎಂಬ ಗ್ರಂಥದ ಪರಿಶಿಷ್ಟದಲ್ಲಿ ಬಸವನ ಕಾಲದ ವಚನಕಾರನು ವೀರಶೈವನೆಂದೂ ಜಯಸಿಂಹನ ಕಾಲದ ಜೇಡರ

ದಾಸಿಮಯ್ಯನು ಲಕುಲೀಶನೋ, ಕಾಳಾಮುಖನೋ ಆಗಿರಬಹುದೆಂದೂ ಅಭಿಪ್ರಾಯಪಟ್ಟಿದ್ದಾರೆ. ಶ್ರೀಯುತ ಎಂ. ಆರ್. ಶ್ರೀನಿವಾಸಮೂರ್ತಿಗಳು ಮಾತ್ರ "ಭಕ್ತಿಭಂಡಾರಿ ಬಸವಣ್ಣನವರು" ಎಂಬ ಗ್ರಂಥದ ಪರಿಶಿಷ್ಟದಲ್ಲಿ ಜೇಡರ ದಾಸಿ ದೇವರ ದಾಸಿ ಎಂಬುವರು ಇಬ್ಬರಲ್ಲವೆಂದೂ ವಚನಕಾರ ದಾಸಿಯೇ ಜೇಡರ ದಾಸಿಯೆಂದೂ ಶಂಕರದಾಸಿಮಯ್ಯನು ಸಹ ಬಸವನ ಕಾಲದವನೇ ಎಂದೂ ಅಭಿಪ್ರಾಯಪಟ್ಟಿದ್ದಾರೆ.

ನಮ್ಮ ಅಭಿಪ್ರಾಯದಲ್ಲಿ ಸಿದ್ಧಿಸುವದೇನಂದರೆ— ೧. ವಚನಕಾರ ದಾಸಿಮಯ್ಯನು ಬಸವನ ಸಮಕಾಲೀನನೆಂಬುದು ನಿಶ್ಚಯ. ಇವನು ವೀರಶೈವನೇ ಆಗಿದ್ದನು.

೨. ಜೇಡರ ದಾಸಿಮಯ್ಯನು ಜಯಸಿಂಹನ ಕಾಲದವ. ಇವನು ವಚನಕಾರ ದಾಸಿಗಿಂತ ಭಿನ್ನ. ಇವನೂ ವೀರಶೈವನೇ ಆಗಿದ್ದನು.

೩. ಶಂಕರ ದಾಸಿಮಯ್ಯನು ಜೇಡರ ದಾಸಿಯಂತೆಯೇ ಜಯಸಿಂಹನ ಕಾಲದವ. ಇವನೂ ಕೂಡ ವೀರಶೈವನಾಗಿದ್ದ.

೪. ಅನುಭವ ಮಂಟಪದಲ್ಲಿ ಶಂಕರ ದಾಸಿಮಯ್ಯನಿರಲಿಕ್ಕೆ ಸಾಧ್ಯವಿಲ್ಲ.

೫. ಕರ್ನಾಟಕದಲ್ಲಿ ಬಸವೇಶ್ವರನಿಗಿಂತಲೂ ಮೊದಲು ಜೇಡರ ದಾಸಿಮಯ್ಯ— ಶಂಕರ ದಾಸಿಮಯ್ಯಗಳೇ ವೀರಶೈವ ಮತ ಪ್ರಚಾರಕರಾಗದಿದ್ದರೆ, ನಮ್ಮ ಈ ಅಭಿಪ್ರಾಯಗಳೆಲ್ಲವೂ ಮುಂದಿನ ಲೇಖನದಿಂದ ಸ್ಪಷ್ಟವಾಗುತ್ತವೆ.

## ಜೇಡರ ದಾಸಿಮಯ್ಯ.

ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಜೇಡರ ದಾಸಿಮಯ್ಯನ ಪುರಾಣಗಳಿವೆ. ಅವುಗಳಲ್ಲಿ ಜಯಸಿಂಹನ ಕಾಲದಲ್ಲಿದ್ದ ದಾಸಿಮಯ್ಯನ ಮಹಿಮೆಯೇ ಹೊಗಳಲ್ಪಟ್ಟಿದೆ. ಆ ಪುರಾಣದಲ್ಲಿ ಬಸವಾದಿಗಳ ಹೆಸರು ಬಂದಿಲ್ಲ. ಆ ಪುರಾಣಪುರುಷನ ಕಥಾಸಾರವಿಷ್ಟು.

೧. ಮುದೇನೂರಿನ ಕಾಮಯ್ಯ ಶಂಕರೀ ಇವರ ಮಗ ದಾಸಿಮಯ್ಯ, ಕಾಯಕ ಜೇಡರ ವೃತ್ತಿ.

೨. ಇವನು ದುಗ್ಗಳಾದೇವಿಯ ಗಂಡ. ಇವಳು ಮಹಾಪತಿವ್ರತೆ.

೩. ಇವನು ಜಂಗಮರೂಪಿನಿಂದ ಬಂದ ಶಿವನಿಗೆ ಬಹು ಬೆಲೆಯುಳ್ಳ ಪೀತಾಂಬರವನ್ನು ದಾನ ಕೊಟ್ಟನು. ಶಿವನು ಅದನ್ನು ತನ್ನ ಕಣ್ಣ ಮುಂದೆಯೇ ಚೂರು ಚೂರು ಮಾಡಿದರೂ ಸಮಾಧಾನದಿಂದಿದ್ದನು. ಇವನ ಈ ಗುಣಕ್ಕೆ ಶಿವನು ಮೆಚ್ಚಿ ತವನಿಧಿಯನ್ನು ಕೊಟ್ಟನು.

೪. ಶಂಕರದಾಸಿಮಯ್ಯನು ಬಂದು ಈ ದಾಸದುಗ್ಗಳೆಯರ ಗರ್ವಭಂಗ ಮಾಡಿ ಮತ್ತೆ ಅನುಗ್ರಹಿಸಿದನು.

೫. ಪೊಟ್ಟಲಕೆರೆಯಲ್ಲಿ ಜಯಸಿಂಹನ ಆಸ್ಥಾನಕ್ಕೆ ಬಂದು ದಾಸಿಮಯ್ಯನು ತನ್ನ ಭಕ್ತಳೂ ಜಯಸಿಂಹನ ಪತ್ನಿಯೂ ಆದ ಸುಗ್ಗಲಾದೇವಿಯ ಇಚ್ಛೆಯಂತೆ ರಾಜನನ್ನೂ ೨೦೦೦೦ ಜೈನರನ್ನೂ ತನ್ನ ವಿದ್ವತ್ತಿನಿಂದಲೂ ಮಹಿಮೆಯಿಂದಲೂ ಜೈಸಿ ಎಲ್ಲರಿಗೂ ವೀರಶೈವ ದೀಕ್ಷೆಯನ್ನು ಕೊಟ್ಟು ವೀರಶೈವ ಮತವನ್ನು ಪಸರಿಸಿದನು.

ಈಗ ಪ್ರಕಟವಾಗಿರುವ ಬಸವೇಶ್ವರನ ಷಟ್ಸ್ಥಲ ವಚನ ೯೦೦ರಲ್ಲಿ ದಾಸಿಮಯ್ಯ ಎಂಬ ಹೆಸರು ೧೭ ಸಾರೆ ಬಂದಿದೆ. ಇವರಲ್ಲಿ ಒಂದು ಬಾರಿ ವಚನಕಾರ ದಾಸಿಮಯ್ಯನ ಹೆಸರು ಕಕ್ಕಯ್ಯ ಚನ್ನಯ್ಯಗಳ ಹೆಸರಿನ ಸಂಗಡ ಬಂದಿದೆ. ಇನ್ನು ೧೬ ಸ್ಥಳಗಳಲ್ಲಿ ಪುರಾಣಕಥಿತ ದಾಸಿಮಯ್ಯನ ಹೆಸರೇ ಬಂದಿದೆ ಎಂದು ವಿಮರ್ಶೆಯಿಂದ ತಿಳಿದು ಬಂದಿದೆ. ಪ್ರಾಯೇಣ ಈ ೧೬ ಸ್ಥಳಗಳಲ್ಲಿಯೂ ದಾಸಿಮಯ್ಯನು ಶಿವನಿಗೆ ಪೀತಾಂಬರವನ್ನು ಕೊಟ್ಟು ತವನಿಧಿಯನ್ನು ಪಡೆದ ಪ್ರಸಂಗವೇ ಬಂದಿದೆ. ಬಸವೇಶ್ವರನ ವಚನದಲ್ಲಿ (ದ್ವಿತೀಯ ಮುದ್ರಣ) ಪು. ೭೦ ರಲ್ಲಿ ೧ ನೇ ವಚನದಲ್ಲಿ "ಜೇಡರ ದಾಸಯ್ಯ" ಎಂದೂ ೨೨ ನೇ ಪುಟ ೩೬ ನೇ ವಚನದಲ್ಲಿ ದಾಸದುಗ್ಗಳೆ ಎಂದೂ ಉಲ್ಲೇಖವಿದೆ. ಮಿಕ್ಕ ೧೪ ವಚನಗಳಲ್ಲಿ ದಾಸಯ್ಯ—ದಾಸ ಎಂಬ ಪ್ರಯೋಗವಿದೆ. ಹೀಗೆ ಬಸವನಿಂದ ಹದಿನಾರು ವಚನಗಳಲ್ಲಿ ಸಂಸ್ತೂಯಮಾನನಾದವನು ಪುರಾಣಪುರುಷ ಜೇಡರ ದಾಸಿಯೆಂದೂ ದುಗ್ಗಳದೇವಿಯ ವಲ್ಲಭನೆಂದೂ ಶಿವನಿಗೆ ವಸ್ತ್ರದಾನ ಮಾಡಿ ತವನಿಧಿ ಪಡೆದ ಮಹಿಮನೆಂದೂ ಸಿದ್ಧವಾಗುತ್ತದೆ.

ಜಯಸಿಂಹನ ಕಾಲದಲ್ಲಿ ಜೇಡರ ದಾಸಿಮಯ್ಯನಿದ್ದನೆಂಬುದನ್ನು ಆವಾವ ಕವಿಗಳು ಹೇಳಿರುವರೆಂಬುದನ್ನು ವಿಚಾರಿಸೋಣ—

ಮಹಾಕವಿ ಷಡಕ್ಷರದೇವನು ತನ್ನ ವೃಷಭೇಂದ್ರ ವಿಜಯ ಮಹಾಕಾವ್ಯದ ೧೩ ನೇ ಆಶ್ವಾಸದಲ್ಲಿ ಶಂಕರದಾಸಿಮಯ್ಯನ ಕಥೆಯನ್ನೂ ೩೫

ನೇ ಆಶ್ವಾಸದಲ್ಲಿ ಜೇಡರ ದಾಸಿಮಯ್ಯನ ಕಥೆಯನ್ನೂ ಹೇಳಿ ಈ ಉಭಯರೂ ವೀರಶೈವರೆಂದೂ ಮಹಿಮಾಶಾಲಿಗಳೆಂದೂ ಜೇಡರ ದಾಸಿಮಯ್ಯನು ಜಯಸಿಂಹನನ್ನೂ ಅವನ ಆಸ್ಥಾನದ ಪುಷ್ಪಸೇನ ಪಂಡಿತನಾದಿಯಾಗಿ ೨೦೦೦೦ ಜೈನರನ್ನು ವಾದದಲ್ಲಿ ಜೈಸಿ ರಾಜನಾದಿಯಾಗಿ ಎಲ್ಲ ಪ್ರತಿವಾದಿಗಳಿಗೂ ಶಿವದೀಕ್ಷೆಯನ್ನು ಕೊಟ್ಟನೆಂದೂ ಈ ಜೇಡರ ದಾಸಿಯು (ಪೊಟ್ಟಲಕೆರೆಯ ಅರಸ ಜಯಸಿಂಹನ ಪತ್ನಿ) ಸುಗ್ಗಲಾದೇವಿಯ ಗುರುವೆಂದೂ ಹೇಳಿದ್ದಾನೆ.

೨. ಕನ್ನಡ ಬಸವ ಪುರಾಣವನ್ನು ಬರೆದ ಭೀಮಕವಿಯು ತನ್ನ ಪುರಾಣದ ೫೧ ನೇ ಸಂಧಿಯಲ್ಲಿ ಪೊಟ್ಟಲಕೆರೆಯ ಅರಸ ದೇಸಿಂಗರಾಯನ ಪತ್ನಿ ಸುಗ್ಗಲಾದೇವಿಯ ಗುರು ದಾಸಿಮಯ್ಯನೆಂದೂ ತನ್ನ ಶಿಷ್ಯೆಯರಾದ ಮಹಾರಾಣಿಯ ಇಷ್ಟದಂತೆ ೨೦೦೦೦ ಜೈನರನ್ನು ಗೆದ್ದು ಎಲ್ಲರಿಗೂ ಶಿವದೀಕ್ಷೆಯನ್ನು ಕೊಟ್ಟನೆಂದೂ ಹೇಳಿದ್ದಾನೆ. ಇವನು ದೇವರ ದಾಸಿ-ದಾಸಿಮಯ್ಯ ಎಂದು ಕರೆದಿದ್ದಾನೆ. (ಷಡಕ್ಷರ ಕವಿಯು ಶಿವದಾಸ, ದಾಸಿದೇವ, ಜೇಡರ ದಾಸಿಮಯ್ಯ ಎಂದು ಕರೆದಿದ್ದಾನೆ.) ಇದೇ ಭೀಮಕವಿಯು ತನ್ನ ಪುರಾಣದ ೨೩ ನೇ ಸಂಧಿಯಲ್ಲಿ ಶಂಕರ ದಾಸಯ್ಯನೂ ಜೇಡರ ದಾಸಯ್ಯನೂ ಸಮಕಾಲೀನರೆಂದೂ ಶಂಕರ ದಾಸಿಯು ಜಗದೇಕಮಲ್ಲ (ಜಯಸಿಂಹ) ನ ಆಸ್ಥಾನಕ್ಕೆ ಹೋಗಿ ಪವಾಡವನ್ನು ಮೆರೆದನೆಂದೂ ಅಭಿಪ್ರಾಯ ಪಟ್ಟಿದ್ದಾನೆ.

೩. ವ್ಯಾಸೋಕ್ತ ಬಸವ ಪುರಾಣವನ್ನು ಬರೆದ ಹೆಸರು ತಿಳಿಯದ ಸಂಸ್ಕೃತ ಕವಿಯು ತನ್ನ ಸಂಸ್ಕೃತ ಬಸವ ಪುರಾಣದ ೨೪ ನೇ ಅಧ್ಯಾಯದಲ್ಲಿ ಶಂಕರದಾಸನ ಕಥೆಯನ್ನೂ ೩೨ ನೇ ಅಧ್ಯಾಯದಲ್ಲಿ ದೇವರ ದಾಸಯ್ಯನ ಕಥೆಯನ್ನೂ ಹೇಳಿದ್ದಾನೆ. ಅಲ್ಲದೆ ಶಂಕರ ದಾಸಿ— ದೇವರ ದಾಸಿಗಳು ಸಮಕಾಲೀನರೆಂದೂ ದೇವರ ದಾಸಿಯು ಪೊಟ್ಟಲಕೆರೆಯ ರಾಜಸಿಂಗ—ವಲ್ಲಭನ ಪತ್ನಿ ಸುಗ್ಗಲಾದೇವಿಯ ಗುರುವೆಂದೂ ರಾಜಸ್ಥಾನಕ್ಕೆ ಹೋಗಿ ೨೦೦೦೦ ಜೈನರನ್ನು ಜೈಸಿ ಎಲ್ಲರಿಗೂ ಲಿಂಗಧಾರಣೆ ಮಾಡಿದನೆಂದೂ ಸ್ಪಷ್ಟವಾಗಿ ಹೇಳಿದ್ದಾನೆ.

೪. ಕಂಚಿ ಶಂಕರಾರಾಧ್ಯನು ತಾನು ಬರೆದಿರುವ ಸಂಸ್ಕೃತ ಬಸವೇಶ ವಿಜಯದ ೧೧ ನೇ ಅಧ್ಯಾಯದಲ್ಲಿ ಶಂಕರ ದಾಸಿಯ ಕಥೆಯನ್ನೂ ೩೮ ನೇ ಅಧ್ಯಾಯದಲ್ಲಿ ದೇವರ ದಾಸಿಯ ಕಥೆಯನ್ನೂ ಹೇಳಿ ಶಂಕರ

ದಾಸಿ-ದೇವರ ದಾಸಿಗಳು ಸಮಕಾಲೀನರೆಂದೂ ಶಂಕರ ದಾಸಿಯು ಜೇಡರ ದಾಸಿಯ ಗರ್ವಭಂಗ ಮಾಡಿದನೆಂದೂ ದೇವರ ದಾಸಿಯು ಜಯಸಿಂಹನ ಪತ್ನಿ ಸುಗ್ಗಲಾದೇವಿಯ ಗುರುವೆಂದೂ ಪೊಟ್ಟಲಕೆರೆಯಲ್ಲಿ ಜಯಸಿಂಹನನ್ನೂ ಆಸ್ಥಾನದ ೨೦೦೦೦ ಜೈನರನ್ನೂ ಜೈಸಿ ದಾಸಿಮಯ್ಯನು ಎಲ್ಲರಿಗೂ ಲಿಂಗಧಾರಣೆ ಮಾಡಿದನೆಂದೂ ಬರೆದಿದ್ದಾನೆ.

೫. ಮಹಾಕವಿ ಪಾಲ್ಕುರಿಕೆ ಸೋಮನಾಥನು ಆಂಧ್ರ ಭಾಷೆಯಲ್ಲಿ ಬರೆದಿರುವ "ಬಸವ ಪುರಾಣಮು" ಎಂಬ ಗ್ರಂಥದ ೧೧೧ ನೇ ಪುಟ ೧೪೧ ನೇ ಪುಟಗಳಲ್ಲಿ ಜೇಡರ ದಾಸಿ— ಶಂಕರದಾಸಿ— ಜಗದೇಕಮಲ್ಲ ಇವರು ಸಮಕಾಲೀನರೆಂದೂ ಶಂಕರದಾಸಿಯು ಜಗದೇಕಮಲ್ಲನ ರಾಜಧಾನಿ (ಕಲ್ಯಾಣ?) ಕ್ಕೆ ಬಂದಿದ್ದನೆಂದೂ ಜೇಡರ ದಾಸಿಯು ಜಗದೇಕಮಲ್ಲನ ಆಸ್ಥಾನ (ಪೊಟ್ಟಲಕೆರೆ) ದವರನ್ನೆಲ್ಲ ಜೈಸಿ ಎಲ್ಲರಿಗೂ ಶಿವದೀಕ್ಷೆಯನ್ನು ಕೊಟ್ಟನೆಂದೂ ಹೇಳಿದ್ದಾನೆ.

೬. ಮಹಾಕವಿ ಹರಿಹರದೇವನು ಬರೆದಿರುವ ರಘಟಾ ಕಾವ್ಯಾಂತರ್ಗತ "ಶಂಕರ ದಾಸಿಮಯ್ಯರಗಳೆ" ಎಂಬ ಗ್ರಂಥದಲ್ಲಿ ಶಂಕರದಾಸಿ ಜೇಡರದಾಸಿಗಳು ಸಮಕಾಲೀನರೆಂದೂ, ವೀರಶೈವರೆಂದೂ ಹೇಳಿದೆ. ಶಂಕರದಾಸಿಯು (ಕಲ್ಯಾಣ?) ದಲ್ಲಿ ಜಯಸಿಂಹನ ಆಸ್ಥಾನದಲ್ಲಿ ಮಹಿಮೆಯನ್ನು ಮೆರೆದನೆಂದು ಮಾತ್ರ ತಿಳಿದುಬರುತ್ತದೆ. ಹರಿಹರ ಕವಿಯು ಪುರಾತನ ನೂತನ ಶರಣರನೇಕರ ಕಥೆಗಳನ್ನು ಬರೆದಿದ್ದರೂ ನಮಗೆ ಪ್ರಾಪ್ತವಾಗಿದ್ದ ಈಗ ರಾವಸಾಹೇಬ ಹಳಕಟ್ಟಿ ವಕೀಲರಿಂದ ಪ್ರಕಟವಾಗುತ್ತಿರುವ ರಘಟಾ ಕಾವ್ಯದ ಪ್ರತಿಗೆ ಮೂಲವಾದ ಎರಡು ಪ್ರತಿಗಳಲ್ಲಿ 'ದೇವರದಾಸಿಮಯ್ಯನ ರಗಳೆ ಎಂಬ ಕಾವ್ಯವಿಲ್ಲದ್ದು ವ್ಯಸನಕರವಾಗಿದೆ. ಹರಿಹರನು ಶಂಕರದಾಸಿಯ ರಗಳೆಯಲ್ಲಿಯೂ ಪಂಪಾಶತಕದಲ್ಲಿಯೂ ದೇವರದಾಸಿಯ ಹೆಸರನ್ನು ಹೇಳಿರುವದರಿಂದ ಈತನಿಗೆ ದಾಸಿಮಯ್ಯನ ವಿಚಾರ ಚನ್ನಾಗಿ ಗೊತ್ತಿತ್ತೆಂದು ಹೇಳಬಹುದು. ಆತನು "ದಾಸಿಮಯ್ಯನ ರಗಳೆ, ಎಂಬ ಕಾವ್ಯವನ್ನೂ ನೂತನಪುರಾತನರಲ್ಲಿ ಗಣಿಸಿ ಹೇಳಿರಬಹುದು. ರಘಟಾಕಾವ್ಯದ ಪೂರ್ಣ ಪ್ರತಿ ಸಿಗುವ ವರೆಗೂ ನಿರ್ಧರಿಸಲಾಗುವದಿಲ್ಲ. ಸಾರಾಂಶಃ- ಹರಿಹರನ ಕಾವ್ಯದಲ್ಲಿ ಪೊಟ್ಟಲಕೆರೆಯನ್ನು ಕಲ್ಯಾಣವೆಂದು ಹೇಳಿದೆ (ಪಾಲ್ಕುರಿಕೆ ಸೋಮನಾಥನ ಕಾಲದಲ್ಲಿಯೂ ಜಯಸಿಂಹನ ಆಸ್ಥಾನವನ್ನು ಕಲ್ಯಾಣವೆಂದು ಹೇಳಿದೆ.) ಶಂಕರದಾಸಿ-ದೇವರದಾಸಿಗಳು ಸಮಕಾಲೀನರೆಂದೂ

ಶಂಕರದಾಸಿಯು ವೀರಶೈವನೆಂದೂ ಜಯಸಿಂಹನ ಕಾಲೀನನೆಂದೂ ತಿಳಿದು ಬರುತ್ತದೆ.

೭. ಕೈ|| ಆಸ್ಥಾನವಿದ್ವಾನ್ ಎನ್. ಆರ್. ಕರಿಬಸವಶಾಸ್ತ್ರಿಗಳು ತಾವು ವಚನರೂಪವಾಗಿ ಬರೆದಿರುವ 'ಬಸವರಾಜವಿಜಯ' ಎಂಬ ಗ್ರಂಥದ ೧೭ ನೇ ಅಧ್ಯಾಯದಲ್ಲಿ ಶಂಕರದಾಸಿ ಕಥೆಯನ್ನು ೪೦ ನೇ ಅಧ್ಯಾಯದಲ್ಲಿ ದೇವರದಾಸಿಯ ಕಥೆಯನ್ನೂ ಹೇಳಿದ್ದಾರೆ. ಈ ಗ್ರಂಥದ ಪೀಠಿಕೆಯಲ್ಲಿ ಶಂಕರದಾಸಿಮಯ್ಯನು ಬಸವೇಶ್ವರನಿಗಿಂತ ಪೂರ್ವದ ವೀರಶೈವನೆಂದೂ ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಶಾಸ್ತ್ರಿಗಳ ಅಭಿಪ್ರಾಯದಲ್ಲಿ ದೇವರದಾಸಿ ಕೂಡ ವೀರಶೈವನೂ ಜಯಸಿಂಹರಾಜನನ್ನು ಅವನಾಸ್ಥಾನದ ಜೈನರನ್ನೂ ಗೆದ್ದು ಎಲ್ಲರಿಗೂ ಶಿವದೀಕ್ಷೆ ಕೊಟ್ಟವನೂ ಆಗಿದ್ದಾನೆ.

೮. ಹಿಂದೆ ವಿವರಿಸಿದ ಏಳು ಮಂದಿ ಬಸವಪುರಾಣ ಕರ್ತೃಗಳೂ ಜಯಸಿಂಹ ಅಥವಾ ಜಗದೇಕ ಮಲ್ಲನ ಕಾಲದಲ್ಲಿ ಶಂಕರದಾಸಿ-ಜೇಡರ ದಾಸಿಗಳಿದ್ದರೆಂದೂ ಹೇಳಿದ್ದಾರೆ. ಈ ಎಲ್ಲ ಕವಿಗಳೂ ಈ ದಾಸಿಮಯ್ಯಗಳಿಬ್ಬರನ್ನೂ ವೀರಶೈವರನ್ನಾಗಿ ಹೇಳಿರುವದು ಮಹತ್ವದ ವಿಚಾರ. ಷಡಕ್ಷರಕವಿ, ಭೀಮಕವಿಗಳು ದಾಸಿಮಯ್ಯನು ಪ್ರತಿವಾದಿಗಳನ್ನು ಜೈಸಿ ಶಿವದೀಕ್ಷೆ ಕೊಟ್ಟನೆಂದೂ ಸಂಸ್ಕೃತ ಬಸವಪುರಾಣದ ಹಾಗೂ ಸಂಸ್ಕೃತ ಬಸವೇಶ ವಿಜಯದ ಕವಿಗಳು ದೇವರದಾಸಿಯು ಜಯಸಿಂಹನಿಗೂ ೨೦೦೦೦ ಜೈನರಿಗೂ ಲಿಂಗಧಾರಣೆ ಮಾಡಿದನೆಂದೂ ಹೇಳಿದ್ದಾರೆ. ಹರಿಹರನು ಶಂಕರದಾಸಿಯು ಪರಮ ವೀರಶೈವನೆಂದೂ ಜಡೆಶಂಕರಲಿಂಗದಿಂದ ಅವನಿಗೆ ಲಿಂಗಧಾರಣೆಯಾಯಿತೆಂದೂ ಅಭಿಪ್ರಾಯಪಟ್ಟಿದ್ದಾನೆ. ದೇವರ ದಾಸಿಮಯ್ಯನ ಪುರಾಣವನ್ನು ಬರೆದ ಕವಿಗಳು ದಾಸಿಮಯ್ಯನನ್ನು ವೀರಶೈವನೆಂದೇ ಬರೆದಿದ್ದಾರೆ. ಕವಿಚರಿತ್ರೆ ಎರಡನೇ ಭಾಗದಲ್ಲಿ ಬಂದಿರುವ ಮಲ್ಲಿಕಾರ್ಜುನ ಎಂಬುವನಿಂದ ಸು. ಕ್ರಿ. ಶ. ೧೬೮೭ ರಲ್ಲಿ ಬರೆಯಲ್ಪಟ್ಟಿರುವ "ಶಂಕರದಾಸಿಮಯ್ಯನ ಚರಿತ್ರೆ" ಯಲ್ಲಿ ಸಹ ಹರಿಹರನ ಶಂಕರದಾಸಿ ರಗಳೆಯಲ್ಲಿರುವಂತೆಯೇ ಕಥೆ ಬೆಳೆದಿದೆ. ಈ ಮಲ್ಲಿಕಾರ್ಜುನ ಕವಿ ಸಹ ಶಂಕರದಾಸಿಯನ್ನು ವೀರಶೈವನೆಂದೂ, ಸೂಜಿಯ ಕಾಯಕದವನೆಂದೂ, ಕಲ್ಯಾಣಕ್ಕೆ ಜಯಸಿಂಹನ ಆಸ್ಥಾನಕ್ಕೆ ಹೋಗಿದ್ದನೆಂದೂ, ದೇವರದಾಸಿಮಯ್ಯನ ಗರ್ವಹರಣ ಮಾಡಿದನೆಂದೂ ಬರೆದಿದ್ದಾನೆ. ಈ ಎಲ್ಲ ಪ್ರಾಚೀನ ಕವಿಗಳ ಅಭಿಪ್ರಾಯದಿಂದ ತಿಳಿದುಬರುವದೇನೆಂದರೆ:—

(೧) ದೇವರ ದಾಸಿಗೆ ಜೇಡರ ದಾಸಿಯೆಂದೂ ಹೆಸರು. ಇವನು ವೀರಶೈವನಾಗಿದ್ದುದಲ್ಲದೆ ವೀರಶೈವ ಮತ ಪ್ರಚಾರಕನೂ ಆಗಿದ್ದ. ಜಯಸಿಂಹನ ಆಸ್ಥಾನದಲ್ಲಿ ವಾದದಲ್ಲಿ ಜೈಸಿ ರಾಜನನ್ನೂ ೨೦೦೦೦ ಜೈನರನ್ನೂ ವೀರಶೈವರನ್ನಾಗಿ ಮಾಡಿದನು.

(೨) ಶಂಕರದಾಸಿ ಮೊದಲು ಬ್ರಾಹ್ಮಣ. ಜಡೆಶಂಕರಲಿಂಗದಿಂದ ಇವನಿಗೆ ಲಿಂಗಧಾರಣೆಯಾಯ್ತು. ಇವನು ದೇವರದಾಸಿಯ ಗರ್ವಭಂಗ ಮಾಡಿ, ಜಯಸಿಂಹನ ಆಸ್ಥಾನಕ್ಕೆ ಹೋಗಿ ವಾದವನ್ನು ಗೆದ್ದ. ಇವನೂ ಸಹ ವೀರಶೈವ ವಿಭೂತಿಯಾಗಿದ್ದ. ದಾಸಿಮಯ್ಯನು ಜೇಡರ ಕಾಯಕ ಮಾಡುತ್ತಿದ್ದಂತೆ, ಇವನು ಸೂಜಿ ಕಾಯಕ ಮಾಡುತ್ತಿದ್ದನು.

(೩) ಸುಗ್ಗಲಾದೇವಿಯ ಗುರು ಜೇಡರ ದಾಸಿ. ಇವಳ ಗಂಡ ಜಯಸಿಂಹ ಅಥವಾ ಜಗದೇಕಮಲ್ಲ. ಇವನ ರಾಜಧಾನಿಯನ್ನು ಪೊಟ್ಟಲಕೆರೆಯೆಂದು ಭೀಮ, ಷಡಕ್ಷರ, ಕವಿವ್ಯಾಸ, ಶಂಕರಾರಾಧ್ಯ ಕವಿಗಳೂ ಕಲ್ಯಾಣವೆಂದು ಹರಿಹರ, ಪಂಡಿತ ಮಲ್ಲಿಕಾರ್ಜುನ, ಪಾಲ್ಕುರಿಕೆ ಸೋಮ ಕವಿಗಳೂ ಹೇಳಿದ್ದಾರೆ.

## ಇಮ್ಮಡಿ ಜಯಸಿಂಹ.

ಕಲ್ಯಾಣ ಚಾಲುಕ್ಯರಲ್ಲಿ ಕ್ರಿ. ಶ. ೧೦೧೮ ರಿಂದ ೧೦೪೦ ರ ವರೆಗೆ ರಾಜ್ಯಭಾರ ಮಾಡಿದವನು ಇಮ್ಮಡಿ ಜಯಸಿಂಹರಾಜ. ಇವನಿಗೆ ಜಗದೇಕಮಲ್ಲ, ಜಯಸಿಂಗ, ದೇಸಿಂಗ ಎಂಬ ಹೆಸರುಗಳು ಇದ್ದವು. ದೇವರದಾಸಿ, ಶಂಕರದಾಸಿಗಳ ಚರಿತ್ರೆಗೆ ಸಂಬಂಧಿಸಿದವನು ಇವನೇ. ಇವನ ಪತ್ನಿಯೇ ಪರಮ ವೀರಶೈವಳಾದ ಸುಗ್ಗಲಾದೇವಿ.

## ರಾಜಧಾನಿ ಯಾವುದು.

ಈ ಜಯಸಿಂಹನ ರಾಜಧಾನಿಯನ್ನು ಕಲ್ಯಾಣವೆಂದು ಕೆಲವು ಕವಿಗಳೂ ಪೊಟ್ಟಲಕೆರೆಯೆಂದು ಕೆಲವು ಕವಿಗಳೂ ಬರೆದಿದ್ದಾರೆ. ಇದರಲ್ಲಿ ಸತ್ಯವಾವುದೆಂಬುದನ್ನು ವಿಚಾರಿಸಬೇಕು. ಇಮ್ಮಡಿ ಜಯಸಿಂಹನ ಕಾಲಕ್ಕೆ ಕಲ್ಯಾಣ ಪಟ್ಟಣವಿನ್ನೂ ನಿರ್ಮಾಣವಾಗಿರಲಿಲ್ಲ. ಜಯಸಿಂಹನ ನಂತರ ರಾಜ್ಯಭಾರ ಮಾಡಿದ ಆಹವಮಲ್ಲ ಸೋಮೇಶ್ವರನು ಕ್ರಿ. ಶ. ೧೦೫೩ ರರಲ್ಲಿ ಕಲ್ಯಾಣವನ್ನು ಕಟ್ಟಿಸಿ ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನೆಂದು "ಕರ್ನಾಟಕ ಇತಿಹಾಸ" ದಲ್ಲಿ

ಶ್ರೀಮಾನ್ ರಾಜಪುರೋಹಿತರು ಹೇಳಿದ್ದಾರೆ. ಅಂದಮೇಲೆ ಜಯಸಿಂಹನ ಕಾಲದಲ್ಲಿ ಪೊಟ್ಟಲಕೆರೆಯೇ ರಾಜಧಾನಿಯಾಗಿದ್ದಿತೆಂಬುದು ನ್ಯಾಯವಾಗಿದೆ. ಹರಿಹರ ಕವಿ ಮಲ್ಲಿಕಾರ್ಜುನ ಕವಿಗಳು ಕಲ್ಯಾಣ ಚಾಲುಕ್ಯರೆಂಬ ಪ್ರಸಿದ್ಧವಾದ ಹೆಸರನ್ನು ನಂಬಿ ಜಯಸಿಂಹನು ಕಲ್ಯಾಣದಲ್ಲಿಯೇ ರಾಜ್ಯಭಾರ ಮಾಡಿದನೆಂದು ಹೇಳಿದ್ದು ತಪ್ಪಾಗಿದೆ. ಇವನು ಪೊಟ್ಟಲಕೆರೆಯಲ್ಲಿಯೇ ಆಳುತ್ತಿದ್ದನೆಂದು ಷಡಕ್ಷರ, ಭೀಮ, ಶಂಕರ, ವ್ಯಾಸ ಕವಿಗಳು ಹೇಳಿದ್ದು ಯೋಗ್ಯವಿದೆ. ಪಾಲ್ಕುರಿಕೆ ಸೋಮಕವಿಯು ಶಂಕರದಾಸಿ ಕಥೆಯಲ್ಲಿ ಕಲ್ಯಾಣವೆಂದೂ ಜೇಡರದಾಸಿಯ ಕಥೆಯಲ್ಲಿ ಪೊಟ್ಟಲಕೆರೆಯೆಂದೂ ಹೇಳಿರುವನು.

ಬಸವಪುರಾಣಗಳಲ್ಲಿ ಜಯಸಿಂಹನಿಗೆ ಜಯಸಿಂಗ, ಜಗದೇಕಮಲ್ಲ, ಸಿಂಗಬಲ್ಲಹ, ದೇಸಿಂಗ ಹೀಗೆ ಅನೇಕ ಹೆಸರುಗಳನ್ನು ಕರೆದಿದ್ದಾರೆ. ಇವೆಲ್ಲಾ ಇಮ್ಮಡಿ ಜಯಸಿಂಹನ ಹೆಸರುಗಳೇ ಎಂಬುವದರಲ್ಲಿ ಸಂಶಯವಿಲ್ಲ. ಇವನೇ ಸುಪ್ರಸಿದ್ಧ ಸುಗ್ಗಲಾದೇವಿಯ ಪತಿ. ಜೇಡರದಾಸಿಮಯ್ಯನ ಶಿಷ್ಯ.

ಇದು ವರೆಗೆ ನಾನು ಕೇವಲ ಪುರಾಣಗಳನ್ನು ಮಾತ್ರ ಅವಲಂಬಿಸಿ ಬರೆದೆನು. ಇನು ಮುಂದೆ ಆಧುನಿಕ ಇತಿಹಾಸ ಪಂಡಿತರೇನನ್ನು ಬರೆಂಬದನ್ನು ವಿವರಿಸುತ್ತೇನೆ.

## ಇತಿಹಾಸ ಪಂಡಿತರ ಅಭಿಪ್ರಾಯಗಳು.

(೧) ಪಾಲ್ಕುರಿಕೆ ಸೋಮನಾಥ ಕವಿಯ ಆಂಧ್ರ ಬಸವಪುರಾಣವು ಮದ್ರಾಸುನಗರದ ಆಂಧ್ರ ಪತ್ರಿಕಾ ಕಾರ್ಯಾಲಯದಲ್ಲಿ ಅಚ್ಚಾಗಿ ಪ್ರಕಟಗೊಂಡಿದೆ. ಇದನ್ನು ತೆಲಗು ದೇಶದ ಸುಪ್ರಸಿದ್ಧ ಪಂಡಿತರಾದ ಬ್ರಹ್ಮಶ್ರೀ ವೇಟೂರು ಪ್ರಭಾಕರ ಶಾಸ್ತ್ರಿಗಾರರು ಎಂಬವರು ಶುದ್ಧವಾಗಿಯೂ ಸುಂದರವಾಗಿಯೂ ಪರಿಷ್ಕರಿಸಿ ಅದಕ್ಕೆ ವಿದ್ವತ್ಪೂರ್ಣವಾದ ಪೀಠಿಕೆಯನ್ನು ಬರೆದಿದ್ದಾರೆ. ಆ ಪೀಠಿಕಾ ಪ್ರಕರಣದ ೬೧ ಮತ್ತು ೬೨ನೇ ಪುಟದಲ್ಲಿ ದೇವರದಾಸಿ ಶಂಕರದಾಸಿ-ಜಯಸಿಂಹರ ವಿಚಾರವಾಗಿ ಆಂಧ್ರ ಭಾಷೆಯಲ್ಲಿ ಬರೆದಿರುವ ವಿಚಾರವನ್ನು ಕನ್ನಡದಲ್ಲಿ ಭಾಷಾಂತರಿಸಿ ಹೇಳಿದ್ದೇನೆ:—
"ಶಂಕರದಾಸಯ್ಯ, ಜೇಡರದಾಸಯ್ಯ ದುಗ್ಗಳವ್ವ ಈ ಮೂವರೂ ಸಮಕಾಲದವರು. ಪಶ್ಚಿಮ ಚಾಳುಕ್ಯರಾಯ ಜಗದೇಕಮಲ್ಲನು (ಈತನಿಗೆ ಇಮ್ಮಡಿ ಜಯಸಿಂಹ ಭೂಪಾಲ ದೇಸಿಂಗ ಸಿಂಗಬಲ್ಲಹ ಎಂಬ ಹೆಸರು

ಗಳಿದ್ದವು. ) ಶಂಕರದಾಸಯ್ಯನು ಕಲ್ಯಾಣ ನಗರಕ್ಕೆ ಬಂದು ದೊರೆಯು ಮಾಡಿಸಿದ್ದ ವಿಷ್ಣುಪ್ರತಿಮೆಯನ್ನು ಪುಡಿ ಪುಡಿ ಮಾಡಿದನು. ಈ ಜಯ ಸಿಂಗನ ಭಾರ್ಯೆ ಸುಗ್ಗಳಾದೇವಿ. ಇವಳು ಶೈವಮತಸ್ಥಳು. ಇವಳ ಗುರುವೇ ಜೇಡರ ದಾಸಯ್ಯನು. ಈ ಜೇಡರ ದಾಸಿಯು ತನ್ನ ಮಹಿಮೆಯನ್ನು ಪ್ರಕಟಿಸಿ ಸಿಂಗಬಲ್ಲಹರಾಜನನ್ನು ಶೈವನನ್ನಾಗಿ ಮಾಡಿದನು. ಇವನ ರಾಜಧಾನಿಗಳು ಪೊಟ್ಟಲಕೆರೆ ಕೊಲ್ಲಿಪಾಕಿಗಳೆಂದು ಶಾಸನಗಳಿಲ್ಲದೆ. ಪೊಟ್ಟಲ ಕೆರೆಯಲ್ಲಿ ಜೇಡರ ದಾಸಯ್ಯನು ಮಹಿಮೆಯನ್ನು ಮಾಡಿ ಜೈನರೆಲ್ಲರನ್ನು ಗೆದ್ದು ಎಲ್ಲರನ್ನೂ ಶೈವರನ್ನಾಗಿ ಮಾಡಿದನು. ಜೈನ ಮಠಗಳು ಶಿವದೇವಾಲಯಗಳಾಗುವಂತೆ ಮಾಡಿದನು. ಆಗ ರಾಜನಾದಿಯಾಗಿ ಎಲ್ಲರೂ ಶಿವಭಕ್ತರಾದರು. ಪೊಟ್ಟಲಕೆರೆಯು ಬಳ್ಳಾರಿ ಪ್ರಾಂತದಲ್ಲಿದೆ. ಕೊಲ್ಲಿಪಾಕಿಯಲ್ಲಿದೆಯೋ ಎಂದು ಪ್ಲೀಟ ದೊರೆಗಳು ಹೇಳಿದ್ದಾರೆ. ಅದು ನಿಜಾಂ ಆಂಧ್ರ ದೇಶದಲ್ಲಿದೆ. ಇಲ್ಲಿ ಪ್ರಭಾಕರ ಶಾಸ್ತ್ರಿಗಳು ಜೇಡರ ದಾಸಯ್ಯನು ಜಯಸಿಂಹನನ್ನೂ ತದಾಸ್ಥಾನದ ಜೈನರನ್ನು ಶೈವರನ್ನಾಗಿ ಮಾಡಿದನೆಂದು ಹೇಳಿದುದರ ತಾತ್ಪರ್ಯ ಎಲ್ಲರನ್ನು ಲಿಂಗವಂತರನ್ನು ಮಾಡಿಹನೆಂದು. ಏತಕ್ಕಂದರೆ ಸೋಮಕವಿಯು ಎಲ್ಲರಿಗೂ ಶಿವದೀಕ್ಷೆಯನ್ನು ಕೊಟ್ಟನೆಂದು ಸ್ಪಷ್ಟವಾಗಿ ಹೇಳಿದ್ದಾನೆ. (ಮೂಲ ಗ್ರಂಥವನ್ನು ನೋಡಿ. )

೨. ಕೈ. ರಾವಬಹದ್ದೂರ ವಾರದ ಮಲ್ಲಪ್ಪನವರ ಗ್ರಂಥಮಾಲೆಯಲ್ಲಿ ಪ್ರಕಟವಾಗಿರುವ ಮರಾಠಿ ಭಾಷೆಯ ' ವೀರಶೈವಾಂಚಿಸ್ಥಿತಿ " ಎಂಬ ಗ್ರಂಥದ ೧೧ನೇ ಪುಟದಲ್ಲಿ ವೀರಶೈವ ಮತದ ಪ್ರಾಚೀನತೆಯನ್ನು ಹೇಳುವ ಸಂದರ್ಭದಲ್ಲಿ ಆ ಗ್ರಂಥಕರ್ತರಾದ ಕೈ. ಎಂ. ಎಂ. ಕಲ್ಯಾಣಶೆಟ್ಟಿ ಬಿ. ಎ. ಎಂಬವರು " ಚಾಲುಕ್ಯ ರಾಜ್ಯದಲ್ಲಿ ಒಬ್ಬನಾದ ಜಯಸಿಂಹನ ಪತ್ನಿ ಸುಗ್ಗಲಾದೇವಿ ಎಂಬುವಳೊಬ್ಬಳಿದ್ದಳು. ಅವಳು ದೇವರ ದಾಸಿಮಯ್ಯನೆಂಬ ಭಕ್ತನ ಕಡೆಯಿಂದ ವೀರಶೈವ ದೀಕ್ಷೆ ಪಡಕೊಂಡಳೆಂದು ಫ್ಲೀಟಸಾಹೇಬರ ಮತವಿದೆಯೆಂದು ಬರೆದಿದ್ದಾರೆ.

೩. ಶರಣರ ಸಂದೇಶ ಪತ್ರಿಕೆಯ ಸಂಪಾದಕರೂ ಸುಪ್ರಸಿದ್ಧ ಗ್ರಂಥಕಾರರೂ ಆದ ಮ. ರಾ. ಹರ್ಡೇಕರ್ ಮಂಜಪ್ಪನವರು ೧೯೨೪ ರಲ್ಲಿ ಪ್ರಕಟಿಸಿದ ಶ್ರೀ ಬಸವ ಚರಿತ್ರೆ ಎಂಬ ಗ್ರಂಥದಲ್ಲಿ ವೀರಶೈವ ಮತವು ಬಸವೇಶ್ವರನಿಂದ ಸ್ಥಾಪಿಸಲ್ಪಡಲಿಲ್ಲವೆಂದೂ ಬಹು ಪ್ರಾಚೀನ ಕಾಲದಿಂದ

ಇತ್ತೀಚಿನದೂ ಈ ಮತದ ಸನಾತನತ್ವವನ್ನು ಸಿದ್ಧಪಡಿಸುವಾಗ ಅನೇಕ ಆಧಾರಗಳನ್ನು ಕೊಡುತ್ತ ಈ ಮುಂದೆ ಸೂಚಿಸಿರುವ ಐತಿಹಾಸಿಕ ಆಧಾರವನ್ನೂ ಕೊಟ್ಟಿದ್ದಾರೆ. ಮಿ. ಫ್ಲೀಟ್ ಸಾಹೇಬರ "ಕನ್ನಡ ಜಿಲ್ಲೆಯ ವಂಶಗಳು" ಎಂಬ ಗ್ರಂಥದ ೪೫ ನೇ ಪುಟದಲ್ಲಿ ಪೋಟಲಕೆರೆಯ ವಿಷಯವಾಗಿ ಬರೆದಿರುವುದೇನಂದರೆ— ಕ್ರಿ. ಶ. ೧೦೧೮ ರಿಂದ ೧೦೪೨ನೆಯ ಇಸ್ವಿಯ ವರೆಗೆ ಆಳಿದ ಚಾಲುಕ್ಯವಂಶದ ಮೂರನೆಯ ರಾಜನಾದ ಜಯಸಿಂಹನು ದೇವರ ದಾಸಿಮಯ್ಯನಿಂದ ವೀರಶೈವ ಮತ ದೀಕ್ಷೆಯನ್ನು ಹೊಂದಿದನು.

೪. ಕನ್ನಡ ಕವಿ ಚರಿತ್ರೆಯ ೧ ನೇ ಭಾಗದಲ್ಲಿ ಮಹಾ ಮಹೋಪಾಧ್ಯಾಯ ರಾವಬಹಾದ್ದೂರ್ ಆರ್. ನರಸಿಂಹಾಚಾರ್ಯರು ಹೀಗೆ ಬರೆದಿರುವರು.

### ದೇವರ ದಾಸಿಮಯ್ಯನು ೧೦೪೦

ಇವನು ಜೈನರನ್ನು ಜೈಸಿ ತನ್ನ ಶಿಷ್ಯೆಯಾದ ಸುಗ್ಗಲದೇವಿಯ ಗಂಡ ಜಯಸಿಂಹನನ್ನು (ದೇಸಿಂಗರಾಯ) ವೀರಶೈವನನ್ನಾಗಿ ಮಾಡಿದಂತೆ ತಿಳಿಯುತ್ತದೆ. ಬ್ರಹ್ಮಶಿವನು (ಸು. ೧೧೭೫) ಈ ಕವಿಯ ಹೆಸರನ್ನು ಹೇಳುವುದರಿಂದ ಇವನು ಅವನ ಕಾಲಕ್ಕೆ ಹಿಂದೆ ಇದ್ದಿರಬೇಕು. ಆದುದರಿಂದ ಈ ರಾಜನು ೧೦೧೮ ರಿಂದ ೧೦೪೨ ರ ವರೆಗೆ ಆಳಿದ ಚಾಲುಕ್ಯ ರಾಜನಾದ ೨ ನೇ ಜಯಸಿಂಹನಾಗಿರಬೇಕು. ಇಲ್ಲಿ ನಾವು ದೇವರ ದಾಸಿಮಯ್ಯನನ್ನು ಪುರಾಣ ಕಥಿತನೆಂದೂ ವಚನ ಕರ್ತೃವಲ್ಲವೆಂದೂ ತಿಳಿದುಕೊಳ್ಳಬೇಕು. ವಚನಕಾರನು ಬಸವೇಶನ ಸಮಕಾಲೀನನೆಂದು ಹಿಂದೆಯೇ ಸಿದ್ಧವಾಗಿದೆ.

೫. ಘನವಂತರಾದ ರಾವಸಾಹೇಬ್ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಅವರು ತಾವು ಪ್ರಕಟಿಸಿದ ದಾಸಿಮಯ್ಯನ ವಚನಗಳ ಪೀಠಿಕೆಯಲ್ಲಿ 'ದೇವರ ದಾಸಿಮಯ್ಯನು ಕ್ರಿ. ಶ. ೧೦೧೮ ರಿಂದ ೧೦೫೦ ರ ವರೆಗೆ ಆಳಿದ ಚಾಲುಕ್ಯ ರಾಜನಾದ ಜಯಸಿಂಹನ ಕಾಲದಲ್ಲಿದ್ದನೆಂಬುದು ಈಗ ಸ್ಪಷ್ಟವಾಗಿರುತ್ತದೆ. ಫ್ಲೀಟ ಸಾಹೇಬರು ಇಂಡಿಯನ್ ಅಂಟಿಕ್ವರಿ ವಾ. ೧೯ ನೇದರಲ್ಲಿ ಈತನು ಜಯಸಿಂಹನ ಕಾಲಕ್ಕಿರಬಹುದೆಂದು ಊಹಿಸಿದ್ದಾರೆ. ಹರಿಹರಾಚಾರ್ಯನು ತನ್ನ ಪಂಪಾಶತಕದಲ್ಲಿ ಪುರಾತನರ ಹೆಸರುಗಳ ಜೊತೆಗೆ ದಾಸಿಮಯ್ಯನನ್ನು ಸೇರಿಸಿ ಉಲ್ಲೇಖಿಸಿದ್ದಾನೆ.....

ಆದರಂತೆಯೇ ಭೀಮಕವಿಯಾದರೂ ದಾಸಿಮಯ್ಯನನ್ನು ಶಿವಶರಣರೊಳಗೆ ಸೇರಿಸಿ ಇವನ ಚರಿತ್ರೆಯನ್ನು ತನ್ನ ಬಸವ ಪುರಾಣದಲ್ಲಿ ಬರೆದಿದ್ದಾನೆ. ಬಸವೇಶ್ವರನಾದರೂ ತನ್ನ ವಚನಗಳಲ್ಲಿ ದಾಸಿಮಯ್ಯನನ್ನು ಕುರಿತು ಮೇಲಿಂದಮೇಲೆ ಉಲ್ಲೇಖಿಸಿದ್ದಾನೆ.

ಇದರ ಮೇಲಿಂದ ದಾಸಿಮಯ್ಯನು ಬಸವನಿಗಿಂತ ಹಿಂದಿನವನೆಂಬುದು ಸ್ಪಷ್ಟವಾಗುತ್ತದೆ. ಈ ಸಂಗತಿಯು ಮಹತ್ವವಾದದ್ದು. ಇದರಿಂದ ವೀರಶೈವ ಮತ ಪ್ರಸಾರದ ಸಂಭವವು ಕರ್ನಾಟಕದಲ್ಲಿ ಬಸವನಿಗಿಂತಲೂ ೧೦೦-೧೫೦ ವರ್ಷಗಳ ಮುಂಚೆಯೇ ಪ್ರಾರಂಭವಾಗಿರಬಹುದೆಂತಲೂ ಊಹೆಗೆ ಆಸ್ಪದ ಕೊಡುತ್ತದೆ" ಎಂದಿದ್ದಾರೆ. ಈ ಮಾತುಗಳೆಲ್ಲವೂ ಪುರಾಣಪುರುಷ ದಾಸಿಮಯ್ಯನಿಗಲ್ಲದೆ ವಚನಕಾರನಿಗೆ ಅನ್ವಯಿಸುವದಿಲ್ಲವೆಂಬುದು ಈಗ ಸ್ಪಷ್ಟವಾಗುತ್ತದೆ.

೬. ಕರ್ನಾಟಕದ ಓರ್ವ ಸುಪ್ರಸಿದ್ಧ ಇತಿಹಾಸ ಪಂಡಿತರಾದ ಶ್ರೀಮಾನ್ ಡಾ. ನಂದೀಮಠ ಎಂ. ಎ. ಪಿ. ಎಚ್. ಡಿ. ಅವರು ಶಿವಾನುಭವದ ೬ ನೇ ಸಂಪುಟ ೫ ನೇ ಸಂಚಿಕೆಯಲ್ಲಿ ಬರೆದಿರುವ 'ವೀರಶೈವ ಇತಿಹಾಸ ಮತ್ತು ಧರ್ಮ' ಎಂಬ ಲೇಖನದಲ್ಲಿ ದೇವರ ದಾಸಿಮಯ್ಯನ ವಿಚಾರವನ್ನು ಬರೆದಿದ್ದಾರೆ. ಹೇಗಂದರೆ— "ಇನ್ನು ಸ್ವತಃ ಲಿಂಗಧಾರಿಗಳಾಗಿದ್ದು ವೀರಶೈವರ ಆಚರಣೆಯನ್ನು ಪ್ರಸಾರ ಮಾಡಲು ಹೆಣಗಿದವರಲ್ಲಿ ನಮಗೆ ಗೊತ್ತಿದ್ದ ಮಟ್ಟಿಗೆ ಜೇಡರ ದಾಸಿಮಯ್ಯರೊಬ್ಬರು. ಇವರ ಬಗ್ಗೆ ಬಸವೇಶ್ವರ ವಚನಗಳಲ್ಲಿ ಮೇಲಿಂದ ಮೇಲೆ ಉಲ್ಲೇಖವಿದೆ. ಬಸವಪುರಾಣದಲ್ಲಿಯೂ ಇತರ ವೀರಶೈವ ಗ್ರಂಥಗಳಲ್ಲಿಯೂ ಇವರ ಚರಿತ್ರವು ಬಂದಿದೆ. ಆದರೊಳಗಿನ ಕೆಲವು ವಿಷಯಗಳು ಶಿಲಾಶಾಸನದಿಂದ ಪ್ರಸ್ಥಿತವಾಗುವವು. ಕ್ರಿ. ಶ. ೧೧೪೮ ರಲ್ಲಿ ಹುಟ್ಟಿದ ಗೊಬ್ಬೂರು ಶಿಲಾಶಾಸನದಲ್ಲಿ ಜೇಡರ ದಾಸಿಮಯ್ಯಗಳ ಹೆಸರಿದೆ. ಡಾ. ಫ್ಲೀಟರಂಥ ಪಾಶ್ಚಾತ್ಯ ಚಿಕಿತ್ಸಕರೂ ಕೂಡ ದಾಸಿಮಯ್ಯನು ಐತಿಹಾಸಿಕ ಪುರುಷರೆಂದು ಒಪ್ಪಿಕೊಂಡಿರುವರು. ಕ್ರಿ. ಶ. ೧೦೦೮ ರಿಂದ ೧೦೪೨ರ ವರೆಗೆ ಆಳಿದ ಚಾಲುಕ್ಯ ಚಕ್ರವರ್ತಿ ವಿಕ್ರಮಾದಿತ್ಯ ಅಥವಾ ಜಗದೇಕಮಲ್ಲ ಜಯಸಿಂಹನ ಕಾಲದಲ್ಲಿ ದಾಸಿಮಯ್ಯರಿದ್ದರೆಂದು ತಿಳಿಯುವದರಿಂದ ಇವರು ಬಸವಣ್ಣನವರಿಗಿಂತ ನೂರಾರು ವರುಷ ಹಿಂದಿನವರು. ನಮಗೆ ಗೊತ್ತಿದ್ದ ವೀರಶೈವರ ಐತಿಹಾಸಿಕ ಪುರುಷರಲ್ಲಿ ಇವರೇ ಮೊದಲಿನವರೆಂದು ಅನ್ನಬಹುದು.

ಆದುದರಿಂದ ಪ್ರಸ್ತುತಕ್ಕೆ ನಾವು ವೀರಶೈವರ ಇತಿಹಾಸವನ್ನು ಇವರ ಕಾಲದಿಂದ ಅಂದರೆ ೧೧ ನೇ ಶತಮಾನದಿಂದಲೇ ಆರಂಭಿಸಬೇಕಾಗುದು'

೭. ಶಿವಾನುಭವ ತ್ರೈಮಾಸಿಕದ ೬ ನೇ ಸಂಚಿಕೆಯಲ್ಲಿ ಮಿ. ರಾ. ಸಿದ್ದಲಿಂಪ್ಪ ಮಹಾಂತಣ್ಣವರ ಎಂಬವರು "ದೇವರ ದಾಸಿಮಯ್ಯ" ಎಂಬ ಲೇಖನನನ್ನು ಬರೆದು ದೇವರ ದಾಸಿಮಯ್ಯನ ಪುರಾಣದ ವಿಚಾರವನ್ನೂ ಕೆಲವು ದಾಸಿಮಯ್ಯನ ವಚನಗಳನ್ನೂ ವಿವರಿಸಿದ್ದಾರೆ. ವಚನಕಾರನು ಬೇರೊಬ್ಬನೆಂದು ನಾವು ಹಿಂದೆಯೇ ಸಿದ್ಧಮಾಡಿರುವದರಿಂದ ಈ ಲೇಖಕರ ಬರಹವು ಪುರಾಣಪುರುಷನಿಗೇ ಸಲ್ಲತಕ್ಕದ್ದೆಂಬುದು ನಿಃಸಂದೇಹವಾಗಿದೆ. ಅವರ ಲೇಖನದಲ್ಲಿ ಮುಖ್ಯವಾದ ವಿಚಾರವನ್ನು ಮುಂದೆ ಸಂಗ್ರಹಿಸಿದೆ—

"ಅಗ್ಗೆ ವೇದಾಗಮ ಪ್ರಣೀತವಾದ ವೀರಶೈವ ಮತದ ಹ್ರಾಸಕಾಲವು ಒದಗಿತ್ತು. ಶಿವಶರಣರ ಸುಳುವೇ ಇಲ್ಲ. ಇಂಥ ಪರಿಸ್ಥಿತಿಯಲ್ಲಿ ಪ್ರಮಥಗಣವರ್ಯನೂ ಸದ್ಭಕ್ತನೂ ಶಿವಶರಣನೂ ಆದ ದೇವರ ದಾಸಿಮಯ್ಯನು ಮುದನೂರೆಂಬ ಗ್ರಾಮದಲ್ಲಿ ಶ್ರೀರಾಮಲಿಂಗೋದ್ಭವನಾದನು. ದೇವರ ದಾಸಿಮಯ್ಯನ ಕಾಲವು ಬಸವೇಶ್ವರನಗಿಂತ ೧೦೦೧೫೦ ವರ್ಷ ಪೂರ್ವದ್ದು. ಬಸವನ ಕಾಲದ ಶಿವಶರಣರ ವರ್ಗದ ಬೆಳವಣಿಗೆಯ ಆರಂಭಕಾಲವೇ ದಾಸಿಮಯ್ಯನ ಕಾಲವೆಂದು ಊಹಿಸಲವಕಾಶವಿದೆ. ದಾಸಿಮಯ್ಯನು ವೀರಶೈವ ಮತ ಪ್ರಚಾರಕನೂ, ದ್ಯೋತಕನೂ, ದೀಪಕನೂ ಪಾಲಕನೂ ಆಗಿದ್ದನೆಂದು ಇವನ ಐತಿಹ್ಯದಿಂದ ಗೊತ್ತಾಗುತ್ತದೆ. ಮತ್ತು ವೇದಾಗಮ ಶಾಸ್ತ್ರಗಳಲ್ಲಿ ತಜ್ಞನೂ, ಸುಶೀಲನೂ, ಮಹಾನುಭಾವನೂ ಆಗಿದ್ದನು. ದುಗ್ಗಲಾಂಬೆಯನ್ನು ಲಗ್ನವಾದನು. ಆ ಕಾಲದಲ್ಲಿ ಪೊಟ್ಟಲಕೆರೆಯೆಂಬ ಪಟ್ಟಣದಲ್ಲಿ ಜೈನನಾದ ಜಯಸಿಂಹನು ಅರಸನಾಗಿದ್ದನು. ಆತನ ರಾಣಿ ಸುಗ್ಗಲೆಯು ದಾಸಿಮಯ್ಯನನ್ನು ತನ್ನ ಗುರುವನ್ನಾಗಿ ಮಾಡಿಕೊಳ್ಳಬೇಕಾಯಿತು. ಆ ಕಾಲಕ್ಕೆ ಎಲ್ಲ ಜೈನ ಮತಾಗ್ರಣಿಗಳು ತಮ್ಮ ಮತವನ್ನು ತ್ಯಜಿಸಿ ದಾಸಿಮಯ್ಯನಿಂದ ದೀಕ್ಷಾಬದ್ಧರಾಗಿ ವೀರಶೈವ ಮತವನ್ನು ಅಂಗೀಕರಿಸಿದರು. ಶ್ರೀ. ದಾಸಿಮಯ್ಯನು ಬಸವೇಶನಂತೆ ರಾಜಕಾರಭಾರದಲ್ಲಿ ಇಲ್ಲದಿದ್ದರೂ ಕಾಯಕದಿಂದ ಪಾರಮಾರ್ಥಿಕವನ್ನು ಸಾಧಿಸಿದನು. ಇವನು ಜೈನ ಮತವನ್ನು ಖಂಡಿಸಿ ಶಿವಮತವನ್ನು ಬೋಧಿಸಿ ಕರ್ನಾಟಕದಲ್ಲಿ ವೀರಶೈವ ಮತದ ಪುನರುದ್ಧಾರವನ್ನು ಮಾಡಿದನೆಂಬು

ದಕ್ಕೆ ಅವನ ಪುರಾಣವೇ ಸಾಕ್ಷೀಭೂತವಾಗಿದೆ." ಶ್ರೀ. ಮಹಾಂತಣ್ಣನವರು ಮೇಲೆ ಒಕ್ಕಣಿಸಿರುವ ಬರಹವು ಪುರಾಣ ಪ್ರಸಿದ್ಧ ದಾಸಿಮಯ್ಯನನ್ನೇ ಸಮರ್ಥಿಸುತ್ತದೆ. ಇವರೂ ಕೂಡ ವಚನಕಾರ ದಾಸಿಮಯ್ಯನೇ ಮುದೇನೂರ ದಾಸಿಮಯ್ಯನೆಂದು ಭ್ರಮಿಸಿದ್ದು ತಪ್ಪಾಗಿದೆಯೆಂಬುದು ಈಗಾಗಲೇ ವಾಚಕರಿಗೆ ಸ್ಪಷ್ಟವಾಗಿ ತಿಳಿದುಬರುವಂತಿದೆ. ಬಸವ ಪುರಾಣದ ದಾಸಿಮಯ್ಯನೂ ದೇವರದಾಸಿಮಯ್ಯನೂ ಪುರಾಣದ ಕಥಾನಾಯಕನೂ ಒಬ್ಬನೇ ಎಂದೂ ಜಯಸಿಂಹನ ಕಾಲದವನೆಂದೂ ಇದರಿಂದ ಸಿದ್ಧಾಂತವಾಗುತ್ತದೆ.

೮. ಶಿವಾನುಭವ ಪತ್ರಿಕೆಯ ೧೧ನೇ ಸಂಚಿಕೆಯಲ್ಲಿ (ತ್ರೈಮಾಸಿಕ) ಶ್ರೀ ಹಲಸಂಗಿಯ ಚನಮಲ್ಲಪ್ಪನವರು 'ಇತಿಹಾಸದ ಕಣಗಳು" ಎಂಬ ಲೇಖದಲ್ಲಿ ಮೈಸೂರ ಸೀಮೆಯ ಬೇಲೂರ ತಾಲೂಕಿನ ೧೨೨ನೇ ನಂಬರಿನ ಶಿಲಾಶಾಸನದ ಒಂದು ಪದ್ಯವನ್ನು ಉದಾಹರಿಸಿದ್ದಾರೆ. ಇದರಲ್ಲಿ ದೇವರದಾಸಿಮಯ್ಯನ ಭಕ್ತರೆನಿಸಿದ ಜಯಸಿಂಹ--ಸುಗ್ಗಲಾದೇವಿಯರ ಹೆಸರು ಬಂದಿದೆ. ಅದನ್ನು ಇಲ್ಲಿ ಉದಾಹರಿಸುವೆನು.

ಜಯಸಿಂಹ ಕ್ಷಿತಿಪಾಲಕಂಗೆ ಜಗವೆಲ್ಲಂ ಬಣ್ಣಿಸಲ್ ಪೊಣ್ಮಿಭಾ ।
ಪೆಯನಾಸುಗ್ಗಲದೇವಿಕೊಟ್ಟತೆರದಿಂ ಬಲ್ಲಾಳಭೂಪೋತ್ತಮ ॥
ಪ್ರಿಯಪುತ್ರಂಗೆ ಕುಮಾರ ಲಕ್ಷ್ಮರಥಿನೀಗಾ ಥಂಗೆ ಕೊಟ್ಟಳ್‌ಮನಃ
ಪ್ರಿಯೆಯಾಸುಗ್ಗಲದೇವಿ ಭಾಷೆಯನಿಳಾ ಚಕ್ರಂ ಪೊಗಳ್ವನ್ನೆಗಂ ॥

ಇದನ್ನು ನೋಡಿದರೆ ೧೦೫೦ಕ್ಕೆ ಮುಂಚೆ ಇದ್ದ ಸುಗ್ಗಲದೇವಿಯು ೧೨೨೦ ರ ಸುಮಾರಿಗೆ ಅಂದರೆ ೧೭೦ ವರ್ಷಗಳ ನಂತರ ಅನ್ಯರಾಜ್ಯದಲ್ಲಿ ಕೂಡ ಇಷ್ಟೊಂದು ಆದರ್ಶಪತಿಯಾಗಿರಬೇಕಾದರೆ ಅವಳು ತನ ಜೀವಮಾನ ಕಾಲದಲ್ಲಿ ಒಳ್ಳೇ ಪ್ರಖ್ಯಾತಳಿರಲೇಬೇಕು. ಇಂಥವಳು ಶಿವದೀಕ್ಷೆ ಹೊಂದಿರದಿದ್ದರೂ ಶರಣರನ್ನು ಮನ್ನಿಸಿರುವ ಸಂಭವವಾದರೂ ಇದೆ. ಇದರ ಮೇಲಿಂದ ಬಸವಣ್ಣನವರ ಕಾಲದ ಶಿವಶರಣರ ಚಳವಳದ ಆರಂಭವು ಅವರಿಗಿಂತ ನೂರು ವರ್ಷಗಳಿಗೆ ಮೊದಲೇ ಸಣ್ಣಾಗಿ ಆರಂಭವಾಗಿತ್ತೆಂದು ತಿಳಿಯುತ್ತದೆ."

ಈ ವಿವರಣೆಯಿಂದ ಜಯಸಿಂಹ-ಸುಗ್ಗಲೆಯರು ಬಹಳ ಪ್ರಸಿದ್ಧರಾಗಿದ್ದರೆಂದು ಮಾತ್ರ ನಮಗೆ ತಿಳಿದುಬರುತ್ತದೆ. ಬಸವಪುರಾಣಗಳಲ್ಲಿ ಕೂಡ

ಈ ಶಾಸನ ಪ್ರಸಿದ್ಧ ಪತಿಪತ್ನಿಗಳೇ ಬರುವದರಿಂದಲೂ ದಾಸಿಮಯ್ಯನಿಗೂ ಈ ರಾಜದಂಪತಿಗಳಿಗೂ ಇರುವ ಸಂಬಂಧವನ್ನು ನಂಬಬಹುದಾಗಿದೆ. ಜಯಸಿಂಹ ಸುಗ್ಗಲಾದೇವಿಯರ ಪ್ರಸಿದ್ಧಿಗೆ ಕೆಲಮಟ್ಟಿಗೆ ದಾಸಿಮಯ್ಯನ ಸಂಬಂಧವೂ ಕಾರಣವಾಗಿರಬಹುದು. ಎಲ್ಲ ಪುರಾಣಗಳಲ್ಲೂ ಜಯಸಿಂಹ-ಸುಗ್ಗಲೆಯುವರು ದಾಸಿಮಯ್ಯನಿಂದ ಶಿವದೀಕ್ಷೆ ತೆಗೆದುಕೊಂಡರೆಂದು ಹೇಳಿದೆ. ಕಾರಣ ರಾಜದಂಪತಿಗಳು ಶಿವದೀಕ್ಷಾಬದ್ಧರಾಗಿದ್ದರೆಂಬುದರಲ್ಲಿ ನಾವು ಅನುಮಾನಿಸಬೇಕಾಗಿಲ್ಲ.

೯. ಶಿವಾನುಭವ ಪತ್ರಿಕೆಯ ೧೯೩೧ನೇ ಇಸ್ವಿಯ ೯ ಮತ್ತು ೧೦ ಸಂಚಿಕೆಯಲ್ಲಿ ಡಾ. ನಂದೀಮಠ ಎಂ. ಎ. ಪಿ ಎಚ್ ಡಿ ಇವರು ಐತಿಹಾಸಿಕ ಟಿಪ್ಪಣಿಗಳು ಎಂಬ ಲೇಖನದಲ್ಲಿ ಹೀಗೆ ಬರೆದಿದ್ದಾರೆ:—

## ಜೇಡರ ದಾಸಿಮಯ್ಯ.

"ಮೊಗಲಾಯಿ ಇಲಾಖೆಯಲ್ಲಿರುವ ಗೊಬ್ಬೂರಲ್ಲಿ ಕೊರವರ ಭಾವಿಯ ರಥಕ್ಕೆ ಹಾಕಿದ ಕಲ್ಲುಗಳಲ್ಲಿ ಒಂದು ಶಿಲಾಶಾಸನವಿತ್ತು. ಅದು ಚಾಲುಕ್ಯ ಚಕ್ರವರ್ತಿಯಾದ ಜಗದೇಕಮಲ್ಲನ ಕಾಲದಲ್ಲಿ ಹುಟ್ಟಿದುದು. ಈತನಿಗೆ ದ್ವಿತೀಯ ಪೆರ್ಮೆ ಜಗದೇಕಮಲ್ಲ (ಕ್ರಿ ಶ. ೧೧೩೮-೧೧೪೯) ನೆಂದೂ ಹೆಸರು. ಗುಬ್ಬೂರು ಜೇಡರ ಕುಲದೇವರಾದ ಗೊಜ್ಜೇಶ್ವರ ದೇವರಿಗೆ ದತ್ತಿಯನ್ನು ಬಿಟ್ಟಂತೆ ಉಲ್ಲೇಖವಿದೆ. ಶಾಸನ ಹುಟ್ಟಿದ ಕಾಲ ಜಗದೇಕಮಲ್ಲ ದೇವ ವರುಷ ೧೨ನೆಯ ವಿಭವ ಸಂವತ್ಸರ ಶ್ರಾವಣ ಶುದ್ಧ ಸಪ್ತಮಿ ಮಂದವಾರ ಅಂದರೆ ಕ್ರಿ. ಶ. ೧೧೪೮ ಜುಲೈ ತಾ. ೨೪. ದಿ. ಬ. ಸ್ವಾಮಿ ಕಣ್ಣುಪಿಳ್ಳೆಯವರ ಪ್ರಕಾರ ಈ ದಿವಸ ಶನಿವಾರ ಬರುವದು. ಈ ಶಾಸನದಲ್ಲಿ "ಪಿರಿಯ ಗೊಬ್ಬೂರ ಶೇಷ ಮಹಾಜನಂಗಳ ದಿವ್ಯ ಶ್ರೀಪಾದ ಪದ್ಮಾರಾಧಕರು ಶ್ರೀ ರಾಮೇಶ್ವರ ದೇವ್ರಗಂಧವಾರಣರ್ ಜಾಡಕುಲ ತಿಲಕ ಜಾಡರ ದಾಸಿಮಯ್ಯ ಪ್ರಿಯ ಪುತ್ರರುಮಪ್ಪ. ಸಕಳ ಜಾಡ ಗೊತ್ತಳಿಗಳು ಕುಲದೇವ ದೇವನಪ್ಪ ಗೋಜೇಶ್ವರ ದೇವರ ಪೂಜೆ ಇತ್ಯಾದಿ" ಎಂದಿದೆ. ಕ್ರಿ. ಶ. ೧೧೪೮ ರಲ್ಲಿ ಶಿವಶರಣರಾದ ಜೇಡರ ದಾಸಿಮಯ್ಯಗಳ ಉಲ್ಲೇಖವು ಈ ಶಾಸನದಲ್ಲಿರುವದರಿಂದ ದಾಸಿಮಾರ್ಯರು ಕ್ರಿ. ಶ. ೧೧೪೮ ಕ್ಕು ಮೊದಲಿನವರೆಂಬ ಬಗ್ಗೆ ಆವ ಸಂಶಯವೂ ಇಲ್ಲ. ನೇರಲಾಗಿ ಶಿವಶರಣರಾದ ದಾಸಿಮಾರ್ಯರ ಮುದ್ರಿಕೆಯು "ರಾಮನಾಥ"

ನೆಂದಿರುವದರಿಂದಲೂ, ಈ ಶಾಸನದಲ್ಲಿ ರಾಮೇಶ್ವರ ದೇವರ ಗಂಧ ವಾರಣಾಂಬ ಈ ಜೇಡರ ದಾಸಿಮಾರ್ಯರನ್ನು ಸಂಬೋಧಿಸಿರುವದರಿಂದಲೂ ಬಸವ ಪುರಾಣ ಮೊದಲಾದ ವೀರಶೈವ ವಾಙ್ಮಯದಲ್ಲಿ ಪ್ರಸಿದ್ಧರಾದ ಶಿವ ಶರಣ ದಾಸಿಮಾರ್ಯರೇ ಇವರೆಂಬ ಬಗ್ಗೆ ಅವ ಸಂಶಯವೂ ಇಲ್ಲ. ಕಲ್ಯಾಣದ ಬಸವಣ್ಣನವರು ಪ್ರಸಿದ್ಧಿಗೆ ಬರುವದಕ್ಕೆ ಏನಿಲ್ಲೆಂದರೂ ೮೧೦ ವರ್ಷ ಮೊದಲು ಈ ಶಾಸನ ಹುಟ್ಟಿದೆ. ಇದು ಲಕ್ಷ್ಯದಲ್ಲಿಡತಕ್ಕ ಸಂಗತಿಯಾಗಿದೆ."

"ಇದೇ ದಾಸಿಮಾರ್ಯರ ಬಗ್ಗೆ ಇನ್ನೊಂದು ಶಿಲಾಶಾಸನದಲ್ಲಿ ಉಲ್ಲೇಖವಿದೆ. ಮೊಗಲಾಯಿ ಇಲಾಖಾ ಚಿಕ್ಕ ಮುದೇನೂರು ಗೋಪಾಲ ಸ್ವಾಮಿ ದೇವಾಲಯದ ಮಧ್ಯರಂಗದ ಮೂರನೇ ಕಂಬದ ಮೇಲೆ ಈ ಶಾಸನವಿತ್ತು. ಅದು ಕಳಚೂರಿ ಚಕ್ರವರ್ತಿ ಪ್ರಭು ವನಮಲ್ಲನೆಂಬ ಬಿರುದುಳ್ಳ ಬಿಜ್ಜಳನಾಳಿಕೆಯಲ್ಲಿ ಹುಟ್ಟಿದುದು. ಲಕ್ಷ್ಮಣೇಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತೆ ಉಲ್ಲೇಖವಿದೆ. ಶಾಸನ ಹುಟ್ಟಿದ ದಿವಸ ಕ್ರಿ. ಶ. ೧೧೬೭ ಜುಲಾಯಿ ೧೦ ನೇ ತಾರೀಖು ಸೋಮವಾರ. ಈ ಶಾಸನದಲ್ಲಿ ಮುದೇನೂರನ್ನು ದಕ್ಷಿಣ ವಾರಾಣಶಿಯೆಂದೂ, ದಾಸಿಮಯ್ಯಗಳನ್ನು ಮುದೇನೂರು ದಾಸಿಮಯ್ಯಗಳೆಂದೂ ಕರೆದಿರುವರು. ಶಿಲಾಶಾಸನವು ಅಷ್ಟು ಸ್ಪಷ್ಟವಿಲ್ಲ. ಮುದೇನೂರು ಮಹಾಜನಂಗಳ ವರ್ಣನೆಯಲ್ಲಿ "ಪವಿತ್ರ ಗುಣಾನುರಾಗರಪ್ಪ ಶ್ರೀಮತ್ಸರ್ವೇ ನಮಸ್ಯದ ಗ್ರಹಾರಂ ದಕ್ಷಿಣ ವಾರಾಣಶಿ ಮುದೇನೂರ ದಾಸಯ್ಯಗಳ.. ಪ್ರಮುಖ ಅನೇಕ ಮಹಾ ಜನಂಗಳು ಎಂದಿದೆ. ಇದರಲ್ಲಿಯ ಮುದೇನೂರ ದಾಸಯ್ಯಗಳೆಂಬ ಶಬ್ದಗಳು. ನಮ್ಮ ಜೇಡರ ದಾಸಿಮಾರ್ಯರಿಗೆ ಸಂಬಂಧಿಸಿರಬೇಕೆಂದು ನಮ್ಮ ಊಹೆ. ಅದು ನಿಜವಿದ್ದ ಪಕ್ಷದಲ್ಲಿ ದಾಸಿಮಯ್ಯರು ಬಸವಣ್ಣನಿಗಿಂತ ಮೊದಲಿನವರಾಗಿದ್ದರೂ ಬಸವಣ್ಣನ ಕಾಲದಲ್ಲಿ ಅವರ ಪ್ರತಿಭೆಯು ಉಜ್ವಲವಾಗಿತ್ತೆಂದು ಕಂಡು ಬರುತ್ತದೆ. ಅಂತೇ ಬಸವಣ್ಣನವರ ವಚನಗಳಲ್ಲನೇಕ ಕಡೆಗೆ ದಾಸಯ್ಯಗಳ ಉಲ್ಲೇಖವಿದೆ."

ಇದು ವರೆಗೆ ನಾನು ಉದಾಹರಿಸಿದ ಪೌರಾಣಿಕ ಹಾಗೂ ಐತಿಹಾಸಿಕ ಆಧಾರಗಳಿಂದ ದಾಸಿಮಯ್ಯನು ಬಸವಣ್ಣನವರಿಗಿಂತ ಪ್ರಾಚೀನನೆಂದೂ ಜಯಸಿಂಹ ಸುಗ್ಗಲಾದೇವಿಯವರ ಗುರುವೆಂದೂ ಸಿದ್ಧವಾಗುವಂತಿದೆ.

ಸು. ೧೧೫೫ ರಲ್ಲಿದ್ದ ಬ್ರಹ್ಮಶಿವನು ತನ್ನ ಸಮಯ ಪರೀಕ್ಷೆಯಲ್ಲಿ ಜೇಡರ ದಾಸಿಯ ಹೆಸರನ್ನು ಎತ್ತಿದ್ದಾನೆಂದು ಕವಿ ಚರಿತ್ರೆ ೧ನೇ ಭಾಗದ ೨೦೧ ನೇ ಪುಟದಲ್ಲಿ ಶ್ರೀ. ನರಸಿಂಹಾಚಾರ್ಯರು ಹೇಳಿದ್ದಾರೆ. ಈ ಬ್ರಹ್ಮಶಿವನು ಪೊಟ್ಟಣಗೆರೆಯವನೆಂದು ಅವರೇ ನಿಶ್ಚಯಿಸಿದ್ದಾರೆ ಜಯಸಿಂಹನ ರಾಜಧಾನಿ ಪೊಟ್ಟಳಗೆರೆಯೇ ಈ ಕವಿಯ ಜನ್ಮಸ್ಥಳವಾಗಿದೆ. ಈ ಬ್ರಹ್ಮಶಿವನು ಮೊದಲು ವೀರಶೈವನಾಗಿದ್ದು ಅನಂತರ ಜೈನನಾದನೆಂದು ಕವಿಚರಿತ್ರೆಯಲ್ಲಿ ಹೇಳಿದೆ.

ಬ್ರಹ್ಮಶಿವನ ಗ್ರಂಥದಲ್ಲಿರುವ

ಕಂದ॥ ಪಿರಿದಕ್ತಿಯಿಂದೆ ಮಾಹೇಶ್ವರ ಧರ್ಮದೊಳೊಳ್ಪು ಗಾಣದೆ ಮಗುಳ್ದೀ॥

ಪರಮಜಿನ ಧರ್ಮದೊಳಪೊ। ಕ್ಕುರಾಗಿ ಪೊಡೆ ಸುಕವಿ ಬ್ರಹ್ಮಶಿವನೇ ಬಲ್ಲಂ ॥

ಎಂಬೀ ಪದ್ಯದಲ್ಲಿ ಈ ಕವಿಯು ಮೊದಲು ಮಾಹೇಶ್ವರ ಧರ್ಮ ಅಂದರೆ ವೀರಶೈವ ಧರ್ಮವನ್ನು ಸ್ವೀಕರಿಸಿ ಅನಂತರ ಮತ್ತೆ ಜೈನನಾದನೆಂದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಪೊಟ್ಟಲಗೆರೆಯಲ್ಲಿ ಜೇಡರ ದಾಸಿಮಯ್ಯನು ಮಾಡಿದ ಧಾರ್ಮಿಕ ಕ್ರಾಂತಿಯೇ ಬ್ರಹ್ಮಶಿವನನ್ನು ವೀರಶೈವನನ್ನಾಗಿ ಮಾಡಿರಬಹುದೆಂದು ನಾವು ಊಹಿಸುತ್ತೇವೆ.

ಬಸವೇಶನ ವಚನಗಳಲ್ಲಿ ಮೇಲಿಂದ ಮೇಲೆ ಅಂದರೆ ಹದಿನಾರು ಸಾರೆ ಹೊಗಳಿಸಿಕೊಂಡಿರುವವನು ಸುಗ್ಗಲಾದೇವಿಯ ಗುರುವೆಂದು ನಮ್ಮ ಅಭಿಪ್ರಾಯವಾಗಿದೆ. ಷಟ್ಸ್ಥಲ ವಚನಕ್ಕೆ ಟೀಕೆಯನ್ನು ಬರೆದ (ಬಸವೇಶ್ವರನ) ಪ್ರಾಚೀನ ಪಂಡಿತರೂ ಜಯಸಿಂಹನ ಕಾಲಲ್ಲಿದ್ದ ಜೇಡರ ದಾಸಿಯೆಂದೇ ಹೇಳಿದ್ದಾರೆ. (ಶಿವಾನುಭವ ೯ ನೇ ಸಂಪುಟ, ಸಂಚಿಕೆ ೧ ರಲ್ಲಿ ಟೀಕೆಯ ೨೬ ನೇ ಪುಟವನ್ನು ನೋಡಿರಿ.)

ಇದು ವರೆಗಿನ ಚರ್ಚೆಯಿಂದ ನಮಗೆ ತೀರ್ಮಾನವಾದ ವಿಚಾರ ವೇನೆಂದರೆ:—

೧. ವಚನಕಾರ ದಾಸಿಮಯ್ಯನು ಬಸವೇಶ್ವರನ ಸಮಕಾಲೀನನು. ಚನ್ನಯ್ಯ ಕಕ್ಕಯ್ಯಗಳಂತೆ ಈ ದಾಸಿಮಯ್ಯನೂ ಮಹಿಮಾಶಾಲಿಯಾಗಿದ್ದನು.

೨. ಜೇಡರ ದಾಸಿಮಯ್ಯನನ್ನು ದೇವರ ದಾಸಿಮಯ್ಯ, ದಾಸಿದೇವ, ಶಿವದಾಸಿ, ದಾಸಿಮಯ್ಯ ಎಂಬ ಹೆಸರುಗಳಿಂದ ಕವಿಗಳು ಕರೆದಿದ್ದಾರೆ. ಇವನು ಜಯಸಿಂಹ ಸುಗ್ಗಲೆಯರ ಗುರುವೂ ವೀರಶೈವ ಮತ ಪ್ರಚಾರಕನೂ, ಶಿವನಿಗೆ ಪೀತಾಂಬರವನ್ನು ಕೊಟ್ಟು ತವನಿಧಿಯನ್ನು ಪಡೆದವನೂ ದುಗ್ಗಳೆಯ ಪತಿಯೂ ಮುದನೂರು (ಮುದ್ರಾಪುರ) ರಾಮನಾಥನ ಭಕ್ತನೂ ಆದ ಮಹಾ ಶಿವಶರಣ. ವಚನಕಾರನಿಗಿಂತಲೂ ಭಿನ್ನ.

೩. ಮಹಾಮಹೋಪಾಧ್ಯಾಯ, ರಾವಬಹಾದ್ದೂರ ಆರ್. ನರಸಿಂಹಾಚಾರ್ಯರು, ರಾವಸಾಹೇಬ ಪಿ. ಜಿ. ಹಳಕಟ್ಟಿ ವಕೀಲರು, ಶಿವಾನುಭವ ಲೇಖಕರಾದ ಮಹಾಂತಣ್ಣನವರ ಅಭಿಪ್ರಾಯಗಳಂತೆ ವಚನಕಾರನೂ ಪುರಾಣ ಪುರುಷನೂ ಒಬ್ಬನೇ ಎಂಬುದು ತಪ್ಪು.

೪. ಕರ್ಲಮಂಗಲಂ ಶ್ರೀಕಂಠಯ್ಯನವರು ವೀರಶೈವ ಮತಾಚಾರ್ಯರು ಎಂಬ ಗ್ರಂಥದ ಪರಿಶಿಷ್ಟದಲ್ಲಿ ಹೇಳಿರುವ ಜಯಸಿಂಹನ ಕಾಲದ ದಾಸಿಮಯ್ಯನು ಕಾಳಾಮುಖನೋ ಲಕುಲೀಶನೋ ಎಂಬುದು ತಪ್ಪು. ಆ ಪುರಾಣ ಪುರುಷ ದೇವರ ದಾಸಿಯು ವೀರಶೈವನೂ, ವೀರಶೈವ ಮತ ಪ್ರಚಾರಕನೂ ಆಗಿದ್ದಾನೆ. ಇವರ ಅಭಿಪ್ರಾಯದಂತೆ ವಚನಕಾರನೂ ಪುರಾಣ ಕಥಿಕನೂ ಭಿನ್ನರೆಂಬುದು ಸತ್ಯ

೫. ಮ. ರಾ. ಎಂ. ಆರ್. ಶ್ರೀನಿವಾಸಮೂರ್ತಿಗಳು ಭಕ್ತಿಭಾಂಡಾರಿ ಬಸವಣ್ಣನವರು ಎಂಬ ಗ್ರಂಥದ ಪರಿಶಿಷ್ಟದಲ್ಲಿ ವಚನಕಾರ ದಾಸಿಯೇ ಪುರಾಣ ಪುರುಷನೆಂದು ಊಹಿಸಿರುವದು ತಪ್ಪು. ಪುರಾಣ ಕಥಿತನು ವಚನಕಾರನಿಗಿಂತ ಭಿನ್ನನೂ ಪ್ರಾಚೀನನೂ ಎಂಬುದು ಈಗ ಸ್ಪಷ್ಟವಾಗಿದೆ

೬. ಹಾಸನ ಜಿಲ್ಲೆ ಅರಸೀಕೆರೆ ಶಾಸನದಲ್ಲಿ ಬಂದಿರುವ ಕಾಟಗೌಡನ ತಂದೆ ಜೇಡರ ದಾಸಿಗೂ ನಮ್ಮ ಚರ್ಚೆಗೆ ಸಂಬಂಧಪಟ್ಟ ಜೇಡರ ದಾಸಿಗೂ ನಾಮಸಾದೃಶ್ಯವೇ ಹೊರತು ಮತ್ತೇನೂ ಸಂಬಂಧವಿಲ್ಲ.

೭. ಫ್ಲೀಟ್ ಸಾಹೇಬರು ಜೇಡರ ದಾಸಿಯು ಜಯಸಿಂಹನ ಕಾಲದವನೆಂದು ಒಪ್ಪಿಕೊಂಡಿದ್ದಾರೆ. ಮತ್ತು ಜಯಸಿಂಹನಿಗೇ ದೇಸಿಂಗನೆಂಬ ಹೆಸರಿತ್ತೆಂದೂ ಒಪ್ಪಿಕೊಂಡಿದ್ದಾರೆ. ಒಂದು ವೇಳೆ ಫ್ಲೀಟ ಸಾಹೇಬರು ದೇವರ ದಾಸಿಮಯ್ಯನನ್ನು ಐತಿಹಾಸಿಕ ಪುರುಷನೆಂದೂ, ಬಸವ ಪುರಾ

ಣದ ಕಥೆಯು ನಿಜವೆಂದೂ ದೇವರ ದಾಸಿಯು ವೀರಶೈವನೆಂದೂ ಹೇಳದೆ ಇದ್ದ ಮಾತ್ರಕ್ಕೆ ದಾಸಿಮಯ್ಯನು ಅವೀರಶೈವನೂ ಕಾಲ್ಪನಿಕನೂ ಆಗುವದಿಲ್ಲ. ಇದು ವರೆಗೆ ನಮಗೆ ಪ್ರಾಪ್ತವಾಗಿರುವ ಆಧಾರಗಳ ಮೇಲಿಂದ ಯಾರಾದರೂ ಸಿದ್ಧಮಾಡಬಹುದಾಗಿದೆ.

೮. ಈ ಕಾರಣಗಳಿಂದ ಶ್ರೀ. ಎಸ್. ಎಸ್. ಮಾಳವಾಡರು ತಿಳಿದಿರುವಂತೆ ಜಯಸಿಂಹನ ಕಾಲದ ದಾಸಿಮಾರ್ಯನು ಕಾಲ್ಪನಿಕನೂ ಅವೀರಶೈವನೂ ಆಗಲಾರನು.

## ಶಂಕರದಾಸಿಮಯ್ಯ.

ಜಯಸಿಂಹನ ಕಾಲದಲ್ಲಿ ಒಬ್ಬ ದಾಸಿಮಯ್ಯನಿದ್ದನೆಂದು ಮೇಲೆ ಶಂಕರದಾಸಿಮಯ್ಯನ ಅಸ್ತಿತ್ವವೂ ತಾನಾಗಿಯೇ ಸಿದ್ಧವಾಗುತ್ತವೆ. ಪಾಲ್ಕುರಿಕೆ ಸೋಮಕವಿ, ಭೀಮಕವಿ, ಷಡಕ್ಷರಕವಿ, ಕಂಚಿ ಶಂಕರಾರಾಧ್ಯಕವಿ ವ್ಯಾಸರು ತಮ್ಮ ತಮ್ಮ ಬಸವಪುರಾಣಗಳಲ್ಲಿ ಇವನ ಕಥೆಯನ್ನು ಹೇಳಿಯೇ ಇದ್ದಾರೆ. ಈ ಎಲ್ಲ ಕವಿಗಳೂ ಶಂಕರದಾಸಿಮಯ್ಯನು ಬಸವನಿಗಿಂತ ಪ್ರಾಚೀನನೆಂದೂ, ದೇವರದಾಸಿಯ ಗರ್ವಭಂಗ ಮಾಡಿದನೆಂದೂ ಜಯಸಿಂಹನ ಆಸ್ಥಾನಕ್ಕೆ ಹೋಗಿ ಮಹಿಮೆಯನ್ನು ಮೆರೆದನೆಂದೂ ಏಕ ಮುಖದಿಂದಲೇ ಹೇಳಿದ್ದಾರೆ. ಚತುರಕವಿ ಸಾರ್ವಭೌಮನಾದ ಹರಿಹರದೇವನೂ, ತನ್ನ "ಶಂಕರದಾಸಿಮಯ್ಯರಗಳೆ" ಎಂಬ ಗ್ರಂಥದಲ್ಲಿ ಈತನನ್ನು ಜಯಸಿಂಹ ದಾಸಿಮಯ್ಯಗಳ ಸಮಕಾಲೀನನೆಂದೂ ಪರಮವೀರಶೈವನೆಂದೂ ಹೇಳಿದ್ದಾನೆ. ಶಂಕರದಾಸಿಮಯ್ಯ ಚರಿತ್ರೆಯನ್ನೂ ಬರೆದ ಪಂಡಿತ ಮಲ್ಲಿಕಾರ್ಜುನಕವಿಯೂ ಹರಿಹರನಂತೆಯೇ ಇವನ ಕಥೆಯನ್ನು ಚಿತ್ರಿಸಿದ್ದಾರೆ.

ರಾವಸಾಹೇಬ ಹಳಕಟ್ಟಿ ವಕೀಲರು ಪ್ರಕಟಿಸಿರುವ ವಚನಶಾಸ್ತ್ರಸಾರದಲ್ಲಿ ಶಂಕರದಾಸಿಮ್ಯನ ಕೆಲವು ವಚನಗಳು ಲಭಿಸುತ್ತವೆ. ಇವನ ವಚನಗಳಲ್ಲಿ 'ನಿಜಗುರು ಶಂಕರದೇವ' ಎಂಬ ಅಂಕಿತವಿದೆ.

ಶಿವಾನುಭವ ಗ್ರಂಥಮಾಲೆಯಲ್ಲಿ ಅಚ್ಚಾಗಿರುವ ಶೂನ್ಯಸಂಪಾದನೆಯ ಗ್ರಂಥದ ೩೬೫ ನೇ ಪುಟವಲ್ಲಿ "ಶಂಕರದಾಸಿಮಯ್ಯಗಳು ಪ್ರಭುದೇವರನ್ನು ಸ್ತುತಿಸಿದ ವಚನ" ಎಂಬ ಕೆಲವು ವಚನಗಳು ಉದಾಹೃತವಾಗಿವೆ. ಇವುಗಳು ಪುರಾಣಕಥಿತನಾದ ಶಂಕರದಾಸಿಯ ವಚನಗಳಂತೆಯೇ

ಇವೆ. ಇವುಗಳ ಆಧಾರದಿಂದ ಶ್ರೀ. ಎಂ. ಆರ್. ಶ್ರೀನಿವಾಸಮೂರ್ತಿಗಳು ತಮ್ಮ ಭಕ್ತಿಭಂಡಾರಿಯ ಪರಿಶಿಷ್ಟದಲ್ಲಿ ಈ ಶಂಕರದಾಸಿಯೂ ಬಸವೇಶ್ವರನ ಸಮಕಾಲೀನನೆಂದು ಹೇಳಿರುತ್ತಾರೆ. ನಮ್ಮ ಅಭಿಪ್ರಾಯದಲ್ಲಿ ಶಂಕರದಾಸಿಯು ಬಸವನ ಸಮಕಾಲೀನನಲ್ಲ. "ಪ್ರಬಲೇನ ದುರ್ಬಲಸ್ಯಬಾಧಾ" ಎಂಬ ನ್ಯಾಯದಂತೆ ಶಂಕರದಾಸಿಯು ಜಯಸಿಂಹನ ಕಾಲದವನೇ ಆಗಿದ್ದಾನೆ. ಬಸವೇಶ್ವರನ ವಚನಗಳಲ್ಲೆಲ್ಲಿಯೂ ಶಂಕರದಾಸಿಯ ಹೆಸರು ಕಂಡುಬರುವುದಿಲ್ಲ. ಶಂಕರದಾಸಿರಗಳೆ, ಶಂಕರದಾಸಿ ಚರಿತ್ರೆಗಳಲ್ಲಿ ಹರಿಹರ ಮಲ್ಲಿಕಾರ್ಜುನ ಕವಿಗಳು ಎಲ್ಲಿಯೂ ಬಸವಾದಿಗಳ ಹೆಸರನ್ನಾಗಲಿ ಅವರಿಗೂ ಇವನಿಗೂ ಸಂಬಂಧವನ್ನಾಗಲಿ ಹೇಳಿಲ್ಲ. ಶೂನ್ಯಸಂಪಾದನೆಯು ಅರ್ವಾಚೀನ ಗ್ರಂಥ. ಅಲ್ಲದೆ ಅದು ಕೇವಲ ತಾತ್ವಿಕ ಗ್ರಂಥವೇ ಹೊರತು ಐತಿಹಾಸಿಕ ಗ್ರಂಥವಲ್ಲ. ಶೂನ್ಯಸಂಪಾದನೆಯ ಕರ್ತೃವಾದ ಗೂಳೂರು ಸಿದ್ಧವೀರಣಾಚಾರ್ಯನು ಅನುಭವ ಮಂಟಪದಲ್ಲಿ ಇವನ ಹೆಸರನ್ನು ಭರ್ತಿ ಮಾಡಲಿಕ್ಕಾಗಿ ಶಂಕರದಾಸಿಯ ವಚನಗಳೆಂದು ತಾನೇ ಸೇರಿಸಿ ಹಾಕಿರಬೇಕೆಂದು ನಮ್ಮ ಅಭಿಪ್ರಾಯ. ಇಲ್ಲವಾದರೆ ಇವನಿಗಿಂತಲೂ ಪ್ರಾಚೀನರಾದ ಹರಿಹರಾದಿಗಳ ಗ್ರಂಥಗಳನ್ನೆಲ್ಲ ಸುಳ್ಳೆನ್ನಬೇಕಾಗುತ್ತದೆ. ದೇವರ ದಾಸಿಮಯ್ಯನಂತೆ ಶಂಕರದಾಸಿಯು ಶಾಸನ ಪುರುಷನಲ್ಲವಾದ್ದರಿಂದ ನಾವು ಉಪಲಬ್ಧವಾದ ಕಾವ್ಯಗಳ ಮೇಲಿಂದಲೇ ಇವನ ವಿಚಾರವನ್ನು ಸಿದ್ಧಮಾಡಬೇಕಾಗಿದೆ. ಅಲ್ಲದೆ ಶಂಕರದಾಸಿಯೇ ಬರೆದ ಸಂಪೂರ್ಣ ವಚನ ಗ್ರಂಥ ಸಿಕ್ಕಿದ್ದರೂ ನಮಗೆ ಉಪಕಾರವಾದೀತು. ಅದು ವರೆಗೂ ಶೂನ್ಯ ಸಂಪಾದನೆಯಲ್ಲಿ ಬಂದಿರುವ ಇವನ ಹೆಸರಿನ ವಚನಗಳನ್ನು ಪ್ರಕ್ಷಿಪ್ತವೆಂದೇ ನಂಬಬೇಕಾಗಿದೆ. ಈ ದುರ್ಲಭ ಪ್ರಮಾಣದಿಂದಲೇ ಶಂಕರದಾಸಿಯು ಜಯಸಿಂಹನ ಕಾಲದವನಲ್ಲವೆಂದೂ ಬಸವನ ಕಾಲದವನೆಂದೂ ಭಕ್ತಿಭಂಡಾರಿಯಲ್ಲಿ ಶ್ರೀಮಾನ ಶ್ರೀನಿವಾಸ ಮೂರ್ತಿಗಳು ನಿಶ್ಚಯಿಸಿರುವದು ಸಾಧುವಲ್ಲ.

ಸಾರಾಂಶಃ— ಜೇಡರದಾಸಿಮಯ್ಯನಂತೆಯೇ ಶಂಕರದಾಸಿಮಯ್ಯನೂ ಜಯಸಿಂಹನ ಕಾಲದಲ್ಲಿ ಪ್ರಖ್ಯಾತಿ ಹೊಂದಿದ ವೀರಶೈವವಿಭೂತಿಯಾಗಿದ್ದಾನೆ. ಬಸವನ ಕಾಲದಲ್ಲಿ ಶಂಕರದಾಸಿಮಯ್ಯನೆಂಬ ಶರಣನಿದ್ದ ಬಗ್ಗೆ ವಚನ ಶಾಸ್ತ್ರಗಳಲ್ಲಿಯಾಗಲಿ ಬಸವನಪುರಾಣಗಳಲ್ಲಾಗಲಿ (ಶೂನ್ಯ ಸಂಪಾದನೆಯ ಪ್ರಕ್ಷಿಪ್ತವಚನಗಳನ್ನುಳಿದು) ಪ್ರಮಾಣವಿಲ್ಲ. ಆದಕಾರಣ

ಶಂಕರದಾಸಿಮಯ್ಯನು ಬಸವನ ಕಾಲದಲ್ಲಿಲ್ಲನೆಂದೂ ಜಯಸಿಂಹನ ಕಾಲದವನೆಂದೂ ದೇವದಾಸಿಮಯ್ಯನಂತೆ ಇವನಾದರೂ ೧೧ನೇ ಶತಮಾನದಲ್ಲಿಯೇ ವೀರಶೈವ ಮತವನ್ನು ಕರ್ನಾಟಕದಲ್ಲಿ ಪ್ರಚಾರ ಮಾಡುತ್ತಿದ್ದನೆಂದೂ ಇವನು ಸೂಜಿಕಾಯಕದವನೆಂದೂ ಸಿದ್ಧಾಂತವಾಗುತ್ತದೆ.

ಶ್ರೀಯುತ ಎಸ್. ಎಸ್. ಮಾಳವಾಡರು ಬಸವೇಶನ ಪೂರ್ವದಲ್ಲಿ ವೀರಶೈವ ಮತದ ಚಳವಳಿಯಿಲ್ಲವಾದ್ದರಿಂದ ಬಸವ ಕಾಲದಲ್ಲಿಯೇ ದಾಸಿಮಯ್ಯನಾಗಿರಬಹುದೆಂದು ಅಭಿಪ್ರಾಯ ಪಡುತ್ತಾರೆ. ಶ್ರೀ ಬಸವೇಶ್ವರನೇ ವೀರಶೈವ ಮತವನ್ನು ಸ್ಥಾಪಿಸಿದನೆಂದು ಹೇಳುವವರು ಈಗ ಬಹುಜನರಾಗಿದ್ದಾರೆ. ದೊಡ್ಡದೊಡ್ಡ ಪಂಡಿತರೂ ಈ ವಾದವನ್ನೇ ಮಂಡಿಸಹತ್ತಿದ್ದಾರೆ. ಹೀಗೆ ಹೇಳುವವರಿಗೆ ವೀರಶೈವ ಮತಚರಿತ್ರೆಯಲ್ಲಿ ಇನ್ನೂ ಅನಾನುಭವವಿದೆಯೆಂಬುವದಕ್ಕೆ ಅನುಮಾನವಿಲ್ಲ.

ಬಸವೇಶ್ವರನಕಿಂತ ಹಿಂದಿನವರಾದ ಜೇಡರದಾಸಿಮಯ್ಯ ಶಂಕರದಾಸಿಮಯ್ಯಗಳು ಕರ್ನಾಟಕದಲ್ಲಿ ವೀರಶೈವ ಮತಪ್ರಚಾರ ಮಾಡಿಸಿದ್ದಾರೆಂಬುದಕ್ಕೆ ಈ ಲೇಖನವೇ ಸಾಕ್ಷಿಯಾಗಿದೆ. ರೇವಣಸಿದ್ಧ ಸಕಲೇಶಮಾದರಸ, ಏಕಾಂತದ ರಾಮಯ್ಯಗಳು ಬಸವೇಶನು ಮಂತ್ರಿಯಾಗುವದಕ್ಕೆ ಮೊದಲೇ ಮತಪ್ರಚಾರ ಕಾರ್ಯವನ್ನು ಕೈಕೊಂಡಿದ್ದರೆಂಬುದಕ್ಕೆ ನಿದರ್ಶನಗಳಿವೆ. ಸಿದ್ಧಾಂತ ಶಿಖಾಮಣಿಕಾರ ಶಿವಯೋಗಿಯು ಬಸವೇಶನಗಿಂತ ಹಿಂದಿನವನೆಂಬುದನ್ನು ಆ ಗ್ರಂಥದ ಮೇಲೆಯೇ ಸಿದ್ಧಮಾಡಬಹುದಾಗಿದೆ. ಉತ್ತರ ಮೀಮಾಂಸೆಗೆ ವೀರಶೈವ ಭಾಷ್ಯವನ್ನು ಬರೆದ ಶ್ರೀಪತಿ ಪಂಡಿತನು ಬಸವನ ಸಮಕಾಲೀನ ಅಥವಾ ಹಿಂದಿನ ಮಹಾವಿದ್ವಾಂಸನಾಗಿದ್ದಾನೆ. ಶ್ರೀ. ಶಂಕರಾಚಾರ್ಯರ ಕಾಲದಲ್ಲಿ ಗೋಕರ್ಣ ಕ್ಷೇತ್ರದಲ್ಲಿ ನೀಲಕಂಠ ಶಿವಾಚಾರ್ಯನಿದ್ದನೆಂದೂ ಶಂಕರಾಚಾರ್ಯರ ಕೂಡ ವಾದ ಮಾಡಿದನೆಂದೂ ಆನಂದಗಿರಿಯ ಶಂಕರವಿಜಯದಲ್ಲಿದೆ. ಆಂಧ್ರ ದೇಶದ ಅನ್ನಮಾಮಾತ್ಯ ನನ್ನ ಚೋಡ ಕವಿಗಳು ಬಸವೇಶನಿಗಿಂತ ಪೂರ್ವದ ವೀರಶೈವ ಕವಿಗಳಾಗಿದ್ದಾರೆ. ತಮಿಳು ನಾಡಿನಲ್ಲಿ ಹಲವು ಕವಿಗಳು ಬಸವೇಶನಿಗಿಂತಲೂ ಪ್ರಾಚೀನರಿದ್ದವರು ಸಿಗುತ್ತಾರೆಂದು ವಿದ್ವಾಂಸರ ಮತವಿದೆ. ಇನ್ನೂ ಹಲವು ಐತಿಹಾಸಿಕ ಆಧಾರಗಳಿಂದ ವೀರಶೈವ ಮತವು ಬಸವನಿಗಿಂತಲೂ ಪೂರ್ವದಲ್ಲಿತ್ತೆಂದು ಹೇಳಬಹುದಾಗಿದೆ. ಬಸವಪುರಾಣಗಳನ್ನಾಗಲಿ ಬಸವಣ್ಣನವರ ವಚನ

ಗಳನ್ನಾಗಲಿ ಬಸವೇಶನ ಸಂಬಂಧ ಶಾಶನದಲ್ಲಾಗಲಿ ಬಸವೇಶನು (ವೀರಶೈವ ಮತೋದ್ಧಾರಕನೇ ಹೊರತು) ಮತಸ್ಥಾಪಕನೆಂದು ಎಲ್ಲಿಯೂ ಹೇಳಿಲ್ಲ ಇಷ್ಟಾದರೂ ನಾವು ಸಾಧಿಸುತ್ತೇವೆಂದು ಹಟ ಮಾಡಿದರೆ ನಾವು ಅವರನ್ನು ಇತಿಹಾಸದ ಕೊಲೆ ಮಾಡುವವರೆಂದು ಹೇಳಬೇಕಾಗುತದೆ ಶ್ರೀ ಮಾಳವಾಡರು ಇದನ್ನೆಲ್ಲ ಆಲೋಚಿಸಬೇಕೆಂದು ವಿನಯ ಪೂರ್ವಕವಾಗಿ ಸೂಚಿಸುತ್ತೇನೆ.

ಈ ವಿಸ್ತಾರವಾದ ಲೇಖನದಲ್ಲಿ ನಾನು ಶ್ರೀ. ಮಾಳವಾಡರ ಅಭಿಪ್ರಾಯಗಳನ್ನೆಲ್ಲ ತಿಳಿದ ಮಟ್ಟಿಗೂ ಚರ್ಚಿಸಿ ವಚನಕಾರನು ಬಸವನ ಸಮಕಾಲೀನ ದಾಸಿಮಯ್ಯನೆಂದೂ, ಜಯಸಿಂಹ-ಸುಗ್ಗಲಾದೇವಿಯರ ಕಾಲದಲ್ಲಿ ಜೇಡರದಾಸಿಮಯ್ಯ, ಶಂಕರದಾಸಿಮಯ್ಯಗಳಿದ್ದರೆಂದೂ ಅವರು ಪರಮ ವೀರಶೈವರೂ, ಲಿಂಗವಂತ ಮತಪ್ರಚಾರಕರೂ ಆಗಿದ್ದಾರೆಂದೂ ಸಿದ್ಧ ಮಾಡಿದ್ದೇನೆ. ವೀರಶೈವ ವಿದ್ವಾಂಸರು ಈ ಬಗ್ಗೆ ಇನ್ನೂ ಹೆಚ್ಚಿಗೆ ಶೋಧ ನಡೆಸಿದರೆ ಈ ಮತಚರಿತ್ರೆಯ ಮೇಲೆ ಬೆಳಕು ಬೀಳುವ ಸಂಭವವುಂಟು.

ಸಂಸ್ಕೃತದಲ್ಲಿರುವ ಜೇಡರದಾಸಿಮಯ್ಯನ ಪುರಾಣವನ್ನೂ ಕನ್ನಡದಲ್ಲಿರುವ ದಾಸಿಮಯ್ಯನ ಎರಡು ಪುರಾಣಗಳನ್ನೂ ಹರಿಹರ ಕವಿಯು ಬರೆದಿರಬಹುದಾದ "ದೇವರದಾಸಿಮಯ್ಯನ ರಗಳೆ" ಯನ್ನೂ ಶಂಕರದಾಸಿಮಯ್ಯನ ಚರಿತ್ರೆ, ಶಂಕರದಾಸಿಮಯ್ಯನ ಪುರಾಣಗಳನ್ನೂ, ಶಂಕರದಾಸಿಮಯ್ಯನ ಸಮಸ್ತ ವಚನಗಳನ್ನೂ ಸಂಶೋಧಿಸಿ ಪ್ರಕಟಿಸಿದರೆ ಈ ವಿಭೂತಿಗಳ ಚರಿತ್ರೆಯನ್ನು ಬರೆಯುವವರಿಗೆ ಇನ್ನೂ ಸಹಾಯವಾಗುತ್ತದೆ. ಕನ್ನಡ ಭಾಷಾಭಿಮಾನಿಗಳೂ ವೀರಶೈವ ಮತಾಭಿಮಾನಿಗಳೂ ಈ ಕಡೆಗೆ ಲಕ್ಷಿಸಬೇಕೆಂದು ನನ್ನ ಪ್ರಾರ್ಥನೆ.

ಶ್ರೀ. ಬಸವೇಶ್ವರನು ವೀರಶೈವ ಮತೋದ್ಧಾರಕನೇ ಹೊರತು ಮತಸ್ಥಾಪಕನಲ್ಲವೆಂದು ನಾನು ವಾದಿಸುತ್ತಿರುವ ಮಾತ್ರಕ್ಕೇ ನನಗೆ ಬಸವೇಶನಲ್ಲಿ ಭಕ್ತಿಯಿಲ್ಲವೆಂದು ಯಾರೂ ಭಾವಿಸಬಾರದು. ಬಸವೇಶ್ವರನು ಎಲ್ಲ ವೀರಶೈವ ವಿಭೂತಿಗಳಿಗಿಂತಲೂ ಹೆಚ್ಚಿನವನೆಂದೂ, ದ್ವಿತೀಯ ಶಂಭುವೆಂದೂ, ಬಸವೇಶನಿಲ್ಲದಿದ್ದರೆ ವೀರಶೈವ ಮತವು ಇಂದಿನ ವರೆಗೂ ಭೂಮಂಡಲದಲ್ಲಿ ನಿಲ್ಲುತ್ತಲೇ ಇರಲಿಲ್ಲವೆಂದೂ ಲಿಂಗಧಾರಿಯಾದ ಪ್ರತಿಯೊಬ್ಬನೂ ಆ ಮಹಾತ್ಮನನ್ನು ಪೂಜಿಸಿ ಕೃತಾರ್ಥರಾಗಬೇಕೆಂದೂ ನಾನು

ಅಡಿಗಡಿಗೆ ಹೇಳುತ್ತಲೂ, ಬರೆಯುತ್ತಲೂ ಬಂದಿದ್ದೇನೆ. (*Basawa is the Heart of veerashaivism*) ಎಂಬ ಆಂಗ್ಲ ವಾಕ್ಯವನ್ನು ನಾನು ಶ್ರೀ. ಕುಮಾರರಿಗೆ ಶರಣಸಂದೇಶದಲ್ಲಿ ಕೊಟ್ಟ ಉತ್ತರದಲ್ಲಿಯೇ ಬರೆದಿದ್ದೇನೆ. ಅಂಧಶ್ರದ್ಧೆಯಿಂದಲೂ ಪಕ್ಷಾಭಿಮಾನ-ವ್ಯಕ್ತಿದ್ವೇಷಗಳಿಂದಲೂ, ಇತಿಹಾಸದ ಕೊಲೆಯಾಗಬಾರದೆಂದೂ ವೀರಶೈವ ಇತಿಹಾಸ, ಸಂಸ್ಕೃತಿ ತತ್ವಗಳಬಗ್ಗೆ ಸಮಾಜದಲ್ಲಿ ವಿಚಾರಕ್ರಾಂತಿಯುಂಟಾಗಲೆಂದೂ, ಸತ್ಯ ವಿಚಾರಗಳು ಹೊರಗೆ ಬರಲೆಂದೂ ಈ ಚರ್ಚೆಗೆ ನಾನು ಉತ್ತರಗಳನ್ನು ಬರೆಯಬೇಕಾಯಿತು. ವಾಚಕರು ಈ ಸತ್ಯ ಸಂಶೋಧಕ ಬುದ್ಧಿಯಿಂದಲೇ ನನ್ನ ಲೇಖಗಳನ್ನು ಪರಾಮರಿಸಬೇಕೆಂದು ನನ್ನ ಬಿನ್ನಹ. ಕುಮಾರರ ಕೆಲವು ವಿಚಾರಗಳ ಸತ್ವವನ್ನು ನಾನು ಮುಂದಿನ ಲೇಖನಗಳಲ್ಲಿ ಪರೀಕ್ಷಿಸುತ್ತೇನೆ.

---

# ಅಕ್ಕ ಮಹಾದೇವಿಗೆ.

(ಬಸವನ ಬಳಗದಿಂದ)

ಧಾಟಿ— ನಿಜಗುಣಶಿವಯೋಗಿಗಳ “ಕೋಗಿಲೇ ಚೆಲ್ವಕೋಗಿಲೆ” ಎಂಬಂತೆ.

ದೇವಿಯೋ। ಮಹಾದೇವಿಯೋ। ಭಾವ
ದೇವಿಯೋ। ಅಕ್ಕ ದೇವಿಯೋ ॥ಪಲ್ಲ॥

ಹಿಂದೆ ಬಹಳ ಹಿಂದೆ ತಂದೆ ಬಸವರಾಜ
ಚೆಂದದಿ ಮೆರೆವಂದು ದೇವಿಯೋ ||
ಅಂದದ ನಮ್ಮೀ ಕನ್ನಡ ನಾಡಿನ
ಕಂದಮ್ಮನಾಗಿರ್ದೆ ದೇವಿಯೋ ॥೧॥

ರಾಗದೊಡನೆ ಹೋರಿ ಭೋಗಭಾಗ್ಯವ ಮೀರಿ
ತ್ಯಾಗದಿ ಮೇಲೇರಿ ದೇವಿಯೋ ॥
ಯೋಗಸಾಮ್ರಾಜ್ಯದಿ ಯೋಗೇಶ್ವರಿಯು ನೀ
ನಾಗಿ ಮೆರೆದೆಯೆಮ್ಮ ದೇವಿಯೋ ॥೨॥

ಭಾವಕೈಲಾಸದಿ ದೇವದೇವನ ಕಂಡು
ಭಾವಾವೇಶದಿ ದೇವಿಯೋ ॥
ಭಾವಗೀತೆಗಳನು ವಚನರೂಪದಿ ಹಾಡಿ
ಯಾವೆಡೆ ಮರೆಯಾದೆ ದೇವಿಯೋ ॥೩॥

ನಿನ್ನ ವಚನದಿಂದೆ ನನ್ನ ಕನ್ನಡವನ್ನು
ಚಿನ್ನ ಚೆನ್ನೆನುವೊಲು ದೇವಿಯೋ
ಜೊನ್ನರಸದಿ ಹೊಯ್ದು ನೀನೆತ್ತ ಪೋದೆಯೌ
ಇನ್ನೊಮ್ಮೆ ಬಾರೆಯಾ ದೇವಿಯೋ ॥೪॥

ಡಿ. ಎಸ್. ಕರ್ಕಿ ಬಿ. ಎ.

# ಪಾಶ್ಚಾತ್ಯರ ತತ್ವಶಾಸ್ತ್ರ.

## ಮುಂದೆ ಸಾಗಿದ್ದು.

ಲೇಖಕ:— ವೀರಪ್ಪ ಯುಗಟಿ ಬಿ. ಎ. ಎಲ್. ಎಲ್. ಬಿ. ಹಾವೇರಿ.

ಡೆಮಾಕ್ರಿಟಸ್:— ಕ್ರಿ. ಪೂ. ೪೬೦. ಇವನು ಅಬ್ಡೇರಾ ಎಂಬ ಪಟ್ಟಣದಲ್ಲಿದ್ದವನು. ಇವನು ಅಣುವಾದದ(*Atomism*) ನಿಜವಾದ ಪ್ರತಿಪಾದಕನಾಗಿದ್ದನು ಜಗತ್ತಿನ ಮೂಲ ವಸ್ತುವು ಪರಿಮಾಣದಿಂದ ಭಿನ್ನವಾದ ಅನೇಕ ಭೂತಗಳಿಂದಾಗಿದೆ. ಯಾವತ್ತು ಜಗತ್ತು ನಾನಾತರದ ಅಣುಗಳ ಸಮೂಹದ ಸಂಯೋಗದಿಂದಾಗಿದೆ ಪಾರ್ಮೆನಿಡಿಸನು ಬರಿದಾದ ಸ್ಥಳಕ್ಕೆ ಅಸ್ತಿತ್ವವೇ ಇಲ್ಲವೆಂದು ಹೇಳಿದನು. ಆದರೆ ಡೆಮಾಕ್ರಿಟಸನು ಬರಿದಾದ ಸ್ಥಳವು ಅಸ್ತಿತ್ವದಲ್ಲದೆ ಎಂದು ಹೇಳಿದನು. ಪ್ರತಿಯೊಂದು ಅಣುವು ಅವಿಭಾಜ್ಯವೂ (*indivisible*) ಮೇರೆಯುಳ್ಳದ್ದೂ (*finite*) ಭೌತಿಕವಾದದ್ದೂ, ಪೂರ್ಣವಾದದ್ದೂ (*full*) ಇದೆ. ಅಣುಗಳು ಆದಿಯಿಂದಲೇ ಚಲನಾತ್ಮಕವಾಗಿವೆ. ಅಣುಗಳ ನಡುವೆ ಬರಿದಾದ ಸ್ಥಳವಿದೆ. ಅಣುಗಳು ರೂಪ ಆಕೃತಿಗಳಲ್ಲಿ(*shape and size*) ಭಿನ್ನವಾಗಿವೆ. ಆದರೆ ಗುಣದಿಂದ ಭಿನ್ನವಾಗಿಲ್ಲ. ಪ್ರತಿಯೊಂದು ಬದಲಾವಣೆಯು ಅಣುಗಳ ಸಂಯೋಗದಿಂದುಂಟಾಗುವದು. ದೈವಿಕ ಸಂಬಂಧವು ಸೃಷ್ಟಿಕ್ರಿಯೆಗೆ ಸಂಬಂಧವಿಲ್ಲ. ಪ್ರತಿಯೊಂದು ಕಾರ್ಯಕ್ಕೂ ಯಾಂತ್ರಿಕ ಕಾರಣವು(*Mechanical cause*) ಆಧಾರವಾಗಿದೆ. ಇದೇ ತತ್ವವು ಆಧುನಿಕ ಭೌತಿಕ ಶಾಸ್ತ್ರದ ತಳಹದಿಯಾಗಿದೆ. ಜಗತ್ತು ಎರಡು ಅಂಗಗಳುಳ್ಳದ್ದಾಗಿದೆ. ಮೂಲ ವಸ್ತು(*Plenum or Being*) ಮತ್ತು ಬರಿದಾದ ಸ್ಥಳ (*Void*) ಮೂಲ ವಸ್ತುವು ಸ್ವಯಂಚಲನಾತ್ಮಕವಾದದ್ದೂ ಗುಣಭೇದವಿಲ್ಲದ ಅಣುಗಳುಳ್ಳದ್ದೂ ಆಗಿದೆ. ಬರಿದಾದ ಸ್ಥಳದಲ್ಲಿ ಅಣುಗಳು ಚಲಿಸುತ್ತವೆ. ಅಣುಗಳು ಅಸಂಖ್ಯಾತವಾಗಿವೆ. ಕಣ್ಣಿಗೆ ಕಾಣದಷ್ಟು ಸೂಕ್ಷ್ಮವಾಗಿವೆ ಮತ್ತು ರೂಪ ಆಕೃತಿಗಳಲ್ಲಷ್ಟೇ ಭಿನ್ನವಾಗಿವೆ. ಹಿಂದುಗಳಲ್ಲಿ ಷಡ್ದರ್ಶನಸ್ಥಾಪಕರಲ್ಲೊಬ್ಬನಾದ ವೈಶೇಷಿಕ ಸಿದ್ಧಾಂತದ ಕರ್ತೃವಾದ ಕಣಾದನ ಅಣುವಾದವಾದರೂ ಹೀಗೆಯೇ ಇದೆ. ಈರ್ವರೂ ಅನೇಕ ಅಣುಗಳು ಸಂಯೋಗವಾದಾಗ ಜಗತ್ತೂ ಅನೇಕ ವಸ್ತುಗಳೂ ಉತ್ಪನ್ನವಾಗುವವೆಂದು ಒಂದೇ ವಿಧವಾಗಿ ಹೇಳುತ್ತಾರೆ. ಲೋಕಗಳು ಅನಂತ

ವಾಗಿರುವವೆಂದು(*endless*) ಡೆಮಾಕ್ರಿಟಸನು ಹೇಳುತ್ತಾನೆ. ಡೆಮಾಕ್ರಿಟಸನ ಭೌತಿಕ ಸಿದ್ಧಾಂತವು ಜಗತ್ತಿನ ಉತ್ಪತ್ತಿಯನ್ನು ಶಾಸ್ತ್ರಪದ್ಧತಿಗೆ ಸಮಂಜಸವಾಗುವಂತೆ ಹೇಳಿದ್ದಾಗಿದೆ.

ಇವನ ಅಣುವಾದವು ಭಾರತೀಯನಾದ ಕಣಾದನಿಂದ ಅನುಕರಿಸಲ್ಪಟ್ಟಿತೋ ಹೇಗೆಂಬ ಸಂದೇಹವು ಹುಟ್ಟುವದು. ಆದರೆ ಈವರೆಗೆ ಗ್ರೀಸದೇಶಕ್ಕೂ ಭರತಖಂಡಕ್ಕೂ ವ್ಯವಹಾರ ಸಂಪರ್ಕವಾದದ್ದು ಕಂಡುಬರುವದೇ ಇಲ್ಲ. ಆದ್ದರಿಂದ ಇವೆರಡು ದೇಶಗಳಲ್ಲಿ ಆ ಕಾಲಕ್ಕೆ ಉದ್ಭವಿಸಿದ ವಿಚಾರಕ್ರಾಂತಿಯು ಸ್ವತಂತ್ರವಾಗಿಯೇ ಏಕಕಾಲಕ್ಕೆ ಉಂಟಾಯಿತೆನ್ನಬಹುದು. ಗ್ರೀಕ ವೀರನಾದ ಅಲೆಗ್ಝಾಂಡರನು ಹಿಂದುಸ್ಥಾನಕ್ಕೆ ದಂಡೆತ್ತಿಹೋದ ತರುವಾಯ ಅಂದರೆ ಕ್ರಿ. ಪೂ. ೩೩೦ರ ನಂತರ ಇವೆರಡು ದೇಶಗಳ ನಡುವೆ ವ್ಯವಹಾರ ಸಂಪರ್ಕವು ಪ್ರಾರಂಭವಾಯಿತು. ತತ್ತ್ವಜ್ಞಾನದ ಹೊರತಾಗಿ ಇನ್ನುಳಿದ ಕಲೆಗಳು ಇತರ ಜನಾಂಗದ ಮೇಲೆ ತೀವ್ರ ಪ್ರೇರಣೆಯನ್ನುಂಟುಮಾಡುವವು. ಆದರೆ ತತ್ತ್ವಜ್ಞಾನದ ಪ್ರೇರಣೆಯಾಗಬೇಕಾದರೆ ದೇಶಭಾಷೆಗಳಲ್ಲಿ ಪ್ರಾವೀಣ್ಯತೆಯನ್ನು ಹೊಂದಬೇಕಾಗುವದು. ಆಗಲೂ ತತ್ತ್ವಜ್ಞಾನಿಗಳ ಮೇಲೆ ಮಾತ್ರವೇ ಮತ್ತೊಂದು ದೇಶದ ತತ್ತ್ವಜ್ಞಾನಿಯ ಪ್ರೇರಣೆಯಾಗುವದೇ ವಿನಾ ಸಾಧಾರಣ ಜನರ ಮೇಲೆ ಆಗಲಾರದು. ಈ ಪ್ರಕಾರ ಹಿಂದೂದೇಶದಲ್ಲಿ ಮೊದಲು ವಿದೇಶೀಯರಲ್ಲಿ ಸಂಸ್ಕಾರ ಹೊಂದಿದವನು ಚೈನಾದೇಶದ ಪ್ರವಾಸಿಯಾದ ಹೂಯೆನ್ ತ್ಸ್ಯಾಂಗನು. ಇವನು ಬೌದ್ಧ ಯಾತ್ರಿಕನು. ಇವನು ಕ್ರಿ. ಶ. ೬೧೦--೬೫೦ರ ವರೆಗೆ ಕನ್ಯಾಕುಬ್ಜದ ರಾಜನಾದ ಶ್ರೀ ಹರ್ಷನ ಆಸ್ಥಾನದ ಪಂಡಿತವರ್ಗದಲ್ಲಿ ಮಾನ್ಯನಾಗಿದ್ದನು. ಇವನು ಸಂಸ್ಕೃತ, ಪಾಲಿ ಮೊದಲಾದ ಭಾಷೆಗಳಲ್ಲಿ ಸಂಪೂರ್ಣ ಪ್ರಾವೀಣ್ಯ ಹೊಂದಿದ್ದನಲ್ಲದೆ ತತ್ತ್ವಗ್ರಂಥಗಳನ್ನು ಸಹ ಮನನ ಮಾಡಿಕೊಂಡಿದ್ದನು. ಪ್ರೊಫೆಸರ ವೆಬರ ಮೊದಲಾದವರು ಹಿಂದುಸ್ಥಾನದ ತತ್ತ್ವಪ್ರೇರಣೆಯು ಗ್ರೀಕರ ಮೇಲಾಗಿತ್ತೆಂದು ಹೇಳುತ್ತಾರೆ. ವೇದದಲ್ಲಿಯ ದೇವತೆಯಾದ ವಾಕ್ ಅಥವಾ ವಾಣಿಯ ಅನುಕರಣದಿಂದ ಗ್ರೀಕರಲ್ಲಿ(*Logas or word*)ದೇವವಾಣಿಯ ಕಲ್ಪನೆಯುಂಟಾಯಿತೆಂದು ಹೇಳುತ್ತಾರೆ. ಆದರೆ ಪ್ರೊ. ಮ್ಯಾಕ್ಷಮುಲ್ಲರರು ಇದಕ್ಕೆ ಅನುಮತಿಸಿಲ್ಲ. ವಾಣಿಯು ಸ್ತ್ರೀಲಿಂಗವಿದ್ದು(*Logas*)ಎಂಬದು ಪುಲ್ಲಿಂಗವಾಗಿದೆ. ಆದ್ದರಿಂದ ಅವುಗಳಲ್ಲಿ ಸಂಪೂರ್ಣ ಸಾಮ್ಯವಿಲ್ಲದ್ದರಿಂದ

# ಪಾಶ್ಚಾತ್ಯರ ತತ್ವಶಾಸ್ತ್ರ.

## ಮುಂದೆ ಸಾಗಿದ್ದು.

ಲೇಖಕ:— ವೀರಪ್ಪ ಯುಗಟಿ ಬಿ. ಎ. ಎಲ್. ಎಲ್. ಬಿ. ಹಾವೇರಿ.

---

ಡೆಮಾಕ್ರಿಟಸ್:— ಕ್ರಿ. ಪೂ. ೪೬೦. ಇವನು ಅಬ್ಡೀರಾ ಎಂಬ ಪಟ್ಟಣದಲ್ಲಿದ್ದವನು. ಇವನು ಅಣುವಾದದ(*Atomism*) ನಿಜವಾದ ಪ್ರತಿಪಾದಕನಾಗಿದ್ದನು ಜಗತ್ತಿನ ಮೂಲ ವಸ್ತುವು ಪರಿಮಾಣದಿಂದ ಭಿನ್ನವಾದ ಅನೇಕ ಭೂತಗಳಿಂದಾಗಿದೆ. ಯಾವತ್ತು ಜಗತ್ತು ನಾನಾತರದ ಅಣುಗಳ ಸಮೂಹದ ಸಂಯೋಗದಿಂದಾಗಿದೆ ಪಾರ್ಮೆನಿಡಿಸನು ಬರಿದಾದ ಸ್ಥಳಕ್ಕೆ ಅಸ್ತಿತ್ವವೇ ಇಲ್ಲವೆಂದು ಹೇಳಿದನು. ಆದರೆ ಡೆಮಾಕ್ರಿಟಸನು ಬರಿದಾದ ಸ್ಥಳವು ಅಸ್ತಿತ್ವದಲ್ಲದೆ ಎಂದು ಹೇಳಿದನು. ಪ್ರತಿಯೊಂದು ಅಣುವು ಅವಿಭಾಜ್ಯವೂ (*indivisible*) ಮೇರೆಯುಳ್ಳದ್ದೂ (*finite*) ಭೌತಿಕವಾದದ್ದೂ, ಪೂರ್ಣವಾದದ್ದೂ (*full*) ಇದೆ. ಅಣುಗಳು ಆದಿಯಿಂದಲೇ ಚಲನಾತ್ಮಕವಾಗಿವೆ. ಅಣುಗಳ ನಡುವೆ ಬರಿದಾದ ಸ್ಥಳವಿದೆ. ಅಣುಗಳು ರೂಪ ಆಕೃತಿಗಳಲ್ಲಿ(*shape and size*) ಭಿನ್ನವಾಗಿವೆ. ಆದರೆ ಗುಣದಿಂದ ಭಿನ್ನವಾಗಿಲ್ಲ. ಪ್ರತಿಯೊಂದು ಬದಲಾವಣೆಯು ಅಣುಗಳ ಸಂಯೋಗದಿಂದುಂಟಾಗುವದು. ದೈವಿಕ ಸಂಬಂಧವು ಸೃಷ್ಟಿಕ್ರಿಯೆಗೆ ಸಂಬಂಧವಿಲ್ಲ. ಪ್ರತಿಯೊಂದು ಕಾರ್ಯಕ್ಕೂ ಯಾಂತ್ರಿಕ ಕಾರಣವು(*Mechanical cause*) ಆಧಾರವಾಗಿದೆ. ಇದೇ ತತ್ವವು ಆಧುನಿಕ ಭೌತಿಕ ಶಾಸ್ತ್ರದ ತಳಹದಿಯಾಗಿದೆ. ಜಗತ್ತು ಎರಡು ಅಂಗಗಳುಳ್ಳದ್ದಾಗಿದೆ. ಮೂಲ ವಸ್ತು(*Plenum or Being*) ಮತ್ತು ಬರಿದಾದ ಸ್ಥಳ (*Void*) ಮೂಲ ವಸ್ತುವು ಸ್ವಯಂಚಲನಾತ್ಮಕವಾದದ್ದೂ ಗುಣಭೇದವಿಲ್ಲದ ಅಣುಗಳುಳ್ಳದ್ದೂ ಆಗಿದೆ. ಬರಿದಾದ ಸ್ಥಳದಲ್ಲಿ ಅಣುಗಳು ಚಲಿಸುತ್ತವೆ. ಅಣುಗಳು ಅಸಂಖ್ಯಾತವಾಗಿವೆ. ಕಣ್ಣಿಗೆ ಕಾಣದಷ್ಟು ಸೂಕ್ಷ್ಮವಾಗಿವೆ ಮತ್ತು ರೂಪ ಆಕೃತಿಗಳಲ್ಲಷ್ಟೇ ಭಿನ್ನವಾಗಿವೆ. ಹಿಂದುಗಳಲ್ಲಿ ಷಡ್ದರ್ಶನಸ್ಥಾಪಕರಲ್ಲೊಬ್ಬನಾದ ವೈಶೇಷಿಕ ಸಿದ್ಧಾಂತದ ಕರ್ತೃವಾದ ಕಣಾದನ ಅಣುವಾದವಾದರೂ ಹೀಗೆಯೇ ಇದೆ. ಈರ್ವರೂ ಅನೇಕ ಅಣುಗಳು ಸಂಯೋಗವಾದಾಗ ಜಗತ್ತೂ ಅನೇಕ ವಸ್ತುಗಳೂ ಉತ್ಪನ್ನವಾಗುವವೆಂದು ಒಂದೇ ವಿಧವಾಗಿ ಹೇಳುತ್ತಾರೆ. ಲೋಕಗಳು ಅನಂತ

ವಾಗಿರುವವೆಂದು(*endless*) ಡೆಮಾಕ್ರಿಟಸನು ಹೇಳುತ್ತಾನೆ. ಡೆಮಾಕ್ರಿಟಸನ ಭೌತಿಕ ಸಿದ್ಧಾಂತವು ಜಗತ್ತಿನ ಉತ್ಪತ್ತಿಯನ್ನು ಶಾಸ್ತ್ರಪದ್ಧತಿಗೆ ಸಮಂಜಸವಾಗುವಂತೆ ಹೇಳಿದ್ದಾಗಿದೆ.

ಇವನ ಅಣುವಾದವು ಭಾರತೀಯನಾದ ಕಣಾದನಿಂದ ಅನುಕರಿಸಲ್ಪಟ್ಟಿತೋ ಹೇಗೆಂಬ ಸಂದೇಹವು ಹುಟ್ಟುವದು. ಆದರೆ ಈವರೆಗೆ ಗ್ರೀಸ ದೇಶಕ್ಕೂ ಭರತಖಂಡಕ್ಕೂ ವ್ಯವಹಾರ ಸಂಪರ್ಕವಾದದ್ದು ಕಂಡುಬರುವದೇ ಇಲ್ಲ. ಆದ್ದರಿಂದ ಇವೆರಡು ದೇಶಗಳಲ್ಲಿ ಆ ಕಾಲಕ್ಕೆ ಉದ್ಭವಿಸಿದ ವಿಚಾರಕ್ರಾಂತಿಯು ಸ್ವತಂತ್ರವಾಗಿಯೇ ಏಕಕಾಲಕ್ಕೆ ಉಂಟಾಯಿತೆನ್ನಬಹುದು. ಗ್ರೀಕ ವೀರನಾದ ಅಲೆಗ್ಝಾಂಡರನು ಹಿಂದುಸ್ಥಾನಕ್ಕೆ ದಂಡೆತ್ತಿಹೋದ ತರುವಾಯ ಅಂದರೆ ಕ್ರಿ. ಪೂ. ೩೪೦ರ ನಂತರ ಇವೆರಡು ದೇಶಗಳ ನಡುವೆ ವ್ಯವಹಾರ ಸಂಪರ್ಕವು ಪ್ರಾರಂಭವಾಯಿತು. ತತ್ತ್ವಜ್ಞಾನದ ಹೊರತಾಗಿ ಇನ್ನುಳಿದ ಕಲೆಗಳು ಇತರ ಜನಾಂಗದ ಮೇಲೆ ತೀವ್ರ ಪ್ರೇರಣೆಯನ್ನುಂಟುಮಾಡುವವು. ಆದರೆ ತತ್ತ್ವಜ್ಞಾನದ ಪ್ರೇರಣೆಯಾಗಬೇಕಾದರೆ ದೇಶಭಾಷೆಗಳಲ್ಲಿ ಪ್ರಾವೀಣ್ಯತೆಯನ್ನು ಹೊಂದಬೇಕಾಗುವದು. ಆಗಲೂ ತತ್ತ್ವಜ್ಞಾನಿಗಳ ಮೇಲೆ ಮಾತ್ರವೇ ಮತ್ತೊಂದು ದೇಶದ ತತ್ತ್ವಜ್ಞಾನಿಯ ಪ್ರೇರಣೆಯಾಗುವದೇ ವಿನಾ ಸಾಧಾರಣ ಜನರ ಮೇಲೆ ಆಗಲಾರದು. ಈ ಪ್ರಕಾರ ಹಿಂದೂದೇಶದಲ್ಲಿ ಮೊದಲು ವಿದೇಶೀಯರಲ್ಲಿ ಸಂಸ್ಕಾರ ಹೊಂದಿದವನು ಚೈನಾದೇಶದ ಪ್ರವಾಸಿಯಾದ ಹೂಯೆನ್‌ತ್ಸಾಂಗನು. ಇವನು ಬೌದ್ಧ ಯಾತ್ರಿಕನು. ಇವನು ಕ್ರಿ. ಶ. ೬೧೦--೬೪೦ರ ವರೆಗೆ ಕನ್ಯಾಕುಬ್ಜದ ರಾಜನಾದ ಶ್ರೀ ಹರ್ಷನ ಆಸ್ಥಾನದ ಪಂಡಿತವರ್ಗದಲ್ಲಿ ಮಾನ್ಯನಾಗಿದ್ದನು. ಇವನು ಸಂಸ್ಕೃತ, ಪಾಲಿ ಮೊದಲಾದ ಭಾಷೆಗಳಲ್ಲಿ ಸಂಪೂರ್ಣ ಪ್ರಾವೀಣ್ಯ ಹೊಂದಿದ್ದನಲ್ಲದೆ ತತ್ತ್ವಗ್ರಂಥಗಳನ್ನು ಸಹ ಮನನ ಮಾಡಿಕೊಂಡಿದ್ದನು. ಪ್ರೋಫೆಸರ ವೆಬರ ಮೊದಲಾದವರು ಹಿಂದುಸ್ಥಾನದ ತತ್ತ್ವಪ್ರೇರಣೆಯು ಗ್ರೀಕರ ಮೇಲಾಗಿತ್ತೆಂದು ಹೇಳುತ್ತಾರೆ. ವೇದದಲ್ಲಿಯ ದೇವತೆಯಾದ ವಾಕ್ ಅಥವಾ ವಾಣಿಯ ಅನುಕರಣದಿಂದ ಗ್ರೀಕರಲ್ಲಿ(*Logas or word*)ದೇವವಾಣಿಯ ಕಲ್ಪನೆಯುಂಟಾಯಿತೆಂದು ಹೇಳುತ್ತಾರೆ. ಆದರೆ ಪ್ರೊ. ಮ್ಯಾಕ್ಷಮುಲ್ಲರರು ಇದಕ್ಕೆ ಅನುಮತಿಸಿಲ್ಲ ವಾಣಿಯು ಸ್ತ್ರೀಲಿಂಗವಿದ್ದು(*Logas*)ಎಂಬದು ಪುಲ್ಲಿಂಗವಾಗಿದೆ. ಆದ್ದರಿಂದ ಅವುಗಳಲ್ಲಿ ಸಂಪೂರ್ಣ ಸಾಮ್ಯವಿಲ್ಲದ್ದರಿಂದ

ಗ್ರೀಕರು ಅದನ್ನು ಅನುಕರಣೆಮಾಡಿದ್ದಲ್ಲವೆಂಬದನ್ನು ತೋರಿಸುವದೆಂದು ವ್ಯಾಖ್ಯವುಳ್ಳವರು ಹೇಳುತ್ತಾರೆ.

ಡೆಮಾಕ್ರಿಟಸನ ಪ್ರಾಕೃತಿಕ ಮಾನಸಶಾಸ್ತ್ರ:— ಮನುಷ್ಯನು ಅಣು ಸಮೂಹದ ಅಂಶನಾಗಿರುವನೆಂದು ಇವನು ಹೇಳುತ್ತಾನೆ. ಮನುಷ್ಯನು ಅನೇಕ ತರದ ಅಣುಗಳಿಂದಾಗಿದ್ದಾನೆ. ಅವನ ಶರೀರವು ಭೂಮಿ, ಜಲ, ವಾಯುಗಳ ಅಣುಗಳಿಂದಾಗಿದೆ. ಅವನ ಮನಸ್ಸು ಅಗ್ನಿಯ ಅಣುಗಳಿಂದಾಗಿದೆ. ಈ ಅಣುಗಳ ಅತ್ಯಂತ ಸೂಕ್ಷ್ಮವಾಗಿಯೂ, ನುಣುಪಾಗಿಯೂ ಅತ್ಯಂತ ಚಲನೆಯುಳ್ಳವೂ ಇರುವವು. ಆದ್ದರಿಂದ ಈ ಅಣುಗಳು ಉಳಿದ ಅಣುಗಳಿಗಿಂತ ಪರಿಪೂರ್ಣವಾಗಿವೆ. ಅಗ್ನಿಯ ಅಣುಗಳ ಚಲನೆಯಿಂದ ಮನಸ್ಸಿನ ಗತಿಯುಂಟಾಗುವದು. ಅವು ಜಗತ್ತಿನ ತುಂಬ ಪಸರಿಸಿರುವವು. ಅವು ಇರುವ ಕಡೆಯಲ್ಲೆಲ್ಲ ಜೀವವಿರುವದು. ಅವು ಸಸ್ಯಗಳಲ್ಲಿಯೂ, ಪಶುಗಳಲ್ಲಿಯೂ, ಮನುಷ್ಯರಲ್ಲಿಯೂ ಇರುವವು. ಅವು ಮನುಷ್ಯನಲ್ಲಿ ಹೆಚ್ಚಿನಪ್ರಮಾಣದಿಂದಿರುವದರಿಂದ ಮನುಷ್ಯನು ಉಳಿದ ಸಜೀವ ವಸ್ತುಗಳಿಗಿಂತ ಶ್ರೇಷ್ಠನಾಗಿದ್ದಾನೆ. ಪ್ರಾಣವಾಯುವಿನ ಅಣುಗಳಿಂದ ಯಾವತ್ತು ಶರೀರವು ಧಾರಣೆಯಾಗಿದೆ. ಯಾವದೊಂದು ಜ್ಞಾನವು ಅಥವಾ ಮಾನಸಿಕ ಕ್ರಿಯೆಯು ಉತ್ಪನ್ನವಾಗಬೇಕಾದರೆ ದೇಹ ಬಾಹ್ಯವಾದ ಅಣುಗಳು ದೇಹದಲ್ಲಿಯ ಅಗ್ನಿಯ ಅಣುಗಳ ಸಂಪರ್ಕ ಮಾಡಬೇಕಾಗುವದು. ಒಂದು ಗಿಡವು ನಮ್ಮ ಕಣ್ಣಿಗೆ ಗೋಚರವಾಗಬೇಕಾದರೆ ಅದರ ಪ್ರತಿಬಿಂಬವು ಅಥವಾ ಚಿತ್ರವು ನಮ್ಮ ಕಣ್ಣಿನ ಮೇಲೆ ಬೀಳಬೇಕಾಗುವದು. ಅಣುಗಳ ಪ್ರತಿಬಿಂಬಗಳು ಸ್ಥೂಲ ಮತ್ತು ಸೂಕ್ಷ್ಮವೆಂದು ಎರಡು ವಿಧವಾಗಿವೆ. ಇಂದ್ರಿಯಗಳಿಗೆ ಸಂಪರ್ಕವಾಗುವ ಅಣುವ ಪ್ರತಿಬಿಂಬಗಳು ಬುದ್ಧಿಗೆ ಸಂಪರ್ಕವಾಗುವ ಅಣುವ ಪ್ರತಿಬಿಂಬಗಳಷ್ಟು ಸೂಕ್ಷ್ಮವಾಗಿರುವದಿಲ್ಲ.

ಇಂದ್ರಿಯ ಜ್ಞಾನವು ಬಾಹ್ಯದ ಸ್ಥೂಲ ಅಣುಗಳ ಪ್ರತಿಬಿಂಬದ ಸಂಪರ್ಕವು ಆತ್ಮದ ಸೂಕ್ಷ್ಮ ಅಣುಗಳ ಮೇಲೆ ಅಪ್ರತ್ಯಕ್ಷವಾಗಿ ಆಗುವದರಿಂದುಂಟಾಗುವದು. ಆದ್ದರಿಂದ ಇಂದ್ರಿಯ ಸುಖವು ಕ್ಷಣಿಕವೂ, ಅನಿಶ್ಚಿತವೂ, ಉಗ್ರವಾದದ್ದೂ ಆಗಿದೆ. ಸೂಕ್ಷ್ಮವಾದ ಬಾಹ್ಯ ಅಣುಗಳ ಪ್ರತಿಬಿಂಬದ ಸಂಪರ್ಕವು ಆತ್ಮದ ಸೂಕ್ಷ್ಮಾಣುಗಳ ಮೇಲೆ ಪ್ರತ್ಯಕ್ಷವಾಗಿ ಆಗುವದರಿಂದ ಮಾನಸಿಕ ಅಥವಾ ಚಿತ್ಸುಖವು ಶಾಶ್ವತವೂ, ನಿಶ್ಚಿತವೂ,

ಮೃದುವಾದದ್ದೂ ಶಾಂತವಾದದ್ದೂ ಆಗಿದೆ. ಅಣುಗಳ ಸೂಕ್ಷ್ಮ ಪ್ರತಿಬಿಂಬಗಳು ವಸ್ತುಗಳ ನಿಜವಾದ ಪ್ರತಿಬಿಂಬಗಳಾಗಿರುವದರಿಂದ ಅವು ಬುದ್ಧಿಯನ್ನು ಸಂಪರ್ಕಮಾಡುವವು. ಆದ್ದರಿಂದ ಬುದ್ಧಿಯೊಂದೇ ವಸ್ತುಗಳನ್ನು ನಿಜಸ್ಥಿತಿಯಲ್ಲಿ ಕಂಡುಕೊಳ್ಳುವದು. ಬಣ್ಣ, ರುಚಿ, ವಾಸನೆ, ಶಬ್ದಗಳು ಮನಸ್ಸಿನಲ್ಲಿರುವ ಗುಣಗಳಾಗಿವೆ. ರೂಪ, ಆಕೃತಿ, ದಟ್ಟ (*density*) ಮತ್ತು ಕಾಠಿಣ್ಯ ಗುಣಗಳು ವಸ್ತುಗಳಲ್ಲಿರುವ ಅಣುಗಳಲ್ಲಿವೆ. (*These are mathematical qualities*). ಗುಣಗಳ ಈ ಭೇದವು ಲಾಕ್ ಎಂಬವನ (*Primary*) ಪ್ರಾಥಮಿಕ ಮತ್ತು (*Secondary*) ಸಹಾಯಕಾರೀ ಗುಣಗಳ ಭೇದವನ್ನು ಅನುಕ್ರಮವಾಗಿ ಹೋಲುತ್ತದೆ. ವಿಚಾರವು ಪ್ರಾಥಮಿಕ ಗುಣಗಳಿಗೆ ಸಂಪರ್ಕವಾದಾಗ ಆ ಗುಣಗಳು ಸ್ಥಿರವಾಗಿದ್ದು ನಿಜವಾದ ಜ್ಞಾನವನ್ನು ಕೊಡುವವು. ಪ್ರಾಥಮಿಕ ಗುಣಗಳ ಗತಿಯು ನಮ್ಮ ಇಂದ್ರಿಯಾನುಭವದ ಮೇಲೆ ಉಂಟಾಗಲು ಸಹಾಯಕಾರೀ ಗುಣಗಳು ಉತ್ಪತ್ತಿಯಾಗುವವು. ಅವು ಪ್ರತಿಯೊಂದು ವ್ಯಕ್ತಿಯಲ್ಲಿ ಬೇರೆಬೇರೆಯಾಗಿ ತೋರುವವು ಮತ್ತು ಅನಿಶ್ಚಿತವಾದ ಅಭಿಪ್ರಾಯವನ್ನು ಕೊಡುವವು.

ಡೆಮಾಕ್ರಿಟಸನ ಜ್ಞಾನಸಿದ್ಧಾಂತಃ— ಜ್ಞಾನಸಿದ್ಧಾಂತಕ್ಕೆ ಈತನ ಸಹಾಯವು ಬಹಳವಾಗಿದೆ. ಇವನು ಪ್ಲೇಟೋ ಮತ್ತು ಅರಿಸ್ಟಾಟಲ ಇವರ ಹಾಗೆ ಬುದ್ಧಿಪ್ರಾಮಾಣ್ಯವಾದಿಯೂ (*Rationalist*) ಮತ್ತು ವಾಸ್ತವ್ಯವಾದಿಯೂ (*Realist*) ಇದ್ದಾನೆ. ಇವನು ಮತ್ತು ಪ್ಲೇಟೋ ಇಬ್ಬರೂ ಪ್ರೋಟ್ಯಾಗೊರಾಸನ ಇಂದ್ರಿಯ ಜ್ಞಾನಸಿದ್ಧಾಂತವನ್ನು ಆಧಾರವಾಗಿಟ್ಟುಕೊಂಡರು. ಪ್ರೋಟ್ಯಾಗೊರಾಸನು ಇಂದ್ರಿಯ ಜ್ಞಾನವು ಸಂಬಂಧಾತ್ಮಕವಾದದ್ದೆಂತಲೂ ಅದರಿಂದ ನಿಜವಸ್ತುವಿನ ಜ್ಞಾನ ಲಭಿಸುವದಿಲ್ಲವಾದ್ದರಿಂದ ಅದಕ್ಕೆ ಏನೂ ಬೆಲೆಯಿಲ್ಲವೆಂತಲೂ ಹೇಳಿದನು. ಆದರೆ ಡೆಮಾಕ್ರಿಟಸ್ ಮತ್ತು ಪ್ಲೇಟೋ ಇವರು ಇಂದ್ರಿಯ ಜ್ಞಾನವು ಸಂಬಂಧಾತ್ಮಕವಾದಾಗ್ಯೂ ಅದಕ್ಕೆ ಪರಿಮಿತ ಬೆಲೆ (*Relative value*) ಯುಂಟೆಂದು ಹೇಳಿದರು. ಹೀಗೆ ಪ್ರೋಟ್ಯಾಗೊರಾಸನಿಂದ ಇವರೀರ್ವರು ಅಭಿಪ್ರಾಯ ಭಿನ್ನರಾದರು. ಇಂದ್ರಿಯ ಜ್ಞಾನವು ಬುದ್ಧಿಗೆ ಸಹಾಯಕಾರಿಯಾಗಿದೆ. ಮತ್ತು ಅದು ಪ್ರತಿಯಾಗಿ ಬುದ್ಧಿಯಿಂದ ಜಾಗ್ರತವಾಗುತ್ತದೆ. ಜ್ಞಾನದ ನಿಜವಾದ ಉಗಮವು ಇಂದ್ರಿಯ ಗ್ರಹಿಕೆ (*Sensation*)

ಯಾಗಿರದೆ ಬುದ್ಧಿಯೇ(*Reason*)ಆಗಿದೆ. ಆದ್ದರಿಂದ ಜ್ಞಾನವು ಎರಡು ವಿಧವಾಗಿದೆ. ಮೊದಲನೆಯದು ಬುದ್ಧಿಪ್ರಾಧಾನ್ಯ ಅಥವಾ ನಿಜವಾದ ಜ್ಞಾನ (*Retional knowledge*) ಇದು ವಸ್ತುಗಳ ನಿಜವಾದ ಗುಣಗಳನ್ನು (*Primary qualitives*) ತೋರಿಸುತ್ತದೆ. ಎರಡನೆಯದು ಇಂದ್ರಿಯ ಜನ್ಯಜ್ಞಾನ (*Sensational knowledge*) ವು ವಸ್ತುಗಳ ಪರಿಮಿತವಾದ ಗುಣಗಳನ್ನು (*Socondary qualitives*) ತೋರಿಸುತ್ತದೆ.

ಡೆಮಾಕ್ರಿಟಸನ ನೀತಿಶಾಸ್ತ್ರ:— ಇವನ ನೀತಿಶಾಸ್ತ್ರವು ಇವನ ಮಾನಸಶಾಸ್ತ್ರದ ತಳಹದಿಯಮೇಲೆಯೇ ಕಟ್ಟಲ್ಪಟ್ಟಿದೆ. ಇವನು ಇಂದ್ರಿಯಜನ್ಯಸುಖಗಳು ಅಶಾಶ್ವತವಾದವುಗಳೂ, ಕಠೋರ ಮತ್ತು ದುಃಖಮಯವಾದವುಗಳೂ ಇರುವದರಿಂದ ಅವು ತ್ಯಾಜ್ಯವಾದವುಗಳೆಂದು ಹೇಳುತ್ತಾನೆ. ಬುದ್ಧಿಜನ್ಯಸುಖಗಳು (*Intellectual pleasures*) ನಿತ್ಯವಸ್ತುವಿನ ಧ್ಯಾನದಿಂದುಂಟಾಗುವದರಿಂದ ಅವೇ ಹಿತವಾದವುಗಳೆಂದು ಹೇಳುತ್ತಾನೆ ಸೂಕ್ಷ್ಮಾಣುಗಳು ಆತ್ಮದ ಅಣುಗಳ ಸಂಪರ್ಕವಾದಾಗ ನಿಜವಸ್ತುವಿನ ಧ್ಯಾನವುಂಟಾಗುವದೆಂದು ಇವನ ಮತವು. ಈ ಧ್ಯಾನದಿಂದ ಲಭಿಸಿದ ಜ್ಞಾನವು ನಿತ್ಯಸುಖವನ್ನೂ ಸಮತ್ವವನ್ನೂ ಉಂಟುಮಾಡುವದು. ಹೀಗೆ ಇವನು ತನ್ನ ನೀತಿಶಾಸ್ತ್ರವನ್ನೂ ಸಹ ತನ್ನ ಅಣುವಾದದ ಸಿದ್ಧಾಂತದಿಂದಲೇ ರಚಿಸಿದ್ದಾನೆ. ನಿಜಜ್ಞಾನವು ಹೇಗೆ ನಮ್ಮ ಬುದ್ಧಿಯ ಧ್ಯೇಯವಸ್ತುವಾಗಿದೆಯೋ ಹಾಗೆಯೇ ನಿಜಸುಖವು ನಮ್ಮ ಸದ್ವರ್ತನದ ಧ್ಯೇಯವಾಗಿದೆ. ಅಣುಗಳ ಚಲನೆಯಿಂದ ಸುಖವು ಪರಿಣಮಿಸುವದು. ಬೌದ್ಧಿಕ ಅಣುಗಳು ಸೂಕ್ಷ್ಮ ಮತ್ತು ಮೃದುವಾಗಿರುವದರಿಂದ ಅವುಗಳಿಂದಾದ ಸುಖವು ಶಾಶ್ವತವೂ, ಶಾಂತವೂ, ನಿಜವಾದದ್ದೂ ಆಗಿದೆ. ಇಂದ್ರಿಯದ ಅಣುಗಳು ಸ್ಥೂಲ ಮತ್ತು ಕಠೋರವಾಗಿರುವದರಿಂದ ಅವುಗಳಿಂದಾದ ಸುಖವು ಅನಿತ್ಯವೂ, ಅಸತ್ಯವೂ, ಕಠೋರವಾಗಿಯೂ ಇವೆ. ಅಣುಗಳ ಜ್ಞಾನವೇ ಜಗತ್ತಿನ ಸ್ವರೂಪವನ್ನು ಅರಿಯಲು ಮುಖ್ಯ ಸಾಧನವೆಂದು ಡೆಮಾಕ್ರಿಟಸನು ನಂಬಿದನು. ಈ ಜ್ಞಾನವು ಆತ್ಮಕ್ಕೆ ಶಾಂತಿಯನ್ನೂ ಸಮತೆಯನ್ನೂ ಉಂಟುಮಾಡುವದು. ಡೆಮಾಕ್ರಿಟಸನು ಕೇವಲ ಬೌದ್ಧಿಕ ಸುಖವೇ ಸುಖವೆಂತಲೂ ಸನ್ಯಾಸವೇ ಧ್ಯೇಯವೆಂತಲೂ ಒಂದು ಸಾರಿ ಹೇಳುತ್ತಾನೆ. ಮತ್ತೊಮ್ಮೆ ಆತ್ಮನಿಗ್ರಹ ಮತ್ತು ಮಿತಜೀವನವೇ ಸುಖವೆಂತಲೂ ಹೇಳುತ್ತಾನೆ.

ಹೀಗೆ ಎರಡು ವಿಧವಾದ ಅಭಿಪ್ರಾಯಗಳನ್ನು ಇವನು ಸಮನ್ವಯ ಮಾಡಲು ಯತ್ನಿಸಲಿಲ್ಲ. ಬಹುಜನರು ಇಂದ್ರಿಯ ಸುಖಾಸಕ್ತರಿದ್ದು (*Sensualists*) ಬುದ್ಧಿವಂತನಿಂದ ತಿರಸ್ಕೃತರಾಗಿರುವರು. ಇವನು ಸಾಕ್ರೆಟಿಸನಂತೆ ಆನಂದವಾದಿ (*Eudaemonist*) ಇದ್ದನು. ಪ್ರಪಂಚ ತಿರಸ್ಕರ ತತ್ವದಿಂದ ಹೆರಾಕ್ಲೈಟಸನಿಗೆ ಅಳುವ ತತ್ವಜ್ಞಾನಿಯೆಂದು ಹೆಸರುಂಟಾದಂತೆ ಡೆಮಾಕ್ರಿಟಸನಿಗೆ ಆನಂದವಾದದ ತತ್ವದಿಂದ ನಗುವ ತತ್ವಜ್ಞಾನಿಯೆಂದು ಹೆಸರುಂಟಾಯಿತು.

ಅಣುಗಳೇ ನಿಜವಸ್ತುವೆಂದು ಇವನು ಹೇಳುತ್ತಾನೆ. ಈ ನಿಜವಸ್ತುವು ಬುದ್ಧಿಯಿಂದ ಶೋಧಿಸಲ್ಪಡುವದು. ಇವನ ನಿಜವಸ್ತುವಿಗೂ ಪ್ಲೇಟೋನ ನಿಜವಸ್ತುವಿಗೂ (*Form*) ಏನೂ ಸಾಮ್ಯವಿಲ್ಲ ಇವನ ನಿಜವಸ್ತುವು ಭೌತಿಕ ಜಗತ್ತಿನ ನಿಜಸ್ವರೂಪವಾಗಿತ್ತು ಆದರೆ ಪ್ಲೇಟೋನ ನಿಜವಸ್ತುವು ಪಾರಲೌಕಿಕದ ನಿಜಸ್ವರೂಪವಾಗಿತ್ತು. ಆದಾಗ್ಯೂ ಇವನ ತತ್ವದ ಪರಿಣಾಮವು ಪ್ಲೇಟೋನ ಮೇಲೆ ಹೇಗಾಯಿತೆಂಬದನ್ನು ಮುಂದೆ ತೋರಿಸಲ್ಪಡುವದು. ಡೆಮಾಕ್ರಿಟಸನು ಜಡವಾದಿಯು (*Materialist*) ಪ್ಲೇಟೋ ಮಾಯಾವಾದಿಯು (*Idealist*)

ಪೈಥಾಗೊರಾಸ— ಕ್ರಿ. ಪೂ. ೪೫೦. ಇವನು ಸ್ಯಾಮಾಸ ಪಟ್ಟಣದ ನಿವಾಸಿಯು. ಇವನು ತತ್ವಜ್ಞಾನಕ್ಕಿಂತಲೂ ಧಾರ್ಮಿಕ ಪಂಥದ ಕರ್ತನು. ಇವನ ಪಂಥದವರು (*Apollo*) ಸೂರ್ಯೋಪಾಸಕರಾಗಿದ್ದರು. ಇವನು ರಾಜಕಾರಣದಲ್ಲಿ ಪ್ರವೇಶ ಮಾಡಿದ್ದರಿಂದ ಮತ್ತು ಕೆಲವು ಜನರನ್ನು ತನ್ನ ಪಂಥದಲ್ಲಿ ಸೇರಿಸದ್ದರಿಂದ ಇವನಿಗೆ ದ್ವೇಷಿಗಳುಂಟಾದರು. ಪದಭ್ರಷ್ಟರಾದ ಇವನ ಅನುಯಾಯಿಗಳು ಕ್ರಿ. ಪೂ. ३೫೦ ರವರೆಗೆ ಒಂದು ತತ್ವದ ಪಂಥವನ್ನು ಮಾಡಿಕೊಂಡಿದ್ದರು. ಪೈಥಾಗೊರಾಸನ ಮುಖ್ಯ ತತ್ವಗಳೆಂದರೆ -- (೧) ಆತ್ಮದ ಪುನರ್ಜನ್ಮ ಈ ಪಂಥದವರು ತಮ್ಮ ಪೂರ್ವಜರ ಆತ್ಮವು ನಾಯಿಯಲ್ಲಿ ಸಹ ಬಂದಿರುವದೆಂಬ ಭಾವನೆಯಿಂದ ಅದನ್ನು ಹೊಡೆಯುತ್ತಿರಲಿಲ್ಲ. ಅವರು ಮಾಂಸವನ್ನು ಕೆಲವು ಜಾತಿಯ ಕಾಳುಗಳನ್ನೂ ತಿನ್ನುತ್ತಿರಲಿಲ್ಲ. ಇದೇ ಪ್ರಕಾರ ವೇದಾಂತವಾದರೂ ಪುನರ್ಜನ್ಮದಲ್ಲಿ ನಂಬಿಗೆಯುಳ್ಳದ್ದಾಗಿದೆ. ಧಾರ್ಮಿಕ ಮತ್ತು ಯಜ್ಞಕ್ರಿಯೆಗಳನ್ನು ಪೂರೈಸಿದವರ ಆದರೆ ಬ್ರಹ್ಮಜ್ಞಾನವನ್ನು ಹೊಂದದವರ ಸೂಕ್ಷ್ಮ ಶರೀರವು (ಆತ್ಮಸಹಿತವಾದದ್ದು)

ಮೂರ್ಧನ್ಯ ನಾಡಿಯಿಂದ ಹೊರಟು ಪಿತೃಯಾನ ಅಥವಾ ದೇವಯಾನವನ್ನು ಹೊಂದುವದು. ಪಿತೃಯಾನವು ಚಂದ್ರಲೋಕಕ್ಕೆ ಒಯ್ಯುವದು. ಅಲ್ಲಿ ಹೋದ ಆತ್ಮಗಳು ತಮ್ಮ ಪಿತೃಗಳ ಸಹವಾಸದಲ್ಲಿ ತಮ್ಮ ಸತ್ಕಾರ್ಯದ ಫಲವನ್ನು ಅನುಭೋಗಿಸುವವು. ಅನಂತರ ಆಕಾಶಕ್ಕೂ ಅಲ್ಲಿಂದ ಗಾಳಿಗೂ ಅಲ್ಲಿಂದ ಧೂಮಕ್ಕೂ ಅಲ್ಲಿಂದ ಮೋಡಕೂ ಅಲ್ಲಿಂದ ಮಳೆರೂಪದಲ್ಲಿಯೂ ಆ ಮೇಲೆ ಸಸ್ಯರೂಪದಲ್ಲಿಯೂ ಆಗಿ ಇಳಿಯುವವು. ಸಸ್ಯಗಳಿಂದ ಬೀಜ ಉತ್ಪತ್ತಿಯಾಗುವದು. ಬೀಜವು ಗರ್ಭಕೋಶದಲ್ಲಿ ವೃದ್ಧಿ ಹೊಂದಿದಾಗ ಹೊಸ ಜೀವವಾಗಿ ತನ್ನ ಪೂರ್ವಜನ್ಮದ ಉಳಿದ ಕೃತ್ಯಗಳ ಫಲಾನುಸಾರವಾದ ಜನ್ಮವನ್ನು ಭೂಮಿಯ ಮೇಲೆ ಧರಿಸುವದು. ಹೀಗೆ ವೇದದಲ್ಲಿ ಜನ್ಮಾಂತರ ಸ್ಥಿತಿಯ (*Metempsychosis*) ವಿವರಣೆಯುಂಟು. ದುಷ್ಕೃತಿಗಳನ್ನು ಮಾಡಿದ ಮೂರನೇ ವರ್ಗದ ಜನರು ಯಮಲೋಕಕ್ಕೆ ಹೋಗಿ ದುಃಖವನ್ನು ಅನುಭೋಗಿಸಿ ಪುನಃ ಮರ್ತ್ಯಕ್ಕಿಳಿಯುವರೆಂದು ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿದೆ. ಬಾದರಾಯಣನಾದರೂ (ವ್ಯಾಸ) ಇದೇ ಅಭಿಪ್ರಾಯವನ್ನು ಪುಷ್ಟೀಕರಿಸುತ್ತಾನೆ. ಮುಮುಕ್ಷುಗಳು ಬ್ರಹ್ಮಲೋಕವನ್ನು ಹೊಂದಿ ಬ್ರಹ್ಮಜ್ಞಾನಲಭಿಸಿದ ಮೇಲೆ ಬ್ರಹ್ಮಸ್ವರೂಪವನ್ನು ಹೊಂದುವರು. ಆದರೆ ಜಗತ್ತನ್ನು ಸೃಷ್ಟಿಸುವ ನಿಯಾಮಕ ಮಾಡುವ ಶಕ್ತಿಯುಂಟಾಗುವದಿಲ್ಲ.

ಪೈಥಾಗೋರಾಸನಪಂಥದ ಮತ್ತೊಂದು ತತ್ವವೇನಂದರೆ ಮನುಷ್ಯರಿಗೂ ಪಶುಗಳಿಗೂ ಸಂಬಂಧವಿದೆಯೆಂಬದು. (೩) ಮೂರನೆಯ ತತ್ವವೇನಂದರೆ ಜಗತ್ತು ಕಲ್ಪಾಂತದಲ್ಲಿ ಲಯವಾಗಿ ಪುನಃ ಸೃಷ್ಟಿಯುಂಟಾಗುವಿಕೆಯು. ಸುಶೀಲತೆಯಿಂದ ಮೋಕ್ಷವುಂಟಾಗುವವೆಂದು ಈ ಪಂಥದ ತತ್ವವು. ವಿದ್ಯೆಯಿಂದ ಸುಶೀಲತೆಯು ಲಭಿಸುವದು. ವಿದ್ಯಾವ್ಯಾಸಂಗಿಗಳೂ ಮತ್ತು ಅನಾಸಕ್ತರೂ ಆದವರೇ ಮೋಕ್ಷಕ್ಕೆ ಅರ್ಹರು. (೪) ಪೈಥಾಗೋರಾಸು ಸಂಖ್ಯಾಸಿದ್ಧಾಂತದ ವಿಷಯದಲ್ಲಿ ಪ್ರಸಿದ್ಧನಾಗಿರುವನು. ಸರಿಯಾದ ಅಂಕಿಗಳನ್ನು ತ್ರಿಕೋಣದ ಸಂಜ್ಞೆಯಿಂದಲೂ, ಬೆಸ ಅಂಕಿಗಳನ್ನು ಚತುಷ್ಕೋನದ ರೂಪದಿಂದಲೂ ತೋರಿಸಿದನು. ಗಾಯನದ ಸ್ವರಗಳನ್ನು ಸಹ ಸಂಖ್ಯಾರೂಪದಲ್ಲಿಯೇ ಹೇಳಿದನು. ಆದ್ದರಿಂದ ಅವನು ಸಿದ್ಧಾಂತ ತೆಗೆದದ್ದೇನಂದರೆ ಸಂಖ್ಯೆಯು ಪ್ರತಿಯೊಂದು ವಸ್ತುವಿನ ಮೂಲಾಧಾರವು. ಇವನ ಅನುಯಾಯಿಗಳು ಕ್ರಿ. ಪೂ. ೪೫೦ ರಿಂದ ಥೀಬ್ಸ ಪಟಣದಲ್ಲಿ ವಾಸ

ವಾಗಿದ್ದರು. ಅವರು ಅಂದಿನಿಂದ ಧರ್ಮ ಮಾಹಾತ್ಮ್ಯವನ್ನು ಬಿಟ್ಟುಕೊಟ್ಟು ತತ್ವಜ್ಞಾನ ಜ್ಯೋತಿಷ್ಯ, ಗಣಿತ, ಆಯುರ್ವೇದ ಭೌತಿಕ ಮೊದಲಾದ ಶಾಸ್ತ್ರಗಳ ಕಡೆಗೆ ತಮ್ಮ ವಿಚಾರವನ್ನು ತಿರುಗಿಸಿದರು. ಈ ಪಂಥವು ಕ್ರಿ. ಪೂ. ೩೫೦ ರ ವರೆಗೆ ಇದ್ದು ಆ ಮೇಲೆ ಅದೃಶ್ಯವಾಯಿತು.

---

# ಶಕ್ತಿವಿಶಿಷ್ಟಾದ್ವೈತವೆಂದರೇನು?

(ಲೇಖಕ: — ಬಸವನ ಬಳಗದ ಶರಣ ಸೇವಕ ಕೊಲ್ಲಾಪೂರ.)

---

ನನ್ನ ಮಿತ್ರರೊಬ್ಬರು ಶಕ್ತಿವಿಶಿಷ್ಟಾದ್ವೈತವೆಂದರೇನೆಂದು ನನಗೆ ಪ್ರಶ್ನೆಮಾಡಿದರು. ಅದಕ್ಕೆ ಪ್ರತ್ಯುತ್ತರವಾಗಿ ಈ ಲೇಖವನ್ನು ಬರೆಯಲು ಪ್ರಯತ್ನಿಸಿದ್ದಾಗಿದೆ. ಆದರೆ ಶಕ್ತಿವಿಶಿಷ್ಟಾದ್ವೈತದ ವಿಷಯವಾಗಿ ನಾನಾವ ಗ್ರಂಥವನ್ನೂ ಓದಿಕೊಂಡಿಲ್ಲ. ವೀರಶೈವ ಮತತತ್ವಕ್ಕೆ ಶಕ್ತಿವಿಶಿಷ್ಟಾದ್ವೈತ ನೆಂದೂ ದ್ವೈತಾದ್ವೈತವೆಂದೂ ಶಿವಾದ್ವೈತವೆಂದೂ ಪರ್ಯಾಯ ನಾಮ ಗಳಿರುವುದನ್ನು ನಾನು ಓದಿದ್ದೇನೆ. ಆದುದರಿಂದ ವೀರಶೈವ ಮತತತ್ವ ಕ್ಕನುಸರಿಸಿ 'ಶಕ್ತಿವಿಶಿಷ್ಟಾದ್ವೈತ' ಇದರ ಅರ್ಥವೇನಾಗುತ್ತದೆಂಬದನ್ನು ತಿಳಿದುಕೊಳ್ಳಲು ಹವಣಿಸಿದೆನು. ಆಗ ನನ್ನ ಮನಸ್ಸಿನಲ್ಲಿ ಕೆಲವು ವಿಚಾರ ತರಂಗಗಳುದ್ಭವಿಸಿದವು. ಅವುಗಳನ್ನೇ ಇಲ್ಲಿ ನನಗೆ ತಿಳಿದ ಮಟ್ಟಿಗೆ ವ್ಯಕ್ತಪಡಿಸಿದ್ದೇನೆ.

'ಶಕ್ತಿವಿಶಿಷ್ಟಾದ್ವೈತ' ಎಂಬೀ ಸಾಮಾಸಿಕ ಶಬ್ದದ ವಿಗ್ರಹವನ್ನು ಮಾಡಿದರೆ ಶಕ್ತಿಯಿಂದ ವಿಶಿಷ್ಟವಾದ ಅದ್ವೈತವೆಂದಾಗುವದು. ಮೊದಲು ನಾವು 'ಶಕ್ತಿ' ಯೆಂದರೇನೆಂಬದನ್ನು ವಿಚಾರಿಸುವಾ. ವೀರಶೈವರಲ್ಲಿ ಶಕ್ತಿ ಯೆಂದರೆ ಶಾಕ್ತರು ಆರಾಧಿಸುವ ಶಕ್ತಿಯೆಂತಲ್ಲ. ಶಕ್ತಿಯೆಂದರೆ ಆದಿ ಶಕ್ತಿ ಮಹಾಮಾಯೆಯೆಂತಲೂ ಅಲ್ಲ. ಶಾರೀರಿಕ ಅಥವಾ ಪಾಶವಿಕ ಶಕ್ತಿ ಯಂತೂ ಅಲ್ಲವೇ ಅಲ್ಲ. ಶಕ್ತಿಯೆಂದರೆ ವೀರಶೈವರಲ್ಲಿ ಭಕ್ತಿಯೆಂಬಿಷ್ಟೇ ಅರ್ಥವಲ್ಲದೆ ಬೇರೊಂದಲ್ಲ. ಭಕ್ತಿಯೆಂದರೆ ಪರವಸ್ತುವೂ ತಾನೂ ಭಿನ್ನ ವೆಂದು ತಿಳಿದು ಪ್ರೇಮದಿಂದ ಆ ವಸ್ತುವನ್ನು ಆರಾಧಿಸುವ ಭಾವನೆಯು. ಒಟ್ಟಿಗೆ ದ್ವೈತನಾಗಿ ದಾಸೋಹಂ ಭಾವದಿಂದ ನಡೆಯುವದೇ ಭಕ್ತಿಯು. ಇದೇ ಶಕ್ತಿಯು.

ಅದ್ವೈತವೆಂದರೆ ಪರವಸ್ತುವೂ ತಾನೂ ಒಂದೇ, ಭಿನ್ನವಲ್ಲ ಎಂದು ಅಂತಃ ಪ್ರೇರಣೆಯಿಂದ ಅರಿಯುವ ಜ್ಞಾನವು. ಅರ್ಥಾತ್ ಸೋಽಹಂಭಾವನೆಯು. ಈ ಜ್ಞಾನವು ಇಂದ್ರಿಯುಗಳಿಗೆ ಗೋಚರವಾಗುವ ಸಾಮಾನ್ಯಜ್ಞಾನವಲ್ಲ; ಶಾಸ್ತ್ರದ ಸಂಘರ್ಷಣದಿಂದ ಹುಟ್ಟಿದುದಲ್ಲ. ಅಥವಾ ತರ್ಕದ ಚರ್ವಣದಿಂದುದಿಸಿದ್ದಲ್ಲ. ಆದರೆ ಅದು ಭಕ್ತಿಯ ಮಂಥನದಿಂದ ಜನಿತವಾದ ನವನೀತವು. ಆದುದರಿಂದ ಶಕ್ತಿವಿಶಿಷ್ಟಾದ್ವೈತವೆಂದರೆ ಭಕ್ತಿಯಿಂದ ಕೂಡಿದ ಜ್ಞಾನವೆಂಬರ್ಥವು. ಭಕ್ತಿಜ್ಞಾನ ಸಮುಚ್ಚಯವೇ ಶಕ್ತಿವಿಶಿಷ್ಟಾದ್ವೈತದ ತಿರುಳು.

ಆದರೆ ಮನುಷ್ಯನು ದ್ವೈತನಾಗಲಿ ಅದ್ವೈತನಾಗಲಿ ಇರಬಹುದು. ಎರಡೂ ಕೂಡಿ ಇರುವ ಬಗೆ ಹೇಗೆ? ಎಂದು ಯಾರಾದರೂ ಪ್ರಶ್ನೆ ಮಾಡಬಹುದು. ಇದಲ್ಲದೆ ವೀರಶೈವ ಗ್ರಂಥಗಳಲ್ಲಿ ಕ್ರಿಯಾಜ್ಞಾನ ಸಮುಚ್ಚಯವೇ ವೀರಶೈವ ಮತತತ್ವವೆಂದು ಪ್ರತಿಪಾದಿಸಿದ್ದು ನಾವು ಮಾಡಿದ ಅರ್ಥವು ಭಕ್ತಿಜ್ಞಾನ ಸಮುಚ್ಚಯುವೆಂದಾಯಿತು. ಅಂದ ಮೇಲೆ ಕ್ರಿಯಾ ಭಕ್ತಿಗಳು ಒಂದೆಯೋ ಹೇಗೆ? ಒಂದೇ ಆಗಿದ್ದರೆ ಅವುಗಳನ್ನು ಹೇಗೆ ಸುಸಂಗತಗೊಳಿಸಬೇಕು? ಎಂಬ ಇನ್ನೊಂದು ಪ್ರಶ್ನೆಯು ಹೊರಡುವದು. ಇವುಗಳ ವಿಷಯುವಾಗಿ ಇಲ್ಲಿ ವಿವೇಚಿಸುವದೂ ಅವಶ್ಯಕವಾಗಿದೆ.

ಪರವಸ್ತುವೂ ತಾನೂ ಭಿನ್ನವೆಂದು ತಿಳಿದು ದ್ವೈತ ಭಾವದಿಂದ ಭಕ್ತಿಯನ್ನು ವಹಿಸುವದು ನಿಶ್ರೇಯಸಪದವಿಯ ಮೊದಲನೆಯ ಸೋಪಾನವು. ಆ ಪರವಸ್ತುವೂ ತಾನೂ ಒಂದೇ ಎಂಬ ಅದ್ವೈತಭಾವದ ಜ್ಞಾನವು ಮೋಕ್ಷಶಿಖರದ ಎರಡನೆಯ ಮೆಟ್ಟಿಲು. ಭಕ್ತಿಯು ಸಾಧಕ ಸ್ಥಿತಿಯಲ್ಲಿರುತ್ತದೆ. ಆದರೆ ಜ್ಞಾನವು ಸಿದ್ಧಾವಸ್ಥೆಯಲ್ಲಿರುತ್ತದೆ. ಭಕ್ತನು ಅರ್ಥಾತ್ ದ್ವೈತನು ಮೊದಲು ಭಕ್ತಿಯನ್ನು ಸಾಧಿಸುತ್ತ ಹೋದಂತೆ ಅದರ ಸಂಸರ್ಗದಿಂದ ಆತನಿಗೆ ಮುಂದೆ ಪರಿಪಕ್ವವಾದ ಅದ್ವೈತಭಾವವು ಅರ್ಥಾತ್ ಜ್ಞಾನವು ಪರಿಣಮಿಸುವದು. ಮಿಡಿಯು ಪಣ್ಣಾಗುವಂತೆಯೂ ಎಳೆಗರುವು ಎತ್ತಾಗುವಂತೆಯೂ ಭಕ್ತಿಯು ಜ್ಞಾನವಾಗುವದು. ಭಕ್ತಿಯು ನಿಶ್ರೇಯಸಪದವಿಯ ಶೈಶವಾವಸ್ಥೆಯು, ಜ್ಞಾನವು ವಾರ್ಧಿಕ್ಯಾವಸ್ಥೆಯು. ಮನುಷ್ಯನ ಬೆಳವಣಿಗೆಗೆ ಶೈಶವ ವಾರ್ಧಿಕ್ಯಗಳು ಹೇಗೆ ಅವಶ್ಯಕವೋ ಹಾಗೆಯೇ ವೀರಶೈವನಿಗೆ ಭಕ್ತಿಜ್ಞಾನಗಳೆರಡೂ ಮೋಕ್ಷಪದವನ್ನು ಮುಟ್ಟಲಿಕ್ಕೆ ಅವಶ್ಯಕ. ಭಕ್ತಿಯ ನಂತರ ಜ್ಞಾನವು ಹುಟ್ಟುವದು ಸ್ವಾಭಾವಿಕವು

ಮನುಷ್ಯನು ಕಡೆತನಕ ದ್ವೈತನಾಗಿಯೇ ಉಳಿದರೆ ಆತನ ಆತ್ಮವಿಕಾಸವು ಪರಿಪೂರ್ಣವಾಗಿಲ್ಲೆಂಬ ಹಾಗಾಗುತ್ತದೆ. ದ್ವೈತಿಯಾಗದೆ ಒಮ್ಮೆಲೆ ಅದ್ವೈತಿಯೆಂದು ಹೇಳಿಕೊಳ್ಳುವದೆಂದರೆ ಕೂಸಾಗಿ ಹುಟ್ಟದೆ ಒಮ್ಮೆಲೆ ಮತ್ತಜ್ಞನಾಗಿ ಹುಟ್ಟಿದಂತಾಗುತ್ತದೆ. ಇದು ಅಸಂಬದ್ಧವೂ ಅಸ್ವಾಭಾವಿಕವೂ ಆಗುವದು. ಆಧ್ಯಾತ್ಮಿಕ ಪ್ರಗತಿಗೆ ಈ ಎರಡೂ ಅವಸ್ಥೆಗಳು ಬೇಕೇಬೇಕು. ವೀರಶೈವ ಮತವು ದ್ವೈತ ಅದ್ವೈತ ಇವೆರಡು ಮತಗಳನ್ನು ಸುಗಮವಾಗಿ ಒಂದುಗೂಡಿಸುವದರಿಂದ ಅದಕ್ಕೆ ದ್ವೈತಾದ್ವೈತವೆಂಬ ಹೆಸರು ಪ್ರಾಪ್ತವಾಗಿದೆ. ಇವೆರಡೂ ಅವಸ್ಥೆಗಳಿಗೆ ಭಕ್ತ ಜಂಗಮ, ಸಾಧಕ ಸಿದ್ಧ ಎಂಬ ಬೇರೆ ಹೆಸರುಗಳೂ ಉಂಟು.

ದ್ವೈತಾದ್ವೈತಗಳ ಸಂಬಂಧವನ್ನು ನಮ್ಮ ಹಿರಿಯರು ಒಂದು ಮನೋರಂಜಕವಾದ ಚಿಕ್ಕ ದೃಷ್ಟಾಂತದಿಂದ ತೋರಿಸಿಕೊಟ್ಟಿದ್ದಾರೆ. ಅದು ಹೇಗಂದರೆ:— ಒಂದು ಸಿಂಹದ ಮರಿಯು ತಾಯಿಯನ್ನು ತಪ್ಪಿಸಿಕೊಂಡು ಕುರಿಮರಿಗಳ ಸಹವಾಸಕ್ಕೆ ಬಿದ್ದು ತಾನೂ ಕುರಿಯೆಂದೇ ಭಾವಿಸಿ ಸ್ವಸ್ವರೂಪವನ್ನು ಮರೆತು ಬೇರೊಂದು ಸಿಂಹವನ್ನು ಕಂಡು ಕುರಿಗಳಂತೆ ಭಯಭೀತಿಯಿಂದ ನಡೆದುಕೊಳ್ಳಹತ್ತಿತು. ಆ ಸಿಂಹವೂ ತಾನೂ ಬೇರೆಯೆಂದು ತಿಳಿದು ಅದು ಆಚರಿಸಲಾರಂಭಿಸಿತು. ಆದರೆ ಬರಬರುತ್ತ ಅದಕ್ಕೆ ಜ್ಞಾನೋದಯವಾಗಲು ಆ ಸಿಂಹವೂ ತಾನೂ ಒಂದೇ ಎಂಬ ಭಾವವು ಅದಕ್ಕೆ ಅಳವಟ್ಟಿತು. ಅದರಂತೆಯೇ ಪರಮಾತ್ಮನಿಂದ ತಪ್ಪಿಸಿಕೊಂಡ ಜೀವಿಯು ಸಂಸಾರದಲ್ಲಿ ಸಿಲುಕಿ ತಾನು ಪರಮಾತ್ಮನ ಅಂಶೀಭೂತನೆಂಬದನ್ನು ಮರೆತು ತನ್ನ ಜೀವದ ಕಳವಳಕ್ಕಾಗಿ ಆ ಪರವಸ್ತುವೂ ತಾನೂ ಬೇರೆಯೆಂದು ಭಾವಿಸಿ ಆತನನ್ನು ಮರೆಹೊಗುವನು. ಇದೇ ಭಕ್ತಿಯ ಸ್ಥಿತಿಯು. ಮುಂದೆ ಆ ಜೀವಿಗೆ ಜ್ಞಾನಾವಸ್ಥೆಯು ಪ್ರಾಪ್ತವಾಗಲು ಆ ಪರವಸ್ತುವೂ ತಾನೂ ಒಂದೆಂಬ ಭಾವವಳವಡುವದು. ಇದೇ ದ್ವೈತಾದ್ವೈತ ಅಥವಾ ಶಕ್ತಿವಿಶಿಷ್ಟಾದ್ವೈತವನ್ನು ಪ್ರತಿಪಾದಿಸುವ ಜಾಣ್ಮೆಯು.

ಇನ್ನು ಭಕ್ತಿಯೂ ಕ್ರಿಯೆಯೂ ಒಂದೆಯೋ ಹೇಗೆಂಬವನ್ನಿಷ್ಟು ವಿಚಾರಿಸೋಣ, ಭಕ್ತಿಯ ಬಾಹ್ಯರೂಪವೇ ಕ್ರಿಯೆಯೆನಿಸಿಕೊಳ್ಳುತ್ತದೆ. ನಮ್ಮ ಮನಸ್ಸಿನ ವಿಚಾರಗಳು ಶಬ್ದರೂಪದಿಂದ ಹೊರಬೀಳುವಂತೆ ನಮ್ಮಂತರಂಗದ ಭಕ್ತಿಯು ಬಾಹ್ಯದಲ್ಲಿ ಕ್ರಿಯಾರೂಪವಾಗಿ ಹೊರಬೀಳುತ್ತದೆ.

ನಮ್ಮ ಮನಸ್ಸಿನ ವಿಚಾರಗಳಿಗೂ ಆ ವಿಚಾರಗಳನ್ನು ವ್ಯಕ್ತಗೊಳಿಸುವ ಶಬ್ದಗಳಿಗೂ ಸ್ವಲ್ಪವೂ ಭಿನ್ನತೆಯು ತೋರದಂತೆ ನಮ್ಮಂತರಂಗದಲ್ಲಿ ಜನಿಸಿದ ಭಕ್ತಿಗೂ ಬಾಹ್ಯದಲ್ಲಿ ತೋರುವ ಕ್ರಿಯೆಗೂ ಎಳ್ಳಷ್ಟು ವ್ಯತ್ಯಾಸ ತೋರುವದಿಲ್ಲ. ವರಕವಿಯ ಅಂತರಂಗದ ಸ್ಫೂರ್ತಿಯೇ ಕಾವ್ಯರೂಪ ವಾಗಿ ಹೊರಹೊಮ್ಮುವಂತೆಯೂ ಚಿತ್ರಗಾರನ ಮನದಾನಂದವೇ ರೂಪು ಗೊಂಡು ಒಂದು ಚಿತ್ರವಾದಂತೆಯೂ ನಮ್ಮಂಥರಾತ್ಮವೇ ಇಷ್ಟಲಿಂಗ ರೂಪದಿಂದ ನಮ್ಮ ಕರಸ್ಥಲದಲ್ಲಿ ನೆಲಿಸಿದಂತೆಯೂ ನಮ್ಮ ಭಕ್ತಿಯೇ ಬಾಹ್ಯದಲ್ಲಿ ಲಿಂಗಾರ್ಚನಾದಿ ಕ್ರಿಯೆಗಳಿಂದ ಕಂಗೊಳಿಸುವದು. ನಾವು ಪತ್ರಿ, ಪುಷ್ಪ ಧೂಪದೀಪಾದಿಗಳಿಂದ ಲಿಂಗಯ್ಯನನ್ನು ಅಂದಚಂದವಾಗಿ ಪೂಜಿಸುವ ಕ್ರಿಯೆಯಲ್ಲಿ ಆಂತರಿಕ ಸೌಂದರ್ಯ ( *Aesthetic beauty* ) ವಿರುತ್ತದೆ. ವೀರಶೈವರಲ್ಲಿ ಲಿಂಗಾರ್ಚನಾವಿಧಿಯೇ ಕ್ರಿಯೆ ಯೆಂದೆನಿಸಿಕೊಳ್ಳುತ್ತದೆ. ಇದೇ ಭಕ್ತಿಯು ಹೆಗ್ಗುರುತು. ಆದುದರಿಂದ ಭಕ್ತಿಕ್ರಿಯೆಗಳೆರಡೂ ಒಂದೇ ಅಲ್ಲದೆ ಭಿನ್ನವಲ್ಲ.

ಕ್ರಿಯೆಯು 'ಕೃ' ಎಂಬ ಧಾತುವಿನಿಂದ ಹುಟ್ಟಿದೆ. ಅದರಂತೆ ಕರ್ಮವೂ ಅದೇ ಧಾತುವಿನಿಂದ ಹುಟ್ಟಿದೆ. ಆದುದರಿಂದ ಕ್ರಿಯಾಕರ್ಮ ಗಳೆರಡೂ ಒಂದೇ ಎಂದು ಯಾರೂ ತಿಳಿಯಬಾರದು. ಕರ್ಮವೆಂದರೆ ಮನುಷ್ಯನು ಜಗತ್ತಿನಲ್ಲಿ ಮಾಡುವ ಪಾಪ ಅಥವಾ ಪುಣ್ಯದ ಕೆಲಸ. ಕ್ರಿಯೆಯೆಂದರೆ ಅಂತರಂಗದ ಭಕ್ತಿಯನ್ನು ಬಾಹ್ಯದಲ್ಲಿ ತೋರಿಸುವ ವಿಧಾ ನವು. ಆದರೆ ಏನೂ ಅರ್ಥವಿಲ್ಲವೆ ಯಂತ್ರದಂತೆ ಮಾಡುವ ಧಾರ್ಮಿಕ ವಿಧಾನ(*Ritual*)ವಲ್ಲ. ನಿರರ್ಥಕವಾದ ಯಾಂತ್ರಿಕ ವಿಧಾನಗಳಿಂದ ಮನುಷ್ಯನ ಆಧ್ಯಾತ್ಮಿಕೋನ್ನತಿಯಾಗದೆ ಆತನಲ್ಲಿ ಡಂಭಾಚಾರವೂ ಸಂಕು ಚಿತ ಭಾವವೂ ಬೆಳೆಯುತ್ತ ಹೋಗುತ್ತವೆ. ಆದರೆ ಭಕ್ತಿಯ ಬಾಹ್ಯ ರೂಪವಾದ ಕ್ರಿಯೆಗಳನ್ನು ಆಚರಿಸುವದರಿಂದ ಮನುಷ್ಯನ ಆಧ್ಯಾತ್ಮಿಕ ಪ್ರಗತಿ ಯಾಗುವದಲ್ಲದೆ ಅದರಿಂದ ಜ್ಞಾನವು ಕೈಸಾರುವದು. ನಮ್ಮ ಶಿವಶರ ಣರು ಡಂಭಾಚಾರಗಳನ್ನೂ ಸಂಕುಚಿತವಾದ ಮೂಢ ಭಾವನೆಯನ್ನೂ ನಿಷೇಧಿಸಿ ಭಕ್ತಿಪುರಸ್ಸರವಾದ ಕ್ರಿಯೆಗೆ ಪ್ರೋತ್ಸಾಹವನ್ನಿತ್ತಿರುವರು.

ಶಕ್ತಿವಿಶಿಷ್ಟಾದ್ವೈತಮವು ಬದ್ಧಿಗಮ್ಯ (*Rational*) ವಾದದ್ದಲ್ಲ, ಅಥವಾ ಡಂಭಾಚಾರ(*Hypocricy*)ದಿಂದುಂಟಾದುದಲ್ಲ, ಅಥವಾ ಮೂಢ ಭಾವನೆ(*Superstition*)ಗೆ ಇಂಬುಗೊಡುವಂಥಹದಲ್ಲ. ಅದು ಪರಿಶುದ್ಧ

ನಾದ ಆತ್ಮವಿಕಾಸದ ಪರಿಪಾಕವಿರುತ್ತದೆ. ಅದು ಬುದ್ಧಿ ಅಥವಾ ವಿಚಾರವನ್ನಾಶ್ರಯಿಸದೆ ಕೇವಲ ಭಾವನಾಮಯವಾದ ಭಕ್ತಿಯಿಂದ ಬೆಳೆದಿರುವದಾದ್ದರಿಂದ ಅದು ವೈಚಾರಿಕ ಮತವಲ್ಲವೆಂಬ ಮಾತು ಸ್ಪಷ್ಟವು. ಯಾಕಂದರೆ ಈ ಆಧ್ಯಾತ್ಮಿಕಾನಂದವು ಶಾಸ್ತ್ರೀಯ ವಿಷಯ ಗಣಿತಗಳಂತೆ ವಿಚಾರಕ್ಕೆ ಸಿಲುಕುವಂಥಹದಲ್ಲ. ಮಾತಿನಿಂದ ಮರ್ಯಾದಿಸಲ್ಪಟ್ಟು ಒಡೆ ಮಾಡಲಿಕ್ಕೆ ಬರುವಂಥಹದಲ್ಲ. ಆದರೆ ಅದು ಅಂತಃಪ್ರೇರಿತಸ್ಫೂರ್ತಿ (*Intuition*)ಗಷ್ಟೇ ಹೊಳೆಯುವಂಥಹದು.

ನಮ್ಮ ಶಿವಶರಣರು ಆತ್ಮಸ್ಫೂರ್ತಿಯಿಲ್ಲದೆ ಬರೇ ಮೊಟ್ಟೆ ಮೊಟ್ಟೆ ಪತ್ರಿಪುಷ್ಪವನೊಟ್ಟಿಯೊಟ್ಟಿ ಪೂಜಿಸುವ ಡಾಂಭಿಕರನ್ನೂ ಅವರ ಡಂಭಾಚಾರವನ್ನೂ ತಮ್ಮ ವಚನಗಳಲ್ಲಿ ಒಳಿತಾಗಿ ಹೊಡೆದು ಹಾಕಿರುವದರಿಂದ ಶಕ್ತಿವಿಶಿಷ್ಟಾದ್ವೈತಮತವು ಡಂಭಾಚಾರದ್ದೂ ಅಲ್ಲವೆಂದಹಾಗಾಯಿತು. ಈ ಮತದಲ್ಲಿ ಮೂಢ ಭಾವನೆಗೂ ಆಸ್ಪದವಿಲ್ಲ. ಯಾಕಂದರೆ ಮೂಢ ಭಾವನೆಯು ಅಜ್ಞಾನದ ಕುರುಹು. ಆದರೆ ವೀರಶೈವರ ಭಾವನೆಯು ಆತ್ಮಸ್ಫೂರ್ತಿಯಿಂದ ಪ್ರೇರೇಪಿತವಾದದ್ದು ಅವರ ಭಾವನೆಯಲ್ಲಿ ಚೈತನ್ಯವಿದೆ. ದಿವ್ಯವಾದ ಓಜಸ್ಸು ಕಾಂತಿಗಳಿವೆ. ಆದುದರಿಂದ ಇದು ಸ್ವಯಂಪ್ರಕಾಶಿತವಾದ ಮತವೆಂದು ಹೇಳಬಹುದು.

ಶಕ್ತಿವಿಶಿಷ್ಟಾದ್ವೈತಮತವು ಮಾನಸ ಶಾಸ್ತ್ರದ ತತ್ವದಿಂದ ವಿಕಾಸ ಹೊಂದಿದೆ. ಮನುಷ್ಯನ ಮನಸ್ಸು ಮೊದಲು ಕಾಡಸ್ಥಿತಿಯಲ್ಲಿದ್ದು ಕಾಲಾಂತರದಿಂದ ಬೆಳವಣಿಗೆ ಹೊಂದುತ್ತ ಸುಧಾರಣೆಯ ಸ್ಥಿತಿಗೆ ಬರುವದೆಂದು ಮಾನಸಶಾಸ್ತ್ರದ ಮುಖ್ಯ ತತ್ವವಿರುತ್ತದೆ. ನಮ್ಮ ಪೂರ್ವಜರು ಒಂದಾನೊಂದು ಕಾಲದಲ್ಲಿ ದೃಶ್ಯರೂಪಿ ಪ್ರಕೃತಿಯನ್ನು ನೋಡಿ ಆನಂದಬಟ್ಟರು. ದೇವರ ಮೂರ್ತಿಗಳನ್ನು ಕಲ್ಲಿನಲ್ಲಿ ಕೊರೆದು ಹರ್ಷಹೊಂದಿದರು. ಮನುಷ್ಯನು ಎಂಥ ಸುಧಾರಣೆಯ ಸ್ಥಿತಿಗೇರಿದರೂ ಹಳೆಯ ಕಾಡಪದ್ಧತಿಗಳನ್ನು ಸಂಪೂರ್ಣವಾಗಿ ತ್ಯಜಿಸುವದಿಲ್ಲ. ಸಂಪೂರ್ಣವಾಗಿ ಎಲ್ಲ ಹೊಸದನ್ನೇ ಪ್ರಸ್ಥಾಪಿಸುವದಿಲ್ಲ. ಈಗ ಎಷ್ಟೋ ಸುಸಂಸ್ಕೃತಿಯನ್ನು ಹೊಂದಿದ ಸಮಾಜಗಳಲ್ಲಿಯೂ ಕೂಡ ಹಿಂದಿನ ಕಾಲದ ವಿವಾಹವಿಧಿ, ಹಬ್ಬಹುಣ್ಣಿವೆ, ನಡೆನುಡಿ, ಧಾರ್ಮಿಕವಿಧಾನ ಮೊದಲಾದ ಸಂಸ್ಕಾರಗಳು ಹಾಗೆಯೇ ಉಳಿದಿವೆ.

ಮನುಷ್ಯನ ಮನಸ್ಸು ಸಂಪೂರ್ಣವಾಗಿ ಹಳೆಯದನ್ನು ಬಿಡಲೊಪ್ಪುವದಿಲ್ಲ. ಈ ರೂಢಾಚಾರ ಪ್ರೇಮವು (*conservation*) ಸುಧಾ

ರಕರಿಗಿಂತಲೂ ಸಾಮಾನ್ಯರಲ್ಲಿ ಹೆಚ್ಚಾಗಿ ಮಾನೆ ಮಾಡಿರುತ್ತದೆ. ಜನತೆಯು ಮನಸ್ಸು ಹಳೆಯದನ್ನು ಹಾಗೆಯೇ ಕಾಪಾಡಿಕೊಂಡಿರುವದರಲ್ಲಿ ಬಹಳ ಆನಂದಬಡುತ್ತದೆ. ಆದರೆ ಸುಧಾರಣಾಪ್ರಿಯನೂ ಪ್ರಗಮನಶೀಲನೂ ಆದ ಮನುಷ್ಯನು ಅನಾವಶ್ಯಕವೆಂದು ತೋರುವ ಹಳೆಯ ಆಚಾರಪದ್ಧತಿಗಳನ್ನು ಕಾಲಾಂತರದಿಂದ ವ್ಯತ್ಯಸ್ತಪಡಿಸಿ ಇಲ್ಲವೆ ಪರಿತ್ಯಜಿಸಿ ಹೊಸ ಹೊಸ ಆಚಾರಪದ್ಧತಿಗಳನ್ನು ಪ್ರಸ್ಥಾಪಿಸುವನು. ನಮ್ಮ ವೀರಶೈವ ಮತವು ಪ್ರಗಮನಶೀಲ (*creative*) ವಾದುದರಿಂದ ಹಿಂದಿನ ಕಾಡುಪದ್ಧತಿಗಳಾದ ನಿಸರ್ಗಪೂಜೆ, ಮೂರ್ತಿಪೂಜೆ ಮುಂತಾದವುಗಳಲ್ಲಿ ವ್ಯತ್ಯಾಸಮಾಡಿ ಲಿಂಗಪೂಜಾಕ್ರಿಯೆಯು ಕಡೆಗೆ ಸಾಮಾನ್ಯರ ಮನಸ್ಸಿನ ದಿಶೆಯನ್ನು ತಿರುಗಿಸಿರುತ್ತದೆ. ಮೂರ್ತಿಪೂಜೆಯು ಸಾಮಾನ್ಯರಿಗೆ ಪ್ರಿಯವಾದುದರಿಂದ ಅವರ ಮನಸ್ಸಿಗೆ ಅನುಕೂಲವಾಗಿ ಹಿಂದಿನ ಅವಶೇಷವಾದ ಲಿಂಗಪೂಜೆಯನ್ನು ಇಡಲೇಬೇಕಾಯಿತು. ಮಾನಸಿಕ ಶಾಸ್ತ್ರದ ದೃಷ್ಟಿಯಿಂದ ಸಾಮಾನ್ಯರ ಭಾವನೆಯನ್ನು ಬಲಿಸಲಿಕ್ಕೆ ಲಿಂಗಪೂಜಾಕ್ರಿಯೆಯು ಅತ್ಯಾವಶ್ಯಕವೆಂದು ನಮ್ಮ ಶಿವಶರಣರಿಗೆ ತಿಳಿದಿರಬೇಕು.

ಸಾಕಾರ (*concrete*) ವಸ್ತುಗಳಲ್ಲಿ ಮೊದಲು ಮನಸ್ಸು ಸಂಸ್ಕೃತಿಯನ್ನು ಹೊಂದಿದನಂತರ ಪ್ರಗತಿವಶದಿಂದ ಅದು ನಿರಾಕಾರ (*abstract*) ವಸ್ತುವಿನ ಕಡೆಗೆ ತಿರುಗುವದು ಮನಸ್ಸಿನ ಧರ್ಮವು. ನಿರಾಕಾರದ ಕಡೆಗೆ ತಿರುಗುವಾಗ ಆದು ಸಾಕಾರವನ್ನೆಂದಿಗೂ ವರ್ಜಿಸುವದಿಲ್ಲ. ಸಾಕಾರವನ್ನು ಹಿಡಿದೇ ಸಾಗುವದು. ಮನುಷ್ಯನಿಗೆ ಮೊದಮೊದಲು ನಿರಾಕಾರವೆಂಬುದೇ ಗೊತ್ತಿರಲಿಲ್ಲ. ಮನುಷ್ಯರಾಡುವ ಶಬ್ದಗಳಲ್ಲಿಯೂ ಕೂಡ ಮೊದಲು ಭಾವವಾಚಕಶಬ್ದಗಳಿರದೆ ಕೇವಲ ವಸ್ತುವಾಚಕಗಳೇ ಇದ್ದವು. ಕಾಲವಶದಿಂದ ವಸ್ತುವಾಚಕ ಶಬ್ದಗಳು ಭಾವವಾಚಕಗಳಾಗಿವೆ. ಉದಾ 'ಅವರ ಉರುವಣಿಗೆಯು ತಗ್ಗಲಿ' ಈ ವಾಕ್ಯದಲ್ಲಿ 'ಉರುವಣಿಗೆ' ಈ ಶಬ್ದವು ಬೆಂಕಿಯ ಉರಿಯುವಿಕೆ ಈ ಅರ್ಥದಿಂದ ವಸ್ತುವಾಚಕವಿದ್ದು ಮುಂದೆ ಸಾದೃಶ್ಯವಶದಿಂದ ಮನಸ್ಸಿನ ಉದ್ವೇಗಕ್ಕೂ ಅದು ಹತ್ತಿ ಭಾವವಾಚಕವಾಗಿದೆ. ಅದರಂತೆ 'ತಗ್ಗಲಿ' ಈ ಶಬ್ದದಲ್ಲಿ 'ತಗ್ಗು' ಅಂದರೆ ಇಳಿತರವಾದ ಸ್ಥಳ ಎಂಬರ್ಥದಿಂದ ವಸ್ತುವಾಚಕವಿದ್ದು ಮುಂದೆ 'ಕುಗ್ಗು' ಎಂಬರ್ಥದ ಭಾವವಾಚಕದಿಂದ ಪ್ರಚಲಿತವಾಗಿದೆ. ಆದಕಾರಣ ಸಾಕಾರಯುಕ್ತವಾದ ವಸ್ತುವಿನಲ್ಲಿ ಭಕ್ತಿಯನ್ನಿಡುವದು ಪ್ರಾಕೃತವಾದ ದ್ವೈತ

ಸ್ವಭಾವವು. ಇದು ಆಧ್ಯಾತ್ಮಿಕ ಬೆಳವಣಿಗೆಯ ಮೊದಲನೆಯ ಸ್ಥಿತಿಯು. ಇದೇ ಭಕ್ತಿಯೇ ಮುಂದೆ ಪ್ರಗತಿವಶದಿಂದ ನಿರಾಕಾರವಾದ ಜ್ಞಾನವಾಗುವದು. ಅದಕ್ಕೇ ಅದ್ವೈತವೆನ್ನುವರು. ಇದು ಆಧ್ಯಾತ್ಮಿಕ ಬೆಳವಣಿಗೆಯ ಎರಡನೆಯ ಸ್ಥಿತಿಯು.

ಹೇಗೆ ಜನಾಂಗದ ಬೆಳವಣಿಗೆಯೋ ಹಾಗೆಯೇ ವ್ಯಕ್ತಿಯ ಬೆಳವಣಿಗೆಯು ಕಾಲಸಂಸ್ಕೃತಿಯ ನಿಯಮ (*Culture epoch theory*) ವನ್ನವಲಂಬಿಸಿದೆ. ಅಂದರೆ ಮನುಷ್ಯ ವ್ಯಕ್ತಿಯ ಬೆಳವಣಿಗೆಯು ಜನಾಂಗವು ಸಾಕಾರದಿಂದಿ ನಿರಾಕಾರದ ಕಡೆಗೆ ಗಮಿಸಿದಂತೆಯೇ ಪ್ರಗತಿಯನ್ನು ಹೊಂದುವದು. ದ್ವೈತಾದ್ವೈತಗಳೆರಡರಲ್ಲಿ ಪರಸ್ಪರ ನಿಕಟಸಂಬಂಧವಿರುವದರಿಂದ ಒಂದು ಬಿಟ್ಟು ಒಂದು ಇರಲಾರದು. ಅಂತೆಯೇ ಶಕ್ತಿವಿಶಿಷ್ಟಾದ್ವೈತವೆಂದು ನಮ್ಮ ಮತಕ್ಕೆ ಹೆಸರು ಪ್ರಾಪ್ತವಾಗಿದೆ.

ನಮ್ಮ ಮತದಲ್ಲಿ ಚೈತನ್ಯ ಮಧ್ವಾಚಾರ್ಯರಂತೆ ಅಸಾಧಾರಣ ಭಕ್ತಿವಂತರೆಷ್ಟೋ ಜನರಾಗಿ ಹೋಗಿರುವರು. ಅವರಲ್ಲಿ ಬಸವೇಶನು ಅಗ್ರಗಣ್ಯನಾಗಿದ್ದಾನೆ. ಬಸವನ ಭಕ್ತಿಯ ಬೆಳಕು ಕರ್ನಾಟಕವೆಂಬ ಪ್ರಣತಿಯಲ್ಲಿ ಈಗಲೂ ಪ್ರಜ್ವಲಿಸುತ್ತದೆ. ಆತನಲ್ಲಿ ಭಕ್ತಿಯು ಅತಿರೇಕವಾದುದರಿಂದಲೇ ಆತನ ಬಗ್ಗೆ ಜನರಹೃದಯಗಳು ಆನಂದದಿಂದ ಪ್ರಫುಲ್ಲಿತವಾಗುವವು. ಬಸವ ಬಸವಾ ಎಂದು ಹಾಡಿ ಕುಣಿದು ನಲಿದಾಡುವರು.

ಬಸವೇಶ್ವರನಲ್ಲಿ ಭಕ್ತಿಯಷ್ಟೇ ಅಧಿಕನಾಗಿದ್ದಿತು. ಆದರೆ ಜ್ಞಾನವು ಅವನಲ್ಲಿದ್ದಿಲ್ಲೆಂದು ಕೆಲವರು ಹೇಳುವರು. ಇದು ಕೇವಲ ಹುಚ್ಚುತನವು. ಭಕ್ತಿಯಿಂದಲೇ ಜ್ಞಾನವು ಉದಯಿಸುವದರಿಂದ ಭಕ್ತಿಯು ಆತನಲ್ಲಿ ಹೆಚ್ಚಾಗಿದ್ದರೆ ಆ ಪ್ರಮಾಣದಿಂದ ಜ್ಞಾನವೂ ಹೆಚ್ಚಾಗಿರಲೇಬೇಕೆಂಬುದು ಸಿದ್ಧಾಂತವು. ಆತನ ಜ್ಞಾನವು ಅಂತರಂಗಕ್ಕೆ ಹೊಳೆದಂತಹದು. ಆದರೆ ಬಾಯಿಯಿಂದ ಆಡಿ ತೋರಿಸುವಂತಹದಲ್ಲ. ಆದುದರಿಂದಲೇ ಶೂನ್ಯಸಂಪಾದನೆಯಲ್ಲಿ ಆತನು ಎಷ್ಟೋ ಕಡೆಗೆ 'ಕೂಡಲಸಂಗಮದೇವಾ, ನಿಮ್ಮ ನಿಲವನಾನೆತ್ತ ಬಲ್ಲೆನಯ್ಯಾ ನಿಮ್ಮ ಶರಣ ಚನ್ನಬಸವಣ್ಣ ಬಲ್ಲ. ಗುಹೇಶ್ವರನ ಶರಣ ಪ್ರಭುದೇವಬಲ್ಲ. ಇತ್ಯಾದಿಯಾಗಿ ಹೇಳಿಕೊಂಡಿದ್ದಾನೆ. ಪರಮಾತ್ಮನ ನಿಲವನ್ನು ಹೇಳಲಿಕ್ಕೆ ಬಾರ

ದಿರುವದರಿಂದ ಬಸವನು ಅಜ್ಞೇಯವಾದಿಯಾಗಿದ್ದನೆಂತಲ್ಲ. ಅಜ್ಞೇಯವಾದಿಗಳಿಗೆ ಪರಮಾತ್ಮನ ನಿಲವೇ ಗೋಚರವಾಗುವದಿಲ್ಲ. ಆದರೆ ಬಸವಾದಿ ಪ್ರಮಥರು ಪರವಸ್ತುವಿನ ನಿಲವನ್ನರಿತಿದ್ದರೂ ಬಾಯಿಯಿಂದ ಹೇಳಲಿಕ್ಕೆ ಬಾರದಂಥವರು. ಯಾಕಂದರೆ ಪರಮಾತ್ಮನ ನಿಲವು ವಾಚಾಮಗೋಚರವಾದುದು. ಅಂತೆಯೇ ಪ್ರಭುದೇವರು "ಅರಿದವರು ಅರಿದೆವೆಂಬರೇ ? ಗುಹೇಶ್ವರಾ" ಎಂಬುದಾಗಿ ಅಪ್ಪಣೆಕೊಡಿಸಿದ್ದಾರೆ ಶಬ್ದಬ್ರಹ್ಮವೇನೂ ಜ್ಞಾನಿಗಳ ಮುಖ್ಯ ಲಕ್ಷಣವಲ್ಲ. ಅಂತರಂಗವಿಕಾಸ ಆತ್ಮಸಾಕ್ಷಾತ್ಕಾರಗಳೇ ಜ್ಞಾನದ ನೆಲಗಟ್ಟುಗಳು ನಮ್ಮ ಶಿವಶರಣರು ಇಂತಹ ದಿವ್ಯಜ್ಞಾನಿಗಳು,

ನನಗೆ ಹೊಳೆದ ಶಕ್ತಿವಿಶಿಷ್ಟಾದ್ವೈತದ ರಹಸ್ಯವಿಷ್ಟೇ.

೧೫

ಕರ್ಪೂರಾರತಿ ಎತ್ತಿರಿ। ಕಾಂತೆಯರೆಲ್ಲ ಸರ್ವಭೂಷಣ ಶಿವಗೆ॥
ಸಪ್ಪಳಡಗಿದ ಶರಧಿಯಂದದಿ ಒಪ್ಪಿಧ್ಯಾನದೊಳಿರ್ಪ ಯೋಗಿಗಳೊಪ್ಪುವಂತಹ ಜ್ಯೋತಿ ಎನಿಸುವ ಸರ್ವಭೂಷಣ ಶಿವಗೆ ಸಾಂಬಶಿವಗೆ॥ಪ॥

ನಾದಬಿಂದುಗಳೆರಡ ಮೀರಿದ ತತ್ವದಾದಿ ಚಿತ್ಕಳೆಯಗ್ರದಿ। ಸಾಧಿಸುವ ವೇದಾಂತಿಗಳಿಗರಿದಾಗಿ ಚಿದ್ರೂಪಿನಲಿ ತೊಳಗಿ ವಿನೋದಿಸುವ ಪರನಾದದೊಳು ಚಿನ್ಮೋದಕಾರಣನಾದ ಶಾಂತಗೆ॥೧॥

ನೂರೊಂದು ಸ್ಥಲಗಳಿಗೆ ಮಂದಿರವಾದ ಮೂರು ಸಂಗಮ ಕ್ಷೇತ್ರದಿ। ಚಾರುತರವಿ ಶಶಿಕೋಟಿ ಪ್ರಭೆಗಳ ಮೀರಿ ಝಗಝಗಿಸುವ ಪರಾತ್ಪರ ತಾರಕವೆ ತಾನಾಗಿ ತೋರುವ ಸಾರತರ ದಿವ್ಯ ಪ್ರಕಾಶಗೆ॥೨॥

ಮಂಡಲತ್ರಯಮಧ್ಯದಿ ಬೆಳಗುತಿರ್ಪ ಖಂಡ ಪ್ರಣವಪೀಠದಿ। ಚಂಡಕರಮಾರ್ತಾಂಡಕಿರಣವನಂಡಲೆದು ರಾಜಿಸುವ ರುದ್ರರ ತಂಡದೊಳು ಮಂಡಿಸಿದ ಮಹಿಮೋದ್ದಂಡ ಪ್ರಭು ತೋಂಟದಾರ್ಯಗೆ॥೩॥

---

೧೬

ಮಂಗಳಾರತಿ ಬಸವಾದಿ ಪ್ರಮಥರಿಗೆ ಜಯ।
ಮಂಗಳಾರತಿ ತಂದು ಬೆಳಗುವೆ ಅಂಗಜ ಸಂಹಾರಗೆ॥ಪ॥
ಕಾಲಕಾಲನಿಗೆ ತ್ರಿಶೂಲಧರನಿಗೆ
ಬಾಲಚಂದ್ರನ ಸೂಡಿ ಮೆರೆಯುವ ಫಾಲಲೋಚನಗೆ॥೧॥
ದೇವದೇವನಿಗೆ ದೇವೇಶವಂದಿತಗೆ
ಪಾವನಾತ್ಮಕ ಪಾಲಿತಜನ ಪಾರ್ವತೀಶನಿಗೆ॥೨॥
ಧಾರುಣಿಯೊಳು ಸುವರ್ಣಪುರದೊಳಗೆ
ತೋರಿಮೆರೆಯುವ ವೃಷಾಧಿನಾಯಕ ಧೀರಬಸವನಿಗೆ॥೩॥

---

೧೭

ಕುಮಾರದೇವಗೆ ಮಂಗಳಂ ಶಿವಕುಮಾರನಿಗೆ ಜಯಮಂಗಳಂ।
ಅಮೋಘಕಾರ್ಯಂಗತುಲಿತಮಹಿಮಗೆ ಶಮಂತರಂಗಗೆ ಮಂಗಳಂ॥ಪ॥
ತಾರಕ ವಿಜಯಗೆ ಮಂಗಳಂ ಸುಕುಮಾರ ಶರೀರಗೆ ಮಂಗಳಂ।
ನಾರದ ಮುಖಮುನಿವಾರ ವಿನುತಪದನೀರದ ಯುಗಳಗೆ ಮಂಗಳಂ॥೧॥

ನತಜನಪೋಷಗೆ ಮಂಗಳಂ ಶ್ರೀಮಂತ ಕಪುರೀಶಗೆ ಮಂಗಳಂ ।
ಹಿತಮತಿಯೊಡನೊಲಿದೆಮ್ಮನು ಪೋಷಿಸ ಚದುರಹೃದಯಗೆ ॥೨॥

ಶಿಖಿವಾಹನನನಿಗೆ ಮಂಗಳಂ ಶಿವಸುಖಪ್ರಪೂರ್ಣಗೆ ಮಂಗಳಂ ।
ಅತುಲಿತಮಹಿಮ ಷಣ್ಮುಖದಿಂದೆಸೆಯುವ ಸಕಲಕಳಾಜ್ಞೆಗೆ ॥೩॥

---

೧೮

ಮಂಗಳಂ, ಜಯಮಂಗಳಂ, ಶುಭಮಂಗಳಂ, ಶಿವಮಂಗಳಂ
ಕಂಗಳಗ್ರದಿ ನಿಂದು ಚರಿಸುವ ಲಿಂಗದೇವಗೆ ಮಂಗಳಂ ॥ಪ॥

ತಾರಕೇಶಗೆ ಮಂಗಳಂ ಸುರಜಾಲಸೇವಿತ ಮಂಗಳಂ ।
ಮಾರಪಿತ ಕಮಲಾರ್ಚಿತಾಂಘ್ರಿ, ಕುಮಾರ ಪಿತನಿಗೆ ಮಂಗಳಂ ॥೧॥

ಕುಮುದ ಸಖಧರ ಮಂಗಳಂ, ಯಮಿಜನರ ಪೋಷಿಸ ಮಂಗಳಂ ।
ಅಮಿತವಿಕ್ರಮ ಭೀಮಪೂಜಿತ, ವಿಮಲ ಚರಿತನೆ ಮಂಗಳಂ ॥೨॥

ಮಂಗಳಾಂಗನೆ ಮಂಗಳಂ, ಜಗದ್ವಂದ್ಯರೂಪನೆ ಮಂಗಳಂ ।
ಸಂಗದೂರಕೃಪಾಂಗ ಪೂರಿತ, ಲಿಂಗಮಹಾಂತೇಶಗೆ ಮಂಗಳಂ ॥೩॥

---

೧೯

ನಾ ಬೆಳಗುವೆನು ಕಡ್ಡಿಬತ್ತಿ ಶಾಂತವೀರಗೆ । ಶಾಂತವೀರಗೆ । ಪೂರ್ಣ
ಶಾಂತಿಯುಳ್ಳಗೆ ॥ಪ॥

ಸುತ್ತಿತತ್ವ ಜಾಲಕಡ್ಡಿಬತ್ತಿ ಭಕ್ತಿಯ
ಘೃತದೊಳೊತ್ತಿನೆನಸಿ ಹತ್ತಿಸುತ್ತೆ ಜ್ಞಾನಜ್ಯೋತಿಯ ॥೧॥

ನೂರು ಒಂದು ಸ್ಥಲ ಶರೀರವಾದ ಧೀರಗೆ, ಸಾಂಬ ।
ಮೂರು ಪುರವ ಸುಟ್ಟ ಮಾರಾರಿ ಶೂರಗೆ ॥೨॥

ಭೈಕ್ಷಲೀಲ ಪರಮ ಮೋಹನೋಕ್ಷ ಗಮನಗೆ, ನಿತ್ಯ ।
ಮೋಕ್ಷವೀವ ಕಾಶೀವಿಶ್ವನಾಥ ದೇವಗೆ ॥೩॥

---

೨೦

ಜಯ ಸಚ್ಚಿದಾನಂದ ನಿತ್ಯ ಪರಿಪೂರ್ಣನಿಗೆ, ಜಯತೆಂದು ಜೀಗುವೆ ಸಕಲ ಬೀಜನಿಗೆ, ಜಯದೇವ ಜಯದೇವ ॥ಪ॥

ಬಿಂದು ಕಳೆನಾದಾದಿ ಜನಿಯಿಲ್ಲದಂದು ಇಂದುಧರಮುಖ ಲೀಲೆ ಇಲ್ಲದಂದು ॥ ಒಂದೇ ಪರವಸ್ತು ತಾನಾಗಿರುತಿಹುದೆಂದು ಚಂದದಿಂದೆತ್ತುವೆ ಒಂದಾರತಿಯನು ತಂದು ಜಯದೇವ ಜಯದೇವ ॥೧॥

ಗುರುಶಿಷ್ಯ ಶಿವಶಕ್ತಿ ಶಿವಜೀವರೆಂದು ಪರಪೂಜ್ಯ ಪೂಜಕ ಧನಿ ಭೃತ್ಯರೆಂದು ॥ ಚರ ಲಿಂಗವಂಗವಾಯ್ತುರದೆ ಮತ್ತೊಂದು ಎರಡಾರತಿಯನು ತಂದು ಬೆಳಗುವೆನೆಂದು ಜಯದೇವ ಜಯದೇವ ॥೨॥

ಮೂಲಿಂಗ ಮೂರಂಗ ಮೂರ್ದೇವರೆಂದು ಮೂಲೋಕ ಮೂರ್ತತ್ವ ಗುಣಮೂರ್ತ್ಯರೆಂದು ॥ ಲೀಲೆಯಿಂ ಮೂವರಣಕ್ಕೊಳಗಾಯಿತೆಂದು ಲೋಲದಿಂದೆತ್ತುವೆ ಮೂರಾರತಿ ತಂದು ಜಯದೇವ ಜಯದೇವ ॥೩॥

ನಾಲ್ಕು ತನು ಲಿಂಗ ಕಳೆ ಚಿದ್ಬಿಂದುನಾದ ನಾಲ್ಕು ಘಟಿತವಾಗಿ ಘನಲಿಂಗವಾದ ॥ ನಾಲ್ಕರಿಂ ಜಗದ ಘನಕೃತ್ಯವಹುದೆಂದು ನಾಲ್ಕಾರತಿಯನು ತಂದು ಬೆಳಗುವೆನೆಂದು ಜಯದೇವ ಜಯದೇವ ॥೪॥

ಪಂಚಮುಖ ಮನು ಕಳೆಯು ಮಾತ್ರೆ ಭೂತಗಳು ಪಂಚೀಕರಿಸಿ ಬ್ರಹ್ಮಾಂಡ ರಚನೆಗಳು॥ ಪಂಚಾಂಗಲಿಂಗ ಶ್ರೀ ವಿರೂಪಾಕ್ಷಗೆಂದು ಪಂಚಾರತಿಯನು ತಂದು ಬೆಳಗುವೆನೆಂದು ಜಯದೇವ ಜಯದೇವ ॥೫॥

---

೨೧

ಧೂಪೋಯಂ ಪ್ರತಿ ಗೃಹ್ಯತಾಂಜಯ । ಪಾಪಸಂಹಾರ ವಿಹಾರ ಮದ್ಗುರುವೆ ॥ಪ॥

ಭಕ್ತಸುವಾಸನ ಪರಿಮಳ ಸಹಿತಂ । ಯುಕ್ತಮನೋಗತ ಯೋಗವಿಚಾರಂ ॥೧॥

ಶ್ರೀಚಂದನ ಕರ್ಪೂರ ಗುಗ್ಗುಳಿತಂ ಶ್ರೀ ಮಹಿಸಾಕ್ಷಿ ಕೃಷ್ಣಾಗರುಸಹಿತಂ ॥೨॥

ದೇವದಾರು ಕರ್ಪೂರ ಶಿಲಾರಸ ಸುಗಂಧ ಸಮ್ಮಿಳಿತ ಮದ್ಗುರುವೆ ॥೩॥

---

೨೨

ಮಂಗಳಂ ಜಯಮಂಗಳಂ ಶುಭಮಂಗಳಂ ।
ಅಂಗಜಾಂಗಭಂಗ ಗಂಗಾಸಂಗತಮಕುಟ ॥ಪ॥

ಹರಿಸುರವರಕಿನ್ನರಕರ ಪೂಜಿತಚರಣ
ಉರಗಾಭರಣ ಪರಮಶರಣ ಕರಧೃತಹರಿಣ ॥೧॥

ಕುಂಜರಹತ ಮಂಜುಲಸುತ ಶಿರಸಭೇದಿತ
ಕಂಜಜಾತ ಗರ್ವದೂರ ಭಂಜಿತದುರಿತ ॥೨॥

ಈಶತ್ರಿದಶಪೋಷಗಿರೀಶ ಭಕ್ತಪಾಲಕ
ಆಶಾನಾಶ ಬಸವೇಶತೋಷಿತ ವೃಷಭ ॥೩॥

---

೨೩

ಶ್ರೀಗುರುವರಜಯತು ಭೋಗಿವಿಭೂಷ ಯೋಗಿವರ್ಯನೆಜಯತು ॥ಪಲ್ಲ॥

ಆಗಮಸ್ಮೃತಿನುತಚರಣಶಿವ । ತ್ಯಾಗಭೋಗವಿರಾಗರಹಿತನೆ ॥
ಯೋಗಿತತಿನುತಬಾಗಿನಮಿಸುತ । ಲೀಗಬೆಳಗುವೆಮುತ್ತಿನಾರತಿ ॥೧॥

ರುದ್ರಾಕ್ಷಿಮಂಟಪದಿ ಪ್ರಕಾಶಿಪ ರುದ್ರಾಕ್ಷಮಾಲಾಧರ ।
ರುದ್ರನಾಜ್ಞೆಯನನುಸರಿಸಿ ಭೂರುದ್ರನೆನಿಸಿದ ದೇವದೇವನೆ ।
ರುದ್ರಶರಣ ಸಮಾಜ ಸರ್ವದಾ ರುದ್ರತಾರಕ ಮಂತ್ರಜಪಿತನೆ ॥೨॥

ನಕ್ಷತ್ರಮಂಟಪದಿ ಪ್ರಕಾಶಿಪ ನಕ್ಷತ್ರಮಾಲಾಧರ ।
ಕುಕ್ಷಿಭುವನಾಧ್ಯಕ್ಷಶಂಕರ ಮೋಕ್ಷದಾಯಕ ಭಕ್ತಪಾಲಕ ।
ನಕ್ಷತ್ರಾಧಿಪಮಂಡಲದೊಳಗೆ ಲಕ್ಷದೀಪದ ಬೆಳಕಿನೊಳಗಿಹ ॥೩॥

ನಂದಿವಾಹನವನೇರಿ ಆನಂದದಿಂದ ಬರುವ ಸವಾರಿ ।
ನಂದಿಧ್ವಜಕುಣಿಯುತಲೆ ಮುಂಗಡೆ ಒಂದು ಸಾವಿರ ವಾದ್ಯಘೋಷದಿ ।
ನಿಂದುಪೊಗಳುವ ಭಕ್ತತತಿ ಉಘೆ ಎಂದು ನಲಿಯುತ ನಿತ್ಯತೋಷಿಪ ॥೪॥

ಪರಮವೈಭವದಿಂದಲಿ ಮೆರೆಯುವ ಚಾಟಕಪುರಿಯೊಳು ನೆಲಸಿಹನೆ;
ದುರಿತದೂರನೆ ಮರಣನಾಶನೆ ಕರುಣಾಸಾಗರ ಚನ್ನವೃಷಭನೆ ।
ಪರಮಪಾವನ ಮೂರ್ತಿ ಶಂಕರ ತರಳವೀರಾರಾಧ್ಯನತಪದ ॥೫॥

೨೪

ಪುಷ್ಪಾಂಜಲಿಯ ಸಮರ್ಪಿಸುವೆ । ಬಿಲ್ವಪುಷ್ಪ ಮಂಟಪದೊಳು
ರಾಜಿಪಗೆ, ಶಿವಗೆ ॥ಪ॥

ಸುರಮುನಿವಂದಿತ ಚರಣನಿಗೆ, ವರಗುಣಮಣಿಗಣ ಹಾರನಿಗೆ
ಸ್ಮರದರ್ಪ ಹರನಿಗೆ ದುರಿತ ವಿಹರಗೆ, ಗುರುಸಂಗಮೇಶನ ಚರಜಾತಗೆ,
ಶಿವಗೆ ॥೧॥

ಕಾಲಕರ್ಮವ ಗೆಲಿದ ಭವನಿಗೆ, ಶೀಲಸೋಮೇಶ್ವರ ಶೈಲಜಾಪ್ರಿಯಗೆ
ನೀಲಾಂಬೆಗಂಗಾಂಬೆ ಪತಿಸುರವಂದ್ಯಗೆ ಪಾಲಿಪ ಭಕ್ತರ ಮೋಹನಿಗೆ,
ಶಿವಗೆ ॥೨॥

ಸೋಮಸೂರ್ಯಾಗ್ನಿ ತ್ರಿಲೋಚನಗೆ, ಕಾಮಿತ ಫಲಗಳನೀವನಿಗೆ
ಪ್ರೇಮದೊಳಿಕ್ಕೇರಿ ಪುರದೊಳು ನೆಲಸಿಹ ಸ್ವಾಮಿಶ್ರೀಗುರು ಮಡಿವಾಳೇಶಗೆ,
ಶಿವಗೆ ॥೩॥

---

೨೫

ಧೂಪದಘಟ್ಟಿ ದೀಪಬೆಳಗುವೆನು, ಲಿಂಗಯ್ಯಗೆ ಧೂಪಬೀಸು
ವೆನು ॥ಪ॥

ಆಪರಬ್ರಹ್ಮಚಿದ್ರೂಪವೆ ಸರ್ವಸ್ವರೂಪವೆಂತೆಂಬೊ ಘಟ್ಟಿ ॥೧॥
ದಶಾಂಗವನು ಹಾಲ ಹಸಮಡ್ಡಿಯೊಳು ಶೀಲ ರಸವಶೋಧಿಸಿದಘಟ್ಟಿ ॥೨॥
ಅಜಹರಿ ಅರಿಯದ ಮಝುಮಹಾಂತೇಶನ ನಿಜಪ್ರಕಾಶವನೆಮಟ್ಟಿ ॥೩॥

---

೨೬

ಕರ್ಪೂರಜ್ಯೋತಿ ಪ್ರಕಾಶಹೋ । ನಿಜನಿಪ್ಪತಿನಿಜ ಲಿಂಗಶರಣಹೊ ।
ಮದಗಜದಂತೆ, ಲಾಲಿಸುವಬಾಲಕನಂತೆ, ಕುಜನಾಟಕದ ಮರುಳಿನಂತೆ,
ನಿಜಭೂತವಳಿದ, ದುರ್ಮದ ವಿಳಿದಾನಂದ ವಿಜಯ ಲಿಂಗಾಂಗ
ಸಂಪೂರ್ಣಹೊ ॥೧॥

ರತ್ನರತ್ನ ಜೀವದಂತೆ, ರತ್ನರತ್ನ ಪ್ರಭೆಯಂತೆ, ರತ್ನಸಿದ್ಧಾಂತ ಕಿರ
ಣದಂತೆ, ರತ್ನಸಂಜೀವನಾರತಿಗೂಡಿ, ನಲಿವಂಥ ರತ್ನಪ್ರಭಾಕರ
ದಿನಮಣಿ ಹೋ ॥೨॥

ಕರ್ಪೂರ ಕಂಭದಮೇಲೆ, ಕರ್ಪೂರ ಮಂಟಪದೊಳು, ಕರ್ಪೂರ ಜ್ಯೋತಿಯ ಬೆಳಕಿನಬೆಳಕು, ಕಪ್ಪುರಮುಪ್ಪುರ ಯೋಗದರ್ಶನ ಸುದ್ನಾನ ಲಿಂಗ ಕರ್ಪೂರ ನಿರ್ವಾಣ ಪ್ರಿಯ ಬೋಳೇಶ ಹೊ ॥೩॥

---

೨೭

ರಾಗ--ಧನ್ಯಾಶಿ.

ಏಳು ಗಿರಿಜಾರಮಣ, ಏಳು ಉರಗಾಭರಣ, ಏಳು ಗಂಗಾಧ ರನೆ ಏಳು ಮನ್ಮಥಹರನೆ, ಏಳ್ನೂರೆಪ್ಪತ್ತಮರಗಣಂಗಳು ನಿಮ್ಮ ಓಲ ಗಕೆ ಬಂದರೇಳೈ ಶಿವನೆ ॥ಪಲ್ಲ॥

ಬಸವಣ್ಣ ಚನ್ನಬಸವಣ್ಣ ಮಡಿವಾಳಯ್ಯ ಕುಶಲಮಾತಿನ ಕಿನ್ನ ರಿಯ ಬ್ರಹ್ಮಯ್ಯ ಕೇತಯ್ಯ ವಸುಧೆಯೊಳು ಕೆಂಭಾವಿ ಭೋಗಣ್ಣನಜ ಗಣ್ಣ ಸತ್ಯಣ್ಣ ಮಂಚಣ್ಣನು ॥ ಮುಸುಡಿಯ ಚೌಡಯ್ಯ ಮುದನೂರ ದಾಸಿಮಯ್ಯ ಕಲಿಯ ಬ್ರಹ್ಮಯ್ಯ ಹಸಿಯ ಮಸ್ತಕದ ಮಾಚಯ್ಯಗಳು ಓಲಗಕೆ ಶಶಿಧರನೆ ಬಂದರೇಳೈ ಶಿವನೆ ॥೧॥

ಸೊನ್ನಲಿಗೆಯ ಸಿದ್ಧ ಮುದ್ದುಗೊಂಡನು ಪಂಡಿತಾರಾಧ್ಯ ನಿಮ್ಮ ಮೆಚ್ಚಿನ ಭಕ್ತ ಮೋಳಿಗೆಯ ಮಾರಯ್ಯ ಸನ್ನುತದ ಹಡದಪ್ಪಣ್ಣ ಸುರ ಗಿಯ ಚೌಡಯ್ಯ ಕನ್ನದ ಬ್ರಹ್ಮಯ್ಯನು ॥ ಚನ್ನಯ್ಯ ಚಾರಮನು ನಂಬಿ ಯಣ್ಣ ಕಲಿಭೀಮ ಭಿನ್ನವಿಲ್ಲದ ಭಕ್ತನುಲಿಯಚಂದಯ್ಯಗಳು ಹೆಣ್ಣನ್ನ ಯ್ಯಗಳು ಕರಿಕಾಲ ಕಲ್ಲಯ್ಯ ಬಂದನು ಪನ್ನಗಧರನೆ ಏಳೈ ಶಿವನೆ ॥

ಶಂಕರದಾಸಿಮಯ್ಯ ನಿಜಲಿಂಗಚಿಕ್ಕಯ್ಯ ಸುಂಕದ ಬಂಕಯ್ಯ ಯಲೇಶ್ವರದ ಕೇತಯ್ಯ । ಪಂಕಜಮುಖಿ ಮಹಾದೇವಿ ಮುಕ್ತಾಯಕ್ಕ ಸತ್ಯಕ್ಕೆ ಚೋಳಕ್ಕನು । ಕೊಂಕುಗುರುಳಿನ ನಂಬಿಯಕ್ಕ ಬಂತಲದೇವಿ ಶಂಕಿಣಿಯಪರವಿನಾಚಿಯರುಗೊಗ್ಗವ್ವೆ ಶಿವಲೆಂಕ ಮಂಚಣ್ಣಗಳು ಮೊದ ಲಾದ ಶಿವಶರಣರು ಶಂಕರನೆ ಬಂದರೇಳೈ ಶಿವನೆ ॥೩॥

---

೨೮

ರಾಗ—ಭೈರವಿ.

ಎಂತು ಮರೆಯಲಿ ರಮಣಿ, ಮಾಡಿದುಪಕಾರವನು
ಕಂತುರಿಪು ಸಂಗಮೇಶ್ವರನೆ ಒಲಿದನೆಮಗೆ ॥ಪ॥

ಚಂಡಕರ ಶಶಿಶಿಖಿ ಮಂಡಲಂಗಳ ನಡುವೆ
ಮಂಡಲದೆ ಶಿರಸ್ಥಳದಿ ಎಡೆಸ್ಥಾನದಿ
ತಂಡತಂಡದಿ ವಸುಧೆಪತಿಗಳಿರುವ ಪರಿಯು
ಕಂಡೆನಿದನೇನೆಂಬೆ ಕಮಲದಳನೇತ್ರೆ ॥೧॥

ಎಂಟು ಹದಿನಾರು ಮೂವತ್ತೆರಡು ದಳಗಳಲಿ
ಎಂಟು ಶಕ್ತಿಯರು ಹದಿನಾರು ಗಣವರರು
ಎಂಟು ವಿದ್ಯೇಶ್ವರರು ಎಂಟು ದಿಕ್ಪಾಲಕರು
ಎಂಟು ವಸುಗಳ ಪರಿಯಂ ಕಂಡೆನಿದೆ ಕಾಂತೆ ॥೨॥

ಬಿಂದು ನಾದಾತ್ಮವಿದ್ಯಾ ವರ್ಣದಳಗಳಲಿ
ಸಂದೊಂದಿ ಕೇಶ್ವರಿ ಗಣಾನಿ ಉನ್ಮನೆಯು
ಮುಂದೆ ಓಂಕಾರಿಯೆಂಬುವುಯೊಡನೆ
ನಿಂದು ಶಾಂಭವದಿರವ ತೋರಿದರೆ ಸಖಿಯೆ ॥೩॥

---

೨೯

ಭುಜಗ ಭೂಷಣನಿಗೆ ನಮೋ ನಮೋ, ಶ್ರೀಗಜಮುಖ ತಾತಗೆ ನಮೋ ನಮೋ ॥ಪ॥

ಹರಿವಿಧಿವಂದ್ಯಗೆ ನಮೋ ನಮೋ, ಸಿತ ಗಿರಿಸುತೆಯರಸಗೆ ನಮೋ ನಮೋ। ಕರಿಕೃತ್ತಿವಾಸಗೆ ನಮೋ ನಮೋ ಇಷ್ಟ ದುರಿತ ವಿದೂರಗೆ ನಮೋ ನಮೋ ॥೧॥

ನೀಲಗ್ರೀವಗೆ ನಮೋ ನಮೋ ಕಾಮ, ಕಾಲಸಂಹರನಿಗೆ ನಮೋ ನಮೋ
ಭೂಲೋಕದೊಡೆಯನಿಗೆ ನಮೋ ನಮೋ, ಲೋಕಪಾಲಿಪಗೆ ನಮೋ ನಮೋ ॥೨॥

ಗಂಗಾಧರನಿಗೆ ನಮೋ ನಮೋ ತ್ತುಂಗತುರಂಗಗೆ ನಮೋ ನಮೋ ಮಂಗಳಮೂರ್ತಿಗೆ ನಮೋ ನಮೋ, ಇಷ್ಟಲಿಂಗ ದೇವಗೆ ನಮೋ ನಮೋ ॥೩॥

---

೩೦

ಯನ್ನ ರಕ್ಷಿಪ ಬಂದ ಚನ್ನಶ್ರೀಗುರುಪಾದ ಮುನ್ನೊಂದು ಜನ್ಮದೊಳು ಪಡೆದ ಪಾದ ॥ಪ॥

ಹರಿನೇತ್ರಕಮಲವನು ಧರಿಸಿ ಚರಿಸಿದ ಪಾದ ವಾರಿಜೋದ್ಭವನಿಗೆ ವರವಿತ್ತ ಪಾದ । ಸುರಮುನಿಗಳು ಬಿಡದೆ ಪೂಜಿಸುವ ಶ್ರೀಪಾದ ಪರಮ ಪರತತ್ವ ಭರಿತಪಾದ ॥೧॥

ಮಂದರಗಿರಿಯಲ್ಲಿ ಮುಹೂರ್ತ ಮಾಡಿದ ಪಾದ ಅಂಧಕಾಸುರನ ದೆಯ ತುಳಿದಪಾದ । ನಂದಿಯೇರಿದಪಾದ ಇಂದುಶೇಖರಪಾದ ಸಿಂಧುಬ ಲ್ಲಾಳನ ವಂದನೆಯಪಾದ ॥೨॥

ದುರುಳ ರಾವಣನ ಶಿರ ಧರೆಗೊತ್ತಿದಪಾದ ಯನ್ನ ಕುರವನು ಸೂರೆಗೊಂಡಪಾದ। ಸಿರಿಯಾಳನಣುಗನ ಕೊರಳಕೊಯಿಸಿದಪಾದ ಕುಂಬಾ ರನಗದಿಕೆಗೆ ಕುಣಿದಪಾದ ॥೩॥

ಬಸವಾದಿ ಪ್ರಮಥರು ಹರುಷದಾಳಿದಪಾದ ದಶದಿಕ್ಕಿನೊಳಗೆ ಹಸ ನಲ್ಲಪಾದ । ದಸರಯ್ಯ ದಾಸಯ್ಯ ಬಿಡದ ಮೋಹದಪಾದ ವಸುಧೆಯೊ ಳಗೀಪಾದ ಅರಸುಪಾದ ॥೪॥

ನನ್ನಯ್ಯ ನಾದಯ್ಯ ಸ್ಮರಣೆಯೊಳಗಿಹಪಾದ ಹೊನ್ನಿತಂದೆಯು ನಂಬಿದಂಥ ಪಾದ ಚನ್ನಯ್ಯ ಕಂಸಗೆ ಮುಕ್ತಿದೋರಿದ ಪಾದ ಇನ್ನುಳಿದ ಗಣಕೆಲ್ಲ ಐಕ್ಯಪಾದ ॥೫॥

ನೀಲಲೋಚನೆಯು ಗಂಗಾಬೆ ನುತಿಸಿದ ಪಾದ ಬಾಲೆ ಅಮ್ಮವ್ವೆಯ ಮಗನ ಪಾದ ಮೇಲಾದ ಶರಣರ ಮನಕೆ ಮೆಚ್ಚಿದ ಪಾದ ನಾಲ್ಕು ಸಾದಾಖ್ಯ ಮೀರಿದಪಾದ ॥೬॥

ಅಷ್ಟವರಣದ ಪಾದಶ್ರೇಷ್ಠಸದ್ಗುರುಪಾದ, ನುಟ್ಟಿಎರಗುವದು ಜಂಗಮಪಾದ । ಅಷ್ಟವರಣದ ಪಾದ ಷಟ್‌ಸ್ಥಲದ ಶ್ರೀಪಾದ, ನಿಷ್ಠೆವಂತರ ಪಂಚಪರುಷಪಾದ ॥೭॥

# ತಿಳಿದು ನೋಡು!

೧

ಕಣ್ಣುಗಳೆರಡು,
ಬಾಯ್ತಾನೊಂದು,
ಏನಿಹುದಿದರರ್ಥ?
"ಇಮ್ಮಡಿ ನೋಡೈ,
ಒಮ್ಮಡಿಯಾಡೈ,"
ಎಂಬುದೆ ಇದರರ್ಥ!

೨

ಕರ್ಣಗಳೆರಡು,
ಬಾಯ್ತಾನೊಂದು,
ಏನಿಹುದಿದರರ್ಥ?
"ಇಮ್ಮಡಿ ಕೇಳೈ,
ಒಮ್ಮಡಿ ಹೇಳೈ,"
ಎಂಬುದೆ ಇದರರ್ಥ!

೩

ಹಸ್ತಗಳೆರಡು,
ಬಾಯ್ತಾನೊಂದು,
ಏನಿಹುದಿದರರ್ಥ?
"ಇಮ್ಮಡಿ ಗಳಿಸೈ,
ಒಮ್ಮಡಿ ಬಳಸೈ"
ಎಂಬುದೆ ಇದರರ್ಥ!

# ಆತ್ಮ ನಿವೇದನೆ.

ಈ ಸಂಚಿಕೆಯು ಶಿವಾನುಭವ ಪತ್ರಿಕೆಯ ೯ನೇ ಸಂಪುಟದಲ್ಲಿ ಕಡೆಯದಾಗಿದೆ. ಮತ್ತು ಮುಂದಿನ ಸಂಚಿಕೆಯಿಂದ ಅದರ ೧೦ನೇ ವರ್ಷವು ಪ್ರಾರಂಭವಾಗುತ್ತದೆ. ಈ ಅವಧಿಯಲ್ಲಿ ಶಿವಾನುಭವ ಪತ್ರಿಕೆಯ ಪ್ರತಿಯೊಂದು ಸಂಚಿಕೆಯೂ ಹೊರಪಟ್ಟಿದ್ದು ಅದು ಈ ವರೆಗೆ ಮಾಡಿದ ಸಮಾಜ ಸೇವೆಯನ್ನು ನಾವು ವಾಚಕರ ಲಕ್ಷ್ಯಕ್ಕೆ ತರುವ ಅವಶ್ಯಕತೆ ಇರುವದಿಲ್ಲ. ಈ ಪತ್ರಿಕೆಯ ವಿಷಯವಾಗಿ ಲಿಂಗಾಯತ ಸಮಾಜ ಬಾಂಧವರು ಪ್ರೇಮವನ್ನು ತಾಳಿ ಅದರ ಕಾರ್ಯದಲ್ಲಿ ಸಹಾಯ ಮಾಡಬೇಕೆಂದು ಅವರಿಗೆ ನಮ್ಮ ವಿನಂತಿ ಇದೆ.

ಶಿವಾನುಭವ ಪತ್ರಿಕೆಯ ಮೂಲಕ ಈ ವರೆಗೆ ಅನೇಕ ಗ್ರಂಥಗಳು ಹೊರಪಟ್ಟಿರುತ್ತವೆ. ಅವುಗಳಲ್ಲಿ ವಚನ ಗ್ರಂಥಗಳು ಅತ್ಯಂತ ಮಹತ್ವದವಾಗಿವೆ. ಇವುಗಳ ಮಹತ್ವವು ಜನರ ನಿದರ್ಶನಕ್ಕೆ ಈಚೆಗೆ ಹೆಚ್ಚು ಹೆಚ್ಚಿಗೆ ಬರಹತ್ತಿರುವದು ಸಮಾಧಾನಕರವಾಗಿದೆ. ಅವುಗಳ ತತ್ವಗಳನ್ನು ಕಂಡುಹಿಡಿಯಬೇಕೆಂಬ ಆಕಾಂಕ್ಷೆಯು ಅವರಲ್ಲಿ ಹೆಚ್ಚಾಗಹತ್ತಿದೆ. ಅನೇಕ ವಿದ್ವಾಂಸರು ಅವುಗಳನ್ನು ಪರಿಶೀಲಿಸಿ ಸ್ವತಂತ್ರ ಗ್ರಂಥಗಳನ್ನು ಪ್ರಸಿದ್ಧಿಸಲೂ ಹತ್ತಿರುವರು. ಇದು ಶುಭಚಿನ್ಹವಾಗಿದೆ. ಆದರೆ ವಚನ ವಾಙ್ಮಯವನ್ನು ಚನ್ನಾಗಿ ತಿಳಿದುಕೊಳ್ಳಬೇಕಾದರೆ ಷಟ್‌ಸ್ಥಲ ಶಾಸ್ತ್ರದ ಮೂಲತತ್ವಗಳನ್ನು ಅರಿಯುವದು ಬಹಳ ಅವಶ್ಯವದೆ. ಇವುಗಳನ್ನು ನಿರೂಪಿಸುವ ಗ್ರಂಥಗಳಾದರೂ ವೀರಶೈವ ವಾಙ್ಮಯದಲ್ಲಿ ಅನೇಕವಿವೆ. ಆದರೆ ಅವು ಇನ್ನೂ ಹೆಚ್ಚಾಗಿ ಹೊರಪಟ್ಟಿಲ್ಲ ಇಂಥ ಗ್ರಂಥಗಳನ್ನು ನಾವು ಇನ್ನುಮೇಲೆ ಪ್ರಕಟಮಾಡಬೇಕೆಂದು ಅಪೇಕ್ಷಿಸಿದ್ದೇವೆ.

ಶಿವಾನುಭವ ಪತ್ರಿಕೆಯ ಮೂಲಕ ಈ ವರೆಗೆ ೨೬ ರಗಳೆಗಳು ಪ್ರಸಿದ್ಧವಾಗಿರುತ್ತವೆ. ಇವೆಲ್ಲವೂ ಮಹಾಕವಿ ಹರಿಹರನಿಂದ ರಚಿತವಾಗಿರುತ್ತವೆ. ಈ ರಗಳೆಗಳು ಕನ್ನಡ ವಾಙ್ಮಯದಲ್ಲಿ ಲೋಕೋತ್ತರವಾದವುಗಳೆಂಬದು ನಿರ್ವಿವಾದವಾದದ್ದು ಈ ವರೆಗೆ ಇವುಗಳು ೫ ಸಂಪುಟಗಳಲ್ಲಿ ಪ್ರಸಿದ್ಧವಾಗಿವೆ. ಆದರೆ ನಮಗೆ ದೊರೆದ ಹಸ್ತಲಿಖಿತಪ್ರತಿಗಳು ೩ ಮಾತ್ರ. ನಾವು ಇನ್ನೂ ಕೆಲವು ಹೆಚ್ಚಿಗೆ ಹಸ್ತಲಿಖಿತ ಗ್ರಂಥ

ಗಳನ್ನು ಸಂಗ್ರಹಿಸುವದು ಅತ್ಯಂತವಾಗಿದೆ. ಆದ್ದರಿಂದ ಹಸ್ತಲಿಖಿತ ಗ್ರಂಥ ಸಂಗ್ರಹವಿದ್ದವರು ತಮ್ಮಲ್ಲಿಯ ಗ್ರಂಥಗಳನ್ನು ಸಂಶೋಧಿಸಿ, ಅವು ಗಳಲ್ಲಿ ಹರಿಹರನ ರಗಳೆಗಳಿದ್ದರೆ ಅವುಗಳನ್ನು ನಮ್ಮ ಕಡೆಗೆ ಕಳಿಸಿ ...ಲ್ಲಿ ಅವರು ನಮ್ಮ ಗ್ರಂಥಪ್ರಕಟನಾಕಾರ್ಯದಲ್ಲಿ ಅತ್ಯಂತ ...ಯ ಮಾಡಿದಂತಾಗುವದು.

ಇಲ್ಲಿಯವರೆಗೆ ಈ ವರ್ಷದ ಸಂಚಿಕೆಗಳಲ್ಲಿ ವೀರಶೈವ ಗ್ರಂಥಗಳ ವಿಮ ರ್ಶಾತ್ಮಕ ಅನೇಕ ಲೇಖನಗಳೂ ಬಂದಿವೆ. ಅವುಗಳಲ್ಲಿ ವೀರಶೈವ ಮತ ತತ್ವ ವಿವೇಚನೆಗಳು, ಅದರ ಸಾಮಾಜಿಕ ಮತ್ತು ಧಾರ್ಮಿಕ ಸ್ವರೂ ಪದ ವಿ... ಬಂದಿರುತ್ತವೆ. ಆದರೆ ಇವುಗಳಲ್ಲಿ ಹೇಳಲ್ಪಟ್ಟ ಎಲ್ಲ ವಿಷಯಗಳಿಗೂ ಶಿವಾನುಭವ ಪತ್ರಿಕೆಯ ಸಂಪಾದಕರ ಒಪ್ಪಿಗೆ ಇದೆ ಎಂದು ಮಾತ್ರ ಯಾರೂ ತಿಳಿಯಕೂಡದು. ಶಿವಾನುಭವ ಪತ್ರಿಕೆಯು ತತ್ತ್ವಶೋಧದ ಉದ್ದೇಶವನ್ನಿಟ್ಟುಕೊಂಡು ಬರೆದ ಯಾವ ಲೇಖನಗಳಿಗೂ ಇಂಬುಗೊಡುತ್ತ ಬಂದಿರುವದು. ಇದು ಯಾವ ಒಂದು ವಿಶಿಷ್ಟ ಪಕ್ಷದ ಪತ್ರಿಕೆಯಾಗಿ ನಡಿಸಲ್ಪಟ್ಟಿರುವದಿಲ್ಲ. ಈ ವಿಷಯದಲ್ಲಿ ಅನೇಕರು ತಪ್ಪು ತಿಳುವಳಿಕೆಯುಳ್ಳವರಾಗಿರುವದರಿಂದ ನಾವು ಈ ಸಂಗತಿಯನ್ನು ಅವರ ಇದಿರಿಗೆ ಇಡುವದು ಅವಶ್ಯವಾಗಿದೆ.

ಶರಣಸಾಹಿತ್ಯವೆಂಬ ಹೆಸರಿನಿಂದ ಇನ್ನೊಂದು ಬಗೆಯ ಗ್ರಂಥಗಳ ಪ್ರಕಟನೆಯನ್ನು ನಾವು ಈ ವರ್ಷದಿಂದ ಪ್ರಾರಂಭಿಸಿದ್ದೇವೆ. ಇವುಗಳಲ್ಲಿ ಬಹುತರವಾಗಿ ಭಕ್ತಿ, ನೀತಿ, ವೈರಾಗ್ಯ ಇವುಗಳ ಉಚ್ಚ ವಿಚಾರಗಳು ಇರು ತ್ತವೆ. ಅನೇಕ ಬಗೆಯ ಷಟ್ಪದಿಗಳೂ, ತ್ರಿಪದಿಗಳೂ, ಚೌಪದಗಳೂ ಹಾಡುಗಳೂ ಇವುಗಳಲ್ಲಿ ಬರುತ್ತವೆ. ಈ ವಾಙ್ಮಯವಾದರೂ ವೀರಶೈ ವರಲ್ಲಿ ಬಹು ದೊಡ್ಡದಾಗಿದೆ. ಆದರೆ ಇವುಗಳಲ್ಲಿ ಅರ್ಥಗರ್ಭಿತವಿರುವ ಮತ್ತು ತತ್ವವಿವೇಚನೆಯುಳ್ಳ ಗ್ರಂಥಗಳನ್ನು ಮಾತ್ರ ನಾವು ಪ್ರಕಟಿಸ ಬೇಕೆಂದು ಇಚ್ಛಿಸಿದ್ದೇವೆ. ಆದ್ದರಿಂದ ಈ ಬಗೆಯ ಗ್ರಂಥಗಳು ವಾಚ ಕರಲ್ಲಿ ಯಾರಲ್ಲಿಯಾದರೂ ಇದ್ದರೆ ಅವುಗಳನ್ನು ನಮ್ಮ ಕಡೆಗೆ ಕಳಿಸಿಕೊ ಡಬೇಕೆಂದು ನಮ್ಮ ವಿನಂತಿ ಇದೆ.

ಶಿಲಾಲೇಖಗಳನ್ನು ಸಂಶೋಧನ ಮಾಡುವದು ಎಷ್ಟು ಮಹತ್ವ ದ್ದೆಂಬುದನ್ನು ನಾವು ವಿವರಿಸುವ ಅವಶ್ಯವಿಲ್ಲ. ಈ ಸಂಚಿಕೆಯಲ್ಲಿ ನಾವು ಪ್ರಸಿದ್ಧಿಸಿರುವ ಪುಳುಜ ಗ್ರಾಮದ ಶಿಲಾಲೇಖದಿಂದ ಇದು ವಾಚಕರಿಗೆ

ತಿಳಿದುಬರದೆ ಇರಲಾರದು. ವಾಚಕರು ಇಂಥ ಶಿಲಾಲೇಖಗಳನ್ನು ಹುಡು ಕುವದರಲ್ಲಿ ವಿಶೇಷ ಮನಸ್ಸು ಹಾಕಿ ಅವುಗಳ ಅಚ್ಚುಗಳನ್ನು ನಮಗೆ ಕಳಿಸಿ ಕೊಟ್ಟಲ್ಲಿ ನಮ್ಮ ಕಾರ್ಯದಲ್ಲಿ ವಾಚಕರು ಬಹಳ ಸಹಾಯ ಮಾಡಿದಂತೆ ಆಗುವದು.

ನಾವು ಪುರಾತನ ಕಾಲದಿಂದ ಈ ವರೆಗೆ ಆಗಿಹೋದ ಶಿವಶರಣರ ಚರಿತ್ರೆಗಳನ್ನು ಪ್ರಸಿದ್ಧಿಸುವ ಹೊಸ ಉಪಕ್ರಮವನ್ನೂ ಈಚೆಗೆ ಆರಂಭಿಸಿದ್ದೇವೆ. ನಿರಂಜನ ವಂಶರತ್ನಾಕರ, ಕಾಲಜ್ಞಾನದ ವಚನಗಳು, ಬಸವೇಶ್ವರ ಷಟ್‌ಸ್ಥಲ ವಚನದ ಕಥಾಸಾರ ಇವುಗಳು ಈ ಬಗೆಯ ಗ್ರಂಥಗಳಾಗಿವೆ ಇವುಗಳಲ್ಲಿ ಕಂಡಬರುವ ವಿಷಯಗಳಿಂದ ಕರ್ನಾಟಕ ದೇಶದ ಪೂರ್ವದ ಇತಿಹಾಸ, ಹಿಂದಿನ ಕಾಲದ ಸಮಾಜ ಸ್ಥಿತಿ ಇವುಗಳ ಮೇಲೆ ವಿಶೇಷ ಪ್ರಕಾಶವು ಬೀಳುವದೆಂದು ನಿರೀಕ್ಷಿಸಲ್ಪಟ್ಟಿದೆ.

ಇದಲ್ಲದೆ ಅನೇಕ ರಾಜಮನೆತನಗಳ ಇತಿಹಾಸಗಳೂ ಅಲ್ಲಲ್ಲಿ ಉಪಲಬ್ಧವಿವೆ. ಇವುಗಳಲ್ಲಿ ಕೆಲವುಗಳನ್ನು ನಮ್ಮ ಮಿತ್ರರಾದ ಶ್ರೀಯುತ ಬೆನಗಲ್ಲ ರಾಮರಾಯರು ಸಂಶೋಧಿಸಿ ಶಿವಾನುಭವದಲ್ಲಿ ಅಚ್ಚುಹಾಕಿರುವರು. ಅವರು ಪಟ್ಟ ಈ ಶ್ರಮಕ್ಕೋಸ್ಕರ ವೀರಶೈವ ಸಮಾಜದವರು ಅವರಿಗೆ ಅತ್ಯಂತ ಕೃತಜ್ಞರಾಗಿರತಕ್ಕದ್ದು. ಅವರಿಗೆ ಉಂಟಾದ ನೇತ್ರರೋಗದ ಮೂಲಕ ಅವರು ಪ್ರಾರಂಭಿಸಿದ ಕೆಲವು ಗ್ರಂಥಗಳು ಶಿವಾನುಭವದಲ್ಲಿ ಅಪೂರ್ಣವಾಗಿ ಉಳಿದಿವೆ ಆದರೆ ನಮ್ಮ ಸುದೈವದಿಂದ ಅವರಿಗೆ ಈಗ ಗುಣವಾಗಿರುವದರಿಂದ ತಾವು ಪ್ರಾರಂಭಿಸಿದ ಈ ಕಾರ್ಯವನ್ನು ಪುನಃ ಕೈಕೊಂಡಿದ್ದರಿಂದ ನಾವು ಅವರಿಗೆ ಬಹಳ ಆಭಾರಿಯಾಗಿರುವೆವು. ಅವರು ಈ ಸಂಚಿಕೆಯಿಂದ ಕೆಳದೀ ರಾಜರ ವಂಶಾವಳಿಯನ್ನು ಪ್ರಾರಂಭಿಸಿರುವರು.

ಶಿವಾನುಭವ ಪತ್ರಿಕೆಯು ಈ ರೀತಿಯಾಗಿ ವೀರಶೈವ ವಾಙ್ಮಯ, ವೀರಶೈವ ಸಂಸ್ಕೃತಿ, ವೀರಶೈವ ಇತಿಹಾಸ, ಇವುಗಳನ್ನು ಪ್ರಸಿದ್ಧಿಗೆ ತರುವ ಮಹತ್ತರ ಕಾರ್ಯವನ್ನು ಕೈಕೊಂಡಿದ್ದು ಇದರಲ್ಲಿ ಅತ್ಯಲ್ಪವಾಗಿ ಅದು ತನ್ನ ಶಕ್ತ್ಯನುಸಾರ ಪ್ರಯತ್ನಿಸುತ್ತ ಬಂದಿದೆ. ವೀರಶೈವ ಸಮಾಜದವರು ಇದರ ಕಾರ್ಯದಲ್ಲಿ ಸಹಾನುಭೂತಿಯುಳ್ಳವರಾಗಿ ಪತ್ರಿಕೆಗೆ ಸಹಾಯ ಮಾಡುತ್ತಿರಬೇಕೆಂದು ನಾವು ಅವರನ್ನು ಪ್ರಾರ್ಥಿಸುತ್ತೇವೆ.

---

ಶಿವಾನುಭವ ಗ್ರಂಥಮಾಲಾ ನಂ|| ೪೨

# ಹರಿಹರನ ರಗಳೆಗಳು.

## ಭಾಗ ೫



ಸಂಪಾದಕರು

**ರಾ|| ಸಾ|| ಫ. ಗು. ಹಳಕಟ್ಟಿ**

ಬಿ. ಎ. ಎಲ್. ಎಲ್. ಬಿ. ವಿಜಾಪುರ.



೧೯೩೫

ಬೆಲೆ ೮ ಆಣೆ.

[ಈ ಗ್ರಂಥದ ಎಲ್ಲ ಹಕ್ಕುಗಳನ್ನು ಸಂಪಾದಕರು ತಮ್ಮ ಸ್ವಾಧೀನದಲ್ಲಿಟ್ಟುಕೊಂಡಿರುತ್ತಾರೆ.]

# ಪ್ರಸ್ತಾವನೆ.

ಈ ಗ್ರಂಥದಲ್ಲಿ ನಾವು ಮಹಾಕವಿ ಹರಿಹರನು ರಚಿಸಿದ ರಗಳೆಗಳಲ್ಲಿಯ ಆರು ರಗಳೆಗಳನ್ನು ಪ್ರಸಿದ್ಧಿಸಿದ್ದೇವೆ. ಇವುಗಳಲ್ಲಿ ನಾವು (೧) ಪುರಾತನರ ರಗಳೆಗಳು (೨) ವೀರಶೈವ ಶರಣರ ರಗಳೆಗಳು (೩) ಶಿವ ಶರಣರ ರಗಳೆಗಳು ಎಂದು ಮೂರು ಭಾಗಗಳನ್ನು ಮಾಡಬಹುದು. ಈ ವರೆಗೆ ನಾವು ಪ್ರಕಟಿಸಿದ ೪ ಭಾಗಗಳಲ್ಲಿ ೨೦ ರಗಳೆಗಳನ್ನು ಪ್ರಸಿದ್ಧಿಸಿದ್ದು ಈ ೫ ನೇ ಭಾಗದಲ್ಲಿ ೬ ರಗಳೆಗಳನ್ನು ಪ್ರಸಿದ್ಧಿಸಿದ್ದೇವೆ. ಈ ರಗಳೆಗಳು ಕನ್ನಡ ವಾಙ್ಮಯದಲ್ಲಿ ಅತ್ಯಂತ ಮಹತ್ವವಾದವುಗಳಿದ್ದು ಇವು ಲೋಕಾದರಕ್ಕೆ ಪಾತ್ರವಾಗುವವೆಂದು ನೆರೆನಂಬಿದ್ದೇವೆ.

ಈ ೫ ನೇ ಭಾಗವನ್ನು ನಾವು ಮೈಸೂರು ಓರಿಎಂಟಲ್ ಲೈಬ್ರರಿಯಿಂದ ದೊರೆದ ಪ್ರತಿ, ತುಮಕೂರು ಜಿಲ್ಹಾ ದಂಡಿನ ಶಿವರದಲ್ಲಿರುವ ಶ್ರೀ॥ ಮೂ॥ ಕಲ್ಲಯ್ಯನವರಲ್ಲಿ ದೊರೆದ ಪ್ರತಿ, ಮತ್ತು ಶ್ರೀ॥ ಮೂ॥ ಶಿವಮೂರ್ತಿ ಶಾಸ್ತ್ರಿಗಳು ಹುಲಿಕುಂಟೆಮಠ ಕೀರ್ತನಕೇಸರಿ ಮು. ತುಮಕೂರ ಇವರು ಕಳಿಸಿದ ಪ್ರತಿ ಈ ಮೂರು ಹಸ್ತಲಿಖಿತ ಗ್ರಂಥಗಳ ಸಹಾಯದಿಂದ ಪ್ರಕಟಿಸಿದ್ದೇವೆ. ಈ ಗ್ರಂಥಗಳನ್ನು ನಮಗೆ ಕಳಿಸಿಕೊಟ್ಟದ್ದಕ್ಕಾಗಿ ನಾವು ಮೇಲ್ಕಂಡ ಎಲ್ಲ ಮಹನೀಯರಿಗೆ ಕೃತಜ್ಞರಾಗಿದ್ದೇವೆ.

ವಿಜಾಪುರ — ಫ. ಗು. ಹಳಕಟ್ಟಿ.

ತಾ॥ ೧೩—೩—೩೫

# ಅನುಕ್ರಮಣಿಕೆ.







ಒಂದೊಂದು ಕಾಡಮರದಡಿಯೊಳೊಯ್ಯನೆ ನಿಂದು
ಸಂದ ಕಾವಡಿಯ ನಿಳುಪುತ್ತೆ ಭರದಿಂ ಬಂದು
ಆರ ಹಂಗಿಲ್ಲದೆ ನಡೆಯುವೇಳ್ದನುನ್ನತಂ
ಸೀರೆ ಕೌಪೀಕೆನುತೆ ಬಿಸುಟಂ ಜಗವನಾತಂ
ನಾರಸೀರೆಯನುಟ್ಟು ಹೊದೆದನಾನಂದದಿಂ
ಮಾರಾರಿ ಮೆಚ್ಚಿ ಒಡನೊಡನೆ ಬರೆ ಹರುಷದಿಂ

ಹರಿವ ನದಿಯುದಕವಂ ಶಂಕರಂಗರ್ಪಿಸುತೆ
ತರುಕುಲದ ಫಲವುಮಂ ಶಶಿಧರಂಗರ್ಪಿಸುತೆ
ನೆಳಲ ತಣ್ಪನೊಳಿದರ್ ಸೋಮನಾಥಂಗೆನುತೆ
ಸುಳಿವೆರಲನೆಮ್ಮ ಸೋಮಯ್ಯದೇವಂಗೆನುತೆ
ಕಂಪು ತೀಡಿದೊಡೆ ಸೌರಾಷ್ಟ್ರಪತಿಗೆಂದೆನುತೆ
ಪೆಂಪುಳ್ಳ ಕೊಳನಿರಲ್ ಸೋಮನಾಥಂಗೆನುತೆ
ಜಲಜಂಗಳಿರೆ ಚನ್ನ ಸೊಡ್ಡಳಂಗೆಂದೆನುತೆ
ಫಲವಿರಲ್ ಸೋಮಯ್ಯ ತಂದೆಗರ್ಪಿತವೆನುತೆ
ಪೊಡೆಹುಲ್ಲೊಳಾದ ಪ್ರಸಾದವಂ ಕೈಕೊಳುತೆ
ತಡೆವಿಡಿದು ನದಿಯ ಲಿಂಗೋದಕವನನುಗೊಳುತೆ
ಪೊಸ ಪಣ್ಗಳಂ ಶಿವಂಗರ್ಪಿಸುತೆ ಸವಿಸವಿದು
ಹಸರುಳ್ಳ ಬಿಲ್ವಪತ್ರೆಯನರ್ಪಿಸುತ್ತಂದು
ಕಂಬಿಯಂ ಕೊಂಡೇಳ್ದು ನಡೆನಡೆದು ಪರಿತಂದು
ಶಂಭು ಶರಣೆನುತಡವಿಯೊಳಗೊರ್ವನೆಯ್ತಂದು
ಹರಿಣನಂ ಮಾವು ಮರಿಹುಲ್ಲೆಗಳ ನೋಡುತುಂ
ಕರಡಿ ಕಾಳ್ಪಂದಿ ಕಾಡಾನೆಗಳ ನೋಡುತುಂ
ಪೆರ್ಬಾವುಗಳ್ಪರ್ಬಿದಡವಿಗಳ ನೋಡುತುಂ
ಮರ್ಬು ಕರ್ಬರಿಸಿ ಕವಿದೆಡೆಗಳಂ ನೋಡುತುಂ
ಗಗನಕ್ಕೆ ನೆಗೆವ ಸಿಂಹಂಗಳಂ ನೋಡುತುಂ
ಜಗಕೆ ಪೊಸತೆನಿಪ ಭೇರುಂಡನಂ ಕಾಣುತುಂ
ಪರುಷ ಮೃಗವಂ ಕಂಡು ಪೊಡಮಟ್ಟು ನಡೆಯುತುಂ
ಶರಭಂಗಳಂ ಕಂಡು ಮೆಯ್ಯಿಕ್ಕಿ ನಡೆಯುತುಂ

ಧೂಪದ ದ್ವೀಪದಲ್ಲಿಗೆ ಸಾರೆಯಾಗುತಿರೆ
ಕಾಪಾಲಿ ಕೊಟ್ಟ ನೆನಹೆಚ್ಚರಂ ತೋರುತಿರೆ

ಭೂವಿ: ನೀಂ ಕಲಶ ವಸುಮತಿ ಹೊನ್ನನೀಯುವ್ವ
ಸೋಮನಾಥನ ಗುಗ್ಗುಳಕ್ಕೆ ಬೆಸಕೆಯ್ಯುವ್ವ
ಎನೆ ದರಿವಿನೊಳಗೊಂದು ಕೊಪ್ಪರಿಕೆ ಹೊನ್ನಿರಲ್
ಮನವಾರೆ ಪಾತ್ರೆಯೊಳ್ತೀವುತಂ ಮೆರೆದಿರಲ್
ಕೊಂಡು ಬಂದಂ ಧೂಪವಿರ್ದೆಡೆಗೆ ಪೊಂಗಳಂ
ತಂಡತಂಡದೆ ಹರ್ಷದಿಂ ಕೊಟ್ಟ ಪೊಂಗಳಂ
ಪಾತ್ರೆಯೊಳಗಳ್ಕರಿಂ ಧೂಪವಂ ತೀವುತುಂ
ನೇತ್ರತ್ರಯನ ಸುತಂ ಬಾಸಣಿಸಿಯೋವುತುಂ
ಕಟ್ಟಿ ಮುದ್ರಿಸಿ ಕಂಬಿಗಿಂಬಿನಿಂ ಪೊಡಮಟ್ಟು
ನಿಟ್ಟೆ ನೆಲೆಗೊಂಡು ಘನ ಪುಳಕವಂ ಮುಂದಿಟ್ಟು
ಪರಿಭಾಗಮಂ ನೋಡಿ ತೂಗಿ ತೂಕಮನರಿದು
ಹರುಷದಿಂ ಚಂದನಮನಿಕ್ಕಿ ತೂಕಮನರಿದು
ಬಾಳ್ಗಿನ್ನ ಸೌರಾಷ್ಟ್ರಪತಿ ಎನುತ್ತೆತ್ತಿದಂ
ಬಾಳ್ಗಿನ್ನ ಸೋಮಯ್ಯ ತಂದೆ ಎನುತೆತ್ತಿದಂ
ಧೂಪಮಂ ಪೊತ್ತು ಜನನದ ಹೊರೆಯನಿಳುಪಿದಂ
ಧೂಪಮಂ ಹೆಗಲನೇರಿಸಿ ಸಾವನಿಳುಪಿದಂ
ನಡೆದು ಬಂದಂ ತಿರುಗಿ ನವಧೂಪಮಂ ಪೊತ್ತು
ಮೃಡನ ನವಪರಿಮಳದ ಗುರುಭಾರಮಂ ಪೊತ್ತು

ಧೂಪದೊಂದಡಿಯನಿಳೆ ತಾಳಲಾರದಿರೆ
ಧೂಪಮಂ ಪೊತ್ತಡಿಯನಿಟ್ಟನೊಪ್ಪುತ್ತುಮಿರೆ
ಒಂದಡಿಯನಿಡೆ ನಿಜ ಪದಕಿಂದ್ರನಂಜಿದಂ
ಮುಂದಡಿಯನಿಡಲಿಂದ್ರನುಳಿದನಜನಂಜಿದಂ
ಮೂರನೆಯ ಪದದೊಳಜನುಳಿದಂ ಹರಿಯಂಜಿದಂ
ಮೀರಿ ನಾಲ್ಕರೊಳ್ಹರಿಯುಳಿದ ಶಿವನಂಜಿದಂ
ಅಯ್ದನೆಯ ಪದಕಯ್ದು ಮುಖವನಿತೆ ಮಿಗಿಲಿಲ್ಲ
ಅಯ್ದೆ ನಡೆದೊಡೆ ಕುಡುವ ಪದವಿಗಳ ಪೆಸರಿಲ್ಲ

ಎಂದೊಡನೆ ಸೋಮನಾಥಂ ಚಿಂತಿಸುತ್ತಮಿರೆ
ಒಂದು ಪದಕೊಂದೊಂದು ಪದವಿಗಳ್ತೀರುತಿರೆ
ಪದದೊಳಗೆ ಮುಗ್ಗಿದ ಪ್ರಾಣಿ ಸಂತತಿ ಕೂಡೆ
ಪದವಿಯಂ ಪಡೆದು ಸಗ್ಗಕ್ಕೆ ನಡೆದವು ಕೂಡೆ
ನೋಡಿದ ಮರಂಗಳುಂ ಸೋಂಕಿದ ಮರಂಗಳುಂ
ಕೂಡೆ ಭವಮಂ ನೀಗುವವು ಪರ್ವತಂಗಳುಂ
ಬರ್ದುಕುತಿರೆ ನಡೆತಂದನಪ್ರತಿಮನಮ್ಮಮ್ಮ
ಮುದದಿಂದಲೋಹಿಲಯ್ಯಂ ಧೀರನಮ್ಮಮ್ಮ
ಕಂಬಿ ಹೆಗಲೊಳಗಾಳಿ ಕುಸಿದುಂ ಕಾಯಂ ತಗ್ಗೆ
ಸಂಬಳಿಗೆ ತೆಗೆದು ಹೆಗಲೆಲುವುಗಳು ನೆರೆ ತಗ್ಗೆ
ಕೆಲವುಪಾಸಂ ಪತ್ತಿ ಕೆಲವು ಪಾರಣೆಯಾಗೆ
ಬಲವಳಿದು ಡೆಂಡಣಿಸಿ ಹಜ್ಜೆ ಹುಣ್ಣಂತಾಗೆ
ಅಂಗಾಲೊಳುರಿಗೆದ್ದ ಬೊಕ್ಕೆ ನೆತ್ತರನುಗುಳೆ
ಅಂಗದೊಳಗುಳ್ಳ ಸರ್ವ ತ್ರಾಣಮುಂ ಜಗುಳೆ
ಅನುಗೆಡುತ್ತವಯವಂಗಳ್ಸಡಿಲವಾದೊಡಂ
ತನು ಜರ್ಝರಂಬೋಗಿ ಜವವಳಿದು ನಿಂದೊಡಂ
ಮನವೆ ಕೈಕಾಲಾಗಿ ನಡೆವುತಿರ್ದಂ ನೋಡ
ನೆನಹು ಜೀವನವಾಗಿ ನಡೆವುತಿರ್ದಂ ನೋಡ
ಲೆಕ್ಕಿಸಂ ಕೈಕೊಳ್ಳದಕ್ಕರಿಂ ನಡೆನಡೆದು
ಮಿಕ್ಕ ನೇಹದ ನೆಳಲ ತಣ್ಪಿಂದೆ ನಡೆನಡೆದು
ಬೆಟ್ಟಂಗಳೊಳ್ನಡೆದು ನಡೆಯಲಾರದೆ ನಿಂದು
ಗಟ್ಟಂಗಳೊಳಗೆಡಹಿ ದಡದಡಿಸುತುಂ ನಿಂದು
ಬೀಳಬೀಳಲು ಶಿವಂ ಕೈಗೊಟ್ಟು ನೆಗೆವುತುಂ
ಜಾಳಿಸಲ್ಕಂಬಿಯಂ ಕೆಯ್ಗೊಟ್ಟು ನೆಗೆವುತುಂ
ಕಾಣಬಾರದ ತೆರದೆ ಕೆಯ್ಗೊಟ್ಟು ನೆಗೆವುತುಂ
ಕೇಣವಿಲ್ಲದೆ ಶರಣನೊಡನೊಡನೆ ಸೊಗಯಿಪಂ
ಕಡು ಬಳಲೆ ಕಂಬಿಯಂ ತಾನೆತ್ತಿ ನೆಗೆಯಿಪಂ
ನಡೆಯಲಾರದೊಡೆತ್ತಿಕೊಂಡೊಯ್ದು ನಡೆಯಿಪಂ
ಬಡವಾಗೆ ಬಡವಪ್ಪನೆಡಹೆ ತಾನೆಡಹುವಂ
ದಡದಡಿಸುವಾಗಳೊಡನೊಡನೆ ದಡದಡಿಸುವಂ

ಕೆಯ್ವಿಟ್ಟು ಬೀಳ್ವುದಂ ನೋಡಿದಲ್ಲದೆ ಪಿಡಿಯ
ಕೆಯ್ವಿಡಿದು ಕಾನನದೊಳೊಯ್ಯ್ಯಾಂದಿಂದಲೆಯ

ಇಂತು ನಿಜಭಕ್ತ ಹೊನ್ನಯ್ಯಂಗೆ ಕರುಣದಿಂ
ಕಂತುಮದಹರನು ಕಂಬಿಯನಿಂತು ಹರುಷದಿಂ
ಬಂದನೋಹಿಲದೇಶ ನಟ್ಟಡವಿಯಂ ಕಳೆದು
ವಿಂಧ್ಯದೇಶಂ ಮಹಾ ವಿಂಧ್ಯಂಗಳಂ ಕಳೆದು
ಬರೆ ಬರಲ್ ಸೌರಾಷ್ಟ್ರವಲ್ಲಿ ಹತ್ತಿರಿಯಾಗಿ
ಪುರಜನಂ ದೂರದಿಂ ಕಂಡು ಕೌತುಕರಾಗಿ
ಭೇರಿ ನಿಸ್ಸಾಳಮುರುಜಂಗಳಿಂದಿದಿರ್ಗೊಂಡು
ವಾರವನಿತಾಜನಂ ಭಕ್ತರಿಂದಿದಿರ್ಗೊಂಡು
ರನ್ನಗನ್ನಡಿ ಕಳಶ ಕನಕದಿಂದಿದಿರ್ಗೊಂಡು
ಸನ್ನುತ ವಿಳಾಸಿನೀ ಜನದಿಂದಮಿದಿರ್ಗೊಂಡು
ಬರಲಂದು ಪುರವರವನಾನಂದದಿಂ ಪೊಕ್ಕು
ತರತರದೆ ಪುಳಕಂಗಳೇಳೆ ಹರುಷದಿ ಮಿಕ್ಕು
ನಡೆತಂದು ಶಿವನಿಳಯದೊಳಗೆ ಕಂಬಿಯ ನಿಳುಪಿ

ಕಡು ನೇಹದಿಂ ಸೈಗೆಡೆದು ದುಃಖವ ನಿಳುಪಿ
ಎಳ್ದು ಬಂದಪ್ಪಿಕೊಂಡೈದಿಸದೆ ಮತ್ತಪ್ಪಿ
ಅಳ್ದಂತೆ ಲಿಂಗದೊಳ್ಪುಗುವಂತೆ ಬಿಗಿಯಪ್ಪಿ
ಏನಯ್ಯ ಸೌರಾಷ್ಟ್ರಪತಿಯೆ ಬಡವಾದಯ್ಯ
ಆನಿಂತು ತಡೆದನೆಂದುಮ್ಮಳಿಸುತಿರ್ದಯ್ಯ
ಎನ್ನಯ್ಯ ಎನ್ನರಸ ಎನ್ನ ಸಮಸುಖನಿಧಿಯೆ
ಎನ್ನ ಪರಮ ಸ್ನೇಹರಸ ಸುಗೀತಾಂಬುಧಿಯೆ

ಎನುತೆ ಬಂದಲ್ಲಿ ಕಂಬಿಯಂ ಮುದ್ರೆಯಂ ತೋರಿ
ಮನಸಿಜಾರಿಯ ಮುಂದೆ ಇಟ್ಟು ಸಂತಸವೇರಿ
ರಸವೊಸರ್ವ ತಿರುಳ ಧೂಪವನೆತ್ತಿಕೊಂಡಲ್ಲಿ
ಪೊಸ ತುಪ್ಪದಿಂ ಶರ್ಕರಾದಿಯಂ ತೋಯ್ದಲ್ಲಿ
ಸೋಮನಾಥಂಗಿತ್ತು ತೊನೆದಾಡಿ ತೂಗಾಡಿ

ಕಾಮಾರಿಗಿತ್ತಿತ್ತು ಕುಣಿದಾಡಿ ಮಣಿದಾಡಿ
ಮಾತ್ರೆಯೊಳ್ಕೆಂಡಮಂ ಸುರಿದು ಧೂಪವನಿಕ್ಕಿ
ನೇತ್ರದಿಂದಾನಂದ ಜಲವೊಸರೆ ಮೆಯ್ಯಿಕ್ಕಿ
ಎಲ್ಲಾ ಕದಂಗಳ ಗವಾಕ್ಷೆಗಳ ಮುಚ್ಚುತುಂ
ಸಲ್ಲೀಲೆಯಿಂದ ಧೂಪವನಿಕ್ಕಿ ಪೆರ್ಚಿಸುತುಂ
ಸುತ್ತಿ ಬಂದಾಡುತುಂ ನವ ಧೂಪಮಂ ಬೀಸಿ
ಮುತ್ತಿಕೊಂಡೊಪ್ಪುತುಂ ನವ ಧೂಪಮಂ ಬೀಸಿ
ಸೋಮಯ್ಯದೇವ ಕೈಕೊಳ್ಳಯ್ಯ ಕೊಳ್ಳಯ್ಯ
ಸೋಮಯ್ಯದೇವ ಶರಣಾಗು ಶರಣಾಗೆನುತೆ
ಕೂಗಿಡುತ್ತಂ ಬೀಸಿ ಕುಣಿದಾಡುತಂ ಬೀಸಿ
ಬೀಗಿ ಬೆರೆವುತ ಬೀಸಿ ಆಡುತಾಡುತ ಬೀಸಿ
ಮುಟ್ಟಿ ನಾಲ್ದೆಸೆಗೆ ಪೊಗೆ ಮುಸಗೆ ಬೀಸುತ್ತಮಿರೆ
ಇಟ್ಟಣಿಸಿ ಸೌರಾಷ್ಟ್ರ ದೇಶದೊಳ್ತೀವುತಿರೆ
ಕೇರಿಕೇರಿಗಳ ನಡುವೆಲ್ಲ ಧೂಪದ ಕಂಪು
ಊರೂರ ಹೊಲಹೊಲದೊಳೆಲ್ಲ ಧೂಪದ ಕಂಪು
ಕೆರೆಯೊಳಗೆ ಕೊಳನೊಳಗೆ ಗುಗ್ಗುಳದ ಸವಿಗಂಪು
ತೊರೆಯೊಳಗೆ ವನದೊಳಗೆ ಮೆರೆವ ಧೂಪದ ಕಂಪು
ತೀವುತಿರೆ ಪನ್ನೆರಡು ಬರಿಸಮೀ ತೆರದಿಂದೆ
ದೇವಂಗೆ ಬೀಸಿದಂ ಧೂಪಮಂ ಮುದದಿಂದೆ
ಮಾಗೆಯೊಳ್ಬೇಸಗೆಯೊಳುಬ್ಬರದ ಮಳೆಗಳೊಳ್
ರಾಗದೆ ವಸಂತ ಹೇಮಂತ ಋತುಕಾಲದೊಳ್
ತಂದು ತಂದೋಹಿಲಯ್ಯಂ ಧೂಪಮಂ ಬೀಸಿ
ಕುಂದದಕ್ಕದೆ ಸುಖದ ಸುಗ್ಗಿಯಿಂದಂ ಬೀಸಿ
ಹರುಷದಿಂ ಸೋಮನಾಥಂಗೆ ಬಿನ್ನವಿಸಿದಂ
ಕರುಣಾಕರಂಗೆ ಪರಮಂಗೆ ಬಿನ್ನವಿಸಿದಂ
ದೇವ ನಿಮ್ಮಡಿಗಳೆಂತೆಂತು ಬೆಸಸಿದಿರಂತೆ
ದೇವ ನೀ ನಡೆಯಿಸಲ್ಕಡೆದು ಧೂಪವನಿಂತೆ
ತಂದೆ ನಾಂ ಪನ್ನೆರಡು ಬರಿಸವಾದುದು ದೇವ
ತಂದೆ ಕರುಣಿಪುದೆನಗೆ ನಿತ್ಯತ್ವಮಂ ದೇವ

ಕೆಯ್ವಿಟ್ಟು ಬೀಳ್ವುದಂ ನೋಡಿದಲ್ಲದೆ ಪಿಡಿಯು
ಕೆಯ್ವಿಡಿದು ಕಾನನದೊಳೊಯ್ಯಾರದಿಂದಲೆಯು

ಇಂತು ನಿಜಭಕ್ತ ಹೊನ್ನಯ್ಯಂಗೆ ಕರುಣದಿಂ
ಕಂತುಮದಹರನು ಕಂಬಿಯನಾಂತು ಹರುಷದಿಂ
ಬಂದನೋಹಿಲದೇಶ ನಟ್ಟಡವಿಯುಂ ಕಳೆದು
ವಿಂಧ್ಯದೇಶಂ ಮಹಾ ವಿಂಧ್ಯಂಗಳಂ ಕಳೆದು
ಬರೆ ಬರಲ್ ಸೌರಾಷ್ಟ್ರವಲ್ಲಿ ಹತ್ತಿರೆಯಾಗಿ
ಪುರಜನಂ ದೂರದಿಂ ಕಂಡು ಕೌತುಕರಾಗಿ
ಭೇರಿ ನಿಸ್ಸಾಳಮುರುಜಂಗಳಿಂದಿದಿರ್ಗೊಂಡು
ವಾರವನಿತಾಜನಂ ಭಕ್ತರಿಂದಿದಿರ್ಗೊಂಡು
ರನ್ನಗನ್ನಡಿ ಕಳಶ ಕನಕದಿಂದಿದಿರ್ಗೊಂಡು
ಸನ್ನುತ ವಿಳಾಸಿನೀ ಜನದಿಂದಮಿದಿರ್ಗೊಂಡು
ಬರಲಂದು ಪುರವರವನಾನಂದದಿಂ ಪೊಕ್ಕು
ತರತರದೆ ಪುಳಕಂಗಳೇಳೆ ಹರುಷದಿ ಮಿಕ್ಕು
ನಡೆತಂದು ಶಿವನಿಳಯದೊಳಗೆ ಕಂಬಿಯ ನಿಳುಹಿ

ಕಡು ನೇಹದಿಂ ಸೈಗೆಡೆದು ದುಃಖವ ನಿಳುಹಿ
ಎಳ್ದು ಬಂದಪ್ಪಿಕೊಂಡೈದಿಸದೆ ಮತ್ತಪ್ಪಿ
ಅಳ್ದಂತೆ ಲಿಂಗದೊಳ್ಪುಗುವಂತೆ ಬಿಗಿಯಪ್ಪಿ
ಏನಯ್ಯ ಸೌರಾಷ್ಟ್ರಪತಿಯೆ ಬಡವಾದಯ್ಯ
ಆನಿಂತು ತಡೆದೆನೆಂದುಮ್ಮಳಿಸುತಿರ್ದಯ್ಯ
ಎನ್ನಯ್ಯ ಎನ್ನರಸ ಎನ್ನ ಸಮಸುಖನಿಧಿಯೆ
ಎನ್ನ ಪರಮ ಸ್ನೇಹರಸ ಸುಗೀತಾಂಬುಧಿಯೆ

ಎನುತೆ ಬಂದಲ್ಲಿ ಕಂಬಿಯುಂ ಮುದ್ರೆಯುಂ ತೋರಿ
ಮನಸಿಜಾರಿಯ ಮುಂದೆ ಇಟ್ಟು ಸಂತಸವೇರಿ
ರಸವೊಸರ್ವ ತಿರುಳ ಧೂಪವನೆತ್ತಿಕೊಂಡಲ್ಲಿ
ಪೊಸ ತುಪ್ಪದಿಂ ಶರ್ಕರಾದಿಯುಂ ತೋಯ್ದಲ್ಲಿ
ಸೋಮನಾಥಂಗಿತ್ತು ಕೊನೆದಾಡಿ ತೂಗಾಡಿ

ಕಾವಮಾರಿಗಿತ್ತಿತ್ತು ಕುಣಿದಾಡಿ ಮಣಿದಾಡಿ
ಪಾತ್ರೆಯೊಳ್ಕೆಂಡವಂ ಸುರಿದು ಧೂಪವನಿಕ್ಕಿ
ನೇತ್ರದಿಂದಾನಂದ ಜಲವೊಸರೆ ಮೆಯ್ಯಿಕ್ಕಿ
ಎಲ್ಲಾ ಕದಂಗಳ ಗವಾಕ್ಷೆಗಳ ಮುಚ್ಚುತುಂ
ಸಲ್ಲೀಲೆಯಿಂದ ಧೂಪವನಿಕ್ಕಿ ಪೆರ್ಚಿಸುತುಂ
ಸುತ್ತಿ ಬಂದಾಡುತುಂ ನವ ಧೂಪವಂ ಬೀಸಿ
ಮುತ್ತಿಕೊಂಡೊಪ್ಪುತುಂ ನವ ಧೂಪವಂ ಬೀಸಿ
ಸೋಮಯ್ಯದೇವ ಕೈಕೊಳ್ಳಯ್ಯ ಕೊಳ್ಳಯ್ಯ
ಸೋಮಯ್ಯದೇವ ಶರಣಾಗು ಶರಣಾಗೆನುತೆ
ಕೂಗಿಡುತ್ತಂ ಬೀಸಿ ಕುಣಿದಾಡುತಂ ಬೀಸಿ
ಬೀಗಿ ಬೆರೆವುತ ಬೀಸಿ ಆಡುತಾಡುತ ಬೀಸಿ
ಮುಟ್ಟೆ ನಾಲ್ದೆಸೆಗೆ ಪೊಗೆ ಮುಸಗೆ ಬೀಸುತ್ತಮಿರೆ
ಇಟ್ಟಣಿಸಿ ಸೌರಾಷ್ಟ್ರ ದೇಶದೊಳ್ತೀವುತಿರೆ
ಕೇರಿಕೇರಿಗಳ ನಡುವೆಲ್ಲ ಧೂಪದ ಕಂಪು
ಊರೂರ ಹೊಲಹೊಲದೊಳೆಲ್ಲ ಧೂಪದ ಕಂಪು
ಕೆರೆಯೊಳಗೆ ಕೊಳನೊಳಗೆ ಗುಗ್ಗುಳದ ಸವಿಗಂಪು
ತೊರೆಯೊಳಗೆ ವನದೊಳಗೆ ಮೆರೆವ ಧೂಪದ ಕಂಪು
ತೀವುತಿರೆ ಪನ್ನೆರಡು ಬರಿಸಮೀ ತೆರದಿಂದೆ
ದೇವಂಗೆ ಬೀಸಿದಂ ಧೂಪವಂ ಮುದದಿಂದೆ
ಮಾಗೆಯೊಳ್ಬೇಸಗೆಯೊಳುಬ್ಬರದ ಮಳೆಗಳೊಳ್
ರಾಗದೆ ವಸಂತ ಹೇಮಂತ ಋತುಕಾಲದೊಳ್
ತಂದು ತಂದೋಹಿಲಯ್ಯಂ ಧೂಪವಂ ಬೀಸಿ
ಕುಂದದಕ್ಕದೆ ಸುಖದ ಸುಗ್ಗಿಯಿಂದಂ ಬೀಸಿ
ಹರುಷದಿಂ ಸೋಮನಾಥಂಗೆ ಬಿನ್ನವಿಸಿದಂ
ಕರುಣಾಕರಂಗೆ ಪರಮಂಗೆ ಬಿನ್ನವಿಸಿದಂ
ದೇವ ನಿಮ್ಮಡಿಗಳೆಂತೆಂತು ಬೆಸಸಿದಿರಂತೆ
ದೇವ ನೀ ನಡೆಯಿಸಲ್ಕಡೆದು ಧೂಪವನಿಂತೆ
ತಂದೆ ನಾಂ ಪನ್ನೆರಡು ಬರಿಸವಾದುದು ದೇವ
ತಂದೆ ಕರುಣಿಪುದೆನಗೆ ನಿತ್ಯತ್ವವಂ ದೇವ

ಎನುತಿರ್ದನತ್ತಲಿತ್ತಲ್ರಜತಗಿರಿಯೊಳಗೆ
ಮನಸಿಜಹರಂ ನಂದಿಗೆಂದನಿಂದಿಳೆಯೊಳಗೆ
ಓರ್ವ ಭಕ್ತಂ ಧೂಪವಿಕ್ಕಿದಂ ಎಮಗೆಂದು
ಸರ್ವ ಮುಖದಿಂ ನಿಷ್ಠೆಯಿಂ ನೇಹದಿಂದೊಲಿದು
ಸೌರಾಷ್ಟ್ರದೊಳಗೋಹಿಲಯ್ಯನೆಂಬಂ ಕೇಳ
ತಾರಾದ್ರಿಗಾತನಂ ಕೊಂಡು ಬರ್ಪುದು ಕೇಳ
ಎನೆ ನಂದಿ ವೀರಭದ್ರಾದಿಗಳ್ನಡೆತಂದು
ತನತನಗೆ ನಲಿವ ಗಣವೃಂದದಿಂ ನಡೆತಂದು
ಸೌರಾಷ್ಟ್ರಮಂ ಪೊಕ್ಕು ಶಿವನಿಳೆಯುಕೈತಂದು
ಮಾರಮದ ಮಥನನರುಪಿರ್ದ ಕುರುಪಂ ನೆನೆದು
ಬರೆ ಶಿವಾಲಯುದ ಕದವೆಲ್ಲವಿಕ್ಕಿರೆ ನೋಡಿ
ಹರಭವನಮಂ ಮುಟ್ಟಲಮ್ಮದೆ ಮನಂಗೂಡಿ
ತಿರುಗಿ ಗಣಸಮಿತಿ ಕೈಲಾಸಕ್ಕೆ ನಡೆತಂದು
ಹರನೆಯುವಧಾರು ಮತ್ತೊಂದು ಬಿನ್ನಪವೆಂದು
ದೇವಾಲಯುದ ಕದವನಿಕ್ಕಿಕೊಂಡಿರ್ದಪಂ
ದೇವ ಸುಖದಿಂದೆ ಧೂಪವನಿಕ್ಕುತಿರ್ದಪಂ
ದೇವ ಕದವಂ ತೆರೆಯೆ ಕೋಪಿಸುವನೆಂದಂಜಿ
ದೇವ ಧೂಪದ ಸುಖಂ ಕೆಡುವುದೆಂದಾವಂಜಿ
ಬಂದೆವೆನೆ ಶಶಿಧರಂ ನಗುತವರ್ಗೆ ಬೆಸಸಿದಂ
ಮುಂದುವರಿದಾನಂದ ಜಲದಿಂದೆ ಬೆಸಸಿದಂ
ರಂಗಮಂಟಪದ ಪೂವಿನ ಕಲ್ಲನೋಸರಿಸಿ
ಲಿಂಗವಂತನನೆತ್ತಿಕೊಂಡು ಬನ್ನಿರೆ ಪರಸಿ
ಎಂದು ಬೆಸಸಿದೊಡನುಜ್ಞೆಯನಲ್ಲಿ ಕೆಯ್ಕೊಂಡು
ನಂದೀಶ ವೀರಭದ್ರಾದಿಗಳ್ನಡೆಗೊಂಡು
ಬಂದರೊಳಪೊಕ್ಕರೆತ್ತಿದರೋಹಿಲಯ್ಯನಂ
ಸಂದ ಧೂಪದ ಪಾತ್ರೆವೆರಸು ಸದ್ಭಕ್ತನಂ
ನೆಗೆದು ಕೈಲಾಸ ಸೋಪಾನವೇರಲ್ಕಂತೆ
ನೆಗೆದು ತೆರೆಗೊಂಡು ಧೂಪವನಡರುತುಂ ಮುಂತೆ
ಪೂಮಳೆಗಳೆರಗೆ ದುಂದುಭಿರವಂಗಳ್ಪಟ್ಟೆ

ಪ್ರೇಮದಿಂ ಸೌರಾಷ್ಟ್ರಪುರದೊಳಗೆ ಗುಡಿಗಟ್ಟಿ
ನೋಡಿ ಗುರ್ಜರದೇಶವೆಯ್ದೆ ಬೆರಗಾಗುತಿರೆ

ನೀಡಿ ನೆಗೆದುದು ಗಣಂ ಗಗನತಳ ವೊಪ್ಪುತಿರೆ
ಬರೆ ದೇವಲೋಕದೊಳ್ಗಗ್ಗಳದ ಕಂಪೆಸೆಯೆ
ಸುರಗಿರಿಯು ರಜತಗಿರಿಯೊಳಗೆಲ್ಲ ಕಂಪೆಸೆಯೆ
ದೇವಿ ಕೇಳ್ದಳ್ದೇವ ಈ ಕಂಪಿದೆಲ್ಲಿಯದು
ಭಾವಿಪೊಡೆ ಪೊಸ ಪರಿಮಳಂ ತಾನಿದೆಲ್ಲಿಯದು
ಹೆಂಪುಳ್ಳ ನವಧೂಪದೋಹಿಲಂ ಬಂದಪಂ
ಕಂಪಾವುದೆನೆ ದೇವಿ ಓಹಿಲಂ ಬಂದಪಂ
ಎನ್ನಣುಗನೋಹಿಲಯ್ಯಂ ಬಂದಪಂ ಗೌರಿ
ಎನ್ನ ಸುಖಸಿಧಿಯೋಹಿಲಯ್ಯ ಬಂದಂ ಗೌರಿ
ಎಂದು ಬೆಸಸುತ್ತಮಿರೆ ಬಂದನೋಹಿಲದೇವ
ಅಂದು ಗುಣಕುಲದ ನಡುವೊಪ್ಪಿ ಓಹಿಲದೇವ
ಎಯ್ತಂದು ಶರ್ವಂಗೆ ಶಂಕರಂಗೀಶಂಗೆ
ಸಯ್ತಾಗಿ ಭರ್ಗಂಗೆ ಶಶಿಧರಂಗಭವಂಗೆ
ದೇವಂಗೆ ದೇವರ ಶಿಖಾಮಣಿಗೆ ಪರಮಂಗೆ
ಭಾವಗಮ್ಯಂಗೆ ನಿಜಭಕ್ತೈಕ ವೇದ್ಯಂಗೆ
ಮೆಯ್ಯಿಕ್ಕುವಲ್ಲಿಯಾಂ ಧೂಪಮಂ ಬೀಸುತಿರೆ
ಮೆಯ್ಯುಪುಳಕಂಗಳಿಮ್ಮಡಿಸುತಂ ಬೀಸುತಿರೆ
ಸರ್ಪಭೂಷಣನೊಲ್ದು ನೋಡಿ ಸಂತಸವಿಡಿದು
ಒಪ್ಪದಿಂ ತಳ್ಕೈಸಿ ಕಡು ನೇಹವಿಡಿದಿಡಿದು
ನೋಡು ನಂದೀಶ ರಾಜ್ಯವನೊದೆದರಿಂತುಂಟೆ
ಮಾಡಿತ್ತನಲ್ಲೆನಲ್ಮತ್ತೆ ಮಾಡಿದರುಂಟೆ
ನೋವನರಿಯದೆ ಹೊತ್ತ ನಿತ್ತರಿಸಿದವರುಂಟೆ
ಭೂವಳಯದೊಳಗೋಹಿಲಯ್ಯಂಗೆ ಪಡಿಯುಂಟೆ
ಎಂದೋಹಿಲಯ್ಯಂಗೆ ಗಣಪದವಿಯಂ ಕೊಟ್ಟು
ಸಂದ ಗಣಕುಲದ ನಡು ಓಹಿಲನ ಮುಂದಿಟ್ಟು
ಸುರಶಿರೋಮಾಲಿಯೊಪ್ಪಿದನಚಲನೊಪ್ಪಿದಂ
ಪುರಭೀಮಕಾಲ ಕಾನನದಾವನೊಪ್ಪಿದಂ
ತಣ್ಪಿಂಗೆ ತಣ್ಪೆನಿಪ ಚಂದ್ರಧರನೊಪ್ಪಿದಂ

೮೦

ಗುಣ್ಪಿಂಗೆ ಗುಣ್ಪೆನಿಪ ಗಂಭೀರನೊಪ್ಪಿದಂ
ಪೆಂಪುಳ್ಳ ಹೆಚ್ಚುಳ್ಳ ಸುಖನಿತ್ಯನೊಪ್ಪಿದಂ
ಹಂಪೆಯ ವಿರೂಪಾಕ್ಷದೇವನಿಂತೊಪ್ಪಿದಂ

**ಕಂದ॥** ಪರಮವಿರಕ್ತಿಯೊಳೈತಂ
ಪರವರಿಸದೆ ನಿಮಗೆ ಧೂಪವಂ ತಂದಿತ್ತಾ
ವರದಿಂ ಸಂದೋಹಿಲದೇ
ವರಸುತ ನಾಂ ದೇವ ಹಂಪೆಯ ವಿರೂಪಾಕ್ಷಂ

---

ವಚನ:— ೨೭. ಜನಿತವಿಲ್ಲದೆ ಜನಿಸಿ ಸ್ವಯಂವಾದ ಹರನೇ ನೀನು ನಿರೂಪನೇ? ಜನಿಸಿ ಜನಿತವ ಒಗೆಯಂರಾಗಿ ಎಮ್ಮ ಪುರಾತನರೇ ನಿರೂಪರು. ಕುಲದಲ್ಲಿ ಹುಟ್ಟಿ ಕುಲವ ಬೆರಸರಾಗಿ ಆದಿ ಲಿಂಗ ಅನಾದಿ ಶರಣ. ಹೆಸರಿಲ್ಲದ ದೆಸೆಗೇಡಿ ಲಿಂಗವ ವಶಕ್ಕೆ ತಂದು ಹೆಸರಿಟ್ಟು ಕರೆದಡೆ ನೀನು ಸುಲಭನೆ? ಅಲ್ಲ. ನೀನು ಕುಲಗೇಡಿ, ನಿನ್ನನಾರುಬಲ್ಲರು? ನೀನಗೋಚರ. ಹರನೇ ಬೇಡಿದತ್ತ ಕೊಟ್ಟು ನೀ ಬಂದರೆ ನಿನ್ನನಾಗು ಮಾಡಿದರಲ್ಲದೆ ಎಮ್ಮ ಪುರಾತನರು ನಿಮ್ಮಲ್ಲಿಗೆ ಬಂದು ದೈನ್ಯಬಟ್ಟು ಬೇಡಿದರಿಲ್ಲೈ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

ಭಾವ:— ವಚನಕಾರನು ಇದರಲ್ಲಿ ಒಂದು ಬಗೆಯ ವ್ಯಂಗ್ಯ ರೀತಿಯಿಂದ ಭಕ್ತನೇ ಪರಮಾತ್ಮನಿಗಿಂತಲೂ ಶ್ರೇಷ್ಠನು ಎಂದು ಹೇಳಿ ಭಕ್ತನ ಮಹತ್ವವನ್ನು ವರ್ಣಿಸಿರುವನು. ಪರಮಾತ್ಮನಿಗೆ ಹುಟ್ಟು ಇಲ್ಲದ್ದರಿಂದ ಅವನು ಸ್ವಯಂಭೂ ಎಂದು ಜನರು ಹೇಳುವದುಂಟು. ಆದರೆ ಇದರಲ್ಲಿ ಆವ ಮಹತ್ವವಿಲ್ಲೆಂದು ವಚನಕಾರನ ಭಾವವು. ಯಾಕಂದರೆ ನಮ್ಮ ಪುರಾತನರು ಹುಟ್ಟಿಯೂ ಕೂಡ ಹುಟ್ಟಿದವರಂತೆ ವ್ಯವಹರಿಸುತ್ತಾರೆ. ಅವರ ವರ್ತನೆಯು ಹೀಗೆ ಉಚ್ಚತರದ್ದಿರುತ್ತದೆ. ಆದ್ದರಿಂದ ಇವರೇ ರೂಪರಹಿತರು, ಸ್ವಯಂಭೂಗಳೆಂದು ವಚನಕಾರನು ಇಲ್ಲಿ ಹೇಳುತ್ತಾನೆ. ಆದಿ ಲಿಂಗ ಅನಾದಿ ಶರಣ ಎಂದು ಜನರು ನುಡಿಯುತ್ತಾರೆ. ಇದಾದರೂ ನಿಜವು. ಯಾಕಂದರೆ ಶರಣರು ಕುಲದಲ್ಲಿ ಹುಟ್ಟಿಯೂ ಕೂಡ ಕುಲವನ್ನು ಬೆರಿಸುವದಿಲ್ಲ. ಆದ್ದರಿಂದ ಅವರು ಅನಾದಿಗಳು. ಇವರ ಮಹತ್ವವು ಹೆಚ್ಚು. ಲಿಂಗವು ಹುಟ್ಟಿಲ್ಲನ್ನು. ಆದ್ದರಿಂದ ಅದು ದೆಸಿಗೇಡಿಯು. ಇಂಥ ಲಿಂಗವನ್ನು ತಮ್ಮ ವಶಕ್ಕೆ ತೆಗೆದುಕೊಂಡು ಅದಕ್ಕೆ ಒಂದು ಹೆಸರಿಟ್ಟು ಕರೆದರೆ ಏನೂ ಪ್ರಯೋಜನವಿಲ್ಲ. ಯಾಕಂದರೆ ಕುಲವಿಲ್ಲದಂಥಾದ್ದನ್ನು ಅದು ಎಲ್ಲಿಯದು, ಯಾರದು ಎಂಬುದನ್ನು ತಿಳಿಯಲಿಕ್ಕೆ ಶಕ್ಯವಿಲ್ಲ. ಶರಣರ ಮಹತ್ವವು ಎಷ್ಟೆಂದರೆ ಅವರು ಕರೆದ ಕೂಡಲೆ ಪರಮಾತ್ಮನು ಅವರಿಗೆ ಕಾಣಿಸಿಕೊಳ್ಳುವನು. ಮತ್ತು ಬೇಡಿದ್ದನ್ನು ಕೊಡುವನು. ಹೀಗೆ ಅವನು ಶರಣರಿಗೆ ಕೊಟ್ಟರೆ ಮಾತ್ರ ಶರಣರು ಅವನನ್ನು ಪ್ರೀತಿಸುವರು. ಪುರಾತನರು ಬೇಡಿದ ಕೂಡಲೆ ಪರಮಾತ್ಮನು ಅವರಿದ್ದಲ್ಲಿಗೆ ಹೋಗಿ ದೈನ್ಯದಿಂದ ಅವರಿಗೆ ಕೊಟ್ಟು ಬರು

ವನು. ಭಕ್ತರ ಮಹತ್ವವು ಇಷ್ಟು ಹೆಚ್ಚಿದೆ. ಭಕ್ತಿಯ ಮಹತ್ವವನ್ನು ವಚನಕಾರನು ಇಲ್ಲಿ ಒಂದು ರೀತಿಯಿಂದ ವರ್ಣಿಸಿರುವನು.

**ವಚನ:—** ೨೮. ನಾನಾ ಪ್ರಯತ್ನದಿಂದ ಹೊನ್ನನಾರ್ಜಿಸುವಂತೆ, ನಾನಾ ಪ್ರಯತ್ನದಿಂದ ಹೊನ್ನ ಸುರಕ್ಷಿತವ ಮಾಡುವಂತೆ, ನಾನಾ ಪ್ರಯತ್ನದಿಂದ ಬೇಡಿದವರಿಗೆ ಕೊಡದೆ ಲೋಭವ ಮಾಡಿ ಸ್ನೇಹಿಸುವಂತೆ, ನಾನಾ ವಿಧದಿಂದ ವಿಚಾರಿಸಿ ವಿಚಾರಿಸಲು ಪ್ರಾಣವೇ ಹೊನ್ನೆಂಬಂತೆ, ನಾನಾ ಪರಿಯಲು ಮನ ಬುದ್ಧಿ ಚಿತ್ತಹಂಕಾರಂಗಳು ಪಂಚೇಂದ್ರಿಯಂಗಳು ಪ್ರಾಣವನು ಅವಗ್ರಹಿಸಿಕೊಂಡಿಪ್ಪಂತೆ, ಶಿವಲಿಂಗವನು ಅವಗ್ರಹಿಸಿಕೊಂಡಿರಬೇಕು. ಯಾಕೆ? ಆ ಹೊನ್ನೇ ಶಿವನಾದ ಕಾರಣ. ಓಂ ನಮೋ ಹಿರಣ್ಯ ಬಾಹವೆ, ಹಿರಣ್ಯವರ್ಣಾಯ, ಹಿರಣ್ಯರೂಪಾಯ, ಹಿರಣ್ಯಪರಾಯನಮಃ ಎಂದುದಾಗಿ ಶಿವನೇ ಹೊನ್ನು ಕಾಣಿರೋ. ಶಿವಶಿವಾ ನಾನಾ ಪ್ರಯತ್ನದಿಂದ ಕುಲವುಳ್ಳವರು ಅತ್ಯಂತ ಯವ್ವನೆಯುಪ್ಪ ಹೆಣ್ಣಿಂಗೆ ಪ್ರಾಣಕ್ಕೆ ಪ್ರಾಣವಪ್ಪಂತೆ ಆ ಹೆಣ್ಣಿಂಗೆ ಅಂತಃಕರಣ ಚತುಷ್ಟಯಂಗಳ ಸ್ನೇಹಿಸುವಂತೆ ಆ ಹೆಣ್ಣು ಪ್ರಾಣವಾಗಿಪ್ಪಂತೆ, ಆ ಲಿಂಗವೇ ಪ್ರಾಣವಾಗಿರಬೇಕು. ಅದಕ್ಕೆ ಹೆಣ್ಣೇ ಶಿವನಾದ ಕಾರಣ ಶಕ್ತ್ಯಾಧಾರ ಮಹಾದೇವೋಶಕ್ತಿನಾತ್ಮೇನ ವೈ ನಮಃ। ಶಕ್ತಿಕರ್ಮಸ್ಯ ಕರ್ತಾಚ ಮುಕ್ತಾ ಶಕ್ತಿ ನಮೋ ನಮಃ ಎಂದುದಾಗಿ, ಆ ಹೆಣ್ಣು ತಾನೇ ಶಿವನು ಕಾಣಿರೋ. ನಾನಾ ಪ್ರಯತ್ನದಿಂದ ಮಣ್ಣನಾರ್ಜಿಸುವಂತೆ ಆ ಭೂಮಿಯ ಅಗುಚಾಗಿಗೆ ಅರ್ಥ ಪ್ರಾಣಾಭಿಮಾನವಸಿಕ್ಕಿ ಆ ಭೂಮಿಯ ರಕ್ಷಿಸಿ ಆ ಭೂಮಿಯನೆ ಸರ್ವ ಭೋಗೋಪಭೋಗಂಗಳನು ಭೋಗಿಸಿ ಸುಖಿಸುವಂತೆ ಶಿವಲಿಂಗದಿಂದ ಭೋಗಿಸಬೇಕು. ಅದೇಕೆಂದರೆ ಆ ಭೂಮಿಯೇ ಶಿವನಾದ ಕಾರಣ. ಓಂ ಯಜ್ಞ ರುದ್ರಸ್ಯ ಚಿತ್ಪೃಥ್ವಿ ಭೂರ್ಭುವಸ್ವಸಹೆ ನಮೋ ನಮಃ ಶಿವಂ ಜನಯಂತಿ ಶಿವೋ ಶಿವಃ ಎಂದುದಾಗಿ ಭೂಮಿಯೇ ಶಿವನು ಕಾಣಿರೋ. ಸರ್ವಾಧಾರ ಮಹಾದೇವ, ಇದು ಕಾರಣ ಹೊನ್ನು ಹೆಣ್ಣು ಮಣ್ಣು ತ್ರಿವಿಧವು ಶಿವನು ಕಾಣಿರೋ. ಈ ತ್ರಿವಿಧದ ಮರೆಯಲ್ಲಿ ಶಿವನಿಪ್ಪನು ಕಾಣಿರೋ. ಇದು ಕಾರಣ ಶಿವಲಿಂಗಕ್ಕೆ ಈ ತ್ರಿವಿಧಕ್ಕೆ ಮಾಡುವ ಸ್ನೇಹ ಇಂತೀ ತ್ರಿವಿಧದಲ್ಲಿ ಮಾಡುವ ಲೋಭ ಇಂತೀ ತ್ರಿವಿಧಕ್ಕೆ ಮಾಡುವ ತಾತ್ಪರ್ಯವ ಲಿಂಗಕ್ಕೆ ಮಾಡಿವಡೆ ಶಿವನಲ್ಲಿ ಸಾಯುಜ್ಯನಾಗಿ ಸರ್ವಭೋಗೋಪಭೋಗವ ಭೋಗಿಸಿ ಪರಮ ಪರಿಣಾಮ ಸುಖಸ್ವರೂಪನಾಗಿಪ್ಪನಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:**— ಜನರು ಹೊನ್ನು, ಹೆಣ್ಣು, ಮಣ್ಣು ಇವುಗಳ ಮೇಲೆ ಅತ್ಯಂತ ಪ್ರೀತಿಯನ್ನು ಹೊಂದಿ ಅವುಗಳನ್ನು ರಕ್ಷಿಸುತ್ತಾರೆ. ಅವು ತಮ್ಮ ಪ್ರಾಣವೆಂತಲೇ ಭಾವಿಸುತ್ತಾರೆ. ಹೊನ್ನಿಗೆ ಹಿರಣ್ಯ, ಹೆಣ್ಣಿಗೆ ಶಕ್ತಿ, ಮಣ್ಣು ಭೂಮಿ ಎಂದು ತಿಳಿದು ಈ ವಸ್ತುಗಳು ಪರಮಾತ್ಮ ಸ್ವರೂಪು ಎಂಬ ಭಾವದ ಶಾಸ್ತ್ರಕಾರರ ಅನೇಕ ಉಕ್ತಿಗಳುಂಟು. ಅವು ಗಳನ್ನು ವಚನಕಾರನು ಇಲ್ಲಿ ಉದಹರಿಸಿದ್ದಾನೆ. ಯಾವ ವಿಧವಾದ ಸ್ನೇಹವನ್ನು ಈ ವಸ್ತುಗಳಿಗೆ ನೀವು ತೋರಿಸುವಿರೋ ಅದೇ ರೀತಿ ಯಾಗಿ ಲಿಂಗಕ್ಕೂ ತೋರಿಸಬೇಕೆಂದು ವಚನಕಾರನ ಮುಖ್ಯ ಅಭಿ ಪ್ರಾಯವಿದೆ.

---

# ಲಿಂಗಪೂಜೆ.

ವಿವರಣೆ:— ಅರ್ಚನೆ ಪೂಜೆಗಳನ್ನು ಸಾಕಾರವಿಡಿದು ಮಾಡ ಬೇಕು. ಕೇವಲ ನಿರಾಕಾರವನ್ನು ನಂಬಲಾಗದು. ಯಾಕಂದರೆ ನಿರಾ ಕಾರದಿಂದ ಮನಸ್ಸು ದೃಢಪಡುವದಿಲ್ಲ. ಅದು ಚಂಚಲವೃತ್ತಿಯನ್ನು ಹೊಂದುತ್ತದೆ. ಸಕಾರದಿಂದಲೇ ನಿರಾಕಾರವನ್ನು ಹೊಂದಬೇಕೆಂಬ ತತ್ವವಿದೆ.

ಲಿಂಗದಲ್ಲಿ ಸಾಕಾರ ನಿರಾಕಾರಗಳೆರಡೂ ಸಂಬಂಧಪಟ್ಟಿರುವದರಿಂದ ಇದರಲ್ಲಿ ಸಾಕಾರದಿಂದ ನಿರಾಕಾರವನ್ನು ಅರಿಯಬಹುದಾಗಿದೆ. ಆದರೆ ಲಿಂಗವು ಅವೆರಡನ್ನೂ ಮೀರಿರುವದು. ಈ ವಿಷಯಗಳನ್ನು ಭಕ್ತನು ಅರಿತು ಲಿಂಗಪೂಜೆಯನ್ನು ಮಾಡಬೇಕು.

ಅವನು ಒಳಹೊರಗೆಂಬ ಭಾವವನ್ನು ಮರೆತು ಆಚರಿಸಬೇಕು. ಇದರಿಂದ ಅದು ಅವನಿಗೆ ಸಹಜ ಸ್ವಭಾವವಾಗುವದು. ಇಂಥ ಸ್ಥಿತಿ ಯಲ್ಲಿ ಅವನ ಇಂದ್ರಿಯಗಳೆಲ್ಲವೂ ಲಿಂಗೇಂದ್ರಿಯಗಳಾಗುವವು. ಅವನ ಚಕ್ಷು, ಮನ, ಪ್ರಾಣ ಮುಂತಾದವುಗಳೆಲ್ಲೆಲ್ಲ ಪರಮಾತ್ಮನ ಕಳೆಯೇ ತುಂಬಿಕೊಳ್ಳುವದು. ನೆನೆಯುವವ ಮತ್ತು ನೆನಹು ಇವೆರಡೂ ಅಳಿದು ಹೋಗುವವು. ಮತ್ತು ಲಿಂಗ ಪರವಶನಾಗಿ ವರ್ತಿಸಹತ್ತುವನು. ಹೀಗೆ ಭಕ್ತನ ಅಂತರಂಗ ಬಹಿರಂಗಗಳಲ್ಲಿ ಲಿಂಗವೇ ತುಂಬಿಕೊಳ್ಳುವದು.

ಇಂಥವನ ಪೂಜಾಕ್ರಿಯೆಗಳಲ್ಲಿ ಆಹ್ವಾನ ವಿಸರ್ಜನೆಗಳಿರಲಾರವು.

ಹೀಗೆ ಲಿಂಗದೊಡನೆ ವ್ಯವಹರಿಸುವವನು ಬಾಹ್ಯ ಕ್ರಿಯೆಗಳನ್ನು ಮಾಡುತ್ತಿದ್ದರೂ ಅವು ಬರೀ ಉಪಚಾರವು. ಶರಣನ ಲಿಂಗಪೂಜಾ ವಿಧಾನವು ಈ ರೀತಿಯದಾಗಿದೆ.

ವಚನ:— ೨೯. ಸಾಕಾರವಿಡಿದರ್ಚನೆ ಪೂಜನೆಯ ಮಾಡುವು ದಲ್ಲದೆ, ನಿರಾಕಾರವ ನಂಬಲಾಗದು. ಶ್ರೀ ಗುರುಲಿಂಗವು ಪ್ರಾಣಲಿಂಗ ವನು ಕರಸ್ಥಲದಲ್ಲಿ ಬಿಜಯಂಗೈಸಿ ಕರುಣಿಸಿದ ಬಳಿಕ, ವಜ್ರದಲ್ಲಿ ಬಯ ಲನರಸುವರೇ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ ?

**ಭಾವಃ**— ಭಕ್ತಿಯು ದೃಢಪಡಲಿಕ್ಕೆ ಅರ್ಚನೆ ಪೂಜೆಯು ಅವಶ್ಯವಾದುದು. ಅರ್ಚನೆ ಪೂಜೆಯನ್ನು ಸಾಕಾರವಿಲ್ಲದೆ ಮಾಡಲಿಕ್ಕೆ ಬರಲಾರದು ನಿರಾಕಾರ ಪೂಜೆಯನ್ನು ನಂಬಲಾಗದೆಂದು ವಚನಕಾರನ ಅಭಿಪ್ರಾಯವಿದೆ. ಆದರೆ ಕರಸ್ಥಲದಲ್ಲಿಯ ಇಷ್ಟಲಿಂಗವು ಗುರುವು ಕೊಟ್ಟ ಪ್ರಾಣಲಿಂಗವೆಂಬ ಭಾವವಿರುವದರಿಂದ ಈ ಇಷ್ಟಲಿಂಗದಿಂದಲೇ ಪ್ರಾಣಲಿಂಗವನ್ನು ಸಾಧ್ಯಮಾಡಿಕೊಳ್ಳಬೇಕು. ಇಷ್ಟಲಿಂಗದಲ್ಲಿ ಪ್ರಾಣಲಿಂಗವು ಇರಲಾರದೆಂದು ಭಾವಿಸಕೂಡದು. ಹೀಗೆ ಭಾವಿಸುವದೆಂದರೆ ಅತ್ಯಂತ ಗಟ್ಟಿಯಾದ ವಜ್ರದಲ್ಲಿ ಬಯಲನ್ನು ಹುಡುಕುವಂತೆಯೇ ಸರಿ ಎಂದು ವಚನಕಾರನು ಇಲ್ಲಿ ಅನ್ನುತ್ತಾನೆ.

**ವಚನಃ— ೩೦.** ಸಕಲವ ಪೂಜಿಸಿಹೆನೆಂಬ ಪೂಜಕಂಗೆ ಸಕಲವನು ಲಿಂಗದಲ್ಲಿಯೇ ಪೂಜಿಸುವುದು. ನಿಷ್ಕಲವ ಪೂಜಿಸಿಹೆನೆಂಬ ಪೂಜಕಂಗೆ ನಿಷ್ಕಲವನೂ ಲಿಂಗದಲ್ಲಿಯೇ ಪೂಜಿಸುವುದು. ಅದೆಂತೆಂದೊಡೆ ಸಕಲ ನಿಃಕಲಾತ್ಮಕ ಸಕಲನಿಃಕಲಾತೀತ ಅಂಗಬಾಹ್ಯಾತ್ಪರಂನಾಸ್ತಿ । ಲಿಂಗಪೂಜ್ಯ ಮೇವಚ । ಸರ್ವರೂ ಪೂಜಿಸುವರೆಂಬ ಕಾರಣದಿಂದ ಲಿಂಗಾರ್ಚನೆಯಿಂದ ಪರ ಒಂದೂ ಇಲ್ಲೆಂದುದಾಗಿ ಒಳಹೊರಗೆಂಬ ಭಾವವಳಿದುಳಿದ ಶರಣನ ಅಂತರಂಗ ಬಹಿರಂಗದಲ್ಲಿ ಭರಿತನು, ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನು ಪರಂಜ್ಯೋತಿರ್ಲಿಂಗ ಶರಣನ ಅಂತರಂಗ ಬಹಿರಂಗ ಸಂಗಿಯಾಗಿ.

**ಭಾವಃ**— ಸಾಕಾರ ಪೂಜೆಯನ್ನು ಬಯಸುವವನು ಅದನ್ನು ಇಷ್ಟಲಿಂಗದಲ್ಲಿಯೇ ಮಾಡಬೇಕು. ನಿಷ್ಕಳವನ್ನು ಎಂದರೆ ನಿರಾಕಾರವನ್ನು ಪೂಜಿಸಬೇಕೆಂಬುವವನು ಕೂಡ ಆ ಇಷ್ಟಲಿಂಗದಲ್ಲಿಯೇ ಅದನ್ನು ಮಾಡಬೇಕು. ಯಾಕಂದರೆ ಸಾಕಾರವಾದ ಇಷ್ಟಲಿಂಗದಿಂದ ನಿರಾಕಾರ ಪ್ರಾಣಲಿಂಗವು ಸಾಧ್ಯವಾಗುವದೆಂದು ಆಗಮವಾಕ್ಯವಿದೆ. ವಚನಕಾರನು ಈ ವಾಕ್ಯವನ್ನು ಇಲ್ಲಿ ಉದಹರಿಸಿದ್ದಾನೆ. ಲಿಂಗವು ಸಕಲವೂ ನಿಃಕಳವೂ ಸಕಲ ನಿಃಕಲಾತೀತವೂ ಇದ್ದು ಅದನ್ನು ಹೊರ್ತುಪಡಿಸಿ ಯಾವದೂ ಇರಲಾರದು. ಅದು ಪೂಜ್ಯ ವಸ್ತುವು ಎಂದು ಈ ಆಧಾರ ವಾಕ್ಯದಲ್ಲಿ ಹೇಳಲ್ಪಟ್ಟಿದೆ. ಇಂಥ ಲಿಂಗವನ್ನು ಪೂಜಿಸಿದಲ್ಲಿ ಅದು ವ್ಯರ್ಥ ಹೋಗಲಾರದು. ಆದರಲ್ಲಿ ಇದು ಒಳಗು ಇದು ಹೊರಗು ಇದು ಆಕಾರವುಳ್ಳದ್ದು ಇದು ನಿರಾಕಾರವುಳ್ಳದ್ದು ಎಂಬ ಭೇದಭಾವವಿಲ್ಲ. ಲಿಂಗವು

ಮನುಷ್ಯನ ಅಂತರಂಗದಲ್ಲಿ ಬಹಿರಂಗದಲ್ಲಿ ತುಂಬಿಕೊಂಡಿರುತ್ತದೆ. ಅದು ಯಾವಾಗಲೂ ಅವುಗಳಲ್ಲಿ ಪ್ರಕಾಶಿಸುತ್ತಲಿರುತ್ತದೆ.

**ವಚನ:**— ೩೧. ಅಮೃತಕ್ಕೆ ಹಸಿವುಂಟೆ? ಜಲಕ್ಕೆ ತೃಷೆಯುಂಟೆ? ಘನಪುರುಷಂಗೆ ವಿಷಯವುಂಟೆ? ಸದ್ಗುರು ಕಾರುಣ್ಯವಂ ಪಡೆದು ಲಿಂಗಾರ್ಚನೆಯ ಮಾಡುವ ಮಹಾ ಶರಣಂಗೆ ಮುಕ್ತಿಯ ಬಯಕೆಯುಂಟೆ? ಅವರುಗಳಿಗೆ ಅದು ಸ್ವಯಂಭು ಸಹಜ ಸ್ವಭಾವ. ಇನ್ನು ತೃಪ್ತಿ ಆಪ್ಯಾಯನ ಅರಸಲುಂಟೇ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ?

**ಭಾವ:**— ಲಿಂಗಪೂಜೆಯನ್ನು ಯಾವ ವಿಧವಾಗಿ ಮಾಡಬೇಕೆಂಬುದನ್ನು ವಚನಕಾರನು ಇಲ್ಲಿ ಹೇಳಿದ್ದಾನೆ. ಈ ಪೂಜೆಯನ್ನು ಮಾಡುವಲ್ಲಿ ಯಾವ ಬಗೆಯ ಫಲಪದವನ್ನು ಅಪೇಕ್ಷಿಸದೆ ಅವನು ಮಾಡಬೇಕು. ಲಿಂಗಪೂಜಕನು ಮೋಕ್ಷಾಪೇಕ್ಷೆಯನ್ನು ಸಹ ಹೊಂದಕೂಡದು. ಲಿಂಗದಲ್ಲಿದ್ದುಕೊಂಡು ಅದರಲ್ಲಿಯೇ ಜೀವಿಸುವವನಿಗೆ ಅವನ್ನು ಹೊಂದಬೇಕೆಂಬ ಇಚ್ಛೆಯು ಹ್ಯಾಗೆ ಉತ್ಪನ್ನವಾಗುವದು? ಉತ್ಪನ್ನವಾಗಲಾರದೆಂದು ವಚನಕಾರನ ಭಾವವು. ಹ್ಯಾಗೆ ಅಮೃತಕ್ಕೆ ಹಸಿವು ಜಲಕ್ಕೆ ತೃಷೆಯು ಮಹಿಮಾಪುರುಷನಿಗೆ ಸುಖೋಪಭೋಗದ ಲಾಲಸೆಯು ಅಶಕ್ಯವೋ ಹಾಗೆ ಲಿಂಗವಂತನು ಲಿಂಗದಲ್ಲಿದ್ದುಕೊಂಡು ಲಿಂಗಪೂಜೆಯನ್ನು ಮಾಡುವವನಾದ್ದರಿಂದ ಲಿಂಗದಲ್ಲಿ ತಾನು ಬಯಲಾಗುವೆನೆಂಬ ಇಚ್ಛೆಯೂ ಸಹ ಉಳಿಯಲಾರದು. ಆ ಇಚ್ಛೆಯು ಅವನಲ್ಲಿ ಸ್ವಯಂಭೂ ಸಹಜ ಸ್ವಭಾವವಾಗಿರುತ್ತದೆ.

**ವಚನ:**— ೩೨. ಅಂಗಯ್ಯ ಲಿಂಗವ ಕಂಗಳಿಂ ನೋಡಿ ಮನ ಹಾರೈಸಿದಲ್ಲಿ ಅಂಗೇಂದ್ರಿಯಂಗಳಿಲ್ಲವು ಲಿಂಗೇಂದ್ರಿಯಂಗಳಾದವು. ಇನ್ನು ನೀನಂಜದಿರು ಮನವೇ ಲಿಂಗವು ನಿನಗೆ ದೂರವೆಂದು. ಮನೋಮಧ್ಯದೊಳಿಪ್ಪನು. ಅಂಗದ ಕಂಗಳಲ್ಲಿಪ್ಪನು. ಪ್ರಾಣದ ಭಾವದಲ್ಲಿಪ್ಪನು. ಅಂಗ ಪ್ರಾಣಭಾವ ಸರ್ವಾಂಗಲಿಂಗವಾದ ಬಳಿಕ, ಲಿಂಗಮಧ್ಯೇ ಪ್ರಾಣವಾಯಿತ್ತು, ಪ್ರಾಣಮಧ್ಯೇ ಲಿಂಗವಾಯಿತ್ತು, ಎಲೆ ಮನವೇ. ಇನ್ನು ಉತ್ಪತ್ತಿಸ್ಥಿತಿಲಯವಿಲ್ಲಾಗಿ, ಲಿಂಗದಿಂ ಜನಿಸಿ ಲಿಂಗೇಂದ್ರಿಯ ಲಿಂಗ ಜ್ಞಾನದಲ್ಲಿ ವರ್ತಿಸಿ, ದ್ವೈತಾದ್ವೈತವಿಲ್ಲಾಗಿ ಬಂದುದೇ ಲಿಂಗದ ಲೀಲೆ, ಇದ್ದುದೇ ಲಿಂಗದಾನಂದ, ಮನೋಲಯವೇ ಲಿಂಗದ ನಿರವಯವು. ಇದು ಸತ್ಯ ಶಿವ ಬಲ್ಲ ಶಿವನಾಣೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:—** ಲಿಂಗಪೂಜೆಯನ್ನು ಯಾವ ಭಾವದಿಂದ ಮಾಡಬೇಕೆಂಬುದನ್ನು ವಚನಕಾರನು ಹಿಂದಿನ ವಚನದಲ್ಲಿ ಹೇಳಿ ಈ ವಚನದಲ್ಲಿ ಆ ಬಗೆಯ ಭಾವವುಳ್ಳವನು ಯಾವ ರೀತಿಯಾಗಿ ಜಗತ್ತಿನಲ್ಲಿ ವ್ಯವಹರಿಸಬೇಕು ಎಂಬದನ್ನು ಹೇಳಿರುವನು. ಇಷ್ಟಲಿಂಗವನ್ನು ಏಕಾಗ್ರ ಮನಸ್ಸಿನಿಂದ ಭಾವಪೂರಿತನಾಗಿ ದೃಷ್ಟಿಇಟ್ಟು ನೋಡಿದ ಕೂಡಲೇ ಆ ಲಿಂಗವು ಅವನ ಮನಸ್ಸನ್ನು ಆವರಿಸುವದು. ಆವರಿಸಿದ ಆ ಮನದ ಮುಖಾಂತರವಾಗಿ ಅದು ಅವನ ಹೃದಯದಲ್ಲಿ ಮೂಡುವದು. ಆಗ ಅವನ ಇಂದ್ರಿಯಗಳೆಲ್ಲವು ಲಿಂಗೇಂದ್ರಿಯಗಳಾಗುವವು. ಅಂದರೆ ಅವನ ಇಂದ್ರಿಯಗಳೆಲ್ಲೆಲ್ಲ ಪರಮಾತ್ಮ ಕಳೆಯು ಚಲಿಸಹತ್ತುವದು. ಆಗ ಮನುಷ್ಯನು ಹೊರಗಿನ ಎಡರುಗಳಿಗೆ ಅಂಜುವದಿಲ್ಲ. ಈ ಸ್ಥಿತಿಯಲ್ಲಿ ಲಿಂಗವು ಅವನ ಮನಸ್ಸಿನಲ್ಲಿ ಕಣ್ಣಿನಲ್ಲಿ ಪ್ರಾಣದಲ್ಲಿ ಹುದುಗಿರುವದು. ಹೀಗೆ ಅಂಗ ಪ್ರಾಣ ಭಾವಗಳೆಲ್ಲ ಲಿಂಗಮಯವಾಗಲು ಲಿಂಗದಲ್ಲಿ ಅವನ ಪ್ರಾಣವು ಅವನ ಪ್ರಾಣದಲ್ಲಿ ಲಿಂಗವು ಇರುವ ಸ್ಥಿತಿಯು ಒದಗುವದು. ಎಂದರೆ ಅವನಲ್ಲಿ ಲಿಂಗಾಂಗ ಸಾಮರಸ್ಯ ಭಾವವು ತಲೆದೋರುವದು. ಲಿಂಗಪೂಜೆಯ ಉದ್ದೇಶವು ಇದೇ ಇರುತ್ತದೆ. ಈ ಸ್ಥಿತಿಯಲ್ಲಿ ಲಿಂಗವಂತನಿಗೆ ಹುಟ್ಟು, ಇರುವಿಕೆ, ಹಾಗು ಸಾವು ಇರಲಾರವು. ಅವನ ಪೂರ್ವಾಶ್ರಯವು ಅಳಿದು ಹೋಗಿ ಲಿಂಗದ ಜನ್ಮವು ಉಂಟಾಗುವದು. ಅವನ ಇಂದ್ರಿಯಗಳೆಲ್ಲವೂ ಲಿಂಗೇಂದ್ರಿಯಗಳಾಗುವವು. ಅವನ ಜ್ಞಾನವು ಲಿಂಗಜ್ಞಾನವಾಗುವದು. ದ್ವೈತಾದ್ವೈತಭಾವವು ಅಳಿದುಹೋಗುವದು. ತನಗೆ ದೊರೆತದ್ದೇ ಲಿಂಗದ ಇಚ್ಛೆಯು. ತಾನು ಇದ್ದ ಸ್ಥಿತಿಯೇ ಲಿಂಗದ ಆನಂದವು, ಲಿಂಗದಲ್ಲಿ ಮನಸ್ಸನ್ನಿಡುವದೇ ನಿರವಯ ಸ್ಥಿತಿಯು ಹೀಗಾಗುವದು. ಇದೇ ಲಿಂಗವಂತನ ಇರವು ಎಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**ವಚನ:—** ೩೩. ಕರಸ್ಥಲದಲ್ಲಿ ಶಿವಲಿಂಗವ ಬಿಜಯಂಗೆಯಿಸಿಕೊಂಡು ಕಣ್ಣು ಮುಚ್ಚಿ ಬಾಯನ್ನು ತೆರೆದು, ಅನ್ಯವ ನೆನೆವನ್ನಬರ ಇನ್ನು ಲಿಂಗದ ಮರ್ಮವನರಿದುದಿಲ್ಲ. ಉಂಟಾದುದ ಹುಸಿಮಾಡಿ ಇಲ್ಲದುದ ನೆನೆದರೆ ಅದು ಸಹಜವಾಗಬಲ್ಲುದೆ? ದೇವದೇಹಿಕಭಕ್ತ, ಭಕ್ತದೇಹಿಕ ದೇವನೆಂದುದಾಗಿ, ತನ್ನೊಳಗೆ ಲಿಂಗ, ಲಿಂಗದೊಳಗೆ ತಾನು. ನೆನೆಯಲಿಲ್ಲ ನೆನಹಿಸಿಕೊಳ್ಳಲಿಲ್ಲವಯ್ಯಾ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವ:—** ಲಿಂಗಧಾರಕನಾದವನು ಲಿಂಗವೇತಾನಾಗಿ ವರ್ತಿಸುತ್ತಾನೆ. ಆದ್ದರಿಂದ ಅವನು ಆ ಲಿಂಗವನ್ನು ಬಿಟ್ಟು ಇತರ ದೇವತೆಗಳನ್ನು ಭಜಿಸ

ಕೂಡದು, ಅಥವಾ ಧ್ಯಾನಿಸಕೂಡದು. ಹಾಗೆ ಆಚರಿಸುವವನಿಗೆ ಲಿಂಗದ ಮರ್ಮವೇ ತಿಳಿದಿಲ್ಲವೆನ್ನಬೇಕು. ತನ್ನ ಹತ್ತಿರ ಇದ್ದ ವಸ್ತುವನ್ನ ಇಲ್ಲ ವೆಂದು ಭಾವಿಸಿ ಇಲ್ಲದ ವಸ್ತುವನ್ನು ಬರೇ ನೆನೆದರೆ ಅದು ತನ್ನಲ್ಲಿ ಹ್ಯಾಗೆ ದೊರೆಕೊಳ್ಳಬೇಕು? ಪರಮಾತ್ಮನ ದೇಹವೇ ಭಕ್ತನ ದೇಹವಾಗಿರುತ್ತದೆ, ಮತ್ತು ಪರಮಾತ್ಮನಿಗೆ ಭಕ್ತನ ದೇಹವೇ ಅವನ ದೇಹವಾಗಿರುತ್ತದೆ, ಹೀಗೆ ಭಕ್ತ ಮತ್ತು ಪರಮಾತ್ಮ ಇವರಲ್ಲಿ ಪರಸ್ಪರ ಸಂಬಂಧವಿದೆ. ಲಿಂಗಧಾ ರಕನಾದ ಭಕ್ತನಿಗೆ ಲಿಂಗವು ಆವನಲ್ಲಿರುತ್ತದೆ, ಮತ್ತು ಲಿಂಗದಲ್ಲಿಯೇ ಅವನು ಇರುತ್ತಾನೆ, ಈ ಸಹಜ ಸ್ಥಿತಿಯು ಇರುವದರಿಂದ, ಲಿಂಗಿಯಾದ ವನು ಲಿಂಗವನ್ನು ನೆನೆಯಲಾರನು ಮತ್ತು ಲಿಂಗವೂ ನೆನೆಹಿಸಿಕೊಳ್ಳಲಾ ರದು. ಉಭಯ ವಸ್ತುಗಳಲ್ಲಿ ಹೀಗೆ ಏಕಾಕಾರವಿರುತ್ತದೆ. ಹೀಗೆ ಏಕಾ ಕಾರವಿದ್ದಲ್ಲಿ ನೆನೆಯುವದೂ ನೆನೆಹಿಸಿಕೊಳ್ಳುವದೂ ಇರಲಾರವು.

**ವಚನಃ**— ೩೪ ಜ್ಞಾನವೇ ಪ್ರಸಾದಕಾಯ, ಜ್ಞೇಯವೇ ಚಿನ್ಮಯ ಲಿಂಗ, ಜ್ಞಾನಜ್ಞೇಯ ಸಂಪುಟದಿಂದ ಶರಣನೆನಿಸಿಕೊಂಡ ಜಂಗಮದ ಅಂತರಂಗ ಬಹಿರಂಗದಲ್ಲಿ ನೀನೇ. ಎಂತು ನೋಡಿದರೆ ಶರಣನ ಕಣ್ಣ ಮೊದಲಲ್ಲಿ ನೀನೇ ಶಿವಜ್ಞಾನ ಸಂಪನ್ನನಾದ ಶರಣಂಗೆ ಆಹ್ವಾನ ವಿಸರ್ಜನೆ ಎಲ್ಲಿಯದು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ?

**ಭಾವಃ** — ಲಿಂಗ ಮತ್ತು ತಾನು ಈ ಪ್ರಕಾರ ಏಕಾಕಾರವಾಗಲು, ಲಿಂಗದ ಪ್ರಸಾದವು ಅಥವಾ ಅನುಭವವು ಅಥವಾ ಜ್ಞಾನವು ತನ್ನಲ್ಲಿ ಹರಿಗೊಳುವದು. ಈ ಸ್ಥಿತಿಯಲ್ಲಿ ಅವನು ಪ್ರಸಾದ ಕಾಯನೆಂದು ಎನಿ ಸಿಕೊಳ್ಳುವನು. ಇಂಥ ಪ್ರಸಾದ ಕಾಯದಿಂದಲೇ ಭಕ್ತನು ಆಚರಿಸು ವನು ಆಗ ಇವನಿಗೆ ನೆನೆಯತಕ್ಕ ವಸ್ತುವು ಚಿತ್ ಸ್ವರೂಪವಾದ ಲಿಂಗವೇ ಇರುತ್ತದೆ. ಅವನು ನೆನೆದ ಕೂಡಲೆ ಆ ಲಿಂಗದ ಶಕ್ತಿಯು ಅವನಲ್ಲಿ ಪ್ರವಹಿಸತೊಡಗುವದು. ಹೀಗೆ ನೆನೆಯತಕ್ಕ ವಸ್ತುವು ಮತ್ತು ಅವರ ಅನುಭವವು ಏಕಾಕಾರವಾದಂಥವನೇ ಶರಣನೆನಿಸುವನು. ಇವನೇ ಜಂಗಮನು. ಇವನ ಅಂತರಂಗ ಬಹಿರಂಗವೆಲ್ಲ ಪರಮಾತ್ಮಸ್ವರೂಪವೇ ಆಗಿರುತ್ತದೆ. ಈ ಶರಣನು ಯಾವದನ್ನು ನೋಡಿದರೂ ಅವನು ಅದೆಲ್ಲ ಪರಮಾತ್ಮಸ್ವರೂಪವೆಂತಲೇ ಕಾಣುತ್ತಾನೆ. ಪ್ರಸಾದ ಕಾಯನಾದ ಶರ ಣನ ಸ್ಥಿತಿಯು ಹೀಗಾಗುತ್ತದೆ. ಇಂಥವನು ಪರಮಾತ್ಮನು ತನ್ನಲ್ಲಿ ಬರ ಲೆಂತಲೂ ಇಚ್ಛಿಸುವದಿಲ್ಲ. ಅದು ಹೋಗಬೇಕೆಂತಲೂ ಹೇಳುವದಿಲ್ಲ.

ಭಿನ್ನ ಕ್ರಿಯೆಗಳಿಂದ ಪರಮಾತ್ಮನನ್ನು ಪೂಜಿಸುವವರು ಈ ಬಗೆಯ ಆಹ್ವಾನ ವಿಸರ್ಜನೆಗಳಿಂದ ಪೂಜಿಸುತ್ತಾರೆ. ಆದರೆ ಸಮರಸಭಾವವುಳ್ಳ ಲಿಂಗವಂತರಿಗೆ ಹೀಗೆ ಆಹ್ವಾನ ವಿಸರ್ಜನೆಗಳಿಲ್ಲ.

**ವಚನಃ**— ೩೫. ಸದ್ಯೋಜಾತಮುಖವೇ ಪೃಥ್ವಿ ಎಂದರಿದಲ್ಲಿ ಸ್ಥಾವರಂಗಳಲ್ಲಿ ಪತ್ರೆಪುಷ್ಪದ ಹಂಗೇಕೆ? ವಾಮದೇವ ಮುಖವೇ ಅಪ್ಪುವೆಂದರಿದಲ್ಲಿ ಅಗ್ಗವಣಿಯಲ್ಲಿ ಮಜ್ಜನಕ್ಕೆರೆವ ಹಂಗೇಕೆ? ಅಘೋರ ಮುಖವೇ ಅಗ್ನಿ ಎಂದರಿದಲ್ಲಿ ಧೂಪದೀಪಾರತಿಗಳ ಹಂಗೇಕೇ? ತತ್ಪುರುಷ ಮುಖವೇ ವಾಯುವೆಂದರಿದಲ್ಲಿ ಮಂತ್ರ ತಂತ್ರದ ಹಂಗೇಕೆ? ಈಶಾನ್ಯ ಮುಖವೇ ಆಕಾಶವೇಂದರಿದಲ್ಲಿ ಧ್ಯಾನ ಮೌನದ ಹಂಗೇಕೆ? ಇಂತೀ ಪಂಚಬ್ರಹ್ಮವೇ ಪರಬ್ರಹ್ಮವೆಂದರಿದ ಶರಣಂಗೆ ಸರ್ವ ಉಪಚಾರ ಸಂಕಲ್ಪವೇಕೆ ಹೇಳಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ?

**ಭಾವಃ**— ಲಿಂಗಭಾವದಿಂದ ಲಿಂಗವನ್ನು ಪೂಜಿಸುವವರಲ್ಲಿ ಲಿಂಗವು ಸಹಜವಾಗಿ ವಾಸಿಸುತ್ತಿರುವದರಿಂದ ಅವರು ಪತ್ರೆ, ಪುಷ್ಪ, ಧೂಪ ಧೂಪಾರತಿ, ಮಂತ್ರ ತಂತ್ರ ಮೊದಲಾದ ಯಾವ ಬಾಹ್ಯ ಉಪಚಾರಗಳನ್ನು ಅವಲಂಬಿಸುವದಿಲ್ಲ. ಷಟ್‌ಸ್ಥಲ ಶಾಸ್ತ್ರದ ಪ್ರಕಾರ ಲಿಂಗವು ಪಂಚ ಸಾದಾಖ್ಯಗಳಿಂದೊಡಗೂಡಿ ವಿಶ್ವದಲ್ಲೆಲ್ಲ ಪಸರಿಸಿರುತ್ತದೆ. ಅದು ತನ್ನ ದೇಹದಲ್ಲಿಯೂ ಪಂಚಸಾದಾಖ್ಯ ಸ್ವರೂಪವಾಗಿ ವಾಸಿಸುವದರಿಂದ ಕೇವಲ ಬಾಹ್ಯಉಪಚಾರಗಳು ಭಕ್ತನಲ್ಲಿರಲಾರವು. ಪರಮಾತ್ಮನಿಗೆ ಸದ್ಯೋಜಾತಮುಖ, ವಾಮದೇವ ಮುಖ, ಅಘೋರ ಮುಖ, ತತ್ಪುರುಷಮುಖ ಈಶಾನಮುಖ, ಎಂಬ ಐದು ಮುಖಗಳಿವೆ. ಈ ಮುಖಗಳ ಮೂಲಕವಾಗಿಯೇ ಸಾದಾಖ್ಯಗಳು ವಿಶ್ವದಲ್ಲಿ ಉದ್ಭವವಾಗುತ್ತವೆ. ಈ ಸಾದಾಖ್ಯಗಳಲ್ಲಿರುವ ಶಕ್ತಿಗಳ ಮೂಲಕ ಆಯಾ ಪಂಚಭೂತಗಳು ಜಗತ್ತಿನಲ್ಲಿ ಉತ್ಪನ್ನವಾಗುತ್ತವೆ. ಈ ಪಂಚಭೂತಗಳೇ ಬಾಹ್ಯ ಸೃಷ್ಟಿಗೆ ಕಾರಣವಾಗಿರುತ್ತವೆ. ಮನುಷ್ಯನ ದೇಹದಲ್ಲಿಯೂ ಕೂಡ ಹೀಗೆಯೇ ಇರುತ್ತದೆ. ಅವನಲ್ಲಿಯೂ ಸಾದಾಖ್ಯಗಳುಂಟು, ಪಂಚಭೂತಗಳುಂಟು ಅವುಗಳ ಮೂಲಕವಾಗಿಯೇ ಅವನ ದೇಹವು ಉತ್ಪನ್ನವಾಗಿ ಅವನು ಕಾರ್ಯಮಾಡುತ್ತಾನೆ. ಆದರೆ ಈ ಕಾರ್ಯಗಳನ್ನು ಪರಮಾತ್ಮನ ಶಕ್ತಿಗಳ ಮೂಲಕವಾಗಿಯೇ ಎಂದು ಅರಿತು ಅವನಿಗೆ ಸಂಬಂಧಿಸಿಕೊಂಡು ಯಾವನು ವರ್ತಿಸುತ್ತಾನೋ ಅವನಲ್ಲಿ ಬರೀ ಬಾಹ್ಯ ಉಪಚಾರಗಳು

ಉಳಿಯಲಾರವು. ಅಂದರೆ ಅವನು ಪತ್ರಿ, ಪುಷ್ಪ, ಅಗ್ಗವಣಿ, ಧೂಪ ದೀಪಾರತಿ ಮಂತ್ರ ತಂತ್ರ ಧ್ಯಾನ ಮೌನ ಇವುಗಳು ಅವನಿಗೆ ಅನಾವಶ್ಯಕವಾಗುವವು. ಈ ಉಪಚಾರಗಳ ಉದ್ದೇಶವು ಪರಮಾತ್ಮನನ್ನು ತನ್ನಲ್ಲಿ ಸಂಬಂಧಿಸಿಕೊಳ್ಳುವದೇ ಇರುತ್ತದೆ. ಉದಾಃ— ಪತ್ರಿ ಪುಷ್ಪದ ಮೂಲಕ ಪೃಥ್ವೀ ತತ್ವವುಳ್ಳ ಸದ್ಯೋಜಾತ ಮುಖವನ್ನು ತನ್ನ ಆಧಾರ ಚಕ್ರದಲ್ಲಿ, ಅಗ್ಗಣಿಯ ಮೂಲಕ ಅಪ್ಪು ತತ್ವವುಳ್ಳ ವಾಮದೇವ ಮುಖವನ್ನು ತನ್ನ ಸ್ವಾಧಿಷ್ಠಾನ ಚಕ್ರದಲ್ಲಿ, ಧೂಪ ದೀಪಾರತಿಯ ಮೂಲಕ ಅಗ್ನಿ ತತ್ವವುಳ್ಳ ಅಘೋರ ಮುಖವನ್ನು ತನ್ನ ಮಣಿಪೂರಕ ಚಕ್ರದಲ್ಲಿ, ಮಂತ್ರ ತಂತ್ರಗಳ ಮೂಲಕ ವಾಯುತತ್ವವುಳ್ಳ ತತ್ಪುರುಷ ಮುಖವನ್ನು ತನ್ನ ವಿಶುದ್ಧಿ ಚಕ್ರದಲ್ಲಿ, ಧ್ಯಾನ ಮೌನದ ಮೂಲಕ ಆಕಾಶ ತತ್ವವುಳ್ಳ ಈಶಾನ ಮುಖವನ್ನು ತನ್ನ ಆಜ್ಞಾ ಚಕ್ರದಲ್ಲಿ ಹೀಗೆ ಸಂಬಂಧ ಪಡಿಸತಕ್ಕದ್ದು. ಆದರೆ ಇವು ಭಿನ್ನ ಕ್ರಿಯಾಮಾರ್ಗಗಳ ಪ್ರಯತ್ನವು. ಪಂಚ ಬ್ರಹ್ಮಗಳು ಪರಬ್ರಹ್ಮವೆಂದು ಅರಿತು ಆಚರಿಸುವ ಲಿಂಗಿಗೆ ಇವೆಲ್ಲವು ಕೇವಲ ಉಪಚಾರಗಳಾಗಿ ಪರಿಣಮಿಸುವವು.

**ವಚನಃ—೩೬.** ಸಟೆಯ ದಿಟವ ಮಾಡಿ, ಸ್ವಭಾವ ಸದ್ಭಾವದಿಂ ಲಿಂಗವಾಗಿ, ಲಿಂಗವ ಸದ್ಭಕ್ತಿಯಿಂದ ಪೂಜಿಸಿ ಲಿಂಗದಲ್ಲಿ ವರವ ಪಡೆದರು, ಶಿವಪಥವ ಪಡೆದರು ಪುರಾತನರು. ಅದೆಂತೆನಲು ಕೇಳಿರೇ. ಬಳ್ಳವು ಲಿಂಗನೇ? ಅಲ್ಲ. ಅದು ಸಟೆ. ಸದ್ಭಾವದಿಂ ಭಾವಿಸಿ ಲಿಂಗವಾಯಿತ್ತು ಬಳ್ಳೇಶ್ವರ ಮಲ್ಲಯ್ಯಗಳಿಂದ. ಆಡಿನ ಹಿಕ್ಕೆ ಲಿಂಗವೇ? ಅಲ್ಲ. ಅದು ಸಟೆ. ಸದ್ಭಾವದಿಂದ ಲಿಂಗವಾಯಿತ್ತು ಗೊಲ್ಲಾಳಂಗೆ. ನರಮಾಂಸ ಭಕ್ಷಿಸುವೆನೆಂಬುದು ಜಂಗಮಸ್ಥಲವೇ? ಅಲ್ಲ. ಅದು ಸಟೆ. ಸದ್ಭಾವದಿಂದ ಪ್ರಸನ್ನನಾದ ಶಿವನು ಸಿರಿಯಾಳಂಗೆ. ಸತ್ತ ಕರುವ ಹೊತ್ತು ಮಾದರನಾಗಿ ಬಹುದು ಜಂಗಮಸ್ಥಲವೇ? ಅಲ್ಲ. ಅದು ಸಟೆ. ಸದ್ಭಾವದಿಂ ಭಾವಿಸಿ ಜಂಗಮ ಲಿಂಗವಾಯಿತ್ತು ಕೆಂಭಾವಿ ಭೋಗಣ್ಣಂಗೆ. ಮಿಣಿಕಂಕರಿಗೋಲಹಿಡಿದು ಬಪ್ಪುದು ಜಂಗಮ ಸ್ಥಲವೇ? ಅಲ್ಲ. ಅದು ಸಟೆ. ಸದ್ಭಾವದಿಂದ ಪ್ರಸನ್ನನಾದ ಶಿವನು ಸಾಮವೇದಿಗಳಿಗೆ. ಡೊಂಬಿತಿ ಗುರುವೆ? ಅಲ್ಲ. ಅದು ಸಟೆ. ಸದ್ಭಾವದಿಂ ಭಾವಿಸಿ ಗುರುವಾಯಿತ್ತು ಗುರುಭಕ್ತಯ್ಯಗಳಿಂದ. ಇಂತು ಸದ್ಭಾವದಿಂ ಸಟೆಯ ದಿಟವ ಮಾಡಿ ನಿಜಪದವನೈದಿದರು. ಅವರಂತಿರಲಿ. ದಿಟವ ಸಟೆಯ ಮಾಡಿ ಆರಾರು ಕೆಟ್ಟರೆಂಬುದ ಕೇಳಿರಣ್ಣಾ! ದೇವಜಾತಿಗಳೆ

ಲ್ಲರೂ ದೇವಶಿಖಾಮಣಿಯ ಹತ್ತಿರೆಯಲ್ಲಿದ್ದು ಬ್ರಹ್ಮ ನಿರಾಕಾರವೆಂದು ಪರ ಬ್ರಹ್ಮನಂ ಪುಸಿಯ ಮಾಡಿ ಸನತ್ಕುಮಾರನು ಒಂಟೆ ಯಾಗನೆ? ಅನಂತ ಬ್ರಹ್ಮಾದಿಗಳ ಹೆತ್ತ ತಂದೆಯ ಪುಸಿಯ ಮಾಡಿ, ತಾನೇ ಕರ್ತನೆಂದು ಶಿರಸ್ಸ ಹೋಗಾಡನೇ ಬ್ರಹ್ಮನು? ಸರ್ವಲೋಕಂಗಳಿಗೆ ಸುಖವ ಮಾಡುವ ಶಂಕರನ ಪುಸಿಯ ಮಾಡಿ, ದಕ್ಷ ತಲೆಯ ನೀಗಿ ಕುರಿದಲೆಯ ಮಾಡಿಕೊಳ್ಳನೆ? "ಪ್ರಭುಃಪ್ರೇರಕ ವಿಶ್ವಭುಕ್" ಎಂದು ಶೃತಿ ಹೊಗಳುವ ಮಹಾ ಕಾರಣಿಕನಂ ಪುಸಿಮಾಡಿ, ತಾನೇ ಜಗತ್ಸಂಹಾರಕಾರಕನೆಂದು ನರಸಿಂಹನು ತೊಗಲ ಸುಲಿಸಿಕೊಳ್ಳನೆ? ಇಂತಿವರು ಮೊದಲಾದ ಮದಾಂಧರನಂತರುಂಟು. ದಿಟವ ಸಟೆಯ ಮಾಡಿ ಶಿಕ್ಷೆಗೊಳಗಾದರು ಕೇಳಿರೇ. ಅಯ್ಯಗಳಿರಾ ಅವ ರಂತಿರಲಿ. ಆ ಪುರಾತನರಂತೆ ಸಟೆಯ ದಿಟವ ಮಾಡುವುದು ಅಘಟಿತ ಘಟಿತತ್ವವು. ಅದು ಬೇಡ. ಆ ಮದಾಂಧರುಗಳಂತೆ ದಿಟವ ಸಟೆಯ ಮಾಡುವ ಸಾಮರ್ಥ್ಯ ಪುರುಷರುಗಳಲ್ಲ. ಅದು ಸಲ್ಲದು. ಮತ್ತೆಂತೆನಲು ಕೇಳಿರೇ. ಸಟೆ ದಿಟಂಗಳ ಸಂಶಯವ ಬಿಡಿಸಿ ಸಹಜವ ನೆಲೆಗೊಳಿಸುವ ಶ್ರೀಗುರು ಲಿಂಗಜಂಗಮವ ನಂಬಿ, ಸದ್ಭಾವ ಶುದ್ಧಿಯಿಂದ ಭಜಿಸಿ ಮುಕ್ತ ರಾಗಿರೇ. ಸಟೆ ಎಂದು ನರಕಕ್ಕಿಳಿಯದೆ, ದಿಟವೆಂದು ರುದ್ರರೂಪನರಸದೆ, ಸಹಜವೆಂದು ತ್ರಿವಿಧ ಲಿಂಗವ ನಂಬಿದಿರಾಯಿತ್ತಾದಡೆ ಕೇವಲ ಮುಕ್ತಿ ಯನೀವ ನಮ್ಮ ಊರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ**— ಲಿಂಗಾಂಗಿಗಳ ಲಿಂಗಪೂಜಾ ರೀತಿಯು ತೀರ ಹೊಸ ಬಗೆಯದಿರುತ್ತದೆಂದು ವಚನಕಾರನು ಅನ್ನುತ್ತಾನೆ. ಇವರ ರೀತಿಯೇ ಬೇರೆ. ಇವರಿಗೆ ಇತರ ಪೂಜಕರಂತೆ ಬಹು ಕಷ್ಟಪಡುವ ಕಾರಣವಿಲ್ಲ. ಇವರ ಪೂಜೆ ಎಂದರೆ ಗುರುಲಿಂಗಜಂಗಮವು ಮಾರ್ಗದಿಂದ ಆಚ ರಿಸುವದೇ ಇರುತ್ತದೆ. ಇದು ಬಹು ಸುಲಭವಾದದ್ದು. ಗುರಲಿಂಗಜಂ ಗಮದ ಮೂಲಕ ಲಿಂಗದ ಕಳೆಯು ತನ್ನ ಎಲ್ಲ ಶರೀರಗಳನ್ನು ಆವರಿಸಿಬಿಡುತ್ತದೆ. ಇದರಿಂದಲೇ ಮುಕ್ತಿಯು. ಇದು ಬಹು ಹಗುರಾದ ಮಾರ್ಗವೆಂದು ವಚನಕಾರನು ಇಲ್ಲಿ ಹೇಳಿರುವನು.

ಕೆಲವರು ಸಟೆಯಾಗಿರುವ ವಸ್ತುಗಳನ್ನು ದಿಟವೆಂದು ನಂಬಿ ಸದ್ಭಾ ವದಿಂದ ಅವುಗಳನ್ನು ಪೂಜಿಸಿ ದಿಟಮಾಡಿ ತೋರಿಸಿರುವರು. ಇದು ಶಕ್ಯವು. ಹೀಗೆ ಮಾಡಿದವರುಂಟು. ಆದರೆ ಇವರು ಬರೀ ರುದ್ರಲೋಕ ಅಥವಾ ಕೈಲಾಸ ಅಥವಾ ಗಣಪದವಿಯನ್ನು ಹೊಂದಿರುತ್ತಾರೆ. ಆದರೆ

ಇದು ಬಹು ಕಷ್ಟಕರ ಮಾರ್ಗವು. ಇವರ ಉದಾಹರಣೆಗಳನ್ನು ವಚನಕಾರನು ಇಲ್ಲಿ ಹೇಳಿರುವನು. ಬಳ್ಳವು ಲಿಂಗವೆಂದು ಪೂಜಿಸಿದ ಬಳ್ಳೇಶನು, ಆಡಿನ ಹಿಕ್ಕೆ ಲಿಂಗವೆಂದು ಭಾವಿಸಿ ಪೂಜಿಸಿ ತನ್ನ ತಂದೆಯನ್ನೇ ಕೊಂದ ಗೊಲ್ಲಾಳನು, ತನ್ನ ಮಗನನ್ನು ಕೊಂದು ಬಾಣಸಮಾಡಿದ ಸಿರಿಯಾಳನು, ಸತ್ತ ಕರುವನ್ನು ಹೊತ್ತ ಕೆಂಭಾವಿ ಭೋಗಣ್ಣನು, ಶ್ವಪಚನನ್ನು ಭಜಿಸಿದ ಸಾಮವೇದಿಯು, ಡೊಂಬಿತಿಯನ್ನು ಗುರುವೆಂದು ಪೂಜಿಸಿದ ಗುರುಭಕ್ತಯ್ಯನು ಹಾಗೆಯೇ ಅನೇಕ ಬಗೆಯಾಗಿ ಶಿವಪಥದಿಂದ ನಡೆದ ಪುರಾತನರು ಈ ವರ್ಗದಲ್ಲಿ ಬೀಳುತ್ತಾರೆ. ಇವರು ಬಹು ಕಷ್ಟಪಟ್ಟು ಲಿಂಗದಲ್ಲಿ ವರಗಳನ್ನು ಪಡೆದು ಉಚ್ಚ ಸ್ಥಾನವನ್ನು ಹೊಂದಿದರು.

ಅದೇ ಪ್ರಕಾರ ಲಿಂಗಭಕ್ತಿಯಲ್ಲಿ ವಿಶ್ವಾಸವಿಡದೆ ಬರೀ ಸುಳ್ಳನ್ನು ನಂಬಿ ಕೆಟ್ಟುಹೋದ ಜನರೂ ಅನಂತರುಂಟು. ಅವರ ಉದಾಹರಣೆಗಳನ್ನೂ ಕೂಡ ವಚನಕಾರನು ಇಲ್ಲಿ ಕೊಟ್ಟಿರುವನು. ಅವರು ಸನತ್ಕುಮಾರ, ಬ್ರಹ್ಮ, ದಕ್ಷ, ನರಸಿಂಹ ಇವರೇ ಮೊದಲಾದವರು ಇರುವರು.

ಆದರೆ ಪುರಾತನರಂತೆ ಸಟೆಯನ್ನು ದಿಟಮಾಡಿ ಅಘಟಿತ ಕಾರ್ಯ ಮಾಡುವದೂ ನನಗೆ ಬೇಡ. ಅಥವಾ ದಿಟವನ್ನು ಸಟೆ ಮಾಡಲು ಯತ್ನಿಸಿದ ಆ ಮಹಾ ಸಾಮರ್ಥ್ಯಪುರುಷರ ಉದಾಹರಣೆಯೂ ನನಗೆ ಬೇಡ. ಈ ಉಭಯ ಮಾರ್ಗಗಳಾವೂ ನನಗೆ ಬೇಡ ಎಂದು ವಚನಕಾರನು ಇಲ್ಲಿ ಹೇಳುತ್ತಾನೆ.

ಆದರೆ ಸಟೆ ದಿಟ ಎಂಬ ಸಂಶಯವನ್ನು ಬಿಡಿಸಿ ಸಹಜತ್ವವನ್ನು ನೆಲೆಗೊಳಿಸುವ ಶ್ರೀ ಗುರುಲಿಂಗಜಂಗಮ ಮಾರ್ಗದಿಂದ ನಡೆಯುವದೇ ಹಿತಕರವು. ಈ ಮಾರ್ಗವನ್ನು ಹಿಡಿದು ಸದ್ಭಾವದಿಂದಲೂ ಶುದ್ಧ ಮನಸ್ಸಿನಿಂದಲೂ ಭಜಿಸಿ ಮುಕ್ತರಾಗಬೇಕೆಂದು ವಚನಕಾರನು ಇಲ್ಲಿ ಬೋಧಿಸಿದ್ದಾನೆ. ಈ ಮಾರ್ಗದಿಂದ ತ್ರಿವಿಧ ಲಿಂಗಗಳು ತನ್ನ ತ್ರಿವಿಧ ಶರೀರದಲ್ಲಿ ಸಹಜವಾಗಿ ನೆಲೆಗೊಳ್ಳುವವು. ಮತ್ತು ಕಡೆಗೆ ಭಕ್ತನು ಸಾಮರಸ್ಯ ಸ್ವರೂಪವನ್ನು ಹೊಂದುವನು ಎಂದು ವಚನಕಾರನು ಇಲ್ಲಿ ಹೇಳಿದ್ದಾನೆ.

---

# ಪ್ರಾಣಲಿಂಗ ಪೂಜೆ.

**ವಿವರಣೆ:**— ಕೇವಲ ಬಾಹ್ಯ ಪೂಜೆಯಿಂದೇನೂ ಫಲವಿಲ್ಲ. ಪೂಜೆಯ ಉದ್ದೇಶವು ಪರಮಾತ್ಮನ ಸಾಕ್ಷಾತ್ಕಾರವನ್ನು ಹೊಂದುವದೇ ಇರುತ್ತದೆ. ಈ ರೀತಿಯನ್ನು ವಚನಕಾರರು ತಮ್ಮ ವಚನಗಳಲ್ಲಿ ಆಗಿಂದಾಗ್ಗೆ ವಿವರಿಸುವದುಂಟು. ಬಾಹ್ಯ ಪೂಜಾಕ್ರಮಗಳನ್ನು ಅವರು ಹೇಳುತ್ತಿದ್ದರೂ, ಅವುಗಳಲ್ಲಿ ಅವರು ಲಿಂಗ ಸಾಕ್ಷಾತ್ಕಾರವನ್ನು ಕುರಿತು ಇರುವ ತಮ್ಮ ಉದ್ದೇಶಗಳನ್ನು ಬಿಟ್ಟಿರುವದಿಲ್ಲ. ಈ ಸಾಕ್ಷಾತ್ಕಾರಕ್ಕೆ ಪ್ರಾಣ ಲಿಂಗ ಪೂಜೆ ಎಂತಲೂ ಹೆಸರುಂಟು. ಈ ಪೂಜೆಯನ್ನು ಅವರು ಹೇಳುವಲ್ಲಿ ಇಷ್ಟಲಿಂಗ ಪ್ರಾಣಲಿಂಗಗಳನ್ನು ಪರಸ್ಪರವಾಗಿ ಹ್ಯಾಗೆ ಸಂಬಂಧಿಸಬೇಕೆಂಬುದನ್ನು ಹೇಳುವದುಂಟು. ನಿಜವಾಗಿ ಪ್ರಾಣಲಿಂಗ ಪೂಜೆಯನ್ನು ಬಿಟ್ಟು ಇಷ್ಟಲಿಂಗ ಪೂಜೆ ಇಲ್ಲ, ಇಷ್ಟಲಿಂಗ ಪೂಜೆಯನ್ನು ಬಿಟ್ಟು ಪ್ರಾಣಲಿಂಗ ಪೂಜೆ ಇಲ್ಲ. ಇದು ವಚನಕಾರರ ತತ್ವವಿದೆ. ಈ ಕ್ರಮವನ್ನು ಉರಿಲಿಂಗಪೆದ್ದಿಯು ಕೆಳಗೆ ಕಾಣಿಸಿದ ವಚನಗಳಲ್ಲಿ ಹೇಳಿರುವನು.

**ವಚನ:**— ೩೭. ದೇಹವೆಂಬ ಮನೆಯಲ್ಲಿ ಮಹಾಲಿಂಗವೆಂಬರಸು. ಮನವೆಂಬ ಪೀಠದ ಮೇಲೆ ಮೂರ್ತಿಗೊಂಡು ಅಂತಃಕರಣಂಗಳೆಂಬ ಪರಿಚಾರಕರುಗಳ ಕೈಯಿಂದ ಪಂಚೇಂದ್ರಿಯಂಗಳೆಂಬ ಪರಿವಾಣದಲ್ಲಿ ಶಬ್ದ ಸ್ಪರ್ಶ ರೂಪು ರಸ ಗಂಧಂಗಳೆಂಬ ಪದಾರ್ಥಂಗಳನು ಎಡೆಮಾಡಿಸಿಕೊಂಡು ಸವಿವುತ್ತಿರಲು ಆನಂದವೇ ಮಹಾ ಪ್ರಸಾದವಾಗಿ ಉರಿಲಿಂಗ ಪೆದ್ದಿಪ್ರಿಯವಿಶ್ವೇಶ್ವರನು ಸದಾ ಸನ್ನಿಹಿತ ಕಾಣಿರೇ.

**ಭಾವ:**— ಈ ವಚನದಲ್ಲಿ ಪರಮಾತ್ಮನು ತನ್ನಲ್ಲಿ ಹ್ಯಾಗೆ ವಾಸ ಮಾಡುತ್ತಾನೆ ಮತ್ತು ಹ್ಯಾಗೆ ವ್ಯವಹರಿಸುತ್ತಾನೆ ಎಂಬನ್ನು ಹೇಳಿರುವನು. ಇದನ್ನು ತಿಳಿದಾಗಲೇ ಅಂತರಂಗ ಪೂಜೆಯ ಕ್ರಮವು ಗೊತ್ತಾಗುವದು. ದೇಹದ ಮೇಲೆ ಮಹಾಲಿಂಗವೆಂಬರಸನ ಆಳಿಕೆಯುಂಟು ಎಂದು ಹೇಳುತ್ತಾನೆ. ಹ್ಯಾಗೆ ಜಗತ್ತಿನ ವ್ಯವಹಾರಗಳು ಪರಮಾತ್ಮನ ಅಧೀನದಲ್ಲಿ ನಡೆಯುತ್ತವೆಯೋ, ಹಾಗೆ ದೇಹದ ವ್ಯಾಪಾರಗಳು ಈ ಮಹಾಲಿಂಗದ ಅಧೀನದಲ್ಲಿ ನಡೆದಿವೆ ಎಂದು ಅಂದಿದ್ದಾನೆ. ಈ ಮಹಾ

ಲಿಂಗಕ್ಕೆ ಮನವೇ ಪೀಠವು. ಅಂದರೆ ಅದನ್ನು ಕಾಣಬೇಕಾದರೆ, ಮನ ಸಿದ್ದಲ್ಲಿಯೇ ಅದನ್ನು ಹುಡುಕಬೇಕು. ಈ ಮಹಾಲಿಂಗಕ್ಕೆ ಪರಿಚಾರ ಕರೂ ಉಂಟು. ಬುದ್ಧಿ ಮನ ಚಿತ್ತ ಅಹಂಕಾರವೆಂಬ ಅಂತಃಕ ರಣ ಚತುಷ್ಟಯಗಳೇ ಇವು ಇವೆ. ಪರಮಾತ್ಮನ ಆಜ್ಞೆಯನ್ನು ಇವು ಚನ್ನಾಗಿ ಪಾಲಿಸುತ್ತಿದ್ದರೆ, ಅವುಗಳಿಂದ ಸರಿಯಾದ ಕಾರ್ಯಗಳಾಗು ತ್ತವೆ. ಆದರೆ ಅವು ಅಡ್ಡ ಮಾರ್ಗವನ್ನು ಹಿಡಿದು ದುರ್ವ್ಯಾಪಾರ ಗಳಲ್ಲಿ ತೊಡಗಿದ್ದರೆ, ಅವು ಪರಮಾತ್ಮನ ಅನುಜ್ಞೆಯನ್ನು ಪಾಲಿಸುವದಿ ಲ್ಲೆಂದು ತಿಳಿಯಬೇಕು. ಈ ಮಹಾಲಿಂಗಕ್ಕೆ ಸ್ಥೂಲ ಆಕಾರವಿಲ್ಲ. ಅದು ಆನಂದ ಸ್ವರೂಪುಳ್ಳದಾಗಿದೆ. ಮಹಾಲಿಂಗವು ಪ್ರಕಟವಾಗಿದ್ದರೆ ಈ ಆನಂದವು ಮನುಷ್ಯನ ಶರೀರದಲ್ಲೆಲ್ಲ ಆವರಿಸಿರುತ್ತದೆ. ಈ ಆನಂದವೇ ದೇಹದಲ್ಲಿ ಮಹಾಲಿಂಗವಿದ್ದದ್ದರ ಕುರುಹು. ಈ ಆನಂದವು ಶಾಶ್ವತ ವಾದದ್ದು. ಇದಕ್ಕೆ ಪ್ರಸಾದವೆಂತಲೂ ಹೆಸರು. ಈ ಪ್ರಸಾದವು ಮನು ಷ್ಯನಿಗೆ ಶಬ್ದ, ಸ್ಪರ್ಶ, ರೂಪು, ರಸ, ಗಂಧ ಇವುಗಳ ಮುಖಾಂತರ ವಾಗಿಯೇ ಸಲ್ಲುವದು. ಮತ್ತು ಇವಾದರೂ ಪಂಚೇಂದ್ರಿಯಗಳ ವ್ಯಾಪಾ ರಗಳೇ ಇರುತ್ತವೆ. ದೇಹದಲ್ಲಿಯ ಮಹಾಲಿಂಗಕ್ಕೆ ಈ ಇಂದ್ರಿಯಗಳೇ ಪರಿವಾಣವು. ಮತ್ತು ಆ ಪರಿವಾಣದಲ್ಲಿ ಶಬ್ದ ಸ್ಪರ್ಶಾದಿ ವಿಷಯಗಳೇ ಉಣ್ಣುವ ಪದಾರ್ಥಗಳು. ಮಹಾಲಿಂಗವು ಇವುಗಳನ್ನು ಉಪಭೋಗಿ ಸುವಲ್ಲಿಯೇ ಪ್ರಕಟವಾಗುತ್ತದೆ. ಪಂಚೇಂದ್ರಿಯಗಳು ಪಂಚ ವಿಷಯ ಗಳು ಮತ್ತು ಅಂತಃಕರಣ ಚತುಷ್ಟಯಗಳು ಸರಿಯಾಗಿ ಸದಾಚಾರದಿಂದ ಉತ್ತಮ ವರ್ತನೆಯಿಂದ ಪರಸ್ಪರ ಹೊಂದಿಕೊಂಡು ಕಾರ್ಯ ನಡಿಸಿದರೆ ಮಹಾಲಿಂಗವೆಂಬರಸನ ಸಾನ್ನಿಧ್ಯವು ದೊರಕುತ್ತದೆ. ಮತ್ತು ಮಹದಾ ನಂದವು ಲಭಿಸುತ್ತದೆ. ಇಲ್ಲದಿದ್ದರೆ ಮನುಷ್ಯನು ದುಃಖಕ್ಕೆ ಈಡಾಗು ತ್ತಾನೆ. ಹೀಗೆ ಯಾವನು ಸುಖದಲ್ಲಿ ಇರುತ್ತಾನೋ ಅವನಲ್ಲಿ ಪರ ಮಾತ್ಮನು ಶಾಶ್ವತವಾಗಿ ವಾಸಿಸುತ್ತಾನೆ. ಹೀಗೆ ಪರಮಾತ್ಮನು ತನ್ನಲ್ಲಿ ಯಾವಾಗಲೂ ವಾಸಿಸುವಂತೆ ಯಾವನು ಮಾಡುತ್ತಾನೋ ಅವನೇ ಪ್ರಾಣ ಲಿಂಗ ಪೂಜಕನು, ಪರಮಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಂಡವನು ಎಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**ವಚನ**— ೩೮. ಪಂಚಭೂತವಂಗವಾಗಿಪ್ಪಾತ್ಮಂಗೆ ಪಂಚೇಂ ದ್ರಿಯಂಗಳೇ ಮುಖಗಳು. ಕರಣಂಗಳೇ ಕೈಗಳು. ಪಂಚವಿಷಯವು

ಪೂಜೆ, ಪಂಚ ಪದಾರ್ಥವೇ ಭೋಗ, ಇವನೆಲ್ಲವ ತನ್ನ ನಿಜಮೂರ್ತಿಯುಪ್ಪ ಘನಕ್ಕೆಯ್ದಿಸಬಲ್ಲಡೆ ಆತ ಸರ್ವ ನಿರ್ವಾಣಿ, ಸಕಲ ನಿಃಕಲಾತ್ಮಕನು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಭಾವಃ**— ೩೭ನೇ ವಚನದಲ್ಲಿಯ ಭಾವವನ್ನೇ ಈ ವಚನದಲ್ಲಿಯೂ ವಚನಕಾರನು ಹೇಳಿರುವನು. ಮನುಷ್ಯನ ಶರೀರವು ಪೃಥ್ವಿ, ಅಪ್, ತೇಜ, ವಾಯು, ಆಕಾಶವೆಂಬ ಪಂಚಭೂತಗಳಿಂದ ಆಗಿರುತ್ತದೆ. ಇಂಥ ಶರೀರದಲ್ಲಿ ಆತ್ಮನಿದ್ದು ಅವನಿಗೆ ಪಂಚಇಂದ್ರಿಯಗಳೇ ಮುಖಂಗಳಾಗಿವೆ. ಮನುಷ್ಯನ ಪ್ರಗತಿಯು ಮತ್ತು ಶ್ರೇಷ್ಠತೆಯು ಈ ಇಂದ್ರಿಯುಗಳ ವ್ಯಾಪಾರಗಳ ಮೇಲೆಯೇ ಅವಲಂಬಿಸಿರುತ್ತವೆ. ಆದ್ದರಿಂದ ಇಂದ್ರಿಯುಗಳೇ ಆತ್ಮನಿಗೆ ಮುಖಂಗಳೆಂದು ವಚನಕಾರನು ಇಲ್ಲಿ ಹೇಳಿದ್ದಾನೆ. ಮನುಷ್ಯನು ಅಂತಃಕರಣ ಚತುಷ್ಟಯುಗಳ ಮುಖಾಂತರ ವ್ಯವಹರಿಸುವವನಾದ್ದರಿಂದ ಅವುಗಳೇ ಅವನಿಗೆ ಕೈಗಳಾಗಿವೆ. ಪಂಚವಿಷಯುಗಳ ಸೇವನೆಯೇ ಅವನಿಗೆ ಪೂಜೆಯಾಗಿರುತ್ತದೆ. ಪಂಚಪದಾರ್ಥಗಳ ಭೋಗವೇ ಅವನಿಗೆ ಭೋಗವಾಗಿರುತ್ತದೆ. ಹೀಗೆ ಇವು ಆತ್ಮನಿಗೆ ಸಂಬಂಧಪಟ್ಟಿರುತ್ತವೆ. ಈ ಸಂಬಂಧವನ್ನು ತಿಳಿದು ಆತ್ಮನಿಗೆ ಅವುಗಳನ್ನು ನಿವೇದಿಸತಕ್ಕದ್ದು. ಈ ನಿವೇದನೆಯು ಉಂಟಾಗಬೇಕಾದರೆ ಮನುಷ್ಯನು ಅತ್ಯಂತ ಶ್ರೇಷ್ಠತೆಯನ್ನು ಹೊಂದಬೇಕಾಗುತ್ತದೆ. ಈ ಬಗೆಯ ಶ್ರೇಷ್ಠತೆಯನ್ನು ಹೊಂದುವದೇ ನಿರ್ವಾಣಪದವೆನಿಸುವದು. ಇವನು ಸಕಲವನ್ನೂ ನಿಃಕಲವನ್ನೂ ತನ್ನಲ್ಲಿ ಎಯ್ದಿಸಿಕೊಳ್ಳಲು ಶಕ್ತನಾಗುತ್ತಾನೆಂದು ಇಲ್ಲಿ ವಚನಕಾರನು ಹೇಳಿದ್ದಾನೆ.

**ವಚನಃ**— ೩೯. ಪ್ರಾಣ ಲಿಂಗ, ಲಿಂಗ ಪ್ರಾಣವೆಂಬ ಧ್ಯಾನಾಮೃತದಿಂ ಪಂಚಾಕ್ಷರಿ ಎಂಬ ಪಂಚಾಮೃತದಿಂ ಲಿಂಗಮಜ್ಜನವೆರೆದು, ಮನವೇ ಪುಷ್ಪ ಬುದ್ಧಿಯೇ ಗಂಧ ಚಿತ್ತವೇ ನೈವೇದ್ಯ ಅಹಂಕಾರದಿಂದ ಆರೋಗಣೆಯ ಮಾಡಿಸಿ ಪರಿಣಾಮದ ವೀಳೆಯವನಿತ್ತು, ಸ್ನೇಹದಿಂದ ವಂದನೆಯ ಮಾಡಿ ಪ್ರಾಣಲಿಂಗಕ್ಕೆ ಅಂತರಂಗದ ಪೂಜೆಯ ಪರಿಯಲಿ ಬಹಿರಂಗದ ಪೂಜೆಯ ಮಾಡುವದು. ಅಂತರಂಗದ ವಸ್ತುಗಳೆಲ್ಲವನು ಬಹಿರಂಗದ ವಸ್ತುವಿನಲ್ಲಿ ಕೂಡಿ ಲಿಂಗಾರ್ಚನೆಯ ಮಾಡಲು ಅಂತರಂಗ ಬಹಿರಂಗದಲ್ಲಿ ಭರಿತನಾಗಿಹನು ಶಿವನು ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ.

ಭಾವಃ— ಅಂತರಂಗ ಪೂಜೆಯನ್ನು ಹ್ಯಾಗೆ ಮಾಡಬೇಕೆಂಬು ದನ್ನು ವಚನಕಾರನು ಇಲ್ಲಿ ಹೇಳಿದ್ದಾನೆ. ಅವನು ಪ್ರಾಣವೇ ಲಿಂಗ, ಲಿಂಗವೇ ಪ್ರಾಣ ಎಂಬ ಭಾವನೆಯಿಂದ ಧ್ಯಾನಿಸಬೇಕು. ಹೀಗೆ ಮಾಡಿದ ಧ್ಯಾನವೇ ಅಮೃತವೆನಿಸುತ್ತದೆ. ಈ ಧ್ಯಾನವು ಪಂಚಾಕ್ಷರೀ ಮಂತ್ರಜ ಪದಿಂದ ಶಕ್ಯವಿದೆ. ಇದೇ ಲಿಂಗಮಜ್ಜನವು. ಈ ಲಿಂಗಕ್ಕೆ ಏರಿಸತಕ್ಕ ಪುಷ್ಪವು ಯಾವದೆಂದರೆ ಮನಸ್ಸು. ಹಚ್ಚತಕ್ಕ ಗಂಧವು ಬುದ್ಧಿಯು. ಕೊಡ ತಕ್ಕ ನೈವೇದ್ಯವು ಚಿತ್ತವು. ಊಟಮಾಡಿಸುವ ಸಾಧನವು ಅಹಂಕಾ ರವು. ತಿನ್ನುವ ವೀಳೆಯವು ಮನಸ್ಸಿನಲ್ಲಿ ಉತ್ಪನ್ನವಾಗುವ ಪರಿಣಾಮು ಸುಖವು. ವಂದನೆಯು ಮನಸ್ಸಿನಲ್ಲಿಯ ಪ್ರೀತಿಯು. ಹೀಗೆ ಪ್ರಾಣಲಿಂ ಗಕ್ಕೆ ಪೂಜೆಯನ್ನು ಮಾಡಬೇಕೆಂದು ವಚನಕಾರನು ಇಲ್ಲಿ ಹೇಳಿದ್ದಾನೆ. ಇದು ಒಂದು ರೀತಿಯ ಅಂತರಂಗ ಪೂಜೆಯು. ಈ ಪೂಜೆಯಿಂದಲೇ ಬಹಿರಂಗದ ಪೂಜೆಯನ್ನಾದರೂ ಮಾಡಬೇಕು. ಈ ಬಗೆಯ ವರ್ತನೆ ಯಿಂದ ಅಂತರಂಗ ಬಹಿರಂಗ ಇವೆರಡೂ ಪರಸ್ಪರ ಕೂಡುವವು. ಈ ಬಗೆಯ ಲಿಂಗಾರ್ಚನೆಯಿಂದ ಪರಮಾತ್ಮನು ಒಳಗೂ ಹೊರಗೂ ಭರಿ ತನಾಗುವನೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

ವಚನಃ— ೪೦. ಬೆಡಗಿನಲ್ಲಿ ಅಗ್ನಿ ಮೈದೋರದಿದ್ದಲ್ಲಿ, ಆಕಾರ ನಾಸ್ತಿಯಾಗದು. ಇಷ್ಟಲಿಂಗಕ್ಕೆ ಕಾಯದ ಕೈಮುಟ್ಟಿ ಮಾಡುವ ಅಷ್ಟ ವಿಧಾರ್ಚನೆ ಷೋಡಶೋಪಚಾರದಿಂದ ಬೆಡಗಿನಲ್ಲಿಪ್ಪ ಜ್ಞಾನಾಗ್ನಿ ಮೈದೋ ರಿದಡೆ ಆಕಾರ ನಾಸ್ತಿಯಾಯಿತ್ತು. ಅಂಗದ ಮೇಲಣ ಲಿಂಗದ ಜವ ನಿಕೆ ಬಗೆದಗೆದಡೆ ಕಾಯದ ಪರಿ ನಷ್ಟವಾಗಿ ಜ್ಞಾನಾಗ್ನಿಯಿಂದ ಪ್ರಾಣನ ಭೋಗ ನಷ್ಟ. ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ ನಿಮ್ಮ ಪೂಜಿಸುವ ಶರಣನ ಮರ್ತ್ಯನೆಂದಡೆ ನಾಯಕನರಕ ತಪ್ಪದು.

ಭಾವಃ— ಅಂಗ ಲಿಂಗ ಸಂಬಂಧದಲ್ಲಿ ಒಂದು ಬಗೆಯ ಘರ್ಷ ಣವಿದೆ. ಈ ಘರ್ಷಣದಿಂದ ಒಂದು ಶಕ್ತಿಯು ಉತ್ಪನ್ನವಾಗುವದು. ಎರಡು ಕಾಷ್ಠಗಳು ಪರಸ್ಪರ ಘರ್ಷಣಹೊಂದಿದರೆ ಅಗ್ನಿಯು ಹುಟ್ಟಿ ಅದು ಆ ಕಾಷ್ಠಗಳನ್ನು ಸುಟ್ಟುಬಿಡುವದು. ಅದರಂತೆಯೇ ಭಕ್ತನ ಪೂಜಾವಿಧಾನವಾದರೂ ಇರುತ್ತದೆ. ಅವನಾದರೂ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳನ್ನು ಮಾಡುವನು. ಆವರೆ ಇವುಗಳ ಮೂಲಕ ಅವನಲ್ಲಿ ಜ್ಞಾನಾಗ್ನಿಯು ಹುಟ್ಟಿ ಅವನ ಅಂಗಭಾವವನ್ನು ನಷ್ಟಗೊಳಿಸಿ

# ಕೆಳದಿ ಸಂಸ್ಥಾನದ
# ರಾಯರ ವಂಶಾವಳಿ.



೧

ಕೆಳದಿಯೆಂಬ ಗ್ರಾಮದಲ್ಲಿ ಹಳೇಬೈಲುಯೆಂಬ ಭೂಮಿಯಲ್ಲಿ ಒಂದು ಹುತ್ತವಿತ್ತು. ಆ ಹುತ್ತದಲ್ಲಿ ರಾಮಲಿಂಗದೇವರು ಉದ್ಭವವಾಗಿ, ಆ ಸ್ಥಳದ ಗೌಡ ಬಸವಪ್ಪಯೆಂಬವನು ಗದ್ದೆ ಹೂಡಿಕೊಂಡು ಕೃಷಿ ರೂಪ ದಿಂದ ಕಾಲಕ್ಷೇಪ ಮಾಡಿಕೊಂಡು ಇರುತ್ತಾ ಇದ್ದಲ್ಲಿ, ಆ ಬಸಪ್ಪ ಎಂಬ ವನು ಈಶ್ವರಭಕ್ತ ಜ್ಞಾನಿಯಾಗಿದ್ದನು. ಆತನಿಗೆ ಬಸವಕ್ಕ ಯೆಂಬ ಉತ್ತಮ ಸ್ತ್ರೀ ಹೆಂಡತಿ ಯಿರುವಳು. ಆತನಿಗೆ ಚೌಡಪ್ಪ, ಭದ್ರಪ್ಪ ಎಂದು ಇಬ್ಬರು ಮಕ್ಕಳು ಹುಟ್ಟಿದರು. ಹುಟ್ಟಿದಾರಭ್ಯ ದಿನದಿನಕ್ಕೂ ಉಚ್ಛ್ರೇ ಯಸ್ಸು ಆಗುತ್ತಾ ಬಂತು. ಇವರು ಇಬ್ಬರು ಮಕ್ಕಳಿಗೂ ಮದಿವೆಯನ್ನು ಮಾಡಿ, ಕೆಲವು ದಿವಸದ ಮೇಲೆ ಇವರ ತಂದೆ ಬಸವಪ್ಪನೆಂಬವನು ಮೃತನಾಗಿ ಹೋದನು. ಆಮೇಲೆ ಈ ಉಭಯಪುತ್ರರ ತಾಯಿ ಬಸವಕ್ಕ ಯೆಂಬವಳು ಈ ಯಿಬ್ಬರು ಮಕ್ಕಳನ್ನು ಸಂರಕ್ಷಣೆ ಮಾಡಿಕೊಂಡು ವಿದ್ಯಾ ಭ್ಯಾಸವನ್ನು ಕಲಿಸಿ, ಆ ತರುವಾಯ, ಇವರು ಯವ್ವನಸ್ಥರಾಗಿ ಅರ್ಷೇಯು ದಿಂದ ಬಂದ ಭೂಮಿಯನ್ನು ಮಾಡಿಕೊಂಡು ಹಳೆಬೈಲು ರಾಮೇಶ್ವರ ದೇವರ ಕೃಪೆಗೆ ಪಾತ್ರರಾಗಿ ಕೆಳದಿ ಸಂಸ್ಥಾನಕ್ಕೆ ಅರಸುಗಳಾದ ವಿವರಃ—

ಚವುಡಪ್ಪ ಎಂಬವನ ಸ್ವಪ್ನದಲ್ಲಿ ಒಬ್ಬ ಬ್ರಾಹ್ಮಣನು ಬಂದು ಹೇಳಿದುದುಃ— ಕೆಳದಿ ಪ್ರಾಂತ್ಯದಲ್ಲಿ ಸೀಗೆಬೈಲು ಯೆಂಬ ಸ್ಥಳದಲ್ಲಿ ಸೀಗೆ ಮೆಳೆಯಲ್ಲಿ ರಾಮೇಶ್ವರಲಿಂಗ ಉದ್ಭವವಾಗಿದೆ. ಇದಕ್ಕೆ ದೃಷ್ಟಾಂತವೇನು, ಎಂದರೆ— ನಿಮ್ಮ ಮನೆಯಲ್ಲಿರುವ ಕಪಿಲೆ ಆಕಳು ಆ ಸ್ಥಳಕ್ಕೆ ಕರು ಸಮೇತ ಹೋಗಿ ಆ ಹುತ್ತದ ಮೇಲೆ ದಿನಂಪ್ರತಿಯಲ್ಲಿ ಹಾಲು ಕರೆದು ಬರುತ್ತಾ ಇದೆ. ಇದೇ ದೃಷ್ಟಾಂತ ನೋಡಿಕೊಂಡು ರಾಮೇಶ್ವರ ಲಿಂಗಕ್ಕೆ ನೀನು ಭಕ್ತಿಭಾವದಿಂದ ಪೂಜೆ ಮಾಡಿಕೊಂಡು ಬಂದಲ್ಲಿ, ನಿನಗೆ ಬಹಳ ರಾಜ್ಯಾಧಿಪತ್ಯ ಆಗುತ್ತದೆ—ಎಂಬದಾಗಿ ಹೇಳಿ ಬ್ರಾಹ್ಮಣನು (ಅದೃಶ್ಯವಾಗಿ) ಹೋದನು. [ಚವುಡಪ್ಪನು] ಬಹಳ ಸಂತೋಷದಿಂದ ತನ್ನ ತಾಯಿಯ ಮುಂದೆ ಹೇಳಿ, ಬೆಳಗು ಆಗುತ್ತಲೇ

ತನ್ನ ಕಡೆಯ ಮನುಷ್ಯನನ್ನು ಆ ಕಪಿಲೆ ಗೋವಿನ ಮೇಲೆ ಕಾವಲಿಟ್ಟು ಇದ್ದಲ್ಲಿ, ಆ ಕಪಿಲೆಗೋವು ಆ ದೇವರ ಬಳಿಗೆ ಹೋಗಿ ಹಾಲು ಕರೆದುದು ಆ ಮನುಷ್ಯನು ನೋಡಿ ಬಂದು ಹೇಳಿದಲ್ಲಿ, ಚವುಡಪ್ಪನು ಈ ಹುತ್ತದ ಬಳಿಯಲ್ಲಿ ಹೋಗಿ ರಾಮೇಶ್ವರ ಲಿಂಗವನ್ನು ಕಂಡು ಅಲ್ಲಿದ್ದ ಮರಮಟ್ಟು ಗಿಡಗಳನ್ನು ಕಡಿಸಿ, ಮೈದಾನ್ ಮಾಡಿಸಿ, ಹುಲ್ಲಿನಿಂದ ಸಣ್ಣಕ್ಕೆ ದೇವಸ್ಥಾನವನ್ನು ಕಟ್ಟಿಸಿ, ಆ ದೇವರಿಗೆ ಧೂಪ ದೀಪ ನೈವೇದ್ಯ ಮುಂತಾಗಿ ನಡೆಯುವಂತೆ ನೇಮಕ ಮಾಡಿ, ಆ ಮೇಲೆ ಒಂದು ದಿವಸ ತನ್ನ ಗದ್ದೆ ನೋಡಿಕೊಂಡು ಬರುವುದಕ್ಕೆ ಹೋಗಿ ಪುನಃ ಮನೆಗೆ ಬರುವಾಗ್ಗೆ ಮಾರ್ಗದಲ್ಲಿ ಶ್ರಮೆಬಟ್ಟು ಮಾವಿನ ಮರದ ಕಟ್ಟೆಯ ಮೇಲೆ ಮಲಗಿದ್ದಲ್ಲಿ, ನಿದ್ರೆ ಬಂದು ಇತ್ತು. ಇವನ ತಾಯಿ ಬಸವಕ್ಕನು ‘ಮಗನು ಬರುವುದಕ್ಕೆ ಬಹಳ ಹೊತ್ತಾಯಿತು, ಬರಲಿಲ್ಲ, ಗದ್ದೆಗೆ ಹೋಗಿ ನೋಡಿಕೊಂಡು ಬರುವಾ’ ಎಂಬುದಾಗಿ ಹೋಗುತ್ತಾ ಇರಲಾಗಿ, ಆ ಮಾರ್ಗದಲ್ಲಿ ಮಾವಿನ ಕಟ್ಟೆಯ ಮೇಲೆ ಮಲಗಿರುವ ಮಗನನ್ನು ಕಂಡು, ಅವನ ತಲೆಯ ಮೇಲೆ ನಾಗಸರ್ಪವು ಹೆಡೆಯಾಡುತ್ತ ಇದ್ದುದನ್ನು ಕಂಡು, ತನ್ನ ಮಗನಿಗೆ ಮೋಸ ಮಾಡುತ್ತೆ ಯೆಂಬದಾಗಿ ಬಹಳ ಗಾಬರಿಯಾಗಿ ನೋಡುತ್ತಾ ಇರಲಾಗಿ, ಆ ನಾಗಸರ್ಪವು ಎರಡು ಘಳಿಗೆಯ ಮೇಲೆ ಇಳಿಯುವಾಗ್ಗೆ, ಮಗನನ್ನು ಎಬ್ಬಿಸಿ "ದೊಡ್ಡ ಸರ್ಪ ಬಂದು ಇತ್ತು. ಇದರಲ್ಲಿ ನೀನು ಬದುಕಿದ್ದು ಆಶ್ಚರ್ಯ"-ಯೆಂಬದಾಗಿ ಹೇಳುತ್ತಾ ಇದ್ದ ಹಾಗೆ, ಆ ಸರ್ಪವು ಕೆಲವು ದೂರ ಹೋಗಿ ಈ ಯಿಬ್ಬರಿಗೂ ಕಾಣಿಸಿಕೊಂಡು, ಆ ಸರ್ಪವು ಹೆಡೆಯೆತ್ತಿ ಇವರಿಬ್ಬರನ್ನು ಕರೆದ ಹಾಗೆ ಇಶಾರೆ ಮಾಡುತ್ತಾ ಇದ್ದುದರಿಂದ, ಇವರಿಬ್ಬರೂ ನಾಗಸರ್ಪದ ಬಳಿಗೆ ಹೋಗಿ ಇದ್ದಲ್ಲಿ, ಇವನ ಗದ್ದೆಯಲ್ಲಿ ಹೆಡೆಯಿಂದ ಭೂಮಿಗೆ ಸೂಚನೆ ತೋರಿಸಿ ಆ ಸರ್ಪವು ಹೋಯಿತು. ಆ ಮೇಲೆ ಇವರು ಆ ಸ್ಥಳವನ್ನು ದೃಷ್ಟಿಯಿಂದ ನೋಡಿಕೊಂಡು, ಮನೆಗೆ ಬಂದು ತನ್ನ ತಮ್ಮ ಚವುಡಪ್ಪನ (?) ಮುಂದೆ ಹೇಳಿ ಸರ್ವರು ಬಹಳ ಸಂತೋಷ ಮಾಡಿಕೊಂಡು ಭೋಜನವನ್ನು ಮಾಡಿ ಗದ್ದೆಗೆ ಬೇಕಾದ ಸಾಮಾನು ಹಾರೆ, ಗುದ್ದಲಿ, ಆಳು ಮುಂತಾಗಿ ತೆಗೆದುಕೊಂಡು ಹೋಗಿ ಆ ಭೂಮಿಗೆ ನೇಗಿಲು ಹಾಕಿದ್ದಲ್ಲಿ, ಆ ನೇಗಿಲ ಮೊನೆಗೆ ನಿಕ್ಷೇಪದ ಕಡಾಯಿ ತಗಲಿ ಶಬ್ದವಾದುದರಿಂದ ಆ ಜನರು ಕಡಾಯಿ ನೋಡುವುದರಲ್ಲಿ ಅಪರಿಮಿತ ದ್ರವ್ಯ ಕಂಡುದರಿಂದ, ಆ ಸ್ಥಳದಲ್ಲಿ ಮನೆಯನ್ನು ಕಟ್ಟಿ, ಕುಟುಂಬ ಸಹಿತವಾಗಿ ಅಲ್ಲೇ ಇರುತ್ತಾ ಇರಲು, ಕೆಲವು ದಿವಸದ ಮೇಲೆ ಚವುಡಪ್ಪನಿಗೆ ಒಬ್ಬ ಮಗನು ಹುಟ್ಟಿದನು. ಆತನಿಗೆ ಸದಾಶಿವ

ನೆಂದು ಹೆಸರಿಟ್ಟು ವಿದ್ಯಾಭ್ಯಾಸವನ್ನು ಕಲಿಸಿ, ಯವ್ವನಸ್ಥನಾಗುತ್ತಲೇ ವೀರಕ್ಕ ಭದ್ರಕ್ಕ ಎಂಬ ಹೆಂಗಸರನ್ನು ಮದುವೆ ಮಾಡಿ, ಕೆಳದಿ ರಾಮೇಶ್ವರ ದೇವರ ದರ್ಶನ ಕೊಡಿಸಿ, ಮಕ್ಕಳನ್ನು ಪೋಷಣೆ ಮಾಡಿಕೊಂಡು ಬರುತ್ತಾ ಇರಲಾಗಿ, ಅವರು ಬಹಳ ಪರಾಕ್ರಮಶಾಲಿಗಳಾಗಿ ಎಡಬಲದಲ್ಲಿದ್ದ ಗ್ರಾಮವನ್ನು ಗುತ್ತಿಗೆಯನ್ನು ಮಾಡಿಕೊಂಡು ಪ್ರಖ್ಯಾತರಾಗಿರುತ್ತಾ ಇದ್ದರು.

೨

## ಪೂರ್ವದ ಅರಸುಗಳ ವಂಶಾವಳಿ.

ವಿದ್ಯಾನಗರವೆಂಬ ಸ್ಥಳಗಳಲ್ಲಿ ಹರಿಹರರಾಯ, ಬುಕ್ಕರಾಯ, ರಾಮರಾಯರ ವಂಶಾವಳಿಗಳ ವಿವರ:—

ಶ್ರೀ ಭಗವತ್ಪಾದಾಚಾರ್ಯರು ಮಂಡನಮಿಶ್ರನ ಕಯ್ಯ ಜಯಪತ್ರಿಕೆಯನ್ನು ತೆಗೆದುಕೊಂಡು, ಅಮರುಕ ಗ್ರಂಥವನ್ನು ಮಾಡಿ, ಶಾರದಾ ಪ್ರತಿಮೆಯನ್ನು ತಂದು ಶೃಂಗೇರಿಯಲ್ಲಿ ಪ್ರತಿಷ್ಠೆ ಮಾಡಿ, ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಷಡ್ದರ್ಶನ ಸ್ಥಾಪನಾಚಾರ್ಯರನ್ನು ಕೂಡಿ, ಜಗದ್ಗುರುಗಳು ಎಂಬುದಾಗಿ ಪ್ರಖ್ಯಾತರಾಗಿ, ಶಂಕರಾಚಾರ್ಯರು, ಪಾದಪದ್ಮಾಚಾರ್ಯ, ತೋಟಕಾಚಾರ್ಯ, ಹಸ್ತಾಮಲಕಾಚಾರ್ಯ, ಸುರೇಶ್ವರಾಚಾರ್ಯರೆಂಬ ನಾಲ್ಕು ಮಂದಿ ಶಿಷ್ಯರನ್ನು, ಪೂರ್ವ ಪಶ್ಚಿಮ ಉತ್ತರ ದಕ್ಷಿಣ ಚತುಸ್ಸಮುದ್ರ ಪರ್ಯಂತ ನಾಲ್ಕು ಕಡೆಯಲ್ಲಿ ಮಠವನ್ನು ಕಟ್ಟಿ, ಆ ಮಠದಲ್ಲಿ ನಾಲ್ಕು ಮಂದಿ ಶಿಷ್ಯರನ್ನು ಇಟ್ಟು, ಅವರು ವಿದ್ಯಾಶಂಕರರು ಯೆಂಬ ಶಿಷ್ಯರನ್ನು ಮಾಡಿಕೊಂಡು ಇರುತ್ತಾ ಇದ್ದಲ್ಲಿ, ಶಂಕರಾಚಾರ್ಯರು ಮುಕ್ತರಾದರು. ಆ ಮೇಲೆ ಉತ್ತರದೇಶದಲ್ಲಿ ಕೃಷ್ಣಾತೀರದಲ್ಲಿರುವ ಮಾದೋ (ಮಾಧವ) ಭಟ್ಟರೆಂಬವರು ದಕ್ಷಿಣ ದೇಶಕ್ಕೆ ಬಂದು ಹಂಪೆಯಲ್ಲಿದ್ದು, ಐಶ್ವರ್ಯ ಆಪೇಕ್ಷಿತರಾಗಿ ಶ್ರೀಚಕ್ರಯಂತ್ರೋದ್ಧಾರವನ್ನು ಮಾಡಿ ಪುರಶ್ಚರಣೆಮಾಡುತ್ತಾ ಇದ್ದಲ್ಲಿ, ಶ್ರೀ ಲಕ್ಷ್ಮೀದೇವಿಯವರು ಪ್ರಸನ್ನರಾಗಿ— ಈ ಜನ್ಮದಲ್ಲಿ ನಿಮಗೆ ಐಶ್ವರ್ಯ ಪ್ರಾಪ್ತಿ ಇಲ್ಲ. ಇನ್ನೊಂದು ಜನ್ಮಕ್ಕೆ ಪ್ರಾಪ್ತಿ ಆದೀತು—ಎಂಬದಾಗಿ ಸ್ವಪ್ನದಲ್ಲಿ ಅಪ್ಪಣೆಕೊಟ್ಟುದರಿಂದ ಇದನ್ನು ಮನಸ್ಸಿನಲ್ಲಿಟ್ಟು [ಕೊಂಡು], ಮಾದೋಭಟ್ಟರು ವಿದ್ಯಾಶಂಕರರ ಅಜ್ಞಾನುಸಾರವಾಗಿ ಸನ್ಯಾಸಾಶ್ರಮದ ಅಂಗೀಕಾರವನ್ನು ಮಾಡಿಕೊಂಡು, ವಿದ್ಯಾರಣ್ಯರು ಯೆಂಬುದಾಗಿ ಹೆಸರು ಸಂಪಾದಿಸಿಕೊಂಡು ಪ್ರಸಿದ್ಧರಾಗಿ [ದ್ದರು.] ಆ ದೇಶದಲ್ಲಿ ಜೈನ (ಜೈನ?) ಕಿರಾತರು ತಮ್ಮ

ತಮ್ಮ ಜಾತಿಯನ್ನು ಪ್ರಬಲವಮಾಡಿಕೊಂಡು ನಡೆಯುತ್ತಾ ಇದ್ದರು. ಆ ದೇಶದಲ್ಲಿ ಒಂದು ಪಟ್ಟಣವನ್ನು ನಿರ್ಮಾಣಮಾಡಿ ದುಷ್ಟನಿಗ್ರಹ ಶಿಷ್ಟಪರಿಪಾಲನೆ ಮಾಡಿ ನಡೆಯತಕ್ಕ ಬಗ್ಗೆ ರಾಯಪಟ್ಟಣವನ್ನು ಕಟ್ಟು ವಂತೆ ಶ್ರೀ ಲಕ್ಷ್ಮೀದೇವಿಯವರು ವಿದ್ಯಾರಣ್ಯರಿಗೆ ಸ್ವಪ್ನದಲ್ಲಿ ಅಪ್ಪಣೆ ಕೊಟ್ಟಿದರಿಂದ ಸ್ವಪ್ನದ ಅರ್ಥವನ್ನು ಮನಸ್ಸಿನಲ್ಲಿಟ್ಟು (ಕೊಂಡಿದ್ದರು.)

ಆ ಮೇಲೆ ಕೆಲವು ದಿವಸದ ಮೇಲೆ ಉತ್ತರ ದೇಶದಿಂದ ಇಬ್ಬರು ಅಣ್ಣತಮ್ಮಂದಿರು, ಕ್ಷತ್ರಿಯ ಜಾತಿಯವರು, ದಕ್ಷಿಣದೇಶಕ್ಕೆ ಬಂದು, ಧನ ಗರ ಜಾತಿಯಲ್ಲಿ ಕನ್ಯೆ ತೆಗೆದುಕೊಂಡು ಲಗ್ನವನ್ನು ಮಾಡಿಕೊಂಡು, ಸುಖದಿಂದ ಇರುತ್ತಾ ಇದ್ದಲ್ಲಿ, ಇವರಲ್ಲಿ ಹಿರಿಯನಾದ ಹರಿಹರರಾ ಯಗೆ ಸ್ವಪ್ನವಾದುದು ಏನೆಂದರೆ:–"ನೀನು ನಿನ್ನ ತಮ್ಮ ಬುಕ್ಕ ಸಹ ವಿದ್ಯಾರಣ್ಯರ ಬಳಿಗೆ ಹೋಗಿ ಆಶ್ರಯಮಾಡಿಕೊಂಡು ಇದ್ದಲ್ಲಿ ಐಶ್ವರ್ಯ ಪ್ರಾಪ್ತಿಯಾಗುತ್ತೆ"—ಯೆಂಬುದಾಗಿ ಇವರಿಗೆ ಸ್ವಪ್ನ ಆದದ್ದರಿಂದ, ಹರಿ ಹರ ಬುಕ್ಕ ಯಿಬ್ಬರೂ ಹಂಪೆಗೆ ಬಂದು ವಿದ್ಯಾರಣ್ಯರನ್ನು ಕಂಡು, ಸ್ವಪ್ನ ವನ್ನು ಹೇಳಲಾಗಿ, ವಿದ್ಯಾರಣ್ಯರು ಹಂಪೆ ಸ್ಥಳದವರನ್ನು ಕರೆಸಿ ವಿಚಾ ರಿಸಿದುದರಲ್ಲಿ, ಅವರು ಹೇಳಿದ ವಿವರ— ಪೂರ್ವದಲ್ಲಿ ಸೂರ್ಯವಂಶದಲ್ಲಿ ಹುಟ್ಟಿದ ತ್ರಿಶಂಕುರಾಯನು ಪಂಪಾಕ್ಷೇತ್ರಕ್ಕೆ ಬಂದು ಈ ವಿರೂಪಾಕ್ಷ ಲಿಂಗವು ಪ್ರಾದುರ್ಭವವೋ? ಪ್ರತಿಷ್ಠಾಲಿಂಗವೋ? ಎಂಬುದಾಗಿ ವಿಚಾ ರಿಸಿದ್ದಲ್ಲಿ "ಈ ಲಿಂಗವು ಜ್ಯೋತಿರ್ಮಯರೂಪ ಈ ದೇವರ ಮಹಿಮೆ ಬ್ರಹ್ಮದೇವರಿಗೆ ಹೇಳಲಿಕ್ಕೆ ಅಸಾಧ್ಯ" ವೆಂಬದಾಗಿ ಹೇಳಲಾಗಿ, ಆ ಮಾತು ಕೇಳಿ, ಪ್ರಾದುರ್ಭವಲಿಂಗಕ್ಕೆ ಪ್ರತಿಷ್ಠಾಲಿಂಗವೆಂದು ಕೇಳಿದ ದೋಷದ ನಿವೃತ್ತಿಗೋಸ್ಕರ, ಕೃಷ್ಣಾನದೀ ಆರಭ್ಯ ಸೇತು ರಾಮೇಶ್ವರ ಪರ್ಯಂತ ಮೂರೂವರೆ ಕೋಟಿ ರಾಜ್ಯವನ್ನು ವಿರೂಪಾಕ್ಷಸ್ವಾಮಿಗೆ ಧಾರೆ ಯೆರೆದು ಹೋಗಿದ್ದಾನೆ—ಎಂಬದಾಗಿ ಆ ಸ್ಥಳದವರು ಹೇಳಿದುದರಿಂದ ಹರಿಹರ ಬುಕ್ಕರನ್ನು ಕರೆದು, 'ಈ ರಾಜ್ಯಕ್ಕೆ ವಿರೂಪಾಕ್ಷಸ್ವಾಮಿಯೆ ಕರ್ತೃ. ನೀವು ಈ ದೇವರ ಭಕ್ತರಾಗಿ ವರ್ತಿಸುತ್ತಾ ವಿರೂಪಾಕ್ಷಸ್ವಾಮಿ ಯೆಂದು ಮೊಹರು ಮಾಡುತ್ತಾ ಧರ್ಮದಿಂದ ರಾಜ್ಯಪರಿಪಾಲನೆ ಮಾಡಿ' ಎಂತ ಅಪ್ಪಣೆ ಕೊಟ್ಟಿದ್ದರಿಂದ, ಹರಿಹರಗೆ ಹರಿಹರರಾಯ ಎಂದು ಹೆಸ ರಿಟ್ಟು ವಿದ್ಯಾನಗರ ಎಂದು ಪಟ್ಟಣವನ್ನು ನಿರ್ಮಿಸಿ, ಆ ಪಟ್ಟಣಕ್ಕೆ ಕೆಸರುಗಲ್ಲು ಹಾಕುವುದಕ್ಕೆ ಮುಹೂರ್ತವನಿಟ್ಟು ಇದ್ದಲ್ಲಿ, ಆ ಸಮಯ

ದಲ್ಲಿ ಒಬ್ಬ ದಾಸನು ಶಂಖಸ್ವರವನ್ನು ಮಾಡಿದುದರಿಂದ ಕೆಸರುಗಲ್ಲು ಹಾಕಿ ಪಟ್ಟಣವನ್ನು ಕಟ್ಟಿದರು. ವಿದ್ಯಾರಣ್ಯರು ಮಾಡಿದ ಲಗ್ನಕ್ಕೆ ವ್ಯತ್ಯಾಸವಾದುದರಿಂದ 'ಈ ಪಟ್ಟಣವು ಕೆಲವು ವರ್ಷದ ಮೇಲೆ ತುರುಕರ ಅಧೀನ ಆದೀತು'—ಎಂದು ವಿದ್ಯಾರಣ್ಯರು ಭವಿಷ್ಯವನ್ನು ಹೇಳಿ, ಕೆಲವು ಕಾಲ ಜ್ಞಾನವನ್ನು ಬರೆಯಿಸಿ, ವಿದ್ಯಾನಗರ ರತ್ನಸಿಂಹಾಸನದಲ್ಲಿ ಹರಿಹರ ರಾಯನಿಗೆ ಪಟ್ಟಾಭಿಷೇಕವನ್ನು ಮಾಡಿಸಿ, ಹೀಗೆ ಇರಲಾಗಿ, ಕೆಲವು ದಿವಸದ ಮೇಲೆ ರೇವಣಸಿದ್ಧಪನೆಂಬ ಒಬ್ಬ ಬ್ರಾಹ್ಮಣನು ಬಂದು ಒಂದು ಲಿಂಗವನ್ನು ವಿದ್ಯಾರಣ್ಯರಿಗೆ ಕೊಟ್ಟು, ಈ ಲಿಂಗವು ಚಂದ್ರಮೌಳೀಶ್ವರ ಸ್ವಾಮಿಗಳು ದಿನಚರಿಯಲ್ಲಿ ಪೂಜೆಮಾಡತಕ್ಕದ್ದು ಯೆಂದು ಹೇಳಿ ಅಂತರ್ಧಾನನಾದನು. ಅನಂತರ ವಿದ್ಯಾರಣ್ಯರು ಶೃಂಗೇರಿಗೆ ಬಂದು ವಿದ್ಯಾಶಂಕರರನ್ನು ಕಂಡು, ಶೃಂಗೇರಿಯ ಮೂಲ ಸಂಸ್ಥಾನದಲ್ಲಿ ಆ ಚಂದ್ರಮೌಳೀಶ್ವರ ದೇವರ ಪೂಜೆ ಮಾಡುತ್ತ, ಶಿಷ್ಯ ಪಾರಂಪರ್ಯವಾಗಿ ಈ ಲಿಂಗವನ್ನು ಪೂಜಿಸತಕ್ಕದ್ದೆಂದು ಕಟ್ಟು ಮಾಡಿದರು. ಇತ್ತಲಾಗಿ ವಿದ್ಯಾನಗರ ಸಂಸ್ಥಾನವೆಂದು ದಿಗ್ದೇಶದಲ್ಲಿ ಪ್ರಸಿದ್ಧವಾಯಿತು. ಆ ರತ್ನ ಸಿಂಹಾಸನ ಆಳಿದ ರಾಯರ ವಂಶಾವಳಿ ವಿವರಃ—

ಹರಿಹರರಾಯರು, ಬುಕ್ಕರಾಯರು, ಹರಿಹರರಾಯರು, ವಿರೂಪಾಕ್ಷರಾಯರು, ಬುಕ್ಕರಾಯರು, ದೇವರಾಯರು, ರಾಮರಾಯರು, ವಿರೂಪಾಕ್ಷರಾಯರು, ದೇವರಾಯರು, ವಿಠ್ಠಲರಾಯರು, ಮಲ್ಲಿಕಾರ್ಜುನರಾಯರು, ರಾಮರಾಯರು, ವಿರೂಪಾಕ್ಷರಾಯರು,— ಅಂತು ಹದಿಮೂರು ಜನರು. ಆ ಮೇಲೆ ತುರುಕರ ಜನ ಮೂರು. ಆ ಮೇಲೆ ತುಳುವರಾಯರು ಜನ ಒಂದು. ಚೋಳರಾಯರ ಜನ ಒಂದು. ಪ್ರಹುಡ (ಪ್ರೌಢ) ರಾಯರು, ವರ್ಷ ಹನ್ನೆರಡು. ಅಚ್ಯುತರಾಯರು, ವರ್ಷ ಮೂರು. ನರಸಿಂಗರಾಯರು, ವರ್ಷ ಹತ್ತು. ಸಾಳ್ವ ನರಸಿಂಹರಾಯರು, ವರ್ಷ ಹನ್ನೆರಡು. ಕೃಷ್ಣರಾಯರು, ವರ್ಷ ನಲವತ್ತು. ಸದಾಶಿವರಾಯರು, ವರ್ಷ ಎರಡು. ರಾಮರಾಯರು, ವರ್ಷ ಇಪ್ಪತ್ತನಾಲ್ಕು—ಅಂತು ಜನ ಏಳಕ್ಕೆ ವರ್ಷ ೧೦೩. ಈ ರಾಮರಾಯರನ್ನು ವಿಜಾಪುರದ ಬಾದಷಹ, ಭಾಗಾನಗರದ ಬಾದಶಹ, ಅಹ್ಮದಾನಗರದ ಬಾದಷಹ, ಇವರು ಮೂರೂ ಮಂದಿಯೂ ಒಟ್ಟಾಗಿ ಮೋಸದಿಂದ ಹತವನ್ನು ಮಾಡಿ, ರಾಯರ ಸಂಸ್ಥಾನವನ್ನು ಸಂಕ್ಷೇಪದಿಂದ ಆಳಿದರು. ವಿವರಃ—

೬

ಈ ರಾಮರಾಯರ ತರುವಾಯ ಭೂಮಿ ಸ್ವಲ್ಪ ಮುಂದಿ ಕುದುರೆ ಫೌಜು ಮಾಡಿಕೊಂಡು ವೆಂಕಟಪತಿರಾಯರು ವರ್ಷ ಮೂರು, ತತ್ಪುತ್ರ ಶ್ರೀರಂಗರಾಯರು ವರ್ಷ ೫|| ಆಳಿ, ನಿಸ್ತರಿಸಲಾರದೆ, ರಾಮರಾಯರ ಮಕ್ಕಳು ರಂಗರಾಯರು ವೆಂಕಟಪತಿರಾಯರು ಸಹ ಆನೆಗೊಂದಿಯಲ್ಲಿ ನಿಂತು ಆಳಿ ಇದ್ದು, ಇದೇ ಶ್ರೀರಂಗರಾಯರು ವರ್ಷ ೫, ವೆಂಕಟಪತಿ ರಾಯರು ವರ್ಷ ೭॥, ರಾಮದೇವರಾಯರು ವರ್ಷ ೬, ವೆಂಕಟಪತಿರಾ ಯರು ವರ್ಷ ೧೭॥, ಶ್ರೀರಂಗರಾಯರು ವರ್ಷ ೨೭॥, ಈ (ರೀತಿ)ಯಲ್ಲು ಆನೆಗೊಂದಿಯಲ್ಲಿ ಆಳಿದರು. ರಾಯಸರಾಯರ ಹಿರೇಮಗ ತಿಮ್ಮಪ್ಪರಾಯ, ರಾಮರಾಯ, ಪಿ (ಪೆ?) ದ ವೆಂಕಟಪತಿರಾಯ, ಚಿಕ್ಕವೆಂಕಟಪತಿರಾಯ, ಇವರ ಮಕ್ಕಳು ಆದ ವೆಂಕಟಪತಿರಾಯ, ಚಿಕ್ಕವೆಂಕಟಪತಿರಾಯ, ಈ ವಿದ್ಯಾನಗರ ರತ್ನಸಿಂಹಾಸನಾಧೀಶ್ವರರಾದ ಹರಿಹರರಾಯ ಬುಕ್ಕರಾಯರ ವಂಶಪಾರಂಪರ್ಯ.

೩

ಪ್ರಕೃತ— ಹಳೆಬೈಲು ಬಸವಪ್ಪನ ಮಕ್ಕಳು ಚವುಡಪ್ಪನು ಪರಾ ಕ್ರಮಶಾಲಿಯಾಗಿ ಇರುತ್ತಾ ಇದ್ದಲ್ಲಿ, ಇವರಿಗೆ ನಿಕ್ಷೇಪ ಸಿಕ್ಕಿದ ವಾರ್ತೆ ಮುಂತಾದ್ದು ಖ್ಯಾತಿಯಾಗಿ ಇರಲಾಗಿ, ವಿದ್ಯಾನಗರದ ದೊರೆಯಾದ ಅಚ್ಯುತರಾಯನು ಕೇಳಿ, ' ಪ್ರಭುತ್ವಮಾಡುವಂಥವರು ಕ್ಷುದ್ರ ಮಾತು ಕೇಳಿ, ಸಜ್ಜನರಾಗಿರುವಂಥವರನ್ನು ದ್ರವ್ಯಸ್ಥರಾದರೂ ಕೆಡಿಸಬಾರದು, ಸಂತೋಷದಿಂದ ರಕ್ಷಿಸುವುದು ರಾಜಧರ್ಮವೆಂದು ಗ್ರಹಿಸಿ, ಇವರ ಮುಖ ದಲ್ಲಿ ದುಷ್ಟರಾದಂಥ ಬಲಿಷ್ಠರನ್ನು ನಿಗ್ರಹ ಮಾಡಿಸಿ, ಇವರ (ನ್ನು) ಪ್ರತಿ ಷ್ಠೆಗೆ ತರಬೇಕೆಂದು ಆಲೋಚಿಸಿ, ಕೃಷ್ಣರಾಯರು ಮುಂತಾದ ಸಾಮಾ ಜಿಕ ನಿಯೋಗಿಗಳ ಸಂಗಡ ಮನೋಭಿಪ್ರಾಯವನ್ನು ಹೇಳಿ, ರಾಯಸ ವನ್ನು ಬರಿಸಿ, ಕುದುರೆ ಪಾಲಕಿ ಉಡುಗೆರೆ ಮೊದಲಾದುದು ಕೊಟ್ಟು, ಹಳೆಬೈಲಿಗೆ ಹೋಗಿ ಚವುಡಪ್ಪ ಭದ್ರಪ್ಪ ಸಹ ಕರಕೊಂಡು ಬನ್ನಿ ಎಂ ಬುದಾಗಿ ಹೇಳಿ ಕಳುಹಿಸಿಕೊಟ್ಟು, ಸ್ಥಳಕ್ಕೆ ಕರಿಸಿಕೊಂಡು, ಉಲುಪೆ ಮುಂತಾದುದು ಕಳುಹಿಸಿಕೊಟ್ಟು, ಬಿಡಾರವನ್ನು ಬಿಡಿಸಿ ಕೊಟ್ಟು, ಒಂದು ದಿವಸ ಆಪ್ತಜನರನ್ನು ಕೂಡಿಕೊಂಡು ಸಂತೋಷದಿಂದ ಇವರನ್ನು ಕರೆಸಿ, ಕ್ಷೇಮಲಾಭವನ್ನು ಕೇಳಿ, ಇವರು ಕೊಟ್ಟಂಥ ನಜರನ್ನು ತೆಗೆದುಕೊಂಡು ಇವರನ್ನು ಕೇಳಿದ ವಿವರ:— "ನೀವು ಬಡವರು. ಹೇರಳ ದ್ರವ್ಯ ಹೇಗೆ ಪ್ರಾಪ್ತಿಯಾಯಿತು ? ದೊರೆ ತನಕ ತಿಳಿಸದೆ ಹೇಗೆ ದ್ರವ್ಯವನ್ನು ವಂಚನೆ

ಮಾಡಿ ಯಿದ್ದೀರಿ ? ” ಎಂಬುದಾಗಿ ಕೇಳಿದಲ್ಲಿ, ಈ ಚೌಡಪ್ಪ ಭದ್ರಪ್ಪನು ಹೇಳಿದ ವಿವರ:— ‘ನಾವು ಬಡವರಾಗಿರುತ್ತಾ ಇದ್ದಲ್ಲಿ ರಾಮೇಶ್ವರದೇವರ ಅನುಗ್ರಹದಿಂದ ನಿಕ್ಷೇಪ ಸಿಕ್ಕಿದುದು ಸರಿ’ ಎಂಬುದಾಗಿ ಪೂರ್ವಾರಭ್ಯ ಕಥ್ಯಾ ನಡೆದ ಅಭಿಪ್ರಾಯವನ್ನು ಸಾಂಗವಾಗಿ ಹೇಳಿದುದರಿಂದ ಕೇಳಿ ಸಂತೋಷಪಟ್ಟು, ಇವರು ಈಶ್ವರಭಕ್ತರು, ಬುದ್ಧಿವಂತರು, ದಯಮಾಡಿದ್ದಾರೆ, ಪುಣ್ಯವಂತರೆಂದು ಯೋಚಿಸಿ, ಇವರಿಗೆ ಕುದುರೆ, ಪಾಲಕಿ, ಛವರಿ ಮುಂತಾದ ಬಿರುದು ಬಾವಲಿಯನ್ನು ಕೊಟ್ಟು ಸಮೀಪದಲ್ಲಿ ಇಟ್ಟು ಕೊಂಡು ಇದ್ದರು. ಆ ಪ್ರಾಂತದಲ್ಲಿ ತುಂಟು ಪಾಳೇಗಾರರು ಪ್ರಬಲರಾಗಿ ರಾಜ್ಯವನ್ನು ಬಾಧಿಸುತ್ತಾ ಇರಲು, ಇವರ ಸಂಗಡ ಫೌಜನ್ನು ಕೊಟ್ಟು ಕಳುಹಿಸಿ ಇದ್ದಲ್ಲಿ, ಇವರು ಹೋಗಿ ಲಡಾಯಿ ಮಾಡಿ ಜಯಪ್ರದ ಮಾಡಿಕೊಂಡು ಸಿಕ್ಕಿದಂತಹ ಜನರು (ನಜರು?) ತಂದು ದೊರೆಗೆ ಒಪ್ಪಿಸಿದ್ದಲ್ಲಿ, ಪ್ರೇಮಾಲಿಂಗನವನ್ನು ಮಾಡಿ ಮನ್ನಿಸಿ ಉಡುಗೊರೆ ಕೊಟ್ಟು ಸಂತೋಷದಲ್ಲಿ ಇರಿಸಿಕೊಂಡು ಇರುತ್ತಾ ಇದ್ದಲ್ಲಿ, ಆ ದೇಶದಲ್ಲಿ ತುರುಕರ ಉಪದ್ರವ ಹೇರಳವಾದುದರಿಂದಲೂ, ಫೌಜು ಕೊಟ್ಟು ಆ ದೇಶದ ವೊಳಗೆ ಕೆಲವು ದಿವಸ ಇಟ್ಟು ಯಿದ್ದು, ಆ ತರುವಾಯ ಸಮೀಪಕ್ಕೆ ಕರಕೊಂಡು ಚಂದ್ರಗುತ್ತಿ ಪ್ರಾಂತ್ಯದಲ್ಲಿ ಕೆಳದಿಯಾದಿಯಾಗಿ ಎಂಟು ಮಾಗಣೆಯನ್ನು ಆಳಿಕೊಂಡು ಇರುವಂತೆ ನೇಮಕ ಮಾಡಿಸಿ, ನಿಮ್ಮ ವಂಶ ಪಾರಂಪರ್ಯವಾಗಿ ಅನುಭವಿಸಿಕೊಂಡು ಬನ್ನಿ ಯೆಂಬದಾಗಿ ಶಾಸನವನ್ನು ಬರೆಸಿ ಕೊಟ್ಟು, ಎಂಟು ಮಾಗಣೆಗೂ ನೀವೇ ರಾಯರು ಯೆನಿಸಿ ನಮಗೆ ಸಾನುಕೂಲವಾಗಿ ಇರಿ ಯೆಂಬದಾಗಿ ನೇಮಿಸಿ, ಅಲ್ಲಿಂದಲೇ ಶಂಖ, ಚಕ್ರ, ಚವುರಿ, ಉಭಯ ಚಾಮರ ಮುಂತಾದ ಬಿರುದು ಬಾವಲಿಯನ್ನು ಕೊಟ್ಟು ಕಳುಹಿಸಿದರಿಂದ, ಈ ಕರ್ತರು ಸಾಮಾಜಿಕರು ಕುದುರೆ ಮಂದಿ ಕೆಳದಿಗೆ ಬಂದು ಎಂಟು ಮಾಗಣೆ ರೈತರು ಸಹಿತ ಕರೆಕಳುಹಿಸಿ, ಕೌಲು ಕರಾರು ಕೊಟ್ಟು, ಇಕ್ಕೇರಿಯ ಬಳಿಯಲ್ಲಿ ಹೊಡೆ ಅರಮನೆ ಕಟ್ಟಿಸಿ, ಕುಟುಂಬ ಸಹಿತವಾಗಿ, ಸ್ವಸ್ತಿ ಶ್ರೀವಿಜಯಾಭ್ಯುದಯ ಶಾಲೀವಾಹನ ಶಕ ವರ್ಷ ೧೪೨೨ ವರ್ತ (ಮಾ) ನಕ್ಕೆ ಸಲ್ಲುವ ಸಿದ್ಧಾರ್ಥಿ ಸಂವತ್ಸರ ಮಾಘ ಬಹುಳ ೩ ರಲ್ಲು... ಯಲ್ಲು ಚವುಡಪ್ಪನಾಯಕನಿಗೆ ಪಟ್ಟಾಭಿಷೇಕವಾಗಿ, ಕೆಳದಿ, ಇಕ್ಕೇರಿ ಮೊದಲಾದ ಎಂಟು ಮಾಗಣೆ ರಹಿತರು ಕಾಣಿಕೆಯನ್ನು ಕೊಟ್ಟು ಅವರಿಗೆ ಮಾನಿಸಿ, ಮುಖಸ್ಥರಿಗೆ ರಾಯಸ ಮುಂತಾದ್ದು ಬರೆಸಿ

ಕೊಟ್ಟು ಉಡುಗೊರೆಯನ್ನು ಕಳುಹಿಸಿ, ರಾಜ್ಯಭಾರ ಮಾಡುತ್ತಾ ರಾಮೇಶ್ವರ ದೇವರಿಗೆ ಶಿಲಾಮಯ ದೇವಸ್ಥಾನವನ್ನು ಗರ್ಭಗುಡಿಯನ್ನು ಕಟ್ಟಿಸಿ, ಈ ದೇವರಿಗೆ ಹಳೆಬ್ಬೈಲು ಗ್ರಾಮ ಮುಂತಾದುದು ಶಿವಾರ್ಪಿತವನ್ನು ಮಾಡಿ ಸಂತೋಷದಲ್ಲಿ ಇರುವಂಥಾ ಕಾಲದಲ್ಲಿ, ಒಂದು ದಿವಸ ಸತಿ ಸಹಿತವಾಗಿ ಇಕ್ಕೇರಿಗೆ ಸವಾರಿ ಬಂದು ಇದ್ದಲ್ಲಿ, ಅಲ್ಲಿ ಮೊಲವು ನಾಯಿಗೆ ಕಚ್ಚಿದುದರಿಂದ ಆಶ್ಚರ್ಯವನ್ನು ನೋಡಿ— ಈ ಭೂಮಿ ಗಂಡು ಭೂಮಿ. ಇದರಲ್ಲಿ ಒಂದು ಕೋಟೆಯನ್ನು ಕಟ್ಟಬೇಕೆಂದು ನಿಶ್ಚಯಿಸಿ, ಇದರಲ್ಲಿ ಒಂದು ಅರಮನೆಯನ್ನು ಕಟ್ಟಿಸಿ, ಇದರಲ್ಲಿ ಕಾವಲು, ಕಡ್ಡಿಲು, ಉಕ್ಕಡ, ಪೇಟೆ, ಕಂದುಕ ಮುಂತಾದುದು ಶಾಸ್ತ್ರಪ್ರಕಾರಕ್ಕೆ ಪಟ್ಟಣವಂ ಮಾಡಿಸಿ, ಸುಮುಹೂರ್ತದಲ್ಲಿ, ತಮ್ಮ ಭದ್ರಪ್ಪನಾಯಕನ ಮಗ ಸದಾಶಿವನಾಯಕನ ಕುಟುಂಬ ಸಹಿತ, ಕೆಳದಿ ಅರಮನೆಯನ್ನು ಬಿಟ್ಟು, ಇಕ್ಕೇರಿಯಲ್ಲಿದ್ದ ಅರಮನೆಗೆ ಬಂದು ರಾಜ್ಯಭಾರ ಮಾಡುತ್ತಾ ಇದ್ದರು. ರಾಯರ ದಯಕ್ಕೆ ಪಾತ್ರರಾಗಿ ಒಳಗೆ ಬರೆಸಿದ ಸಿದ್ಧಾರ್ಥಿ ಸಂವತ್ಸರದ ಮಾಘ ಬಹುಳ ೩ ಆರಭ್ಯ ಶ್ರೀಮುಖ ಸಂವತ್ಸರದ ಶ್ರಾವಣ ಶುದ್ಧ ೨ ವರೆಗೆ ವರ್ಷ ೧೩, ತಿಂಗಳು ೬ ವರೆಗೆ ಇದ್ದು ರಾಜ್ಯಭಾರವಂ ಮಾಡಿ ಶಿವಾಧೀನವಾದರು. ॥೧॥

೪

ಈತನ ಮಗ ಸದಾಶಿವನಾಯಕನು ಇಕ್ಕೇರಿ ಅರಮನೆಯಲ್ಲಿ ರಾಜ್ಯಭಾರ ಮಾಡಿದ ವಿವರ:— ಸದಾಶಿವನಾಯಕರು ಧರ್ಮದಲ್ಲಿ ರಾಜ್ಯಭಾರ ಮಾಡುತ್ತಾ ಇದ್ದಲ್ಲಿ, ಆತನಿಗೆ ಕೆಲವು ದಿವಸದ ಮೇಲೆ ಸಂಕಣ್ಣನಾಯಕನೆಂಬ ಮತ್ತೊಬ್ಬ ಮಗನಿಗೆ (?) ಇಬ್ಬರು ಮಕ್ಕಳು ಹುಟ್ಟಿದರು. ಅವರಿಗೆ ಯವ್ವನ ಬರುತ್ತಲೇ ಜನವೊಂದಕ್ಕೆ ಎರಡು ಜನರ ಮೇರೆಗೆ ಹೆಂಡಿರು ಮದಿವೆ ಮಾಡಿ ಸುಖದಲ್ಲಿ ಇರುವ ಸಮಯದಲ್ಲಿ, ವಿಜಯನಗರದಿಂವಲು ಕೃಷ್ಣರಾಯರು ಈ ದೇಶಕ್ಕೆ ಜಮಿಯತ್ತು ಸಹ ಸವಾರಿ ಬರುವಾಗ್ಗೆ ಸದಾಶಿವನಾಯಕರು ಎದುರುಗೊಂಡು ಕಾಣಿಕೆ ಕೊಟ್ಟಲ್ಲಿ, ನೀನು ಪುಣ್ಯವಂತನು ಇದ್ದೀ. ನಮಗೆ ಆಗದಂಥಾ ಗನೀಬರ ಗರ್ವವನ್ನು ನಿಗ್ರಹಮಾಡುವ ಬಗ್ಗೆ ಈತನ ಸಂಗಡ ಫೌಜು ಕೊಟ್ಟು ಕಳುಹಿಸಿದುದರಿಂದ ನಾವು ಬರುವುದರೊಳಗೆ ಕಲ್ಯಾಣ, ಕಲ್ಲುಬುರುಗೆ ಕೋಟೆಗಳ ಹಲ್ಲಾಮಾಡು ಯೆಂಬದಾಗಿ ನೇಮಕ ಮಾಡಿದುದರಿಂದ, ಸೈನ್ಯ ಸಹಿತ ಆ ಗನಿಮ್ಮರ ದೇಶಕ್ಕೆ ಹೋಗಿ ಸವಾರಿ ಮಾಡುತ್ತಾ ಇದ್ದಲ್ಲಿ, ತಾಮ್ರಮುಖಿ ಅಮದಾನಗರದ ಬಿಯರಾಣ [ಭಯ] ನಿಜಾಮ ಪಾದಶಹಾನ

$10-1$ $6+3=9$

$10-2$ $10+3=13$

$10-3$ $8+3=11$

$10-4$ $8+3=11$